# ಸೂತ್ರಾರ್ಥರತ್ನಾವಲೀ

## ಭಾಗ-1 (1,2 ಅಧ್ಯಾಯಗಳು)




ಕನ್ನಡ ಅನುವಾದ ಸಹಿತ


ಅನುವಾದ

ಡಾ. ಕಾಂತೇಶಾಚಾರ್ಯ ಕದರಮಂಡಲಗಿ



ಪ್ರಕಾಶಕರು

ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ,

ಬೆಂಗಳೂರು-04

ಶ್ರೀಗುರುಭ್ಯೋ ನಮಃ
ಹರಿಃ ಓಂ

# ಮುನ್ನುಡಿ

ಸಕಲಸಜ್ಜನರು ಕಲಿಕಾಲಬಲದಿಂದಾಗಿ, ಗೌತಮರ ಶಾಪದಿಂದಾಗಿ ಸಂಶಯ-ವಿಪರೀತಜ್ಞಾನಗಳಿಂದ ಜ್ಞಾನಾಂಧರಾಗುತ್ತಿರಲು ಬ್ರಹ್ಮ-ರುದ್ರಾದಿಗಳಿಂದ ಪ್ರಾರ್ಥಿತನಾದ ಭಗವಂತನು ಪರಾಶರರ ಮೂಲಕ ಸತ್ಯವತೀದೇವಿಯಲ್ಲಿ ವೇದವ್ಯಾಸರೂಪದಿಂದ ಅವತಾರ ಮಾಡಿದನು. ಅಧ್ಯಯನ ಪರಂಪರೆಯೇ ವಿಚ್ಛಿನ್ನವಾಗಿ, ಅಪಪಾಠಾದಿಗಳಿಂದಾಗಿ ವೇದಗಳ ನಿಜವಾದ ಅಭಿಪ್ರಾಯವೇ ನಿಲುಕದಂತಹ ಸಂದರ್ಭದಲ್ಲಿ ಶಾಖೆ-ಉಪಶಾಖೆಗಳ ಪ್ರಭೇದದಿಂದ ವೇದಗಳನ್ನು ಸರಿಯಾಗಿ ವಿಭಾಗ ಮಾಡಿ ''ವೇದವ್ಯಾಸ''ರೆನಿಸಿದರು.

ವೇದಗಳು ಅಪೌರುಷೇಯವಾದರೂ ಅಧ್ಯೇತೃಗಳ ಬುದ್ಧಿದೋಷದಿಂದಾಗಿ ಅಪಾರ್ಥವಾಗುವ ಸನ್ನಿವೇಶವನ್ನು ಸೂಕ್ಷ್ಮವಾಗಿ ಅರಿತ ವೇದವ್ಯಾಸರು ಶ್ರುತಿಗಳ ಅರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು.

ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಾಯಕವಾದವುಗಳು. ಶ್ರುತಿಗಳಲ್ಲಿ ಕೆಲವು ವಾಕ್ಯಗಳ ಅರ್ಥ ಸಂದಿಗ್ಧವಾಗಿರುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ವಿಪರೀತವಾದ ಅರ್ಥವೇ ತೋರುತ್ತದೆ. ಮತ್ತೆ ಕೆಲವು ಪ್ರಸಂಗಗಳಲ್ಲಿ ಎರಡು ವಾಕ್ಯಗಳು ವಿರುದ್ಧವಾದ ಅರ್ಥಗಳನ್ನು ಹೊಂದಿರುತ್ತವೆ. ಇಂತಹ ಸಂದರ್ಭಗಳಲ್ಲಿ

**धर्मे प्रमीयमाणे हि वेदेन करणात्मना ।**
**इतिकर्तव्यताभागं मीमांसा पूरयिष्यति ।।**

ಎಂಬುದಾಗಿ ಹೇಳಿದಂತೆ ಬ್ರಹ್ಮಸೂತ್ರಗಳು ಇಂತಹ ಎಲ್ಲ ಶ್ರುತ್ಯರ್ಥಗಳನ್ನು ನಿರ್ಣಯ ಮಾಡುತ್ತವೆ. ಅಂತೆಯೇ ಬ್ರಹ್ಮಸೂತ್ರಗಳಿಗೆ ''ನಿರ್ಣಾಯಕಶಾಸ್ತ್ರ'' ಎಂದು ಕರೆಯುತ್ತಾರೆ. ''ಇತಿಕರ್ತವ್ಯತಾ'' ಎನ್ನುವುದು ಇದರ ಮತ್ತೊಂದು ಹೆಸರು.

ಈ ರೀತಿಯಾಗಿ ವೇದಾಂತಪ್ರಪಂಚದಲ್ಲಿಯೇ ಬಹಳ ವಿಶಿಷ್ಟವಾದ ಸ್ಥಾನ ಪಡೆದಿರುವ ಬ್ರಹ್ಮಸೂತ್ರಗಳು ಒಟ್ಟು 564 ಸಂಖ್ಯೆಯಲ್ಲಿವೆ. ಇಷ್ಟು ಸೂತ್ರಗಳನ್ನು ನಾಲ್ಕು ಅಧ್ಯಾಯಗಳಲ್ಲಿ ವಿಂಗಡಿಸಿದ್ದಾರೆ ವ್ಯಾಸರು.

1. ಸಮನ್ವಯಾಧ್ಯಾಯ
2. ಅವಿರೋಧಾಧ್ಯಾಯ
3. ಸಾಧನಾಧ್ಯಾಯ
4. ಫಲಾಧ್ಯಾಯ

1. ಮೊದಲನೇ ಅಧ್ಯಾಯವಾದ ಸಮನ್ವಯಾಧ್ಯಾಯದಲ್ಲಿ ವೇದಗಳಲ್ಲಿ ಬರುವ ಎಲ್ಲ ಶಬ್ದಗಳನ್ನೂ ಪರಮಾತ್ಮನಲ್ಲಿ ಸಮನ್ವಯ ಮಾಡುವ ಮೂಲಕ ಆ ಶಬ್ದಗಳ ಅರ್ಥವಾದ ಅನಂತಗುಣಗಳನ್ನು ಪರಮಾತ್ಮನಲ್ಲಿ ಸಮರ್ಥಿಸಲಾಗುತ್ತದೆ.

2. ಎರಡನೇ ಅಧ್ಯಾಯವಾದ ಅವಿರೋಧಾಧ್ಯಾಯದಲ್ಲಿ ಮಾಡುವ ಕಾರ್ಯ ಅದು ವಿರೋಧಪರಿಹಾರ. ಅಂದರೆ ಮೊದಲನೇ ಸಮನ್ವಯಾಧ್ಯಾಯದಲ್ಲಿ ಮಾಡಿದ ಶ್ರುತಿಸಮನ್ವಯಕ್ಕೆ ಯುಕ್ತಿವಿರೋಧ-ಶ್ರುತಿವಿರೋಧ- ಮತಾಂತರವಿರೋಧ ಹೀಗೆ ಅನೇಕ ವಿರೋಧಗಳು ತೋರಿಬಂದಾಗ ಆ ಎಲ್ಲವಿಧ ವಿರೋಧಗಳನ್ನೂ ಪರಿಹಾರ ಮಾಡುವ ಮೂಲಕ ಭಗವಂತನಿಗೆ ನಿರ್ದೋಷತ್ವವನ್ನು ದ್ವಿತೀಯಾಧ್ಯಾಯದಲ್ಲಿ ಸಮರ್ಥಿಸಲಾಗುತ್ತದೆ.

3. ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಳ್ಳಲು ಬೇಕಾದ ಭಕ್ತಿ-ಜ್ಞಾನ-ಉಪಾಸನಾದಿ ಸಾಧನಗಳನ್ನು ಮೂರನೇ ಅಧ್ಯಾಯವಾದ ಸಾಧನಾಧ್ಯಾಯದಲ್ಲಿ ತಿಳಿಸಲಾಗಿದೆ.

4. ಇಂತಹ ಭಕ್ತಿ-ಜ್ಞಾನ-ಉಪಾಸನಾದಿ ಸಾಧನಗಳನ್ನು ಸಂಪಾದಿಸಿದ ವ್ಯಕ್ತಿಗೆ ಎಂತಹ ಫಲ ಸಿಗುತ್ತದೆ ? ಎಂಬುದರ ವಿವರಣೆ ನಾಲ್ಕನೇ ಫಲಾಧ್ಯಾಯದಲ್ಲಿ ಸಿಗುತ್ತದೆ.

ಈ ರೀತಿಯಾಗಿ ನಾಲ್ಕು ಅಧ್ಯಾಯಗಳ ಮೂಲಕ ಭಗವಂತನಿಗೆ ಅನಂತಗುಣ-ಪರಿಪೂರ್ಣತ್ವ, ನಿರ್ದೋಷತ್ವ, ಜ್ಞೇಯತ್ವ, ಗಮ್ಯತ್ವಗಳನ್ನು ಒಟ್ಟಾಗಿ ಬ್ರಹ್ಮಸೂತ್ರಗಳಲ್ಲಿ ಸಮರ್ಥಿಸಿದ್ದಾರೆ ವ್ಯಾಸರು.

ಈ ಗ್ರಂಥವು ಸೂತ್ರರೂಪದಲ್ಲಿ ಇದ್ದು ತಿಳಿಸಬೇಕಾದ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತದೆ. ಈ ಗ್ರಂಥದ ಮೇಲೆ ಶಂಕರ-ರಾಮಾನುಜ-ಮಧ್ವ ಎಂಬ ಪ್ರಸಿದ್ಧರಾದ ಮೂರು ಆಚಾರ್ಯರೂ ಭಾಷ್ಯ ಬರೆದಿದ್ದಾರೆ. ಮಧ್ವಾಚಾರ್ಯರ ಭಾಷ್ಯಕ್ಕೆ ಶ್ರೀಜಯತೀರ್ಥರು ತತ್ವಪ್ರಕಾಶಿಕಾ ಎಂಬ ಅದ್ಭುತ ಟೀಕೆಯನ್ನು ರಚಿಸಿದ್ದಾರೆ.

ಶ್ರೀಜಯತೀರ್ಥರ ತತ್ವಪ್ರಕಾಶಿಕಾ ಟೀಕೆಗೆ ಅನೇಕ ಟಿಪ್ಪಣಿಗಳಿವೆ. ಅವುಗಳಲ್ಲಿ ಶ್ರೀವಾದಿರಾಜರ ಗುರ್ವರ್ಥದೀಪಿಕಾ, ಶ್ರೀರಘೂತ್ತಮತೀರ್ಥರ ಭಾವಬೋಧ,

ಶ್ರೀರಾಘವೇಂದ್ರಸ್ವಾಮಿಗಳ ಭಾವದೀಪ, ತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ವ್ಯಾಕ್ಯಾರ್ಥಮುಕ್ತಾವಲೀ, ಪಾಂಡುರಂಗೀ ಶ್ರೀನಿವಾಸಾಚಾರ್ಯರ ತತ್ವಸುಬೋಧಿನೀ, ಶರ್ಕರಾ ಶ್ರೀನಿವಾಸಾಚಾರ್ಯರ ಶರ್ಕರಾ ಟಿಪ್ಪಣಿ ಇವು ಮುಖ್ಯವಾದವು. ಇವುಗಳಲ್ಲಿ ಸೂತ್ರಗಳ ಭಾಷ್ಯದ ವಿಸ್ತಾರವಾದ ನಿರೂಪಣೆ ಇದೆ.

ಟಿಪ್ಪಣೀಗ್ರಂಥಗಳಲ್ಲದೇ ಬ್ರಹ್ಮಸೂತ್ರಗಳ ಅಧ್ಯಯನದ ಸೌಕರ್ಯಕ್ಕಾಗಿ ಸೂತ್ರಗಳನ್ನೇ ವಿವರಿಸುವ ಕೆಲವು ಸ್ವತಂತ್ರ ಗ್ರಂಥಗಳೂ ಇವೆ.

ಅಂತಹ ಸ್ವತಂತ್ರಗ್ರಂಥಗಳಲ್ಲಿ ಸೂತ್ರಾರ್ಥರತ್ನಾವಲೀ ಎನ್ನುವುದು ಬಹಳ ಉಪಯುಕ್ತವಾದ ಗ್ರಂಥವಾಗಿದೆ. ಇದರಲ್ಲಿ ಪ್ರತಿಯೊಂದು ಸೂತ್ರಕ್ಕೂ ಪೀಠಿಕಾರೂಪದಲ್ಲಿ ಸಂಗತಿ–ಪೂರ್ವಪಕ್ಷಗಳನ್ನು ಹೇಳಿ, ನಂತರ ಸೂತ್ರಾರ್ಥವನ್ನು ತಿಳಿಸಿ, ಕೊನೆಗೆ ಸಿದ್ಧಾಂತವನ್ನು ನಿರೂಪಿಸುತ್ತಾರೆ. ಇದರಿಂದ ಪ್ರತಿಯೊಂದು ಸೂತ್ರದ ಮತ್ತು ಅಧಿಕರಣದ ಅಭಿಪ್ರಾಯವನ್ನು ತಿಳಿದುಕೊಳ್ಳಲು ತುಂಬ ಸಹಾಯವಾಗುತ್ತದೆ.

ಈ ಗ್ರಂಥದ ಶೈಲಿಯು ಆಧುನಿಕರ ಶೈಲಿಯಂತೆ ಇದೆ. ಈ ಗ್ರಂಥಕ್ಕೆ ಮಂಗಳ ಶ್ಲೋಕವನ್ನು ಮತ್ತು ಉಪಸಂಹಾರ ಶ್ಲೋಕವನ್ನು ಬರೆದಿರುವುದಿಲ್ಲ. ಆದ್ದರಿಂದ ಈ ಗ್ರಂಥದ ಕರ್ತೃಗಳು ಯಾರು ಎಂಬುವುದು ತಿಳಿದುಬರುವುದಿಲ್ಲ.

ಈ ಗ್ರಂಥದ ಪ್ರಕಾಶಕರಾದ ಧಾರವಾಡದ ಸವಣೂರು ಗೋವಿಂದರಾಯರು ''ಈ ಗ್ರಂಥಪ್ರಕಾಶನಕ್ಕೆ ಸವಣೂರು ಹತ್ತಿರದ ಕಡಕೋಳ ಗ್ರಾಮದ ಪಾಂಡುರಂಗೀ ಬೋಧರಾಚಾರ್ಯರ ಮತ್ತು ತಿರುಪತಿಯ ಪಾಂಡುರಂಗೀ ಹುಚ್ಚಾಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರ ಸಹಾಯವು ಬಹಳವಾಗಿ ದೊರೆಯಿತು'' ಎಂದು ಹೇಳಿರುತ್ತಾರೆ. ಇವರು ಈ ಗ್ರಂಥಕರ್ತೃಗಳೆಂದು ಸ್ಪಷ್ಟವಾಗಿ ಉಲ್ಲೇಖಿಸುವುದಿಲ್ಲ. ಮತ್ತು ಬೇರೆ ಗ್ರಂಥಕಾರರ ಹೆಸರನ್ನೂ ಉಲ್ಲೇಖಿಸುವುದಿಲ್ಲ. ಈ ಗ್ರಂಥದ ಶೈಲಿಯನ್ನು ನೋಡಿದರೆ ಮೇಲೆ ಹೇಳಿದ ಇಬ್ಬರು ಪಾಂಡುರಂಗೀ ಮನೆತನದ ವಿದ್ವಾಂಸರು ಇದರ ಕರ್ತೃಗಳಾಗಿರಬೇಕೆಂದು ತೋರುತ್ತದೆ.

ಭಾಷ್ಯದ ಮಂಗಳಶ್ಲೋಕವೇ ಈ ಗ್ರಂಥಕ್ಕೂ ಮಂಗಳಶ್ಲೋಕವೆಂದೂ ಭಾವಿಸಿ ಪ್ರತ್ಯೇಕವಾದ ಮಂಗಲಶ್ಲೋಕವನ್ನು ಬರೆದಿರಲಿಕ್ಕಿಲ್ಲ.

ಇದು ಏನೇ ಇದ್ದರೂ ಈ ಗ್ರಂಥವು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ತತ್ವಗಳನ್ನು ತಿಳಿದುಕೊಳ್ಳಲು ತುಂಬ ಸಹಾಯಕವಾಗಿದೆ.

ವಿದ್ವಾನ್ ಕಾಂತೇಶಾಚಾರ್ಯ ಕದರಮಂಡಲಗಿ ಇವರು ಈ ಗ್ರಂಥದ ಕನ್ನಡ ಅನುವಾದವನ್ನು ಮಾಡಿದ್ದಾರೆ. ಇವರು ಈ ಮೊದಲೇ ಖಂಡನತ್ರಯಗಳು, ವಾದಾವಲೀ ಮೊದಲಾದ ಗ್ರಂಥಗಳ ಕನ್ನಡ ಅನುವಾದವನ್ನು ಸುಂದರವಾಗಿ ಮಾಡಿದ್ದಾರೆ.

ಸಂಸ್ಕೃತ ಗ್ರಂಥಗಳನ್ನು ಮೂಲದಿಂದಲೇ ತಿಳಿದುಕೊಳ್ಳಲು ಶ್ರಮವಾಗುತ್ತಿರುವ ಈ ಕಾಲದಲ್ಲಿ ಅವುಗಳ ಕನ್ನಡ ಅನುವಾದವನ್ನು ಮಾಡಿ ಸಜ್ಜನರಿಗೆ ತಿಳಿಸಿಕೊಡುವ ಕಾರ್ಯವು ಬಹಳ ಉಪಯುಕ್ತವಾದ ಕಾರ್ಯವಾಗಿದೆ.

ಕಾಂತೇಶಾಚಾರ್ಯರು ಈ ಕನ್ನಡ ಅನುವಾದ ಕಾರ್ಯವನ್ನು ಮುಂದುವರೆಸಲಿ. ಹಾಗೂ ಯುಕ್ತಿಮಲ್ಲಿಕಾ ಮೊದಲಾದ ಗ್ರಂಥಗಳ ಅನುವಾದವನ್ನೂ ಮಾಡಲಿ ಎಂದು ಹಾರೈಸುವೆವು.

**ಪ್ರೊ. ಕೆ.ಟಿ. ಪಾಂಡುರಂಗೀ**
ದರ್ಶನಕಲಾನಿಧಿ, ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು,
ಮಹಾಮಹೋಪಾಧ್ಯಾಯರು
ಅಧ್ಯಕ್ಷರು
ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ

# ವಿಷಯಾನುಕ್ರಮಣಿಕಾ

---

# ಮಂಗಳಾಚರಣೆ

ಭಾಷ್ಯ :-

नारायणं गुणैः सवैः उदीर्णं दोषवर्जितम् ।
ज्ञेयं गम्यं गुरूंश्चापि नत्वा सूत्रार्थ उच्यते ॥

ಗುಣೈಃ ಸರ್ವೈಃ ಉದೀರ್ಣಂ = ಜ್ಞಾನ-ಆನಂದಾದಿ ಅನಂತಗುಣಗಳಿಂದ ಪರಿಪೂರ್ಣನಾದ, ದೋಷವರ್ಜಿತಮ್=ಅಜ್ಞಾನ-ದುಃಖ-ಅಸ್ವಾತಂತ್ರ್ಯಾದಿ ಸಕಲ-ದೋಷದೂರನಾದ, ಜ್ಞೇಯಂ=ಮುಮುಕ್ಷುಗಳಿಂದ ಜ್ಞೇಯನಾದ, ಗಮ್ಯಂ= ಜ್ಞಾನ-ಭಕ್ತ್ಯಾದಿಗಳನ್ನು ಹೊಂದಿದ ಸಾಧಕರಿಗೆ ಗಮ್ಯನಾದ, ನಾರಾಯಣಂ= ನಾರಾಯಣನನ್ನು ಚ = ಮತ್ತು ಗುರೂನ್ ಅಪಿ = ವಿದ್ಯಾಗುರುಗಳಾದ ವೇದವ್ಯಾಸ-ದೇವರನ್ನೂ ಸಹ ನತ್ವಾ = ನಮಸ್ಕಾರ ಮಾಡಿ ಸೂತ್ರಾರ್ಥಃ = ಬ್ರಹ್ಮಸೂತ್ರಗಳ ಅರ್ಥವು ಉಚ್ಯತೇ = ಹೇಳಲ್ಪಡುತ್ತದೆ. (ಭಾಷ್ಯರೂಪವಾದ ವ್ಯಾಖ್ಯಾನವು ಮಾಡಲ್ಪಡುತ್ತದೆ.)

ಬ್ರಹ್ಮಸೂತ್ರಗಳಲ್ಲಿ ಈ ಹಿಂದೆ ಹೇಳಿದಂತೆ ಸಮನ್ವಯಾಧ್ಯಾಯ-ಅವಿರೋಧಾಧ್ಯಾಯ - ಸಾಧನಾಧ್ಯಾಯ - ಫಲಾಧ್ಯಾಯ ಎಂಬುದಾಗಿ ನಾಲ್ಕು ಅಧ್ಯಾಯಗಳಿದ್ದು ಪ್ರತಿಯೊಂದು ಅಧ್ಯಾಯಗಳಲ್ಲಿಯೂ ನಾಲ್ಕು ನಾಲ್ಕು ಪಾದಗಳಿವೆ.

ಮೊದಲನೇ ಅಧ್ಯಾಯವಾದ ಸಮನ್ವಯಾಧ್ಯಾಯದಲ್ಲಿ

1. ಅನ್ಯತ್ರ ಪ್ರಸಿದ್ಧನಾಮಪಾದ
2. ಅನ್ಯತ್ರ ಪ್ರಸಿದ್ಧ ಲಿಂಗಪಾದ
3. ಉಭಯತ್ರ ಪ್ರಸಿದ್ಧ ನಾಮ-ಲಿಂಗಪಾದ
4. ಅನ್ಯತ್ರೈವ ಪ್ರಸಿದ್ಧ ಶಬ್ದಪಾದ

ಎಂಬುದಾಗಿ ನಾಲ್ಕು ಪಾದಗಳ ವಿಭಾಗ ಮಾಡಿಕೊಂಡು ಒಟ್ಟಾರೆ ಪರಮಾತ್ಮನಲ್ಲಿ ಎಲ್ಲ ಶಬ್ದಗಳ ಸಮನ್ವಯವನ್ನೂ ಮಾಡಲಾಗುತ್ತದೆ.

# प्रथमोऽध्यायः

## प्रथमः पादः

### ಪಾದಸಂಗತಿ

**ಸೂತ್ರಾರ್ಥ ರತ್ನಾವಲೀ : प्रायेणान्यत्र प्रसिद्धानां नामात्मकशब्दानां परमात्मनि समन्वयः प्रदर्श्यतेऽस्मिन्पादे ।**

**ಅನು.:–** ಪ್ರಕೃತ ಸಮನ್ವಯಾಧ್ಯಾಯದ ಮೊದಲನೇ ಪಾದವಾದ "ಅನ್ಯತ್ರ ಪ್ರಸಿದ್ಧ-ನಾಮಪಾದ"ದಲ್ಲಿ ಅನ್ಯತ್ರ ಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಹೆಚ್ಚಾಗಿ ತೋರಿಸಲಾಗುತ್ತದೆ.

*ಅಧಿಕರಣ – 1*

## ಜಿಜ್ಞಾಸಾಧಿಕರಣ

### ಅಧಿಕರಣಸಂಗತಿ

**ಸೂ.ರ.:– अत्र ब्रह्मजिज्ञासा कर्तव्येति समर्थ्यते ।**

**ಅನು.:–** ಮೊದಲನೇ ಅಧಿಕರಣವಾದ ಜಿಜ್ಞಾಸಾಧಿಕರಣದಲ್ಲಿ "ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ" ಎಂದು ಸಮರ್ಥಿಸಲಾಗುತ್ತದೆ.

### ಪೂರ್ವಪಕ್ಷ

**ಸೂ.ರ.:– ननु शास्त्रमिदमनारम्भणीयम् । न्यायानुसन्धान-रूपविचारस्यैवा कर्तव्यत्वात् । तदकर्तव्यत्वं च निर्विषयत्वादिहेतुभ्यः ।**

**ಅನು.:–** ಬಾದರಾಯಣರು ರಚಿಸಿಕೊಟ್ಟಿರುವ ಈ ಬ್ರಹ್ಮಮೀಮಾಂಸಾಶಾಸ್ತ್ರವು ಅನಾರಂಭಣೀಯವಾಗಿದೆ. (ಆರಂಭಣೀಯವೇ ಅಲ್ಲ) ಯಾಕೆ? ಯುಕ್ತ್ಯನುಸಂಧಾನ ರೂಪವಾದ ವಿಚಾರವೇ (ಜಿಜ್ಞಾಸೆ ಎನ್ನುವುದೇ) ಕರ್ತವ್ಯವಾಗಿಲ್ಲ. ಹೌದು, ಜಿಜ್ಞಾಸೆ ಏಕೆ ಅಕರ್ತವ್ಯ? ಎಂದರೆ –

**ಪೂ.ರ.:–** **ब्रह्मजिज्ञासा अकर्तव्या निर्विषयत्वात्, निष्प्रयोजनत्वात्, निरधिकारिकत्वात् ।**

**ಅನು.:–** ವಿಷಯ-ಪ್ರಯೋಜನ-ಅಧಿಕಾರಿಗಳು ಇದ್ದಿದ್ದರೆ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗುತ್ತಿತ್ತು. ಆದರೆ ಬ್ರಹ್ಮಜಿಜ್ಞಾಸೆಗೆ ವಿಷಯ ಇಲ್ಲ, ಪ್ರಯೋಜನ ಇಲ್ಲ, ಅಧಿಕಾರಿಗಳೂ ಇಲ್ಲ, ಹೀಗೆ ನಿರ್ವಿಷಯವಾದ್ದರಿಂದ, ನಿಷ್ಪ್ರಯೋಜನವಾದ್ದರಿಂದ, ನಿರಧಿಕಾರಿಕವಾದ್ದರಿಂದ ಬ್ರಹ್ಮಜಿಜ್ಞಾಸೆಯು ಅಕರ್ತವ್ಯವಾಗಿದೆ.

**ಪೂ.ರ.:–** **तथाहि । विषयाभिमतं ब्रह्म न जीवचैतन्याद्भिद्यते । मानाभावात् । मानं भवत्प्रत्यक्षं वाऽनुमानं वाऽऽगमो वा । नाद्यः । घटपटवज्जीवेश्वरयोर्भेदानुपलम्भात् । न द्वितीयः । कामगामित्वात् । न तृतीयः । परस्पराश्रयत्वात् । उपक्रमादिभिर्निर्णीततात्पर्यकस्य भेदागमस्य यजमानप्रस्तर इत्याद्यागमस्य प्रतीतार्थप्रामाण्यप्रसङ्गेन भेदे प्रामाण्यायोगात् । उपक्रमादिभिर्निर्णीततात्पर्यस्यागमस्य भेदे प्रामाण्यं वाच्यम् । तथा च शास्त्रेणोपक्रमाद्यनुसन्धानरूपविचारप्रवृत्तौ निर्णीततात्पर्येण वेदेन भेदसिद्धिः । तत्सिद्धौ जीवभिन्नस्य ब्रह्मणः सन्दिग्धत्वापत्या शास्त्रेण प्रवृत्तिरिति । जीवात्मकत्वे च स्वप्रकाशत्वेन नित्यसिद्धत्वान्न विषयत्वम् ॥**

**ಅನು.:–** ಬ್ರಹ್ಮಜಿಜ್ಞಾಸೆಗೆ ವಿಷಯವಿಲ್ಲ, ಪ್ರಯೋಜನವಿಲ್ಲ, ಅಧಿಕಾರಿ ಇಲ್ಲ ಎಂದು ಹೇಳಿದ್ದನ್ನು (ಪ್ರತಿಜ್ಞೆ ಮಾಡಿದ್ದನ್ನು) ಸಮರ್ಥಿಸಿ ತೋರಿಸುತ್ತಾರೆ. ಅದರಲ್ಲಿ ಮೊದಲು ವಿಷಯವಿಲ್ಲ ಎನ್ನುವುದನ್ನು ಸಾಧಿಸುತ್ತಾರೆ.

### ವಿಷಯ ಇಲ್ಲ

**ಅನು.:–** ಜಿಜ್ಞಾಸೆಗೆ ವಿಷಯ ಇಲ್ಲ ಎಂದು ಏಕೆ ಹೇಳುತ್ತೀರಿ? ಜಿಜ್ಞಾಸೆಗೆ ಬ್ರಹ್ಮನೇ ವಿಷಯ ಇದ್ದಾನಲ್ಲ! ಎಂದರೆ, ಜಿಜ್ಞಾಸೆಗೆ ಬ್ರಹ್ಮನು ವಿಷಯನಾಗಲು ಸಾಧ್ಯವಿಲ್ಲ. ಏಕೆಂದರೆ – ಬ್ರಹ್ಮನು ವಿಷಯ ಎನ್ನುವುದಾದರೆ, ಆ ಬ್ರಹ್ಮನು ಜೀವನಿಂದ ಭಿನ್ನನಾಗಿದ್ದಾನೆಯೋ? ಅಭಿನ್ನನಾಗಿದ್ದಾನೆಯೋ?

ಬ್ರಹ್ಮನು ಜೀವನಿಂದ ಭಿನ್ನ ಎಂದು ಹೇಳಲು ಬರುವುದಿಲ್ಲ. ಯಾಕೆ? ಜೀವ-ಬ್ರಹ್ಮರ ಭೇದವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಹೇಗೆಂದರೆ – ಜೀವ-ಬ್ರಹ್ಮರ ಭೇದವಿಷಯದಲ್ಲಿ ಪ್ರಮಾಣ ಇದೆ ಎನ್ನುವುದಾದರೆ, ಯಾವ ಪ್ರಮಾಣವಿದೆ? ಪ್ರತ್ಯಕ್ಷ ಪ್ರಮಾಣವಿದೆಯೊ? ಅನುಮಾನ ಪ್ರಮಾಣವಿದೆಯೋ? ಆಗಮ ಪ್ರಮಾಣವಿದೆಯೋ?

**ಪ್ರತ್ಯಕ್ಷ** : ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ. ''ಘಟಃ ಪಟಾದ್ಭಿದ್ಯತೇ'' ಎಂಬುದಾಗಿ ಅಥವಾ ''ಘಟಪಟೌ ಭಿನ್ನೌ'' ಎಂಬುದಾಗಿ ಘಟ-ಪಟಗಳು ಭಿನ್ನವಾಗಿ ತೋರುವಂತೆ ''ಜೀವಃ ಬ್ರಹ್ಮಣೋ ಭಿದ್ಯತೇ'' ಎಂಬುದಾಗಿ ಅಥವಾ ''ಜೀವಬ್ರಹ್ಮಣೀ ಭಿನ್ನೇ'' ಎಂಬುದಾಗಿ ಜೀವ-ಬ್ರಹ್ಮರು ಭಿನ್ನವಾಗಿ ತೋರುವುದಿಲ್ಲ.

**ಅನುಮಾನ** : ಅನುಮಾನವೂ ಪ್ರಮಾಣವಾಗುವುದಿಲ್ಲ. ಯಾಕೆ? ಅನುಮಾನವು ಕಾಮಗಾಮಿಯಾಗಿದೆ. ಅದರ ಅರ್ಥ – ಪ್ರತ್ಯಕ್ಷ ಅಥವಾ ಶ್ರುತಿಯು ಆಧಾರವಾಗಿ ಇಲ್ಲದೇ ಕೇವಲ ಅನುಮಾನವು ಪ್ರಮಾಣವಾಗುವುದಾದರೆ ಅಂತಹ ಅನುಮಾನದಿಂದ ಏನು ಬೇಕಾದರೂ ಸಾಧಿಸಲು ಸಾಧ್ಯವಾದ್ದರಿಂದ ಅಂತಹ ಅನುಮಾನವು ಪ್ರಮಾಣ-ವಾಗಲಾರದು.

**ಆಗಮ** : ಇನ್ನು ಆಗಮವೂ ಪ್ರಮಾಣವಾಗುವುದಿಲ್ಲ. ಯಾಕೆಂದರೆ:– ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ನಿರ್ಣೀತವಾಗದೇ ಇರುವ ತಾತ್ಪರ್ಯ ಉಳ್ಳ ಭೇದಾಗಮಕ್ಕೆ (ಯಜಮಾನಃ ಪ್ರಸ್ತರಃ ಮೊದಲಾದ ಆಗಮಕ್ಕೆ) ಪ್ರತೀತಾರ್ಥದಲ್ಲಿ ಅಪ್ರಾಮಾಣ್ಯ ಬರುವ ಪ್ರಸಕ್ತಿ ಇರುವುದರಿಂದ ಭೇದವಿಷಯದಲ್ಲಿ ಅದಕ್ಕೆ ಪ್ರಾಮಾಣ್ಯ ಕೊಡುವುದಿಲ್ಲ. ಆದ್ದರಿಂದ ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ನಿರ್ಣೀತವಾದ ತಾತ್ಪರ್ಯ ಉಳ್ಳ ಆಗಮಕ್ಕೆ ಭೇದವಿಷಯದಲ್ಲಿ ಪ್ರಾಮಾಣ್ಯವನ್ನು ಹೇಳಬೇಕು. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಹೇಗೆ? ಶಾಸ್ತ್ರದಿಂದ ಉಪಕ್ರಮಾದ್ಯನುಸಂಧಾನ ರೂಪವಾದ ವಿಚಾರವು ಪ್ರವೃತ್ತವಾದರೆ ನಿರ್ಣೀತವಾದ ತಾತ್ಪರ್ಯ ಉಳ್ಳ ವೇದದಿಂದ ಭೇದವು ಸಿದ್ಧವಾಗುತ್ತದೆ. ಭೇದವು ಸಿದ್ಧವಾದರೆ ಅಂತಹ ಜೀವನಿಂದ ಭಿನ್ನನಾದ ಬ್ರಹ್ಮನಿಗೆ ಸಂದಿಗ್ಧತ್ವವು ಬಂದು (ವಿಷಯವು ಸಿದ್ಧವಾಗಿ) ಶಾಸ್ತ್ರವು ಪ್ರವೃತ್ತವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ಬರುತ್ತದೆ. ಆದ್ದರಿಂದ ಆಗಮವೂ ಪ್ರಮಾಣವಾಗಲು ಸಾಧ್ಯವಿಲ್ಲ.

ಹೀಗೆ ಜೀವ-ಬ್ರಹ್ಮರ ಭೇದವಿಷಯದಲ್ಲಿ ಪ್ರತ್ಯಕ್ಷಾದಿ ಯಾವ ಪ್ರಮಾಣವೂ ಸಾಧಕವಾಗದ ಕಾರಣ ಬ್ರಹ್ಮನು ಜೀವನಿಂದ ಭಿನ್ನ ಎನ್ನಲು ಬರುವುದಿಲ್ಲ.

ಇನ್ನು ಬ್ರಹ್ಮನು ಜೀವನಿಂದ ಅಭಿನ್ನ ಎನ್ನುವುದಾದರೆ – ಆ ಜೀವನು ಸ್ವಪ್ರಕಾಶ-

ನಾದ್ದರಿಂದ **ಅಹಂ ಅಹಂ** ಎಂಬ ಅನುಭವದಿಂದ ನಿತ್ಯಸಿದ್ಧನಾದ್ದರಿಂದ ಅಂತಹ ನಿತ್ಯಸಿದ್ಧ-ನಾದ ಜೀವನಿಂದ ಅಭಿನ್ನನಾದ ಬ್ರಹ್ಮನೂ ನಿತ್ಯಸಿದ್ಧನಾಗುತ್ತಾನೆ. ಬ್ರಹ್ಮನು ಜೀವನಂತೆ ಸಿದ್ಧನಾಗುವುದಾದರೆ (ಸಂದಿಗ್ಧನಾಗುವುದಿಲ್ಲವಾದರೆ) ಅವನಿಗೆ ವಿಷಯತ್ವ ಕೂಡುವುದಿಲ್ಲ. ಆದ್ದರಿಂದ ಜಿಜ್ಞಾಸೆಗೆ ಬ್ರಹ್ಮನು ವಿಷಯನಾಗಲು ಸಾಧ್ಯವಿಲ್ಲವಾದ್ದರಿಂದ ಜಿಜ್ಞಾಸೆಗೆ ವಿಷಯವೇ ಇಲ್ಲ ಎಂದು ಸಿದ್ಧವಾದಂತಾಯಿತು.

**ಪ್ರಯೋಜನವೂ ಇಲ್ಲ:-**

**ಸೂ.ರ.:– नापि परप्रयोजनम् । परप्रयोजनं भवत्स्वर्गाद्यभ्युदयो वा मोक्षो वा स्यात् । नाद्यः । लघूपायेन तत्सिद्धेः । नापि मोक्षः । जिज्ञासानन्तरं मोक्षानुपलम्भात् । अस्तु वा जीवव्यतिरिक्तं ब्रह्म । तथाऽपि नापरोक्षद्वारा विचारस्य तद्धेतुत्वम् । साक्षात्कृतब्रह्मणामपि वसिष्ठादीनां तदनुपलम्भात् ।**

**ಅನು.:–** ಜಿಜ್ಞಾಸೆಗೆ ಪ್ರಯೋಜನವೂ ಸಹ ಇಲ್ಲ. ಯಾಕೆ? ಎಂದರೆ, ಪ್ರಯೋಜನವನ್ನು ಹೇಳುವುದಾದರೆ ಸ್ವರ್ಗಾದಿಗಳು ಪ್ರಯೋಜನ ಎನ್ನುತ್ತೀರೋ? ಮೋಕ್ಷವೇ ಪ್ರಯೋಜನ ಎನ್ನುತ್ತೀರೋ?

ಜಿಜ್ಞಾಸೆಗೆ ಸ್ವರ್ಗಾದಿಗಳು ಪ್ರಯೋಜನ ಎನ್ನಲು ಬರುವುದಿಲ್ಲ. ಏಕೆಂದರೆ ಆ ಸ್ವರ್ಗಾದಿಗಳು ಕರ್ಮಗಳನ್ನು ಮಾಡುವುದರಿಂದಲೇ ಸುಲಭವಾಗಿ ಸಿಗುತ್ತವೆ. ಹೀಗಾಗಿ ಕರ್ಮಾಚರಣೆರೂಪವಾದ ಲಘೂಪಾಯದಿಂದಲೇ ಸ್ವರ್ಗಾದಿಗಳು ಸಿಗುವಾಗ ಮೀಮಾಂಸಾ ಎಂಬ ಗುರೂಪಾಯ ಏಕೆ ಬೇಕು?

ಇನ್ನು ಮೋಕ್ಷವೇ ಫಲ ಜಿಜ್ಞಾಸೆಗೆ ಎನ್ನಲೂ ಬರುವುದಿಲ್ಲ. ಏಕೆಂದರೆ – ಜಿಜ್ಞಾಸೆಗೆ ಮೋಕ್ಷವು ಫಲವಾಗುವುದಾದರೆ ಜಿಜ್ಞಾಸೆಯನ್ನು ಮಾಡಿದ ನಂತರ ಮೋಕ್ಷ ಸಿಗಬೇಕಿತ್ತು. ಆದರೆ ಜಿಜ್ಞಾಸೆ ಮಾಡಿದ ನಂತರ ಯಾವ ವ್ಯಕ್ತಿಗೂ ಮೋಕ್ಷ ಸಿಕ್ಕಿಲ್ಲ. ಆದ್ದರಿಂದ ಮೋಕ್ಷವು ಫಲ ಎನ್ನುವುದೂ ಸರಿಯಲ್ಲ.

ಜಿಜ್ಞಾಸೆಗೆ ವಿಷಯ ಹಾಗೂ ಪ್ರಯೋಜನ ಎರಡೂ ವಸ್ತುಸ್ಥಿತಿಯಲ್ಲಿ ಕೂಡುವುದಿಲ್ಲ ಎಂದು ನಿರಾಕರಿಸಿ, ಪ್ರಕೃತ 'ತುಷ್ಯತು ದುರ್ಜನಃ' ಎಂಬ ನ್ಯಾಯದಿಂದಾಗಿ ಜಿಜ್ಞಾಸೆಗೆ ಜೀವನಿಂದ ಭಿನ್ನನಾದ ಬ್ರಹ್ಮನೇ ವಿಷಯ ಎಂದು ಒಪ್ಪಿದರೂ ಸಹ ಜಿಜ್ಞಾಸೆಗೆ ಮೋಕ್ಷವು ಪ್ರಯೋಜನವಾಗಲು ಸಾಧ್ಯವಿಲ್ಲ ಎಂದು ಈಗ ಸಮರ್ಥಿಸುತ್ತಾರೆ.

ಜೀವನಿಂದ ಭಿನ್ನನಾದ ಬ್ರಹ್ಮ ಇದ್ದಾನೆ ಎಂದೇ ಒಪ್ಪೋಣ. ಆದರೂ ಸಹ ಜಿಜ್ಞಾಸೆಗೆ ಅಪರೋಕ್ಷಜ್ಞಾನದ ಮೂಲಕ ಮೋಕ್ಷವೇ ಫಲ ಎನ್ನಲು ಬರುವುದಿಲ್ಲ. ಏಕೆಂದರೆ - ಜಿಜ್ಞಾಸೆ ಮಾಡಿ ಈಗಾಗಲೇ ಅಪರೋಕ್ಷಜ್ಞಾನವನ್ನು ವಸಿಷ್ಠಾದಿಗಳು ಸಂಪಾದಿಸಿದ್ದರೂ ಸಹ ಅವರಿಗೆ ಇನ್ನೂ ಮೋಕ್ಷವಾಗಿಲ್ಲ. ಆದ್ದರಿಂದ ಜಿಜ್ಞಾಸೆಗೆ ಅಪರೋಕ್ಷಜ್ಞಾನದ ಮೂಲಕ ಮೋಕ್ಷವು ಫಲ ಎನ್ನಲು ಬರುವುದಿಲ್ಲ. ಹಾಗಾದರೆ ಸ್ವರ್ಗಾದಿಗಳೂ ಫಲವಾಗಲು ಸಾಧ್ಯವಿಲ್ಲ, ಮೋಕ್ಷವೂ ಫಲವಾಗುವುದಿಲ್ಲ ಎಂದಮೇಲೆ ಜಿಜ್ಞಾಸೆಗೆ ಯಾವ ಪ್ರಯೋಜನವೂ ಇಲ್ಲ ಎಂದು ಸಿದ್ಧವಾಗುತ್ತದೆ.

**ಅಧಿಕಾರಿಯೂ ಇಲ್ಲ!**

**ಸೂ.ರ.:– विषयप्रयोजनाभावात् । अथशब्दोक्ताधिकारिविशेषासम्भवेन ब्रह्मजिज्ञासायामधिकारी न विद्यते ।**

**ಅನು.:–** ವಿಷಯ ಹಾಗೂ ಪ್ರಯೋಜನಗಳು ಇದ್ದರೆ ಅಧಿಕಾರಿ ಬರುತ್ತಾನೆ. ಜಿಜ್ಞಾಸೆಗೆ ವಿಷಯವೂ ಇಲ್ಲ, ಪ್ರಯೋಜನವೂ ಇಲ್ಲ ಎಂದಮೇಲೆ ಅಧಿಕಾರಿಯೂ ಸಹ ಯಾರೂ ಇಲ್ಲ ಎಂದೇ ಸಿದ್ಧವಾಗುತ್ತದೆ.

**ಸಂಬಂಧವೂ ಇಲ್ಲ!**

**ಸೂ.ರ.:– अत एव न सम्वन्धोऽपीति प्राप्ते पराकुर्वत्सूत्रमाह ॥**

**ಅನು.:–** ವಿಷಯ-ಪ್ರಯೋಜನ -ಅಧಿಕಾರಿಗಳು ಇದ್ದರೆ ಅವುಗಳಲ್ಲಿ ಪರಸ್ಪರವಾಗಿ ಸಂಬಂಧವನ್ನು ಹೇಳಲು ಬರುತ್ತದೆ. ಪ್ರಕೃತ ಜಿಜ್ಞಾಸೆಗೆ ವಿಷಯ-ಪ್ರಯೋಜನ-ಅಧಿಕಾರಿಗಳು ಇಲ್ಲ ಎಂದಾದರೆ ಸಂಬಂಧವೂ ಇಲ್ಲ ಎಂದೇ ಸಿದ್ಧವಾಗುತ್ತದೆ.

ಹಾಗಾದರೆ ಜಿಜ್ಞಾಸೆಗೆ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧಗಳು ಇಲ್ಲ ಎಂದಾದರೆ (ಅನುಬಂಧ ಚತುಷ್ಟಯಗಳು ಇಲ್ಲ ಎಂದಾದರೆ) ಜಿಜ್ಞಾಸೆಯೇ ಕರ್ತವ್ಯವಲ್ಲ ಎಂದಾಗುತ್ತದೆ. ಯಾವಾಗ ಜಿಜ್ಞಾಸೆಯೇ ಅಕರ್ತವ್ಯ ಎಂದಾಗುತ್ತದೆ ಆವಾಗ ಶಾಸ್ತ್ರವೇ ಅನಾರಂಭಣೀಯ ಎಂದು ದೃಢವಾಗುತ್ತದೆ.

ಪೂರ್ವಪಕ್ಷ ಸಮಾಪ್ತ

ಈ ರೀತಿಯಾಗಿ ಪೂರ್ವಪಕ್ಷವು ಪ್ರಾಪ್ತವಾದರೆ ಅದನ್ನು ನಿರಾಕರಣೆ ಮಾಡಿ ಸಿದ್ಧಾಂತವನ್ನು ಸ್ಥಾಪಿಸಲು ಸೂತ್ರವು ಪ್ರವೃತ್ತವಾಗುತ್ತದೆ :-

## ॐ ॐ अथातो ब्रह्मजिज्ञासा ॐ (१.१.१)

**ಸೂತ್ರಾರ್ಥ** :- ಅಥ = ಅಧ್ಯಯನ-ಶಮ-ದಮಾದಿ ರೂಪವಾದ ಅಧಿಕಾರ (ಬಂದ ನಂತರ) ಸಂಪತ್ತ್ಯನಂತರದಲ್ಲಿ ಅತಃ = ತನ್ನಿಂದ (ಜಿಜ್ಞಾಸೆ ಮಾಡುವುದರಿಂದ) ಜನ್ಯವಾದ ಜ್ಞಾನದಿಂದ ಉಂಟಾಗುವ ಮೋಕ್ಷರೂಪವಾದ (ಫಲದಿಂದ ಸಹಿತವಾದ್ದರಿಂದ) ಫಲ ಇರುವುದರಿಂದ ಓಂ=ಗುಣಪೂರ್ಣನಾದ ಬ್ರಹ್ಮಜಿಜ್ಞಾಸಾ=ವಿಷ್ಣುವಿನ ಜಿಜ್ಞಾಸೆಯು ಅರ್ಥಾತ್ ಶ್ರವಣಾದಿರೂಪವಾದ ವಿಚಾರವು (ಕರ್ತವ್ಯಾ=) ಮಾಡಲ್ಪಡಬೇಕು.

### ಸಿದ್ಧಾಂತ

**ಸೂ.ರ.:– एवं च कर्तव्यैव ब्रह्मजिज्ञासा । सप्रयोजनत्वात् ।**

**ಅನು.:–** ಸಿದ್ಧಾಂತ ಮಾಡುತ್ತಾರೆ :- ಬ್ರಹ್ಮಜಿಜ್ಞಾಸಾ, ಕರ್ತವ್ಯಾ ಏವ, ಸಪ್ರಯೋಜನತ್ವಾತ್ । (ಅನುಮಾನ) ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆ. ಯಾಕೆ? ಪ್ರಯೋಜನ ಉಳ್ಳದ್ದಾದ್ದರಿಂದ.

**ಸೂ.ರ.:– न च निर्विषयत्वेन सत्प्रतिपक्षता । जीवभिन्नस्य ब्रह्मण एव विषयत्वसंम्भवेन निर्विषयत्वासिद्धेः ।**

**ಅನು.:–** ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ ಎನ್ನುವುದು ಸರಿಯಲ್ಲ. ಏಕೆಂದರೆ – ಬ್ರಹ್ಮಜಿಜ್ಞಾಸೆಗೆ ಸಪ್ರಯೋಜನತ್ವ ಯುಕ್ತಿಯಿಂದ ಕರ್ತವ್ಯತ್ವವನ್ನು ನೀವು ಹೇಳುವುದಾದರೆ, ಅದೇ ಬ್ರಹ್ಮಜಿಜ್ಞಾಸೆಗೆ ನಿರ್ವಿಷಯತ್ವಯುಕ್ತಿಯಿಂದ ಅಕರ್ತವ್ಯತ್ವವನ್ನು ನಾವು ಹೇಳುತ್ತೇವೆ –

ಬ್ರಹ್ಮಜಿಜ್ಞಾಸಾ ನ ಕರ್ತವ್ಯಾ ನಿರ್ವಿಷಯತ್ವಾತ್ ।

ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಅಲ್ಲ. ಯಾಕೆ? ಬ್ರಹ್ಮಜಿಜ್ಞಾಸೆಗೆ ಯಾವ ವಿಷಯವೂ ಇಲ್ಲವಾದ್ದರಿಂದ.

ಹೀಗೆ ಸಪ್ರಯೋಜನತ್ವಯುಕ್ತಿಯಿಂದ ಕರ್ತವ್ಯತ್ವವನ್ನು ನೀವು ಸಾಧಿಸುವುದಾದರೆ, ನಿರ್ವಿಷಯತ್ವಯುಕ್ತಿಯಿಂದ ಅಕರ್ತವ್ಯತ್ವವನ್ನು ನಾವು ಸಾಧಿಸುತ್ತೇವೆ. ಅರ್ಥಾತ್ ನಿಮ್ಮ ಸಪ್ರಯೋಜನತ್ವಾನುಮಾನಕ್ಕೆ ನಮ್ಮ ನಿರ್ವಿಷಯಾತ್ವಾನುಮಾನವು ಪ್ರತಿಪಕ್ಷಾನು-ಮಾನವಾಗುತ್ತದೆ. ಹೀಗೆ ಪ್ರತಿಪಕ್ಷಾನುಮಾನ ಉಳ್ಳದ್ದಾದ್ದರಿಂದ ನಿಮ್ಮ ಸಪ್ರಯೋಜನ-ತ್ವಾನುಮಾನವು ಜಿಜ್ಞಾಸಾಕರ್ತವ್ಯತ್ವಕ್ಕೆ ಸಾಧಕವಾಗುವುದಿಲ್ಲ.

ಜೀವನಿಂದ ಭಿನ್ನನಾದ ಬ್ರಹ್ಮ ಇದ್ದಾನೆ ಎಂದೇ ಒಪ್ಪೋಣ. ಆದರೂ ಸಹ ಜಿಜ್ಞಾಸೆಗೆ ಅಪರೋಕ್ಷಜ್ಞಾನದ ಮೂಲಕ ಮೋಕ್ಷವೇ ಫಲ ಎನ್ನಲು ಬರುವುದಿಲ್ಲ. ಏಕೆಂದರೆ – ಜಿಜ್ಞಾಸೆ ಮಾಡಿ ಈಗಾಗಲೇ ಅಪರೋಕ್ಷಜ್ಞಾನವನ್ನು ವಸಿಷ್ಠಾದಿಗಳು ಸಂಪಾದಿಸಿದ್ದರೂ ಸಹ ಅವರಿಗೆ ಇನ್ನೂ ಮೋಕ್ಷವಾಗಿಲ್ಲ. ಆದ್ದರಿಂದ ಜಿಜ್ಞಾಸೆಗೆ ಅಪರೋಕ್ಷಜ್ಞಾನದ ಮೂಲಕ ಮೋಕ್ಷವು ಫಲ ಎನ್ನಲು ಬರುವುದಿಲ್ಲ. ಹಾಗಾದರೆ ಸ್ವರ್ಗಾದಿಗಳೂ ಫಲವಾಗಲು ಸಾಧ್ಯವಿಲ್ಲ, ಮೋಕ್ಷವೂ ಫಲವಾಗುವುದಿಲ್ಲ ಎಂದಮೇಲೆ ಜಿಜ್ಞಾಸೆಗೆ ಯಾವ ಪ್ರಯೋಜನವೂ ಇಲ್ಲ ಎಂದು ಸಿದ್ಧವಾಗುತ್ತದೆ.

**ಅಧಿಕಾರಿಯೂ ಇಲ್ಲ!**

**ಸೂ.ರ.:– विषयप्रयोजनाभावात् । अथशब्दोक्ताधिकारिविशेषासम्भवेन ब्रह्मजिज्ञासायामधिकारी न विद्यते ।**

**ಅನು.:–** ವಿಷಯ ಹಾಗೂ ಪ್ರಯೋಜನಗಳು ಇದ್ದರೆ ಅಧಿಕಾರಿ ಬರುತ್ತಾನೆ. ಜಿಜ್ಞಾಸೆಗೆ ವಿಷಯವೂ ಇಲ್ಲ, ಪ್ರಯೋಜನವೂ ಇಲ್ಲ ಎಂದಮೇಲೆ ಅಧಿಕಾರಿಯೂ ಸಹ ಯಾರೂ ಇಲ್ಲ ಎಂದೇ ಸಿದ್ಧವಾಗುತ್ತದೆ.

**ಸಂಬಂಧವೂ ಇಲ್ಲ!**

**ಸೂ.ರ.:– अत एव न सम्बन्धोऽपीति प्राप्ते पराकुर्वत्सूत्रमाह ॥**

**ಅನು.:–** ವಿಷಯ–ಪ್ರಯೋಜನ –ಅಧಿಕಾರಿಗಳು ಇದ್ದರೆ ಅವುಗಳಲ್ಲಿ ಪರಸ್ಪರವಾಗಿ ಸಂಬಂಧವನ್ನು ಹೇಳಲು ಬರುತ್ತದೆ. ಪ್ರಕೃತ ಜಿಜ್ಞಾಸೆಗೆ ವಿಷಯ–ಪ್ರಯೋಜನ–ಅಧಿಕಾರಿಗಳು ಇಲ್ಲ ಎಂದಾದರೆ ಸಂಬಂಧವೂ ಇಲ್ಲ ಎಂದೇ ಸಿದ್ಧವಾಗುತ್ತದೆ.

ಹಾಗಾದರೆ ಜಿಜ್ಞಾಸೆಗೆ ವಿಷಯ–ಪ್ರಯೋಜನ–ಅಧಿಕಾರಿ–ಸಂಬಂಧಗಳು ಇಲ್ಲ ಎಂದಾದರೆ (ಅನುಬಂಧ ಚತುಷ್ಟಯಗಳು ಇಲ್ಲ ಎಂದಾದರೆ) ಜಿಜ್ಞಾಸೆಯೇ ಕರ್ತವ್ಯವಲ್ಲ ಎಂದಾಗುತ್ತದೆ. ಯಾವಾಗ ಜಿಜ್ಞಾಸೆಯೇ ಅಕರ್ತವ್ಯ ಎಂದಾಗುತ್ತದೆ ಆವಾಗ ಶಾಸ್ತ್ರವೇ ಅನಾರಂಭಣೀಯ ಎಂದು ದೃಢವಾಗುತ್ತದೆ.

**ಪೂರ್ವಪಕ್ಷ ಸಮಾಪ್ತ**

ಈ ರೀತಿಯಾಗಿ ಪೂರ್ವಪಕ್ಷವು ಪ್ರಾಪ್ತವಾದರೆ ಅದನ್ನು ನಿರಾಕರಣೆ ಮಾಡಿ ಸಿದ್ಧಾಂತವನ್ನು ಸ್ಥಾಪಿಸಲು ಸೂತ್ರವು ಪ್ರವೃತ್ತವಾಗುತ್ತದೆ :–

## ॐ ॐ अथातो ब्रह्मजिज्ञासा ॐ (१.१.१)

**ಸೂತ್ರಾರ್ಥ** :- ಅಥ = ಅಧ್ಯಯನ-ಶಮ-ದಮಾದಿ ರೂಪವಾದ ಅಧಿಕಾರ (ಬಂದ ನಂತರ) ಸಂಪತ್ತ್ಯನಂತರದಲ್ಲಿ ಅತಃ = ತನ್ನಿಂದ (ಜಿಜ್ಞಾಸೆ ಮಾಡುವುದರಿಂದ) ಜನ್ಯವಾದ ಜ್ಞಾನದಿಂದ ಉಂಟಾಗುವ ಮೋಕ್ಷರೂಪವಾದ (ಫಲದಿಂದ ಸಹಿತವಾದ್ದರಿಂದ) ಫಲ ಇರುವುದರಿಂದ ಓಂ=ಗುಣಪೂರ್ಣನಾದ ಬ್ರಹ್ಮಜಿಜ್ಞಾಸಾ=ವಿಷ್ಣುವಿನ ಜಿಜ್ಞಾಸೆಯು ಅರ್ಥಾತ್ ಶ್ರವಣಾದಿರೂಪವಾದ ವಿಚಾರವು (ಕರ್ತವ್ಯಾ=) ಮಾಡಲ್ಪಡಬೇಕು.

### ಸಿದ್ಧಾಂತ

**ಸೂ.ರ.:– एवं च कर्तव्यैव ब्रह्मजिज्ञासा । सप्रयोजनत्वात् ।**

**ಅನು.:**– ಸಿದ್ಧಾಂತ ಮಾಡುತ್ತಾರೆ :- ಬ್ರಹ್ಮಜಿಜ್ಞಾಸಾ, ಕರ್ತವ್ಯಾ ಏವ, ಸಪ್ರಯೋಜನತ್ವಾತ್ । (ಅನುಮಾನ) ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆ. ಯಾಕೆ? ಪ್ರಯೋಜನ ಉಳ್ಳದ್ದಾದ್ದರಿಂದ.

**ಸೂ.ರ.:– न च निर्विषयत्वेन सत्प्रतिपक्षता । जीवभिन्नस्य ब्रह्मण एव विषयत्वसंम्भवेन निविषयत्वासिद्धेः ।**

**ಅನು.:**– ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ ಎನ್ನುವುದು ಸರಿಯಲ್ಲ. ಏಕೆಂದರೆ - ಬ್ರಹ್ಮಜಿಜ್ಞಾಸೆಗೆ ಸಪ್ರಯೋಜನತ್ವ ಯುಕ್ತಿಯಿಂದ ಕರ್ತವ್ಯತ್ವವನ್ನು ನೀವು ಹೇಳುವುದಾದರೆ, ಅದೇ ಬ್ರಹ್ಮಜಿಜ್ಞಾಸೆಗೆ ನಿರ್ವಿಷಯತ್ವಯುಕ್ತಿಯಿಂದ ಅಕರ್ತವ್ಯತ್ವವನ್ನು ನಾವು ಹೇಳುತ್ತೇವೆ -

ಬ್ರಹ್ಮಜಿಜ್ಞಾಸಾ ನ ಕರ್ತವ್ಯಾ ನಿರ್ವಿಷಯತ್ವಾತ್ ।

ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಅಲ್ಲ. ಯಾಕೆ? ಬ್ರಹ್ಮಜಿಜ್ಞಾಸೆಗೆ ಯಾವ ವಿಷಯವೂ ಇಲ್ಲವಾದ್ದರಿಂದ.

ಹೀಗೆ ಸಪ್ರಯೋಜನತ್ವ ಯುಕ್ತಿಯಿಂದ ಕರ್ತವ್ಯತ್ವವನ್ನು ನೀವು ಸಾಧಿಸುವುದಾದರೆ, ನಿರ್ವಿಷಯತ್ವಯುಕ್ತಿಯಿಂದ ಅಕರ್ತವ್ಯತ್ವವನ್ನು ನಾವು ಸಾಧಿಸುತ್ತೇವೆ. ಅರ್ಥಾತ್ ನಿಮ್ಮ ಸಪ್ರಯೋಜನತ್ವಾನುಮಾನಕ್ಕೆ ನಮ್ಮ ನಿರ್ವಿಷಯಾತ್ವಾನುಮಾನವು ಪ್ರತಿಪಕ್ಷಾನು-ಮಾನವಾಗುತ್ತದೆ. ಹೀಗೆ ಪ್ರತಿಪಕ್ಷಾನುಮಾನ ಉಳ್ಳದ್ದಾದ್ದರಿಂದ ನಿಮ್ಮ ಸಪ್ರಯೋಜನ-ತ್ವಾನುಮಾನವು ಜಿಜ್ಞಾಸಾಕರ್ತವ್ಯತ್ವಕ್ಕೆ ಸಾಧಕವಾಗುವುದಿಲ್ಲ.

ಈ ಪ್ರಶ್ನೆಗೆ ಸಮಂಜಸವಾಗಿ ಉತ್ತರ ನೀಡುತ್ತಾರೆ-ನೀವು ಹೇಳಿದಂತೆ "ಬ್ರಹ್ಮ-ಜಿಜ್ಞಾಸೆಗೆ ವಿಷಯವೇ ಇಲ್ಲ" ಎನ್ನುವುದು ಸರಿಯಾದದ್ದಲ್ಲ. ಯಾಕೆಂದರೆ - ಜೀವನಿಂದ ಭಿನ್ನನಾದ ಬ್ರಹ್ಮನೇ ವಿಷಯನಾಗಿದ್ದಾನೆ. ಇಂತಹ ಬ್ರಹ್ಮರೂಪವಾದ ವಿಷಯ ಇರುವುದರಿಂದ ನಿಮ್ಮ ನಿರ್ವಿಷಯತ್ವಾನುಮಾನವು ಅಸಿದ್ಧವಾಗಿದೆ. (ಪಕ್ಷವಾದ ಜಿಜ್ಞಾಸೆಯಲ್ಲಿ ನಿರ್ವಿಷಯತ್ವ ಹೇತುವು ಇಲ್ಲವಾದ್ದರಿಂದ ಅಸಿದ್ಧಿದೋಷ ಬರುತ್ತದೆ.)

**ಸೂ.ರ.:– न च भेदे मानाभावः । तद्विजिज्ञासस्वेति (तै.उ.३-१-१) श्रुतिसिद्धपूर्णत्वस्यैव मानत्वात् ।**

**ಅನು.:–** "ಜೀವನಿಂದ ಭಿನ್ನನಾದ ಬ್ರಹ್ಮ ವಿಷಯ" ಎನ್ನುವುದು ಸರಿಯಲ್ಲ, ಯಾಕೆಂದರೆ ಜೀವ-ಬ್ರಹ್ಮರ ಭೇದದ ವಿಷಯದಲ್ಲಿಯೇ ಯಾವ ಪ್ರಮಾಣವೂ ಇಲ್ಲವಾದ್ದರಿಂದ 'ಜೀವನಿಂದ ಭಿನ್ನನಾದ ಬ್ರಹ್ಮ' ಎಂಬ ಮಾತೇ ಸರಿಯಲ್ಲ ಎಂದು ಶಂಕೆ ಬಂದರೆ, ಅದಕ್ಕೆ ಈ ರೀತಿ ಸಮಾಧಾನ ಹೇಳುತ್ತಾರೆ –

ಜೀವ-ಬ್ರಹ್ಮರ ಭೇದವಿಷಯದಲ್ಲಿ ಪ್ರಮಾಣ ಇಲ್ಲ ಎನ್ನುವುದು ಸರಿಯಲ್ಲ.

ಬ್ರಹ್ಮ ಜೀವಾತ್ ಭಿದ್ಯತೇ ಗುಣಪೂರ್ಣತ್ವಾತ್ ।

(ಬ್ರಹ್ಮನು ಗುಣಪೂರ್ಣನಾದ್ದರಿಂದ ಗುಣಪೂರ್ಣನಲ್ಲದ ಜೀವನಿಂದ ಭಿನ್ನನಾಗಿದ್ದಾನೆ) ಎಂಬ ಅನುಮಾನವೇ ಪ್ರಮಾಣವಾಗಿದೆ. ಬ್ರಹ್ಮನಲ್ಲಿ ಗುಣಪೂರ್ಣತ್ವವೇ ಇಲ್ಲವಾದ್ದರಿಂದ ಈ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆಯಲ್ಲ? ಎಂದರೆ, ಹಾಗೆ ಹೇಳಲು ಬರುವುದಿಲ್ಲ. "ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮೇತಿ" ಎಂಬ ಶ್ರುತಿಯಿಂದ ಗುಣಪೂರ್ಣತ್ವವು ಸಿದ್ಧವಾಗಿರುವುದರಿಂದ ಅಸಿದ್ಧಿದೋಷಕ್ಕೆ ಅವಕಾಶವಿಲ್ಲ.

**ಸೂ.ರ.:– न च जडेऽसाधारण्यम् । जीवासम्भावितगुणपूर्णत्वस्यैव हेतुत्वेन विवक्षितत्वात् । न चानुमानस्य कामगामित्वम् । भिन्नोऽचिन्त्य इति श्रुतिमूलत्वात् ।**

**ಅನು.:–** ಅನುಮಾನವು ಕಾಮಗಾಮಿಯಾಗಿದೆ. ಅರ್ಥಾತ್ ಅನುಮಾನದಿಂದ ಏನು ಬೇಕಾದರೂ ಸಾಧನೆ ಮಾಡಲು ಸಾಧ್ಯವಾಗಿದೆಯಾದ್ದರಿಂದ ಅನುಮಾನವನ್ನು ಪ್ರಮಾಣತ್ವೇನ ಸ್ವೀಕರಿಸುವುದು ಹೇಗೆ? ಎಂಬ ಶಂಕೆಯೂ ಸರಿಯಲ್ಲ.

ಅನುಮಾನಕ್ಕೆ ಪ್ರತ್ಯಕ್ಷ-ಆಗಮಗಳು ಮೂಲವಾಗಿ ಇರದಿದ್ದಾಗ ಅಂತಹ

ಅನುಮಾನವನ್ನು ಪ್ರಮಾಣತ್ವೇನ ಸ್ವೀಕರಿಸಲು ಬರುವುದಿಲ್ಲ. ಆದರೆ ಅನುಮಾನಕ್ಕೆ ಪ್ರತ್ಯಕ್ಷ ಅಥವಾ ಶ್ರುತಿ ಮೂಲವಾಗಿ ಇದ್ದ ಪಕ್ಷದಲ್ಲಿ ಆ ಅನುಮಾನವು ಪ್ರಮಾಣವೇ ಆಗುತ್ತದೆ.

ಪ್ರಕೃತದಲ್ಲಿ ಜೀವ-ಬ್ರಹ್ಮರ ಭೇದವಿಷಯದಲ್ಲಿ ಉದಾಹರಿಸಿರುವ ''ಬ್ರಹ್ಮ ಜೀವಾತ್ ಭಿದ್ಯತೇ ಗುಣಪೂರ್ಣತ್ವಾತ್'' ಎಂಬ ಅನುಮಾನಕ್ಕೆ ''ಭಿನ್ನೋಽಚಿಂತ್ಯಃ'' ಎಂಬ ಕೌಶಿಕ ಶ್ರುತಿಯು ಮೂಲವಾಗಿ ಇರುವುದರಿಂದ ಈ ಅನುಮಾನವು ಜೀವ-ಬ್ರಹ್ಮರ ಭೇದವಿಷಯದಲ್ಲಿ ಪ್ರಮಾಣವಾಗೇ ಆಗುತ್ತದೆ.

ಸೂ.ರ.:– **न चोपक्रमाद्यनुसन्धानरूपविचारप्रवृत्तौ भिन्नोऽचिन्त्य (कौशिक श्रु.) इत्याद्यागमानां भेदे तात्पर्यनिर्णयः । तस्मिन्सति प्रकृतानुमानस्य प्रमाणत्वेन जीवभिन्नविषयत्वसिद्धिः । तत्सिद्धौ च विचारप्रवृत्तिरित्यन्योन्याश्रय इति वाच्यम् । तात्पर्यसंदेहे सत्येव विचारापेक्षणात् ।**

ಅನು.:– ಹೀಗೆ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹೇಗೆಂದರೆ - ಉಪಕ್ರಮಾದಿ ಅನುಸಂಧಾನ ರೂಪವಾದ ವಿಚಾರ ಪ್ರವೃತ್ತವಾದರೆ 'ಭಿನ್ನೋಽಚಿಂತ್ಯಃ' ಇತ್ಯಾದಿ ಆಗಮಗಳಿಗೆ ಭೇದದಲ್ಲಿ ತಾತ್ಪರ್ಯವು ನಿರ್ಣೀತವಾಗುತ್ತದೆ. ಆಗಮಗಳಿಗೆ ತಾತ್ಪರ್ಯನಿರ್ಣಯವಾದರೆ (ಆ ಆಗಮಗಳನ್ನು ಮೂಲವಾಗಿ ಉಳ್ಳ) ಪ್ರಕೃತಾನುಮಾನಕ್ಕೆ ಪ್ರಾಮಾಣ್ಯ ಸಿದ್ಧವಾಗಿ ಜೀವನಿಂದ ಭಿನ್ನನಾದ ಬ್ರಹ್ಮನಿಗೆ ವಿಷಯತ್ವವು ಸಿದ್ಧವಾಗುತ್ತದೆ.

ಜೀವನಿಂದ ಭಿನ್ನನಾದ ಬ್ರಹ್ಮನಿಗೆ ವಿಷಯತ್ವವು ಸಿದ್ಧವಾದರೆ (ಜಿಜ್ಞಾಸೆಗೊಂದು ವಿಷಯ ಇರುವುದರಿಂದ) ಉಪಕ್ರಮಾದ್ಯನುಸಂಧಾನ ರೂಪವಾದ ವಿಚಾರವು ಪ್ರವೃತ್ತವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುತ್ತದೆಯಲ್ಲ? ಎಂದು ಶಂಕೆ ಬಂದರೆ ಅದು ಸರಿಯಲ್ಲ.

''ಭಿನ್ನೋಽಚಿಂತ್ಯಃ'' ಇತ್ಯಾದಿ ಆಗಮಗಳಿಗೆ ಭೇದದಲ್ಲಿ ತಾತ್ಪರ್ಯವು ನಿರ್ಣೀತವಾದರೆ ವಿಚಾರವು ಪ್ರವೃತ್ತವಾಗುತ್ತದೆ ಎಂದು ಹೇಳುವುದಾಗಿದ್ದರೆ ಅನ್ಯೋನ್ಯಾಶ್ರಯ ಬರುತ್ತಿತ್ತು. ಆದರೆ ಪ್ರಕೃತ ಹಾಗೆ ಇಲ್ಲ. ಕಿಂತು ತಾತ್ಪರ್ಯಸಂದೇಹವಿದ್ದಾಗ ವಿಚಾರ ಪ್ರವೃತ್ತವಾಗುತ್ತದೆ. ಹೊರತು ತಾತ್ಪರ್ಯನಿರ್ಣಯವಾದ ಮೇಲೆ ವಿಚಾರ ಪ್ರವೃತ್ತವಾಗುವುದಿಲ್ಲ. ಆದ್ದರಿಂದ ಅನ್ಯೋನ್ಯಾಶ್ರಯಕ್ಕೆ ಅವಕಾಶವಿಲ್ಲ.

ಸೂ.ರ.:– **अन्यथोपक्रमादीनामपि स्वार्थे तात्पर्यनिर्णयायोपक्रमाद्यन्तरमन्वेषणीयं स्यादित्यनवस्था ।**

**ಅನು.:**– ಅನ್ಯಥಾ ಉಪಕ್ರಮಾದಿಗಳಿಗೂ ಸಹ ಸ್ವಾರ್ಥದಲ್ಲಿ ತಾತ್ಪರ್ಯ-ನಿರ್ಣಯಕ್ಕಾಗಿ ಮತ್ತೊಂದು ಉಪಕ್ರಮಾದಿಗಳನ್ನು ಅನ್ವೇಷಣ ಮಾಡಬೇಕಾಗುವುದರಿಂದ ಅನವಸ್ಥಾ ಬರಬೇಕಾದೀತು.

**ಸೂ.ರ.:– तथा च जीवभिन्नस्य ब्रह्मणः सन्दिग्धत्वेन न निर्विषय-त्वेन सत्प्रतिपक्षः ।**

**ಅನು.:**– ಹಾಗಾದರೆ 'ಭಿನ್ನೋಽಚಿಂತ್ಯಃ' ಎಂಬ ಶ್ರುತಿಮೂಲವಾದ ಪ್ರಕೃತಾನು-ಮಾನದಿಂದ ಭೇದವು ಸಿದ್ಧವಾಗುವುದರಿಂದ ಜೀವನಿಂದ ಭಿನ್ನನಾದ ಬ್ರಹ್ಮನು ಸಿದ್ಧ-ನಾಗುತ್ತಾನೆ. ಅಂತಹ ಜೀವನಿಂದ ಭಿನ್ನನಾದ ಬ್ರಹ್ಮನು ಸಂದಿಗ್ಧನಾದ್ದರಿಂದ ಅವನು ಜಿಜ್ಞಾಸೆಗೆ ವಿಷಯನಾಗುತ್ತಾನೆ. ಹೀಗೆ ಜೀವಭಿನ್ನಬ್ರಹ್ಮರೂಪವಾದ ವಿಷಯ ಇರುವುದರಿಂದ 'ಜಿಜ್ಞಾಸಾ ನ ಕರ್ತವ್ಯಾ, ನಿರ್ವಿಷಯತ್ವಾತ್' ಎಂಬುದಾಗಿ ಪ್ರತಿಪಕ್ಷಾನುಮಾನ ಮಾಡಲು ಬರುವುದಿಲ್ಲ ಎಂದಾಯಿತು. ಅರ್ಥಾತ್ ಬ್ರಹ್ಮರೂಪವಾದ ವಿಷಯ ಇರುವುದರಿಂದ ಜಿಜ್ಞಾಸೆಗೆ ಕರ್ತವ್ಯತ್ವವೇ ಸಿದ್ಧವಾಗುತ್ತದೆ.

**ಸೂ.ರ.:– व्याप्यस्य प्रयोजनस्य सद्भावेन व्यापकस्याधिकारिणोऽपि सिद्धेः न तदभावेनापि सत्प्रतिपक्षः ।**

**ಅನು.:**– "ವಿಷಯ ಹಾಗೂ ಪ್ರಯೋಜನ ಎರಡೂ ಇಲ್ಲದ ಕಾರಣ ಅಧಿಕಾರಿಯೂ ಯಾರೂ ಇಲ್ಲ" ಎಂಬುದಾಗಿ ಪೂರ್ವಪಕ್ಷದಲ್ಲಿ ಶಂಕಿಸಿದ್ದೂ ಸರಿಯಲ್ಲ. ಏಕೆಂದರೆ – ಈ ಹಿಂದೆ ಹೇಳಿದಂತೆ ಜೀವಭಿನ್ನನಾದ ಬ್ರಹ್ಮ ಎಂಬ ವಿಷಯವೂ ಇದೆ. ಮತ್ತು ಮೋಕ್ಷರೂಪವಾದ ಪ್ರಯೋಜನವೂ ಇದೆ. ಹೀಗಾಗಿ

ಬ್ರಹ್ಮಜಿಜ್ಞಾಸಾ ಕರ್ತವ್ಯಾ ಸಪ್ರಯೋಜನತ್ವಾತ್ ।

ಪ್ರಯೋಜನಸಹಿತವಾದ್ದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯ ಎಂದು ಸಿದ್ಧವಾಗುತ್ತದೆ. ಯಾವಾಗ ಬ್ರಹ್ಮಜಿಜ್ಞಾಸೆಗೆ ಪ್ರಯೋಜನ ಇದೆ ಎಂದು ಸಿದ್ಧವಾಗುತ್ತದೆ ಆಗ ಅಧಿಕಾರಿಯೂ ಸಿದ್ಧನಾಗುತ್ತಾನೆ.

ಬ್ರಹ್ಮಜಿಜ್ಞಾಸಾ ಸಾಧಿಕಾರಿಕಾ ಪ್ರಯೋಜನವತ್ವಾತ್ ।

ವ್ಯಾಪ್ಯವಾದ ಪ್ರಯೋಜನ ಇರುವುದರಿಂದ ವ್ಯಾಪಕವಾದ ಅಧಿಕಾರಿಯೂ ಸಿದ್ಧನಾಗುತ್ತಾನೆ. ಯಾವಾಗ ಅಧಿಕಾರಿಯು ಸಿದ್ಧನಾಗುತ್ತಾನೆ ಆಗ –

ಜಿಜ್ಞಾಸಾ ಕರ್ತವ್ಯಾ ನ, ನಿರಧಿಕಾರಿಕತ್ವಾತ್ ಎಂಬುದಾಗಿ ನಿರಧಿಕಾರಿಕತ್ವ ಎಂಬ ಪ್ರತಿಪಕ್ಷಾನುಮಾನದಿಂದ ಜಿಜ್ಞಾಸೆಗೆ ಅಕರ್ತವ್ಯತ್ವವನ್ನು ಸಾಧಿಸಲು ಬರುವುದಿಲ್ಲ.

**ಸೂ.ರ.:– ननु साक्षात्कृतब्रह्मणामपि वसिष्ठादीनां मोक्षानुपलम्भेन सत्प्रयोजनत्वमसिद्धमिति चेन्न । अनुपलम्भः किं प्रत्यक्षेण । उत प्रत्यक्ष-मात्रेण । नाद्यः । परमाण्वादीनामप्यभावप्रसङ्गात् । द्वितीयेऽपि वर्तमानकाले सत्त्वानुपलम्भः । उत कदाऽपि । नाद्यः ज्योतिष्टोमाद्यनुष्ठानाभावप्रसङ्गात् । नान्त्यः । ब्रह्मप्रलयानन्तरं वसिष्ठादीनां मोक्षोपलम्भश्रवणात् ।**

**ಅನು.:–** ''ಮೋಕ್ಷರೂಪವಾದ ಪ್ರಯೋಜನ ಇರುವುದರಿಂದ ಅಧಿಕಾರಿಯೂ ಇದ್ದಾನೆ'' ಎಂದು ಹೇಳುವುದು ಸರಿಯಲ್ಲ. ಅರ್ಥಾತ್ ಮೋಕ್ಷವು ಪ್ರಯೋಜನ ಎನ್ನಲು ಬರುವುದಿಲ್ಲ. ಯಾಕೆಂದರೆ – ಬ್ರಹ್ಮಜಿಜ್ಞಾಸೆಗೆ ಅಪರೋಕ್ಷಜ್ಞಾನದ ಮೂಲಕ ಮೋಕ್ಷವು ಫಲ ಎನ್ನಬೇಕು. ಆದರೆ ಬ್ರಹ್ಮಜಿಜ್ಞಾಸೆಯಿಂದ ಈಗಾಗಲೇ ಅಪರೋಕ್ಷಜ್ಞಾನವನ್ನು ಸಂಪಾದಿಸಿರುವ ವಸಿಷ್ಠಾದಿಗಳಿಗೆ ಇನ್ನೂ ಮೋಕ್ಷ ಸಿಕ್ಕಿಲ್ಲವಾದ್ದರಿಂದ 'ಬ್ರಹ್ಮಜಿಜ್ಞಾಸಾ ಕರ್ತವ್ಯಾ ಸಪ್ರಯೋಜನತ್ವಾತ್ ' ಎಂಬ ಅನುಮಾನದಲ್ಲಿ ಸಪ್ರಯೋಜನತ್ವ ಹೇತುವೇ ಅಸಿದ್ಧವಾಗಿದೆ ಎಂದು ಶಂಕಿಸಿದರೆ, ಅಲ್ಲಿ ಈ ರೀತಿ ವಿಕಲ್ಪ ಮಾಡುತ್ತಾರೆ –

ವಸಿಷ್ಠಾದಿಗಳಿಗೆ ಮೋಕ್ಷವು ಸಿಕ್ಕಿಲ್ಲ ಎಂದು ಹೇಗೆ ಹೇಳುತ್ತೀರಿ? ಪ್ರತ್ಯಕ್ಷದಿಂದ ಹೇಳುತ್ತೀರೋ? ಅಥವಾ ಪ್ರತ್ಯಕ್ಷಮಾತ್ರದಿಂದ ಹೇಳುತ್ತೀರೋ?

ಪ್ರತ್ಯಕ್ಷದಿಂದ ಹೇಳುತ್ತೇವೆ ಅರ್ಥಾತ್ ವಸಿಷ್ಠಾದಿಗಳಿಗೆ ಮೋಕ್ಷ ಸಿಕ್ಕಿರುವುದು ಪ್ರತ್ಯಕ್ಷಸಿದ್ಧವಾಗಿಲ್ಲವಾದ್ದರಿಂದ ಮೋಕ್ಷರೂಪ ಪ್ರಯೋಜನ ಇಲ್ಲ ಎಂದು ಹೇಳುವ ಮೊದಲನೇ ಪಕ್ಷವು ಸರಿಯಲ್ಲ. ಯಾಕೆಂದರೆ – ಪ್ರತ್ಯಕ್ಷಸಿದ್ಧವಾಗಿಲ್ಲವಾದ್ದರಿಂದ ಇಲ್ಲ ಎನ್ನುವುದಾದರೆ ಪರಮಾಣು ಮೊದಲಾದ ಅತೀಂದ್ರಿಯ ಪದಾರ್ಥಗಳೂ ಪ್ರತ್ಯಕ್ಷಸಿದ್ಧವಾಗಿಲ್ಲವಾದ್ದರಿಂದ ಪರಮಾಣ್ವಾದಿಗಳೂ ಇಲ್ಲ ಎಂದಾಗಬೇಕಾಗುತ್ತದೆ.

ಇನ್ನು ಪ್ರತ್ಯಕ್ಷಮಾತ್ರದಿಂದ ಇಲ್ಲ ಎನ್ನುವುದಾದರೆ ಆ ಎರಡನೇ ಪಕ್ಷದಲ್ಲಿಯೂ ಈ ರೀತಿ ವಿಕಲ್ಪ ಮಾಡುತ್ತಾರೆ – ವರ್ತಮಾನಕಾಲದಲ್ಲಿ ಫಲ ಸಿಕ್ಕಿಲ್ಲವಾದ್ದರಿಂದ ಫಲ ಇಲ್ಲ ಎನ್ನುತ್ತೀರೋ? ಯಾವಾಗಲೂ ಫಲ ಸಿಕ್ಕಿಲ್ಲವಾದ್ದರಿಂದ ಫಲ ಇಲ್ಲ ಎನ್ನುತ್ತೀರೋ?

ವರ್ತಮಾನ ಕಾಲದಲ್ಲಿ ಫಲ ಸಿಕ್ಕಿಲ್ಲವಾದ್ದರಿಂದ ಫಲವೇ ಇಲ್ಲ ಎಂಬ ಮೊದಲನೇ ಪಕ್ಷವು ಸರಿಯಲ್ಲ. ಹಾಗಾದರೆ ಜ್ಯೋತಿಷ್ಟೋಮಾದಿಗಳ ಅನುಷ್ಠಾನ ಮಾಡಿದಾಗ ಅದಕ್ಕೆ ವರ್ತಮಾನಕಾಲದಲ್ಲಿಯೇ ಫಲ ಸಿಕ್ಕಿಲ್ಲವಾದ್ದರಿಂದ ಪ್ರಯೋಜನರಹಿತವಾದ್ದರಿಂದ ಜ್ಯೋತಿಷ್ಟೋಮಾದಿಗಳ ಅನುಷ್ಠಾನ ಮಾಡದಿರಬೇಕಾದ ಪ್ರಸಂಗ ಬಂದೀತು.

ಯಾವಾಗಲೂ ಫಲ ಸಿಕ್ಕಿಲ್ಲವಾದ್ದರಿಂದ ಫಲವೇ ಇಲ್ಲ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಯಾಕೆಂದರೆ - ಪ್ರಲಯದ ಅನಂತರದಲ್ಲಿ ವಸಿಷ್ಠಾದಿಗಳಿಗೆ ಮೋಕ್ಷವು ಸಿಕ್ಕಿದ್ದು (ಸಿಗುವುದು) ಶಾಸ್ತ್ರಸಿದ್ಧವಾಗಿದೆ. ಆದ್ದರಿಂದ ಈ ಕಾಲದಲ್ಲಿ ಫಲ ಸಿಗದಿದ್ದರೂ ಮುಂದೆ ಫಲ ಸಿಗುವುದು ಇರುವುದರಿಂದ ಯಾವ ಕಾಲದಲ್ಲಿಯೂ ಫಲ ಇಲ್ಲ ಎನ್ನುವುದು ಸರಿಯಲ್ಲ.

ಆದ್ದರಿಂದ "ವಸಿಷ್ಠಾದಿಗಳಿಗೆ ಅಪರೋಕ್ಷಜ್ಞಾನವಾಗಿದ್ದರೂ ಮೋಕ್ಷವು ಸಿಕ್ಕಿಲ್ಲ. ಆದ್ದರಿಂದ ಮೋಕ್ಷರೂಪವಾದ ಪ್ರಯೋಜನವಿಲ್ಲ" ಎಂಬ ಶಂಕೆಯು ಸರಿಯಲ್ಲ. ಹೀಗಾಗಿ ಬ್ರಹ್ಮಜಿಜ್ಞಾಸೆಗೆ ಮೋಕ್ಷರೂಪವಾದ ಪ್ರಯೋಜನ ಇದ್ದೇ ಇದೆ. ಪ್ರಯೋಜನ ಸಹಿತವಾದ್ದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯ ಎಂದು ಸಿದ್ಧವಾಗುತ್ತದೆ.

**ಸೂ.ರ.:- अत एव सम्बन्धाभावश्च परास्तः । न तदभावेनापि सत्प्रतिपक्षः ।**

**ಅನು.:-** ಯಾವಾಗ ಬ್ರಹ್ಮಜಿಜ್ಞಾಸೆಗೆ ಅಧಿಕಾರಿ-ವಿಷಯ-ಪ್ರಯೋಜನಗಳು ಇವೆ ಎಂದು ಸ್ಥಿರವಾಗುತ್ತದೆ ಆವಾಗ ಸಂಬಂಧವೂ ಇದೆ ಎಂದು ಸಿದ್ಧವಾಗುತ್ತದೆ.

ಆದ್ದರಿಂದ "ಅಧಿಕಾರಿ-ವಿಷಯ-ಪ್ರಯೋಜನಗಳು ಇಲ್ಲವಾದ್ದರಿಂದ ಸಂಬಂಧವೂ ಇಲ್ಲ. ಹೀಗಾಗಿ ಬ್ರಹ್ಮಜಿಜ್ಞಾಸೆ ಕರ್ತವ್ಯವಾಗಿಲ್ಲ" ಎಂಬುದಾಗಿ ಪೂರ್ವಪಕ್ಷದಲ್ಲಿ ಶಂಕಿಸಿದ್ದು ಯುಕ್ತವಲ್ಲ. ಅರ್ಥಾತ್ -

'ಬ್ರಹ್ಮಜಿಜ್ಞಾಸಾ ನ ಕರ್ತವ್ಯಾ ಸಂಬಂಧಾಭಾವಾತ್' ಎಂಬುದಾಗಿ ಪ್ರತಿಪಕ್ಷಾನುಮಾನ ಮಾಡುವುದು ಸರಿಯಲ್ಲ.

**ಸೂ.ರ.:- तस्माद्विचारः कर्तव्य एवेति शास्त्रमारम्भणीयमिति सिद्धम् ।**

**ಅನು.:-** ಈ ರೀತಿಯಾಗಿ ಬ್ರಹ್ಮಜಿಜ್ಞಾಸೆಗೆ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು ಇವೆ ಎಂದು ಸಿದ್ಧವಾದಮೇಲೆ

'ಬ್ರಹ್ಮಜಿಜ್ಞಾಸಾ ಕರ್ತವ್ಯಾ ಅನುಬಂಧಚತುಷ್ಟಯವತ್ವಾತ್' ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆ ಎಂದು ಸಿದ್ಧವಾಗುತ್ತದೆ. ಬ್ರಹ್ಮಜಿಜ್ಞಾಸೆಯು ಕರ್ತವ್ಯವಾದ್ದರಿಂದ ಶಾಸ್ತ್ರವು ಆರಂಭಣೀಯವೇ ಆಗಿದೆ ಎಂದು ನಿರಾತಂಕವಾಗಿ ಸಿದ್ಧವಾಗುತ್ತದೆ.

ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

*ಅಧಿಕರಣ – 2*

## ಜನ್ಮಾಧಿಕರಣ

**ಸೂ.ರ.:– अत्र ब्रह्मलक्षणमुच्यते ।**

**ಅನು :–** ಎರಡನೇ ಈ ಜನ್ಮಾಧಿಕರಣದಲ್ಲಿ ಬ್ರಹ್ಮನ ಲಕ್ಷಣವನ್ನು ತಿಳಿಸುತ್ತಾರೆ.

**ननु जीव एवं ब्रह्म न विष्णुः । जीवप्रापकरूढिसद्भावात् ।**

ಹಿಂದಿನ ಅಧಿಕರಣದಲ್ಲಿ "ಬ್ರಹ್ಮಜಿಜ್ಞಾಸೆ ಕರ್ತವ್ಯವಾಗಿದೆ" ಎಂದು ಸಮರ್ಥಿಸ-ಲಾಗಿದೆ. ಅಲ್ಲಿ ಈ ರೀತಿ ಪುನಃ ಪೂರ್ವಪಕ್ಷ ಪ್ರವೃತ್ತವಾಗುತ್ತದೆ –

### ಪೂರ್ವಪಕ್ಷ

ಬ್ರಹ್ಮಜಿಜ್ಞಾಸೆ ಕರ್ತವ್ಯವಾಗಿದೆ ಎನ್ನುವಲ್ಲಿ ಬ್ರಹ್ಮ ಎಂಬ ಶಬ್ದಕ್ಕೆ ಜೀವ ಎಂದೇ ಅರ್ಥ ಮಾಡಬೇಕು. ಹೊರತು ಬ್ರಹ್ಮ ಎಂದರೆ ವಿಷ್ಣು ಎಂದು ಅರ್ಥವಲ್ಲ. ಯಾಕೆ? ಬ್ರಹ್ಮ ಎಂಬ ಶಬ್ದಕ್ಕೆ ಜೀವ ಎಂಬ ಅರ್ಥದಲ್ಲಿ ರೂಢಿ ಇರುವುದೇ ಅದಕ್ಕೆ ಕಾರಣ. ಅರ್ಥಾತ್ ಬ್ರಹ್ಮಶಬ್ದವು ಜೀವ ಎಂಬ ಅರ್ಥದಲ್ಲಿ ರೂಢವಾದ್ದರಿಂದ, ಬ್ರಹ್ಮಜಿಜ್ಞಾಸೆ ಎನ್ನುವಲ್ಲಿ ಬ್ರಹ್ಮ ಶಬ್ದದಿಂದ ಜೀವನನ್ನೇ ತೆಗೆದುಕೊಳ್ಳಬೇಕು.

**ಸೂ.ರ.:– न च विष्णुप्रापकयोगसद्भावाद्विष्णुरेव ब्रह्म । योगाद्रूढेर्मुख्यत्वाद्बाधकं विना मुख्यार्थत्यागायोगात् ।**

**ಅನು.:–** "ಬ್ರಹ್ಮಶಬ್ದಕ್ಕೆ ವಿಷ್ಣು ಎಂಬ ಅರ್ಥದಲ್ಲಿ ಯೋಗವೃತ್ತಿ ಇರುವುದರಿಂದ ಬ್ರಹ್ಮಜಿಜ್ಞಾಸೆ ಎನ್ನುವಲ್ಲಿ ಬ್ರಹ್ಮ ಎಂದರೆ ವಿಷ್ಣುವೇ ಆಗುತ್ತಾನೆ" ಎಂಬುದಾಗಿ ಶಂಕೆ ಮಾಡುವುದು ಸರಿಯಲ್ಲ. ಏಕೆಂದರೆ ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ಯೋಗವಿದ್ದರೂ ಜೀವನಲ್ಲಿ ಅದು ರೂಢವಾಗಿದೆ. 'ಯೋಗಾತ್ ರೂಢೇಃ ಬಲೀಯಸ್ತ್ವಾತ್' ಎಂದು ಹೇಳಿದಂತೆ ಯೋಗಕ್ಕಿಂತಲೂ ರೂಢಿ ಪ್ರಬಲವಾದ್ದರಿಂದ (ಮುಖ್ಯವಾದ್ದರಿಂದ) ಬ್ರಹ್ಮಶಬ್ದಕ್ಕೆ ರೂಢಿವೃತ್ತಿ-ಯಿಂದ ಜೀವ ಎಂಬ ಅರ್ಥವನ್ನೇ ತೆಗೆದುಕೊಳ್ಳಬೇಕು.

ಮತ್ತು ಬ್ರಹ್ಮಶಬ್ದಕ್ಕೆ ಜೀವನು ಮುಖ್ಯಾರ್ಥನಾಗಿದ್ದಾನೆ. ಮುಖ್ಯಾರ್ಥನಾದ ಜೀವನನ್ನು ತೆಗೆದುಕೊಂಡಾಗ ಏನಾದರೂ ಬಾಧಕ ಬರುತ್ತಿದ್ದರೆ ಆಗ ಮುಖ್ಯಾರ್ಥವನ್ನು ಬಿಟ್ಟು

ಅಮುಖ್ಯಾರ್ಥನಾದ ವಿಷ್ಣುವನ್ನು ತೆಗೆದುಕೊಳ್ಳಬಹುದಿತ್ತು. ಆದರೆ ಮುಖ್ಯಾರ್ಥನಾದ ಜೀವನನ್ನು ತೆಗೆದುಕೊಂಡರೆ ಯಾವ ಬಾಧಕವೂ ಇಲ್ಲದಿರುವುದರಿಂದ, ಅಮುಖ್ಯಾರ್ಥವನ್ನು ತೆಗೆದುಕೊಳ್ಳುವ ಅನಿವಾರ್ಯತೆ ಇಲ್ಲವಾದ್ದರಿಂದ, ಬ್ರಹ್ಮಶಬ್ದದಿಂದ ಮುಖ್ಯಾರ್ಥನಾದ ಜೀವನನ್ನೇ ತೆಗೆದುಕೊಳ್ಳಬೇಕು.

**ಸೂ.ರ.:– न च जिज्ञास्यत्वमेव बाधकम् । जिज्ञासापदस्य ज्ञानेच्छावाचकत्वेन विचारार्थकत्वाभावात् ।**

**ಅನು.:–** "ಬ್ರಹ್ಮಶಬ್ದದಿಂದ ಮುಖ್ಯಾರ್ಥನಾದ ಜೀವನನ್ನು ತೆಗೆದುಕೊಂಡರೆ ಯಾವ ಬಾಧಕವೂ ಇಲ್ಲ" ಎಂದು ಹೇಗೆ ಹೇಳುತ್ತೀರಿ? ಏಕೆಂದರೆ, ಬ್ರಹ್ಮಶಬ್ದದಿಂದ ವಾಚ್ಯನಾದ ವ್ಯಕ್ತಿಗೆ ಇಲ್ಲಿ ಜಿಜ್ಞಾಸ್ಯತ್ವವನ್ನು (ಜಿಜ್ಞಾಸಾವಿಷಯತ್ವವನ್ನು) ಹೇಳುತ್ತಿದ್ದಾರೆ. ಪ್ರಕೃತ ಬ್ರಹ್ಮಶಬ್ದದಿಂದ ಜೀವನನ್ನು ತೆಗೆದುಕೊಳ್ಳುವುದಾದರೆ ಆ ಜೀವನಿಗೆ ಜಿಜ್ಞಾಸ್ಯತ್ವವನ್ನು ಹೇಳಿದಂತಾಗುತ್ತದೆ. ಆದರೆ ನಿತ್ಯಸಿದ್ಧನಾದ ಜೀವನಿಗೆ ಜಿಜ್ಞಾಸ್ಯತ್ವವು ಕೂಡುವುದಿಲ್ಲ. ಆದ್ದರಿಂದ ಬ್ರಹ್ಮಶಬ್ದದಿಂದ ಜೀವನನ್ನು ತೆಗೆದುಕೊಂಡರೆ ಜಿಜ್ಞಾಸ್ಯತ್ವವೇ ಬಾಧಕವಾಗುತ್ತದೆಯಲ್ಲವೇ?

ಈ ರೀತಿ ಶಂಕಿಸುವುದು ಸರಿಯಲ್ಲ. ಏಕೆಂದರೆ – ಜಿಜ್ಞಾಸ್ಯತ್ವವು ಯಾವಾಗ ಬಾಧಕ-ವಾಗುತ್ತಿತ್ತು? ಜಿಜ್ಞಾಸಾ ಎಂಬ ಶಬ್ದಕ್ಕೆ ವಿಚಾರ ಎಂದು ಅರ್ಥವಿದ್ದದ್ದಾದರೆ, ನಿತ್ಯಸಿದ್ಧನಾದ ಜೀವನಿಗೆ ಜಿಜ್ಞಾಸ್ಯತ್ವವು (ವಿಚಾರವಿಷಯತ್ವವು) ಕೂಡುವುದಿಲ್ಲ ಎಂದು ಶಂಕಿಸಬಹುದಿತ್ತು. ಆದರೆ ಪ್ರಕೃತದಲ್ಲಿ ಜಿಜ್ಞಾಸಾ ಶಬ್ದಕ್ಕೆ ವಿಚಾರ ಎಂದು ಅರ್ಥವಿಲ್ಲ, ಕಿಂತು ಜಿಜ್ಞಾಸೆ ಎಂದರೆ "ಜ್ಞಾತುಂ ಇಚ್ಛಾ ಜಿಜ್ಞಾಸಾ" ಎಂಬ ವಿಗ್ರಹಕ್ಕನುಗುಣವಾಗಿ ಜ್ಞಾನೇಚ್ಛಾ ಎಂದು ಅರ್ಥವು ವಿವಕ್ಷಿತವಾಗಿದೆ. ಜೀವನಿಗೆ ವಿಚಾರವಿಷಯತ್ವವು ಕೂಡದಿದ್ದರೂ ಜ್ಞಾನೇಚ್ಛಾವಿಷಯತ್ವವು ಕೂಡಿಯೇ ಕೂಡುತ್ತದೆ. ಆದ್ದರಿಂದ ವಿವಕ್ಷಿತವಾದ ಇಂತಹ ಜಿಜ್ಞಾಸ್ಯತ್ವವೂ (ಜ್ಞಾನೇಚ್ಛಾ-ವಿಷಯತ್ವವೂ) ಬಾಧಕವಾಗುವುದಿಲ್ಲವಾದ್ದರಿಂದ ಬ್ರಹ್ಮಶಬ್ದದಿಂದ ಜೀವನನ್ನು ಅವಶ್ಯವಾಗಿ ತೆಗೆದುಕೊಳ್ಳಬಹುದು.

**ಸೂ.ರ.:– ततश्च जीवस्य ब्रह्मपदमुख्यार्थत्वादस्य ब्रह्मणो जीवत्वे सिद्धे तस्य च स्वप्रकाशत्वेनासन्दिग्धस्याविचार्यत्वात्प्रकृतानुगुणमेव जिज्ञासापदेन लक्षणीयमिति जिज्ञासाया अविहितत्वान्न ब्रह्मजिज्ञासा सम्भवतीति प्राप्ते सूत्रं पठति ।**

ಹಾಗಾದರೆ, ಬ್ರಹ್ಮಶಬ್ದಕ್ಕೆ ಜೀವನು ಮುಖ್ಯಾರ್ಥನಾದುದರಿಂದ ಬ್ರಹ್ಮಜಿಜ್ಞಾಸೆ ಎನ್ನುವಲ್ಲಿ ಬ್ರಹ್ಮ ಎಂದರೆ ಜೀವ ಎಂದು ಸಿದ್ಧವಾದ ಮೇಲೆ ಅಂತಹ ಜೀವನು ಸ್ವಪ್ರಕಾಶನಾದುದರಿಂದ ನಿತ್ಯಸಿದ್ಧನಾಗಿದ್ದಾನೆ ಅರ್ಥಾತ್ ಸಂದಿಗ್ಧನಾಗಿಲ್ಲ. ಸಂದಿಗ್ಧನಾಗಿಲ್ಲ ಎಂದಮೇಲೆ ಅವನು ಜಿಜ್ಞಾಸೆಗೆ ವಿಷಯನಾಗಲು ಸಾಧ್ಯವಿಲ್ಲವಾದ್ದರಿಂದ ಜಿಜ್ಞಾಸೆಯು ವಿಹಿತವಾಗದ ಕಾರಣ ಬ್ರಹ್ಮಜಿಜ್ಞಾಸೆ ಎನ್ನುವುದೇ ಕೂಡುವುದಿಲ್ಲ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ ಅದನ್ನು ನಿರಾಕರಣೆ ಮಾಡಿ ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಎರಡನೇ ಸೂತ್ರವು ಪ್ರವೃತ್ತವಾಗುತ್ತದೆ.

## ॐ जन्माद्यस्य यतः ॐ (१.१.२)

**ಸೂತ್ರಾರ್ಥ** :- ಅಸ್ಯ=ಪ್ರಮಾಣಸಿದ್ಧವಾದ ಜೀವ-ಜಡಾತ್ಮಕವಾದ ಈ ಪ್ರಪಂಚಕ್ಕೆ ಯತಃ= ಯಾವನಿಂದ ಜನ್ಮಾದಿ=ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಎಂಟರ ಸಮೂಹವು ಭವತೀತಿ ಶ್ರುತಂ=ಆಗುತ್ತದೆ ಎಂದು ಶ್ರುತಿಸಿದ್ಧವಾಗಿದೆಯೋ ತದೇವ ಬ್ರಹ್ಮ ನಾನ್ಯತ್=ಅದೇ ಬ್ರಹ್ಮ, ಬೇರೆಯದಲ್ಲ.

## ಸಿದ್ಧಾಂತ

**ಸೂ.ರ.:– एवं च ब्रह्मशब्दस्य विष्णौ योगरूढत्वाद्विष्णुरेवेदं ब्रह्म । ब्रह्मशब्दस्य जीवे रूढत्वेऽपि रूढमात्राद्विद्वद्रूढेः प्राबल्येन निर्णयोपपत्तेः ।**

**ಅನು.**:– ಬ್ರಹಜಿಜ್ಞಾಸಾ ಎನ್ನುವಲ್ಲಿ ಬ್ರಹ್ಮ ಶಬ್ದಕ್ಕೆ ವಿಷ್ಣು ಎಂದೇ ಅರ್ಥ. ಹೊರತು ಜೀವ ಎಂದು ಅರ್ಥವಲ್ಲ.

"ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ಯೋಗ ಇದೆ. ಜೀವನಲ್ಲಿ ರೂಢಿ ಇದೆ. ಯೋಗಕ್ಕಿಂತಲೂ ರೂಢಿ ಪ್ರಬಲವಾದ್ದರಿಂದ ಬ್ರಹ್ಮಶಬ್ದಕ್ಕೆ ಜೀವ ಎಂಬ ಅರ್ಥವನ್ನೇ ತೆಗೆದುಕೊಳ್ಳಬೇಕು" ಎಂಬುದಾಗಿ ಪೂರ್ವಪಕ್ಷದಲ್ಲಿ ಶಂಕೆ ಮಾಡಿದ್ದೇವೆಯಲ್ಲ? ಎಂದರೆ, ಈ ರೀತಿಯಾಗಿ ಶಂಕಿಸುವುದು ಸೂಕ್ತವಲ್ಲ.

ಏಕೆಂದರೆ - ಬ್ರಹ್ಮಶಬ್ದಕ್ಕೆ ಜೀವನಲ್ಲಿ ಕೇವಲ ರೂಢಿ ಇದ್ದರೂ ಸಹ ವಿಷ್ಣುವಿನಲ್ಲಿ ಯೋಗರೂಢಿ ಇರುವುದರಿಂದ, ಕೇವಲ ರೂಢಿಗಿಂತಲೂ ಯೋಗರೂಢಿ ಪ್ರಬಲವಾದ್ದರಿಂದ ಬ್ರಹ್ಮಶಬ್ದಕ್ಕೆ ವಿಷ್ಣು ಎಂಬ ಅರ್ಥವನ್ನೇ ತೆಗೆದುಕೊಳ್ಳಬೇಕೆಂದು ನಿರ್ಣಯವಾಗುತ್ತದೆ.

**ಸೂ.ರ.:– अस्तु वा जीव एव रूढिस्तथाऽपि यतो वेति पूर्ववाक्योक्त-कारणत्वपालकत्वसंहारकत्वमुक्तप्राप्यत्वानामयोगप्रसङ्गेन मुख्यार्थस्यापि त्याज्यत्वात् । न च तेषां जीवे सम्भवः । य उ त्रिधा (ऋ.१-१५४-४)त्वित्यादिना तेषां विष्ण्वैकनिष्ठत्वस्य सिद्धत्वात् ।**

**ಅನು.:–** ತುಷ್ಯತು ಎಂಬ ನ್ಯಾಯದಿಂದ ಬ್ರಹ್ಮಶಬ್ದಕ್ಕೆ ಜೀವನಲ್ಲಿ ರೂಢಿಯನ್ನೇ ಒಪ್ಪೋಣ. ಆದರೂ ಮುಖ್ಯಾರ್ಥನಾದ ಜೀವನನ್ನು ಬಿಡಲೇಬೇಕು. ಯಾಕೆಂದರೆ – 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಹಿಂದಿನವಾಕ್ಯದಲ್ಲಿ ಜಿಜ್ಞಾಸ್ಯನಾದ ವ್ಯಕ್ತಿಗೆ ಜಗತ್ಕಾರಣತ್ವ–ಜಗತ್ಪಾಲಕತ್ವ–ಜಗತ್ಸಂಹಾರಕತ್ವ ಹಾಗೂ ಮುಕ್ತಪ್ರಾಪ್ಯತ್ವ ಧರ್ಮಗಳು ಹೇಳಲ್ಪಟ್ಟಿವೆ. ರೂಢಿವೃತ್ತಿಯನ್ನು ಆಶ್ರಯಿಸಿ ಬ್ರಹ್ಮಶಬ್ದದಿಂದ ಜೀವನನ್ನು ತೆಗೆದುಕೊಳ್ಳುವುದಾದರೆ, ಜಿಜ್ಞಾಸ್ಯನಾದ ಜೀವನಿಗೆ ಈ ಜಗತ್ಕಾರಣತ್ವಾದಿ ಧರ್ಮಗಳು ಬರಬೇಕಾಗುತ್ತವೆ.

ಬರಲಿ ಎನ್ನಲೂ ಬರುವುದಿಲ್ಲ. 'ಯ ಉ ತ್ರಿಧಾತು' (ಋ. 1–154–4) ಮೊದಲಾದ ಪ್ರಮಾಣಗಳಲ್ಲಿ ಜಗತ್ಕಾರಣತ್ವಾದಿ ಧರ್ಮಗಳು ಭಗವಂತನಲ್ಲಿ ಮಾತ್ರ ಇವೆ ಎಂದು ಸಿದ್ಧವಾಗಿರುವುದರಿಂದ ಜೀವನಲ್ಲಿ ಅವುಗಳನ್ನು ಹೇಳಲು ಆಗುವುದಿಲ್ಲ.

ಆದ್ದರಿಂದ ಮುಖ್ಯಾರ್ಥನಾದ ಜೀವನನ್ನೇ ತೆಗೆದುಕೊಂಡರೆ ಅವನು ಜಿಜ್ಞಾಸ್ಯನಾಗಿ ಅವನಿಗೆ ಜಗತ್ಕಾರಣತ್ವಾದಿ ಧರ್ಮಗಳು ಬರಬೇಕಾಗುತ್ತದೆ. ಅವು ಜೀವನಿಗೆ ಅಸಂಭಾವಿತವಾದ್ದರಿಂದ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥನಾದ ಜೀವನನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ಹೀಗಾಗಿ ಯೋಗರೂಢಿವೃತ್ತಿಯಿಂದ ಬ್ರಹ್ಮಶಬ್ದಕ್ಕೆ ವಿಷ್ಣು ಎಂದೇ ಅರ್ಥ ಮಾಡಬೇಕು.

**ಸೂ.ರ.:– जिज्ञासाशब्दो विचारे रूढः । यदि वा लाक्षणिकः । उभयथाऽप्यात्मा वाऽरे द्रष्टव्य इति (बृ.उ.६-५-६.) श्रुतिसमाख्याना-द्विचार एवेति तद्विरोधेन न जीवोऽत्र विवक्षितः ।**

**ಅನು.:–** ಜಗತ್ಕಾರಣತ್ವಾದಿ ಧರ್ಮಗಳು ಜೀವನಿಗೆ ಕೂಡುವುದಿಲ್ಲವಾದ್ದರಿಂದ ಬ್ರಹ್ಮ ಎಂದರೆ ಜೀವ ಅಲ್ಲ ಎನ್ನುವುದು ಒಂದು ಕಾರಣ. ಮತ್ತೊಂದು ಕಾರಣ ಹೇಳುವುದಾದರೆ – ಜಿಜ್ಞಾಸಾ ಎಂಬ ಶಬ್ದಕ್ಕೆ ಪೂರ್ವಪಕ್ಷದಲ್ಲಿ ಶಂಕಿಸಿದಂತೆ ಜ್ಞಾನೇಚ್ಛಾ ಎಂದು ಅರ್ಥವಲ್ಲ. ಕಿಂತು ರೂಢಿವೃತ್ತಿಯಿಂದ ವಿಚಾರ ಎಂದು ಅರ್ಥ.

ಅಥವಾ ಜಿಜ್ಞಾಸಾ ಎನ್ನುವುದು ಲಾಕ್ಷಣಿಕ ಪ್ರಯೋಗ ಎಂದೇ ಆದರೂ ಸಹ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯ (ಬೃಹದಾರಣ್ಯಕೋಪನಿಷತ್ 6-5-6) ಸಮಾಖ್ಯಾ ಇರುವುದರಿಂದ ವಿಚಾರದಲ್ಲಿಯೇ ಲಕ್ಷಣಾ ಮಾಡಬೇಕು.

ಹೀಗೆ ರೂಢಿ-ಲಕ್ಷಣಾ ಯಾವುದೇ ವೃತ್ತಿಯನ್ನು ಆಶ್ರಯಿಸಿದರೂ ಜಿಜ್ಞಾಸಾ ಎಂಬ ಶಬ್ದಕ್ಕೆ ವಿಚಾರ ಎಂದು ಅರ್ಥ ಬರುತ್ತದೆ.

ಇಂತಹ ಜಿಜ್ಞಾಸಾವಿಷಯನಾಗುವುದು ಜೀವನು ಅಲ್ಲ. ಅವನು ಸ್ವಪ್ರಕಾಶನಾದ್ದರಿಂದ ಸಾಕ್ಷಿಪ್ರತ್ಯಕ್ಷದಿಂದ ನಿತ್ಯಸಿದ್ಧನಾಗಿದ್ದಾನೆ. ಅಂತಹ ನಿತ್ಯಸಿದ್ಧನಾದ ಜೀವನು ವಿಚಾರಕ್ಕೆ ವಿಷಯನಾಗಲಾರ. ಆ ವಿಚಾರವಿಷಯತ್ವವು ಬ್ರಹ್ಮನಿಗೇ ಕೂಡುತ್ತದೆ. ಹೀಗಾಗಿ ಜಿಜ್ಞಾಸ್ಯತ್ವ ಯುಕ್ತಿಯಿಂದಲೂ ಸಹ ಬ್ರಹ್ಮಶಬ್ದಕ್ಕೆ ಜೀವ ಎಂಬ ಅರ್ಥ ಸರಿಯಾದದ್ದಲ್ಲ. ವಿಷ್ಣು ಎಂಬ ಅರ್ಥವನ್ನೇ ಹೇಳಬೇಕು ಎಂದು ತಿಳಿಯುತ್ತದೆ.

**ಸೂ.ರ.:– ततश्च जीवातिरिक्तस्य ब्रह्मणः प्रागुक्तं जिज्ञास्यत्वं सिद्धम् ।**

**ಅನು.:–** ಹೀಗೆ ಜೀವನಿಗೆ ಜಿಜ್ಞಾಸ್ಯತ್ವವು ಉಪಪನ್ನವಾಗದ ಕಾರಣ ಜೀವಾತಿರಿಕ್ತನಾದ ಬ್ರಹ್ಮನಿಗೇ ಜಿಜ್ಞಾಸ್ಯತ್ವವನ್ನು ಹೇಳಬೇಕು. ಅರ್ಥಾತ್ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಹಿಂದಿನ ಸೂತ್ರದಲ್ಲಿ ಹೇಳಿದ ಬ್ರಹ್ಮಜಿಜ್ಞಾಸಾ ಎಂದರೆ ಜೀವನ ಜಿಜ್ಞಾಸಾ ಅಲ್ಲ, ಬ್ರಹ್ಮನ (ವಿಷ್ಣುವಿನ) ಜಿಜ್ಞಾಸೆ ಎನ್ನುವುದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

ಜನ್ಮಾಧಿಕರಣವು ಸಮಾಪ್ತವಾಯಿತು.

ಅಧಿಕರಣ – 3

# ಶಾಸ್ತ್ರಯೋನಿತ್ವಾಧಿಕರಣ

## ಸಂಗತಿ

**ಸೂ.ರ.:– अत्र पूर्वोक्तजगज्जन्मादिकारणत्वरूपब्रह्मलक्षणस्य रुद्रादिष्वतिव्याप्तिपरिहाराय जगत्कारणे प्रमाणमुच्यते ।**

**ಅನು.:–** ಈ ಅಧಿಕರಣದಲ್ಲಿ ಏನು ಮಾಡುತ್ತಾರೆಂಬುದನ್ನು ತಿಳಿಸುತ್ತಾರೆ. ಹಿಂದಿನ ಜನ್ಮಾಧಿಕರಣದಲ್ಲಿ ಬ್ರಹ್ಮನಿಗೆ ಯಾವ ಜಗಜ್ಜನ್ಮಾದಿಕಾರಣತ್ವ ಎಂಬ ಲಕ್ಷಣ ಹೇಳಿದ್ದಾರೆಯೋ ಆ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಶಂಕೆ ಬಂದರೆ, ಅದರ ಪರಿಹಾರಕ್ಕಾಗಿ "ವಿಷ್ಣುವೇ ಜಗಜ್ಜನ್ಮಾದಿಕಾರಣನಾಗಿದ್ದಾನೆ" ಎಂಬ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ.

## ಪೂರ್ವಪಕ್ಷ

'ಜಗಜ್ಜನ್ಮಾದಿಕಾರಣತ್ವಂ ಬ್ರಹ್ಮಣಃ ಲಕ್ಷಣಂ' ಎಂದು ಹೇಳುವುದಾದರೆ ವಿಷ್ಣುವಿನಂತೆ ರುದ್ರಾದಿಗಳೂ ಜಗಜ್ಜನ್ಮಾದಿಕಾರಣರಾಗಿರುವುದರಿಂದ ಈ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ.

**ಸೂ.ರ.:– ननु रुद्रादेरात्माश्रयप्रसङ्गेन रुद्रादिकारणत्वायोगान्नातिव्याप्तिः । सिद्धान्त्यभिमतलक्षणस्य तत्राभावात् । सिद्धान्त्यनभिमत-रुद्रव्यतिरिक्तजगत्कारणत्वोपपादनेनातिव्याप्तिदानस्यानुचितत्वात् ।**

**ಅನು.:–** ಇಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣತ್ವೇನ ಹೇಳಿದಾಗ ರುದ್ರಾದಿ-ಗಳಲ್ಲಿ ಅತಿವ್ಯಾಪ್ತಿ ಬರಲು ಹೇಗೆ ಸಾಧ್ಯ? ಎಂದು ಪ್ರಶ್ನೆ. ಏಕೆಂದರೆ ಜಗತ್ಕಾರಣತ್ವ ಎಂದರೆ ರುದ್ರಾದಿಜಗತ್ಕಾರಣತ್ವ ಎಂದು ವಿವಕ್ಷಿತವೋ? (ರುದ್ರಾದಿಗಳನ್ನೂ ಜಗತ್ತಿನಲ್ಲಿ ಸೇರಿಸಿ ಅಂತಹ ರುದ್ರಾದಿಜಗತ್ತಿಗೆ ಕಾರಣನಾಗಿದ್ದಾನೆ ಎಂದು ಅಭಿಪ್ರಾಯವೋ?) ಅಥವಾ ರುದ್ರವ್ಯತಿರಿಕ್ತಜಗತ್ಕಾರಣತ್ವ (ರುದ್ರನನ್ನು ಬಿಟ್ಟು ಉಳಿದ ಜಗತ್ತಿಗೆ ಕಾರಣ) ಎಂದು ವಿವಕ್ಷಿತವೋ?

ರುದ್ರಾದಿಗಳನ್ನೂ ಜಗತ್ತಿನಲ್ಲಿ ಸೇರಿಸಿ ಅಂತಹ ರುದ್ರಾದಿಜಗತ್ಕಾರಣತ್ವವನ್ನು

ಲಕ್ಷಣತ್ವೇನ ಹೇಳುತ್ತೇವೆ ಎಂದರೆ, ಹೀಗೆ ಹೇಳುವುದಾದರೆ ಇಂತಹ ರುದ್ರಾದಿ-ಜಗತ್ಕಾರಣತ್ವವು ರುದ್ರಾದಿಗಳಲ್ಲಿ ಬರುವುದಿಲ್ಲ. ಕಾರಣ ರುದ್ರಾದಿಗಳಿಗೆ ರುದ್ರಾದಿ-ಜಗತ್ಕಾರಣತ್ವವನ್ನು ಹೇಳಿದರೆ ರುದ್ರಾದಿಗಳು ತಮಗೆ ತಾವೇ ಕಾರಣರು ಎಂದಾಗುತ್ತದೆ. ಹಾಗಾದರೆ ಆತ್ಮಾಶ್ರಯದೋಷ ಬರುತ್ತದೆ. ಆದ್ದರಿಂದ ರುದ್ರಾದಿಜಗತ್ಕಾರಣತ್ವವನ್ನು ವಿವಕ್ಷಿಸಿದರೆ ಅದು ರುದ್ರಾದಿಗಳಲ್ಲಿ ಬಾರದ ಕಾರಣ ಅತಿವ್ಯಾಪ್ತಿ ಹೇಳಲು ಸಾಧ್ಯವಿಲ್ಲ.

ಇನ್ನು ರುದ್ರವ್ಯತಿರಿಕ್ತಜಗತ್ಕಾರಣತ್ವವನ್ನು ವಿವಕ್ಷಿಸುವುದಾದರೆ ಇದು ರುದ್ರಾದಿಗಳಲ್ಲಿ ಬರುತ್ತದೆಯಾದ್ದರಿಂದ ಹಿಂದಿನ ಪಕ್ಷದಲ್ಲಿ ಬಂದ ಆತ್ಮಾಶ್ರಯದೋಷ ಈಗ ಬರದಿದ್ದರೂ ಸಹ, ಇಂತಹ ರುದ್ರವ್ಯತಿರಿಕ್ತಜಗತ್ಕಾರಣತ್ವ ಎಂಬ ಲಕ್ಷಣವು ಸಿದ್ಧಾಂತಿಗೆ ಅಭಿಮತವಾಗಿಲ್ಲ. ರುದ್ರದೇವರನ್ನೂ ಹಿಡಿದು ಸಮಗ್ರಜಗತ್ತಿಗೆ ವಿಷ್ಣು ಕಾರಣನಾಗಿದ್ದಾನೆ ಎಂದೇ ಸಿದ್ಧಾಂತಿಗೆ ಅಭಿಮತವಾಗಿದೆ. ಹೊರತು ರುದ್ರವ್ಯತಿರಿಕ್ತ ಜಗತ್ಕಾರಣತ್ವವು ಸಿದ್ಧಾಂತಿಗೆ ಸಮ್ಮತವಾಗಿಲ್ಲ. ಹೀಗಾಗಿ ಸಿದ್ಧಾಂತಿಗೆ ಅಭಿಮತವಲ್ಲದ ಲಕ್ಷಣವನ್ನು ವಿವಕ್ಷಿಸುವುದು ಸಮೀಚೀನ-ವಾಗುವುದಿಲ್ಲ. ಆದ್ದರಿಂದ ಉಭಯಥಾಪಿ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

**ಸೂ.ರ.:– किञ्च सूत्रकाराभिमतं विष्णुजन्यबन्धादियोगित्वं रुद्रादावङ्गीक्रियते न वा । आद्ये न तस्य कारणत्वसम्भवः । बद्धस्य देवदत्तादितुल्यत्वात् । द्वितीयेऽसम्भव एव वक्तव्यः । सिद्धान्त्यभिमतस्य रुद्रादिजगन्निष्ठज्ञानाज्ञानबन्धादिकर्तृत्वस्य विष्णावभावादिति चेत् ।**

**ಅನು.:–** ಅಷ್ಟೇ ಅಲ್ಲದೇ, ಸೂತ್ರಕಾರರಿಗೆ ಅಭಿಮತವಾದ ವಿಷ್ಣುಜನ್ಯಬಂಧಾದಿ ಯೋಗಿತ್ವವನ್ನು (ವಿಷ್ಣು ಮಾಡುವ ಬಂಧಾದಿಗಳ ಸಂಬಂಧವನ್ನು) ರುದ್ರಾದಿಗಳಲ್ಲಿ ಅಂಗೀಕರಿಸುತ್ತೀರೋ? ಇಲ್ಲವೋ?

ವಿಷ್ಣುಜನ್ಯಬಂಧಾದಿಯೋಗಿತ್ವವನ್ನು ರುದ್ರಾದಿಗಳಲ್ಲಿ ಅಂಗೀಕರಿಸುವುದಾದರೆ, ರುದ್ರಾದಿಗಳಿಗೂ ಬಂಧ ಇದೆ (ರುದ್ರಾದಿಗಳೂ ಬದ್ಧರಾಗಿದ್ದಾರೆ) ಎಂದು ಹೇಳಿ-ದಂತಾಗುತ್ತದೆ. ರುದ್ರಾದಿಗಳಿಗೂ ಬಂಧ ಒಪ್ಪಿದರೆ ''ದೇವದತ್ತನಿಗೂ ಬಂಧ ಇದೆ-ರುದ್ರಾದಿಗಳಿಗೂ ಬಂಧ ಇದೆ'' ಎಂದಾಗಿ ಬದ್ಧರಾದ ರುದ್ರಾದಿಗಳು ದೇವದತ್ತನಿಗೆ ಸಮಾನರಾಗುತ್ತಾರೆ. ಅಂತಹ ದೇವದತ್ತನಿಗೆ ಸಮಾನರಾಗುವ ರುದ್ರಾದಿಗಳಿಗೆ ಜಗತ್ಕಾರಣತ್ವ ಹೇಗೆ ಕೂಡುತ್ತದೆ?

ಇನ್ನು ವಿಷ್ಣುಜನ್ಯಬಂಧಾದಿಯೋಗಿತ್ವವನ್ನು ರುದ್ರಾದಿಗಳಲ್ಲಿ ಅಂಗೀಕರಿಸುವುದಿಲ್ಲ

ಎಂದರೆ, ವಿಷ್ಣುವು ರುದ್ರಾದಿಗಳಿಗೆ ಬಂಧಾದಿಕರ್ತಾ ಅಲ್ಲ ಎಂದಾಗುತ್ತದೆ. ಹಾಗಾದರೆ ಸಿದ್ಧಾಂತಿಗೆ ರುದ್ರಾದಿಜಗತ್ಕಾರಣತ್ವವೇ ಅಭಿಮತವಾದ ಲಕ್ಷಣವಾಗಿರುವುದರಿಂದ, ಅಂತಹ ಸಿದ್ಧಾಂತಿಗೆ ಅಭಿಮತವಾದ ರುದ್ರಾದಿಜಗತ್ಕಾರಣತ್ವವು ವಿಷ್ಣುವಿಗೆ ಬಾರದ ಕಾರಣ ಲಕ್ಷಣಕ್ಕೆ ಅಸಂಭವದೋಷವನ್ನೇ ಹೇಳಬೇಕು ಹೊರತು ಅತಿವ್ಯಾಪ್ತಿ ದೋಷವನ್ನು ಶಂಕಿಸುವುದು ಸರಿಯಲ್ಲ.

**ಸೂ.ರ.:– स्यादयं दोषः । यदि सूत्रकृदभिमतलक्षणस्यातिव्याप्ति-रुच्येत । न चैवम् । किं नाम यतो वेति (तै.उ.३-१-१.) श्रुत्युक्त-लक्षणस्यैव ।**

**ಅನು.:–** ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಾದದ್ದಲ್ಲ. ಯಾಕೆಂದರೆ :–

**ಓಂ ಜನ್ಮಾದ್ಯಸ್ಯ ಯತಃ ಓಂ** ಎಂಬ ಸೂತ್ರವನ್ನು ಬರೆದ ವೇದವ್ಯಾಸರಿಗೆ ಅಭಿಮತ-ವಾದ ಲಕ್ಷಣಕ್ಕೆ ಅತಿವ್ಯಾಪ್ತಿದೋಷವನ್ನು ನಾವು ಹೇಳಿದ್ದರೆ ಆಗ ಈ ರೀತಿ ಆಕ್ಷೇಪ ಮಾಡುವುದು ಸರಿಯಾಗುತ್ತಿತ್ತು. ಆದರೆ ಸೂತ್ರಕಾರರಿಗೆ ಅಭಿಮತವಾದ ಲಕ್ಷಣಕ್ಕೆ ನಾವು ಅತಿವ್ಯಾಪ್ತಿಯನ್ನು ಶಂಕಿಸಿಲ್ಲ. ಕಿಂತು "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ಶ್ರುತಿಯು ಹೇಳುತ್ತಿರುವ ಜಗಜ್ಜನ್ಮಾದಿಕಾರಣತ್ವ ಲಕ್ಷಣಕ್ಕೆ ನಾವು ಅತಿವ್ಯಾಪ್ತಿಯನ್ನು ಶಂಕಿಸಿದ್ದೇವೆ.

**ಸೂ.ರ.:– न च रुद्रादिनिष्ठबन्धादिकारणत्वं श्रुत्यभिप्रेतम् । रुद्रस्य विष्णुसमानत्वेन बन्धाज्ञानादिशून्यत्वात् ।**

**ಅನು.:–** ಶ್ರುತಿಗೆ ಅಭಿಮತವಾದ ಜಗಜ್ಜನ್ಮಾದಿಕಾರಣತ್ವ ಲಕ್ಷಣಕ್ಕೇ ಅತಿವ್ಯಾಪ್ತಿ ಹೇಳಬಹುದಲ್ಲ? ಎಂದರೆ, ಹೇಳಲು ಬರುವುದಿಲ್ಲ. ಯಾಕೆಂದರೆ – ಶ್ರುತಿಯು ಹೇಳುತ್ತಿರುವ ಜಗಜ್ಜನ್ಮಾದಿಕಾರಣತ್ವ ಎಂದರೆ ರುದ್ರಾದಿಜಗತ್ಕಾರಣತ್ವ ಎಂದು ಅಲ್ಲ. ಯಾಕೆ? ರುದ್ರನು ವಿಷ್ಣುವಿಗೆ ಸಮಾನನಾಗಿರುವ ಕಾರಣ ವಿಷ್ಣುವಿನಂತೆ ರುದ್ರನಿಗೂ ಬಂಧ-ಅಜ್ಞಾನಾದಿಗಳು ಇಲ್ಲ. ಆದ್ದರಿಂದ ರುದ್ರಾದಿಜಗತ್ಕಾರಣತ್ವವು ಶ್ರುತಿಗೆ ಅಭಿಮತ-ವಾಗಿಲ್ಲ. ಆದ್ದರಿಂದ ಶ್ರುತಿಗೆ ಅಭಿಮತವಾದ ಲಕ್ಷಣಕ್ಕೆ ಅತಿವ್ಯಾಪ್ತಿಶಂಕೆ ಬರುವುದಿಲ್ಲ.

**ಸೂ.ರ.:– अविद्यमानरुद्रादिनिष्ठबन्धादिकर्तृत्वस्य श्रुत्यर्थत्वे घटस्य वन्धादिकतृत्वमपि श्रुत्यर्थः स्यात् ।**

**ಅನು.:–** ರುದ್ರಾದಿಗಳಿಗೆ ಬಂಧಾದಿಗಳು ಇಲ್ಲದ ಕಾರಣ ವಿಷ್ಣುವಿನಲ್ಲಿ ರುದ್ರಾದಿ-ಜಗತ್ಕಾರಣತ್ವವು ಅವಿದ್ಯಮಾನವಾದದ್ದು. ಅಂತಹ ಅವಿದ್ಯಮಾನವಾದ ರುದ್ರಾದಿ-ಜಗತ್ಕಾರಣತ್ವವು ಶ್ರುತಿಯ ಅರ್ಥವಾಗುವುದಾದರೆ, ರುದ್ರಾದಿಜಗತ್ಕಾರಣತ್ವವು ಘಟದಲ್ಲಿಯೂ ಇಲ್ಲದ ಕಾರಣ ಅಂತಹ ಅವಿದ್ಯಮಾನವಾದ ರುದ್ರಾದಿಜಗತ್ಕಾರಣತ್ವವು ಘಟದಲ್ಲಿ ಇದೆ ಎನ್ನುವುದೂ ಶ್ರುತಿಯ ಅರ್ಥವಾಗಬೇಕಾದ ಅತಿಪ್ರಸಂಗ ಬರುತ್ತದೆ.

**ಸೂ.ರ.:– ततश्च महदादिकर्तृत्वमेव श्रुत्यर्थः । न सूत्रकारोक्तः । तस्य रुद्रादावनुमानेन सिद्धत्वादित्यतिव्याप्तिरेव । अत एव न छल-प्रसङ्गोऽपि । प्रमाणं तु शिवो जगत्कर्ता तदिच्छुत्वे सति तत्कर्तृविष्णु-समानत्वात् । इति मानम् । अस्य च सकललोकसिद्धत्वेन नासिध्यादि-क्षुद्रोपद्रवः ।**

**ಅನು.:–** ಹಾಗಾದರೆ ಮಹದಾದಿಕರ್ತೃತ್ವವೇ (ಮಹತ್ತತ್ವ ಮೊದಲಾದ ಜಗತ್ಕಾರಣತ್ವ ಎನ್ನುವುದೇ) ಶ್ರುತಿಯ ಅರ್ಥವಾಗಿದೆ. ಇಂತಹ ಶ್ರುತಿಗೆ ಅಭಿಪ್ರೇತವಾದ ಮಹದಾದಿಕರ್ತೃತ್ವ ಎನ್ನುವುದು–

ಶಿವಃ ಜಗತ್ಕರ್ತಾ ತದಿಚ್ಛುತ್ವೇ ಸತಿ ತತ್ಕರ್ತೃವಿಷ್ಣುಸಮಾನತ್ವಾತ್

(ಶಿವನು, ಜಗತ್ಕರ್ತೃವಾಗಿದ್ದಾನೆ. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡಬೇಕೆಂಬ ಇಚ್ಛೆ ಹೊಂದಿದ್ದಾನೆ ಮತ್ತು ಜಗತ್ಕರ್ತೃವಾದ ವಿಷ್ಣುವಿಗೆ ಸಮಾನನೂ ಆಗಿದ್ದಾನೆ ಆದ್ದರಿಂದ.)

ಎಂಬ ಅನುಮಾನಪ್ರಮಾಣದಿಂದ ಸಿದ್ಧವಾಗಿದ್ದರಿಂದ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿಯೇ ಬರುತ್ತದೆ. ಶಿವನು ವಿಷ್ಣುಸಮಾನನಾಗಿದ್ದಾನೆ ಎನ್ನುವುದು ಸಕಲಲೋಕಸಿದ್ಧವಾಗಿದೆಯಾದ್ದರಿಂದ ನಮ್ಮ ಈ ಅನುಮಾನಕ್ಕೆ ಅಸಿದ್ಧಿ ಮೊದಲಾದ ಬಾಧಕ ಯಾವುದೂ ಇಲ್ಲ.

**ಸೂ.ರ.:– ततश्च तद्विजिज्ञासस्वेति (तै.उ.३-१-१.) वाक्ये रुद्रादिग्रहणे बाधकाभावात् । रूढिसद्भावाच्च । अतो रुद्र एव विवक्षितो न विष्णुरिति प्राप्ते सूत्रमाह ॥**

**ಅನು.:–** ಆದ್ದರಿಂದ 'ತದ್ವಿಜಿಜ್ಞಾಸಸ್ವ' ಎಂಬ ತೈತ್ತಿರೀಯೋಪನಿಷತ್ತಿನ ವಾಕ್ಯದಲ್ಲಿ

ಜಿಜ್ಞಾಸ್ಯನಾದ ವ್ಯಕ್ತಿ ರುದ್ರದೇವರು ಎಂದು ಹೇಳಿದರೆ ಯಾವ ಬಾಧಕವೂ ಇಲ್ಲವಾದ್ದರಿಂದ, ಮತ್ತು ಬ್ರಹ್ಮಶಬ್ದಕ್ಕೆ ರುದ್ರದೇವರಲ್ಲಿ ರೂಢಿಯೂ ಇರುವುದರಿಂದ ಹಿಂದಿನ ಸೂತ್ರಗಳಲ್ಲಿ ಹೇಳಿದ ಜಿಜ್ಞಾಸ್ಯನಾದ ವ್ಯಕ್ತಿ ಹಾಗೂ ಜಗತ್ಕಾರಣನಾದ ವ್ಯಕ್ತಿ ರುದ್ರದೇವರೇ ಆಗುತ್ತಾರೆ. ಹೊರತು ವಿಷ್ಣು ಅಲ್ಲ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಸಿದ್ಧಾಂತ ಹೇಳಲು ಸೂತ್ರ ಹೊರಡುತ್ತದೆ :-

## ॐ शास्त्रयोनित्वात् ॐ (१.१.३)

**ಸೂ.ರ.:– शिवः जगत्कर्ता तदिच्छुत्वे सति तत्कर्तृविष्णुसमानत्वात्**

**ಅನು.:–** ಇತ್ಯಾದಿ ಅನುಮಾನಗಳಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಕಲ್ಪಿಸಬೇಡಿ. ಯಾಕೆ? ಶಾಸ್ತ್ರಯೋನಿತ್ವಾತ್=ಶಾಸ್ತ್ರ ಎಂದರೆ ಋಗಾದಿಗಳು. ಯೋನಿ ಎಂದರೆ ಜ್ಞಪ್ತಿಕಾರಣ (ಜ್ಞಾನಸಾಧನ). ಋಗಾದಿಶಾಸ್ತ್ರವೇ ಜ್ಞಾನಸಾಧನವಾಗಿ ಉಳ್ಳವನಾದ್ದರಿಂದ (ಶಾಸ್ತ್ರೈಕಸಮಧಿಗಮ್ಯನಾದ್ದರಿಂದ) ಬ್ರಹ್ಮನೇ (ವಿಷ್ಣುವೇ) ಜಗತ್ಕಾರಣನಾಗಿದ್ದಾನೆ.

### ಸಿದ್ಧಾಂತ

**ಸೂ.ರ.:– एवं च विष्णोरेव जगत्कारणत्वं न रुद्रादीनाम् । रुद्रादिबन्धकारणत्वादे रुद्रादावसम्भवात् ।**

**ಅನು.:–** ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಸೂತ್ರದಲ್ಲಿ ಸೂತ್ರಕಾರರು ಹೇಳಿರುವ ಜಗತ್ಕಾರಣತ್ವವನ್ನು ವಿಷ್ಣುವಿಗೇ ಹೇಳಬೇಕೇ ಹೊರತು ರುದ್ರಾದಿಗಳಿಗೆ ಹೇಳಬಾರದು. ಯಾಕೆ? ಸೂತ್ರಕಾರರಿಗೆ ಅಭಿಮತವಾದ ಜಗತ್ಕಾರಣತ್ವ ಎಂದರೆ ರುದ್ರಾದಿಬಂಧಕಾರಣತ್ವ ಎನ್ನುವುದು. ಅಂತಹ ರುದ್ರಾದಿಬಂಧಕಾರಣತ್ವವಾದರೋ ರುದ್ರಾದಿಗಳಿಗೆ ಒಪ್ಪಲು ಸಾಧ್ಯವಿಲ್ಲವಾದ್ದರಿಂದ (ಒಪ್ಪಿದರೆ ಆತ್ಮಾಶ್ರಯದೋಷ ಬರುವುದರಿಂದ) ರುದ್ರಾದಿ-ಬಂಧಕಾರಣತ್ವರೂಪವಾದ ಜಗತ್ಕಾರಣತ್ವವು ವಿಷ್ಣುವಿಗೇ ಉಪಪನ್ನವಾಗುತ್ತದೆ ಹೊರತು ರುದ್ರಾದಿಗಳಿಗೆ ಉಪಪನ್ನವಾಗುವುದಿಲ್ಲ.

**ಸೂ.ರ.:– न च रुद्रादिकारणत्वादि न यतो वेति श्रुत्यर्थ इति वाच्यम् । इमानीत्यनेनोत्पत्त्यादिमत्तया प्रमाणप्रमितसर्वपदार्थग्रहणात् । रुद्रस्य चोत्पत्त्यादिमत्तया प्रमाणप्रमितत्वात् ।**

**ಅನು.:–** ಸೂತ್ರಕಾರೋಕ್ತವಾದ ಜಗತ್ಕಾರಣತ್ವ ಎಂದರೆ ರುದ್ರಾದಿಬಂಧಕಾರಣತ್ವ ಎಂದು ವಿವಕ್ಷಿಸುವುದಾದರೆ ಅಂತಹ ಜಗತ್ಕಾರಣತ್ವ ಎಂಬ ಅರ್ಥವನ್ನು "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ಶ್ರುತಿಯು ತಿಳಿಸುತ್ತಿಲ್ಲವಲ್ಲ? (ಈ ಶ್ರುತಿಯಲ್ಲಿ ರುದ್ರಾದಿಗಳು ಪ್ರಸಕ್ತರಾಗಿಲ್ಲವಲ್ಲ?) ಎಂದು ಶಂಕಿಸಬೇಡಿ.

"ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎನ್ನುವಲ್ಲಿ ಇಮಾನಿ ಎಂಬ ಪದದಿಂದ ಉತ್ಪತ್ತ್ಯಾದಿಗಳುಳ್ಳದ್ದಾಗಿ ಪ್ರಮಾಣಪ್ರಮಿತವಾದ ಎಲ್ಲ ಪದಾರ್ಥಗಳನ್ನೂ ತೆಗೆದುಕೊಳ್ಳಲಾಗುತ್ತದೆ. ಯಾವ ರೀತಿಯಾಗಿ ಘಟಾದಿಗಳು ಉತ್ಪತ್ತ್ಯಾದಿಗಳುಳ್ಳದ್ದಾಗಿ ಪ್ರಮಾಣಪ್ರಮಿತವಾಗಿವೆಯೋ ಅದರಂತೆ ರುದ್ರದೇವರೂ ಸಹ ಉತ್ಪತ್ತ್ಯಾದಿಗಳುಳ್ಳವರಾಗಿ ಪ್ರಮಾಣಪ್ರಮಿತರಾಗಿದ್ದಾರೆ. ಆದ್ದರಿಂದ ಇಮಾನಿ ಎಂಬ ಪದದಿಂದ ಉತ್ಪತ್ತ್ಯಾದಿಗಳುಳ್ಳ ಪದಾರ್ಥಗಳನ್ನು ಸ್ವೀಕರಿಸುವಾಗ ಘಟಾದಿಗಳನ್ನು ಸ್ವೀಕರಿಸುವಂತೆ ರುದ್ರದೇವರನ್ನೂ ಸಹ ಸ್ವೀಕರಿಸಬೇಕು. ಹಾಗಾಗಿ ರುದ್ರದೇವರೂ ಶ್ರುತಿಯಲ್ಲಿ ಪ್ರಸಕ್ತರಾಗಿದ್ದಾರೆ.

**ಅವತಾರಿಕೆ :-** ಸೂತ್ರಕಾರರಿಗೆ ಅಭಿಮತವಾದ ಜಗತ್ಕಾರಣತ್ವ ಎಂದರೆ ರುದ್ರಾದಿ-ಬಂಧಕಾರಣತ್ವ ಎಂದು ವಿವಕ್ಷಿಸಿ ಅದರ ಮೇಲೆ ಬರುವ ಶಂಕೆಗಳನ್ನು ಇಲ್ಲಿಯವರೆಗೆ ಪರಿಹರಿಸಿಕೊಂಡರು. ಈಗ ಸೂತ್ರಕಾರೋಕ್ತವಾದ ಜಗತ್ಕಾರಣತ್ವ ಎಂದರೆ (ರುದ್ರವ್ಯತಿರಿಕ್ತ) ಮಹದಾದಿಕಾರಣತ್ವ ಎಂಬ ಅರ್ಥವನ್ನು ವಿವಕ್ಷಿಸಿ ಆದರಮೇಲೆ ಬರುವ ಆಕ್ಷೇಪಗಳಿಗೆ ಸಮಾಧಾನ ನೀಡುತ್ತಾರೆ :-

**ಸೂ.ರ.:– अस्तु वा महदादिकर्तृत्वमेव यतो वेति श्रुत्यर्थः । तथाऽपि न रुद्रादावतिव्याप्तिः । कारणत्वस्य शास्त्रैकसमधिगम्यत्वेनानुमान-प्रसक्त्यभावात् ।**

**ಅನು.:–** ಅಥವಾ ಜಗತ್ಕಾರಣತ್ವ ಎಂದರೆ (ರುದ್ರವ್ಯತಿರಿಕ್ತ) ಮಹದಾದಿಕಾರಣತ್ವ ಎಂದೇ ವಿವಕ್ಷಿಸಬಹುದಾಗಿದೆ. ಹಾಗಾದರೆ ಅಂತಹ ಮಹದಾದಿಕಾರಣತ್ವವು ರುದ್ರಾದಿಗಳಲ್ಲಿಯೂ ಬರುವುದರಿಂದ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆಯಲ್ಲ? ಎಂದರೆ, ಅತಿವ್ಯಾಪ್ತಿ ಬರುವುದಿಲ್ಲ.

ಯಾಕೆ? ರುದ್ರಾದಿಗಳಲ್ಲಿ ಮಹದಾದಿಕಾರಣತ್ವವು ಇಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ. ಮಹಾದಾದಿಕಾರಣತ್ವವು ರುದ್ರಾದಿಗಳಲ್ಲಿ ಇಲ್ಲ ಎಂದು ಯಾಕೆ ಹೇಳುತ್ತೀರಿ?

ಶಿವಃ, ಜಗತ್ಕರ್ತಾ, ತದಿಚ್ಛುತ್ವೇ ಸತಿ ತತ್ಕರ್ತೃವಿಷ್ಣುಸಮಾನತ್ವಾತ್ ।

ಎಂಬ ಅನುಮಾನ ಮಾಡಿ ಜಗತ್ಕಾರಣತ್ವವು ರುದ್ರದೇವರಲ್ಲಿ ಇದೆ ಎಂದು ಸಾಧಿಸಿದ್ದೇವೆಯಲ್ಲವೇ? ಎಂದರೆ, ಅದು ಸರಿಯಾದದ್ದಲ್ಲ. ಕಾರಣತ್ವ ಎನ್ನುವುದು ಅತೀಂದ್ರಿಯವಾದ ವಸ್ತುವಾಗಿದ್ದರಿಂದ ಅದು ಶಾಸ್ತ್ರದಿಂದ ಮಾತ್ರ ತಿಳಿಯಲು ಯೋಗ್ಯವಾಗಿದೆ. ಅನುಮಾನದಿಂದ ಕಾರಣತ್ವವನ್ನು ತಿಳಿಯಲು ಸಾಧ್ಯವಿಲ್ಲ.

**ಸೂ.ರ.:– वाद्युक्तानुमानस्य प्रतिपक्षासिध्यादिदोषग्रस्तत्वेना-साधकत्वात् ।**

**न च सकलोकसिद्धत्वान्नासिद्धिः । अस्मदादीनामसम्मतत्वेन सकललोकप्रसिद्ध्यभावात् । पामरप्रतीतेश्चातिप्रसङ्गेना साधकत्वात् ।**

**ಅನು.:–** ರುದ್ರದೇವರಲ್ಲಿ ಮಹದಾದಿಕಾರಣತ್ವವನ್ನು ಅನುಮಾನದಿಂದ ತಿಳಿಯಲು ಸಾಧ್ಯವಿಲ್ಲ ಎಂದು ಹೇಗೆ ಹೇಳುತ್ತೀರಿ? ಶಿವಃ ಜಗತ್ಕರ್ತಾ ... ಎಂಬುದಾಗಿ ಅನುಮಾನವನ್ನು ಮಾಡಿ ಸಾಧಿಸಿದ್ದೇವೆಯಲ್ಲ? ಎಂದರೆ, ಈ ಅನುಮಾನವು ನಿರ್ದುಷ್ಟವಾಗಿದ್ದರೆ ಸಾಧಿಸಬಹುದಾಗಿತ್ತು. ಆದರೆ ಈ ಅನುಮಾನವೇ ನಿರ್ದುಷ್ಟವಾಗಿಲ್ಲ. ಯಾಕೆ?

1. ಶಿವಃ ಜಗತ್ಕರ್ತಾ ... ಎಂಬುದಾಗಿ ನೀವು ಅನುಮಾನ ಮಾಡುವುದಾದರೆ 'ಶಿವಃ ನ ಜಗತ್ಕರ್ತಾ ಚೇತನತ್ವಾತ್ ದೇವದತ್ತವತ್' ಎಂಬುದಾಗಿ ನಾವೂ ಸಹ ಪ್ರತಿಪಕ್ಷಾನುಮಾನ ಮಾಡಲು ಸಾಧ್ಯವಿದೆಯಾದ್ದರಿಂದ ನಿಮ್ಮ ಅನುಮಾನವು ಸತ್ಪ್ರತಿಪಕ್ಷವಾಗುತ್ತದೆ.

2. ಮತ್ತು ನಿಮ್ಮ ಅನುಮಾನದಲ್ಲಿ ತತ್ಕರ್ತೃವಿಷ್ಣುಸಮಾನತ್ವಾತ್ ಎಂಬುದಾಗಿ ಹೇತು ಮಾಡಿದ್ದೀರಿ. ಆದರೆ ರುದ್ರದೇವರು ವಿಷ್ಣುವಿಗೆ ಸಮಾನರಾಗಿಲ್ಲ (ವಿಷ್ಣುವಿಗಿಂತಲೂ ಅಧಮರಾಗಿದ್ದಾರೆ). ಆದ್ದರಿಂದ ನಿಮ್ಮ ಅನುಮಾನದಲ್ಲಿ ವಿಷ್ಣುಸಮಾನತ್ವ ಹೇತುವು ಪಕ್ಷವಾದ ರುದ್ರದೇವರಲ್ಲಿ ಬಾರದ ಕಾರಣ ಅಸಿದ್ಧಿ ದೋಷವೂ ಬರುತ್ತದೆ.

ರುದ್ರದೇವರು ವಿಷ್ಣುವಿಗೆ ಸಮಾನರಾಗಿದ್ದಾರೆ ಎನ್ನುವುದು ಎಲ್ಲ ಲೋಕ-ಸಿದ್ಧವಾದ್ದರಿಂದ (ಎಲ್ಲ ಜನರೂ ಒಪ್ಪಿದ್ದಾರಾದ್ದರಿಂದ) ಅಸಿದ್ಧಿದೋಷ ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ರುದ್ರದೇವರು ವಿಷ್ಣುವಿಗೆ ಸಮಾನ ಎನ್ನುವ ವಿಷಯವನ್ನು ನೀವು ಒಪ್ಪಿದರೂ ಸಹ ನಾವು ಅದನ್ನು ಒಪ್ಪಿಲ್ಲವಾದ್ದರಿಂದ ಸಕಲಲೋಕಪ್ರಸಿದ್ಧಿ ಎನ್ನುವುದು ಇಲ್ಲ.

ಅನೇಕಜನ ಪಾಮರರು ಇದನ್ನು ಒಪ್ಪಿದ್ದಾರಲ್ಲ? ಎಂದರೆ, ಆ ಪಾಮರರು ನಾವು ನೀವು ಒಪ್ಪದ ಅನೇಕ ವಿಷಯಗಳನ್ನೂ ಅಂಗೀಕರಿಸುತ್ತಾರಾದ್ದರಿಂದ ಅವುಗಳನ್ನೆಲ್ಲ ಒಪ್ಪಿದರೆ ಅತಿಪ್ರಸಂಗ ಬರುತ್ತದೆ. ಹೀಗಾಗಿ ಪಾಮರರ ಪ್ರತೀತಿ ಎನ್ನುವುದು ಸಾಧಕವಾದದ್ದಲ್ಲ.

ಆದ್ದರಿಂದ ವಿಷ್ಣುವಿಗೆ ಸಮಾನರಾಗಿದ್ದಾರೆ ರುದ್ರದೇವರು ಎನ್ನುವುದು ಸಕಲಲೋಕಪ್ರಸಿದ್ಧ-ವಾದದ್ದಲ್ಲ. ಹಾಗಾಗಿ ಅನುಮಾನಕ್ಕೆ ಅಸಿದ್ಧಿದೋಷ ಬಂದೇ ಬರುತ್ತದೆ.

ಈ ರೀತಿಯಾಗಿ ಪ್ರತಿಪಕ್ಷ-ಅಸಿದ್ಧಿದೋಷಗಳು ಬರುವುದರಿಂದ ಈ ಅನುಮಾನದಿಂದ ರುದ್ರದೇವರಿಗೆ ಜಗತ್ಕಾರಣತ್ವವನ್ನು ಸಾಧಿಸಲು ಬರುವುದಿಲ್ಲ.

**ಸೂ.ರ.:– तथा च शिवादिग्रहणे श्रुत्युक्तलक्षणासम्भवरूपबाधक-सद्भावात् । तद्विजिज्ञासस्वेति विष्णुरेव विवक्षित इति स एव जिज्ञास्य इति सिद्धम् ।**

**ಅನು.:–** ಹಾಗಾದರೆ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದಲ್ಲಿ ಜಿಜ್ಞಾಸ್ಯನಾದ ವ್ಯಕ್ತಿ ಯಾರು? ಎಂಬ ವಿಚಾರದಲ್ಲಿ ರುದ್ರಾದಿಗಳೇ ಜಿಜ್ಞಾಸ್ಯರಾಗಿದ್ದಾರೆ ಎಂದು ಹೇಳಿದರೆ, ಜನ್ಮಾದ್ಯಸ್ಯ ಯತಃ ಎಂಬ ಮುಂದಿನ ಸೂತ್ರದಲ್ಲಿ ಹೇಳುವ ಜಗತ್ಕಾರಣತ್ವವನ್ನೂ ಜಿಜ್ಞಾಸ್ಯರಾದ ವ್ಯಕ್ತಿಗಳಿಗೇ ಹೇಳಬೇಕಾಗಿದೆ. ಈ ಹಿಂದೆ ನಿರೂಪಿಸಿದಂತೆ ಜಗತ್ಕಾರಣತ್ವವು ರುದ್ರಾದಿಗಳಿಗೆ ಅನುಪಪನ್ನವಾದ್ದರಿಂದ, "ಜಿಜ್ಞಾಸ್ಯನಾದ ವ್ಯಕ್ತಿ ರುದ್ರಾದಿಗಳು" ಎಂದು ಹೇಳಿದರೆ ಯತೋ ವಾ ... ಎಂಬ ಶ್ರುತ್ಯುಕ್ತವಾದ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವ ಎಂಬ ಬಾಧಕ ಇರುವುದರಿಂದ, 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯಲ್ಲಿ ಜಿಜ್ಞಾಸ್ಯನಾದ ವ್ಯಕ್ತಿ ವಿಷ್ಣುವೇ ವಿವಕ್ಷಿತನಾಗುವ ಕಾರಣ ಪ್ರಥಮಸೂತ್ರದಲ್ಲಿ ಜಿಜ್ಞಾಸ್ಯನಾದ ವ್ಯಕ್ತಿ ವಿಷ್ಣುವೇ ಆಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು.

ಅಧಿಕರಣ – 4

# ಸಮನ್ವಯಾಧಿಕರಣ

## ಸಂಗತಿ

**ಸೂ.ರ.:– अत्र विष्णोरेव जगत्कारणत्वेन शास्त्रगम्यत्वं नेतरेषामपीति समर्थ्यते ।**

**ಅನು.:–** ಜಗತ್ಕಾರಣತ್ವೇನ (ಜಗತ್ಕಾರಣ ಎಂಬುದಾಗಿ) ಶಾಸ್ತ್ರಗಮ್ಯನಾದ ವ್ಯಕ್ತಿ ವಿಷ್ಣುವೇ. ಹೊರತು ಇತರರಲ್ಲ ಎಂಬುದಾಗಿ ಈ ಅಧಿಕರಣದಲ್ಲಿ ಸಮರ್ಥಿಸುತ್ತಾರೆ.

## ಪೂರ್ವಪಕ್ಷ

**ಸೂ.ರ.:– ननु विष्णोरिवान्येषामपि जगत्कारणत्वेन शास्त्रयोनित्वमङ्गीकार्यम् । वेदव्याख्यानरूपपञ्चरात्राद्यागमाद्विष्णौ तात्पर्यावधारणवत्सर्वज्ञशिवादिप्रणीतवेदव्याख्यानरूपपाशुपताद्यागमाच्छिवादिष्वपि कारणत्वाभिधायकवेदैकदेशतात्पर्यावधारणात् ।**

**ಅನು.:–** ಜಗತ್ಕಾರಣತ್ವೇನ ಶಾಸ್ತ್ರಗಮ್ಯತ್ವವನ್ನು ವಿಷ್ಣುವಿಗೆ ಹೇಗೆ ಅಂಗೀಕರಿಸುತ್ತೀರೋ ಅದರಂತೆ ಇತರರಿಗೂ ಸಹ ಅಂತಹ ಶಾಸ್ತ್ರಗಮ್ಯತ್ವವನ್ನು ಅಂಗೀಕರಿಸಬೇಕು. ಯಾಕೆ?

ಜಗತ್ಕಾರಣತ್ವವನ್ನು ತಿಳಿಸುವ ವೇದಗಳಿಗೆ ವಿಷ್ಣುವಿನಲ್ಲಿ ತಾತ್ಪರ್ಯವಿದೆ ಎಂಬುದನ್ನು ವೇದವ್ಯಾಖ್ಯಾನರೂಪವಾದ ಪಂಚರಾತ್ರಾದಿ ಆಗಮಗಳಿಂದ ತಾತ್ಪರ್ಯನಿಶ್ಚಯ ಮಾಡುವಂತೆ, ಅಂತಹ ಜಗತ್ಕಾರಣತ್ವವನ್ನು ತಿಳಿಸುವ ವೇದದ ಏಕದೇಶಕ್ಕೆ ಶಿವಾದಿಗಳಲ್ಲಿಯೂ ತಾತ್ಪರ್ಯವಿದೆ ಎಂಬುದನ್ನು ಸರ್ವಜ್ಞಶಿವಾದಿಗಳಿಂದ ವಿರಚಿತವಾದ, ವೇದವ್ಯಾಖ್ಯಾನರೂಪವಾದ ಪಾಶುಪತಾದಿ ಆಗಮಗಳಿಂದ ತಾತ್ಪರ್ಯನಿಶ್ಚಯ ಮಾಡಬಹುದಾಗಿದೆ.

**ಸೂ.ರ.:– सर्ववेदव्याख्यानप्रामाण्यसम्भवे पञ्चरात्रादिप्रामाण्यमङ्गीकृत्य शैवाद्यागमप्रामाण्यानङ्गीकारे कारणाभावात् ।**

**ಅನು.**:– ವೇದವ್ಯಾಖ್ಯಾನವಾದ ಎಲ್ಲದಕ್ಕೂ ಪ್ರಾಮಾಣ್ಯವನ್ನು ಒಪ್ಪಲು ಬರುತ್ತಿರು-ವಾಗ, ವೇದವ್ಯಾಖ್ಯಾನವಾದ ಪಂಚರಾತ್ರಾದಿಗಳಿಗೆ ಮಾತ್ರ ಪ್ರಾಮಾಣ್ಯವನ್ನು ಅಂಗೀಕರಿಸಿ, ಅದೇ ವೇದವ್ಯಾಖ್ಯಾನವಾದ ಶೈವಾದ್ಯಾಗಮಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸದೇ ಇರುವುದಕ್ಕೆ ವಿಶೇಷಕಾರಣ ಯಾವುದೂ ಇಲ್ಲ.

**ಸೂ.ರ.:– भागविशेषे विष्णुप्रतिपादकत्वस्य स्पष्टोपलम्भवद्भागविशेषे शिवादिपरत्वस्य स्पष्टमुपलम्भेन प्रतीतिसध्रीचीनत्वस्योभयत्र साम्यात् ।**

**ಅನು.**:– ಜಗತ್ಕಾರಣತ್ವ ಪ್ರತಿಪಾದಕವಾದ ವೇದದಲ್ಲಿ ವಿಷ್ಣುಪರತ್ವವು ಸ್ಪಷ್ಟವಾಗಿ ತೋರುತ್ತದೆಯಾದ್ದರಿಂದ ವಿಷ್ಣುಪಕ್ಷದಲ್ಲಿ ಪ್ರತೀತಿಸಧ್ರೀಚೀನತ್ವ ಎನ್ನುವುದು ಇದೆ. ಹೀಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದೇ ಸೂಕ್ತ ಅಲ್ಲವೇ? ಎಂದು ಶಂಕಿಸಿದರೆ ಅದು ಸರಿಯಲ್ಲ. ಜಗತ್ಕಾರಣತ್ವವನ್ನು ತಿಳಿಸುವ ವೇದದ ಕೆಲವು ಭಾಗಗಳಲ್ಲಿ ವಿಷ್ಣು-ಪ್ರತಿಪಾದಕತ್ವವು ಸ್ಪಷ್ಟವಾಗಿ ತೋರುವಂತೆ, ಅದೇ ಜಗತ್ಕಾರಣತ್ವವನ್ನು ತಿಳಿಸುವ ವೇದದ ಇನ್ನು ಕೆಲವು ಭಾಗಗಳಲ್ಲಿ ಶಿವಾದಿಪರತ್ವವೂ ಸ್ಪಷ್ಟವಾಗಿ ತೋರುತ್ತಿದೆಯಾದ್ದರಿಂದ ಪ್ರತೀತಿಸಧ್ರೀಚೀನತ್ವ (ಪ್ರಾಮಾಣಿಕತ್ವ) ಎನ್ನುವುದು ವಿಷ್ಣು-ಶಿವ ಎರಡು ಪಕ್ಷಗಳಲ್ಲಿಯೂ ಸಮಾನವಾಗಿದೆ. ಹಾಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವಂತೆ ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವುದೂ ಸೂಕ್ತವೇ ಆಗುತ್ತದೆ.

**ಸೂ.ರ.:– न च बहूनां कारणत्वासम्भवः । गुरुतरभारोद्धरणादौ प्रत्येकमसमर्थानां बहूनां कर्तृत्वस्य सर्वानुभवसिद्धत्वात् ।**

**ಅನು.**:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವಂತೆ ಶಿವಾದಿಗಳಿಗೂ ಜಗತ್ಕಾರಣತ್ವ-ವನ್ನು ಹೇಳಬಹುದು ಎನ್ನುವುದು ಸರಿಯಲ್ಲ. ಯಾಕೆಂದರೆ - ಹಾಗೆ ಹೇಳಿದರೆ ಕಾರಣತ್ವವನ್ನು ಅನೇಕಜನರಿಗೆ ಹೇಳಿದಂತಾಗುತ್ತದೆ. ಆದರೆ ಕಾರಣತ್ವವು ಅನೇಕಜನರಿಗೆ ಅಸಂಭಾವಿತವಾಗಿದೆ. ಆದ್ದರಿಂದ ಜಗತ್ಕಾರಣತ್ವವನ್ನು ವಿಷ್ಣು ಒಬ್ಬನಿಗೆ ಮಾತ್ರ ಹೇಳಬೇಕು ಎಂದರೆ, ಅದು ಸರಿಯಲ್ಲ.

ಅನೇಕ ಜನರಿಗೆ ಕಾರಣತ್ವವು ಜಗತ್ತಿನಲ್ಲಿ ಕಂಡಿದೆ. ಬಹಳ ಭಾರವಾದ ವಸ್ತುಗಳನ್ನು ಎತ್ತುವಾಗ ಒಬ್ಬನಿಗೇ ಕರ್ತೃತ್ವವು ಅಸಾಧ್ಯವಾದ್ದರಿಂದ ಬಹಳಜನರು ಸೇರಿ ಎತ್ತುತ್ತಾರೆ. ಅಲ್ಲಿ ಬಹಳ ಜನರಿಗೆ ಕರ್ತೃತ್ವವು ಅಂಗೀಕೃತವಾಗಿದೆ. ಅದರಂತೆ ಜಗತ್ತಿಗೆ ವಿಷ್ಣು-ಶಿವಾದಿಗಳು ಹೀಗೆ ಅನೇಕ ಜನರು ಕಾರಣರಾಗಬಹುದು.

**ಸೂ.ರ.:– न च सर्वे वेदा इत्यादिश्रुतिविरोधः । विष्णुप्रसिद्धशब्द-लिङ्गाद्युपेताः सर्वे वेदा (कठ.२-१५) इत्यर्थत्वात्तस्याः । न चैको नारायण (महोपनिषत्) इत्यादिरुद्रादिकारणतानिषेधकवाक्यविरोधः । तेषां विष्णुकारणताप्राशस्त्यपरत्वेनोदितानुदितहोमनिन्दावाक्यवच्छिवादि-कारणतानिषेधे तात्पर्याभावात् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವ ಹೇಳುವಂತೆ ಶಿವಾದಿಗಳಿಗೂ ಜಗತ್ಕಾರಣತ್ವವನ್ನು ಹೇಳುವುದಾದರೆ ಶ್ರುತಿವಿರೋಧ ಬರುತ್ತದೆ. "ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ" ಎಂಬುದಾಗಿ ಶ್ರುತಿಯು ಸೃಷ್ಟಿಯ ಆದಿಕಾಲದಲ್ಲಿ ನಾರಾಯಣ ಒಬ್ಬನೇ ಇದ್ದ. ಬೇರೆ ಯಾರೂ ಇರಲಿಲ್ಲ ಎಂದು ತಿಳಿಸುತ್ತದೆ. ಅರ್ಥಾತ್ ಜಗತ್ಕಾರಣತ್ವವು ನಾರಾಯಣನಿಗೆ ಮಾತ್ರ ಇದೆ. ಬೇರೆ ಯಾರಿಗೂ ಇಲ್ಲ ಎಂಬುದಾಗಿ ನಿಷೇಧಿಸುತ್ತಿದೆ. ಪ್ರಕೃತ ನೀವು ಜಗತ್ಕಾರಣತ್ವವನ್ನು ಶಿವಾದಿಗಳಿಗೂ ಹೇಳುವುದಾದರೆ ಈ ಶ್ರುತಿಯ ವಿರೋಧ ಬರುತ್ತದೆ ಎಂದು ಶಂಕೆ ಬಂದರೆ ಅದು ಸರಿಯಲ್ಲ.

'ಏಕೋ ನಾರಾಯಣ ಆಸೀತ್' ಎಂಬ ವಾಕ್ಯವು ವಿಷ್ಣುವಿನ ಜಗತ್ಕಾರಣತ್ವಕ್ಕೆ ಪ್ರಾಶಸ್ತ್ಯವನ್ನು ಹೇಳಲು ಹೊರಟಿದೆಯೇ ಹೊರತು ಶಿವಾದಿಗಳಿಗೆ ಜಗತ್ಕಾರಣತ್ವವನ್ನು ನಿಷೇಧ ಮಾಡುವುದರಲ್ಲಿ ಅದಕ್ಕೆ ತಾತ್ಪರ್ಯ ಇಲ್ಲ. ಆದ್ದರಿಂದ ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳಿದರೆ ಈ ಶ್ರುತಿಯ ವಿರೋಧ ಬರುವುದಿಲ್ಲ.

**ಸೂ.ರ.:– न चोपक्रमादिविरोधः । उपक्रमादितो व्याख्यानस्य सर्वज्ञप्रणीतत्वेन बलवत्वात् ।**

**ಅನು.:–** ಹಾಗಾದರೆ ಉಪಕ್ರಮಾದಿವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ಕಾರಣ ಉಪಕ್ರಮಾದಿಗಳಿಗಿಂತಲೂ ವ್ಯಾಖ್ಯಾನವು ಸರ್ವಜ್ಞಪ್ರಣೀತ-ವಾದ್ದರಿಂದ ಪ್ರಬಲವಾಗಿದೆ.

**ಸೂ.ರ.:– तस्मात् विष्णुवच्छिवादीनामपि कारणत्वेन शास्त्रयोनित्वात् अतिव्याप्तं जगत्कारणत्वमिति प्राप्ते सूत्रमाह ॥**

**ಅನು.:–** ಆದ್ದರಿಂದ ಜಗತ್ಕಾರಣ ಎಂಬುದಾಗಿ ವಿಷ್ಣು ಹೇಗೆ ಶಾಸ್ತ್ರಯೋನಿ (ಶಾಸ್ತ್ರಗಮ್ಯ) ಆಗಿದ್ದಾನೆಯೋ ಹಾಗೆ ರುದ್ರಾದಿಗಳೂ ಸಹ ಜಗತ್ಕಾರಣರು ಎಂಬುದಾಗಿ ಶಾಸ್ತ್ರಯೋನಿಗಳಾಗಿದ್ದರಿಂದ (ಶಾಸ್ತ್ರಗಮ್ಯರಾಗಿದ್ದರಿಂದ) ದ್ವಿತೀಯಸೂತ್ರದಲ್ಲಿ ಹೇಳಿದ

ಜಗತ್ಕಾರಣತ್ವ ಲಕ್ಷಣವು ರುದ್ರಾದಿಗಳಲ್ಲಿ ಅತಿವ್ಯಾಪ್ತವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ ಅದನ್ನು ನಿರಾಕರಿಸಿ ಸಿದ್ಧಾಂತವನ್ನು ಹೇಳಲು ಸೂತ್ರ ಹೊರಡುತ್ತದೆ :-

**ॐ तत्तु समन्वयात् ॐ (१.१.४)**

**ಸೂತ್ರಾರ್ಥ** :- ಏವ (ಅವಧಾರಣ) ಎಂಬ ಅರ್ಥದಲ್ಲಿ ತು ಶಬ್ದವನ್ನು ಪ್ರಯೋಗಿಸಿರುವುದರಿಂದ ತತ್ತು = ತದೇವ ವಿಷ್ಣು ಎಂಬ ಬ್ರಹ್ಮನು ಮಾತ್ರ ಸಂ = ಮುಖ್ಯವಾಗಿ ಶಾಸ್ತ್ರಯೋನಿ ಆಗಿದ್ದಾನೆ. ಹೊರತು ರುದ್ರಾದಿಗಳು ಶಾಸ್ತ್ರಯೋನಿ ಆಗಿಲ್ಲ. ಯಾಕೆ? ಸಮನ್ವಯಾತ್ = ವಿಷ್ಣುವಿನ ವಿಷಯದಲ್ಲಿ ಮಾತ್ರ ಸಮೀಚೀನವಾದ ಉಪಕ್ರಮಾದಿ ತಾತ್ಪರ್ಯಲಿಂಗ ಇರುವುದರಿಂದ.

ಸಿದ್ಧಾಂತ

**ಸೂ.ರ.:– एवं च शिवादीनां प्रमाणाभावेन जगत्कारणत्वा-भावान्नातिव्याप्तिः ।**

**ಅನು.:–** ದ್ವಿತೀಯಸೂತ್ರದಲ್ಲಿ ಹೇಳಿದ ಜಗಜ್ಜನ್ಮಾದಿಕಾರಣತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆಯೇ ಹೊರತು ಶಿವಾದಿಗಳಿಗೆ ಕೂಡುವುದಿಲ್ಲ. ಯಾಕೆ? ಶಿವಾದಿಗಳು ಜಗತ್ಕಾರಣರಾಗಿದ್ದಾರೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಒಪ್ಪಲು ಬರುವುದಿಲ್ಲ. ಶಿವಾದಿಗಳಲ್ಲಿ ಜಗತ್ಕಾರಣತ್ವ ಇಲ್ಲದ ಕಾರಣ ಜಗತ್ಕಾರಣತ್ವ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

**ಸೂ.ರ.:– न च शैवाद्यागमनिर्णीततात्पर्यकवेदस्तत्र मानम् । उपक्रमादिविरुद्धस्य शिवादौ वेदे तात्पर्यग्राहकस्य शैवाद्यागमस्या मानत्वात् ।**

**ಅನು.:–** ಶಿವಾದಿಗಳು ಜಗತ್ಕಾರಣರಾಗಿದ್ದಾರೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? ಶೈವಾದ್ಯಾಗಮಗಳಿಂದ ನಿರ್ಣೀತವಾದ ತಾತ್ಪರ್ಯ ಉಳ್ಳ ವೇದವೇ ಪ್ರಮಾಣವಾಗುತ್ತದೆ ! ಎಂದರೆ, ಅದು ಸರಿಯಲ್ಲ. ಶಿವಾದಿಗಳ ವಿಷಯದಲ್ಲಿ ವೇದಕ್ಕೆ ತಾತ್ಪರ್ಯವನ್ನು ಗ್ರಹಣ ಮಾಡುವ ಆ ಶೈವಾದ್ಯಾಗಮಗಳು ಉಪಕ್ರಮಾದಿ ವಿರುದ್ಧವಾದ್ದರಿಂದ ಪ್ರಮಾಣವಾಗಲು ಸಾಧ್ಯವಿಲ್ಲ.

**ಸೂ.ರ.:– न च वैपरीत्यम् । तेषामन्तरङ्गत्वेन बलवत्वात् ।**

**ಅನು.:–** ಉಪಕ್ರಮಾದಿಗಳಿಗೆ ವಿರುದ್ಧವಾದ್ದರಿಂದ ಶೈವಾದ್ಯಾಗಮಗಳು ಅಪ್ರಮಾಣ ಎಂದೇ ಏಕೆ ಹೇಳಬೇಕು? ಶೈವಾದ್ಯಾಗಮಗಳಿಗೆ ವಿರುದ್ಧವಾದ್ದರಿಂದ ಉಪಕ್ರಮಾದಿಗಳೇ ಅಪ್ರಮಾಣ ಎಂದು ಹೇಳಬಹುದಲ್ಲವೇ? ಎಂದರೆ, ಹಾಗೆ ಶಂಕಿಸಲು ಬರುವುದಿಲ್ಲ. ಉಪಕ್ರಮಾದಿಗಳು ಅಂತರಂಗಸಾಧನವಾದ್ದರಿಂದ ಶೈವಾದ್ಯಾಗಮಗಳಿಗಿಂತಲೂ ಪ್ರಬಲವಾಗಿವೆ. ಹೀಗಾಗಿ ಉಪಕ್ರಮಾದಿಗಳಿಗೆ ಅಪ್ರಾಮಾಣ್ಯವನ್ನು ಶಂಕಿಸಲು ಬರುವುದಿಲ್ಲ.

**ಸೂ.ರ.:– शैवाद्यागमस्य तात्पर्यावधारणाय चोपक्रमादीनां अनुसर्तव्यत्वेन उपजीव्यत्वाच्च ।**

**ಅನು.:–** ಅಷ್ಟೇ ಅಲ್ಲದೇ, ಶೈವಾದ್ಯಾಗಮಗಳ ಶಿವಾದಿಗಳು ವಿಷಯದಲ್ಲಿ ತಾತ್ಪರ್ಯನಿರ್ಣಯ ಮಾಡಬೇಕಾದರೆ ಈ ಉಪಕ್ರಮಾದಿಗಳನ್ನೇ ಅನುಸರಿಸಬೇಕು. ಹೀಗಾಗಿ ಉಪಕ್ರಮಾದಿಗಳನ್ನು ಅನುಸರಿಸಿ ತಾತ್ಪರ್ಯನಿರ್ಣಯ ಮಾಡಬೇಕಾಗಿರು- ವುದರಿಂದ ಶೈವಾದ್ಯಾಗಮಗಳಿಗೆ ಉಪಕ್ರಮಾದಿಗಳು ಉಪಜೀವ್ಯವಾಗಿವೆ. ಉಪಜೀವ್ಯ- ವಾಗಿದ್ದರಿಂದ ಪ್ರಬಲವೂ ಆಗಿವೆ. ಅಂತಹ ಉಪಜೀವ್ಯತ್ವೇನ ಪ್ರಬಲವಾಗಿರುವ ಉಪಕ್ರಮಾದಿಗಳಿಗೆ ಅಪ್ರಾಮಾಣ್ಯವನ್ನು ಶಂಕಿಸಲು ಬರುವುದಿಲ್ಲ.

**ಸೂ.ರ.:– न च प्रतीतिसध्रीचीनत्वेन आगमस्य प्रामाण्यम् । उपक्रमाद्यनुसन्धानपूर्वकप्रतीतिसध्रीचीनत्वस्याभावात् । आपाततः प्रतीतिसध्रीचीनत्वस्य अप्रयोजकत्वात् ।**

**ಅನು.:–** ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ಕೆಲವು ವೇದಭಾಗವು ಸ್ಪಷ್ಟವಾಗಿ ಉಪಲಬ್ಧವಾಗುವಂತೆ ಶಿವಾದಿಗಳ ಜಗತ್ಕಾರಣತ್ವ ವಿಷಯದಲ್ಲಿಯೂ ಕೆಲವು ವೇದಭಾಗವು ಸ್ಪಷ್ಟವಾಗಿ ಉಪಲಬ್ಧವಾಗುವುದರಿಂದ ಪ್ರತೀತಿಸಧ್ರೀಚೀನತ್ವವು ಇದೆ. ಹೀಗೆ ಪ್ರತೀತಿ- ಸಧ್ರೀಚೀನತ್ವವು ಇರುವುದರಿಂದ ಶೈವಾದ್ಯಾಗಮಗಳಿಗೆ ಪ್ರಾಮಾಣ್ಯ ಹೇಳಬಹುದಲ್ಲವೇ? ಎಂದು ಶಂಕಿಸುವುದು ಸರಿಯಲ್ಲ.

ಕೇವಲ ಪ್ರತೀತಿಸಧ್ರೀಚೀನತ್ವವು ಸಾಧಕವಾಗುವುದಿಲ್ಲ. ಕಿಂತು ಉಪಕ್ರಮಾದ್ಯನು- ಸಂಧಾನಪೂರ್ವಕವಾದ ಪ್ರತೀತಿಸಧ್ರೀಚೀನತ್ವವು ಸಾಧಕವಾಗುತ್ತದೆ. ಅಂತಹ ಉಪಕ್ರಮಾದ್ಯನುಸಂಧಾನಪೂರ್ವಕವಾದ ಪ್ರತೀತಿಸಧ್ರೀಚೀನತ್ವವು ಶಿವಾದಿಗಳ ಜಗತ್ಕಾರಣತ್ವ ವಿಷಯದಲ್ಲಿ ಇಲ್ಲವಾದ್ದರಿಂದ ಶೈವಾದ್ಯಾಗಮಗಳು ಪ್ರಮಾಣವಾಗುವುದಿಲ್ಲ.

ಶಿವಾದಿಗಳ ಜಗತ್ಕಾರಣತ್ವ ವಿಷಯದಲ್ಲಿ ಯಥಾರ್ಥವಾದ ಉಪಕ್ರಮಾದ್ಯನು- ಸಂಧಾನಪೂರ್ವಕ ಪ್ರತೀತಿಸಧ್ರೀಚೀನತ್ವವು ಇಲ್ಲದಿದ್ದರೂ ಸಹ ಆಪಾತತಃ ತೋರುವ

ಉಪಕ್ರಮಾದ್ಯನುಸಂಧಾನಪೂರ್ವಕ ಪ್ರತೀತಿಸಧ್ರೀಚೀನತ್ವವು ಇದೆ. ಆದ್ದರಿಂದ ಶೈವಾದ್ಯಾಗಮಗಳು ಪ್ರಮಾಣವಾಗಬಹುದು ಎಂದು ಶಂಕಿಸುವುದೂ ಸೂಕ್ತವಾದುದಲ್ಲ.

ಯಥಾರ್ಥವಾದ ಉಪಕ್ರಮಾದ್ಯನುಸಂಧಾನಪೂರ್ವಕ ಪ್ರತೀತಿಸಧ್ರೀಚೀನತ್ವವು ಸಾಧಕ(ಪ್ರಯೋಜಕ)ವಾಗುತ್ತದೆಯೇ ಹೊರತು ಆಪಾತತಃ ತೋರುವ ಉಪಕ್ರಮಾದ್ಯನುಸಂಧಾನಪೂರ್ವಕ ಪ್ರತೀತಿಸಧ್ರೀಚೀನತ್ವವು ಸಾಧಕ(ಪ್ರಯೋಜಕ)-ವಾಗುವುದಿಲ್ಲ, ಅದು ಅಪ್ರಯೋಜಕ.

**ಸೂ.ರ.:– उदितहोमादिनिन्दाया उदितहोमादेर्विहितत्वेन निन्दायां तात्पर्याभावेऽपि शिवादिकारणत्वस्याप्रामाणिकत्वेन तन्निषेधकवाक्यानां स्वार्थे तात्पर्यसद्भावाच्च ।**

**ಅನು.:–** ಮತ್ತು ಶಿವಾದಿಗಳ ಜಗತ್ಕಾರಣತ್ವವು 'ಏಕೋ ನಾರಾಯಣ ಆಸೀತ್' ಇತ್ಯಾದಿ ವಾಕ್ಯಗಳಿಂದ ನಿಷಿದ್ಧವೂ ಆಗಿದೆ.

ಉದಿತ-ಅನುದಿತಹೋಮನಿಂದಾವಾಕ್ಯದಂತೆ 'ಏಕೋ ನಾರಾಯಣ ಆಸೀತ್' ಇತ್ಯಾದಿ ವಾಕ್ಯಗಳಿಗೆ ಶಿವಾದಿಗಳ ಜಗತ್ಕಾರಣತ್ವವನ್ನು ನಿಷೇಧಿಸುವುದರಲ್ಲಿ ತಾತ್ಪರ್ಯ ಇಲ್ಲ ಎಂಬುದಾಗಿ ಇದಕ್ಕೆ ಉತ್ತರ ಹೇಳಿದ್ದೇವೆಯಲ್ಲ? ಎಂದರೆ, ಈ ಉತ್ತರವು ಸಮಂಜಸವಲ್ಲ. ಏಕೆಂದರೆ ಉದಿತಹೋಮಾದಿಗಳು ವೇದವಿಹಿತವಾದದ್ದರಿಂದ ಉದಿತಹೋಮಾದಿಗಳ ನಿಂದಾವಾಕ್ಯಗಳಿಗೆ ನಿಂದೆಯಲ್ಲಿ ತಾತ್ಪರ್ಯ ಇಲ್ಲದಿದ್ದರೂ ಸಹ, ಶಿವಾದಿಗಳ ಜಗತ್ಕಾರಣ-ತ್ವವು ಅಪ್ರಾಮಾಣಿಕವಾದ್ದರಿಂದ 'ಏಕೋ ನಾರಾಯಣ ಆಸೀತ್' ಇತ್ಯಾದಿ ವಾಕ್ಯಗಳಿಗೆ ಶಿವಾದಿಗಳ ಜಗತ್ಕಾರಣತ್ವವನ್ನು ನಿಷೇಧ ಮಾಡುವುದರಲ್ಲಿ ತಾತ್ಪರ್ಯ ಇದ್ದೇ ಇದೆ.

**ಸೂ.ರ.:– तस्मादनतिव्याप्तं जन्मादिकारणत्वं ब्रह्मलक्षणमिति सिद्धम् ।**

**ಅನು.:–** ಆದ್ದರಿಂದ 'ಏಕೋ ನಾರಾಯಣ ಆಸೀತ್' ಇತ್ಯಾದಿ ವಾಕ್ಯಗಳಿಂದ ಶಿವಾದಿಗಳ ಜಗತ್ಕಾರಣತ್ವವು ನಿಷಿದ್ಧವೂ ಆದ್ದರಿಂದ ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವುದು ಸೂಕ್ತವಲ್ಲ. ಶಿವಾದಿಗಳಿಗೆ ಜಗತ್ಕಾರಣತ್ವವು ಕೂಡದ ಕಾರಣ ದ್ವಿತೀಯ-ಸೂತ್ರದಲ್ಲಿ ಹೇಳಿದ ಜಗತ್ಕಾರಣತ್ವ ಲಕ್ಷಣಕ್ಕೆ ಶಿವಾದಿಗಳಲ್ಲಿ ಅತಿವ್ಯಾಪ್ತಿ ಬರುವುದೇ ಇಲ್ಲ. ಹೀಗಾಗಿ ಜಗಜ್ಜನ್ಮಾದಿಕಾರಣತ್ವ ಎನ್ನುವುದು ವಿಷ್ಣುವಿನ (ಬ್ರಹ್ಮನ) ಲಕ್ಷಣವೇ ಆಗಿದೆ ಎಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

ಸಮನ್ವಯಾಧಿಕರಣವು ಸಮಾಪ್ತವಾಯಿತು.

ಅಧಿಕರಣ – 5

# ಈಕ್ಷತ್ಯಧಿಕರಣ

## ಸಂಗತಿ

**ಸೂ.ರ.:– अत्र संशब्दोक्तं वाच्यत्वं कात्स्न्यं चाक्षिप्य समाधीयते ।**

**ಅನು.:–** ಐದನೆಯ ಈ ಈಕ್ಷತ್ಯಧಿಕರಣದಲ್ಲಿ, ಹಿಂದಿನ ಸೂತ್ರದ ಸಮನ್ವಯಾತ್ ಎಂಬ ಪದದಲ್ಲಿರುವ ಸಮ್ ಉಪಸರ್ಗದಿಂದ ಸೂಚಿತವಾದ ವಾಚ್ಯತ್ವ ಹಾಗೂ ಕಾತ್ಸ್ನ್ಯ ಎರಡನ್ನೂ ಆಕ್ಷೇಪಿಸಿಕೊಂಡು ಅವುಗಳಿಗೆ ಸಮರ್ಪಕ ಉತ್ತರ ನೀಡುವ ಮೂಲಕ ಬ್ರಹ್ಮನಿಗೆ ವಾಚ್ಯತ್ವವನ್ನು ಸಮರ್ಥಿಸುತ್ತಾರೆ.

## ಪೂರ್ವಪಕ್ಷ

**ಸೂ.ರ.:– ननु पूर्वसूत्रे तच्छब्दोक्तं ब्रह्म शब्दगोचरं शास्त्रोक्तकारणं न शास्त्रमुख्यार्थश्च न । कुतः । अवाच्यत्वात् । मुख्यार्थत्वस्य च यतो वाचो निवर्तन्त इत्यादि (तै.उ.२-४-१) श्रुतिसिद्धत्वात् । न ह्यवाच्यस्य मुख्यार्थता सम्भवतीति न शास्त्रोक्तं जगत्कारणत्वं तस्येति प्राप्ते सूत्रमाह ॥**

**ಅನು.:–** ತತ್ತು ಸಮನ್ವಯಾತ್ ಎಂಬ ಹಿಂದಿನ ಸೂತ್ರದಲ್ಲಿ ತತ್ ಶಬ್ದದಿಂದ ಕರೆಸಿಕೊಂಡ ಬ್ರಹ್ಮನು ಶಬ್ದಗೋಚರನಾಗಿಲ್ಲ ಅಂತೆಯೇ ಶಾಸ್ತ್ರೋಕ್ತಜಗತ್ಕಾರಣನಾಗಿಲ್ಲ ಮತ್ತು ಶಾಸ್ತ್ರಕ್ಕೆ ಮುಖ್ಯಾರ್ಥನಾಗಿಲ್ಲ. ಯಾಕೆ? ಬ್ರಹ್ಮನು ಅವಾಚ್ಯನಾಗಿದ್ದರಿಂದ.

ಬ್ರಹ್ಮನು ಅವಾಚ್ಯನಾಗಿದ್ದಾನೆ (ಯಾವ ಶಬ್ದಕ್ಕೂ ಗೋಚರನಲ್ಲ) ಎಂಬ ವಿಚಾರವು ''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' (ತೈ.ಉ. 2-4-22) ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಇಂತಹ ಅವಾಚ್ಯನಾದ ವ್ಯಕ್ತಿ ಶಾಸ್ತ್ರಕ್ಕೆ ಮುಖ್ಯಾರ್ಥನಾಗಲು ಸಾಧ್ಯವಿಲ್ಲ. ಆದ್ದರಿಂದ ಶಾಸ್ತ್ರೋಕ್ತವಾದ ಜಗತ್ಕಾರಣತ್ವವು ಅವಾಚ್ಯನಾದ ಬ್ರಹ್ಮನಿಗೆ ಒಪ್ಪಲು ಸಾಧ್ಯವಿಲ್ಲ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ ಅದನ್ನು ನಿರಾಕರಿಸಿ ಸಿದ್ಧಾಂತವನ್ನು ಮಂಡಿಸು- ವುದಕ್ಕಾಗಿ (ಬ್ರಹ್ಮನಿಗೆ ಅವಾಚ್ಯತ್ವವನ್ನು ಖಂಡಿಸಿ ವಾಚ್ಯತ್ವವನ್ನು ಸಮರ್ಥಿಸುವುದಕ್ಕಾಗಿ) ಸೂತ್ರ ಪ್ರವೃತ್ತವಾಗುತ್ತದೆ :-

## ॐ ईक्षतेर्नाशब्दम् ॐ (१.१.५)

**ಸೂತ್ರಾರ್ಥ** :- ತತ್=ಬ್ರಹ್ಮನು ಅಶಬ್ದಂ ನ=ಶಬ್ದಗೋಚರನಲ್ಲ ಎಂದಲ್ಲ. ಕಿಂತು ವಾಚ್ಯಮೇವ=ಪರಂತು ವಾಚ್ಯನೇ ಆಗಿದ್ದಾನೆ. ಕುತಃ=ಯಾಕೆ? ಈಕ್ಷತೇಃ= ಜ್ಞಾನವಿಷಯ-ನಾಗಿದ್ದರಿಂದ (ಈಕ್ಷತಿರ್ಜ್ಞಾನಂ ತದ್ವಿಷಯತ್ವಾದಿತ್ಯರ್ಥಃ) ಈಕ್ಷತಿ ಎಂದರೆ ಜ್ಞಾನ, ಜ್ಞಾನವಿಷಯನಾಗಿದ್ದರಿಂದ)

### ಸಿದ್ಧಾಂತ

**ಸೂ.ರ.:- एवं चेक्षणीयत्वाऽन्यथाऽनुपपत्या वाच्यत्वस्यैव सिद्धत्वेनावाच्यत्वस्यासिद्धेः ।**

**ಅನು.:-** ಬ್ರಹ್ಮನು ವಾಚ್ಯನೇ ಆಗಿದ್ದಾನೆ. ಹೊರತು ಅವಾಚ್ಯನಲ್ಲ. ಬ್ರಹ್ಮನು ವಾಚ್ಯನಾಗಿದ್ದಾನೆ ಎಂದು ಹೇಗೆ ಹೇಳುತ್ತೀರಿ? ಎಂದರೆ, ಅವನು ಈಕ್ಷಣೀಯನಾಗಿರುವುದೇ (ಜ್ಞಾನವಿಷಯನಾಗಿರುವುದೇ) ವಾಚ್ಯನಾಗಿದ್ದಾನೆ ಎನ್ನುವುದಕ್ಕೆ ಸಾಧಕಯುಕ್ತಿ.

**ಬ್ರಹ್ಮ ವಾಚ್ಯಂ ಈಕ್ಷಣೀಯತ್ವಾತ್ ।**

ಬ್ರಹ್ಮನು ಈಕ್ಷಣೀಯನಾಗಿದ್ದರಿಂದ ವಾಚ್ಯನಾಗಿದ್ದಾನೆ.

ಬ್ರಹ್ಮನಿಗೆ ವಾಚ್ಯತ್ವವನ್ನೇ ಅಂಗೀಕರಿಸದೇ ಹೋದರೆ ಅವನಿಗೆ ಈಕ್ಷಣೀಯತ್ವವು ಉಪಪನ್ನವಾಗುವುದಿಲ್ಲ. ಈಗಲಾದರೋ ಈಕ್ಷಣೀಯತ್ವ ಇದೆಯಾದ್ದರಿಂದ ಈಕ್ಷಣೀಯತ್ವಾನ್ಯಥಾನುಪಪತ್ತಿಯಿಂದ ವಾಚ್ಯತ್ವವು ಸಿದ್ಧವಾಗುತ್ತದೆ.

**ಸೂ.ರ.:- न चेक्षणीयत्वमसिद्धमिति वाच्यम् । स एतस्मादिति (प्र.५-५) श्रुतिसिद्धत्वात् ।**

**ಅನು.:-** ಬ್ರಹ್ಮ ವಾಚ್ಯಂ ಈಕ್ಷಣೀಯತ್ವಾತ್ ಎಂಬ ಅನುಮಾನ ಸದನುಮಾನ-ವಾಗಿದ್ದರೆ ಆಗ ಅದರಿಂದ ಈಕ್ಷಣೀಯತ್ವಾನ್ಯಥಾನುಪಪತ್ತಿಯಿಂದ ವಾಚ್ಯತ್ವವನ್ನು ಸಮರ್ಥಿಸಬಹುದಿತ್ತು. ಆದರೆ ಈ ಅನುಮಾನವೇ ಸದನುಮಾನ ಅಲ್ಲ. ಯಾಕೆ? ಪಕ್ಷನಾದ ಬ್ರಹ್ಮನಿಗೆ ಈಕ್ಷಣೀಯತ್ವವೇ ಸಿದ್ಧವಾಗಿಲ್ಲ. ಅರ್ಥಾತ್ ಪಕ್ಷದಲ್ಲಿ ಹೇತು ಬಾರದ ಕಾರಣ ಅಸಿದ್ಧಿ ಬರುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಬ್ರಹ್ಮನಿಗೆ ಈಕ್ಷಣೀಯತ್ವವು

"ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ" (ಪ್ರ.ಉ. 5-5)

"ಆತ್ಮನ್ಯೇವಾತ್ಮಾನಂ ಪಶ್ಯೇತ್ । ವಿಜ್ಞಾಯ ಪ್ರಜ್ಞಾಂ ಕುರ್ವೀತ" (ಬೃ.ಉ. 6-4-23/ 6-4-21) ಇತ್ಯಾದಿ ಶ್ರುತಿಯಿಂದ ಸಿದ್ಧವಾಗಿದೆ. ಹೀಗಾಗಿ ಅಸಿದ್ಧಿಶಂಕೆ ಮಾಡಲು ಬರುವುದಿಲ್ಲ.

**ಸೂ.ರ.:– न च वाच्यत्वानुमानस्य यतो वाच इत्यादिश्रुतिबाधः । यतो वाच इति श्रुतेः प्रसिद्धत्वाभिधायकत्वेनावाच्यत्वानभिधायकत्वात् । अप्रसिद्धेरवाच्यमिति (गारुडे.) स्मृतेः ।**

**ಅನು.:–** ಯತೋ ವಾಚೋ ನಿವರ್ತಂತೇ ಎಂಬ ಶ್ರುತಿಯು ಬ್ರಹ್ಮನಿಗೆ ಅವಾಚ್ಯತ್ವ-ವನ್ನು ಹೇಳುತ್ತಿದೆ. ಪ್ರಕೃತ ನೀವು 'ಬ್ರಹ್ಮ ವಾಚ್ಯಂ ಈಕ್ಷಣೀಯತ್ವಾತ್' ಎಂಬುದಾಗಿ ಅನುಮಾನದಿಂದ ವಾಚ್ಯತ್ವವನ್ನು ಸಾಧಿಸಲು ಹೊರಟರೆ, ಅವಾಚ್ಯತ್ವವನ್ನು ಹೇಳುವ ಯತೋ ವಾಚೋ ಎಂಬ ಶ್ರುತಿಯಿಂದ ಬಾಧ ಬರುತ್ತದೆ ಎಂದು ಶಂಕೆ ಬಂದರೆ ಅದೂ ಸರಿಯಲ್ಲ.

'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಬ್ರಹ್ಮನು ವಾಚ್ಯನಲ್ಲ ಎಂಬ ಅರ್ಥದಲ್ಲಿ ಅವಾಚ್ಯತ್ವವನ್ನು ಹೇಳುತ್ತಿದ್ದರೆ ಆಗ ಶ್ರುತಿಯಿಂದ ಬಾಧ ಬರುತ್ತಿತ್ತು. ಆದರೆ ವಾಚ್ಯನಲ್ಲ ಎಂಬ ಅರ್ಥದಲ್ಲಿ ಅವಾಚ್ಯತ್ವವನ್ನು ಹೇಳುತ್ತಿಲ್ಲ ಶ್ರುತಿ. ಕಿಂತು –

"**ಅವಾಚ್ಯತ್ವಾದಿಕಂ ತ್ವಪ್ರಸಿದ್ಧತ್ವಾತ್**" (ಬ್ರ.ಸೂ. ಭಾಷ್ಯ)

ಅಪ್ರಸಿದ್ಧತ್ವ ನಿಮಿತ್ತವಾಗಿ ಅವಾಚ್ಯತ್ವವನ್ನು ಹೇಳುತ್ತಿದೆ ಅಷ್ಟೇ.

**अप्रसिद्धेरवाच्यं तद्वाच्यं सर्वागमोक्तितः ।**
**अतर्क्यं तर्क्यमज्ञेयं ज्ञेयमेवं परं स्मृतम् ॥**

**ಅನು.:–** ಎಂಬುದಾಗಿ ಗರುಡಪುರಾಣವೂ ಸಹ ಅಪ್ರಸಿದ್ಧವಾದ್ದರಿಂದಲೇ ಅವಾಚ್ಯ ಎಂದು ಕರೆದಿದೆ. ಅಂದಮೇಲೆ 'ಬ್ರಹ್ಮ ವಾಚ್ಯಂ ಈಕ್ಷಣೀಯತ್ವಾತ್' ಎಂಬ ನಮ್ಮ ಅನುಮಾನವು ಬ್ರಹ್ಮನಿಗೆ ವಾಚ್ಯತ್ವವನ್ನು ಹೇಳುತ್ತಿದೆ. ಯತೋ ವಾಚೋ ನಿವರ್ತಂತೇ ಎಂಬ ತೈತ್ತಿರೀಯ ಉಪನಿಷತ್ತು ಅಪ್ರಸಿದ್ಧತ್ವವನ್ನು ಹೇಳುತ್ತಿದೆಯಾದ್ದರಿಂದ ನಮ್ಮ ಅನುಮಾನಕ್ಕೆ ಶ್ರುತಿಯಿಂದ ಬಾಧ ಬರುವುದಿಲ್ಲ.

**ಸೂ.ರ.:– ततश्चावाच्यत्वरूपबाधकाभावात् कारणत्वं विष्णोरेवेति सिद्धम् ।**

**ಅನು.:–** ಹಾಗಾದರೆ ಈಕ್ಷಣೀಯತ್ವ ಯುಕ್ತಿಯಿಂದ ಬ್ರಹ್ಮನಿಗೆ ವಾಚ್ಯತ್ವವನ್ನು ಸಾಧಿಸಲು ಬರುತ್ತದೆ. ಹೀಗಾಗಿ ಅವಾಚ್ಯತ್ವ ಎಂಬ ಬಾಧಕ ಇಲ್ಲದ ಕಾರಣ (ಅವಾಚ್ಯನಾದ ಬ್ರಹ್ಮನಿಗೆ ಜಗತ್ಕಾರಣತ್ವ ಹೇಗೆ ಕೂಡುತ್ತದೆ? ಎಂದು ಶಂಕಿಸಲು ಅವಕಾಶವಿಲ್ಲದ ಕಾರಣ) ಜಗತ್ಕಾರಣತ್ವವು ವಿಷ್ಣುವಿಗೇ ಇದೆ ಎಂಬುದಾಗಿ ಸಿದ್ಧವಾಗುತ್ತದೆ.

## ಸೂತ್ರ – 6

## ಆಕ್ಷೇಪ

**ಸೂ.ರ.:– नन्वीक्षणीयत्वहेतोर्व्यधिकरणासिद्धत्वात् । आत्मन्येवात्मानं पश्येदित्यादिश्रुत्युक्त आत्मा गौणो नाम सत्त्वादिगुणबद्धो जीव एव । अतस्तदन्यथाऽनुपपत्त्या वाच्योऽपि स एव स्यान्न निर्गुणः परमात्मेति प्राप्ते सूत्रमाह ॥**

**ಅನು.:–** 'ಬ್ರಹ್ಮ ವಾಚ್ಯಂ ಈಕ್ಷಣೀಯತ್ವಾತ್' ಬ್ರಹ್ಮನು ಈಕ್ಷಣೀಯನಾದ್ದರಿಂದ ವಾಚ್ಯನಾಗಿದ್ದಾನೆ ಎಂಬುದಾಗಿ ಈಕ್ಷಣೀಯತ್ವ ಯುಕ್ತಿಯಿಂದ ವಾಚ್ಯತ್ವವನ್ನು ಹೇಳುವುದು ಸರಿಯಲ್ಲ. ಯಾಕೆಂದರೆ ಈ ಈಕ್ಷಣೀಯತ್ವಹೇತುವೇ ವ್ಯಧಿಕರಣಾಸಿದ್ಧವಾಗಿದೆ. ಅಂದರೆ– ''ಆತ್ಮನ್ಯೇವಾತ್ಮಾನಂ ಪಶ್ಯೇತ್ । ವಿಜ್ಞಾಯ ಪ್ರಜ್ಞಾಂ ಕುರ್ವಿತ'' (ಬೃ.ಉ. 6–4–23) ಎಂಬ ಶ್ರುತಿಯಲ್ಲಿ ಈಕ್ಷಣೀಯತ್ವೇನ ಪ್ರಸಕ್ತನಾದ ಆತ್ಮ ಎಂದರೆ ಅವನು ಗೌಣನಾದ ಆತ್ಮ ಅರ್ಥಾತ್ ಸತ್ವಾದಿಗುಣಬದ್ಧನಾದ ಜೀವನೇ ಆಗಿದ್ದಾನೆ. ಹೊರತು ನಿರ್ಗುಣನಾದ ಪರಮಾತ್ಮನು ಈಕ್ಷಣೀಯತ್ವೇನ ಪ್ರಸಕ್ತನಾಗಿಲ್ಲ.

ಹಾಗಾಗಿ ಈಕ್ಷಣೀಯತ್ವವು ಜೀವನಿಗೆ ಇರುವುದರಿಂದ ಈಕ್ಷಣೀಯತ್ವಾನ್ಯಥಾನುಪಪತ್ತಿಯಿಂದ ಜೀವನಿಗೆ ವಾಚ್ಯತ್ವವು ಸಿದ್ಧವಾಗುತ್ತದೆಯೇ ಹೊರತು ಪರಮಾತ್ಮನಿಗೆ ವಾಚ್ಯತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ ಅದಕ್ಕೆ ಸಮರ್ಪಕ ಉತ್ತರ ನೀಡಿ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೊರಡುತ್ತದೆ :-

**ॐ गौणश्चेन्नात्मशब्दात् ॐ (१.१.६)**

**ಸೂತ್ರಾರ್ಥ** :- ಗೌಣಃ ಚೇತ್ = ಸ ಏತಸ್ಮಾತ್ ಇತ್ಯಾದಿ ಈಕ್ಷಣೀಯತ್ವವನ್ನು ಹೇಳುವ ಶ್ರುತಿಯಲ್ಲಿ ಪ್ರತಿಪಾದ್ಯನಾದ ಆತ್ಮ ಅವನು ಗೌಣನಾದ ಆತ್ಮ ಸತ್ವಾದಿಗುಣ-ಬದ್ಧನಾದ ಜೀವನೇ ಆಗಿದ್ದಾನೆ ಎಂದು ಶಂಕೆ ಬಂದರೆ ನ = ಅದು ಸರಿಯಲ್ಲ. ಕುತಃ = ಯಾಕೆ? ಆತ್ಮಶಬ್ದಾತ್ = ಈಕ್ಷಣೀಯನಾದ ವ್ಯಕ್ತಿಯ ವಿಷಯದಲ್ಲಿ "ಆತ್ಮಾನಂ ಪಶ್ಯೇತ್" ಎಂಬುದಾಗಿ ಆತ್ಮಶಬ್ದವು ಶ್ರುತವಾಗುತ್ತಿರುವುದರಿಂದ.

## ಸಮಾಧಾನ

**ಸೂ.ರ.:– एवं च यो गुणैः सर्वत इति द्वे वाव ब्रह्मण (तलवकार ब्राह्मणं) इत्यादिवाक्येप्वात्मशब्दश्रवणात् । तस्य सत्वादिगुण-शून्यत्वेनोक्तत्वात् । स एतस्मादिति श्रुतेस्तत्परत्वस्यैव वक्तव्यत्वात् । समाख्यालब्धस्यैव श्रुत्यर्थत्वात् ।**

**ಅನುವಾದ** :–

**यो गुणैः सर्वतो हीनो यश्च दोषविवर्जितः ।**
**हेयोपादेयरहितः स आत्मेत्यभिधीयते ॥**
**एतदन्यस्वभावो यः सोऽनात्मेति सतां मतम् ।**
**अनात्मन्यात्मशब्दस्तु सोपचारः प्रयुज्यते ॥** इति वामने ॥

**"द्वे वाव ब्रह्मणो रूपे आत्मा चैवानात्मा च । तत्र यः स आत्मा स नित्यः शुद्धः केवलो निर्गुणश्च । अथ ह योऽनीदृशः सोऽनात्मा" इति तलवकारब्राह्मणम् ।** (ಬ್ರ.ಸೂ.ಭಾಷ್ಯ)

ಇತ್ಯಾದಿ ವಾಕ್ಯಗಳಲ್ಲಿ ಆತ್ಮಶಬ್ದವು ಶ್ರುತವಾಗುತ್ತಿದೆ. ಆ ಆತ್ಮಶಬ್ದವಾಚ್ಯನಾದ ವ್ಯಕ್ತಿ "ಕೇವಲೋ ನಿರ್ಗುಣಶ್ಚ" ಎಂಬುದಾಗಿ ಸತ್ವಾದಿಗುಣಶೂನ್ಯತ್ವೇನ ಪ್ರತಿಪಾದ್ಯನಾಗಿದ್ದಾನೆ. ಅರ್ಥಾತ್ ಸತ್ವಾದಿಗುಣಶೂನ್ಯನಾದ ನಿರ್ಗುಣಬ್ರಹ್ಮನೇ ಅಲ್ಲಿ ಆತ್ಮಶಬ್ದವಾಚ್ಯನಾಗಿ ಪ್ರತಿಪಾದ್ಯನಾಗಿದ್ದಾನೆ. ಸಮಾಖ್ಯಾಲಬ್ಧವಾದ ಅರ್ಥವನ್ನೇ ಶ್ರುತಿಯ ಅರ್ಥವನ್ನಾಗಿ ಸ್ವೀಕರಿಸಬೇಕಾದ್ದರಿಂದ, ಪ್ರಕೃತ 'ಸ ಏತಸ್ಮಾತ್' ಎಂಬ ಶ್ರುತಿಗೆ 'ಯೋ ಗುಣೈಃ ಸರ್ವತಃ –

ದ್ವೇ ವಾವ ಬ್ರಹ್ಮಣಃ' ಎಂಬ ವಾಕ್ಯರೂಪವಾದ ಸಾಮಾಖ್ಯಾ ಇರುವುದರಿಂದ 'ಯೋ ಗುಣ್ಯೈಃ ಸರ್ವತಃ' ಇತ್ಯಾದಿ ವಾಕ್ಯಗಳಿಗೆ ಹೇಗೆ ನಿರ್ಗುಣಬ್ರಹ್ಮಪರತ್ವವನ್ನು ಹೇಳಬೇಕೋ ಅದರಂತೆ 'ಸ ಏತಸ್ಮಾತ್' ಎಂಬ ಈಕ್ಷಣೀಯವಸ್ತುಪ್ರತಿಪಾದಕವಾದ ಈ ಶ್ರುತಿಗೂ ಸಹ ನಿರ್ಗುಣಬ್ರಹ್ಮಪರತ್ವವನ್ನೇ ಹೇಳಬೇಕು.

**ಸೂ.ರ.:– आत्मपदमुख्यार्थे निर्गुणे दृश्यतयेक्षतिश्रुतिप्रतिपाद्ये सम्भवति सत्यमुख्यार्थस्य गौणस्य ग्रहणायोगात् । निर्गुणब्रह्मैवोदितम् ।**

**ಅನು.:–** ಹೀಗಾಗಿ ಆತ್ಮಶಬ್ದದ ಮುಖ್ಯಾರ್ಥನಾದ ನಿರ್ಗುಣಬ್ರಹ್ಮನೇ ಈಕ್ಷಣೀಯ ವಸ್ತುಪ್ರತಿಪಾದಕಶ್ರುತಿಗೆ ಪ್ರತಿಪಾದ್ಯನಾಗಲು ಸಂಭಾವಿತನಾಗುತ್ತಿರಲು, ಆತ್ಮಶಬ್ದದ ಅಮುಖ್ಯಾರ್ಥನಾದ ಗೌಣನಾದ (ಸತ್ವಾದಿಗುಣಬದ್ಧನಾದ) ಆತ್ಮನನ್ನು (ಜೀವನನ್ನು) ತೆಗೆದುಕೊಳ್ಳಲು ಬರುವುದಿಲ್ಲವಾದ್ದರಿಂದ 'ಸ ಏತಸ್ಮಾತ್' ಎಂಬ ಶ್ರುತಿಯಲ್ಲಿ ಈಕ್ಷಣೀಯ–ತ್ವೇನ ನಿರ್ಗುಣಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ.

**ಸೂ.ರ.:– अतः स एव वाच्यो न जीव इति सिद्धम् ।**

**ಅನು.:–** 'ಸ ಏತಸ್ಮಾತ್' ಎಂಬ ಶ್ರುತಿಯಲ್ಲಿ ನಿರ್ಗುಣಬ್ರಹ್ಮನೇ ಈಕ್ಷಣೀಯತ್ವೇನ ಪ್ರತಿಪಾದ್ಯನಾಗಿದ್ದಾನೆ ಎಂದಮೇಲೆ ಅಂತಹ ಈಕ್ಷಣೀಯತ್ವಾನ್ಯಥಾನುಪಪತ್ತಿಯಿಂದ ವಾಚ್ಯತ್ವವೂ ಸಹ ನಿರ್ಗುಣಬ್ರಹ್ಮನಿಗೇ ಸಿದ್ಧವಾಗುತ್ತದೆ. ಹೊರತು ಜೀವನಿಗೆ ವಾಚ್ಯತ್ವವು ಸಿದ್ಧವಾಗುವುದಿಲ್ಲ

## ಸೂತ್ರ – 7

## ಆಕ್ಷೇಪ

**ಸೂ.ರ.:– नन्वात्मशब्दो मुख्यत एव गौणात्मपरः स्यात् । उक्त-श्रुतिस्मृतिष्वात्मशब्दस्य निर्गुणे विष्णौ मुख्यत्वेन जीवेष्वमुख्यत्वेनेत्यनुक्ते-नात्मानात्मशब्दयोश्चेतनाचेतनविषयत्वसम्भवात् ।**

**ಅನು.:–** "ಯೋ ಗುಣ್ಯೈಃ ಸರ್ವತಃ" "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿ ಶ್ರುತಿಗಳಲ್ಲಿ ಆತ್ಮಶಬ್ದವು ಶ್ರುತವಾಗುತ್ತಿರುವುದರಿಂದ, ಆ ಆತ್ಮಶಬ್ದವು ನಿರ್ಗುಣನಾದ ಆತ್ಮನಲ್ಲಿಯೇ ಮುಖ್ಯವಾಗಿ ಪ್ರಯೋಗಿಸಲ್ಪಡುವುದರಿಂದ, ಈಕ್ಷಣೀಯನಾದ ಆತ್ಮ ಎಂದರೆ ಪರಮಾತ್ಮನೇ ಎಂದು ಹೇಳುವುದು ಸರಿಯಲ್ಲ.

ಏಕೆಂದರೆ - ಆತ್ಮಶಬ್ದವು ಮುಖ್ಯವೃತ್ತಿಯಿಂದಲೇ ಗೌಣನಾದ (ಸತ್ವಾದಿಗುಣ-ಬದ್ಧನಾದ) ಆತ್ಮನನ್ನೇ ತಿಳಿಸಿಕೊಡುತ್ತದೆ. ಹಿಂದೆ ಹೇಳಿದ ಶ್ರುತಿ-ಸ್ಮೃತಿಗಳಲ್ಲಿ "ಆತ್ಮಶಬ್ದವು ನಿರ್ಗುಣನಾದ ವಿಷ್ಣುವಿನಲ್ಲಿ ಮುಖ್ಯವಾಗಿದೆ, ಜೀವರಲ್ಲಿ ಅಮುಖ್ಯವಾಗಿದೆ" ಎಂದು ಹೇಳಿಲ್ಲವಾದ್ದರಿಂದ ಆತ್ಮಶಬ್ದಕ್ಕೆ ಚೇತನ ಎಂದು ಅರ್ಥ, ಅನಾತ್ಮಶಬ್ದಕ್ಕೆ ಅಚೇತನ ಎಂದು ಅರ್ಥ ಹೇಳಬಹುದಾಗಿದೆ.

**ಸೂ.ರ.:– तच्छब्दयोः प्रसिद्धचेतनाचेतनपरत्वे श्रुतेरार्जवं स्यात् । प्रसिद्धार्थापरित्यागाद्रूपशब्दस्यानेकार्थाकल्पनाच्च ।**

**ಅನು.:–** ಶ್ರುತಿ-ಸ್ಮೃತಿಗಳಲ್ಲಿರುವ ಆತ್ಮ-ಅನಾತ್ಮ ಶಬ್ದಗಳಿಗೆ ಪ್ರಸಿದ್ಧವಾದ ಚೇತನ-ಅಚೇತನ ಎಂಬ ಅರ್ಥವನ್ನು ಹೇಳುವುದಾದರೆ, ದ್ವೇ ವಾವ ಬ್ರಹ್ಮಣೋ ರೂಪೇ ಎಂಬ ಶ್ರುತಿಯಲ್ಲಿ ರೂಪಶಬ್ದಕ್ಕೆ ಪ್ರತಿಮಾ ರೂಪ ಎಂದು ಒಂದೇ ಬಗೆಯ ಅರ್ಥವನ್ನು ಹೇಳಿದಂತಾಗುವುದರಿಂದ ಶ್ರುತಿಯನ್ನು ನೇರವಾಗಿ ಸರಳವಾಗಿ ವ್ಯಾಖ್ಯಾನಿಸಿದಂತಾಗುತ್ತದೆ.

ಆತ್ಮಶಬ್ದಕ್ಕೆ ಪ್ರಸಿದ್ಧವಾದ (ಚೇತನ ಎಂಬ) ಅರ್ಥವನ್ನು ಪರಿತ್ಯಾಗ ಮಾಡಿಲ್ಲವಾದ್ದರಿಂದ ದ್ವೇ ವಾವ ಬ್ರಹ್ಮಣೋ ರೂಪೇ ಎಂಬುವಲ್ಲಿರುವ ರೂಪ ಶಬ್ದಕ್ಕೆ ಅನೇಕ ಅರ್ಥಗಳನ್ನು ಕಲ್ಪನೆಯನ್ನೂ ಮಾಡಬೇಕಾಗಿಲ್ಲ.

**ಸೂ.ರ.:– दुःखादिदोषस्यौपाधिकत्वेन जीवस्यापि स्वभावतो निर्दोषतया श्रुतेः स्वभावविषयत्वोपपत्तेरित्याशङ्कां परिहर्तुं सूत्रं पठति ।**

**ಅನು.:–** "ಯೋ ಗುಣ್ಯೈಃ ಸರ್ವತಃ" "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿ ಶ್ರುತಿಗಳಲ್ಲಿರುವ ಆತ್ಮಶಬ್ದಕ್ಕೆ ಪ್ರಸಿದ್ಧವಾದ ಚೇತನ ಎಂಬ ಅರ್ಥವನ್ನೇ ಹೇಗೆ ಸ್ವೀಕರಿಸಲು ಬರುತ್ತದೆ? ಆ ಶ್ರುತಿಗಳಲ್ಲಿ ಆತ್ಮನಿಗೆ ನಿರ್ಗುಣತ್ವವನ್ನು ಹೇಳುತ್ತಿದ್ದಾರೆ. ಈ ಪ್ರಸಿದ್ಧ ಚೇತನನಾದರೋ ಸತ್ವಾದಿಗುಣಬದ್ಧನಾಗಿದ್ದಾನೆ. ಅಂದಮೇಲೆ ಆತ್ಮಶಬ್ದಕ್ಕೆ ಪ್ರಸಿದ್ಧ ಚೇತನ ಎಂಬ ಅರ್ಥ ಹೇಗೆ ಯುಕ್ತವಾಗುತ್ತದೆ? ಎಂದು ಶಂಕೆ ಬೇಡ.

ಚೇತನನಿಗೆ ದುಃಖಾದಿ ದೋಷಗಳು ಸ್ವಾಭಾವಿಕವಾಗಿ ಇಲ್ಲ, ದೋಷಗಳು ಔಪಾಧಿಕವಾಗಿವೆ (ಉಪಾಧಿಯಿಂದಾಗಿ ದೋಷಗಳು ಬರುತ್ತವೆ). ಚೇತನನು ಸ್ವಾಭಾವಿಕ-ವಾಗಿ ನಿರ್ದೋಷನಾದ್ದರಿಂದ, 'ಯೋ ಗುಣ್ಯೈಃ' ಇತ್ಯಾದಿ ಶ್ರುತಿಗಳು ಜೀವನ ನಿರ್ದೋಷತ್ವ ಸ್ವಭಾವವನ್ನು ತಿಳಿಸುತ್ತಿವೆ ಎಂದು ಹೇಳಬಹುದಾದ್ದರಿಂದ ನಿರ್ಗುಣನಾದ ಆತ್ಮನನ್ನು ತೆಗೆದುಕೊಂಡರೆ ಯಾವ ಬಾಧಕ ಇಲ್ಲ.

ಆದ್ದರಿಂದ ಹಿಂದೆ ಹೇಳಿದ ಶ್ರುತಿ-ಸ್ಮೃತಿಗಳಲ್ಲಿ ಆತ್ಮಶಬ್ದವು ಶ್ರುತವಾಗುತ್ತಿರುವುದರಿಂದ, ಆ ಆತ್ಮಶಬ್ದವು ಗೌಣನಾದ ಆತ್ಮನಲ್ಲಿಯೇ ಮುಖ್ಯವಾಗಿ ಪ್ರಯೋಗಿಸಲ್ಪಡುವುದರಿಂದ ಈಕ್ಷಣೀಯನಾದ ಆತ್ಮ ಎಂದರೆ ಜೀವ ಎಂದೇ ಹೇಳಬಹುದಾಗಿದೆ ಎಂದು ಶಂಕೆ ಬಂದರೆ ಅದನ್ನು ನಿರಾಕರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಪ್ರವೃತ್ತವಾಗುತ್ತದೆ :-

## ॐ तन्निष्ठस्य मोक्षोपदेशात् ॐ (१.१.७)

**ಸೂತ್ರಾರ್ಥ** :- ತನ್ನಿಷ್ಠಸ್ಯ = (ಶ್ರುತ್ಯುಕ್ತನಾದ ಆತ್ಮನನ್ನು ತಿಳಿದುಕೊಂಡ ವ್ಯಕ್ತಿಗೆ) ಪರಮಾತ್ಮಜ್ಞಾನಿಯಾದ ವ್ಯಕ್ತಿಗೆ ಮೋಕ್ಷೋಪದೇಶಾತ್='ಯಸ್ಯಾನುವಿತ್ತಃ' (ಬೃ.ಉ. 6-4-13) ಇತ್ಯಾದಿ ಶ್ರುತಿಗಳಲ್ಲಿ ಮೋಕ್ಷರೂಪವಾದ ಫಲವು ಶ್ರುತವಾಗುತ್ತಿದೆಯಾದ್ದರಿಂದ ಆತ್ಮಶಬ್ದದಿಂದ ಮುಖ್ಯವಾಚ್ಯನಾದವನು ಜೀವನಲ್ಲ.

### ಸಮಾಧಾನ

**ಸೂ.ರ.:–** एवं च गुणबद्धजीवज्ञानिनस्तत्ज्ञानाद्गुणबन्धनिवृत्तिरूपो मोक्षो न सम्भवति । यस्यानुवित्त इति श्रुतौ ब्रह्मज्ञानिनो मोक्षोपदेशस्य श्रवणात् ।

**ಅನು.:–** ಶ್ರುತ್ಯುಕ್ತವಾದ ಆತ್ಮಶಬ್ದದಿಂದ ಜೀವನನ್ನು ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ :-

यस्यानुवित्तः प्रतिबुद्ध आत्माऽस्मिन् सन्दोहे गहने प्रविष्टः ।
स विश्वकृत्स हि सर्वस्य कर्ता तस्य लोकः स उ लोक एव ॥
(ಬೃ.ಉ. 6-4-13)

ಎಂಬ ಶ್ರುತಿಯಲ್ಲಿ "ಆ ಆತ್ಮನ ಜ್ಞಾನ ಮಾಡಿಕೊಂಡವನಿಗೆ ಮೋಕ್ಷವಾಗುತ್ತದೆ' ಎಂದು ಹೇಳಲಾಗಿದೆ. ಪ್ರಕೃತ ಶ್ರುತ್ಯುಕ್ತವಾದ ಆತ್ಮಶಬ್ದದಿಂದ ಜೀವನನ್ನು ತೆಗೆದುಕೊಂಡರೆ, ಈ ಜೀವನಾದರೋ ಸತ್ತ್ವಾದಿಗುಣಬದ್ಧನಾದ್ದರಿಂದ, ಸತ್ತ್ವಾದಿಗುಣಬದ್ಧನಾದ ಜೀವನ ಜ್ಞಾನದಿಂದ ಸತ್ತ್ವಾದಿಗುಣಬಂಧನಿವೃತ್ತಿರೂಪವಾದ ಮೋಕ್ಷವು ಸಾಧ್ಯವಿಲ್ಲವಾದ್ದರಿಂದ ಶ್ರುತ್ಯುಕ್ತವಾದ ಆತ್ಮಶಬ್ದದಿಂದ ಜೀವನನ್ನು ತೆಗೆದುಕೊಳ್ಳಬಾರದು.

**ಸೂ.ರ.:–** अयमात्मा ब्रह्मेति (मां.उ.१-२, बृ.उ.४-५-१९) श्रुत्याऽऽत्मशब्दस्य विष्णावेव मुख्यत्वात् । न गौण आत्मा किन्तु निर्गुणब्रह्म एवेति सिद्धम् ।

**ಅನು.:–** ಪರಮಾತ್ಮನ ಜ್ಞಾನ ಮಾಡಿಕೊಳ್ಳುವುದರಿಂದ ಬಂಧನಿವೃತ್ತಿರೂಪವಾದ ಮೋಕ್ಷವು ಸಿಗುತ್ತದೆ ಎಂಬುದೊಂದೇ ಕಾರಣವಲ್ಲ. ಕಿಂತು–

"ಅಯಮಾತ್ಮಾ ಬ್ರಹ್ಮ" (ಮಾಂಡೂಕ 1-2, ಬೃಹ. 4-5-19) ಎಂಬ ಶ್ರುತಿ ಇರುವುದರಿಂದ ಆತ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ.

ಆದ್ದರಿಂದ ಆತ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದ್ದರಿಂದ, ಮತ್ತು ವಿಷ್ಣುವಿನ ಜ್ಞಾನದಿಂದಲೇ ಮೋಕ್ಷ ಸಿಗುವ ಯುಕ್ತಿಯೂ ಇರುವುದರಿಂದ "ಯೋ ಗುಣ್ಯೈಃ ಸರ್ವತಃ" "ದ್ವೇ ವಾವ ಬ್ರಹ್ಮಣೋ ರೂಪೇ" "ಸ ಏತಸ್ಮಾತ್" ಇತ್ಯಾದಿ ಶ್ರುತಿಗಳಲ್ಲಿ ಆತ್ಮಶಬ್ದವಾಚ್ಯನಾದವನು ಪರಮಾತ್ಮನೇ ಆಗುತ್ತಾನೆ. ಅವನೇ ಈಕ್ಷಣೀಯನಾಗಿದ್ದಾನೆ. ಅವನೇ ವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 8

### ಸಂಗತಿ

**ಸೂ.ರ.:–** **युक्त्यन्तरेणात्मशब्दोदितो न गौण इत्याह सूत्रकृत् ।**

**ಅನು.:–** 'ಯೋ ಗುಣ್ಯೈಃ ಸರ್ವತಃ' 'ದ್ವೇ ವಾವ ಬ್ರಹ್ಮಣೋ' ಇತ್ಯಾದಿ ಶ್ರುತಿಗಳಲ್ಲಿ ಆತ್ಮಶಬ್ದವಾಚ್ಯನಾದ ವ್ಯಕ್ತಿ ಪರಮಾತ್ಮನೇ. ಹೊರತು ಗೌಣ ಆತ್ಮ(ಜೀವ) ಅಲ್ಲ ಎಂಬುದನ್ನು ಮತ್ತೊಂದು ಯುಕ್ತಿಯಿಂದಲೂ ಸೂತ್ರಕಾರರು ಸಮರ್ಥಿಸುತ್ತಾರೆ:-

**ॐ हेयत्वावचनाच्च ॐ (१.१.८)**

**ಸೂತ್ರಾರ್ಥ :-** ಹೇಯತ್ವಾವಚನಾತ್ = ಮೋಕ್ಷಕ್ಕಾಗಿ ಪ್ರಾಧಾನ್ಯೇನ ಅಜ್ಞೇಯತ್ವ-ರೂಪವಾದ (ಮೋಕ್ಷವಾಗುವುದಕ್ಕಾಗಿ ಪ್ರಧಾನವಾಗಿ ತಿಳಿಯಲ್ಪಡಲೇಬೇಕಾದವನು ಅಲ್ಲ ಎಂಬ) ಹೇಯತ್ವವನ್ನು ಬ್ರಹ್ಮನಿಗೆ ಹೇಳಿಲ್ಲವಾದ್ದರಿಂದ,

ಪ್ರತ್ಯುತ "ತಮೇವೈಕಂ ಜಾನಥ ಆತ್ಮಾನಮ್ .... " ಎಂಬುದಾಗಿ ಮೋಕ್ಷವಾಗು-ವುದಕ್ಕಾಗಿ ಬ್ರಹ್ಮನನ್ನು ಪ್ರಧಾನವಾಗಿ ತಿಳಿಯಲೇಬೇಕು ಎಂದು ಅಹೇಯತ್ವವನ್ನು ಪ್ರತಿಪಾದಿಸಿದ್ದರಿಂದ ಗೌಣಃ ಆತ್ಮಶಬ್ದವಾಚ್ಯೋ ನ = ಗೌಣನಾದ ಆತ್ಮ(ಜೀವ) ಆತ್ಮಶಬ್ದ-ವಾಚ್ಯನಾಗಿಲ್ಲ. ಕಿಂತು ನಿರ್ಗುಣನಾದ ವಿಷ್ಣುವೇ ಆತ್ಮಶಬ್ದವಾಚ್ಯನಾಗಿದ್ದಾನೆ.

**ಸೂ.ರ.:–** **एवं च न केवलं तन्निष्ठस्य मोक्षोपदेशात्किन्तु तमेवैकमिति (मुं.उ. २-२-५) श्रुतावात्मनो हेयत्वावचनात् । अन्या वाचो विमुञ्चथेति**

मुमुक्षुभिर्हेयत्ववचनाच्च । गौण आत्मशब्दवाच्यो न किन्तु निर्गुणो विष्णुरेवेत्याशयः ।

**ಅನು.:–** ಆತ್ಮನ ಜ್ಞಾನ ಮಾಡಿಕೊಂಡವನಿಗೆ ಮೋಕ್ಷವಾಗುತ್ತದೆ ಎಂಬುದಾಗಿ ಕೇವಲ ಮೋಕ್ಷೋಪದೇಶದಿಂದಾಗಿ ಆತ್ಮಶಬ್ದವಾಚ್ಯನಾದವನು ಜೀವನಲ್ಲ ಎಂದು ಹೇಳುವುದಿಲ್ಲ, ಪರಂತು –

''तमेवैकं जानथ आत्मानमन्या वाचो विमुञ्चथ अमृतस्यैष सेतुः ।''

(ಮುಂ.ಉ. 2-2-5)

ಎಂಬುದಾಗಿ ಶ್ರುತಿಯಲ್ಲಿ ಆತ್ಮನಿಗೆ ಹೇಯತ್ವವನ್ನು ಹೇಳಿಲ್ಲವಾದ್ದರಿಂದಲೂ (ಮೋಕ್ಷ-ಕ್ಕಾಗಿ ಬ್ರಹ್ಮನನ್ನು ತಿಳಿಯಬೇಕಾಗಿಲ್ಲ ಎಂದು ಹೇಯತ್ವವನ್ನು ಹೇಳಿಲ್ಲವಾದ್ದರಿಂದಲೂ) ಆತ್ಮಶಬ್ದವಾಚ್ಯನಾದವನು ಜೀವನಲ್ಲ ಎಂದು ಹೇಳುತ್ತೇವೆ.

ಅಷ್ಟೇ ಅಲ್ಲದೇ ''ಅನ್ಯಾ ವಾಚೋ ವಿಮುಂಚಥ'' ಎಂಬುದಾಗಿ ಮೋಕ್ಷವಾಗ-ಬೇಕಾದರೆ ಬ್ರಹ್ಮನನ್ನು ತಿಳಿಯಲೇಬೇಕು ಎಂದು ಅಹೇಯತ್ವವನ್ನೂ ಹೇಳಿದ್ದಾರೆ.

ಅಂದಮೇಲೆ ಶ್ರುತಿಯಲ್ಲಿ ಹೇಳಿದ ಮುಮುಕ್ಷುಭಿಃ ಅಹೇಯತ್ವವು ಬ್ರಹ್ಮನಿಗೆ ಕೂಡುತ್ತದೆಯೇ ಹೊರತು ಜೀವನಿಗೆ ಕೂಡುವುದಿಲ್ಲವಾದ್ದರಿಂದ ಆತ್ಮಶಬ್ದವಾಚ್ಯನಾದವನು ನಿರ್ಗುಣ ವಿಷ್ಣುವೇ ಆಗುತ್ತಾನೆ. ಹೊರತು ಗೌಣನಾದ ಆತ್ಮ (ಜೀವ) ಆಗುವುದಿಲ್ಲ.

**ಸೂ.ರ.:–** तथा चात्मशब्दादीक्षतिश्रुत्युक्तोऽपि निर्गुण एवेति सिद्धम् । तस्येक्षत्यन्यथाऽनुपपत्त्या वाच्यत्वमिति सिद्धम् ।

**ಅನು.:–** ಈ ರೀತಿಯಾಗಿ ಶ್ರುತಿಯಲ್ಲಿ ಆತ್ಮಶಬ್ದವು ಶ್ರುತವಾಗುತ್ತಿರುವುದರಿಂದ, ಈ ಹಿಂದೆ ಹೇಳಿದಂತೆ ಮೋಕ್ಷೋಪದೇಶದ ಯುಕ್ತಿಯಿಂದ ಹಾಗೂ ಹೇಯತ್ವವನ್ನು ಹೇಳಿಲ್ಲದ ಯುಕ್ತಿಯಿಂದಲೂ ಆತ್ಮಶಬ್ದವಾಚ್ಯನಾಗುವವನು ವಿಷ್ಣುವೇ ಎಂದು ಸಿದ್ಧವಾಗುವುದರಿಂದ, ಈಕ್ಷಣೀಯ ಶ್ರುತಿಯಲ್ಲಿ ಆತ್ಮಶಬ್ದದಿಂದ ಪ್ರತಿಪಾದ್ಯನಾದವನೂ ನಿರ್ಗುಣನಾದ ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಆ ನಿರ್ಗುಣವಿಷ್ಣುವಿಗೆ ಈಕ್ಷಣೀಯತ್ವವನ್ನು ಒಪ್ಪಬೇಕಾದರೆ ವಾಚ್ಯತ್ವವನ್ನು ಒಪ್ಪಲೇಬೇಕಾದ್ದರಿಂದ ಈಕ್ಷಣೀಯತ್ವಾನ್ಯಥಾನುಪಪತ್ತಿಯಿಂದ ಆ ನಿರ್ಗುಣವಿಷ್ಣುವೇ ವಾಚ್ಯತ್ವವು ಸಿದ್ಧವಾಗುತ್ತದೆ.

## ಸೂತ್ರ - 9

### ಸಂಗತಿ

**ಸೂ.ರ.:– युक्त्यन्तरेणापि निर्गुणस्य विष्णोः वाच्यत्वमुपपादयत्सूत्र-मुपन्यस्यति–**

**ಅನು.:–** ಮತ್ತೊಂದು ಯುಕ್ತಿಯಿಂದಲೂ ನಿರ್ಗುಣನಾದ ವಿಷ್ಣುವಿಗೆ ವಾಚ್ಯತ್ವವನ್ನು ಸೂತ್ರಕಾರರು ಉಪಪಾದನೆ ಮಾಡುತ್ತಾರೆ :-

**ॐ स्वाप्ययात् ॐ (१.१.९)**

**ಸೂತ್ರಾರ್ಥ :-** ಸ್ವಾಪ್ಯಯಾತ್ = ಸ್ವಸ್ಯ ಸ್ವಸ್ಮಿನ್ ಅಪ್ಯಯಾತ್ ಅಪ್ಯಯ-ಪದೋಕ್ತಲಯವಚನಾತ್ ತನ್ನಲ್ಲಿಯೇ ತನ್ನ ಲಯವನ್ನು ಹೇಳಿದ್ದರಿಂದಾಗಿ 'ಆತ್ಮಾನಂ ವಿಲಾಪಯತಿ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದವನು ನಿರ್ಗುಣನಾದ ವಿಷ್ಣುವೇ ಆಗಿದ್ದಾನೆ. ಹೊರತು ಗೌಣ ಆತ್ಮ (ಜೀವ) ಅಲ್ಲ. ಆದ್ದರಿಂದಲೇ ನಿರ್ಗುಣನಾದ ಆ ವಿಷ್ಣು ಶಬ್ದವಾಚ್ಯನಾಗಿದ್ದಾನೆ.

**ಸೂ.ರ.:– एवं च पूर्णमद इति (बृ.उ.७-१-१.) श्रुतौ स्वाप्यय पदोपलक्षित पूर्णत्वस्य वचनात् । स्वस्य स्वस्मिन्नेवाप्ययवचनाच्च ।**

**ಅನು.:– "स आत्मन आत्मानमुद्धृत्याऽऽत्मन्येव विलापयत्यथात्मैव भवति" ।** (ಬೃ.ಉ. 5-1-1)

ಎಂಬುದಾಗಿ ಶ್ರುತಿಯಲ್ಲಿ ಆತ್ಮಶಬ್ದವಾಚ್ಯನಾದ ವ್ಯಕ್ತಿಗೆ ತನ್ನಲ್ಲಿಯೇ ತನಗೆ ಲಯವನ್ನು (ಅಪ್ಯಯವನ್ನು) ಹೇಳಿದ್ದಾರೆ. ಮತ್ತು

**पूर्णमदः पूर्णमिदं पूर्णात्पूर्णमुदुच्यते ।**
**पूर्णस्य पूर्णमादाय पूर्णमेवावशिष्यते ॥**

ಎಂಬುದಾಗಿ ಸ್ವಾಪ್ಯಯಪದದಿಂದ ಉಪಲಕ್ಷಿತವಾದ ಪೂರ್ಣತ್ವವನ್ನೂ ಹೇಳಿದ್ದಾರೆ.

**ಸೂ.ರ.:– स देव इति (स्कान्दे) स्पष्टस्मृतावात्मन्येव विलापयतीति स्वस्य स्वस्मिन्नेवाप्ययवचनात् । तस्य च हरिगुणनिष्ठतायाः स्मृतौ वचनात् । गौण आत्मनि निर्दोपस्य लयाभावाच्च । अयं निर्गुण एव न गौण इति सिद्धम् ।**

ಅನುವಾದ :-

स देवो बहुधा भूत्वा निर्गुणः पुरुषोत्तमः ।
एकीभूय पुनः शेते निर्दोषो हरिरादिकृत् ॥

**ಅನು.**:- ಎಂಬುದಾಗಿ ಸ್ಪಷ್ಟವಾದ ಸ್ಮೃತಿಯಲ್ಲಿ ಹಾಗೂ 'ಆತ್ಮನ್ಯೇವ ವಿಲಾಪಯತಿ' ಎಂಬುದಾಗಿ ಶ್ರುತಿಯಲ್ಲಿ ಶ್ರೀವಿಷ್ಣುವೇ ತನ್ನಲ್ಲಿ ತಾನು ಲಯವನ್ನು ಹೊಂದುತ್ತಾನೆ ಎಂದು ಹೇಳಿದ್ದಾರೆ. ಮತ್ತು ಪೂರ್ಣತ್ವವೂ ಶ್ರೀವಿಷ್ಣುವಿನಲ್ಲಿಯೇ ಇರುವುದೆಂದು ಶ್ರುತವಾಗಿದೆ. ಹಾಗಾದರೆ :-

★ ಶ್ರುತಿ-ಸ್ಮೃತಿಗಳಲ್ಲಿ ಹೇಳಿದ "ತನ್ನಲ್ಲಿ ತನ್ನ ಲಯ" ಎನ್ನುವುದು ವಿಷ್ಣುವಿನಲ್ಲಿ ಮಾತ್ರ ಇರುವ ಗುಣವಾಗಿದೆ ಎಂದು ಸ್ಮೃತಿಯಲ್ಲಿ ಹೇಳಿದ್ದರಿಂದ

★ ಗೌಣನಾದ ಆತ್ಮನಲ್ಲಿ (ದೋಷವಿಶಿಷ್ಟನಾದ ಜೀವನಲ್ಲಿ) ನಿರ್ದೋಷನಾದ ಆತ್ಮನ (ಪರಮಾತ್ಮನ) ಲಯವು ಅಸಂಭಾವಿತವಾದ್ದರಿಂದ

ಶ್ರುತಿ-ಸ್ಮೃತಿಗಳಲ್ಲಿ ಆತ್ಮಶಬ್ದವಾಚ್ಯನಾದ ವ್ಯಕ್ತಿ ನಿರ್ಗುಣನಾದ ವಿಷ್ಣುವೇ ಆಗುತ್ತಾನೆ. ಹೊರತು ಗೌಣನಾದ ಜೀವ ಅಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ - 10

## ಆಕ್ಷೇಪ

**ಸೂ.ರ.**:- **नन्वस्तु निर्गुणस्य विष्णोर्वाच्यत्वोपपत्तौ सत्यां कारणत्वेन शास्त्रगम्यत्वम् । तथा चोपक्रमादिबलात्प्रसिद्धशाखास्वेव कारणत्वेन प्रतिपाद्यत्वं पर्यवसितम् । अप्रसिद्धशाखासु पुनरन्योऽपि कारणत्वेनोच्यताम् ।**

**ಅನು.**:- ನಿರ್ಗುಣನಾದ ವಿಷ್ಣುವಿಗೆ ವಾಚ್ಯತ್ವವು ಉಪಪನ್ನವಾಗುವುದರಿಂದ ಜಗತ್ಕಾರಣತ್ವೇನ (ಜಗತ್ಕಾರಣ ಎಂಬುದಾಗಿ) ಶಾಸ್ತ್ರಪ್ರತಿಪಾದ್ಯನಾಗಿದ್ದಾನೆ ಎನ್ನುವುದಾದರೆ, ಉಪಕ್ರಮಾದಿಬಲದಿಂದಾಗಿ ಪ್ರಸಿದ್ಧವಾದ ಶಾಖೆಗಳಲ್ಲಿ ಮಾತ್ರ ಜಗತ್ಕಾರಣತ್ವೇನ ಪ್ರತಿಪಾದ್ಯನಾಗಿದ್ದಾನೆ ಎಂದು ಪರ್ಯವಸಿತವಾಗುತ್ತದೆ. ಹಾಗಾಗಿ ಅಪ್ರಸಿದ್ಧವಾದ ಉಳಿದ ಶಾಖೆಗಳಲ್ಲಿ ವಿಷ್ಣುವನ್ನು ಬಿಟ್ಟು ಉಳಿದವರು ಜಗತ್ಕಾರಣತ್ವೇನ ಪ್ರತಿಪಾದ್ಯರಾಗಲಿ.

**ಸೂ.ರ.:– न च ता न सन्ति । तासामानन्त्येनेयत्ताऽऽनिश्चयादिति प्राप्ते सूत्रकृदाह–**

**ಅನು.:–** "ಪ್ರಸಿದ್ಧವಾದ ಶಾಖೆಗಳಲ್ಲಿ ವಿಷ್ಣು ಪ್ರತಿಪಾದ್ಯನಾಗಲಿ. ಉಳಿದ ಅಪ್ರಸಿದ್ಧ ಶಾಖೆಗಳಲ್ಲಿ ಉಳಿದವರು ಪ್ರತಿಪಾದ್ಯರಾಗಲಿ" ಎಂದು ಹೇಗೆ ಹೇಳುತ್ತೀರಿ? ಯಾಕೆಂದರೆ-ಉಳಿದ ಅಪ್ರಸಿದ್ಧವಾದ ಅಂತಹ ಶಾಖೆಗಳೇ ಇಲ್ಲವಲ್ಲ? ಎಂದು ಪ್ರಶ್ನೆ ಬಂದರೆ, ಅದು ಸರಿಯಲ್ಲ.

ವೇದಗಳು ಅನಂತವಾಗಿರುವುದರಿಂದ ಅದಕ್ಕೆ ಪರಿಮಿತಿ (ಸೀಮೆ) ಇರುವುದಿಲ್ಲ. ಹೀಗಾಗಿ ಅಪ್ರಸಿದ್ಧವಾದ ಶಾಖೆಗಳೂ ಸಾಕಷ್ಟು ಇರಬಹುದಾಗಿದೆ. ಆದ್ದರಿಂದ ಪ್ರಸಿದ್ಧವಾದ ಶಾಖೆಗಳಲ್ಲಿ ವಿಷ್ಣು ಪ್ರತಿಪಾದ್ಯನಾದರೂ, ಅಪ್ರಸಿದ್ಧವಾದ ಶಾಖೆಗಳಲ್ಲಿ ಉಳಿದವರು ಜಗತ್ಕಾರಣತ್ವೇನ ಪ್ರತಿಪಾದ್ಯರಾಗಲಿ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ :-

## ॐ गतिसामान्यात् ॐ (१.१.१०)

**ಸೂತ್ರಾರ್ಥ :-** *ಗತೇಃ* = ನಾನಾಶಾಖೆಗಳಿಂದ ಜನ್ಯವಾಗುವ ಜ್ಞಾನಕ್ಕೆ ಸಾಮಾನ್ಯಾತ್ = ಏಕರೂಪತ್ವವು ಪ್ರುತವಾಗುತ್ತಿರುವುದರಿಂದ ವಿಷ್ಣುವಿನಿಂದ ಭಿನ್ನರಾದ ಉಳಿದವರು ಜಗತ್ಕಾರಣತ್ವೇನ ಬೇರೆ ಶಾಖೆಗಳಲ್ಲಿ ಪ್ರತಿಪಾದ್ಯರಾಗಿದ್ದಾರೆ ಎನ್ನುವುದು ಸರಿಯಲ್ಲ.

### ಸಮಾಧಾನ

**ಸೂ.ರ.:–** एवं च सर्वे वेदा इति पैंगिश्रुत्या सर्वे वेदा इतिहासाश्च विपयकृतो वा प्रकारकृतो वा विरोधाभावेन ज्ञानरूपमेकमेव ब्रह्मस्वरूपं ज्ञापयन्ति । एवं सर्वशाखोत्पाद्यज्ञानस्यैकविधत्वोक्तेर्न कासुचिच्छाखास्व-न्यथोक्तेश्च विष्णुरेव कारणत्वेन सर्वशाखासु प्रतिपाद्य इति फलितम् ।

**ಅನು.:–**

सर्वे वेदा युक्तयः सुप्रमाणा ब्राह्मं ज्ञानं परमं त्वेकमेव ।
प्रकाशयन्ते न विरोधः कुतश्चिद्वेदेपु सर्वेपु तथेतिहासे ॥

ಎಂಬುದಾಗಿ ಪೈಂಗಿಶ್ರುತಿ ಹೇಳುವಂತೆ ಎಲ್ಲ ವೇದಗಳು, ಇತಿಹಾಸಗಳು ಜ್ಞಾನರೂಪ-ವಾದ ಬ್ರಹ್ಮಸ್ವರೂಪ ಒಂದನ್ನೇ ತಿಳಿಸುತ್ತವೆ. ಹೀಗಾಗಿ ಈ ರೀತಿಯಾಗಿ ಪ್ರಸಿದ್ಧವಾದ ಶಾಖೆಗಳಿರಬಹುದು, ಅಪ್ರಸಿದ್ಧವಾದ ಶಾಖೆಗಳಿರಬಹುದು ಎಲ್ಲ ಶಾಖೆಗಳಿಂದಲೂ ಹುಟ್ಟುವ ಜ್ಞಾನಕ್ಕೆ ಏಕವಿಧತ್ವವನ್ನು ಹೇಳಿದ್ದರಿಂದ ಮತ್ತು ಕೆಲವು ಶಾಖೆಗಳಲ್ಲಿ ವಿಪರೀತವಾಗಿ ಹೇಳಿಲ್ಲವಾದ್ದರಿಂದಲೂ (ವಿಷ್ಣು ಬಿಟ್ಟು ಉಳಿದವರಿಗೆ ಜಗತ್ಕಾರಣತ್ವೇನ ಪ್ರತಿಪಾದ್ಯತ್ವವನ್ನು ಬೇರೆ ಶಾಖೆಗಳಲ್ಲಿ ಹೇಳಿಲ್ಲವಾದ್ದರಿಂದಲೂ) ವಿಷ್ಣುವೇ ಜಗತ್ಕಾರಣತ್ವೇನ ಎಲ್ಲ ಶಾಖೆಗಳಲ್ಲಿಯೂ ಪ್ರತಿಪಾದ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ - 11

**ಸಂಗತಿ**

**ಸೂ.ರ.:– इतश्च निर्गुणं ब्रह्म वाच्यमिति सिंहावलोकनन्यायेनाह सूत्रकृत् ।**

**ಅನು.:–** ಮತ್ತೊಂದು ಕಾರಣದಿಂದಲೂ ನಿರ್ಗುಣನಾದ ವಿಷ್ಣು ವಾಚ್ಯನೇ ಆಗಿದ್ದಾನೆ ಎಂಬುದನ್ನು ಸಿಂಹಾವಲೋಕನ ನ್ಯಾಯದಿಂದ ಸೂತ್ರಕಾರರು ಸಮರ್ಥಿಸುತ್ತಾರೆ :-

**ॐ श्रुतत्वाच ॐ (१.१.११)**

**ಸೂತ್ರಾರ್ಥ :-** ಶ್ರುತತ್ವಾಚ್ಚ = ಏಕೋ ದೇವಃ ಎಂಬ ಶ್ರುತಿಯಲ್ಲಿ ಪ್ರತಿಪಾದ್ಯ-ನಾದುದರಿಂದಲೂ ಬ್ರಹ್ಮನನ್ನು ಅವಾಚ್ಯ (ಶಬ್ದಾವಾಚ್ಯನಲ್ಲ) ಎನ್ನಲು ಬರುವುದಿಲ್ಲ. ವಾಚ್ಯನೇ ಆಗಿದ್ದಾನೆ.

**ಸೂ.ರ.:– एवं चैको देवः सर्वभूतेष्विति श्वेताश्वतरश्रुतौ सत्त्वादि-गुणबन्धविधुरस्य निर्गुणस्य वाच्यत्वोक्तेः । अवाच्यस्य पदार्थस्य न श्रुतिपदेनोक्तत्वात् । अवाच्यस्य ब्रह्मणो लक्ष्यत्वकल्पनस्यान्याय्यत्वात् । तस्य सर्वशब्दवाच्यतयैव परेणाङ्गीकृतत्वात् ।**

**ಅನು.:–**

एको देवः सर्वभूतेषु गूढः सर्वव्यापी सर्वभूतान्तरात्मा ।
कर्माध्यक्षः सर्वभूताधिवासः साक्षी चेता केवलो निर्गुणश्च ॥

**ಅನು.:–** ಎಂಬುದಾಗಿ ಶ್ವೇತಾಶ್ವತರ ಶ್ರುತಿಯಲ್ಲಿ ನಿರ್ಗುಣನಾದ (ಸತ್ವಾದಿಗುಣ-ಬಂಧ ವಿಧುರನಾದ) ಬ್ರಹ್ಮನಿಗೆ ವಾಚ್ಯತ್ವವನ್ನು ಹೇಳಲಾಗಿದೆ. ಬ್ರಹ್ಮನು ಅವಾಚ್ಯನಾಗಿದ್ದರೆ, ಅವಾಚ್ಯವಾದ ವಸ್ತುವಿಗೆ ಶ್ರುತಿಪ್ರತಿಪಾದ್ಯತ್ವವು ಕೂಡದ ಕಾರಣ ಬ್ರಹ್ಮನು ಶ್ರುತಿಪ್ರತಿಪಾದ್ಯ-ನಾಗಬಾರದಿತ್ತು. ಈಗಲಾದರೋ ಶ್ರುತಿಪ್ರತಿಪಾದ್ಯನಾಗಿದ್ದಾನೆ ಎಂದಮೇಲೆ ಅವನು ಅವಾಚ್ಯನಾಗಲು ಸಾಧ್ಯವಿಲ್ಲ, ವಾಚ್ಯನೇ ಆಗಿದ್ದಾನೆ.

ಬ್ರಹ್ಮನು ಸರ್ವಥಾ ಅವಾಚ್ಯನೇ ಆಗಿದ್ದಾನೆ ಎಂದು ಹೇಳುವುದಿಲ್ಲ, ಪರಂತು ಎಲ್ಲ ಶಬ್ದಗಳಿಂದ ಮುಖ್ಯವೃತ್ತಿಯಿಂದ ವಾಚ್ಯನಾಗದಿದ್ದರೂ ಲಕ್ಷಣಯಾ (ಲಕ್ಷಣಾವೃತ್ತಿಯಿಂದ) ವಾಚ್ಯನಾಗಿದ್ದಾನೆ ಎಂದು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ.

''ಲಕ್ಷಣಾ ಶಕ್ಯಸಂಬಂಧಃ''

ಎಂದು ಹೇಳಿದ ಪ್ರಕಾರ ಒಂದು ಶಬ್ದದಿಂದ ಒಂದು ವಸ್ತು ಶಕ್ತಿವೃತ್ತಿಯಿಂದ ಪ್ರತಿಪಾದ್ಯವಾಗಿದ್ದು ಅದರ (ಶಕ್ಯದ) ಸಂಬಂಧ ಎಲ್ಲಿ ಇರುತ್ತದೆ ಅಲ್ಲಿ ಆ ಶಬ್ದಕ್ಕೆ ಲಕ್ಷಣಾ ಮಾಡಬಹುದಾಗಿದೆ. ಹೀಗಾಗಿ ಯಾವುದೇ ವಸ್ತು ಒಂದು ಶಬ್ದದಿಂದ ಲಕ್ಷಣಯಾ ಪ್ರತಿಪಾದ್ಯವಾಗಬೇಕಾದರೆ ಅದು ಬೇರೆ ಯಾವುದಾದರೊಂದು ಶಬ್ದದಿಂದ ಮುಖ್ಯವೃತ್ತಿ-ಯಿಂದ ವಾಚ್ಯವಾಗಿರಲೇಬೇಕು. ಆದರೆ ಪ್ರಕೃತದಲ್ಲಿ ಬ್ರಹ್ಮನು ಸರ್ವಶಬ್ದಗಳಿಂದಲೂ ಅವಾಚ್ಯನಾಗಿದ್ದಾನೆ ಎಂದು ಹೇಳುವುದಾದರೆ ಅವನಲ್ಲಿ ಯಾವ ಶಬ್ದಕ್ಕೂ ಲಕ್ಷಣಾ ಮಾಡಲು ಬರುವುದೇ ಇಲ್ಲ. ಆದ್ದರಿಂದ ಅವಾಚ್ಯನಾದ ಬ್ರಹ್ಮನಿಗೆ ಲಕ್ಷ್ಯತ್ವವನ್ನು (ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯತ್ವವನ್ನು) ಹೇಳುವುದೂ ನ್ಯಾಯಯುತವಾಗುವುದಿಲ್ಲ.

ಅಷ್ಟೇ ಅಲ್ಲದೇ ನಿರ್ಗುಣನಾದ ಆ ಬ್ರಹ್ಮನು ಸರ್ವಶಬ್ದವಾಚ್ಯನೇ ಆಗಿದ್ದಾನೆ ಎಂಬುದಾಗಿಯೇ ಪರಕೀಯರೂ ಒಪ್ಪಿದ್ದಾರೆ. ಬ್ರಹ್ಮನಿಗೆ ಅವಾಚ್ಯತ್ವವನ್ನು ಪರರೂ ಒಪ್ಪಿಲ್ಲ.

**ಸೂ.ರ.:– ततश्चावाच्यत्वरूपबाधकाभावादुपक्रमादिलिङ्गैर्विचारे क्रियमाणे तस्यैव कारणत्वावगतेर्गतिसामान्याच्च कारणत्वं तस्यैवेति सिद्धम् ।**

**ಅನು.:–** ಆದ್ದರಿಂದ ಬ್ರಹ್ಮನಿಗೆ ಅವಾಚ್ಯತ್ವರೂಪವಾದ ಬಾಧಕ ಇಲ್ಲದಿರುವುದರಿಂದ, ಉಪಕ್ರಮಾದಿಲಿಂಗಗಳಿಂದ ವಿಚಾರ (ಮಾಡಲಾಗಿ) ಮಾಡಿದರೆ ನಿರ್ಗುಣನಾದ ವಿಷ್ಣುವಿಗೇ ಜಗತ್ಕಾರಣತ್ವವು ತಿಳಿಯುವುದರಿಂದ, ಎಲ್ಲ ಶಾಖೆಗಳಿಂದ ಹುಟ್ಟುವ ಜ್ಞಾನಕ್ಕೆ ಏಕರೂಪತ್ವವೂ ಶ್ರುತವಾಗುತ್ತಿರುವುದರಿಂದ, ದ್ವಿತೀಯ ಸೂತ್ರೋಕ್ತವಾದ ಜಗತ್ಕಾರಣತ್ವ ಲಕ್ಷಣವು ನಿರ್ಗುಣನಾದ ವಿಷ್ಣುವಿಗೇ ಇದೆ ಉಳಿದವರಿಗೆ ಇಲ್ಲ ಎಂಬುದಾಗಿ ಸ್ಪಷ್ಟವಾಗಿ ಸಿದ್ಧವಾಗುತ್ತದೆ.

ಈಕ್ಷತ್ಯಧಿಕರಣವು ಸಮಾಪ್ತವಾಯಿತು.

ಅಧಿಕರಣ - 6

# ಆನಂದಮಯಾಧಿಕರಣ

## ಸಂಗತಿ

**ಸೂ.ರ.:- अत्र लोकतोऽन्यत्र प्रसिद्धानन्दमयशब्दोपलक्षितगुणि-वाचिशब्दानां आनन्दादिगुणवाचिशब्दानां च ब्रह्मणि समन्वयः क्रियते ।**

**ಅನು.:-** ಲೋಕತಃ ಅನ್ಯತ್ರ ಪ್ರಸಿದ್ಧವಾದ ಆನಂದಮಯಶಬ್ದದ ಸಮನ್ವಯವನ್ನು ಹಾಗೂ ತದುಪಲಕ್ಷಣತಯಾ ಅನೇಕ ಗುಣಿವಾಚಕಶಬ್ದಗಳ ಸಮನ್ವಯವನ್ನು ಮತ್ತು ಆನಂದ ಮೊದಲಾದ ಗುಣವಾಚಕಶಬ್ದಗಳ ಸಮನ್ವಯವನ್ನೂ ಸಹ ಆರನೆಯ ಈ ಆನಂದಮಯಾಧಿಕರಣದಲ್ಲಿ ಸಮರ್ಥಿಸಲಾಗುತ್ತದೆ.

## ಅಧಿಕರಣ - ಅಂತರಂಗ

ಅಥಾತೋ ಬ್ರಹ್ಮಜಿಜ್ಞಾಸಾ ಎಂಬುದಾಗಿ ಯಾವ ಬ್ರಹ್ಮನ ಜಿಜ್ಞಾಸೆಗೆ ಕರ್ತವ್ಯತ್ವವನ್ನು ಸಮರ್ಥಿಸಲಾಗಿದೆ ಆ ಬ್ರಹ್ಮನಾದರೋ

''ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾಽನಂದಮಯಃ । ತೇನೈಷ ಪೂರ್ಣಃ। ... ಆನಂದ ಆತ್ಮಾ। ಬ್ರಹ್ಮಪುಚ್ಛಂ ಪ್ರತಿಷ್ಠಾ।'' (ತೈ.ಉ. 2-5-2)

ಎಂಬುದಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಆನಂದಮಯನಾದ ವ್ಯಕ್ತಿಯ ಪುಚ್ಛರೂಪ-ವಾದ ಅವಯವರೂಪನಾಗಿ ಶ್ರುತನಾಗುತ್ತಿದ್ದಾನೆ. ಅರ್ಥಾತ್ ಬ್ರಹ್ಮನನ್ನು ಆನಂದಮಯ-ನಾದ ವ್ಯಕ್ತಿಯ (ಪುಚ್ಛ) ಅವಯವ ಎಂದು ಕರೆದಿದೆ ಶ್ರುತಿ.

''ನ ಹ್ಯವಯವಿನಂ ವಿನಾ ಅವಯವಮಾತ್ರಸ್ಯ ಜ್ಞೇಯತಾ'' (ಬ್ರಹ್ಮಸೂತ್ರಭಾಷ್ಯ)

ಅವಯವಿಯಾಗಿರುವ ಆನಂದಮಯ ವ್ಯಕ್ತಿ ಅವನು ಜ್ಞೇಯನಾಗದೇ ಕೇವಲ ಅವನ ಅವಯವವಾಗಿರುವ ಬ್ರಹ್ಮನಿಗೆ ಜ್ಞೇಯತ್ವ ಕೂಡುವುದಿಲ್ಲ. ಹೀಗಾಗಿ ಬ್ರಹ್ಮನು ಜ್ಞೇಯ-ನಾಗುವಂತೆ ಆನಂದಮಯನಾದ ವ್ಯಕ್ತಿಯೂ ಜ್ಞೇಯನೇ ಆಗಬೇಕು. ಹಾಗಾಗಬೇಕಾದರೆ ಬ್ರಹ್ಮನೇ ಆನಂದಮಯನಾದ ವ್ಯಕ್ತಿ ಆಗಬೇಕು. ಅಂದಾಗ ಮಾತ್ರ ಅದು ಉಪಪನ್ನ.

ಆ ಹಿನ್ನೆಲೆಯಲ್ಲಿ ಆರನೆಯ ಅಧಿಕರಣವಾದ ಈ ಆನಂದಮಯಾಧಿಕರಣದಲ್ಲಿ ''ಆನಂದಮಯನಾದ ವ್ಯಕ್ತಿ ಬ್ರಹ್ಮನೇ'' ಎಂದು ಸಮರ್ಥಿಸುತ್ತಾರೆ ಸೂತ್ರಕಾರರು.

ಆನಂದಮಯನಾದ ವ್ಯಕ್ತಿ ವಿಷ್ಣುವೇ ಏಕೆ ಆಗಬೇಕು? ಚತುರ್ಮುಖಬ್ರಹ್ಮ ಆಗಬಹುದು, ರುದ್ರದೇವರು ಆಗಬಹುದು, ಸೂರ್ಯ ಆಗಬಹುದು ಇತ್ಯಾದಿಯಾಗಿ ದೀರ್ಘವಾಗಿ ಪೂರ್ವಪಕ್ಷ ಮಾಡಿಕೊಳ್ಳುತ್ತಾರೆ.

## ಪೂರ್ವಪಕ್ಷ

**ಸೂ.ರ.:– नन्वानन्दमयश्चतुर्मुखावभिन्नौ । नामसांकर्यात् । विद्यते खलु चतुर्मुखनिष्ठो ब्रह्मशब्द आनन्दमये । आनन्दमयमधिकृत्यास्ति ब्रह्मेति (तै.उ.२-३-१) ब्रह्मशब्दश्रवणात् । आनंदमयसमानार्थकशतानंदनाम च हिरण्यगर्भे वर्तते ।**

**ಅನು.:– ಆನಂದಮಯ - ಚತುರ್ಮುಖ**

ಅ) ಆನಂದಮಯನಾದ ವ್ಯಕ್ತಿ ಚತುರ್ಮುಖ ಬ್ರಹ್ಮನೇ ಆಗಿದ್ದಾನೆ. ಯಾಕೆ? ನಾಮಸಾಂಕರ್ಯ ಇರುವುದರಿಂದ. ಆನಂದಮಯವ್ಯಕ್ತಿಯನ್ನು ಹೇಳುವಾಗ "ಅಸ್ತಿ ಬ್ರಹ್ಮೇತಿ ಚೇದ್ವೇದ" ಎಂಬುದಾಗಿ ಚತುರ್ಮುಖನನ್ನು ಹೇಳಿಕೊಡುವ ಬ್ರಹ್ಮಶಬ್ದವು ಶ್ರುತವಾಗುತ್ತಿದೆ.

ಆ) ಬ್ರಹ್ಮಶಬ್ದವು ಚತುರ್ಮುಖನನ್ನು ಬಿಟ್ಟು ಜೀವಾದಿಗಳಲ್ಲಿಯೂ ಪ್ರವೃತ್ತವಾಗು-ವುದರಿಂದ ಬ್ರಹ್ಮಶಬ್ದ ಇದ್ದಮಾತ್ರಕ್ಕೆ ಚತುರ್ಮುಖನೇ ಆನಂದಮಯ ಎಂದು ಹೇಗೆ ನಿಶ್ಚಯಿಸುತ್ತೀರಿ? ಎಂದರೆ, ಕೇವಲ ಬ್ರಹ್ಮಶಬ್ದದಿಂದಾಗಿ ನಾವು ನಿಶ್ಚಯ ಮಾಡುತ್ತಿಲ್ಲ. ಕಿಂತು - ಆನಂದಮಯಶಬ್ದದ ಅರ್ಥವನ್ನೇ ತಿಳಿಸುವ ಶತಾನಂದ ಎಂಬ ಶಬ್ದವೂ ಆನಂದಮಯ-ನಾದ ವ್ಯಕ್ತಿಯಲ್ಲಿ ಶ್ರುತವಾಗುತ್ತಿದೆ. ಆ ಶತಾನಂದ ಎಂಬ ನಾಮವಾದರೋ ಹಿರಣ್ಯಗರ್ಭ-ನಿಗೆ ವಾಚಕವಾಗಿರುವುದರಿಂದ ಆನಂದಮಯನಾದ ವ್ಯಕ್ತಿ ಚತುರ್ಮುಖನೇ ಆಗುತ್ತಾನೆ.

**ಆನಂದಮಯ - ರುದ್ರ**

**ಸೂ.ರ.:– रुद्रो वाऽनन्दमयः । यश्चासावादित्य (तै.उ.२-८-५) इत्यानन्दमयस्य सूर्ये प्रोक्तत्वेन सूर्यान्तर्गतत्वस्य च रुद्रलिङ्गत्वात् ।**

**ಅನು.:–** ಆನಂದಮಯನಾದ ವ್ಯಕ್ತಿ ರುದ್ರದೇವರು ಆಗಬಹುದು. ಯಾಕೆ? "ಯಶ್ಚಾಸಾ ಆದಿತ್ಯೆ" ಎಂಬುದಾಗಿ ಈ ಆನಂದಮಯನಾದ ವ್ಯಕ್ತಿ ಸೂರ್ಯನಲ್ಲಿದ್ದಾನೆ ಎಂದು ಹೇಳಿದ್ದಾರೆ. ಸೂರ್ಯಾಂತರ್ಗತತ್ವ ಎನ್ನುವುದು ರುದ್ರದೇವರ ಲಿಂಗವಾಗಿದೆ.

सूर्यो जलं मही वह्निर्वायुराकाशमेव च ।
दीक्षितो ब्राह्मणः सोम इत्येतास्तनवः क्रमात् ॥

ಎಂಬುದಾಗಿ ವಿಷ್ಣುಪುರಾಣ ತಿಳಿಸುವಂತೆ ರುದ್ರದೇವರು ಸೂರ್ಯಾದಿ ಅಷ್ಟಪ್ರತಿಮೆಗಳುಳ್ಳವರಾಗಿದ್ದಾರೆ. ಆದ್ದರಿಂದ ಆನಂದಮಯನಾದ ವ್ಯಕ್ತಿ ರುದ್ರದೇವರು.

**ಆನಂದಮಯ - ಇಂದ್ರ/ಬೃಹಸ್ಪತಿಗಳು**

सूर्याधिष्ठातृत्वस्येन्द्रलिङ्गत्वात् इन्द्रो वा ।

"ಯಶ್ಚಾಸೌ ಆದಿತ್ಯೇ" ಎಂಬುದಾಗಿ ಹೇಳಿದ ಸೂರ್ಯಾಧಿಷ್ಠಾತೃತ್ವ ಎಂಬ ಲಿಂಗವು ಇಂದ್ರ-ಬೃಹಸ್ಪತಿಗಳ ಲಿಂಗವಾದ್ದರಿಂದ ಆನಂದಮಯನಾದ ವ್ಯಕ್ತಿ ಇಂದ್ರ-ಬೃಹಸ್ಪತಿಗಳೂ ಆಗಬಹುದು.

**ಆನಂದಮಯ ಚಿತ್-ಅಚಿತ್‌ಪ್ರಕೃತಿ**

ಸೂ.ರ.:– सोऽकामयत (तै.उ. २-६-२) इति स्वाभिमन्यमानस्य बहुभावकामित्वात् चित्प्रकृतिर्वा । बहुभावादचित्प्रकृतिर्वा ।

**ಅನು.:–** "ಸೋऽಕಾಮಯತ ಬಹು ಸ್ಯಾಮ್" ಎಂಬುದಾಗಿ ಆನಂದಮಯನಾದ ವ್ಯಕ್ತಿಯ ವಿಷಯದಲ್ಲಿ ಬಹುಭಾವವನ್ನು ಹೇಳುತ್ತಿದ್ದಾರೆ. ಆ ಬಹುಭಾವಕ್ಕೆ ಚಿತ್ಪ್ರಕೃತಿಯೇ (ಲಕ್ಷ್ಮೀದೇವಿಯೇ) ಅಭಿಮಾನಿನಿಯಾದ್ದರಿಂದ ಆನಂದಮಯ ಚಿತ್ಪ್ರಕೃತಿ ಎಂದು ಹೇಳಬಹುದು.

ಅಥವಾ ಬಹುಭಾವವು ಅಚಿತ್ಪ್ರಕೃತಿಯ ಧರ್ಮವಾದ್ದರಿಂದ, ಆನಂದಮಯ-ನಾದವನಿಗೆ ಬಹುಭಾವವನ್ನು ಹೇಳುತ್ತಿರುವುದರಿಂದ ಆನಂದಮಯ ಅಚಿತ್ಪ್ರಕೃತಿ ಆಗಬಹುದು.

**ಆನಂದಮಯ - ಜೀವರು**

ಸೂ.ರ.:– तत्तद्देहगतसर्वजीवा वा । अन्नरसमय (तै.उ. २-१-३) इत्युक्तजीवप्रायपाठात् । अन्नमयादीनामन्नादिविकाराभिमानित्वेन जीवत्वस्य वक्तव्यत्वात् । न च ब्रह्मशब्दो बाधकः । ब्रह्माणि जीवाः सर्वेऽपीति जीवेऽपि ब्रह्मशब्दश्रवणात् । इति प्राप्ते समादधत्सूत्रमाह ।

**ಅನು.:-** ಅಥವಾ ಆನಂದಮಯ ಎಂದರೆ ಆ ಆ ದೇಹದಲ್ಲಿರುವ ಜೀವರು ಎಂದೂ ಆಗಬಹುದು. ಅನ್ನರಸಮಯಃ ಪ್ರಾಣಮಯಃ ಎಂಬುದಾಗಿ ಹೇಳಿದ ಅನ್ನಮಯಾದಿಗಳು ಅನ್ನಾದಿ ವಿಕಾರಗಳಿಗೆ ಅಭಿಮಾನಿಗಳಾದ್ದರಿಂದ ಜೀವರೇ ಆಗಿದ್ದಾರೆ. ಅಂತಹ ಜೀವರು ಪ್ರಾಯಪಠಿತರಾದ್ದರಿಂದ ಆನಂದಮಯ ಎಂದರೆ ಜೀವರೇ ಆಗಿದ್ದಾರೆ.

ಆನಂದಮಯರಾದವರು ಜೀವರು ಎಂದು ಹೇಳಿದರೆ, ಆ ಆನಂದಮಯನಾದ ವ್ಯಕ್ತಿಯ ವಿಷಯದಲ್ಲಿ ಬ್ರಹ್ಮಶಬ್ದವು ಶ್ರುತವಾಗುತ್ತಿದೆ. ಬ್ರಹ್ಮಶಬ್ದವಾದರೋ ಜೀವನಿಗೆ ವಾಚಕವಾಗಿಲ್ಲವಾದ್ದರಿಂದ ಬ್ರಹ್ಮಶಬ್ದವೇ ಬಾಧಕವಾಗುತ್ತದೆಯಲ್ಲವೇ? ಎಂದು ಶಂಕೆ ಬೇಡ. 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಎಂಬುದಾಗಿ ಜೀವನಲ್ಲಿಯೂ ಬ್ರಹ್ಮಶಬ್ದಪ್ರಯೋಗ ಕಂಡಿದೆ. ಆದ್ದರಿಂದ ಆನಂದಮಯ ಎಂದರೆ ಜೀವರನ್ನು ತೆಗೆದುಕೊಂಡರೆ ಬ್ರಹ್ಮಶಬ್ದವು ಬಾಧಕವಾಗುವುದಿಲ್ಲ.

ಹಾಗಾದರೆ ಆನಂದಮಯನಾದ ವ್ಯಕ್ತಿ ಎಂದರೆ ಚತುರ್ಮುಖಬ್ರಹ್ಮದೇವರು ಆಗಬಹುದು, ರುದ್ರ ಆಗಬಹುದು, ಇಂದ್ರ-ಬೃಹಸ್ಪತಿಗಳು ಆಗಬಹುದು, ಚಿತ್-ಅಚಿತ್ ಪ್ರಕೃತಿಗಳು ಆಗಬಹುದು, ಜೀವರು ಆಗಬಹುದು ಎಂಬುದಾಗಿ ಪೂರ್ವಪಕ್ಷ ಬಂದರೆ ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ आनन्दमयोऽभ्यासात् ॐ (१.१.१२)

**ಸೂತ್ರಾರ್ಥ :-** ಆನಂದಮಯಃ = ಆನಂದಮಯಾದಿಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗಿದ್ದಾನೆ. ಹೊರತು ಪ್ರಕೃತ್ಯಾದಿಗಳಲ್ಲ. ಯಾಕೆ? ಅಭ್ಯಾಸಾತ್ = ಪ್ರತಿಯೊಂದು ಪ್ರಕರಣದಲ್ಲಿಯೂ ಸಹ ಆನಂದಮಯನಾದ ವ್ಯಕ್ತಿಯ ವಿಷಯದಲ್ಲಿ ಬ್ರಹ್ಮಶಬ್ದವು ಶ್ರುತವಾಗುತ್ತಿರುವುದರಿಂದ.

### ಸಿದ್ಧಾಂತ

**ಸೂ.ರ.:-** एवं च ''असन्नेव स भवति । असद्ब्रह्मेति चेद्वेद । अस्ति ब्रह्मेति चेद्वेद'' इत्यादिश्रुतिस्मृतिषु ब्रह्मशब्दस्य विष्णावेव परममुख्यत्वस्योक्तत्वात् । आनन्दमयशब्दवाच्योऽपि विष्णुरेवेति सिद्धम् ।

ಆನಂದಮಯನಾದ ವ್ಯಕ್ತಿಯ ವಿಷಯದಲ್ಲಿ ಪ್ರತಿಯೊಂದು ಪ್ರಕರಣದಲ್ಲಿಯೂ ಸಹ ಬ್ರಹ್ಮಶಬ್ದವು ಶ್ರುತವಾಗುತ್ತಿರುವುದರಿಂದ ಆನಂದಮಯನಾದ ವ್ಯಕ್ತಿ ವಿಷ್ಣುವೇ ಆಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ - 13

## ಆಕ್ಷೇಪ

**ಸೂ.ರ.:- नन्वत्र विकारार्थकमयट्शब्दप्रयोगात् । जडप्रकृते-र्विकारात्मक त्वाचेतनप्रकृत्यादीनां च विकाराभिमानित्वात् । प्रकृत्यादीनामेवानन्दमयादिशब्दवाच्यत्वं स्यान्न तु परमात्मनः । तस्याविकारित्वादनभिमानित्वादिति प्राप्ते तन्निरासार्थमुक्तमाक्षिप्य समादधत्सूत्रमाह ।**

**ಅನು.:-** ಅನ್ಯೋಽಂತರ ಆತ್ಮಾಽನಂದಮಯಃ ಎಂಬುದಾಗಿ ಶ್ರುತನಾಗುತ್ತಿರುವ ಆನಂದಮಯನಾದ ವ್ಯಕ್ತಿ ಪ್ರಕೃತ್ಯಾದಿಗಳು ಆಗಬೇಕೇ ಹೊರತು ಪರಮಾತ್ಮ ಆಗುವುದಿಲ್ಲ. ಏಕೆಂದರೆ - ಆನಂದಮಯಃ ಎನ್ನುವಲ್ಲಿ (ಮಯಟ್ ಶಬ್ದಕ್ಕೆ ವಿಕಾರ ಎಂದು ಅರ್ಥ) ವಿಕಾರ ಎಂಬ ಅರ್ಥವುಳ್ಳ ಮಯಟ್ ಶಬ್ದವನ್ನು ಪ್ರಯೋಗಿಸಲಾಗಿದೆ. ಹೀಗಾಗಿ ಆನಂದಮಯ ಎಂದರೆ ಆನಂದದ ವಿಕಾರಾತ್ಮಕನಾದವನು ಎಂದು ಅರ್ಥ ಬರುತ್ತದೆ. ಈ ಆನಂದದ ವಿಕಾರವಾದರೋ (ಜಡಪ್ರಕೃತಿಯು ವಿಕಾರಾತ್ಮಕವಾದದ್ದರಿಂದ) ಜಡಪ್ರಕೃತಿಗೆ ಹೇಳ-ಬಹುದಾಗಿದೆ. ಪರಮಾತ್ಮನು ವಿಕಾರಾತ್ಮಕನಾಗಿಲ್ಲ (ಪರಮಾತ್ಮನಿಗೆ ವಿಕಾರ ಎನ್ನುವುದು ಇಲ್ಲ). ಆ ಕಾರಣ ವಿಕಾರಾತ್ಮಕವಾಗಿರುವ ಜಡಪ್ರಕೃತಿಯೇ ಆನಂದಮಯಶಬ್ದವಾಚ್ಯವಾಗಿದೆ.

ಅಥವಾ ಮಯಟ್ ಶಬ್ದಕ್ಕೆ (ವಿಕಾರ ಎಂದು ಅಷ್ಟಕ್ಕೇ ನಿಲ್ಲಿಸದೇ) ವಿಕಾರಾಭಿಮಾನಿ ಎಂದು ಅರ್ಥ ವಿವಕ್ಷಿಸುತ್ತೇವೆ. ಹೀಗಾಗಿ ಆನಂದಮಯ ಎಂದರೆ ವಿಕಾರಾಭಿಮಾನಿ ಎಂದರ್ಥ. ಅಂತಹ ವಿಕಾರಾಭಿಮಾನಿನಿಯಾದವಳು (ಚಿತ್‌ಪ್ರಕೃತಿ) ಲಕ್ಷ್ಮೀದೇವಿ. ಪರಮಾತ್ಮನು ವಿಕಾರಾತ್ಮಕ ಹೇಗೆ ಅಲ್ಲವೋ ಅದರಂತೆ ವಿಕಾರಾಭಿಮಾನಿಯೂ ಆಗುವುದಿಲ್ಲ. ಆ ಕಾರಣ ವಿಕಾರಾಭಿಮಾನಿನಿಯಾದ (ಚಿತ್‌ಪ್ರಕೃತಿ) ಲಕ್ಷ್ಮೀದೇವಿಯೇ ಆನಂದಮಯ-ಶಬ್ದವಾಚ್ಯಳಾಗಿದ್ದಾಳೆ ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ:-

### ॐ विकारशब्दान्नेति चेन्न प्राचुर्यात् ॐ (१.१.१३)

**ಸೂತ್ರಾರ್ಥ :-** ವಿಕಾರಶಬ್ದಾತ್ = ವಿಕಾರ ಎಂಬ ಅರ್ಥವುಳ್ಳ ಮಯಟ್ ಶಬ್ದ ಇರುವುದರಿಂದ ನ ಇತಿ ಚೇತ್ = ಆನಂದಮಯಾದಿ ಶಬ್ದವಾಚ್ಯನಾದವನು ವಿಷ್ಣು ಅಲ್ಲ ಎಂದು ಶಂಕೆ ಬಂದರೆ, ನ = ಅದು ಸರಿಯಾದದ್ದಲ್ಲ. ಯಾಕೆ? ಪ್ರಾಚುರ್ಯಾತ್ = ಮಯಟ್ ಶಬ್ದವು ಪ್ರಾಚುರ್ಯಪದೋಕ್ತವಾದ ಪೂರ್ಣತ್ವ ಎಂಬ ಅರ್ಥವನ್ನು ತಿಳಿಸುತ್ತಿರುವುದರಿಂದ

## ಸಮಾಧಾನ

**ಸೂ.ರ.:– एवं च मयट्शब्दस्य प्रचुरानन्दत्वात् अन्नमयादीनामपि ब्रह्मत्वेन तद्गतमयटो विकारार्थकत्वाभावात् ।**

**ಅನು.:–** ಮಯಟ್‌ಶಬ್ದಕ್ಕೆ ವಿಕಾರ ಎಂದು ಅರ್ಥ ಇರುತ್ತಿದ್ದರೆ ಆಗ ಈ ರೀತಿ ಶಂಕಿಸ-ಬಹುದಾಗಿತ್ತು. ಆದರೆ ಪ್ರಕೃತದಲ್ಲಿ ಆನಂದಮಯಾದಿಶಬ್ದವಾಚ್ಯನಾಗಿರುವವನು ಬ್ರಹ್ಮನೇ ಆಗಿದ್ದರಿಂದ, ಅಂತಹ ಬ್ರಹ್ಮನ ವಿಷಯದಲ್ಲಿ ಇರುವ ಮಯಟ್‌ಶಬ್ದಕ್ಕೆ ವಿಕಾರ ಎಂಬ ಅರ್ಥವನ್ನು ಹೇಳಲು ಆಗುವುದಿಲ್ಲ. ಕಿಂತು ಪ್ರಾಚುರ್ಯ (ಪೂರ್ಣತ್ವ) ಎಂಬ ಅರ್ಥ ವಿವಕ್ಷಿತವಾಗಿದೆ. ಹೀಗಾಗಿ ಆನಂದಮಯ ಎಂದರೆ ಪ್ರಚುರವಾದ ಆನಂದ ಉಳ್ಳವನು (ಪೂರ್ಣವಾದ ಆನಂದ ಉಳ್ಳವನು) ಎಂದು ಅರ್ಥ ಬರುತ್ತದೆ. ಬ್ರಹ್ಮನು ಪ್ರಚುರವಾದ ಆನಂದ ಉಳ್ಳವನಾದ್ದರಿಂದ ಆನಂದಮಯ ಶಬ್ದವಾಚ್ಯನಾಗಬಹುದು.

**ಸೂ.ರ.:– न चान्नमयादिशब्दानामन्नमयादिप्राचुयार्थकत्वेऽल्पार्थता । अद्यतेऽत्ति चे(तै.उ.२-२-२)त्यादिना सर्वभूतोपजीव्यत्व सर्वात्तृत्वयोरेवान्नमयशब्दार्थत्वात् । उपजीव्यत्वमेवाद्यत्वमित्याशयात् ।**

**ಅನು.:–** ಆನಂದಮಯಶಬ್ದಕ್ಕೆ ಈ ರೀತಿ ಅರ್ಥ ಮಾಡುವುದು ಸರಿಯಾಗಬಹುದು. ಆದರೆ ಅನ್ನಮಯಾದಿ ಶಬ್ದಗಳಿಗೆ ಅನ್ನಮಯಾದಿಪ್ರಾಚುರ್ಯ ಎಂಬ ಅರ್ಥವನ್ನು ಹೇಳಿದರೆ ಅಲ್ಪವಾದ ಅರ್ಥವನ್ನು ಹೇಳಿದಂತೆ ಆಗುವುದಲ್ಲವೇ? ಎಂದರೆ ಅದು ಸರಿಯಲ್ಲ.

"ಅದ್ಯಂತೇಽತ್ತಿ ಚ ಭೂತಾನಿ" (ತೈ.ಉ. 2-2-2) ಇತ್ಯಾದಿ ಶ್ರುತಿಯು ಹೇಳುವಂತೆ (ಸರ್ವಭೂತೋಪಜೀವ್ಯತ್ವ ಎಂದರೆ ಸಮಭೂತಾದ್ಯತ್ವ ಎಂದು ಅಭಿಪ್ರಾಯ ಇರುವುದರಿಂದ) ಸರ್ವಭೂತೋಪಜೀವ್ಯತ್ವ-ಸರ್ವಭೂತಾದ್ಯತ್ವಗಳೇ ಅನ್ನಮಯ-ಶಬ್ದಾರ್ಥಗಳಾಗಿವೆ. ಆದ್ದರಿಂದ ಅಲ್ಪಾರ್ಥತಾಕ್ಕೆ ಅವಕಾಶವಿಲ್ಲ.

**ಸೂ.ರ.:– प्रायपठितमयटामर्थद्वयकल्पनानौचित्यात् आनन्दादिस्वरूपे हरौ प्रचुरप्रकाशो रविरितिवद्विशेषेण तथा व्यवहारस्योपपत्तेरानन्द-मयादिर्विष्णुरेवेति सिद्धम् ।**

**ಅನು.:–** ಅನ್ನಮಯ - ಆನಂದಮಯ ಮೊದಲಾದ ಮಯಟ್ ಶಬ್ದಗಳಿಗೆ

ಪ್ರಾಚುರ್ಯ ಎಂಬ ಅರ್ಥವನ್ನು ಹೇಳುವಂತೆ ವಿಕಾರ ಎಂಬ ಅರ್ಥವನ್ನೂ ಹೇಳಬಹುದಲ್ಲವೇ? ಎಂದರೆ ಅದು ಸರಿಯಲ್ಲ. ಏಕೆಂದರೆ ಮಯಟ್ ಶಬ್ದವು ಒಂದುಬಾರಿ ಶ್ರುತವಾಗಿದ್ದರೆ, ಎರಡುಬಾರಿ ಶ್ರುತವಾಗಿದ್ದರೆ ಎರಡೂ ಅರ್ಥಗಳನ್ನು ಮಾಡಬಹುದಿತ್ತು. ಆದರೆ ಮಯಟ್‌ಶಬ್ದವು ಒಂದುಬಾರಿ – ಎರಡುಬಾರಿ ಶ್ರುತವಾಗಿಲ್ಲ. ಕಿಂತು ಅನೇಕಬಾರಿ ಶ್ರುತವಾಗುತ್ತಿರುವ (ಪ್ರಾಯಪಠಿತವಾಗುವ) ಮಯಟ್‌ಶಬ್ದಗಳಿಗೆ ಎರಡು ಅರ್ಥಗಳನ್ನು ಕಲ್ಪಿಸುವುದು ಅನುಚಿತವಾಗುವುದರಿಂದ ಪ್ರಾಚುರ್ಯ (ಪೂರ್ಣತ್ವ) ಎಂಬ ಅರ್ಥವನ್ನೇ ಹೇಳಬೇಕು.

ಸೂರ್ಯನು ಪ್ರಕಾಶರೂಪನಾದರೂ ಸಹ 'ಪ್ರಚುರಪ್ರಕಾಶೋ ರವಿಃ' ಎಂದು ವ್ಯವಹಾರ ಮಾಡುವಂತೆ, ಆನಂದಾದಿಸ್ವರೂಪನಾದ ಹರಿಯ ವಿಷಯದಲ್ಲಿಯೂ ಸಹ 'ಆನಂದಮಯೋ (ಪ್ರಚುರಾನಂದೋ) ಹರಿಃ' ಎಂಬುದಾಗಿ ವಿಶೇಷವಾಗಿ ವ್ಯವಹಾರ ಮಾಡಲು ಬರುತ್ತದೆಯಾದ್ದರಿಂದ ಅನ್ನಮಯ – ಆನಂದಮಯಾದಿ ಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 14

**ಸೂ.ರ.:– आनन्दमयमात्रस्य विष्णुत्वे हेत्वन्तररूपं प्राचुर्यमेव मयडर्थ इत्यत्र च हेतुं प्रतिपादयत्सूत्रमुपन्यस्यति ।**

**ಅನು.:–** "ಬ್ರಹ್ಮಶಬ್ದದ ಅಭ್ಯಾಸ ಇರುವುದರಿಂದ ಆನಂದಮಯನಾದವನು ವಿಷ್ಣುವೇ" ಎಂಬ ವಿಷಯದಲ್ಲಿ ಮತ್ತು "ಆನಂದಮಯ ಎನ್ನುವಲ್ಲಿ ಮಯಟ್‌ಶಬ್ದಕ್ಕೆ ಪ್ರಾಚುರ್ಯ ಎಂಬ ಅರ್ಥವನ್ನೇ ಹೇಳಬೇಕು" ಎನ್ನುವ ವಿಷಯದಲ್ಲಿಯೂ ಸಹ ಮತ್ತೊಂದು ಹೇತವನ್ನೂ ಕೊಡುವ ಮೂಲಕ ಅದೇ ತತ್ವವನ್ನು ಸಮರ್ಥಿಸುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

**ॐ तद्धेतुव्यपदेशाच्च ॐ (१.१.१४)**

**ಸೂತ್ರಾರ್ಥ :-** ತದ್ಧೇತುವ್ಯಪದೇಶಾಚ್ಚ = (ತಸ್ಯ) ವಿಷ್ಣುತ್ವೇ ಆನಂದಮಯನಾದ ವ್ಯಕ್ತಿ ವಿಷ್ಣುವೇ ಆಗಿದ್ದಾನೆ ಎಂಬ ವಿಷಯದಲ್ಲಿ (ಹೇತೋಃ) ಲೋಕಚೇಷ್ಟಕತ್ವ ಎಂಬ ಹೇತುವು (ವ್ಯಪದೇಶಾಚ್ಚ) "ಕೋ ಹ್ಯೇವಾನ್ಯಾತ್" (ತೈ 2-7) ಎಂಬ ಶ್ರುತಿಯಲ್ಲಿ ಶ್ರುತವಾಗುತ್ತಿರುವುದರಿಂದಲೂ ಆನಂದಮಯನಾದವನು ವಿಷ್ಣುವೇ.

**ಸೂ.ರ.:– एवं च न केवलं ब्रह्मशब्दाभ्यासात् किन्त्वानन्दमयप्रकरणे**

**विष्णोरानन्दपूर्णत्वेनानन्दमयत्वे प्राचुर्यस्यैव मयडर्थत्वे च लोकचेष्टकत्वाख्यहेतूक्तेश्चानन्दपूर्णत्वेनैवानन्दमयशब्दवाच्यो विष्णुरेवेति सिद्धम् ।**

**ಅನು.:**– ಕೇವಲ ಬ್ರಹ್ಮಶಬ್ದದ ಅಭ್ಯಾಸ ಇರುವುದರಿಂದ ಆನಂದಮಯನಾದವನು ವಿಷ್ಣುವೇ ಎಂದಷ್ಟೇ ಅಲ್ಲ. ಕಿಂತು "ಆನಂದಮಯ ಪ್ರಕರಣದಲ್ಲಿ ಆನಂದಮಯ ಎನ್ನುವಲ್ಲಿನ ಮಯಟ್‌ಶಬ್ದಕ್ಕೆ ಪ್ರಾಚುರ್ಯ ಎಂದು ಅರ್ಥ ವಿವಕ್ಷಿಸಿ ವಿಷ್ಣುವು ಆನಂದಪೂರ್ಣನಾದದ್ದರಿಂದ ಆನಂದಮಯಶಬ್ದವಾಚ್ಯನಾಗಿದ್ದಾನೆ' ಎಂಬ ವಿಷಯದಲ್ಲಿ "ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್" (ತೈ.ಉ. 2-7).

ಎಂದು ಲೋಕಚೇಷ್ಟಕತ್ವ ಎಂಬ ಹೇತುವೂ ಉಕ್ತವಾದ್ದರಿಂದ, ಆನಂದಪೂರ್ಣನಾದ್ದರಿಂದ ವಿಷ್ಣುವೇ ಆನಂದಮಯಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 15

### ಆಕ್ಷೇಪ

**ಸೂ.ರ.:– ननु ब्रह्मशब्दस्यापरब्रह्मणि जीवेऽप्युपपत्तेः । तस्य परब्रह्मणि मुख्यत्वेऽपि विष्णोरानन्दमयावयवत्वोक्त्यादिना बाधकेनामुख्यार्थस्यैव ग्रहणोपपत्तेरिति प्राप्ते सूत्रमाह ॥**

**ಅನು.:**– "ಬ್ರಹ್ಮಶಬ್ದದ ಅಭ್ಯಾಸ ಇರುವುದರಿಂದ ಆನಂದಮಯನಾದವನು ವಿಷ್ಣುವೇ' ಎಂದು ಹೇಳುವುದು ಸರಿಯಲ್ಲ. ಯಾಕೆಂದರೆ – ಬ್ರಹ್ಮಶಬ್ದವು ಅಪರಬ್ರಹ್ಮನಾದ ಜೀವನಲ್ಲಿಯೂ (ಪ್ರಯೋಗಿಸಲ್ಪಡುತ್ತದೆ) ಕೂಡುತ್ತದೆ. ಆದ್ದರಿಂದ ಬ್ರಹ್ಮಶಬ್ದದಿಂದ ಜೀವನನ್ನೂ ತೆಗೆದುಕೊಳ್ಳಬಹುದಾಗಿದೆ.

ಬ್ರಹ್ಮಶಬ್ದವು ಜೀವನಲ್ಲಿ ಅಮುಖ್ಯವಾಗಿದೆ. ಪರಮಾತ್ಮನಲ್ಲಿ ಮುಖ್ಯವಾಗಿದೆ. ಆ ಕಾರಣ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥನಾದ ಬ್ರಹ್ಮನನ್ನೇ ತೆಗೆದುಕೊಳ್ಳಬೇಕಲ್ಲವೇ? ಎಂದರೆ, ಅದು ಸರಿಯಲ್ಲ. ಯಾಕೆಂದರೆ – ಪರಮಾತ್ಮ ಬ್ರಹ್ಮಶಬ್ದಮುಖ್ಯಾರ್ಥನಾದರೂ ಸಹ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಎಂಬುದಾಗಿ "ಆನಂದಮಯನಾದವನ ಪುಚ್ಛ ಎಂಬ ಅವಯವ ಆಗಿದ್ದಾನೆ ಬ್ರಹ್ಮ" ಎಂದು ವಿಷ್ಣುವಿಗೆ ಆನಂದಮಯಾವಯವತ್ವವನ್ನು ಹೇಳಿರುವುದರಿಂದ, (ಆನಂದಮಯಾವಯವತ್ವವು ವಿಷ್ಣುವಿಗೆ ಕೂಡುವುದಿಲ್ಲ. ಅದು ಜೀವನಿಗೇ ಕೂಡುತ್ತದೆ. ಆದ್ದರಿಂದ) ವಿಷ್ಣುವಿಗೆ ಆ ಆನಂದಮಯಾವಯವತ್ವ ಅನುಪಪತ್ತಿ ಎಂಬ ಬಾಧಕ ಇರುವುದರಿಂದ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥನಾದ ಜೀವನನ್ನೇ ತೆಗೆದುಕೊಳ್ಳಬೇಕು.

ಅಂದಮೇಲೆ ಆನಂದಮಯನಾದವನೂ ಜೀವನೇ ಆಗಬೇಕು ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ :-

## ॐ मान्त्रवर्णिकमेव च गीतये ॐ (१.१.१५)

**ಸೂತ್ರಾರ್ಥ** :- ಯತಃ = ಯಾವ ಕಾರಣ ಮಾಂತ್ರವರ್ಣಿಕಂ = "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ. 2-1) ಎಂಬ ಮಂತ್ರವರ್ಣದಲ್ಲಿ ಉಕ್ತನಾದ ಬ್ರಹ್ಮನು ಗೀಯತೇ = ಆನಂದಮಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಯೋ ಅತಃ = ಆದ್ದರಿಂದ ಏವ=ಆನಂದಮಯಾದಿಶಬ್ದವಾಚ್ಯಂ ಬ್ರಹ್ಮೈವ = ಆನಂದಮಯಾದಿ ಶಬ್ದವಾಚ್ಯನಾದವನು ಬ್ರಹ್ಮನೇ (ವಿಷ್ಣುವೇ) ಆಗಿದ್ದಾನೆ.

### ಸಮಾಧಾನ

**ಸೂ.ರ.:– एवं च सत्यज्ञानादिशब्दानां अन्नमयादिशब्दानां चानुसन्धाने सत्येकार्थत्वप्रतीतेः ।**

**ಅನು.:–** 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶಬ್ದಗಳಿಗೂ ಆನಂದಮಯಾದಿ ಶಬ್ದಗಳಿಗೂ ಅನುಸಂಧಾನ ಮಾಡಿ ನೋಡಲಾಗಿ ಏಕಾರ್ಥತ್ವವು ತೋರುತ್ತದೆ (ಎಲ್ಲ ಶಬ್ದಗಳಿಗೂ ವಾಚ್ಯವಾದ ಅರ್ಥ ಒಂದೇ ಎಂದು ತೋರುತ್ತದೆ). ಆದ್ದರಿಂದ ಸತ್ಯಜ್ಞಾನಾದಿಶಬ್ದಗಳಿಂದ ವಾಚ್ಯನಾದ ವಿಷ್ಣುವೇ ಆನಂದಮಯಾದಿಶಬ್ದಗಳಿಂದಲೂ ವಾಚ್ಯನಾಗಿದ್ದಾನೆ ಎಂದು ನಿಶ್ಚಿತವಾಗುತ್ತದೆ.

**ಸೂ.ರ.:– न चानन्दमयस्यैव ब्रह्मत्वे ब्रह्मणस्तत्पुच्छत्वोक्तिविरोधः । स शिरः स दक्षिण इति (चतुर्वेदशिखायां) श्रुत्याऽवयविन एवावयवत्वोक्तेः आनन्दमयादिशब्दवाच्यं ब्रह्मैवेति सिद्धम् ।**

**ಅನು.:–** ಆನಂದಮಯನಾದವನು ವಿಷ್ಣುವೇ ಎಂದು ಹೇಳಿದರೆ ಆನಂದಮಯಾ-ವಯವತ್ವವನ್ನು ಬ್ರಹ್ಮನಿಗೆ ಹೇಳಿರುವುದು ಬಾಧಕವಾಗುತ್ತದೆಯಲ್ಲವೇ? ಎಂದರೆ, ಅದರ ವಿರೋಧ ಬರುವುದಿಲ್ಲ.

"ಸ ಶಿರಃ ಸ ದಕ್ಷಿಣಃ ಪಕ್ಷಃ ಸ ಉತ್ತರಃ ಪಕ್ಷಃ ಸ ಆತ್ಮಾ ಸ ಪುಚ್ಛಮ್" ಎಂಬುದಾಗಿ ಚತುರ್ವೇದಶಿಖಾದಲ್ಲಿ ಅವಯವಿಯಾದ ಬ್ರಹ್ಮನಿಗೇ ಅವಯವತ್ವವನ್ನೂ ಹೇಳಿರುವುದರಿಂದ ಬ್ರಹ್ಮನಿಗೆ ಆನಂದಮಯಾವಯವತ್ವವೂ ಉಪಪನ್ನವಾಗುತ್ತದೆ. ಆದ್ದರಿಂದ ಆನಂದಮಯಾದಿಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

## ಸೂತ್ರ - 16

## ಆಕ್ಷೇಪ

**ಸೂ.ರ.:- नन्‌ ब्रह्मशब्दस्य साधारणत्वात्‌, तद्धेतुव्यपदेशस्य विष्णुनिष्ठतया स्पष्टमप्रतिभानात्‌ ।**

**ಅನು.:-** ಬ್ರಹ್ಮಶಬ್ದವು ವಿಷ್ಣುವಿಗೆ ಹೇಗೆ ವಾಚಕವಾಗಿದೆಯೋ ಅದರಂತೆ ವಿರಿಂಚಾದಿಗಳಿಗೂ (ಬ್ರಹ್ಮಾದಿಗಳಿಗೂ) ವಾಚಕವಾಗಿರುವುದರಿಂದ ಆನಂದಮಯ-ಶಬ್ದವಾಚ್ಯರು ಬ್ರಹ್ಮಾದಿಗಳೂ ಆಗಲಿ.

''ಆನಂದಮಯ ಇತ್ಯಾದಿಗಳಲ್ಲಿ ಮಯಟ್‌ಶಬ್ದಕ್ಕೆ ಪ್ರಾಚುರ್ಯ ಎಂಬ ಅರ್ಥವನ್ನೇ ಹೇಳಬೇಕು'' ಎಂಬ ವಿಷಯದಲ್ಲಿ ಲೋಕಚೇಷ್ಟಕತ್ವ ಲಿಂಗವನ್ನು ಹೇಳಿದ್ದೇವೆ. ಆ ಲಿಂಗವು ವಿಷ್ಣುವಿಗೇ ಕೂಡುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ.

**''ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಷ''** (ತೈ.ಉ. 2-7)

ಎಂಬ ಲೋಕಚೇಷ್ಟಕತ್ವವನ್ನು ಹೇಳುವ ಶ್ರುತಿಯಲ್ಲಿ ವಿಷ್ಣುವಾಚಕವಾದ ಶಬ್ದಗಳು ಇಲ್ಲದ ಕಾರಣ, ಲೋಕಚೇಷ್ಟಕತ್ವಯುಕ್ತಿಯು ವಿಷ್ಣುವಿಗೇ ಇದೆಯೆಂದು ಸ್ಪಷ್ಟವಾಗಿ ತೋರುತ್ತಿಲ್ಲವಾದ್ದರಿಂದ ಲೋಕಚೇಷ್ಟಕತ್ವಯುಕ್ತಿಯನ್ನು ಆಧರಿಸಿ ವಿಷ್ಣುವೇ ಆನಂದಮಯ ಎಂದು ನಿರ್ಧರಿಸಲು ಸಾಧ್ಯವಿಲ್ಲ.

**ಸೂ.ರ.:- मन्त्रवर्णसमाख्यायाश्चान्यलिङ्गादिभ्यो दुर्बलत्वेन सावकाशत्वात्‌ । अनन्यथासिद्धहेत्वन्तरस्य चाभावात्‌ । आनन्दमयादयो विरिञ्चादय एव स्युरिति प्राप्ते सूत्रमवतारयति ।**

**ಅನು.:-** 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಮಂತ್ರವರ್ಣದಲ್ಲಿ ವಿಷ್ಣುವೇ ಪ್ರತಿಪಾದ್ಯನಾದ್ದರಿಂದ ಆ ಮಂತ್ರವರ್ಣಸಮಾಖ್ಯಾಲಿಂಗದಿಂದ ವಿಷ್ಣುವೇ ಆನಂದಮಯ ಎಂದು ಹೇಳಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಈ ಮಂತ್ರವರ್ಣಸಮಾಖ್ಯಾ-ಲಿಂಗವು ಉಳಿದ ಲಿಂಗಗಳಿಗಿಂತಲೂ ದುರ್ಬಲವಾದ್ದರಿಂದ ಸಾವಕಾಶವಾಗಿದೆ. ಮತ್ತು ಅಂತಹ ಅನನ್ಯಥಾಸಿದ್ಧವಾದ (ನಿರವಕಾಶವಾದ) ಬೇರೆ ಯಾವ ಹೇತುವೂ ಇಲ್ಲವಾದ್ದರಿಂದ ವಿರಿಂಚಾದಿಗಳೇ ಆನಂದಮಯಾದಿಶಬ್ದವಾಚ್ಯರಾಗಬಹುದು ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ नेतरोऽनुपपत्तेः ॐ (१.१.१६)

**ಸೂತ್ರಾರ್ಥ** :- ಇತರಃ=ವಿರಿಂಚಾದಿಗಳು ನ=ಆನಂದಮಯಾದಿಶಬ್ದವಾಚ್ಯರಾಗಲು ಸಾಧ್ಯವಿಲ್ಲ. ಕುತಃ=ಯಾಕೆ? ಅನುಪಪತ್ತೇಃ="ಬ್ರಹ್ಮವಿದಾಪ್ನೋತಿ ಪರಮ್" ಎಂಬ ತೈತ್ತಿರೀಯಶ್ರುತಿಯಲ್ಲಿ ಹೇಳಿದ ಮೋಕ್ಷಜನಕಜ್ಞಾನವಿಷಯತ್ವವು ಅವರಿಗೆ ಕೂಡುವುದಿಲ್ಲವಾದ್ದರಿಂದ.

### ಸಮಾಧಾನ

**ಸೂ.ರ.:–** एवं च ब्रह्मशब्दशतानन्दत्वाष्टमूर्तित्वबहुभावादिरूपोक्तप्रापकेनान्नमयादिशब्दैर्विरिञ्चादिरेव नोच्यते । विष्णवन्यविरिञ्चादिज्ञानान्मोक्षानुपपत्तेः । ब्रह्मविदाप्नोति परमिति श्रुतौ आनन्दमयादेर्मुक्तिहेतुज्ञानविषयत्वोक्तेरानन्दमयादिशब्दवाच्यो विष्णुरेवेति सिद्धम् ।

**ಅನು.:–** ಬ್ರಹ್ಮಶಬ್ದ-ಶತಾನಂದ ಶಬ್ದಗಳು ಶ್ರುತವಾಗುತ್ತಿರುವುದರಿಂದ, ಅಷ್ಟಮೂರ್ತಿತ್ವ-ಬಹುಭಾವಾದಿಗಳು ಹೇಳಲ್ಪಡುತ್ತಿರುವುದರಿಂದ ಅನ್ನಮಯಾದಿಶಬ್ದ ವಾಚ್ಯರಾದವರು ವಿರಿಂಚಾದಿಗಳು ಎಂದು ಹೇಳುವುದು ಸರಿಯಲ್ಲ. ಏಕೆಂದರೆ - "ಬ್ರಹ್ಮವಿದಾಪ್ನೋತಿ ಪರಮ್" ಎಂಬ ಶ್ರುತಿಯಲ್ಲಿ ಆನಂದಮಯಾದಿಗಳಿಗೆ ಮೋಕ್ಷಜನಕಜ್ಞಾನವಿಷಯತ್ವವನ್ನು ಹೇಳಲಾಗಿದೆ. ಅರ್ಥಾತ್ ಅನ್ನಮಯಾದಿಗಳ (ಬ್ರಹ್ಮ) ಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ಹೇಳಲಾಗಿದೆ.

ಈ ಮೋಕ್ಷಜನಕಜ್ಞಾನವಿಷಯತ್ವವು ವಿಷ್ಣುವಿಗೆ ಕೂಡುತ್ತದೆಯೇ ಹೊರತು ವಿರಿಂಚಾದಿಗಳಿಗೆ ಕೂಡುವುದಿಲ್ಲ. ಅರ್ಥಾತ್ ವಿಷ್ಣುವಿನ ಜ್ಞಾನದಿಂದ ಮೋಕ್ಷವಾಗುತ್ತದೆಯೇ ಹೊರತು ಉಳಿದ ವಿರಿಂಚಾದಿಗಳ ಜ್ಞಾನದಿಂದ ಮೋಕ್ಷ ಆಗುವುದಿಲ್ಲ.

ಆದ್ದರಿಂದ ಆನಂದಮಯನಾದ ಬ್ರಹ್ಮನಿಗೆ ಮೋಕ್ಷಜನಕಜ್ಞಾನವಿಷಯತ್ವವನ್ನು ಹೇಳಿರುವುದರಿಂದ ಆನಂದಮಯಾದಿಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 17

**ಸೂ.ರ.:–** हेत्वन्तरेण ब्रह्मादीनामनन्दमयत्वं पराकुर्वत्सूत्रमुपन्यस्यति ।

**ಅನು.:–** ಬ್ರಹ್ಮಾದಿಗಳಿಗೆ ಆನಂದಮಯತ್ವವನ್ನು ಮತ್ತೊಂದು ಹೇತುವಿನಿಂದಲೂ ನಿರಾಕರಿಸುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ भेदव्यपदेशाच्च ॐ (१.१.१७)

**ಸೂತ್ರಾರ್ಥ** :- ಭೇದವ್ಯಪದೇಶಾಚ್ಚ= ಬ್ರಹ್ಮಾದಿಗಳಿಗೆ ಆನಂದಮಯನಾದವನಿಂದ ಭೇದಸೂಚಕವಾದ ಧರ್ಮಗಳನ್ನೂ ಹೇಳುವುದರಿಂದಲೂ ಬ್ರಹ್ಮಾದಿಗಳು ಆನಂದಮಯಶಬ್ದವಾಚ್ಯರಾಗುವುದಿಲ್ಲ.

**ಸೂ.ರ.**:– एवं च ते ये शतमित्यत्र (तै.उ.२-४-८) विरिञ्चस्य रुद्राच्छतगुणानन्दत्वोक्तेरानन्दमयस्य च यतो वाच (तै.उ.२-४-१) इत्यादिनाऽपरिमितानन्दत्वोक्तेः । रुद्रस्य विरिञ्चाच्छतांशोनानन्दत्वोक्तेः । बृहस्पत्यादीनामुत्तरोत्तरापेक्षया शतांशोनानन्दत्वोक्तेः । अदृश्यत्वादौ (तै. २-७) प्रकृत्याद्ययोग्यस्वातन्त्र्यादिभेदकधर्मश्रवणात् । ब्रह्मादिजीवसमुदायस्य स यश्चायमि(तै.२-८)त्यत्रापकृष्टोत्कृष्टसर्वजीवस्थितिरूपभेदकधर्मोक्तेः ।

**ಅನು.**:– 1. "ತೇ ಯೇ ಶತಂ ಪ್ರಜಾಪತೇರಾನಂದಾಃ" (ತೈ.ಉ. 2-8) ಎಂಬುದಾಗಿ ಬ್ರಹ್ಮದೇವರು ರುದ್ರದೇವರಿಗಿಂತಲೂ ನೂರುಪಟ್ಟು ಹೆಚ್ಚು ಆನಂದ ಉಳ್ಳವರಾಗಿದ್ದಾರೆ ಎಂದು ಹೇಳಿದ್ದಾರೆ. "ಯತೋ ವಾಚೋ ನಿವರ್ತಂತೆ" (ತೈ.ಉ. 2-4-1) ಇತ್ಯಾದಿಯಾಗಿ ಆನಂದಮಯನಾದ ವ್ಯಕ್ತಿಗೆ ಬ್ರಹ್ಮ-ರುದ್ರಾದಿಗಳಿಗಿಂತಲೂ ಅಪರಿಮಿತವಾಗಿ ಹೆಚ್ಚಿನ ಆನಂದವನ್ನು ಹೇಳಲಾಗಿದೆ.

2. ಬ್ರಹ್ಮದೇವರಿಗಿಂತಲೂ ರುದ್ರದೇವರು ನೂರುಪಟ್ಟು ಕಡಿಮೆ ಆನಂದ ಉಳ್ಳವ-ರಾಗಿದ್ದಾರೆ ಎಂದು ಹೇಳಲಾಗಿದೆ.

3. ಬೃಹಸ್ಪತ್ಯಾದಿಗಳು ತಮ್ಮ ತಮ್ಮ ಮೇಲಿನವರಿಗಿಂತಲೂ ನೂರುಪಟ್ಟು ಕಡಿಮೆ ಆನಂದ ಉಳ್ಳವರಾಗಿದ್ದಾರೆ ಎಂದು ಹೇಳಲಾಗಿದೆ. ಈ ರೀತಿಯಾಗಿ ಭೇದಕ (ಭೇದಸೂಚಕ) ಧರ್ಮಗಳನ್ನು ಹೇಳುತ್ತಿರುವುದರಿಂದ ಬ್ರಹ್ಮ-ರುದ್ರಾದಿಗಳು ಆನಂದಮಯಶಬ್ದವಾಚ್ಯರಾಗುವುದಿಲ್ಲ.

4. "ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೆ" "ಅಥ ಸೋಽಭಯಂ ಗತೋ ಭವತಿ" ಎನ್ನುವಲ್ಲಿ ಪ್ರಕೃತ್ಯಾದಿಗಳಿಗೆ ಯೋಗ್ಯವಲ್ಲದ ಸ್ವಾತಂತ್ರ್ಯಾದಿಧರ್ಮಗಳು ಶ್ರುತವಾಗುತ್ತಿರುವುದರಿಂದ ಪ್ರಕೃತ್ಯಾದಿಗಳು ಆನಂದಮಯಶಬ್ದವಾಚ್ಯರಾಗಲು ಸಾಧ್ಯವಿಲ್ಲ.

5. "ಸ ಯಶ್ಚಾಯಂ ಪುರುಷೇ" (ತೈ.ಉ. 2-8) ಎಂಬುದಾಗಿ ಆನಂದಮಯ-ನಾದ ವ್ಯಕ್ತಿಯು ಪುರುಷ ಆದಿತ್ಯ ಪದಗಳಿಂದ ಉಪಲಕ್ಷಿತರಾದ ಅಪಕೃಷ್ಟ- ಉತ್ಕೃಷ್ಟ ಎಲ್ಲ ಜೀವರಲ್ಲಿ ಇದ್ದಾನೆ ಎಂದು ಹೇಳಿದ್ದರಿಂದಾಗಿ ಬ್ರಹ್ಮಾದಿಜೀವಸಮುದಾಯವೂ ಆನಂದಮಯಶಬ್ದವಾಚ್ಯವಲ್ಲ.

**ಸೂ.ರ.:– तत्वमसीत्यादि (छां.६-८) श्रुतीनामर्थान्तरकल्पनाच्च । जीवेश्वरयोर्भेदस्य स्थापितत्वादानन्दमयादिर्विष्णुरेवेति सिद्धम् ।**

**ಅನು.:–** ಆನಂದಮಯನಾದ ವಿಷ್ಣುವಿಗೂ ಬ್ರಹ್ಮಾದಿಗಳಿಗೂ ಹೇಗೆ ಭೇದ ಹೇಳುತ್ತೀರಿ? ಹಾಗೆ ಹೇಳುವುದಾದರೆ 'ತತ್ವಮಸಿ' ಮೊದಲಾದ ಶ್ರುತಿಗಳು ಅವರಲ್ಲಿ ಅಭೇದ ಹೇಳುತ್ತಿರುವುದರಿಂದ ನಿಮಗೆ ಆ ಶ್ರುತಿಯ ವಿರೋಧ ಬರುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ತತ್ವಮಸಿ ಮೊದಲಾದ ಶ್ರುತಿಗಳಿಗೆ 'ತದಧೀನಃ ತ್ವಂ ಅಸಿ' 'ತತ್ಸದೃಶಃ ತ್ವಂ ಅಸಿ' ಎಂಬುದಾಗಿ ಬೇರೆ ಬೇರೆ ಅರ್ಥಗಳನ್ನು ಹೇಳಿ ಭೇದವನ್ನು ಸ್ಥಾಪಿಸಲಾಗಿದೆ. ಆದ್ದರಿಂದ ಈ ಶ್ರುತಿಯ ವಿರೋಧವೂ ನಮಗೆ ಬರುವುದಿಲ್ಲ.

ಈ ರೀತಿಯಾಗಿ ಅನೇಕಪ್ರಕಾರವಾಗಿ ಭೇದಕಧರ್ಮಗಳನ್ನು ಹೇಳಿದ್ದರಿಂದ ಬ್ರಹ್ಮಾದಿಗಳಾಗಲೀ, ಪ್ರಕೃತ್ಯಾದಿಗಳಾಗಲೀ, ಜೀವಸಮುದಾಯವಾಗಲೀ ಆನಂದಮಯ-ಶಬ್ದವಾಚ್ಯವಾಗುವುದಿಲ್ಲ. ಪರಂತು ವಿಷ್ಣುವೇ ಆನಂದಮಯಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ - 18

## ಆಕ್ಷೇಪ

**ಸೂ.ರ.:– ननु भेदोक्तेः श्रुतिविरोधाभावेऽपि जीवो ब्रह्माभिन्न-श्चेतनत्वाद्ब्रह्मवत् । भेदो मिथ्या भेदत्वाच्चन्द्रभेदवत् । विमतानि शरीराणि मद्भोगायतनानि शरीरत्वान्मच्छरीरवदित्याद्यनुमानविरोधः स्यादेवेति प्राप्ते सूत्रमवतारयति ।**

**ಅನು.:–** "ಬ್ರಹ್ಮ-ರುದ್ರಾದಿಗಳಿಗೂ ಆನಂದಮಯನಾದ ವಿಷ್ಣುವಿಗೂ ಭೇದಕ-ಧರ್ಮವನ್ನು ಹೇಳಿದ್ದರಿಂದ ಬ್ರಹ್ಮಾದಿಗಳು ಆನಂದಮಯರಲ್ಲ" ಎಂದು ಹೇಗೆ

ಹೇಳುತ್ತೀರಿ? ಅರ್ಥಾತ್ ಚೇತನ-ಚೇತನರಲ್ಲಿ(ಬ್ರಹ್ಮಾದಿಗಳಿಗೂ ವಿಷ್ಣುವಿಗೂ) ಭೇದವನ್ನು ಹೇಳಿದಾಗ 'ತತ್ವಮಸಿ' ಮೊದಲಾದ ಅಭೇದಬೋಧಕ ಶ್ರುತಿಗಳ ವಿರೋಧ ಬರದಿದ್ದರೂ ಸಹ, ಅಭೇದ- ಬೋಧಕವಾದ ಅನುಮಾನಗಳ ವಿರೋಧ ಬಂದೇಬರುತ್ತದೆ.

ಅಂತಹ ಅಭೇದಬೋಧಕವಾದ ಅನುಮಾನಗಳು ಯಾವುವು? ಎಂದರೆ,

1. ಜೀವಃ ಬ್ರಹ್ಮಾಭಿನ್ನಃ ಚೇತನತ್ವಾತ್ ಬ್ರಹ್ಮವತ್ ।

ಬ್ರಹ್ಮನು ತಾನೂ ಒಬ್ಬ ಚೇತನನಾದ್ದರಿಂದ ಬ್ರಹ್ಮನಿಂದ (ತನ್ನಿಂದ ತಾನು) ಹೇಗೆ ಅಭಿನ್ನನಾಗಿದ್ದಾನೆಯೋ ಅದರಂತೆ ಜೀವನೂ ಒಬ್ಬ ಚೇತನನೇ ಆದ್ದರಿಂದ ಬ್ರಹ್ಮನಿಂದ ಅಭಿನ್ನನಾಗಿದ್ದಾನೆ ಎಂಬುದಾಗಿ ಜೀವ-ಬ್ರಹ್ಮರಲ್ಲಿ ಅಭೇದವನ್ನು ಸಾಧಿಸುತ್ತಿದೆ ಅನುಮಾನ.

2. ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್ ।

ಕಣ್ಣಿನ ಮೇಲೆ ಬೆಟ್ಟನ್ನು ಒತ್ತಿಹಿಡಿದಾಗ ಇಬ್ಬರು ಚಂದ್ರರು ಕಾಣಿಸುತ್ತಾರೆ. ವಸ್ತುತಃ ಚಂದ್ರನು ಒಬ್ಬನೇ ಇರುವುದರಿಂದ ಆ ಚಂದ್ರಭೇದವು ಆರೋಪಿತವಾಗಿದೆ. ಅಂತೆಯೇ ಅದು ಮಿಥ್ಯಾ ಆಗಿದೆ. ಹಾಗಾದರೆ ದೃಷ್ಟಾಂತವಾದ ಚಂದ್ರಭೇದವು ಅದೂ ಒಂದು ಭೇದವಾದ್ದರಿಂದ ಅದು ಹೇಗೆ ಮಿಥ್ಯಾ ಆಗಿದೆಯೋ ಅದರಂತೆ ಪಕ್ಷವಾದ ಭೇದಮಾತ್ರವು (ಒಟ್ಟಿನಲ್ಲಿ ಎಲ್ಲ ಭೇದಗಳೂ) ಭೇದವೇ ಆದ್ದರಿಂದ ಮಿಥ್ಯಾ ಆಗಿದೆ. ಈ ರೀತಿ ಭೇದಮಾತ್ರಕ್ಕೆ ಮಿಥ್ಯಾತ್ವವನ್ನು ಸಾಧಿಸುವ ಮೂಲಕ ಚೇತನ ಚೇತನರಲ್ಲಿಯೂ ಭೇದಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದೆ ಈ ಅನುಮಾನ.

3. ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್ ಮಚ್ಛರೀರವತ್ ।

ಎಲ್ಲ ಜೀವರ ಎಲ್ಲ ಶರೀರಗಳೂ ನನ್ನ ಭೋಗಕ್ಕೆ ಅಧಿಕರಣವಾಗಿವೆ. ಶರೀರ-ವಾದ್ದರಿಂದ. ನನ್ನ ಶರೀರವು ಶರೀರವಾದ್ದರಿಂದ ಅದು ಹೇಗೆ ನನ್ನ ಭೋಗಕ್ಕೆ ಅಧಿಕರಣ ವಾಗಿದೆಯೋ ಅದರಂತೆ ಎಲ್ಲ ಜೀವರ ಎಲ್ಲ ಶರೀರಗಳೂ ಶರೀರವಾದ್ದರಿಂದ ಅವುಗಳೂ ನನ್ನ ಭೋಗಕ್ಕೆ ಅಧಿಕರಣವಾಗಿವೆ. ಎಲ್ಲ ಶರೀರಗಳೂ ನನ್ನ ಭೋಗಕ್ಕೆ ಅಧಿಕರಣವಾಗಿವೆ ಎಂದು ಸಾಧಿಸಿದರೆ, ಎಲ್ಲ ಶರೀರಗಳಲ್ಲಿರುವ ಜೀವ ನಾನೊಬ್ಬನೇ ಎಂಬುದಾಗಿ ಚೇತನೈಕ್ಯವನ್ನು ಸಾಧಿಸಿದಂತಾಗುತ್ತದೆ.

ಈ ರೀತಿಯಾಗಿ ಅನುಮಾನಗಳು ಚೇತನೈಕ್ಯವನ್ನು ಸಾಧಿಸುತ್ತಿರುವುದರಿಂದ, ಚೇತನರಲ್ಲಿ ಭೇದಕಧರ್ಮವನ್ನು ಹೇಳುವುದಾದರೆ ಈ ಅನುಮಾನಗಳ ವಿರೋಧ ಬರುತ್ತದೆ ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಪ್ರವೃತ್ತವಾಗುತ್ತದೆ :-

## ॐ कामाच्च नानुमानापेक्षा ॐ (१.१.१८)

**ಸೂತ್ರಾರ್ಥ :-** ಅದ್ವೈತಶ್ರುತ್ಯನುಕೂಲಾನುಮಾನಸ್ಯಾಭಾವಾತ್ = ಅದ್ವೈತಶ್ರುತಿಗಳಿಗೆ ಅನುಕೂಲವಾದ ಅನುಮಾನವು ಇಲ್ಲವಾದ್ದರಿಂದ ಚ = ಕೇವಲಾನುಮಾನಸ್ಯ ಚ ಕಾಮಾತ್ = ಶ್ರುತಿಗೆ ಅನುಕೂಲವಾಗದ ಕೇವಲ ಅನುಮಾನವು ಇಚ್ಛಾನುಸಾರವಾಗಿ ಪ್ರವೃತ್ತವಾಗುವುದರಿಂದ ನ ಅನುಮಾನಾಪೇಕ್ಷಾ = ಅತೀಂದ್ರಿಯವಾದ ಪದಾರ್ಥದ ವಿಷಯದಲ್ಲಿ ಶುಷ್ಕ ಅನುಮಾನದ (ಕೇವಲ ಅನುಮಾನದ) ಅಪೇಕ್ಷೆಯನ್ನು ಮಾಡಬಾರದು.

### ಸಮಾಧಾನ

**ಸೂ.ರ.:– एवं च प्रत्यक्षादिविरुद्धस्य श्रुतिसहाय्यरहितस्य चानुमानस्य तत्त्वज्ञानं प्रति कारणत्वाभावात् । ईश्वरो न स्वतन्त्रश्चेतनत्वाद्देवदत्तादिवदित्यप्यनुमातुं शक्यत्वात् । प्रत्यक्षादिविरुद्धस्यापि प्रमाणत्वे चेतनत्वादेरपि प्रामाण्यं स्यादविशेषादिति विपक्षे बाधकतर्कस्य सम्भवात् ।**

**ಅನು.:–** ಈ ರೀತಿಯಾಗಿ ಅನುಮಾನಗಳಿಂದ ಚೇತನೈಕ್ಯವನ್ನು ಸಾಧಿಸಲು ಹೊರಟರೆ ಚೇತನರಲ್ಲಿ ಭೇದಬೋಧಕವಾಗುವ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧ ಬರುತ್ತದೆ. ಹೀಗಾಗಿ ಪ್ರತ್ಯಕ್ಷಾದಿಪ್ರಮಾಣವಿರುದ್ಧವಾದ, ಶ್ರುತಿಸಹಾಯರಹಿತವಾದ ಕೇವಲ ಅನುಮಾನವು ತತ್ವಜ್ಞಾನವನ್ನು ಹುಟ್ಟಿಸಲು ಕಾರಣವಾಗುವುದಿಲ್ಲ.

ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರುದ್ಧವಾದರೂ ಅಂತಹ ಅನುಮಾನಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ,

ಈಶ್ವರಃ ನ ಸ್ವತಂತ್ರಃ ಚೇತನತ್ವಾತ್ ದೇವದತ್ತವತ್

(ದೇವದತ್ತನು ಚೇತನನಾದ್ದರಿಂದ ಅವನು ಹೇಗೆ ಸ್ವತಂತ್ರನಲ್ಲವೋ ಅದರಂತೆ ಈಶ್ವರನೂ ಸಹ ಚೇತನನೇ ಆದ್ದರಿಂದ ಸ್ವತಂತ್ರನಲ್ಲ) ಎಂಬ ಪ್ರತ್ಯಕ್ಷಾದಿ ವಿರುದ್ಧವಾದ ಅನುಮಾನಕ್ಕೂ ಪ್ರಾಮಾಣ್ಯವನ್ನು ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ. (ಈಶ್ವರನು ಸ್ವತಂತ್ರನಲ್ಲ ಎಂದು ಒಪ್ಪಬೇಕಾದ ಪ್ರಸಂಗ ಬರುತ್ತದೆ.) ಆದ್ದರಿಂದ ಚೇತನತ್ವಾನುಮಾನಕ್ಕೂ ಪ್ರಾಮಾಣ್ಯ ಒಪ್ಪಬೇಕಾದ ವಿಪಕ್ಷೇ ಬಾಧಕತರ್ಕ ಇರುವುದರಿಂದ ಪ್ರತ್ಯಕ್ಷಾದಿವಿರುದ್ಧವಾದ ಅನುಮಾನಕ್ಕೆ ಪ್ರಾಮಾಣ್ಯ ಒಪ್ಪಲು ಸಾಧ್ಯವಿಲ್ಲ.

**ಸೂ.ರ.:– यथा कामेति स्कान्दवाक्ये केवलानुमानस्य कामगामित्वेनोक्तत्वात् । जीवेशयोर्भेदस्य सिद्धत्वेनानन्दमयादि ब्रह्मैवेति सिद्धम् ।**

**ಅನುವಾದ :–**

यथाकामाऽनुमा यस्मात्तस्मात्साऽनपगा श्रुतेः ।
पूर्वापराविरोधाय चेष्यते नान्यथा क्वचित् ॥

ಎಂಬುದಾಗಿ ಸ್ಕಾಂದಪುರಾಣವಾಕ್ಯದಲ್ಲಿ ಶ್ರುತಿಗೆ ಅನುಗುಣವಾಗದ ಕೇವಲ ಅನುಮಾನಕ್ಕೆ ಕಾಮಗಾಮಿತ್ವವನ್ನು (ಇಚ್ಛಾನುಸಾರವಾಗಿ ಪ್ರವೃತ್ತವಾಗುವುದರಿಂದ ಪ್ರಾಮಾಣ್ಯ ಕೊಡುವುದಿಲ್ಲ ಎಂದು) ಹೇಳಲಾಗಿದೆ.

ಪ್ರಕೃತ ಅಭೇದಸಾಧಕತ್ವೇನ ಉದಾಹೃತವಾದ ನಿಮ್ಮ ಮೂರು ಅನುಮಾನಗಳೂ ಅದ್ವೈತಶ್ರುತಿಗಳಿಗೆ ಅನುಗುಣವಾಗಿಲ್ಲ. ಮತ್ತು ಭೇದಬೋಧಕವಾಗುವ ಪ್ರತ್ಯಕ್ಷಾದಿ-ಪ್ರಮಾಣಗಳಿಗೆ ವಿರುದ್ಧವೂ ಆಗಿದೆ. ಇಂತಹ ಕೇವಲ ಅನುಮಾನಕ್ಕೆ ಪ್ರಾಮಾಣ್ಯವನ್ನು ಒಪ್ಪಲು ಬರುವುದಿಲ್ಲವಾದ್ದರಿಂದ ಚೇತನರಲ್ಲಿ ಭೇದಕಧರ್ಮಗಳನ್ನು ಹೇಳಿದಾಗ ಅನುಮಾನವಿರೋಧ ನಮಗೆ ಬರುವುದಿಲ್ಲ. ಆದ್ದರಿಂದ ಚೇತನರಲ್ಲಿ ಭೇದಕಧರ್ಮಗಳನ್ನು ಹೇಳಿದ್ದರಿಂದಾಗಿ ಜೀವ-ಜೀವರಲ್ಲಿ ಭೇದವು ಸಿದ್ಧವಾಗುವುದರಿಂದ ಆನಂದಮಯ-ನಾದವನು ವಿಷ್ಣುವೇ ಹೊರತು ಬ್ರಹ್ಮಾದಿಗಳು ಅಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 19

## ಆಕ್ಷೇಪ

**ಸೂ.ರ.:– नन्वस्त्वानन्दमयेन ब्रह्मणा हिरण्यगर्भादिजीवानां भेदः । तथाऽपि स व्यावहारिको न पारमार्थिको मुक्तावपि । उदाहृतश्रुतीनां सांसारिकभेदपरत्वोपपत्तेरिति प्राप्ते सूत्रमाह ।**

**ಅನು.:–** ಆನಂದಮಯನಾದ ವಿಷ್ಣುವಿಗೆ ಬ್ರಹ್ಮಾದಿಗಳಿಂದ ಭೇದ ಇದೆ ಎಂದೇ ಒಪ್ಪೋಣ. ಆದರೆ ಆ ಭೇದವು ಕೇವಲ ಸಾಂಸಾರಿಕ (ವ್ಯಾವಹಾರಿಕ) ಭೇದವಾಗಿದೆ ಅಷ್ಟೇ (ಸಂಸಾರದಶಾದಲ್ಲಿ ಮಾತ್ರ ಇರುವ ಭೇದವಾಗಿದೆ). ಹೊರತು ಪಾರಮಾರ್ಥಿಕ ಭೇದವಾಗಿಲ್ಲ.

ಭೇದದ ವಿಷಯದಲ್ಲಿ ಉದಾಹರಿಸಿದ ಶ್ರುತಿಗಳೂ ಸಹ ಸಾಂಸಾರಿಕ ಭೇದವನ್ನು ಹೇಳುತ್ತಿವೆ ಅಷ್ಟೇ. ಪಾರಮಾರ್ಥಿಕ ಭೇದವನ್ನು ಅವುಗಳು ಹೇಳುತ್ತಿಲ್ಲ. ಹೀಗಾಗಿ ಸಂಸಾರದಶೆಯಲ್ಲಿ ಆನಂದಮಯನಾದ ವಿಷ್ಣುವಿಗೂ ಬ್ರಹ್ಮಾದಿಗಳಿಗೂ ಭೇದವಿದ್ದರೂ ಸಹ ಮೋಕ್ಷದಲ್ಲಿ ಮಾತ್ರ ಅಭೇದವೇ ಇರುತ್ತದೆ. ಆದ್ದರಿಂದ ಬ್ರಹ್ಮಾದಿಗಳೂ ಆನಂದಮಯ-ರಾಗಬಹುದು ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ :-

### ॐ अस्मिन्नस्य च तद्योगं शास्ति ॐ (१.१.१९)

**ಸೂತ್ರಾರ್ಥ** :- ಯತಃ = ಯಾವ ಕಾರಣ ಅಸ್ಮಿನ್ = ಆನಂದಮಯ ಪ್ರಕರಣದಲ್ಲಿ ಅಸ್ಯ = ಜೀವನಿಗೆ ಮೋಕ್ಷೇऽಪಿ = ಮೋಕ್ಷದಲ್ಲಿಯೂ ಸಹ ತದ್ಯೋಗಂ = ಆನಂದಮಯ-ನಾದ ವಿಷ್ಣುವಿನ ಸಂಬಂಧವನ್ನು ಶಾಸ್ತಿ = ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯೋ ಅಪಿ ಅತೋऽಪಿ = ಆ ಕಾರಣದಿಂದಲೂ ಸಹ ಆನಂದಮಯಾದಿಃ ಬ್ರಹ್ಮೈವ = ಆನಂದ-ಮಯಾದಿಶಬ್ದವಾಚ್ಯನಾದವನು ಪರಬ್ರಹ್ಮನೇ (ವಿಷ್ಣುವೇ).

### ಸಮಾಧಾನ

**ಸೂ.ರ.:– एवं च अनिलयनेऽभय(तै.२-७)मित्येतमानन्दमयमि (तै.२-८)त्यादिषु ब्रह्मज्ञानिनः सर्वज्ञेन ज्ञातेनैव चतुर्मुखेन च सह स्वयोग्यकामानां मुक्तौ प्राप्तेः । देहादुत्क्रान्तजीवस्य पूर्णानन्दस्य परमात्मनः समीपप्रापकत्वोक्तेश्च । जीवेशयोर्भेदः पारमार्थिक इति सिद्ध्याऽऽनन्दमयादिर्ब्रह्मैवेति सिद्धम् ।**

**ಅನುವಾದ :–**

''**सोऽश्नुते सर्वान्कामान्सह ब्रह्मणा विपश्चिता**'' (तै.उ. २-१)

''**अनिलयनेऽभयं प्रतिष्ठां विन्दते**'' (तै.उ. २-७)

ಎಂಬುದಾಗಿ ''ಬ್ರಹ್ಮಜ್ಞಾನಿಯಾದವನು ಬ್ರಹ್ಮದೇವರ ಜೊತೆಗೆ ಸ್ವಯೋಗ್ಯವಾದ ಕಾಮನೆಗಳನ್ನು ಮುಕ್ತಿಯಲ್ಲಿ ಪಡೆಯುತ್ತಾನೆ'' ಎಂದು ಮೋಕ್ಷದಲ್ಲಿಯೂ ಸಹ ಜೀವನಿಗೆ (ಬ್ರಹ್ಮಾದಿಗಳಿಗೆ) ಆನಂದಮಯನಾದ ವಿಷ್ಣುವಿನ ಸಂಬಂಧವನ್ನು ತಿಳಿಸುತ್ತಿದೆ ಶ್ರುತಿ.

"ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ" (ತೈ.ಉ. 2-8) ಎಂಬುದಾಗಿ ದೇಹದಿಂದ ಉತ್ಕ್ರಾಂತನಾದ ಜೀವನು ಆನಂದಮಯನಾದ (ಪೂರ್ಣಾನಂದನಾದ) ಪರಮಾತ್ಮನ ಸಮೀಪಕ್ಕೆ ಹೋಗುತ್ತಾನೆ ಎಂದು ತಿಳಿಸುತ್ತಿದೆ ಶ್ರುತಿ.

ಆದ್ದರಿಂದ "ದೇಹದಿಂದ ಉತ್ಕ್ರಾಂತನಾದ ವ್ಯಕ್ತಿ ಆನಂದಮಯನ ಸಮೀಪಕ್ಕೆ ತೆರಳುತ್ತಾನೆ" ಎಂದು ತಿಳಿಸುತ್ತಿರುವುದರಿಂದ ಮತ್ತು ಮೋಕ್ಷದಲ್ಲಿಯೂ ಜೀವನಿಗೆ ಆನಂದಮಯನಾದ ವಿಷ್ಣುವಿನ ಸಂಬಂಧವನ್ನು ತಿಳಿಸುತ್ತಿರುವುದರಿಂದಲೂ ಸಹ ಜೀವ-ಬ್ರಹ್ಮರ ಭೇದವು ಕೇವಲ (ವ್ಯಾವಹಾರಿಕದಲ್ಲಿ) ಸಾಂಸಾರಿಕವಾದದ್ದಲ್ಲ. ಕಿಂತು ಪಾರಮಾರ್ಥಿಕವಾಗಿದೆ ಎಂದು ಸಿದ್ಧವಾಗುತ್ತದೆ.

ಈ ರೀತಿಯಾಗಿ ಜೀವ-ಬ್ರಹ್ಮರಲ್ಲಿ ಪಾರಮಾರ್ಥಿಕಭೇದವೇ ಸಿದ್ಧಿಸುವುದರಿಂದ ಆನಂದಮಯಾದಿಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಹೊರತು ಬ್ರಹ್ಮಾದಿಜೀವರು ಆಗಲು ಸಾಧ್ಯವಿಲ್ಲ ಎಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

**ಇಲ್ಲಿಗೆ ಆನಂದಮಯಾಧಿಕರಣವು ಮುಗಿಯಿತು.**

ಅಧಿಕರಣ - 7

# ಅಂತಃಸ್ಥತ್ವಾಧಿಕರಣ

## ಸಂಗತಿ

**ಸೂ.ರ.:- अत्राधिदैवगतान्यत्र प्रसिद्धेन्द्रादिनामसमन्वयसिद्ध्यर्थं देहान्तःस्थत्वरूपलिङ्गसमन्वयः क्रियते ।**

**ಅನು.:-** ಏಳನೆಯ ಅಂತಃಸ್ಥತ್ವಾಧಿಕರಣದಲ್ಲಿ ಅಧಿದೈವಗತವಾದ ಅನ್ಯತ್ರ-ಪ್ರಸಿದ್ಧವಾದ ಇಂದ್ರಾದಿನಾಮಗಳನ್ನು ಸಮನ್ವಯ ಮಾಡುವುದಕ್ಕಾಗಿ ದೇಹಾಂತಃಸ್ಥತ್ವ ರೂಪವಾದ ಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ.

''ಅದೃಶ್ಯೇऽನಾತ್ಮ್ಯೇऽನಿರುಕ್ತೇ'' ಎಂಬುದಾಗಿ ಶ್ರುತಿಯು ಆನಂದಮಯನಾದ ವ್ಯಕ್ತಿಗೆ ಅದೃಶ್ಯತ್ವವನ್ನು ಹೇಳಿದೆ. ಈ ಅದೃಶ್ಯತ್ವವಾದರೋ

''ಅಂತಃ ಪ್ರವಿಷ್ಟಂ ಕರ್ತಾರಮೇತಮ್ । ಅಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ''

ಎಂಬುದಾಗಿ ಅಂತಃಸ್ಥಿತನಾದ ಒಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಆ ಅಂತಃಸ್ಥಿತನಾದ ವ್ಯಕ್ತಿ ವಿಷ್ಣುವಿನಿಂದ ಭಿನ್ನರಾದ ಬೇರೆಯವರಾದರೆ ಅವರೇ ಅದೃಶ್ಯತ್ವ ಉಳ್ಳವರೂ ಆಗುತ್ತಾರೆ. ಆನಂದಮಯಶಬ್ದವಾಚ್ಯನಾದವರೂ ಅವರೇ ಆಗುತ್ತಾರೆ. ಆ ಅಂತಃಸ್ಥಿತನಾದ ವ್ಯಕ್ತಿ ವಿಷ್ಣುವೇ ಆದರೆ ಅದೃಶ್ಯನೂ - ಆನಂದಮಯನೂ ಅವನೇ ಆಗುತ್ತಾನೆ. ಹೀಗಾಗಿ ಆ ಅಂತಃಸ್ಥಿತನಾದ ವ್ಯಕ್ತಿ ಯಾರೆಂದು ನಿರ್ಣಯವಾಗಬೇಕಿದೆ. ಅದನ್ನು ನಿರ್ಣಯಿಸಲು ಈ ಅಧಿಕರಣ ಪ್ರಾರಂಭ.

**ಸೂ.ರ.:- नन्वन्तःस्थत्वेन श्रुत्योच्यमान इन्द्रो भवेत् । इन्द्रश्रुतेः ।**
**(तै.आ.३.११.६)**

**सूर्यो वा दिवस्पतित्वलिङ्गात् । वरुणलिङ्गात् वरुणो वा । त्वष्टृश्रुतेः त्वष्टा वा । अग्निबृहस्पतिश्रुतिभ्यां अग्निबृहस्पती वा ॥**

**ಅನು.:- ★** ''ಅಂತಃ ಪ್ರವಿಷ್ಟಂ ಕರ್ತಾರಮೇತಮ್ । ಅಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ ॥'' (ತೈ.ಆ. 3-11) ಎಂಬುದಾಗಿ ಶ್ರುತಿಯು ತಿಳಿಸುತ್ತಿರುವ ಆ ಅಂತಃಸ್ಥಿತನಾದ ವ್ಯಕ್ತಿ ಇಂದ್ರನು ಆಗಬಹುದು.

"ಇಂದ್ರೋ ರಾಜಾ ಜಗತೋ ಯ ಈಶೇ" (ತೈ.ಆ. 3-11-6) ಎಂಬುದಾಗಿ ಇಂದ್ರಶ್ರುತಿಯಿರುವುದರಿಂದ.

★ ಅಥವಾ "ಸಪ್ತ ಯುಂಜಂತಿ ರಥಮೇಕಚಕ್ರಮ್" (ತೈ.ಆ. 3-11-8) ಎಂಬುದಾಗಿ ಸೂರ್ಯಲಿಂಗ ಇರುವುದರಿಂದ ಸೂರ್ಯನು ಆಗಬಹುದು.

★ ಅಥವಾ "ಅಪಾಂ ನೇತಾರಮ್" ಎಂಬುದಾಗಿ ವರುಣಲಿಂಗ ಇರುವುದರಿಂದ ವರುಣನು ಆಗಬಹುದು.

★ ಅಥವಾ "ತ್ವಷ್ಟಾರಂ ರೂಪಾಣಿ ವಿಕುರ್ವಂತಮ್" ಎಂಬುದಾಗಿ ತ್ವಷ್ಟೃಲಿಂಗ ಇರುವುದರಿಂದ ತ್ವಷ್ಟಾ ಆಗಬಹುದು.

★ ಅಥವಾ ಅಗ್ನಿ-ಬೃಹಸ್ಪತಿಗಳ ಲಿಂಗ ಇರುವುದರಿಂದ ಅಗ್ನಿ-ಬೃಹಸ್ಪತಿಗಳು ಆಗಬಹುದು.

**ಸೂ.ರ.:– न चेन्द्रादिशब्दा अन्यत्र नेतुं शक्यन्ते । तेषां देवेष्वेव रूढत्वात् । तेषामैश्वर्यादिशब्दप्रवृत्तिनिमित्तत्वाच्च ।**

**ಅನು.:–** ಅಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ ಇಂದ್ರಾದಿಶಬ್ದಗಳು ಶ್ರುತವಾಗುತ್ತಿದ್ದರೂ ಸಹ, ಆ ಇಂದ್ರಾದಿಶಬ್ದಗಳನ್ನು ಪರಮಾತ್ಮನಲ್ಲಿಯೇ ಸಮನ್ವಯ ಮಾಡಬಹುದಲ್ಲವೇ? ಎಂದರೆ ಅದು ಸರಿಯಲ್ಲ. ಇಂದ್ರ-ಅಗ್ನಿ-ವರುಣ ಮೊದಲಾದ ಶಬ್ದಗಳು ಇಂದ್ರಾದಿದೇವತೆಗಳಲ್ಲಿಯೇ ರೂಢವಾಗಿವೆ.

ಮತ್ತು ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವಾದದ್ದು ಐಶ್ವರ್ಯಾದಿಗಳು. ಅಂತಹ ಇಂದ್ರಾದಿಶಬ್ದಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿಗಳು ಇಂದ್ರಾದಿದೇವತೆಗಳಲ್ಲಿಯೇ ಕೂಡುತ್ತವೆಯಾದ್ದರಿಂದ ಇಂದ್ರಾದಿದೇವತೆಗಳೇ ಇಂದ್ರಾದಿಶಬ್ದವಾಚ್ಯರಾಗಬಲ್ಲರು. ಪರಮಾತ್ಮನು ಆಗಲಾರ.

**ಸೂ.ರ.:– न चादृश्यत्वादिलिङ्गात् अन्तस्थो विष्णुः । श्रुत्यादिभ्यो लिङ्गमात्रस्य दुर्बलत्वात् । इति प्राप्ते सूत्रमाह ।**

**ಅನು.:–** ಅಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ ಅದೃಶ್ಯತ್ವ ಧರ್ಮವು ಶ್ರುತವಾಗುತ್ತಿದೆ. ಆ ಅದೃಶ್ಯತ್ವಧರ್ಮವು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ, ಅದೃಶ್ಯತ್ವಲಿಂಗಬಲದಿಂದ ಅಂತಃಸ್ಥಿತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ.

"ಅಂತಃಸ್ಥಿತನಾದ ವ್ಯಕ್ತಿ ವಿಷ್ಣುವೇ" ಎನ್ನುವುದಕ್ಕೆ ಅದೃಶ್ಯತ್ವಾದಿಲಿಂಗಗಳು ಗಮಕ-ವಾಗುವುದಾದರೆ, "ಅಂತಃಸ್ಥಿತರಾದವರು ಇಂದ್ರಾದಿದೇವತೆಗಳು" ಎನ್ನುವುದಕ್ಕೆ ಇಂದ್ರಾದಿಶಬ್ದಗಳು (ಶ್ರುತ್ಯಾದಿಗಳು) ಗಮಕವಾಗಿವೆ. ಶ್ರುತ್ಯಾದಿಗಳಿಗಿಂತಲೂ ಅದೃಶ್ಯತ್ವಾದಿಲಿಂಗಗಳು ದುರ್ಬಲವಾದ್ದರಿಂದ, ಇಂದ್ರಾದಿಶಬ್ದಗಳ ನಿಮಿತ್ತದಿಂದ ಇಂದ್ರಾದಿದೇವತೆಗಳನ್ನೇ ತೆಗೆದುಕೊಳ್ಳಬೇಕು. ಹೀಗಾಗಿ ಇಂದ್ರಾದಿದೇವತೆಗಳೇ ಅಂತಃಸ್ಥಿತರಾದವರು ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ವಿಷ್ಣುವೇ ಅಂತಃಸ್ಥಿತನಾದವನು ಎನ್ನುವುದನ್ನು ಸಮರ್ಥಿಸುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ अन्तस्तद्धर्मोपदेशात् ॐ (१.१.२०)

**ಸೂತ್ರಾರ್ಥ** :- ಅಂತಃ = "ಅಂತಃ ಪ್ರವಿಷ್ಟಂ ಕರ್ತಾರಮೇತಮ್" (ತೈ.ಆ.3-11) ಎಂಬುದಾಗಿ ಹೃದಯದಲ್ಲಿ ಅಂತಃಸ್ಥಿತನಾಗಿ ಶ್ರುತನಾಗುತ್ತಿರುವ ವ್ಯಕ್ತಿ ಬ್ರಹ್ಮನೇ (ಪರಮಾತ್ಮನೇ) ಆಗಿದ್ದಾನೆ. ಹೊರತು ಇಂದ್ರಾದಿಗಳು ಅಲ್ಲ. ಯಾಕೆ? ತದ್ಧರ್ಮೋಪ-ದೇಶಾತ್ = (ತಸ್ಮಿನ್) ಆ ಅಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ (ಧರ್ಮೋಪದೇಶಾತ್)

"ಅಂತಸ್ಸಮುದ್ರೇ ಮನಸಾ ಚರಂತಮ್ । ಬ್ರಹ್ಮಾನ್ವವಿಂದದ್ದಶ ಹೋತಾರಮರ್ಣೇ" (ತೈ.ಆ.3-11-1) ಎಂಬುದಾಗಿ ಕ್ಷೀರಾಬ್ಧಿಮಧ್ಯವರ್ತಿತ್ವ - ಪ್ರಲಯೋದಧಿಸ್ಥಿತತ್ವ - ಬ್ರಹ್ಮಾಂಡವೀರ್ಯತ್ವ ಮೊದಲಾದ ವಿಷ್ಣುವಿನ ಅಸಾಧಾರಣ ಧರ್ಮಗಳು ಶ್ರುತವಾಗುತ್ತಿರುವುದರಿಂದ.

**ಸೂ.ರ.:– एवं च निरवकाशलिङ्गैः सावकाशान्यप्रापकश्रुतिलिङ्गानां बाधोपपत्तेरयमन्तःस्थो विष्णुरेवेति सिद्धम् ।**

**ಅನು.**:– ಈ ಅಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ "ಅಂತಸ್ಸಮುದ್ರೇ ಮನಸಾ ಚರಂತಮ್" ಎಂಬುದಾಗಿ ಕ್ಷೀರಸಾಗರಮಧ್ಯವರ್ತಿತ್ವ - ಪ್ರಲಯಜಲಸ್ಥಿತತ್ವ - ಬ್ರಹ್ಮಾಂಡವೀರ್ಯತ್ವ ಮೊದಲಾದ ಧರ್ಮಗಳು ಶ್ರುತವಾಗುತ್ತಿವೆ. ಆ ಧರ್ಮಗಳೆಲ್ಲ ವಿಷ್ಣುವಿನ ಅಸಾಧಾರಣಧರ್ಮಗಳಾಗಿವೆ. ಹೀಗಾಗಿ ನಿರವಕಾಶವಾಗಿವೆ.

ಇಂದ್ರಾದಿಶಬ್ದಗಳು ಅಮುಖ್ಯವೃತ್ತಿಯಿಂದ ಇಂದ್ರಾದಿದೇವತಾ ವಾಚಕವಾದರೂ ಮುಖ್ಯವೃತ್ತಿಯಿಂದ ವಿಷ್ಣುವಾಚಕವೇ ಆಗಿದ್ದರಿಂದ (ಅನ್ಯಪ್ರಾಪಕವಾದ್ದರಿಂದ) ಸಾವಕಾಶವಾಗಿವೆ.

ಆದ್ದರಿಂದ ಕ್ಷೀರಾಬ್ಧಿಮಧ್ಯಸ್ಥಿತತ್ವ ಮೊದಲಾದ ನಿರವಕಾಶಲಿಂಗಗಳಿಂದ ಅನ್ಯಪ್ರಾಪಕ-ಸಾವಕಾಶವಾದ ಶ್ರುತಿಗಳಿಗೆ ಬಾಧ ಬರುತ್ತದೆಯಾದ್ದರಿಂದ, ನಿರವಕಾಶಲಿಂಗ-ಬಲದಿಂದಾಗಿ "ಅಂತಃಸ್ಥಿತನಾದ ವ್ಯಕ್ತಿ ವಿಷ್ಣುವೇ" ಎಂದು ಸಿದ್ಧವಾಗುತ್ತದೆ.

### ಸೂತ್ರ - 21

### ಆಕ್ಷೇಪ

**ಸೂ.ರ.:– ननु समुद्रस्थत्वादिलिङ्गादतःस्थो विष्णुस्तर्हि तेनान्तःस्थेन विष्णुनेन्द्रादीनामभेदोऽस्तु । इन्द्रादिप्रापकश्रुत्यादेरपि सद्भावात् ।**

**ಅನು.:–** "ಅಂತಸ್ಸಮುದ್ರೇ" ಇತ್ಯಾದಿಯಾಗಿ ಸಮುದ್ರಸ್ಥತ್ವ ಮೊದಲಾದ ಲಿಂಗ ಇರುವುದರಿಂದ ಅಂತಃಸ್ಥನಾದ ವ್ಯಕ್ತಿ ವಿಷ್ಣುವೇ ಎಂದು ಹೇಳುವುದಾದರೆ, ಆ ಅಂತಃಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದ ಇರಲಿ. ಯಾಕೆ? ಇಂದ್ರಾದಿಗಳು ಅಂತಃಸ್ಥ-ರಾಗಿದ್ದಾರೆ ಎಂದು ಹೇಳುವ ಶ್ರುತ್ಯಾದಿಗಳೂ ಇರುವುದರಿಂದ.

**ಸೂ.ರ.:– श्रुत्यादेश्च स्वभावतो लिङ्गस्य निरवकाशतया बलवत्वेनान्यतरबाधेनान्यतरपक्षनिर्णयायोगात् । ततश्च पूर्वोत्तरपक्षद्वयेऽन्योन्यं बाध्यबाधकभावशून्ये सति तदन्यथाऽनुपपत्त्याऽन्तःस्थेन विष्णुनेन्द्रादीनामभेदः प्राप्त इत्याशङ्कां परिहरत्सूत्रमुपन्यस्यति ।**

**ಅನು.:–** ಸಮುದ್ರಸ್ಥತ್ವ ಮೊದಲಾದ ಲಿಂಗಗಳಿಂದ ಇಂದ್ರಾದಿಪ್ರಾಪಕಶ್ರುತ್ಯಾದಿಗಳಿಗೆ ಬಾಧ ಹೇಳಬಹುದಲ್ಲ? ಎಂದರೆ ಅದು ಸರಿಯಲ್ಲ. ಏಕೆಂದರೆ - ಶ್ರುತ್ಯಾದಿಗಳು ಸ್ವಭಾವತಃ ಪ್ರಬಲವಾಗಿವೆ. ಲಿಂಗವು ನಿರವಕಾಶವಾದ್ದರಿಂದ ಪ್ರಬಲವಾಗಿದೆ. ಹೀಗೆ ಶ್ರುತ್ಯಾದಿಗಳು - ಲಿಂಗ ಎರಡೂ ಪ್ರಬಲವೇ ಆಗಿರುವುದರಿಂದ ಅನ್ಯತರಬಾಧದಿಂದ ಅನ್ಯತರಪಕ್ಷವನ್ನು ನಿರ್ಣಯ ಮಾಡಲು ಬರುವುದಿಲ್ಲ.

ಹೀಗಾಗಿ ವಿಷ್ಣುವಿನ ಪಕ್ಷ ಹಾಗೂ ಇಂದ್ರಾದಿಗಳ ಪಕ್ಷ ಎರಡೂ ಪಕ್ಷಗಳಲ್ಲಿಯೂ ಪರಸ್ಪರ ಬಾಧ್ಯ-ಬಾಧಕಭಾವ ಇಲ್ಲವಾದ್ದರಿಂದ, ತದನ್ಯಥಾನುಪಪತ್ತಿಯಿಂದ ಅಂತಃಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದವೇ ಪ್ರಾಪ್ತವಾಗುತ್ತದೆ ಎಂಬುದಾಗಿ ಶಂಕೆ ಬಂದರೆ ಅದಕ್ಕೆ ಸಮರ್ಪಕ ಸಮಾಧಾನ ನೀಡುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ भेदव्यपदेशाच्चान्यः ॐ (१.१.२१)

**ಸೂತ್ರಾರ್ಥ** :- ನ ಕೇವಲಂ ಅಂತಸ್ಥೋ ವಿಷ್ಣುಃ = ಅಂತಃಸ್ಥನಾದವನು ವಿಷ್ಣುವೇ ಆಗಿದ್ದಾನೆ ಎಂದಷ್ಟೇ ಅಲ್ಲ, ಕಿಂತು ಇಂದ್ರಾದಿಭ್ಯಃ ಅನ್ಯಶ್ಚ = ಕಿಂತು ಆ ಅಂತಃಸ್ಥನಾದ ವಿಷ್ಣುವು ಇಂದ್ರಾದಿಗಳಿಂದ ಭಿನ್ನನೂ ಆಗಿದ್ದಾನೆ. ಕುತಃ = ಯಾಕೆ? ಭೇದವ್ಯಪದೇಶಾತ್ = ಆ ಅಂತಃಸ್ಥನಾದ ವಿಷ್ಣುವಿಗೆ ಇಂದ್ರಾದ್ಯಂತರ್ಯಾಮಿತ್ವ - ಇಂದ್ರಾದಿಪ್ರೇರಕತ್ವ ಮೊದಲಾದ ಭೇದಕಧರ್ಮಗಳು ಶ್ರುತವಾಗುತ್ತಿರುವುದರಿಂದ.

### ಸಮಾಧಾನ

**ಸೂ.ರ.:– एवं च इन्द्रस्यात्मा (तै.आ.३-११-३) वायोरात्मानं, (तै.आ.३-११-४) अंतरादित्ये, (तै.आ.३-११-६) इत्यादिश्रुतिषु भेदकधर्मश्रवणात् ।**

''इन्द्रस्यात्मा निहितः पञ्च होता'' (तै.आ. ३-११-३)

''वायोरात्मानं कवयो निचिक्युः'' (तै.आ. ३-११-४)

''अन्तरादित्ये मनसा चरन्तम्, देवानां हृदयं ब्रह्मान्वविन्दत्''

(तै.आ. ३-११-६)

**ಅನು.:–** ಇತ್ಯಾದಿಶ್ರುತಿಗಳಲ್ಲಿ ಆ ಅಂತಃಸ್ಥನಾದ ವಿಷ್ಣುವಿಗೆ ಇಂದ್ರಾದ್ಯಂತರ್ಯಾಮಿತ್ವ - ಇಂದ್ರಾದಿಪ್ರೇರಕತ್ವ ಮೊದಲಾದ ಭೇದಕಧರ್ಮಗಳು ಶ್ರುತವಾಗುತ್ತಿರುವುದರಿಂದ ವಿಷ್ಣುವಿಗೂ-ಇಂದ್ರಾದಿಗಳಿಗೂ ಅಭೇದ ಹೇಳಲು ಬರುವುದಿಲ್ಲ. ವಿಷ್ಣುವು ಇಂದ್ರಾದಿ-ಗಳಿಂದ ಭಿನ್ನನೇ ಆಗಿದ್ದಾನೆ.

**ಸೂ.ರ.:– न चोभयप्रापकान्यथाऽनुपपत्त्यैतत्कल्प्यं । निरवकाशेन विष्णुलिङ्गेन सावकाशान्यप्रापकश्रुतिलिङ्गानां बाधोपपत्तेः । तस्मादयमन्तःस्थो विष्णुरेवेति सिद्धम् ।**

**ಅನು.:–** ಇಂದ್ರಾದಿಪ್ರಾಪಕವಾದ ಶ್ರುತ್ಯಾದಿಗಳೂ ಇರುವುದರಿಂದ ಅಭೇದವನ್ನು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಸಮುದ್ರಸ್ಥತ್ವ ಮೊದಲಾದ ಲಿಂಗಗಳು

ನಿರವಕಾಶವಾಗಿವೆ. ಶ್ರುತ್ಯಾದಿಗಳು ಅನ್ಯಪ್ರಾಪಕವಾದ್ದರಿಂದ (ಇಂದ್ರಾದಿಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದರಿಂದ) ಸಾವಕಾಶವಾಗಿವೆ. ಹಾಗಾಗಿ ನಿರವಕಾಶವಾದ ಲಿಂಗಗಳಿಂದ ಸಾವಕಾಶವಾದ ಶ್ರುತ್ಯಾದಿಗಳಿಗೆ ಬಾಧ ಬರುವುದರಿಂದ, ನಿರವಕಾಶವಾದ ಸಮುದ್ರಸ್ಥತ್ವ ಮೊದಲಾದ ಲಿಂಗಗಳಿಂದಾಗಿ ಅಂತಃಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಇಲ್ಲಿಗೆ ಅಂತಸ್ತತ್ತ್ವಾಧಿಕರಣವು ಸಮಾಪ್ತವಾಗಿದೆ.

ಅಧಿಕರಣ – ೮

# ಆಕಾಶಾಧಿಕರಣ

## ಸಂಗತಿ

**ಸೂ.ರ.:– अत्र भगवति लोकतोऽन्यत्रप्रसिद्धाकाशपदोपलक्षिताधि-भौतिकाशेषशब्दसमन्वयः क्रियते ।**

**ಅನು.:–** ಭಗವಂತನಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಆಕಾಶಪದವನ್ನು ಹಾಗೂ ಅದರಿಂದ ಉಪಲಕ್ಷಿತವಾದ ಆಧಿಭೌತಿಕ ಎಲ್ಲ ಶಬ್ದಗಳ ಸಮನ್ವಯವನ್ನು ಈ ಎಂಟನೇ ಆಕಾಶಾಧಿಕರಣದಲ್ಲಿ ಮಾಡಲಾಗುತ್ತದೆ.

ಆನಂದಮಯನಾದ ವ್ಯಕ್ತಿಯ ವಿಷಯದಲ್ಲಿ "ಕೋ ಹ್ಯೇವಾನ್ಯಾತ್" ಎಂಬುದಾಗಿ ಆಕಾಶಶಬ್ದವು ಪ್ರಯೋಗಿಸಲ್ಪಟ್ಟಿದೆ. ಅದೇ ಆಕಾಶಶಬ್ದವೇ "ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ।" ಎಂಬುದಾಗಿ ಛಂದೋಗಶ್ರುತಿಯಲ್ಲಿಯೂ ಶ್ರುತವಾಗುತ್ತಿದೆ. ಈ ಛಂದೋಗಶ್ರುತಿಯಲ್ಲಿ ಶ್ರುತವಾಗುತ್ತಿರುವ ಆಕಾಶಶಬ್ದದಿಂದ ವಾಚ್ಯನಾದ ವ್ಯಕ್ತಿ ವಿಷ್ಣುವಿನಿಂದ ಭಿನ್ನರಾದ ಬೇರೆಯವರಾದರೆ ಕೋ ಹ್ಯೇವಾನ್ಯಾತ್ ಎಂದು ಹಿಂದೆ ಶ್ರುತವಾದ ಆಕಾಶ-ಶಬ್ದದಿಂದ ವಾಚ್ಯರಾದವರೂ ಅವರೇ ಆಗುವುದರಿಂದ ಆನಂದಮಯಶಬ್ದವಾಚ್ಯರೂ ಅವರೇ ಆಗುತ್ತಾರೆ. ಹೀಗಾಗಿ ಈ ಛಂದೋಗಶ್ರುತಿಯಲ್ಲಿ ಶ್ರುತವಾಗುತ್ತಿರುವ ಆಕಾಶಶಬ್ದ-ವಾಚ್ಯರಾದವರು ಯಾರು? ಎಂದು ನಿರ್ಣಯಿಸಬೇಕಿದೆ. ಅದಕ್ಕಾಗಿ ಈ ಅಧಿಕರಣವು ಪ್ರವೃತ್ತವಾಗಿದೆ.

## ಪೂರ್ವಪಕ್ಷ

**ಸೂ.ರ.:– नन्वस्य लोकस्येति श्रुत्युक्ताकाशो भूताकाश एव । आकाशशब्दस्य तत्र रूढत्वात् ।**

**ಅನುವಾದ :– ''अस्य लोकस्य का गतिरित्याकाश इति होवाच । सर्वाणि ह वा इमानि भूतान्याकाशादेव समुत्पद्यन्ते । आकाशं प्रत्यस्तं यान्त्याकाशो ह्येवैभ्यो ज्यायानाकाशः परायणं स एष परोवरीयानुद्गीथः स एषोऽनन्तः'' । (छां.उ.१-९)**

**ಅನು.:–** ಎಂಬ ಛಂದೋಗಶ್ರುತಿಯಲ್ಲಿ ಶ್ರುತವಾಗುತ್ತಿರುವ ಆಕಾಶಶಬ್ದವಾಚ್ಯ-ವಾದದ್ದು ಭೂತಾಕಾಶವೇ ಆಗುತ್ತದೆ. 'ಏಕೆಂದರೆ ಆಕಾಶಶಬ್ದವು ಭೂತಾಕಾಶದಲ್ಲಿಯೇ ರೂಢವಾಗಿದೆ. ಆದ್ದರಿಂದ ಆಕಾಶಶಬ್ದಃ ಭೂತಾಕಾಶವಾಚಕಃ, ತತ್ರ ತಸ್ಯ ರೂಢತ್ವಾತ್। ರೂಢಿಬಲದಿಂದಾಗಿ ಭೂತಾಕಾಶವೇ ಆಕಾಶಶಬ್ದವಾಚ್ಯವಾಗುತ್ತದೆ.

**ಸೂ.ರ.:– न चायमाकाशो विष्णुः । आकाशशब्दस्य तत्र यौगिकत्वेन सत्प्रतिपक्षतेति वाच्यम् । योगस्य हीनबलत्वेनाप्रतिपक्षत्वात् ।**

**ಅನು.:–** ಆಕಾಶಶಬ್ದವು ಭೂತಾಕಾಶದಲ್ಲಿ ರೂಢವಾಗಿದ್ದರೂ ಸಹ ವಿಷ್ಣುವಿನಲ್ಲಿ ಯೌಗಿಕವಾಗಿದೆ (ಯೋಗವೃತ್ತಿಯಿಂದ ವಿಷ್ಣುವನ್ನು ತಿಳಿಸಿಕೊಡುತ್ತದೆ.) ಹೀಗಾಗಿ –

ಆಕಾಶಶಬ್ದಃ ವಿಷ್ಣುವಾಚಕಃ ತತ್ರ ತಸ್ಯ ಯೌಗಿಕತ್ವಾತ್।

ಯೋಗವೃತ್ತಿಯಿಂದ ವಿಷ್ಣುವೇ ಆಕಾಶಶಬ್ದವಾಚ್ಯನಾಗುತ್ತಾನೆ ಎಂಬುದಾಗಿ ಪ್ರತಿಪಕ್ಷಾನುಮಾನ ಮಾಡುತ್ತೇವೆ ಎಂದರೆ, ಅದು ಸರಿಯಲ್ಲ. ರೂಢಿಗಿಂತಲೂ ಯೋಗವು ದುರ್ಬಲವಾಗಿದೆ. ಹೀಗಾಗಿ ಪ್ರಬಲವಾದ ರೂಢಿವೃತ್ತಿಯನ್ನೇ ಆಶ್ರಯಿಸಿದಾಗ ಭೂತಾಕಾಶವೇ ಆಕಾಶಶಬ್ದವಾಚ್ಯವಾಗುತ್ತದೆ.

**ಸೂ.ರ.:– न चाकाशशब्दप्रवृत्तिनिमित्तस्यावकाशत्वस्य समवाये-नाकाशवृत्तित्ववत्स्वातन्त्र्यलक्षणेन सम्बन्धेन हरावपि सत्त्वादुभयत्रापि रूढेरविशिष्टतेति न रूढ्या भूताकाशत्वनिर्णय इति वाच्यम् । आकाशस्या-चेतनत्वाद्भगवदधीनत्वाभावेनाकाशत्वस्य स्वस्वामिभावसम्बन्धेन तद्वृत्तित्वाभावात् ।**

**ಅನು.:–** ರೂಢಿವೃತ್ತಿಯ ಬಲದಿಂದಾಗಿ ಭೂತಾಕಾಶವೇ ಆಕಾಶಶಬ್ದವಾಚ್ಯವಾಗಿದೆ ಎಂದು ನಿರ್ಣಯಿಸುವುದು ಸರಿಯಲ್ಲ. ಏಕೆಂದರೆ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ರೂಢಿ ಇರುವಂತೆ ವಿಷ್ಣುವಿನಲ್ಲಿಯೂ ರೂಢಿ ಇದ್ದೇ ಇದೆ.

ವಿಷ್ಣುವಿನಲ್ಲಿ ರೂಢಿಯನ್ನು ಹೇಗೆ ಹೇಳುತ್ತೀರಿ? ಎಂದರೆ, ಆಕಾಶಶಬ್ದದ ಪ್ರವೃತ್ತಿ-ನಿಮಿತ್ತವಾದದ್ದು ಅವಕಾಶತ್ವ ಎನ್ನುವುದು. ಆ ಅವಕಾಶತ್ವ ಎನ್ನುವುದು ಸಮವಾಯ-ಸಂಬಂಧದಿಂದ ಭೂತಾಕಾಶದಲ್ಲಿ ಇರುವಂತೆ, ಸ್ವಾತಂತ್ರ್ಯರೂಪವಾದ ಸಂಬಂಧದಿಂದ ವಿಷ್ಣುವಿನಲ್ಲಿಯೂ ಇದ್ದೇ ಇದೆ. ಹೀಗಾಗಿ ಆಕಾಶಶಬ್ದಕ್ಕೆ ಭೂತಾಕಾಶ ಹಾಗೂ ವಿಷ್ಣು

ಇಬ್ಬರಲ್ಲಿಯೂ ರೂಢಿ ಸಮಾನವಾಗಿದೆ ಎಂದಮೇಲೆ ರೂಢಿಬಲದಿಂದಾಗಿ ಭೂತಾಕಾಶವೇ ಆಕಾಶಶಬ್ದವಾಚ್ಯವಾಗಿದೆ ಎಂದು ನಿರ್ಣಯಿಸಲು ಬರುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಚೇತನರು ಭಗವಂತನ ಅಧೀನರಾಗಬಹುದು. ಆದರೆ ಅಚೇತನವಾದ ವಸ್ತು ಭಗವಂತನ ಅಧೀನವಾಗಲು ಸಾಧ್ಯವಿಲ್ಲ. ಪ್ರಕೃತ ಭೂತಾಕಾಶವು ಅಚೇತನವಾದ್ದರಿಂದ ಅದು ಭಗವಂತನ ಅಧೀನವಾಗಲು ಸಾಧ್ಯವಿಲ್ಲ. ಹೀಗಾಗಿ ಆಕಾಶಶಬ್ದದ ಪ್ರವೃತ್ತಿನಿಮಿತ್ತವಾದ ಅವಕಾಶತ್ವವು (ಆಕಾಶತ್ವವು) ಸ್ವಸ್ವಾಮಿಭಾವ ಸಂಬಂಧದಿಂದ ಭಗವಂತನಲ್ಲಿ ಇಲ್ಲವಾದ್ದರಿಂದ ಆಕಾಶಶಬ್ದಕ್ಕೆ ವಿಷ್ಣುವಿನಲ್ಲಿ ರೂಢಿ ಇರುವುದಿಲ್ಲ. ಆದ್ದರಿಂದ ಭೂತಾಕಾಶವೇ ಆಕಾಶಶಬ್ದವಾಚ್ಯವಾಗುತ್ತದೆ.

**ಸೂ.ರ.:– एवं छन्दोगश्रुत्युक्ताकाशे भूताकाशे सति तैत्तिरीय-श्रुत्युक्ताकाशोऽपि रूढिबलादेव भूताकाशः । सर्वाणि ह वेति तदाकाशस्य भूतकारणतयोक्तत्वात् ।**

**ಅನು.:–** ಈ ರೀತಿಯಾಗಿ ಛಂದೋಗಶ್ರುತಿಯಲ್ಲಿ ಶ್ರುತವಾಗುವ ಆಕಾಶಶಬ್ದವಾಚ್ಯವಾದದ್ದು ಭೂತಾಕಾಶವೇ ಎಂದು ಸಿದ್ಧವಾದ ಮೇಲೆ, ಕೋ ಹ್ಯೇವಾನ್ಯಾತ್ ಎಂಬ ತೈತ್ತಿರೀಯ ಶ್ರುತಿಯಲ್ಲಿ ಶ್ರುತವಾಗುವ ಆಕಾಶಶಬ್ದಕ್ಕೆ ರೂಢಿವೃತ್ತಿಯಿಂದ ವಾಚ್ಯವಾದದ್ದೂ ಭೂತಾಕಾಶವೇ ಆಗುತ್ತದೆ.

"ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ" ಎಂಬುದಾಗಿ ತೈತ್ತಿರೀಯಶ್ರುತಿಯಲ್ಲಿ ಆಕಾಶಕ್ಕೆ (ಆಕಾಶಶಬ್ದವಾಚ್ಯನಾದ ವ್ಯಕ್ತಿಗೆ) ಭೂತಕಾರಣತ್ವವು ಶ್ರುತವಾಗುತ್ತಿದೆ. ಆ ಭೂತಕಾರಣತ್ವವು ಭೂತಾಕಾಶಕ್ಕೆ ಉಪಪನ್ನವಾಗುವುದರಿಂದ ತೈತ್ತಿರೀಯಶ್ರುತಿಯಲ್ಲಿ ಆಕಾಶಶಬ್ದವಾಚ್ಯವಾದದ್ದೂ ಭೂತಾಕಾಶವೇ ಆಗುತ್ತದೆ.

**ಸೂ.ರ.:– कार्यगतचेष्टायाः कारणाधीनतादर्शनेन को ह्येवान्यादिति (तै.२-७) श्रुत्युक्तजगच्चेष्टकत्वलिङ्गस्य सावकाशत्वेनाबाधकत्वात् । अत आकाशो न विष्णुरिति प्राप्ते सूत्रितम् ।**

**ಅನು.:–** ತೈತ್ತಿರೀಯಶ್ರುತಿಯಲ್ಲಿ ಆಕಾಶಶಬ್ದವಾಚ್ಯವಾದದ್ದು ಭೂತಾಕಾಶವೇ ಎಂದು ಹೇಗೆ ಹೇಳುತ್ತೀರಿ? ಏಕೆಂದರೆ, ಅಲ್ಲಿ ಕೋ ಹ್ಯೇವಾನ್ಯಾತ್ ಎಂಬುದಾಗಿ ಜಗಚ್ಚೇಷ್ಟಕತ್ವ-

ಲಿಂಗವು ಶ್ರುತವಾಗುತ್ತಿದೆ. ಆ ಜಗಚ್ಚೇಷ್ಟಕತ್ವಲಿಂಗವು ವಿಷ್ಣುವಿಗೆ ಕೂಡುತ್ತದೆಯೇ ಹೊರತು ಭೂತಾಕಾಶಕ್ಕೆ ಕೂಡುವುದಿಲ್ಲ. ಹಾಗಾಗಿ ಆಕಾಶಶಬ್ದವಾದದ್ದು ಭೂತಾಕಾಶವೇ ಎಂದು ಹೇಳಿದರೆ ಜಗಚ್ಚೇಷ್ಟಕತ್ವಲಿಂಗವೇ ಬಾಧಕವಾಗುತ್ತದೆಯಲ್ಲವೇ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಕಾರ್ಯಗತವಾದ ಚೇಷ್ಟೆಯು ಕಾರಣಾಧೀನವಾಗಿರುವುದು ಕಂಡಿದ್ದರಿಂದ ಕೋ ಹ್ಯೇವಾನ್ಯಾತ್ ಎಂಬ ಶ್ರುತಿಯಲ್ಲಿ ಹೇಳಿದ ಜಗಚ್ಚೇಷ್ಟಕತ್ವಲಿಂಗವು ಸಾವಕಾಶವಾದ್ದರಿಂದ ಬಾಧಕವಾಗುವುದಿಲ್ಲ.

ಆದ್ದರಿಂದ ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೊವಾಚ ಎಂಬುದಾಗಿ ಛಂದೋಗಶ್ರುತಿಯಲ್ಲಿ ಶ್ರುತವಾಗುತ್ತರುವ ಆಕಾಶಶಬ್ದದಿಂದ ವಾಚ್ಯವಾದದ್ದು ಭೂತಾಕಾಶವೇ ಹೊರತು ವಿಷ್ಣು ಅಲ್ಲ ಎಂಬುದಾಗಿ ಪೂರ್ವಪಕ್ಷ ಪಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡಲು ಸೂತ್ರವು ಪ್ರವೃತ್ತವಾಗುತ್ತದೆ :-

## ಸೂತ್ರ - 22

## ॐ आकाशस्तालिङ्गात् ॐ (१.१.२२)

**ಸೂತ್ರಾರ್ಥ :-** ಆಕಾಶಃ = ಆಕಾಶಶಬ್ದವಾಚ್ಯನಾದವನು ವಿಷ್ಣುವೇ. ಹೊರತು ಪ್ರಸಿದ್ಧವಾದ ಭೂತಾಕಾಶ ಅಲ್ಲ. ಯಾಕೆ? ತಲ್ಲಿಂಗಾತ್ = ಛಂದೋಗಶ್ರುತಿಯಲ್ಲಿ ಆಕಾಶಶಬ್ದವಾಚ್ಯನಾದ ವ್ಯಕ್ತಿಯ ವಿಷಯದಲ್ಲಿ ಪರೋವರೀಯಸ್ತ್ವ ಮೊದಲಾದ ವಿಷ್ಣುವಿನ ಲಿಂಗವು ಶ್ರುತವಾಗುತ್ತಿರುವುದರಿಂದ.

## ಸಿದ್ಧಾಂತ

**ಸೂ.ರ.:-** एवं च परोवरीयस्त्वादिनिरवकाशविष्णुलिङ्गात् ।

**ಅನು.:-** ಅಸ್ಯ ಲೋಕಸ್ಯ ಎಂಬ ಛಂದೋಗಶ್ರುತಿಯಲ್ಲಿ ಆಕಾಶಶಬ್ದವು ಶ್ರುತ-ವಾಗುತ್ತಿದೆ. ಆ ಆಕಾಶಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಏಕೆಂದರೆ - ಆ ಆಕಾಶಬ್ದವಾಚ್ಯನಾದ ವ್ಯಕ್ತಿಯ ವಿಷಯದಲ್ಲಿ ಅಲ್ಲಿಯೇ ಮುಂದೆ

"ಆಕಾಶಂ ಪ್ರತ್ಯಸ್ತಂ ಯಾಂತ್ಯಾಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಂ ಸ ಏಷ ಪರೋವರೀಯಾನುದ್ಗಿಥಃ ಸ ಏಷೋಽನಂತಃ" (ಛಾಂ.ಉ. 1-9)

ಎಂಬುದಾಗಿ ಪರೋವರೀಯಸ್ತ್ವ ಮೊದಲಾದ ಲಿಂಗಗಳು ಶ್ರುತವಾಗುತ್ತಿವೆ. ಆ

ಪರೋವರೀಯಸ್ತ್ವ ಮೊದಲಾದ ಲಿಂಗಗಳು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆಯೇ ಹೊರತು ಭೂತಾಕಾಶಕ್ಕೆ ಅಲ್ಲ. ಹೀಗಾಗಿ ಅವು ವಿಷ್ಣುವಿಗೆ ಸಾಧಕವಾಗುವ ನಿರವಕಾಶ-ಲಿಂಗಗಳಾಗಿವೆ. ಅಂತಹ ನಿರವಕಾಶವಾದ ವಿಷ್ಣುಲಿಂಗಗಳು (ಪರೋವರೀಯಸ್ತ್ವ ಮೊದಲಾದ ಲಿಂಗಗಳು) ಶ್ರುತವಾಗುತ್ತಿರುವುದರಿಂದ ಆಕಾಶಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ.

**ಸೂ.ರ.:– आकाशशब्दस्य महायोगविद्वद्रूढिसद्भावेन तत्रैव मुख्यत्वात् ।**

**ಅನು.:–** ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ರೂಢಿ ಇದೆ. ಆ ರೂಢಿ ವಿಷ್ಣುವಿನಲ್ಲಿ ಇಲ್ಲ. ವಿಷ್ಣುವಿನಲ್ಲಿ ಕೇವಲ ಯೋಗ ಇದೆ. ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿದೆ. ಹೀಗಾಗಿ ರೂಢಿಬಲದಿಂದ ವಿಚಾರ ಮಾಡಿದರೆ ಭೂತಾಕಾಶವೇ ಆಕಾಶಶಬ್ದವಾಚ್ಯವಾಗಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಏಕೆಂದರೆ, ವಿಷ್ಣುವಿನಲ್ಲಿ ಆಕಾಶಶಬ್ದಕ್ಕೆ ಕೇವಲ ಯೋಗ ಇರುತ್ತಿದ್ದರೆ ಆಗ ಈ ರೀತಿ ಶಂಕಿಸಬಹುದಿತ್ತು. ವಿಷ್ಣುವಿನಲ್ಲಿ ಇದ್ದದ್ದು ಕೇವಲ ಯೋಗ ಅಲ್ಲ. ಕಿಂತು ಮಹಾಯೋಗ ಇದೆ. ಕೇವಲ ಯೋಗಕ್ಕಿಂತ ರೂಢಿ ಪ್ರಬಲವಾದರೂ ಮಹಾಯೋಗಕ್ಕಿಂತ ರೂಢಿ ಪ್ರಬಲವಾಗುವುದಿಲ್ಲ.

ಅಷ್ಟೇ ಅಲ್ಲದೇ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ಕೇವಲ ರೂಢಿ ಇದ್ದರೂ, ವಿಷ್ಣುವಿನಲ್ಲಿ ವಿದ್ವದ್ರೂಢಿ ಇದೆ. ಕೇವಲ ರೂಢಿಗಿಂತಲೂ ವಿದ್ವದ್ರೂಢಿಯು ಪ್ರಬಲವಾಗಿದೆ. ಹೀಗಾಗಿ ಆಕಾಶಶಬ್ದಕ್ಕೆ ಮಹಾಯೋಗ ಮತ್ತು ವಿದ್ವದ್ರೂಢಿ ಎರಡೂ ವಿಷ್ಣುವಿನ ವಿಷಯದಲ್ಲಿ ಇರುವುದರಿಂದ ವಿಷ್ಣುವೇ ಮುಖ್ಯವಾಗಿ ಆಕಾಶಶಬ್ದವಾಚ್ಯನಾಗುತ್ತಾನೆ.

**ಸೂ.ರ.:– ततश्च छन्दोगश्रुत्युक्ताकाशस्य विष्णुत्वे तैत्तिरीयोक्तोऽपि जगच्चेष्टकत्वलिङ्गबलादेव विष्णुः । चेष्टकत्वस्य कर्तर्येव मुख्यत्वात् । मुख्ये सम्भवत्यमुख्यग्रहणायोगात् ।**

**ಅನು.:–** ಹೀಗೆ ಛಂದೋಗಶ್ರುತಿಯಲ್ಲಿ ಆಕಾಶಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾದ ಮೇಲೆ, ತೈತ್ತಿರೀಯಶ್ರುತಿಯಲ್ಲಿ ಆಕಾಶಶಬ್ದವಾಚ್ಯನಾದವನೂ ವಿಷ್ಣುವೇ ಆಗುತ್ತಾನೆ. ಏಕೆ? ತೈತ್ತಿರೀಯ ಶ್ರುತಿಯಲ್ಲಿ ಜಗಚ್ಚೇಷ್ಟಕತ್ವ ಲಿಂಗವು ಶ್ರುತವಾಗುತ್ತಿದೆ. ಚೇಷ್ಟಕತ್ವ ಎನ್ನುವುದು ಕರ್ತೃವಿನಲ್ಲಿಯೇ ಮುಖ್ಯವಾಗಿ ಉಪಪನ್ನವಾಗುವುದರಿಂದ ಅಲ್ಲಿಯೂ ಆಕಾಶಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

ಚೇಷ್ಟಕತ್ವವು ಮುಖ್ಯವಾಗಿ ಕರ್ತೃವಿನಲ್ಲಿ (ವಿಷ್ಣುವಿನಲ್ಲಿ) ಇದ್ದರೂ ಸಹ, ಅಮುಖ್ಯ-ವಾಗಿ ಭೂತಾಕಾಶದಲ್ಲಿಯೂ ಬರಬಹುದಲ್ಲ? ಎಂದರೆ, ಅದು ಸರಿಯಲ್ಲ. "ಮುಖ್ಯೇ ಸತಿ ಅಮುಖ್ಯಗ್ರಹಣಾಯೋಗಾತ್" ಮುಖ್ಯವಾದದ್ದನ್ನೇ ತೆಗೆದುಕೊಳ್ಳಲು ಬರುವಾಗ ಅಮುಖ್ಯವಾದದ್ದನ್ನು ತೆಗೆದುಕೊಳ್ಳುವುದು ಸರಿಯಲ್ಲ. ಹಾಗಾಗಿ ಜಗಚ್ಚೇಷ್ಟ- ಕತ್ವವು ಮುಖ್ಯವಾಗಿ ವಿಷ್ಣುವಿನಲ್ಲಿಯೇ ಬರುವುದರಿಂದ ವಿಷ್ಣುವೇ ಆಕಾಶಶಬ್ದ- ವಾಚ್ಯನಾಗುತ್ತಾನೆ.

**ಸೂ.ರ.:– सर्वचेष्टकत्वस्य सर्वोत्तमत्वव्याप्तत्वेन भूताकाशे सर्वोत्तमत्व-स्याभावेन सर्वचेष्टकत्वाभावात् । न चाचेतनस्यापि चेतनानुग्रहेणानन्दः सम्भवति । अप्रामाणिकत्वात् । तस्मादाकाशो विष्णुरेवेति सिद्धम् ।**

ಅನು.:– ಮತ್ತು, ಸರ್ವಚೇಷ್ಟಕತ್ವವು ಸರ್ವೋತ್ತಮತ್ವದಿಂದ ವ್ಯಾಪ್ತವಾಗಿದೆ. ಯಸ್ಯ ಸರ್ವಚೇಷ್ಟಕತ್ವಂ ತಸ್ಯ ಸರ್ವೋತ್ತಮತ್ವಂ (ಸರ್ವಚೇಷ್ಟಕತ್ವ ಒಪ್ಪಿದರೆ ಸರ್ವೋತ್ತಮತ್ವವನ್ನೂ ಒಪ್ಪಬೇಕಾಗುತ್ತದೆ) ಎಂದು ವ್ಯಾಪ್ತಿ ಇದೆ. ಪ್ರಕೃತ ಭೂತಾಕಾಶಕ್ಕೆ ಸರ್ವಚೇಷ್ಟಕತ್ವವನ್ನು ಒಪ್ಪಿದರೆ ಅದಕ್ಕೆ ಸರ್ವೋತ್ತಮತ್ವವನ್ನೂ ಒಪ್ಪಬೇಕಾಗುತ್ತದೆ. ಆದರೆ ಭೂತಾಕಾಶಕ್ಕೆ ಸರ್ವೋತ್ತಮತ್ವವು ಕೂಡುವುದಿಲ್ಲ. ಆದ್ದರಿಂದ ವ್ಯಾಪಕವಾದ ಸರ್ವೋತ್ತಮತ್ವ ಇಲ್ಲವಾದರೆ ವ್ಯಾಪ್ಯವಾದ ಸರ್ವಚೇಷ್ಟಕತ್ವವೂ ಇರುವುದಿಲ್ಲ.

ಆದ್ದರಿಂದ ಅಸ್ಯ ಲೋಕಸ್ಯ ಎಂಬ ಛಂದೋಗಶ್ರುತಿಯಲ್ಲಿ ಆಕಾಶಶಬ್ದವಾಚ್ಯನಾದವನ ವಿಷಯದಲ್ಲಿ ಪರೋವರೀಯಸ್ತ್ವ ಮೊದಲಾದ ವಿಷ್ಣುಸಾಧಕ – ನಿರವಕಾಶ ಲಿಂಗಗಳು ಶ್ರುತವಾಗುತ್ತಿರುವುದರಿಂದ ಅಲ್ಲಿ ಆಕಾಶಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

ಮತ್ತು ಕೋ ಹ್ಯೇವಾನ್ಯಾತ್ ಎಂಬ ತೈತ್ತಿರೀಯಶ್ರುತಿಯಲ್ಲಿಯೂ ಸಹ ಆಕಾಶಶಬ್ದ-ವಾಚ್ಯನಾದ ವ್ಯಕ್ತಿಗೆ ಜಗಚ್ಚೇಷ್ಟಕತ್ವ ಲಿಂಗವು ಶ್ರುತವಾಗುತ್ತಿದೆ. ಆ ಜಗಚ್ಚೇಷ್ಟಕತ್ವ ಲಿಂಗವು ಸರ್ವೋತ್ತಮನಾದ ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ ಅಲ್ಲಿಯೂ ಆಕಾಶಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಇಲ್ಲಿಗೆ ಆಕಾಶಾಧಿಕರಣವು ಮುಗಿಯಿತು.

*ಅಧಿಕರಣ – 9*

# ಪ್ರಾಣಾಧಿಕರಣ

## ಸಂಗತಿ

**ಸೂ.ರ.:– अत्र लोकतोऽन्यत्र प्रसिद्धाध्यात्मिकाशेषशब्दोपलक्षक-प्राणशब्दस्य ब्रह्मणि समन्वयः क्रियते ।**

**ಅನು.:–** ಲೋಕತಃ ಅನ್ಯತ್ರ ಪ್ರಸಿದ್ಧವಾದ ಆಧ್ಯಾತ್ಮಿಕವಾದ ಎಲ್ಲ ಶಬ್ದಗಳಿಗೆ ಉಪಲಕ್ಷಕ-ವಾದ ಪ್ರಾಣಶಬ್ದಸಮನ್ವಯವನ್ನು ಬ್ರಹ್ಮನಲ್ಲಿ ಮಾಡುತ್ತಾರೆ ಒಂಭತ್ತನೆಯ ಈ ಪ್ರಾಣಾಧಿಕರಣದಲ್ಲಿ

ಹಿಂದೆ ಆನಂದಮಯಾಧಿಕರಣದಲ್ಲಿ ವಿಷ್ಣುವಿಗೆ ಆನಂದಮಯತ್ವವನ್ನು ಹೇಳಿದೆ. ಆದರೆ ಈ ಆನಂದಮಯತ್ವವು

"ತದ್ವೈ ತ್ವಂ ಪ್ರಾಣೋ ಅಭವಃ ಮಹಾನ್ ಭೋಗಃ ಪ್ರಜಾಪತೇಃ ।" (ತೈ.ಆ. 3-14) ಎಂಬುದಾಗಿ ಪ್ರಾಣಶಬ್ದವಾಚ್ಯನಾದ ಒಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಆ ಪ್ರಾಣ-ಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವಿನಿಂದ ಭಿನ್ನನಾದ ಬೇರೆಯವರಾದರೆ ಆನಂದಮಯತ್ವವೂ ಅವನಿಗೇ ಉಪಪನ್ನವಾಗುತ್ತದೆ. ವಿಷ್ಣುವಿಗೆ ಆನಂದಮಯತ್ವವು ಕೂಡಲೇ ಹೋಗ-ಬೇಕಾಗುತ್ತದೆ. ಆದ್ದರಿಂದ ಆನಂದಮಯನಾಗಿರುವ ವಿಷ್ಣುವೇ ಇಲ್ಲಿ ಪ್ರಾಣಶಬ್ದವಾಚ್ಯ-ನಾಗಿದ್ದಾನೆ ಎಂದು ಹೇಳಬೇಕಿದೆ. ಅದಕ್ಕಾಗಿ ಈ ಅಧಿಕರಣವು ಪ್ರವೃತ್ತವಾಗಿದೆ.

## ಪೂರ್ವಪಕ್ಷ

**ಸೂ.ರ.:– नन्वयं प्राणो वायुरेव । प्राणशब्दस्य तत्र रूढत्वात् । विष्णौ रूढेरभावात्प्राणश्रुतेस्तत्र सावकाशत्वाभावात् ।**

**ಅನು.:–** "ತದ್ವೈ ತ್ವಂ ಪ್ರಾಣೋ ಅಭವಃ ಮಹಾನ್ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ ಯದ್ದೇವಾನ್ಪ್ರಾಣಯೋ ನ ವಾ" (ತೈ.ಆ. 3-14) ಎಂಬುದಾಗಿ ತೈತ್ತಿರೀಯ ಆರಣ್ಯಕದಲ್ಲಿ ಪ್ರಾಣಶಬ್ದವು ಶ್ರುತವಾಗುತ್ತಿದೆ. ಆ ಪ್ರಾಣಶಬ್ದವಾಚ್ಯರಾದವರು ವಾಯುದೇವರೇ ಆಗುತ್ತಾರೆ. ಏಕೆ? ಪ್ರಾಣಶಬ್ದವು ವಾಯುದೇವರಲ್ಲಿಯೇ ರೂಢವಾಗಿದೆ. ಹೀಗಾಗಿ ರೂಢಿಬಲದಿಂದಾಗಿ ವಾಯುದೇವರೇ ಪ್ರಾಣಶಬ್ದವಾಚ್ಯರಾಗುತ್ತಾರೆ.

ರೂಢಿಬಲದಿಂದ ವಿಷ್ಣುವೂ ಪ್ರಾಣಶಬ್ದವಾಚ್ಯನಾಗಬಹುದಲ್ಲ? ಹಾಗಾದರೆ ಶ್ರುತಿಗತವಾದ ಪ್ರಾಣಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಪ್ರಾಣಶಬ್ದಕ್ಕೆ ವಿಷ್ಣುವಿನಲ್ಲಿ ರೂಢಿ ಇರುತ್ತಿದ್ದರೆ ಈ ರೀತಿ ಶಂಕಿಸಬಹುದಾಗಿತ್ತು. ಆದರೆ ಪ್ರಾಣಶಬ್ದಕ್ಕೆ ವಿಷ್ಣುವಿನಲ್ಲಿ ರೂಢಿ ಇಲ್ಲವಾದ್ದರಿಂದ ಪ್ರಾಣಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗುವುದಿಲ್ಲ.

**ಸೂ.ರ.:– यौगिकार्थस्य जीवनकारणत्वस्यान्वयव्यतिरेकाभ्यां वायावेव दर्शनात् । ततश्च प्राणो वायुरेवेति प्राप्ते सूत्रमाह–**

**ಅನು.:–** ಪ್ರಾಣಶಬ್ದಕ್ಕೆ ವಿಷ್ಣುವಿನಲ್ಲಿ ರೂಢಿಯನ್ನು ಹೇಳಲು ಆಗದಿದ್ದರೂ ಸಹ ಯೋಗವನ್ನು ಹೇಳಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಏಕೆಂದರೆ – ಪ್ರಾಣಶಬ್ದಕ್ಕೆ ಯೋಗವನ್ನು ಹೇಳಬೇಕಾದರೆ ಜೀವನಕಾರಣತ್ವ ಎಂಬ ಯೌಗಿಕಾರ್ಥವು ವಿಷ್ಣುವಿನಲ್ಲಿ ಇರಬೇಕು. ಆದರೆ ಜೀವನಕಾರಣತ್ವವು ವಿಷ್ಣುವಿನಲ್ಲಿ ಇಲ್ಲ. ಕಿಂತು ಸತಿ ವಾಯೌ ಜೀವನಂ, ವಾಯೋರಭಾವೇ ಜೀವನಾಭಾವಃ ಎಂಬ ಅನ್ವಯ – ವ್ಯತಿರೇಕಗಳಿಂದಾಗಿ ಜೀವನಕಾರಣತ್ವವು ವಾಯುವಿನಲ್ಲಿಯೇ ಇದೆ ಎಂದು ತಿಳಿದುಬರುತ್ತದೆ. ಪ್ರಾಣಶಬ್ದದ ಯೌಗಿಕಾರ್ಥವಾದ ಜೀವನಕಾರಣತ್ವವು ವಾಯುವಿನಲ್ಲಿ ಇರುವುದರಿಂದ ಪ್ರಾಣಶಬ್ದಕ್ಕೆ ಯೋಗವೂ ವಾಯುವಿನಲ್ಲಿಯೇ ಇದೆ ಎಂದಾಯಿತು. ಹೀಗೆ ಪ್ರಾಣಶಬ್ದಕ್ಕೆ ರೂಢಿ ಹಾಗೂ ಯೋಗ ಎರಡೂ ವಾಯುವಿನಲ್ಲಿಯೇ ಇರುವ ಕಾರಣ ಪ್ರಾಣಶಬ್ದವಾಚ್ಯರಾದವರು ವಾಯುದೇವರೇ. ವಿಷ್ಣು ಅಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

ಸೂತ್ರ – 23

**ॐ अत एव प्राणः ॐ (१.१.२३)**

**ಸೂತ್ರಾರ್ಥ :-** ಪ್ರಾಣಃ = ಯದ್ವೈ ತ್ವಂ ಪ್ರಾಣೋऽಭವಃ ಎಂಬ ಶ್ರುತ್ಯುಕ್ತವಾದ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಹೊರತು ಬೇರೆ ಯಾರೂ (ವಾಯುದೇವರು) ಆಗುವುದಿಲ್ಲ. ಯಾಕೆ? ಅತ ಏವ = ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಎಂಬುದಾಗಿ ಶ್ರೀಪತಿತ್ವ ಲಿಂಗ ಇರುವುದರಿಂದಲೇ.

## ಸಿದ್ಧಾಂತ

**ಸೂ.ರ.:– एवं च निरवकाशश्रीपतित्वलिङ्गात् ।**

**ಅನು.:–** ತದ್ವೈ ತ್ವಂ ಪ್ರಾಣೋಽಭವಃ ಎಂದು ಪ್ರಾಣನನ್ನು ತಿಳಿಸುವ ಅದೇ ತೈತ್ತಿರೀಯ ಶ್ರುತಿಯಲ್ಲಿ ಮುಂದೆ ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ ಎಂಬುದಾಗಿ ಶ್ರೀಪತಿತ್ವಲಿಂಗವು ಶ್ರುತವಾಗುತ್ತಿದೆ. ಆ ಶ್ರೀಪತಿತ್ವಲಿಂಗವು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ ನಿರವಕಾಶವಾದ ಶ್ರೀಪತಿತ್ವಲಿಂಗದಿಂದಾಗಿ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

**ಸೂ.ರ.:– ईशानः प्राणदः प्राण इति विद्वद्रूढेर्महायोगस्य च विष्णौ सत्वेन श्रुतेः सावकाशत्वात् । प्राणगतजीवनान्वय व्यतिरेकस्यापि न प्राणेनेति श्रुतेर्भगवदधीनत्वात् । अतः प्राणशब्दवाच्यो विष्णुरेवेति सिद्धम् ।**

**ಅನು.:–** ಪ್ರಾಣಶಬ್ದಕ್ಕೆ ವಾಯುದೇವರಲ್ಲಿ ರೂಢಿ ಇರುವುದರಿಂದ "ಪ್ರಾಣಶಬ್ದ-ವಾಚ್ಯನಾದವನು ವಿಷ್ಣು" ಎಂದು ಹೇಳಿದರೆ ಆ ರೂಢಿಯೇ ಬಾಧಕವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಪ್ರಾಣಶಬ್ದಕ್ಕೆ ವಾಯುದೇವರಲ್ಲಿ ಕೇವಲ ರೂಢಿ ಇದ್ದರೂ, ಅದೇ ಪ್ರಾಣಶಬ್ದಕ್ಕೆ ವಿಷ್ಣುವಿನಲ್ಲಿ "ಈಶಾನಃ ಪ್ರಾಣದಃ ಪ್ರಾಣಃ" ಎಂಬುದಾಗಿ ವಿದ್ವದ್ರೂಢಿಯು ಶ್ರುತವಾಗುತ್ತಿದೆ. ಕೇವಲ ರೂಢಿಗಿಂತಲೂ ವಿದ್ವದ್ರೂಢಿಯೇ ಪ್ರಬಲವಾಗಿದೆ. ಹೀಗಾಗಿ ವಿದ್ವದ್ರೂಢಿಬಲದಿಂದಾಗಿ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ.

ಪ್ರಾಣಶಬ್ದಕ್ಕೆ ವಾಯುವಿನಲ್ಲಿ ಯೋಗ ಇದೆಯಲ್ಲವೇ? ಯೌಗಿಕಾರ್ಥವಾದ ಜೀವನಕಾರಣತ್ವವು ವಾಯುದೇವರಲ್ಲಿಯೇ ಕೂಡುತ್ತದೆಯಾದ್ದರಿಂದ ಯೋಗಬಲ-ದಿಂದಾಗಿ ವಾಯುವು ಪ್ರಾಣಶಬ್ದವಾಚ್ಯನಾಗಬಹುದಲ್ಲವೇ? ಎಂದರೆ, ಅದೂ ಸರಿಯಲ್ಲ. ಪ್ರಾಣಶಬ್ದಕ್ಕೆ ಕೇವಲ ಯೋಗ ವಾಯುವಿನಲ್ಲಿದ್ದರೂ ಮಹಾಯೋಗವು ವಿಷ್ಣುವಿನಲ್ಲಿ ಇದೆ.

**न प्राणेन नापानेन मर्त्यो जीवति कश्चन ।**
**इतरेण तु जीवन्ति यस्मिन्नेतावुपाश्रितौ ॥**

ಎಂಬುದಾಗಿ ಶ್ರುತಿಯು ತಿಳಿಸುವಂತೆ ಪ್ರಾಣನಲ್ಲಿರುವ ಜೀವನಕಾರಣತ್ವವೂ ಭಗವಂತನ ಅಧೀನವೇ ಆಗಿದೆ. ಹೀಗಾಗಿ ಪ್ರಾಣಶಬ್ದಕ್ಕೆ ವಾಯುವಿನಲ್ಲಿ ಕೇವಲ ಯೋಗವಿದ್ದರೂ ವಿಷ್ಣುವಿನಲ್ಲಿ ಮಹಾಯೋಗವಿದೆ.

ಆದ್ದರಿಂದ ಪ್ರಾಣಶಬ್ದಕ್ಕೆ ವಿದ್ವದ್ರೂಢಿ ಹಾಗೂ ಮಹಾಯೋಗ ಎರಡೂ ವಿಷ್ಣು-ವಿನಲ್ಲಿಯೇ ಇರುವುದರಿಂದ ತೈತ್ತಿರೀಯಶ್ರುತಿಯಲ್ಲಿ ಶ್ರುತವಾಗುತ್ತಿರುವ ಪ್ರಾಣಶಬ್ದವಾಚ್ಯ-ನಾದವನು ವಿಷ್ಣುವೇ ಆಗುತ್ತಾನೆ. ವಿಷ್ಣುವೇ ಪ್ರಾಣಶಬ್ದವಾಚ್ಯನಾದ ಮೇಲೆ ಆನಂದಮಯ ಶಬ್ದವಾಚ್ಯನಾದವನೂ ಅವನೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

**ಇಲ್ಲಿಗೆ ಪ್ರಾಣಾಧಿಕರಣವು ಮುಗಿಯಿತು.**

*ಅಧಿಕರಣ – 10*

# ಜ್ಯೋತಿರಧಿಕರಣ

## ಸಂಗತಿ

**ಸೂ.ರ.:– अत्र तत्तसूत्रगत शेषशब्दोपलक्षकस्य लोकतोऽन्यत्र प्रसिद्धस्य ज्योतिर्नाम्नो ब्रह्मणि समन्वयः क्रियते ।**

ಅನು.:– ಆ ಆ ಸೂತ್ರಗಳಲ್ಲಿರುವ ಎಲ್ಲ ಶಬ್ದಗಳಿಗೂ ಉಪಲಕ್ಷಕವಾದ, ಲೋಕತಃ ಅನ್ಯತ್ರ ಪ್ರಸಿದ್ಧವಾದ ಜ್ಯೋತಿಃ ಶಬ್ದದ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡುತ್ತಾರೆ ಹತ್ತನೆಯ ಈ ಜ್ಯೋತಿರಧಿಕರಣದಲ್ಲಿ.

ಆನಂದಮಯನಾದ ವ್ಯಕ್ತಿಗೆ "ಯೋ ವೇದ ನಿಹಿತಂ ಗುಹಾಯಾಂ" ಎಂಬುದಾಗಿ ಹೃದಯಗುಹಾನಿಹಿತತ್ವವು ಶ್ರುತವಾಗುತ್ತಿದೆ. ಈ ಹೃದಯಗುಹಾನಿಹಿತತ್ವವು "ವಿ ಮೇ ಕರ್ಣಾ ಪತಯತಃ" ಎಂಬುದಾಗಿ ಜ್ಯೋತಿಃಶಬ್ದವಾಚ್ಯನಾದ ಒಬ್ಬ ವ್ಯಕ್ತಿಗೆ ಪ್ರತೀತವಾಗುತ್ತಿದೆ. ಈ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವಿನಿಂದ ಭಿನ್ನನಾದವನಾದರೆ ಅವನೇ ಆನಂದಮಯನೂ ಆಗಬೇಕಾಗುತ್ತದೆ. ಹೀಗಾಗಿ ಈ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ಯಾರು? ಎಂದು ನಿರ್ಣಯಿಸಬೇಕಾಗುತ್ತದೆ. ಅದಕ್ಕಾಗಿ ಈ ಅಧಿಕರಣವು ಪ್ರವೃತ್ತವಾಗಿದೆ.

## ಪೂರ್ವಪಕ್ಷ

**ಸೂ.ರ.:– नन्वग्निरेवेदं ज्योतिः । तस्यसूक्तस्याग्निसूक्तत्वात् ।**

**ಅನುವಾದ :–**

**"वि मे कर्णा पतयतो विचक्षुर्वी ३ दं ज्योतिर्हृदय आहितं यत् ।**
**वि मे मनश्चरति दूर आधीः किंस्विद्वक्ष्यामि किमु नू मनिष्ये ॥"**
**(ऋ.सं. ६-९-६)**

**ಅನು.:–** ಎಂಬುದಾಗಿ ಆನಂದಮಯನಾದವನ ವಿಷಯದಲ್ಲಿ ಶ್ರುತವಾಗುತ್ತಿರುವ ಜ್ಯೋತಿಃಶಬ್ದದಿಂದ ವಾಚ್ಯನಾದ ವ್ಯಕ್ತಿ ಅಗ್ನಿಯೇ ಆಗುತ್ತಾನೆ. ಯಾಕೆ? ಇದು ಅಗ್ನಿಸೂಕ್ತ-ವಾದದ್ದರಿಂದ, ಅರ್ಥಾತ್ ಈ ಪ್ರಕರಣವು ಅಗ್ನಿಪ್ರಕರಣವಾಗಿದೆ. ಇಂತಹ ಅಗ್ನಿಪ್ರಕರಣದಲ್ಲಿ ಶ್ರುತವಾಗುತ್ತಿರುವ ಜ್ಯೋತಿಃಶಬ್ದದಿಂದ ಅಗ್ನಿಯೇ ವಾಚ್ಯನಾಗಬೇಕು.

**ಸೂ.ರ.:– न च लिङ्गात्प्रकरणस्य दुर्बलत्वेन गुहानिहितत्व लिङ्गात्प्रकरणबाधः । ज्योतिःश्रुतेरग्नौनिरूढत्वात् । विष्णौ तदभावात् ।**

**ಅನು.:–** ಲಿಂಗಕ್ಕಿಂತಲೂ ಪ್ರಕರಣವು ದುರ್ಬಲವಾಗಿದೆ. ಪ್ರಕೃತ ವಿ ಮೇ ಕರ್ಣಾ ಪತಯತಃ ಎಂಬ ಶ್ರುತಿಯು ಅಗ್ನಿಪ್ರಕರಣದಲ್ಲಿ ಶ್ರುತವಾಗುತ್ತಿದ್ದರೂ ಸಹ, ಅಲ್ಲಿರುವ ಹೃದಯಗುಹಾನಿಹಿತತ್ವ ಎಂಬ ಲಿಂಗವು ವಿಷ್ಣುವಿಗೆ ಮಾತ್ರ ಉಪಪನ್ನವಾಗುವಂತಹ-ದ್ದಾಗಿದೆ. ಹೀಗಾಗಿ ಅಗ್ನಿಪ್ರಕರಣಕ್ಕೆ ವಿಷ್ಣುವಿನ ಲಿಂಗದಿಂದ ಬಾಧ ಬರುತ್ತದೆಯಲ್ಲ? (ಲಿಂಗಬಲದಿಂದಾಗಿ ವಿಷ್ಣುವೇ ಜ್ಯೋತಿಃಶಬ್ದವಾಚ್ಯನಾಗಬಹುದಲ್ಲವೇ?) ಎಂದರೆ, ಅದು ಸರಿಯಲ್ಲ.

ಏಕೆಂದರೆ, ಅಗ್ನಿಯ ವಿಷಯದಲ್ಲಿ ಕೇವಲ ಪ್ರಕರಣ ಅಷ್ಟೇ ಇರುತ್ತಿದ್ದರೆ ಆಗ ಹೀಗೆ ಶಂಕಿಸಬಹುದಿತ್ತು. ಅಗ್ನಿಯ ಪ್ರಕರಣ ಎಂದಷ್ಟೇ ಅಲ್ಲ, ಕಿಂತು ಜ್ಯೋತಿಃಶಬ್ದಕ್ಕೆ ಅಗ್ನಿಯಲ್ಲಿ ರೂಢಿಯೂ ಇದೆ. ಈ ರೂಢಿ ವಿಷ್ಣುವಿನಲ್ಲಿ ಇಲ್ಲ. ಹಾಗಾಗಿ ವಿಷ್ಣುವಿನ ವಿಷಯದಲ್ಲಿ ಕೇವಲ ಲಿಂಗ ಇದ್ದರೂ ಅಗ್ನಿಯ ವಿಷಯದಲ್ಲಿ ಪ್ರಕರಣ ಹಾಗೂ ರೂಢಿ ಎರಡೂ ಇರುವುದರಿಂದ ಅಗ್ನಿಯ ಪಕ್ಷವೇ ಪ್ರಬಲವಾಗುತ್ತದೆ.

**ಸೂ.ರ.:– न च लिङ्गस्य निरवकाशत्वेन श्रुतिप्रकरणबाधकत्वमिति वाच्यम् । लिङ्गस्यापि जाठरजातवेदसि सावकाशत्वात् ।**

**ಅನು.:–** ವಿಷ್ಣುವಿನ ವಿಷಯದಲ್ಲಿ ಇರುವ ಹೃದಯಗುಹಾನಿಹಿತತ್ವ ಲಿಂಗವನ್ನು ಬೇರೆ ಎಲ್ಲೂ ಸಮನ್ವಯ ಮಾಡಲು ಬರುವುದಿಲ್ಲವಾದ್ದರಿಂದ ಈ ಲಿಂಗವು ನಿರವಕಾಶವಾಗಿದೆ.

ಇಂತಹ ನಿರವಕಾಶವಾದ ಲಿಂಗವು ಶ್ರುತಿ – ಪ್ರಕರಣಗಳಿಗೇ ಬಾಧಕವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ.

ಗುಹಾನಿಹಿತತ್ವಲಿಂಗವು ನಿರವಕಾಶವಾಗಿದ್ದರೆ ಈ ರೀತಿ ಶಂಕಿಸಬಹುದಿತ್ತು. ಆದರೆ ಲಿಂಗವು ನಿರವಕಾಶವಾಗಿಲ್ಲ. ಅರ್ಥಾತ್ ಗುಹಾನಿಹಿತತ್ವ ಲಿಂಗವನ್ನು ಜಾಠರಾಗ್ನಿಯಲ್ಲಿ ಸಮನ್ವಯ ಮಾಡಲು ಬರುತ್ತದೆಯಾದ್ದರಿಂದ ಗುಹಾನಿಹಿತತ್ವಲಿಂಗವು ಸಾವಕಾಶವೇ ಆಗಿದೆ. ಹೊರತು ನಿರವಕಾಶವಾಗಿಲ್ಲ.

**ಸೂ.ರ.:– लिङ्गस्य निरवकाशत्वेऽपि तस्यैकविधमेव प्राबल्यम् । श्रुतिप्रकरणयोस्त्वनेकप्रयुक्तप्राबल्यात् । श्रुतेश्च स्वभावत्वप्रयुक्तप्राबल्यमपीति श्रुतिप्रकरणाभ्यामेव लिङ्गस्य बाधो युक्तः । अतो ज्योतिषोऽग्नित्वमिति प्राप्ते सूत्रमाह ।**

**ಅನು.:–** ತುಷ್ಯತು ಎಂಬ ನ್ಯಾಯದಂತೆ ಲಿಂಗ ನಿರವಕಾಶವಾಗಿದೆ ಎಂದೇ ಒಪ್ಪಿದರೂ ಸಹ ಲಿಂಗಕ್ಕೆ ನಿರವಕಾಶತ್ವ ನಿಮಿತ್ತಕವಾದ ಒಂದು ರೀತಿಯ ಪ್ರಾಬಲ್ಯ ಮಾತ್ರ ಇದ್ದಂತಾಗುತ್ತದೆ. ಆದರೆ ಶ್ರುತಿ – ಪ್ರಕರಣಗಳಿಗೆ ಅನೇಕ ರೀತಿಯ ಪ್ರಾಬಲ್ಯ ಇದೆ. ಪ್ರಕರಣತ್ವ ಪ್ರಯುಕ್ತ ಪ್ರಾಬಲ್ಯದ ಜೊತೆಗೆ ಸ್ವಭಾವತ್ವ ಪ್ರಯುಕ್ತ ಪ್ರಾಬಲ್ಯವೂ ಶ್ರುತಿಗೆ ಇದೆ. ಹೀಗಾಗಿ ಅನೇಕ ರೀತಿಗಳಿಂದ ಪ್ರಾಬಲ್ಯ ಪಡೆದಂತಹ ಶ್ರುತಿ – ಪ್ರಕರಣಗಳಿಂದಲೇ ಗುಹಾನಿಹಿತತ್ವ ಲಿಂಗಕ್ಕೆ ಬಾಧ ಬರುತ್ತದೆ.

ಆದ್ದರಿಂದ ಅಗ್ನಿಯ ಪ್ರಕರಣ ಹಾಗೂ ಜ್ಯೋತಿಃಶಬ್ದಕ್ಕೆ ಅಗ್ನಿಯಲ್ಲಿ ರೂಢಿ, ಎರಡರ ನಿಮಿತ್ತದಿಂದಾಗಿ ಅಗ್ನಿಯೇ ಜ್ಯೋತಿಃಶಬ್ದವಾಚ್ಯನಾಗುತ್ತಾನೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ :-

ಸೂತ್ರ – 24

## ॐ ज्योतिश्चरणाभिधानात् ॐ (१.१.२४)

**ಸೂತ್ರಾರ್ಥ :-** ಜ್ಯೋತಿಃ = ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಬೇರೆ ಯಾರೂ ಆಗುವುದಿಲ್ಲ. ಯಾಕೆ? ಚರಣಾಭಿಧಾನಾತ್ = ಕರ್ಣ ಮೊದಲಾದವುಗಳ ವಿಚರಣವನ್ನು ಹೇಳಿದ್ದರಿಂದ. ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿಗೆ ಸಾಕಲ್ಯೇನ ಕರ್ಣಾದಿವಿದೂರತ್ವವು ಶ್ರುತವಾಗುತ್ತಿರುವುದರಿಂದ ಎಂದು ಅರ್ಥ.

## ಸಿದ್ಧಾಂತ

**ಸೂ.ರ.:– एवं च कर्णादिविदूरत्वाख्यविष्णुलिङ्गात् ।**

**ಅನು.:–** ವಿ ಮೇ ಕರ್ಣಾ ಪತಯತಃ ಎಂಬ ಶ್ರುತಿಯಲ್ಲಿ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿಗೆ ಕರ್ಣಾದಿವಿದೂರತ್ವವು ಶ್ರುತವಾಗುತ್ತಿದೆ. ಈ ಕರ್ಣಾದಿವಿದೂರತ್ವವಾದರೂ ವಿಷ್ಣುವಿನ ಲಿಂಗವಾಗಿದೆ. ಹೀಗಾಗಿ ವಿಷ್ಣುವಿನ ಲಿಂಗ ಇರುವುದರಿಂದ ವಿಷ್ಣುವೇ ಜ್ಯೋತಿಃಶಬ್ದವಾಚ್ಯನಾಗುತ್ತಾನೆ.

**ಸೂ.ರ.:– बहुत्वस्वभावबलवत्त्वरूपोभयविधप्राबल्यादपि निरवकाशत्वप्राबल्यस्य बलवत्त्वेन लिङ्गेन श्रुतिप्रकरणबाधोपपत्तेः ।**

**ಅನು.:–** ಅಗ್ನಿಯ ವಿಷಯದಲ್ಲಿ ಶ್ರುತಿ-ಪ್ರಕರಣ ಎರಡೂ ಇರುವುದರಿಂದ ಎರಡು ರೀತಿಯ ಪ್ರಾಬಲ್ಯ ಇದ್ದರೂ ಸಹ, ಅಂತಹ ಎರಡು ರೀತಿಯ ಪ್ರಾಬಲ್ಯಕ್ಕಿಂತಲೂ ನಿರವಕಾಶತ್ವ ಪ್ರಯುಕ್ತವಾದ ಪ್ರಾಬಲ್ಯವೇ ಪ್ರಬಲವಾಗುವುದರಿಂದ, ನಿರವಕಾಶವಾದ ವಿಷ್ಣುಲಿಂಗದಿಂದಲೇ ಶ್ರುತಿ-ಪ್ರಕರಣಗಳಿಗೆ ಬಾಧ ಬರುತ್ತದೆ.

**ಸೂ.ರ.:– महायोग विद्वद्रूढिसद्भावेन श्रुतेर्विष्णावेव मुख्यत्वात् । अतो विष्णुरेवेदं ज्योतिस्तस्यैव गुहानिहितत्वं चेति सिद्धम् ।**

**ಅನು.:–** ಅಷ್ಟೇ ಅಲ್ಲದೇ ಜ್ಯೋತಿಃಶಬ್ದಕ್ಕೆ ವಿಷ್ಣುವಿನಲ್ಲಿ ಮಹಾಯೋಗ ಹಾಗೂ ವಿದ್ವದ್ರೂಢಿ ಇದೆ. ಹಾಗಾಗಿ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿಯನ್ನು ತಿಳಿಸುವ ಶ್ರುತಿಯೂ ಸಹ ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ.

ಆದ್ದರಿಂದ ನಿರವಕಾಶವಾದ ಕರ್ಣಾದಿವಿದೂರತ್ವಲಿಂಗ ಇರುವುದರಿಂದ ಹಾಗೂ ಜ್ಯೋತಿಃಶಬ್ದಕ್ಕೆ ವಿಷ್ಣುವಿನಲ್ಲಿ ಮಹಾಯೋಗ-ವಿದ್ವದ್ರೂಢಿಗಳೂ ಇರುವುದರಿಂದ ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೃದಯಗುಹಾನಿಹಿತತ್ವ ಲಿಂಗವೂ ಸಹ ವಿಷ್ಣುವಿಗೇ ಉಪಪನ್ನವಾಗುತ್ತದೆ ಎಂದೂ ಸಿದ್ಧವಾಗುತ್ತದೆ.

ಇಲ್ಲಿಗೆ ಜ್ಯೋತಿರಧಿಕರಣವು ಮುಗಿಯಿತು.

ಅಧಿಕರಣ - 11

# ಛಂದೋಭಿಧಾನಾಧಿಕರಣ - ಗಾಯತ್ರ್ಯಧಿಕರಣ

## ಸಂಗತಿ

**ಸೂ.ರ.:– अत्राधिवेदगतगायत्र्याद्यशेषशब्दसमन्वयः क्रियते ।**

**ಅನು.:–** ಅಧಿವೇದಗತವಾದ ಗಾಯತ್ರೀ ಮೊದಲಾದ ಎಲ್ಲ ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡುತ್ತಾರೆ 11ನೇ ಗಾಯತ್ರ್ಯಧಿಕರಣದಲ್ಲಿ.

ಹೃದಯಗುಹಾನಿಹಿತನಾದವನು, ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ ಎಂದು ಹೇಳಲಾಗಿದೆ. ಈ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ''ಅಥಃ ಯದತಃ ಪರೋ ದಿವೋ'' ಎಂಬುದಾಗಿ ಛಂದೋಗಶ್ರುತಿಯಲ್ಲಿ ಪಠಿತನಾಗುತ್ತಿದ್ದಾನೆ. ''ಗಾಯತ್ರೀ ವಾ ಇದಂ ಸರ್ವಂ ಭೂತಂ ...'' ಎಂಬುದಾಗಿ ಉಪಕ್ರಮ ಇರುವುದರಿಂದ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿಯಾದರೋ ಗಾಯತ್ರೀತ್ವೇನ (ಗಾಯತ್ರೀಶಬ್ದವಾಚ್ಯನಾಗಿ) ಶ್ರುತವಾಗುತ್ತಿದ್ದಾನೆ. ಈ ಗಾಯತ್ರೀಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವಿನಿಂದ ಭಿನ್ನನಾಗಿರುವವನಾದರೆ ಜ್ಯೋತಿಃಶಬ್ದವಾಚ್ಯನಾದವನೂ ಅವನೇ ಆಗಬೇಕಾಗುತ್ತದೆ. ಹೀಗಾಗಿ ಗಾಯತ್ರೀಶಬ್ದವಾಚ್ಯನಾಗುವ ಈ ವ್ಯಕ್ತಿ ಯಾರು? ಎಂದು ನಿರ್ಣಯಿಸಬೇಕಿದೆ. ಅದಕ್ಕಾಗಿ ಈ ಅಧಿಕರಣ ಪ್ರಾರಂಭವಾಗುತ್ತದೆ.

## ಪೂರ್ವಪಕ್ಷ

**ಸೂ.ರ.:– ननु गायत्री छन्द एव । तच्छब्दस्य तत्रैव रूढत्वात् । वाग्वै गायत्रीति वाक्यविधानात् ।**

**ಅನುವಾದ :–**

**''गायत्री वा इदं सर्वं भूतं यदिदं किञ्च**
**वाग्वै गायत्री वाग्वा इदं सर्वम् ।''** (छां. ३-१२-१)

ಎಂಬುದಾಗಿ ಶ್ರುತವಾಗುತ್ತಿರುವ ಗಾಯತ್ರೀಶಬ್ದವಾಚ್ಯವಾದದ್ದು ಛಂದೋವಿಶೇಷವೇ ಆಗಿದೆ. ಏಕೆಂದರೆ – ಅಲ್ಲಿಯೇ ''ವಾಕ್ ವೈ ಗಾಯತ್ರೀ'' ಎಂಬುದಾಗಿ ವಾಕ್ಯವಿಧಾನ

ಇರುವುದರಿಂದ ಗಾಯತ್ರೀಶಬ್ದವು ಛಂದೋವಿಶೇಷದಲ್ಲಿ ರೂಢವಾಗಿದೆ. ರೂಢಿಬಲ-ದಿಂದಾಗಿ ಛಂದೋವಿಶೇಷವೇ ಗಾಯತ್ರೀಶಬ್ದವಾಚ್ಯವಾಗಿದೆ ಎಂದು ತಿಳಿಯುತ್ತದೆ.

**ಸೂ.ರ.:– न च गायत्र्या भगवदधीनत्वेन गायत्री शब्दस्तत्रैव मुख्य इति वाच्यम् । गायत्र्या वेदविशेषत्वान्नित्यत्वेन पराधीनत्वाभावात् । अतो गायत्री छन्दोविशेष एवेति प्राप्ते सूत्रं पठति ।**

**ಅನು.:–** ಗಾಯತ್ರೀ ಛಂದಸ್ಸು ಭಗವಂತನ ಅಧೀನವಾದ್ದರಿಂದ "ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ" ಎಂಬ ನಿಯಮದಂತೆ ಗಾಯತ್ರೀಶಬ್ದವು ಭಗವಂತ-ನಲ್ಲಿಯೇ ಮುಖ್ಯವಾಗಿದೆ. ಆದ್ದರಿಂದ ಭಗವಂತನೇ ಗಾಯತ್ರೀಶಬ್ದವಾಚ್ಯನಾದವನು ಎಂದು ಶಂಕಿಸಿದರೆ, ಅದು ಸರಿಯಲ್ಲ.

ಗಾಯತ್ರೀಮಂತ್ರವು ಭಗವಂತನ ಅಧೀನವಾಗಿದ್ದರೆ ಹೀಗೆ ಶಂಕಿಸಬಹುದಿತ್ತು. ಆದರೆ ಗಾಯತ್ರೀಮಂತ್ರವು ಭಗವದಧೀನವಾಗುವುದಿಲ್ಲ. ಕಾರಣ – ಗಾಯತ್ರೀಮಂತ್ರವು ವೇದದ ಒಂದು ಭಾಗವಾಗಿದೆ. ವೇದವು ನಿತ್ಯವಾದ್ದರಿಂದ ಗಾಯತ್ರೀಮಂತ್ರವೂ ನಿತ್ಯವಾಗಿದೆ. ನಿತ್ಯವಾದ ಮಂತ್ರವು ಭಗವದಧೀನವಾಗಲು ಸಾಧ್ಯವಿಲ್ಲವಾದ್ದರಿಂದ ಭಗವಂತನು ಗಾಯತ್ರೀಶಬ್ದವಾಚ್ಯನಾಗಲು ಸಾಧ್ಯವಿಲ್ಲ. ಗಾಯತ್ರೀ ಎಂಬ ಛಂದೋವಿಶೇಷವೇ ಗಾಯತ್ರೀಶಬ್ದವಾಚ್ಯವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡಲು ಸೂತ್ರವು ಪ್ರವೃತ್ತವಾಗುತ್ತದೆ :-

ಸೂತ್ರ – 25

**ॐ छन्दोभिधान्नेति चेन्न तथा चेतोर्पणनिगदात् तथा हि दर्शनम् ॐ (१.१.२५)**

**ಸೂತ್ರಾರ್ಥ :-** ಛಂದೋಭಿಧಾನಾತ್ = ಛಂದೋಗಶ್ರುತಿಯಲ್ಲಿರುವ ಗಾಯತ್ರೀ-ಪದದಿಂದ ಚತುರ್ವಿಂಶತ್ಯಕ್ಷರಾತ್ಮಕವಾದ (24 ಅಕ್ಷರಗಳುಳ್ಳ) ಛಂದಸ್ಸನ್ನು ಪ್ರತಿಪಾದನೆ ಮಾಡಿದ್ದರಿಂದ ನ ಇತಿ ಚೇತ್ = ಗಾಯತ್ರೀಶಬ್ದವಾಚ್ಯನಾದವನು ವಿಷ್ಣು ಅಲ್ಲ ಎಂದು ಶಂಕೆ ಬಂದರೆ, ನ = ಅದು ಸರಿಯಲ್ಲ. ಯಾಕೆ? (ತಥಾ ಹಿ ದರ್ಶನಂ) ಹಿ = ಯಾವ ಕಾರಣ ತಥಾ ದರ್ಶನಂ = ಗಾನ-ತ್ರಾಣಕರ್ತೃವಾದ್ದರಿಂದ ವಿಷ್ಣು ಗಾಯತ್ರೀಶಬ್ದವಾಚ್ಯನಾಗಿದ್ದಾನೆ ಎಂದು ಪ್ರತಿಪಾದಿಸುವ (ಛಾಂ. 3-12-1) ಶ್ರುತಿಯು ಇದೆ.

**ಅನು.:–** ಹಾಗಾದರೆ ಗಾಯತ್ರೀಪದದಿಂದ ವಿಷ್ಣುವನ್ನು ಅಭಿಧಾನ ಮಾಡಿದ್ದು ವ್ಯರ್ಥವೇ? ಎಂದರೆ, ಅದಕ್ಕೆ ಉತ್ತರರೂಪವಾಗಿ ಹೇಳಿದ್ದು ತಥಾ ಚೇತೋರ್ಪಣನಿಗದಾತ್ = ತಥಾ ಗಾಯತ್ರೀಶಬ್ದ ಪ್ರವೃತ್ತಿನಿಮಿತ್ತವಾದ ಗಾನ-ತ್ರಾಣಕರ್ತೃತ್ವ ಉಳ್ಳವನಾಗಿದ್ದಾನೆ ವಿಷ್ಣು ಎಂಬುದಾಗಿ ಚೇತಸಿ ಮನಸ್ಸಿನಲ್ಲಿ ಅರ್ಪಣಾಯ ಉಪಾಸನೆ ಮಾಡುವುದಕ್ಕಾಗಿ ನಿಗದಾತ್ ಶ್ರುತಿಯಲ್ಲಿ ಹಾಗೆ ಪ್ರತಿಪಾದನೆ ಮಾಡಿದ್ದರಿಂದ ವೈಯರ್ಥ್ಯ ಇಲ್ಲ ಎಂದು ಅರ್ಥ.

## ಸಿದ್ಧಾಂತ

**ಸೂ.ರ.:–** **एवं च गानत्राणकर्तृत्वलिङ्गात् ।**

**ಅನು.:–** ಗಾಯತ್ರೀಶಬ್ದವಾಚ್ಯನಾದವನ ವಿಷಯದಲ್ಲಿ ಗಾನತ್ರಾಣಕರ್ತೃತ್ವ ಲಿಂಗವು ಶ್ರುತವಾಗುತ್ತಿದೆ. (ಗಾನತ್ರಾಣಕರ್ತೃತ್ವವು ಗಾಯತ್ರೀಶಬ್ದ ಪ್ರವೃತ್ತಿನಿಮಿತ್ತವಾಗಿದೆ ಎಂದು ಶ್ರುತಿಯಲ್ಲಿ ಇದೆ.) ಅಂತಹ ಗಾನತ್ರಾಣಕರ್ತೃತ್ವವು ವಿಷ್ಣುವಿಗೆ ಉಪಪನ್ನವಾಗುವ ಲಿಂಗವಾದ್ದರಿಂದ ಗಾಯತ್ರೀಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ.

**ಸೂ.ರ.:–** **न च लिङ्गस्य निरवकाशत्वायोगेन श्रुतिबाधायोगः । गायत्रीश्रुतेः पौराणिकरूढ्या श्रुत्युक्तयोगेन च तत्र मुख्यत्वात् ।**

**ಅನು.:–** ಗಾನತ್ರಾಣಕರ್ತೃತ್ವ ಲಿಂಗವು ನಿರವಕಾಶವಾಗಿದ್ದರೆ ಆಗ ಲಿಂಗದಿಂದ ವಾಗ್ವೈ ಗಾಯತ್ರೀ ಎಂಬ ಶ್ರುತಿಗೆ ಬಾಧ ಹೇಳಬಹುದಿತ್ತು. ಆದರೆ ಲಿಂಗವು ನಿರವಕಾಶವಾಗದ ಕಾರಣ ಶ್ರುತಿಗೆ ಬಾಧ ಹೇಳಲು ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ.

**सर्वच्छन्दोऽभिदो ह्येषः सर्वदेवाभिधो ह्यसौ ।**
**सर्वलोकाभिदो ह्येषः तेषां तदुपचारतः ॥**

**ಅನು.:–** ಎಂಬುದಾಗಿ ವಾಮನಪುರಾಣದಲ್ಲಿ ಹೇಳಿದಂತೆ ಗಾಯತ್ರೀಶಬ್ದಕ್ಕೆ ವಿಷ್ಣುವಿನಲ್ಲಿಯೇ ಪೌರಾಣಿಕರೂಢಿ ಇದೆ ಎಂದು ತಿಳಿಯುತ್ತದೆ. ಮತ್ತು "ಗಾಯತೀ ತ್ರಾಯತಿ ಚ" (ಛಾಂ.ಉ. 3-12-1) ಎಂಬುದಾಗಿ ಶ್ರುತಿಯೇ ಹೇಳುವಂತೆ ಶ್ರುತ್ಯುಕ್ತವಾದ ಯೋಗವೂ (ಗಾನತ್ರಾಣಕರ್ತೃತ್ವ ಎಂಬ ಲಿಂಗವೂ) ವಿಷ್ಣುವಿನಲ್ಲಿಯೇ ಇದೆ. ಹೀಗಾಗಿ ಪೌರಾಣಿಕರೂಢಿ ಮತ್ತು ಶ್ರುತ್ಯುಕ್ತವಾದ ಯೋಗ ಎರಡರಿಂದ ಗಾಯತ್ರೀಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ ಎಂದು ತಿಳಿಯುತ್ತದೆ.

**ಸೂ.ರ.:– स्वभावेति वचनात् गायत्र्या भगवदधीनत्वात् । गायत्री-शब्दवाच्योविष्णुरेवेति सिद्धम् ।**

**ಅನು.:–** ಮತ್ತು ಅಷ್ಟೇ ಅಲ್ಲದೇ, ಗಾಯತ್ರೀಛಂದಸ್ಸು ಭಗವಂತನ ಅಧೀನವೇ ಆಗಿದ್ದರಿಂದ ಗಾಯತ್ರೀಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿದೆ. ನಿತ್ಯವಾದ ಮಂತ್ರವು ಭಗವಂತನ ಅಧೀನವಾಗಲು ಹೇಗೆ ಸಾಧ್ಯ? ಎಂದರೆ,

**स्वभावजीवकर्माणि द्रव्यं कालः श्रुतिः क्रिया ।**
**यत्प्रसादादिमे सन्ति न सन्ति यदुपेक्षया ॥**

**ಅನು.:–** ಎಂಬುದಾಗಿ ಶ್ರುತಿಯೇ ತಿಳಿಸುವಂತೆ ನಿತ್ಯವಾದ ವಸ್ತುಗಳಿಗೂ ಭಗವ-ದಧೀನತ್ವವು ಕೂಡುತ್ತದೆ. ಆದ್ದರಿಂದ ಗಾಯತ್ರೀಮಂತ್ರವು ನಿತ್ಯವಾದರೂ ಭಗವಂತನ ಅಧೀನವಾಗಬಹುದಾಗಿದೆ.

ಹಾಗಾಗಿ ಪೌರಾಣಿಕರೂಢಿ - ಶ್ರುತ್ಯುಕ್ತಯೋಗ ಹಾಗೂ ಛಂದಸ್ಸಿನಲ್ಲಿ ಇರುವ ಭಗವದಧೀನತ್ವ ಈ ಎಲ್ಲ ಕಾರಣಗಳಿಂದಾಗಿ ಛಂದೋಗಶ್ರುತಿಯಲ್ಲಿ ಶ್ರುತವಾಗುತ್ತಿರುವ ಗಾಯತ್ರೀಶಬ್ದದಿಂದ ವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 26

**ಸೂ.ರ.:– हेत्वन्तरेणापि गायत्र्या विष्णुत्वं साधयत्सूत्रमुपन्यस्यति ।**

**ಅನು.:–** ಮತ್ತೊಂದು ಹೇತುವಿನಿಂದಲೂ ವಿಷ್ಣುವಿಗೇ ಗಾಯತ್ರೀಶಬ್ದವಾಚ್ಯತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ :-

**ॐ भूतादिपादव्यपदेशोपपत्तेश्चैवम् ॐ (१.१.२६)**

**ಸೂತ್ರಾರ್ಥ :-** ಏವಂ ಎನ್ನುವುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಏವಂ = ಗಾಯತ್ರೀಶಬ್ದವಾಚ್ಯನಾದವನು ಬ್ರಹ್ಮನೇ ಆಗುತ್ತಾನೆ ಎಂದು ಹೇಳಿದ್ದು ಯುಕ್ತವೇ ಆಗಿದೆ. ಯಾಕೆ? ಏವಂ ಭೂತಾದಿಪಾದವ್ಯಪದೇಶೋಪಪತ್ತೇಃ = ''ಪಾದೋಽಸ್ಯ ವಿಶ್ವಾ ಭೂತಾನಿ'' ''ತ್ರಿಪಾದಸ್ಯಾಮೃತಂ ದಿವಿ'' (ಛಾಂ. 3-12-6) ಎಂಬುದಾಗಿ ಭೂತಾಂಶವತ್ವ - ಅಮೃತಾಂಶವತ್ವವನ್ನು ಹೇಳಿದ್ದರಿಂದ ಅಂತಹ ಭೂತಾಂಶವತ್ವ - ಅಮೃತಾಂಶವತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆ, ಬೇರೆಯವರಿಗೆ ಉಪಪನ್ನವಾಗುವುದಿಲ್ಲ. ಆದ್ದರಿಂದ ಗಾಯತ್ರೀಶಬ್ದವಾಚ್ಯನಾದವನು ವಿಷ್ಣುವೇ ಆಗಲು ಸಾಧ್ಯ.

**ಸೂ.ರ.:– एवं च छन्दोग्ये सैषा चतुष्पदेति वाक्येन गायत्रीनामकस्य भगवतः प्रागुक्तगायत्रीभूतवाक्पृथिवीशरीरहृदयलक्षणषड्विधत्वमनूद्यांश-चतुष्टयरूपवत्त्वरूपं चतुष्पादत्वं विधाय स्वोक्तार्थ एव पुरुषसूक्तमन्त्रः समाख्यारूपत्वेनोदाहृतः ।**

"ಸೈಷಾ ಚತುಷ್ಪದಾ ಷಡ್‌ವಿಧಾ ಗಾಯತ್ರೀ" ಎಂಬ (ಛಾಂ.3-12-5) ವಾಕ್ಯದಿಂದ ಗಾಯತ್ರೀನಾಮಕನಾದ ಭಗವಂತನಿಗೆ ಪ್ರಾಗುಕ್ತ ಗಾಯತ್ರೀ-ಭೂತ- ವಾಕ್-ಪೃಥಿವೀ-ಶರೀರ-ಹೃದಯ ಎಂಬ ಷಟ್‌ವಿಧತ್ವವನ್ನು ಅನುವಾದಿಸಿ, ಅಂಶಚತುಷ್ಟಯರೂಪವತ್ವ ಎಂಬ ಚತುಷ್ಪಾದತ್ವವನ್ನು ವ್ಯಪದೇಶ ಮಾಡಿ, ತಾನು ಹೇಳಿದ ಈ ವಿಷಯದಲ್ಲಿ ಸಮಾಖ್ಯಾರೂಪವಾಗಿ ಪುರುಷಸೂಕ್ತಮಂತ್ರವು ಉದಾಹರಿಸಲ್ಪಟ್ಟಿದೆ.

"ತದೇತದ್ ಋಚಾಭ್ಯನೂಕ್ತಂ ತಾವಾನಸ್ಯ" ಗಾಯತ್ರೀನಾಮಕನಾದ ಪುರುಷನಿಗೆ ಹಿಂದೆ ಹೇಳಿದಷ್ಟೇ ಮಹಿಮೆ ಎಂದಷ್ಟೇ ಅಲ್ಲ. ಕಿಂತು ಹಿಂದೆ ಹೇಳಿದ ಮಹಿಮೆಗಿಂತಲೂ ಹೆಚ್ಚಿನ ಮಹಿಮೆ ಇದೆ. ಏನು ಹೆಚ್ಚಿನ ಮಹಿಮೆ? ಎಂದರೆ,

"ಪಾದೋಽಸ್ಯ ವಿಶ್ವಾಭೂತಾನಿ" "ತ್ರಿಪಾದಸ್ಯಾಮೃತಂ ದಿವಿ" "ಎಲ್ಲ ಭೂತಗಳೂ (ಜೀವರೂ) ಇವನ ಒಂದು ಪಾದವಾಗಿದೆ". "ಮತ್ತು ಇವನ ಅಮೃತವಾದ (ಸ್ವರೂಪ-ಭೂತವಾದ) ಮೂರು ಪಾದಗಳು ದ್ಯುಲೋಕದಲ್ಲಿ ಇವೆ" ಎಂಬುದಾಗಿ ಭೂತಾದಿಪಾದ-ವ್ಯಪದೇಶ ಮಾಡಿರುವುದರಿಂದ ಗಾಯತ್ರೀಶಬ್ದವಾಚ್ಯನಾದವನು ವಿಷ್ಣುವೇ ಆಗಬೇಕು.

**ಸೂ.ರ.:– न च गायत्र्यामिव भूतभिन्नत्वेन विष्णावपि भूतपादत्वोक्तिरनुपपन्ना । सुवर्णकोशमिति श्रुतेः ।**

ಅನು.:– ಭೂತಭಿನ್ನವಾದ್ದರಿಂದ ಗಾಯತ್ರಿಯಲ್ಲಿ ಹೇಗೆ ಭೂತಪಾದತ್ವೋಕ್ತಿಯು ಕೂಡುವುದಿಲ್ಲವೋ ಅದರಂತೆ ವಿಷ್ಣುವೂ ಭೂತಭಿನ್ನನಾದ್ದರಿಂದ ಅವನಲ್ಲಿಯೂ ಭೂತಪಾದತ್ವೋಕ್ತಿಯು ಕೂಡುವುದಿಲ್ಲ ಎಂದು ಶಂಕೆ ಬಂದರೆ ಅದು ಸರಿಯಲ್ಲ.

"सुवर्णं कोशं रजसा परीवृतम् । देवानां वसुधानीं विराजम् ।
अमृतस्य पूर्णां तामु कलां विचक्षते । पादं षड्ढोतुर्न किला
विवित्से ॥" (तै.आ. ३-११)

**ಅನು.:–** ಎಂಬುದಾಗಿ ಶ್ರುತಿ ಇರುವುದರಿಂದ, ಭೂತಪಾದತ್ವವನ್ನು ಹೇಳಿದಾಗ ಪಾದಶಬ್ದಕ್ಕೆ ಸ್ವರೂಪಭೂತವಾದ ಮೂರುಪಾದಗಳಂತೆ ಭೂತಗಳೂ ಸಹ ಭಗವಂತನ ಸ್ವರೂಪಭೂತವಾದ ಪಾದವಾಗಿವೆ ಎಂದು ಅರ್ಥವಲ್ಲ. ಕಿಂತು "ಯಜ್ಞದತ್ತಸ್ಯ ಚತುರ್ಭಾಗಬಲೋ ದೇವದತ್ತಃ" ಎಂದು ಹೇಳುವಂತೆ ಭಗವಂತನಿಂದ ಭಿನ್ನವಾದ ವಿಶ್ವವೇ ಅವನ ಪಾದಕ್ಕೆ ಪರಿಮಿತವಾದ ಸಾಮರ್ಥ್ಯ ಉಳ್ಳದ್ದಾದ್ದರಿಂದ ಪಾದ ಎಂದು ಕರೆಸಿಕೊಳ್ಳುತ್ತದೆ. ಅಂತಹ ಭೂತಪಾದತ್ವವು ವಿಷ್ಣುವಿಗೇ ಉಪಪನ್ನವಾಗುತ್ತದೆ.

**ಸೂ.ರ.:– न च पुरुषसूक्तं न विष्णुप्रकरणमिति वाच्यम् । तस्मिन्काले महाराजेति स्मृत्या तत्प्रकरणस्य विष्णुत्वनिश्चयात् । अतो गायत्रीशब्दवाच्यो विष्णुरेवेति सिद्धम् ।**

**ಅನು.:–** ಪುರುಷಸೂಕ್ತವು ವಿಷ್ಣುಪ್ರಕರಣವಾಗಿದ್ದರೆ ಆಗ ಅದರ ಸಮಾಖ್ಯಾಬಲ-ದಿಂದಾಗಿ ಈ ಛಾಂದೋಗ್ಯದ ಮಾತೂ ವಿಷ್ಣುವಿಷಯಕವಾಗುತ್ತಿತ್ತು. ಆದರೆ ಪುರುಷಸೂಕ್ತವೇ ವಿಷ್ಣುಪ್ರಕರಣವಾಗಿಲ್ಲವಲ್ಲ? ಎಂದರೆ ಅದು ಸರಿಯಲ್ಲ.

**तस्मिन् काले महाराज राम एवाभिधीयते ।**
**यथा हि पौरुषे सूक्ते विष्णुरेवाभिधीयते ॥**

ಎಂಬುದಾಗಿ ಸ್ಕಾಂದಪುರಾಣವು ತಿಳಿಸುವಂತೆ ಪುರುಷಸೂಕ್ತವು ವಿಷ್ಣುಪ್ರಕರಣವೇ ಆಗಿದೆ ಎಂದು ತಿಳಿದುಬರುತ್ತದೆ. ಆದ್ದರಿಂದ ಅದರ ಸಮಾಖ್ಯಾಬಲದಿಂದ ಪೂರ್ವೋಕ್ತ ಷಡ್ವಿಧತ್ವ - ಚತುಷ್ಪಾದತ್ವ ಉಳ್ಳ ಗಾಯತ್ರೀನಾಮಕನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 27

**ಸೂ.ರ.:– ननु गायत्रीज्योतिप्रकरणयोरुपदेशभेदेन भिन्नार्थत्वा-दित्यादिनोक्तमाक्षिप्य समादधत्सूत्रमाह ।**

**ಅನು.:–** ಗಾಯತ್ರೀಶಬ್ದವಾಚ್ಯನಾದವನೂ ಜ್ಯೋತಿಃಶಬ್ದವಾಚ್ಯನಾದವನೂ ವಿಷ್ಣುವೇ ಆಗಿದ್ದಾನೆ ಎಂದು ಹೇಳಿದ್ದು ಹೇಗೆ ಸಮಂಜಸವಾಗುತ್ತದೆ? ಏಕೆಂದರೆ - ತ್ರಿಪಾದಸ್ಯಾಮೃತಂ ದಿವಿ ಎಂಬುದಾಗಿ ಗಾಯತ್ರೀಶಬ್ದವಾಚ್ಯನಾದವನು ದ್ಯುಲೋಕದಲ್ಲಿ ಇದ್ದಾನೆ ಎಂದು ಹೇಳಿದೆ. ಆದರೆ ಜ್ಯೋತಿಃಶಬ್ದವಾಚ್ಯನಾದವನು ಪರೋ ದಿವಃ ಎಂಬುದಾಗಿ ದ್ಯುಲೋಕದ

ಮೇಲೆ ಇದ್ದಾನೆ ಎಂದು ಹೇಳಿದೆ. ಈ ದ್ಯುಸ್ಥಿತತ್ವ - ದಿವಃಪರತ್ವ ಎರಡನ್ನೂ ಒಬ್ಬನಿಗೇ ಹೇಳಿದರೆ ವಿರೋಧ ಬರುತ್ತದೆ. ಆದ್ದರಿಂದ ಈ ರೀತಿಯಾಗಿ ಉಪದೇಶಭೇದ ಇರುವುದರಿಂದ ಗಾಯತ್ರೀಶಬ್ದವಾಚ್ಯನಾದ ವ್ಯಕ್ತಿ, ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ಒಬ್ಬನೇ ಆಗಲು ಸಾಧ್ಯವಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ :-

ಸೂತ್ರ - 28

**ॐ उपदेशभेदान्नेति चेन्नोभयस्मिन्नप्यविरोधात् ॐ**

**ಸೂತ್ರಾರ್ಥ :-** ಉಪದೇಶಭೇದಾತ್ = ಗಾಯತ್ರೀಶಬ್ದವಾಚ್ಯನಾದವನಿಗೆ ಜ್ಯೋತಿಃಶಬ್ದವಾಚ್ಯನಾದವನಿಗೆ ದ್ಯುಸ್ಥಿತತ್ವ - ದಿವಃಪರತ್ವ ರೂಪವಾದ ವಿರುದ್ಧಧರ್ಮ-ಗಳನ್ನು ತಿಳಿಸುವ ಶ್ರುತಿಗಳು (ದ್ಯುಃಸ್ಥಿತತ್ವಶ್ರುತಿ ಛಾಂ 3-12-6, ದಿವಃಪರತ್ವಶ್ರುತಿ ಛಾಂ 3-13-7) ಭಿನ್ನಭಿನ್ನವಾದದ್ದರಿಂದ ನೇತಿ ಚೇತ್ = ಗಾಯತ್ರೀಶಬ್ದವಾಚ್ಯವಾದದ್ದು ಜ್ಯೋತಿಃಶಬ್ದವಾಚ್ಯವಾದದ್ದು ಎರಡೂ ವಿಷ್ಣುರೂಪವಾದ ಒಂದೇ ವಸ್ತು ಅಲ್ಲ, ಕಿಂತು ಭಿನ್ನಭಿನ್ನವೇ ಆಗಿದೆ ಎಂದು ಶಂಕೆ ಬಂದರೆ, ನ = ಅದು ಸರಿಯಾದದ್ದಲ್ಲ, ಯಾಕೆ? ಉಭಯಸ್ಮಿನ್ ಅಪಿ = ಎರಡೂ ಶ್ರುತಿಗಳಲ್ಲಿಯೂ ಸಹ ಒಬ್ಬನೇ ವ್ಯಕ್ತಿ ಪ್ರತಿಪಾದ್ಯನಾದರೂ ಸಹ ಅವಿರೋಧಾತ್ = ತ್ರಿಸಪ್ತಲೋಕವಿವಕ್ಷೆಯಿಂದಾಗಿ ವಿರೋಧ ಬರುವುದಿಲ್ಲವಾದ್ದರಿಂದ.

**ಸೂ.ರ.:- एवं च विवक्षाभेदेनैकस्यैव द्युस्थत्वदिवः परत्वयोः सम्भवेन भिन्नार्थत्वाभावात् । अतो गायत्री विष्णुरेवेति सिद्धम् ।**

**ಅನು.:-** *ವಿವಕ್ಷಾಭೇದದಿಂದಾಗಿ ಒಬ್ಬನೇ ವ್ಯಕ್ತಿಗೇನೇ ದ್ಯುಃಸ್ಥಿತತ್ವ - ದಿವಃಪರತ್ವಗಳು ಎರಡೂ ಉಪಪನ್ನವಾಗುವುದರಿಂದ ಶ್ರುತಿಗಳಲ್ಲಿ ವಿರೋಧ ಬರುವುದಿಲ್ಲ.

ಆದ್ದರಿಂದ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವ "ಗಾಯತ್ರೀ ವಾ ಇದಂ ಸರ್ವಂ ಭೂತಂ ..." ಎಂಬ ಶ್ರುತಿಯಲ್ಲಿ ಗಾಯತ್ರೀಶಬ್ದವಾಚ್ಯ-ನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

**ಇಲ್ಲಿಗೆ ಛಂದೋಭಿಧಾನಾಧಿಕರಣವು (ಗಾಯತ್ರ್ಯಧಿಕರಣವು) ಮುಗಿಯಿತು.**

---

★ ವಿವಕ್ಷಾಭೇದದಿಂದಾಗಿ ಒಬ್ಬನಿಗೇ ದ್ಯುಸ್ಥಿತತ್ವ - ದಿವಃಪರತ್ವಗಳೆರಡೂ ಕೂಡುತ್ತದೆ. ಹೇಗೆಂದರೆ :-

ಅಧಿಕರಣ – 12

# ಪಾದಾಂತ್ಯಪ್ರಾಣಾಧಿಕರಣ

## ಸಂಗತಿ

**ಸೂ.ರ.:–** अत्र लोकतोऽन्यत्र प्रसिद्धप्राणनाम्नो विष्णौ समन्वयः प्रतिपाद्यते ।

**ಅನು.:–** ಲೋಕತಃ ಅನ್ಯತ್ರ ಪ್ರಸಿದ್ಧವಾದ ಪ್ರಾಣ ಎಂಬ ನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಹನ್ನೆರಡನೆಯ ಈ ಪಾದಾಂತ್ಯಪ್ರಾಣಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** ननु ता वा एता (ऐ.आ. २-१-४) इत्युक्तप्राणो न विष्णुः । इन्द्रियगणे गणितत्वात् । जीवो वा । एष इमं लोकमभ्यार्चदिति (ऐ.आ.२.२.१.१) जीवलिङ्गात् । मुख्यप्राणो वा । ता अहिंसन्तेति (ऐ.आ.२.१.४.९) तल्लिङ्गात् । इति प्राप्ते सूत्रमुपन्यस्यति ।

**ಅನು.:–** ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಎಂದು ಹೇಳಿದಿರಿ. ಆದರೆ –

---

ಭೂಃ ಭುವಃ ಸುವಃ ಎಂಬ ಮೂರುಲೋಕಗಳ ಅಭಿಪ್ರಾಯದಿಂದಾಗಿ ಲಕ್ಷಯೋಜನ ಮೇಲೆ ಇರುವ ಅಂತರಿಕ್ಷದಲ್ಲಿರುವ ಶ್ವೇತದ್ವೀಪ – ಅನಂತಾಸನ – ವೈಕುಂಠ ಲೋಕಗಳೇ ದ್ಯುಲೋಕವಾಗುವುದರಿಂದ ಅಲ್ಲಿರುವ ಮೂರುರೂಪಗಳು ದ್ಯುಃಸ್ಥವಾಗಿವೆ ಎಂದು ಹೇಳಲ್ಪಡುತ್ತವೆ.

ಇನ್ನು ಏಳು ಲೋಕಗಳ ಅಪೇಕ್ಷೆಯಿಂದಾಗಿ ಇಂದ್ರಸದನವೇ ದ್ಯುಲೋಕವಾಗುವುದರಿಂದ ವೈಕುಂಠಲೋಕವು ದಿವಃಪರವಾಗುತ್ತದೆ. ಮೇರು ಪರ್ವತವೂ ದ್ಯುಲೋಕವಾಗುವುದರಿಂದ ಅದರ ಮೇಲಿರುವ ಅನಂತಾಸನವೂ ದಿವಃಪರವಾಗುತ್ತದೆ. ಸೂರ್ಯಮಂಡಲವೂ ದ್ಯುಲೋಕವಾಗುವುದರಿಂದ ಅದರ ಮೇಲಿರುವ ಶ್ವೇತದ್ವೀಪವು ದಿವಃಪರವಾಗುತ್ತದೆ. ಹೀಗಾಗಿ ಅಂತಹ ವೈಕುಂಠ – ಅನಂತಾಸನ – ಶ್ವೇತದ್ವೀಪ ಲೋಕಗಳಲ್ಲಿರುವ ಮೂರುರೂಪಗಳಿಗೆ ದಿವಃಪರತ್ವವೂ ಉಪಪನ್ನವಾಗುತ್ತದೆ. ಈ ರೀತಿಯಾಗಿ ವಿವಕ್ಷಾಭೇದದಿಂದಾಗಿ ವೈಕುಂಠ-ಅನಂತಾಸನ-ಶ್ವೇತದ್ವೀಪ ಮೂರು ಲೋಕಗಳಲ್ಲಿರುವ ಮೂರು ರೂಪಗಳಿಗೇ ದ್ಯುಃಸ್ಥಿತತ್ವ-ದಿವಃಪರತ್ವಗಳು ಉಪಪನ್ನವಾಗುವುದರಿಂದ ಯಾವ ವಿರೋಧವೂ ಬರುವುದಿಲ್ಲ ಎಂದು ತಿಳಿಯಬೇಕು. (ತತ್ತ್ವಪ್ರಕಾಶಿಕಾ-ಅಭಿಪ್ರಾಯ)

''ता वा एताः शीर्षन् श्रियः श्रिताश्चक्षुश्श्रोत्रं मनो वाक्प्राणः''
(ऐ.आ. २-१-४)

ಎಂಬ ಶ್ರುತಿಯಲ್ಲಿ ಶ್ರುತವಾಗುತ್ತಿರುವ ಪ್ರಾಣಶಬ್ದವಾಚ್ಯನಾದ ವ್ಯಕ್ತಿ ವಿಷ್ಣು ಆಗಲು ಸಾಧ್ಯವಿಲ್ಲ. ಏಕೆಂದರೆ - ಇಲ್ಲಿ ಪ್ರಾಣನು ಇಂದ್ರಿಯಗಣದಲ್ಲಿ ಗಣಿತನಾಗುತ್ತಿದ್ದಾನೆ. ವಿಷ್ಣುವು ಇಂದ್ರಿಯಗಣದಲ್ಲಿ ಗಣಿತನಾಗಲು ಸಾಧ್ಯವಿಲ್ಲವಾದ್ದರಿಂದ ಪ್ರಾಣಶಬ್ದವಾಚ್ಯನಾಗುವುದಿಲ್ಲ.

1. ''ಏಷ ಇಮಂ ಲೋಕಮಭ್ಯಾರ್ಚತ್'' ಎಂಬುದಾಗಿ ಜೀವನ ಲಿಂಗವು ಪ್ರುತವಾಗುತ್ತಿರುವುದರಿಂದ ಇಲ್ಲಿ ಜೀವನು ಪ್ರಾಣಶಬ್ದವಾಚ್ಯನಾಗಬಹುದು.

2. ಅಥವಾ ''ತಾ ಅಹಿಂಸಂತ'' ಎಂಬುದಾಗಿ ಮುಖ್ಯಪ್ರಾಣನ ಲಿಂಗವು ಪ್ರುತವಾಗುತ್ತಿರುವುದರಿಂದ ಇಲ್ಲಿ ಮುಖ್ಯಪ್ರಾಣನು ಪ್ರಾಣಶಬ್ದವಾಚ್ಯನಾಗಬಹುದು.

ಆದ್ದರಿಂದ ಜೀವಲಿಂಗ ಇರುವುದರಿಂದ ಜೀವನಾದರೂ ಪ್ರಾಣಶಬ್ದವಾಚ್ಯ-ನಾಗಬಹುದು. ಅಥವಾ ಮುಖ್ಯಪ್ರಾಣಲಿಂಗ ಇರುವುದರಿಂದ ಮುಖ್ಯಪ್ರಾಣನಾದರೂ ಪ್ರಾಣಶಬ್ದವಾಚ್ಯನಾಗಬಹುದು. ಹೊರತು ವಿಷ್ಣುವು ಪ್ರಾಣಶಬ್ದವಾಚ್ಯನಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ :-

**ॐ प्राणस्तथाऽनुगमात् ॐ (१.१.२८)**

**ಸೂತ್ರಾರ್ಥ** :- ತಥಾ = ''ತದ್ವೈತ್ವಂ ಪ್ರಾಣೋಽಭವಃ'' (ತೈ.ಆ.3-14-4) ಎನ್ನುವಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣು ಹೇಗೋ ಅದರಂತೆಯೇ ಪ್ರಾಣಃ = ''ತಾ ವಾ ಏತಾಃ'' (ಐ.ಆ.2-1-4) ಎಂಬ ಐತರೇಯದಲ್ಲಿ ಶ್ರುತವಾಗುತ್ತಿರುವ ಪ್ರಾಣಶಬ್ದವಾಚ್ಯನಾದವನೂ ವಿಷ್ಣುವೇ ಆಗಿದ್ದಾನೆ. ಯಾಕೆ? ಅನುಗಮಾತ್ = ದೇವತೋಪಾಸ್ಯತ್ವ ಮೊದಲಾದ ವಿಷ್ಣುಲಿಂಗ ಹಾಗೂ ಬ್ರಹ್ಮಶಬ್ದಗಳು ಅನೇಕಬಾರಿ ಶ್ರುತವಾಗುತ್ತಿರುವುದರಿಂದ.

**ಸಿದ್ಧಾಂತ**

**ಸೂ.ರ.**:- एवं च स एषोऽसुरित्यत्र (ऐ.आ.२.१.८) दुष्टनिरसनाद-सुत्वेन प्रकृष्टानन्दरूपत्वात्प्राणत्वेन देवानां ज्ञानाद्यैश्वर्यप्रदत्वादसुराणा-

**मज्ञानाद्यैश्वर्यहेतुत्वाच भूत्यभूतित्वेन च ता वा एता इत्यत्र सर्ववेदोक्तत्वेन तदयं प्राण (ऐ.आ.२.३.८) इत्यत्र देहरथित्वेन तं देवाः प्राणयन्त (ऐ.आ.२.१.५) इत्यत्र सर्वदेवतोपास्यत्वेन चोक्तत्वात् ।**

**ಅನು.:–** 1. ಸ ಏಷೋऽಸುಃ (ಐ.ಆ. 2-1-8) ಎನ್ನುವಲ್ಲಿ ದುಷ್ಟರನ್ನು ಸಂಹಾರ ಮಾಡುವ ಕಾರಣ ಅಸು ಎಂಬುದಾಗಿ,

2. ಪ್ರಕೃಷ್ಟವಾದ ಆನಂದಸ್ವರೂಪರಾದ್ದರಿಂದ ಪ್ರಾಣ ಎಂಬುದಾಗಿ,

3. ದೇವತೆಗಳಿಗೆ ಜ್ಞಾನಾದಿಐಶ್ವರ್ಯವನ್ನು ಕೊಡುತ್ತಾರಾದ್ದರಿಂದ ಭೂತಿ ಎಂಬುದಾಗಿ,

4. ಅಸುರರಿಗೆ ಅಜ್ಞಾನಾದಿ ಐಶ್ವರ್ಯವನ್ನು ಕೊಡುವವರಾದ್ದರಿಂದ ಅಭೂತಿ ಎಂಬುದಾಗಿ,

5. 'ತಾ ವಾ ಏತಾಃ' (ಐ.ಆ. 2-1-4) ಎನ್ನುವಲ್ಲಿ ಸರ್ವವೇದಪ್ರತಿಪಾದ್ಯರಾಗಿ,

6. ''ತದಯಂ ಪ್ರಾಣೋऽಧಿತಿಷ್ಠತಿ'' (ಐ.ಆ. 2-3-8) ಎನ್ನುವಲ್ಲಿ ದೇಹಕ್ಕೆ ರಥಿಕರಾಗಿ,

7. ''ತಂ ದೇವಾಃ ಪ್ರಾಣಯಂತ'' (ಐ.ಆ. 2-1-5) ಎನ್ನುವಲ್ಲಿ ಎಲ್ಲ ದೇವತೆಗಳಿಂದ ಉಪಾಸ್ಯರಾಗಿ

ಶ್ರುತವಾಗುತ್ತಿರುವುದರಿಂದ ಪ್ರಾಣಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ.

**ಸೂ.ರ.:– न च पूर्वपक्षिलिङ्गस्य निरवकाशत्वेनापि प्राबल्यम् । प्राणैः सह गणितत्वस्यान्तर्यामिनिष्ठतासम्भवात् ।**

**ಅನು.:–** ಇಂದ್ರಿಯಗಣೇ ಗಣಿತತ್ವ ಎಂಬ ಪೂರ್ವಪಕ್ಷಲಿಂಗವು ನಿರವಕಾಶ-ವಾದ್ದರಿಂದ ಪ್ರಬಲವಾಗಿದೆ. ಆದ್ದರಿಂದ ಈ ಪೂರ್ವಪಕ್ಷಲಿಂಗದಿಂದ ಪ್ರಾಣಶಬ್ದವಾಚ್ಯನಾದ ವ್ಯಕ್ತಿ ವಿಷ್ಣು ಅಲ್ಲ ಎಂದು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ. ಇಂದ್ರಿಯಗಣೇ ಗಣಿತತ್ವ ಲಿಂಗವು ನಿರವಕಾಶವಾಗಿಲ್ಲ. ಅರ್ಥಾತ್ ಈ ಇಂದ್ರಿಯಗಣೇ ಗಣಿತತ್ವ ಲಿಂಗವು ಅಂತರ್ಯಾಮಿಯಾದ ಭಗವಂತನಿಗೆ ಉಪಪನ್ನವಾಗುತ್ತದೆ. ಆದ್ದರಿಂದ ಈ ಪೂರ್ವಪಕ್ಷಲಿಂಗವು ಸಾವಕಾಶವಾಗಿದೆ.

**ಸೂ.ರ.:– प्राबल्येऽप्येकप्रकारेण प्रबलात्पूर्वपक्षिलिङ्गात्प्रकारद्वयेनापि प्रबलस्य सैद्धान्तिकलिङ्गस्याधिक्येन निर्णयोपपत्तेः ।**

**ಅನು.:–** ಅಥವಾ ನಿಮ್ಮ ಪ್ರಕಾರ ಪ್ರಾಬಲ್ಯವನ್ನೇ ಒಪ್ಪಿದರೂ ಸಹ ಒಂದು ಪ್ರಕಾರದಿಂದ ಪ್ರಬಲವಾದ ಪೂರ್ವಪಕ್ಷಲಿಂಗಕ್ಕಿಂತಲೂ ಎರಡು ಪ್ರಕಾರಗಳಿಂದ ಪ್ರಬಲವಾದ ಸೈದ್ಧಾಂತಿಕಲಿಂಗವೇ ಅಧಿಕವಾಗುವುದರಿಂದ, ಸೈದ್ಧಾಂತಿಕಯುಕ್ತಿಯಿಂದಾಗಿ ವಿಷ್ಣುವೇ ಪ್ರಾಣಶಬ್ದವಾಚ್ಯ ಎಂದು ನಿರ್ಣಯಿಸಬಹುದಾಗಿದೆ.

**ಸೂ.ರ.:– अस्मिन् प्रकरणे एतद्ब्रह्म, (ऐ.आ.२.१.१.१) ब्रह्मणो लोकः, (ऐ.आ. २.१.३.१) ब्रह्मेमं पुरुषं, (ऐ.आ.२.१.४.१) उदरं ब्रह्मेत्याचक्षते, (ऐ.आ.२.१.४.५) अ इति ब्रह्म, (ऐ.आ. २.३.८.७) इत्यादिनिरवकाशब्रह्मशब्दाभ्यासात् । अतोऽयं प्राणो विष्णुरेवेति सिद्धम् ।**

**ಅನು.:–** ಮತ್ತು ಈ ಪ್ರಕರಣದಲ್ಲಿ -

''एतद् ब्रह्म'' (ऐ.आ. २-१-१-१) ''ब्रह्मणो लोकः'' (ऐ.आ. २-१-३-१)

''ब्रह्मेमं पुरुषं'' (ऐ.आ. २-१-४-१) ''उदरं ब्रह्मेत्याचक्षते'' (ऐ.आ. २-१-४-५)

''अ इति ब्रह्म'' (ऐ.आ. २-३-८-७)

ಇತ್ಯಾದಿಯಾಗಿ ನಿರವಕಾಶವಾದ ಬ್ರಹ್ಮಶಬ್ದವು ಅನೇಕಬಾರಿ ಶ್ರುತವಾಗುತ್ತಿರುವುದ-ರಿಂದ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ.

ಆದ್ದರಿಂದ ದೇವತೋಪಾಸ್ಯತ್ವ ಮೊದಲಾದ ನಿರವಕಾಶವಾದ ವಿಷ್ಣುಲಿಂಗಗಳು ಇರುವುದರಿಂದ ಮತ್ತು ನಿರವಕಾಶವಾದ ಬ್ರಹ್ಮಶಬ್ದಗಳು ಈ ಪ್ರಕರಣದಲ್ಲಿ ಅನೇಕಬಾರಿ ಶ್ರುತವಾಗುತ್ತಿರುವುದರಿಂದ ''ತಾ ವಾ ಏತಾಃ'' ಎಂಬ ಐತರೇಯದಲ್ಲಿ ಶ್ರುತವಾಗುತ್ತಿರುವ ಪ್ರಾಣಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 29

## ಆಕ್ಷೇಪ

**ಸೂ.ರ.:- ननु नायं प्राणो विष्णुः । किं त्विन्द्र एव । प्राणो वाऽहमिति (ऐ.आ.२.२.३) वाक्येन बृहतीसहस्रवक्तुर्विश्वामित्रस्येन्द्रेण प्राणतयाऽऽत्मनः स्वस्यैवोपदेशादित्याक्षिप्य समादधत्सूत्रमाह ।**

**ಅನು.:-** "ತಾ ವಾ ಏತಾಃ" ಎಂಬ ಐತರೇಯಶ್ರುತಿಯಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಎಂದು ಹೇಳಿದಿರಿ. ಆದರೆ ಅದು ಸರಿಯಲ್ಲ. ಪ್ರಾಣಶಬ್ದವಾಚ್ಯನಾದವನು ವಿಷ್ಣು ಅಲ್ಲ. ಕಿಂತು ಇಂದ್ರನು ಪ್ರಾಣಶಬ್ದವಾಚ್ಯನಾಗುತ್ತಾನೆ. ಏಕೆಂದರೆ - ಬೃಹತೀಸಹಸ್ರವಕ್ತೃವಾದ ವಿಶ್ವಾಮಿತ್ರಋಷಿಗಳನ್ನು ಕುರಿತು "ಪ್ರಾಣೋ ವಾ ಅಹಮಸ್ಮ್ಯೃಷೇ" (ನಾನು ಪ್ರಾಣನಾಗಿದ್ದೇನೆ) ಎಂಬುದಾಗಿ ಇಂದ್ರನು ಪ್ರಾಣತ್ವೇನ ತನ್ನ ಬಗ್ಗೆ ತಾನೇ ಉಪದೇಶ ಮಾಡಿರುತ್ತಾನಾದ್ದರಿಂದ, ಪ್ರಾಣಶಬ್ದವಾಚ್ಯನಾದವನು ಇಂದ್ರನೇ ಆಗುತ್ತಾನೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೇಳಲು ಸೂತ್ರವು ಹೊರಡುತ್ತದೆ -

**ॐ न वक्तुरात्मोपदेशादिति चेत् अध्यात्म सम्बन्धभूमा ह्यस्मिन् ॐ (१.१.२९)**

**ಸೂತ್ರಾರ್ಥ :-** (ವಕ್ತುಃ ಎಂಬ ಷಷ್ಠೀವಿಭಕ್ತಿಯು ವಕ್ತಾರಂ ಎಂದು ದ್ವಿತೀಯಾವಿಭಕ್ತಿಯ ಅರ್ಥದಲ್ಲಿ ಇದೆ.) ವಕ್ತುಃ (ವಕ್ತಾರಂ ಪ್ರತಿ) = ಬೃಹತೀಸಹಸ್ರವಕ್ತೃವಾದ ವಿಶ್ವಾಮಿತ್ರಋಷಿಗಳನ್ನು ಕುರಿತು ಇಂದ್ರೇಣ = ಇಂದ್ರನಿಂದ ಆತ್ಮೋಪದೇಶಾತ್ = ಪ್ರಾಣತ್ವೇನ (ನಾನು ಪ್ರಾಣನಾಗಿದ್ದೇನೆ ಎಂದು) ತನ್ನ ಬಗ್ಗೆ ತಾನೇ ಉಪದೇಶ ಮಾಡಿದ್ದರಿಂದ ಇಂದ್ರಃ ಏವಾಯಂ ಪ್ರಾಣಃ = ಪ್ರಾಣಶಬ್ದವಾಚ್ಯನಾದವನು ಇಂದ್ರನೇ ಆಗುತ್ತಾನೆ. ನ ವಿಷ್ಣುಃ ಇತಿ ಚೇತ್ = ವಿಷ್ಣುವು ಪ್ರಾಣಶಬ್ದವಾಚ್ಯನಾಗುವುದಿಲ್ಲ ಎಂದು ಆಕ್ಷೇಪ ಬಂದರೆ,

ನ = ಅದು ಸರಿಯಲ್ಲ. ಯಾಕೆ? (ಹಿಂದಿನ ಸೂತ್ರದಿಂದ ಅನುಗಮಾತ್ ಎನ್ನುವುದನ್ನು ಅನುವರ್ತನೆ ಮಾಡಿಕೊಳ್ಳಬೇಕು.) ಅನುಗಮಾತ್ = ಬ್ರಹ್ಮಶಬ್ದವು ಅನೇಕಬಾರಿ ಶ್ರುತವಾಗುತ್ತಿರುವ ಕಾರಣ, ಈ ಅನುಗಮಹೇತುವಿನಿಂದ ಇಂದ್ರನು ಪ್ರಾಣಶಬ್ದವಾಚ್ಯನಾಗುವುದಿಲ್ಲ ಎಂದು ತಿಳಿಯುತ್ತದೆ.

ತಥಾ ಸತಿ ಉಪದೇಶವಿರೋಧ ಇತ್ಯಪಿ ನ = ಇಂದ್ರನು ಪ್ರಾಣಶಬ್ದವಾಚ್ಯನಾಗುವುದಿಲ್ಲ ಎಂದರೆ ಪ್ರಾಣೋ ವಾ ಅಹಮಸ್ಮ್ಯೃಷೇ ಎಂಬುದಾಗಿ ಇಂದ್ರನೇ ಮಾಡಿದ ಉಪದೇಶದ

ವಿರೋಧ ಬರುತ್ತದೆಯಲ್ಲವೇ? ಎಂದರೆ, ಆ ವಿರೋಧವೂ ಬರುವುದಿಲ್ಲ. ಕುತಃ = ಯಾಕೆ? ಹಿ (ಯಸ್ಮಾತ್) = ಯಾವ ಕಾರಣ ಅಸ್ಮಿನ್ = ಈ ಪ್ರಕರಣದಲ್ಲಿ ಅಧ್ಯಾತ್ಮಸಂಬಂಧಭೂಮಾ = ಭಗವತಃ ಇಂದ್ರವಿಶ್ವಾಮಿತ್ರಾದಿರೂಪಬಹುದೇಹಸಂಬಂಧಃ ಉಕ್ತೋऽಸ್ತಿ ಭಗವಂತನಿಗೆ ಇಂದ್ರ-ವಿಶ್ವಾಮಿತ್ರ ಮೊದಲಾದವರ ಬಹುದೇಹಸಂಬಂಧವು ಹೇಳಲ್ಪಟ್ಟಿದೆ. ತಸ್ಮಾತ್ = ಆ ಕಾರಣ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ.

ಯದ್ವಾ=ಅಥವಾ ಹಿ (ಯಸ್ಮಾತ್)=ಯಾವ ಕಾರಣ ಅಸ್ಮಿನ್=ಇಂದ್ರನಲ್ಲಿ ಅಧ್ಯಾತ್ಮಸಂಬಂಧಭೂಮಾ=ಅಧಿ ಅಧಿಕನಾದ ಆತ್ಮನಃ ಪರಮಾತ್ಮನ ಸಂಬಂಧಸ್ಯ ಆವೇಶದ ಭೂಮಾ ಬಾಹುಲ್ಯವು ಇದೆಯೋ ತಸ್ಮಾತ್=ಆ ಕಾರಣದಿಂದಲೂ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ.

## ಸಮಾಧಾನ

**ಸೂ.ರ.:– एवं च प्राणो विष्णुरेवेति सिद्धम् ।**

ಅನು.:– ಈ ಪ್ರಕರಣದಲ್ಲಿ ಪ್ರಾಣೋ ವಾ ಅಹಮಸ್ಮಿ ಎಂಬ ವಾಕ್ಯದಿಂದ ತನ್ನಲ್ಲಿರುವ ಪರಮಾತ್ಮನನ್ನು ತಿಳಿಸಿ, ಅದೇ ಪ್ರಾಣನಾಮಕನಾದ ಪರಮಾತ್ಮನಿಗೆ "ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ" ಎಂಬುದಾಗಿ ಬಹುದೇಹಸಂಬಂಧವನ್ನು ಸರ್ವಗತತ್ವವನ್ನು ಇಂದ್ರನು ಹೇಳುತ್ತಿದ್ದಾನೆ.

ಅಥವಾ ಇಂದ್ರನಲ್ಲಿಯೇ ಬಹುಪರಮಾತ್ಮಸಂಬಂಧವು (ಬಹಳ ಭಗವದ್ರೂಪಗಳ ಸಂಬಂಧವು) ಇದೆ. ಅದರ ಅಪೇಕ್ಷೆಯಿಂದಾಗಿ ಪ್ರಾಣೋ ವಾ ಅಹಮಸ್ಮಿ ಎಂಬ ಉಪದೇಶವೇ ಹೊರತು ಇಂದ್ರನ ಅಪೇಕ್ಷೆಯಿಂದ ಮಾಡಿದ್ದಲ್ಲ.

ಹೀಗೆ ಈ ಪ್ರಕರಣದಲ್ಲಿ ಇಂದ್ರ – ವಿಶ್ವಾಮಿತ್ರಾದಿ ಬಹುದೇಹಸಂಬಂಧವನ್ನು ಹೇಳುತ್ತಿರುವುದರಿಂದ, ಸರ್ವಗತತ್ವವನ್ನು ಹೇಳುತ್ತಿರುವುದರಿಂದ (ಅದು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ) ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 30

## ಆಕ್ಷೇಪ

**ಸೂ.ರ.:– ननु यदि प्राणशब्देनेन्द्रेणापि विष्णुरेव स्वात्मादि-**

सर्वगततयोच्यते तर्हि मयि प्राण इति निर्देशः स्यात् न त्वहमिति । विष्णावहमित्यादिरूपोपदेशायोगादिति प्राप्ते परिहरत्सूत्रं पठति ।

**ಅನು.:–** ಪ್ರಾಣೋ ವಾ ಅಹಂ ಎಂಬುದಾಗಿ ಇಂದ್ರದೇವರೂ ಸಹ ತನ್ನನ್ನು ಮೊದಲುಮಾಡಿ ಎಲ್ಲರಲ್ಲಿ ಅಂತರ್ಯಾಮಿಯಾದ (ಸ್ವಾತ್ಮಾದಿಸರ್ವಗತನಾದ) ವಿಷ್ಣುವನ್ನೇ ಪ್ರಾಣಶಬ್ದದಿಂದ ಕರೆದಿದ್ದಾರೆ ಎನ್ನುವುದಾದರೆ, ಆಗ ಅಹಂ ಪ್ರಾಣಃ (ನಾನೇ ಪ್ರಾಣನಾಗಿದ್ದೇನೆ) ಎಂದು ನಿರ್ದೇಶ ಮಾಡಬಾರದಿತ್ತು. ಪರಂತು ಮಯಿ ಪ್ರಾಣಃ (ನನ್ನಲ್ಲಿ ಪ್ರಾಣನು ಇದ್ದಾನೆ) ಎಂದೇ ನಿರ್ದೇಶ ಮಾಡಬೇಕಿತ್ತು.

ಮತ್ತು ಅಂತರ್ಯಾಮಿಯಾದ ವಿಷ್ಣುವಿನ ವಿಷಯದಲ್ಲಿ ಅಹಂ ಎಂದು ಶಬ್ದಪ್ರಯೋಗವೂ ಕೂಡುವುದಿಲ್ಲ. ಆದ್ದರಿಂದ ಪ್ರಕೃತ ಅಹಂ ಪ್ರಾಣಃ ಎಂಬುದಾಗಿ ಪ್ರಯೋಗ ಇರುವುದರಿಂದಾಗಿ ಇಂದ್ರನೇ ಪ್ರಾಣಶಬ್ದವಾಚ್ಯನಾಗಬೇಕು ಎಂದು ಆಕ್ಷೇಪ ಬಂದರೆ ಆದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವು ಪ್ರವೃತ್ತವಾಗುತ್ತದೆ :-

## ॐ शास्त्रदृष्ट्या तूपदेशो वामदेववत् ॐ (१.१.३०)

**ಸೂತ್ರಾರ್ಥ :-** (ತು ಎಂಬ ಶಬ್ದಕ್ಕೆ ಏವ ಎಂದು ಅರ್ಥ.) ವಾಮದೇವವತ್ = ಯಾವ ರೀತಿಯಾಗಿ ವಾಮದೇವ ಎಂಬ ಋಷಿಯು ತನ್ನ ಅಂತರ್ಯಾಮಿವಿವಕ್ಷೆಯಿಂದ "ಅಹಂ ಮನುರಭವಂ ಸೂರ್ಯಶ್ಚ" (ಋ. 4-26-1) ಎಂಬುದಾಗಿ ತನ್ನ ಮನುಸೂರ್ಯಾದಿಗಳಿಂದ ಐಕ್ಯವನ್ನು ಹೇಳಿದ್ದಾನೆಯೋ ಅದೇ ರೀತಿಯಾಗಿ ಶಾಸ್ತ್ರದೃಷ್ಟ್ಯಾ (ತು) ಏವ = (ಶಾಸ್ತಿ ಸರ್ವಮಿತಿ ಶಾಸ್ತ್ರಂ ಅಂತರ್ಯಾಮಿ। ಎಲ್ಲರನ್ನೂ ಶಾಸನ ಮಾಡುತ್ತಾನಾದ್ದರಿಂದ ಶಾಸ್ತ್ರ ಎಂದರೆ ಅಂತರ್ಯಾಮಿ ಎಂದರ್ಥ.) ಅಂತರ್ಯಾಮಿ ವಿವಕ್ಷೆಯಿಂದಲೇ ಉಪದೇಶಃ = ಪ್ರಾಣೋ ವಾ ಅಹಂ ಎಂಬುದಾಗಿ ವ್ಯಪದೇಶ ಮಾಡಿದ್ದು. ನ ತ್ವೈಕ್ಯೇನೇತ್ಯರ್ಥಃ = ಹೊರತು ಐಕ್ಯವಿವಕ್ಷೆಯಿಂದ ವ್ಯಪದೇಶ ಮಾಡಿದ್ದಲ್ಲ.

## ಸಮಾಧಾನ

**ಸೂ.ರ.:–** एवं चेन्द्रस्य प्राणतयाऽऽत्मोपदेशस्यान्तर्यामिविवक्षया प्रवृत्तत्वात् । अन्यथा त्वं प्राण इति व्यपदेशानुपपत्तेः ।

**ಅನು.:–** ಈ ರೀತಿಯಾಗಿ ಇಂದ್ರನು ತನ್ನಲ್ಲಿರುವ ಅಂತರ್ಯಾಮಿಯ ವಿವಕ್ಷೆಯಿಂದ ಪ್ರಾಣೋ ವಾ ಅಹಂ (ನಾನು ಪ್ರಾಣನಾಗಿದ್ದೇನೆ) ಎಂಬುದಾಗಿ ಪ್ರಾಣತ್ವೇನ ತನ್ನ ವ್ಯಪದೇಶ

ಮಾಡಿದ್ದರಿಂದ ಅಂತರ್ಯಾಮಿಯಾದ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ. ಹೊರತು ಇಂದ್ರನು ಪ್ರಾಣಶಬ್ದವಾಚ್ಯನಾಗುವುದಿಲ್ಲ.

ಹಾಗೆ ಒಂದುವೇಳೆ ಇಂದ್ರನೇ ಪ್ರಾಣಶಬ್ದವಾಚ್ಯನಾಗಿರುವುದಾದರೆ ತ್ವಂ ಪ್ರಾಣಃ ಎಂಬುದಾಗಿ ವ್ಯಪದೇಶವು ಕೂಡುವುದಿಲ್ಲ.

**ಸೂ.ರ.:– ईश्वरपक्षे त्वहमादिशब्दानां शास्त्रदृष्ट्या प्रवृत्तत्वेन बाधकाभावात् । तत्तन्नाम्नोच्यते विष्णुरिति (पाद्मे.) वचनात् । प्राणोऽयं विष्णुरेवेति सिद्धम् ।**

**ಅನುವಾದ :–**

**तत्तन्नाम्नोच्यते विष्णुः सर्वशास्तृत्वहेतुतः ।**
**न क्वापि किञ्चिन्नामास्ति तमृते पुरुषोत्तमम् ॥**

**ಅನು.:–** "ಎಲ್ಲರಲ್ಲಿ ಅಂತರ್ಯಾಮಿಯಾಗಿ ಇದ್ದುಗೊಂಡು ಎಲ್ಲರನ್ನೂ ಶಾಸನ ಮಾಡುತ್ತಾನಾದ್ದರಿಂದ ಭಗವಂತ ಆ ಆ ನಾಮಗಳಿಂದ ವಾಚ್ಯನಾಗುತ್ತಾನೆ. ಭಗವಂತನನ್ನು ತಿಳಿಸಿಕೊಡದ ಯಾವ ಶಬ್ದವೂ ಇಲ್ಲ" ಎಂಬುದಾಗಿ ಪದ್ಮಪುರಾಣದಲ್ಲಿ ಹೇಳಿದ್ದರಿಂದ ಅಂತರ್ಯಾಮಿಯಾದ ಭಗವಂತನ ವಿಷಯದಲ್ಲಿ ಅಹಂ ಮೊದಲಾದ ಶಬ್ದಗಳು (ಅಂತರ್ಯಾಮಿವಿವಕ್ಷೆಯಿಂದ) ಪ್ರವೃತ್ತವಾದ್ದರಿಂದ ಯಾವ ಬಾಧಕವೂ ಇಲ್ಲ.

ಆದ್ದರಿಂದ ಪ್ರಾಣೋ ವಾ ಅಹಂ ಎಂಬುದಾಗಿ ಇಂದ್ರನು ಪ್ರಾಣತ್ವೇನ ತನ್ನ ವ್ಯಪದೇಶ ಮಾಡಿದ್ದರೂ ಸಹ ಇಂದ್ರನ ಅಂತರ್ಯಾಮಿಯಾದ ವಿಷ್ಣುವಿನ ವಿಷಯದಲ್ಲಿ ಅಹಂಶಬ್ದವು ಪ್ರವೃತ್ತವಾಗುವುದರಿಂದ, ಅಂತರ್ಯಾಮಿಯಾದ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತನೆ ಎಂದು ಸಿದ್ಧವಾಗುತ್ತದೆ.

ಸೂತ್ರ – 31

**पुनरुक्तमाक्षिप्य समादधत्सूत्रमुपन्यस्यति ।**

**ಅನು.:–** ಅಂತರ್ಯಾಮಿಯಾದ ಭಗವಂತನೇ ಪ್ರಾಣಶಬ್ದವಾಚ್ಯನಾಗುತ್ತಾನೆ ಎಂಬುದಾಗಿ ಹಿಂದೆ ಹೇಳಿದ್ದನ್ನೇ ಮತ್ತೆ ಆಕ್ಷೇಪ ಮಾಡಿಕೊಂಡು ಸಮಾದಾನ ಹೇಳುವ ಸೂತ್ರವನ್ನು ಹೇಳುತ್ತಾರೆ :–

## ॐ जीवमुख्यप्राणलिङ्गान्नेति चेन्नोपासात्रैविध्यात् आश्रितत्वादिह तद्योगात् ॐ (१.१.३१)

**ಸೂತ್ರಾರ್ಥ :-** ಜೀವಮುಖ್ಯಪ್ರಾಣಲಿಂಗಾತ್ = ಶತಾಯುಷ್ಟ್ವಾದಿ ಜೀವಲಿಂಗ-ಗಳು, ಇಂದ್ರಿಯದೇವತೆಗಳಿಂದ ಸಂವಾದಾದಿರೂಪವಾದ ಮುಖ್ಯಪ್ರಾಣಲಿಂಗಗಳೂ ಶ್ರುತವಾಗುತ್ತಿರುವುದರಿಂದ ನ ಇತಿ ಚೇತ್ = ಪ್ರಾಣಶಬ್ದವಾಚ್ಯರಾದವರು ಬೇರೆಯವರೇ ಆಗುತ್ತಾರೆ. ಹೊರತು ವಿಷ್ಣು ಆಗುವುದಿಲ್ಲ ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ. ಕುತಃ = ಯಾಕೆ? ಅನುಗಮಾತ್ = ಅನೇಕಬಾರಿ ಬ್ರಹ್ಮಶಬ್ದಶ್ರವಣವಾಗುತ್ತಿರುವುದರಿಂದ.

ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆ ಎಂದರೆ, ಶತಾಯುಷ್ಟ್ವಾದಿ ಜೀವಲಿಂಗಗಳ ವಿರೋಧ ಹಾಗೂ ಇಂದ್ರಿಯದೇವತೆಗಳಿಂದ ಸಂವಾದಾದಿರೂಪ ಮುಖ್ಯಪ್ರಾಣಲಿಂಗಗಳ ವಿರೋಧವೂ ಬರುತ್ತದೆಯಲ್ಲವೇ? ಎಂದರೆ, ನ ಚ ಲಿಂಗವಿರೋಧಃ । ಈ ಲಿಂಗಗಳ ವಿರೋಧವೂ ಬರುವುದಿಲ್ಲ. ತಲ್ಲಿಂಗಾನಾಮಂತರ್ಯಾಮಿವಿಷಯತ್ವೇನೋಪಪತ್ತೇಃ = ಆ ಲಿಂಗಗಳು ಅಂತರ್ಯಾಮಿವಿಷಯವಾಗಿ ಉಪಪನ್ನವಾಗುವುದರಿಂದ.

ಕಿಮರ್ಥಮಂತರ್ಯಾಮಿಕಥನಮಿತ್ಯತ ಉಕ್ತಂ=ಯಾಕೆ ಅಂತರ್ಯಾಮಿ ವಿಷಯ-ವಾಗಿ ಹೇಳಬೇಕು? ಎಂದರೆ ಅದಕ್ಕೆ ಹೇಳಿದ್ದು ಉಪಾಸಾತ್ರೈವಿಧ್ಯಾತ್ = ಅಂತರುಪಾಸನೆ ಬಹಿರುಪಾಸನೆ ಸರ್ವಗತೋಪಾಸನೆ ಎಂಬುದಾಗಿ ಬ್ರಹ್ಮೋಪಾಸನೆಯು ಮೂರುವಿಧ-ವಾದ್ದರಿಂದ. ಇಹ = ಈ ಪ್ರಕರಣದಲ್ಲಿ ಆಶ್ರಿತತ್ವಾತ್ = ಆ ತ್ರೈವಿಧ್ಯವನ್ನು ಹೇಳಿದ್ದರಿಂದ ತದ್ಯೋಗಾತ್ = ಆ ಅಧಿಕಾರಿಗಳು ಮೂರುವಿಧ ಉಪಾಸನೆಗೆ ಯೋಗ್ಯರಾದ್ದರಿಂದ.

**ಸೂ.ರ.:– एवं च तत्तच्छब्दैस्तत्तदधिकारिभेदेनोपासनार्थं अन्तर्यामि-कथनं युक्तमिति भावः । तस्मादयं प्राणो विष्णुरेवेति प्रागुक्तः प्राण आनन्दमयश्च स एवेति युक्ता तज्जिज्ञासेति सिद्धम् ।**

**ಅನು.:–** ಶತಾಯುಷ್ಟ್ವಾದಿ ಜೀವಲಿಂಗಗಳು ಹಾಗೂ ಇಂದ್ರಿಯದೇವತೆಗಳಿಂದ ಸಂವಾದಾದಿರೂಪ ಮುಖ್ಯಪ್ರಾಣಲಿಂಗಗಳು ಶ್ರುತವಾಗುತ್ತಿದ್ದರೂ ಅವು ಅಂತರ್ಯಾಮಿಯಾದ ಭಗವಂತನ ವಿಷಯಕವಾಗಿವೆ.

ಅಂತರ್ಯಾಮಿಕಥನವು ಏಕೆ? ಎಂದರೆ, ಅಂತರುಪಾಸನೆ ಬಹಿರುಪಾಸನೆ ಸರ್ವಗತೋಪಾಸನೆ ಎಂಬುದಾಗಿ ಮೂರುವಿಧವಾದ ಉಪಾಸನೆಗಳು ಇವೆ. ಆ ಮೂರು ವಿಧವಾದ ಉಪಾಸನೆಗಳೂ ಈ ಪ್ರಕರಣದಲ್ಲಿ ಶ್ರುತವಾಗುತ್ತಿವೆ. ಹೀಗಾಗಿ ಆ ಆ

ಅಧಿಕಾರಿಗಳು ಆ ಆ ಶಬ್ದಗಳಿಂದ ಅಂತರ್ಯಾಮಿಯಾದ ಭಗವಂತನ ಉಪಾಸನೆ ಮಾಡುವುದಕ್ಕಾಗಿ ಅಂತರ್ಯಾಮಿಕಥನ ಮಾಡಿದ್ದು ಸಮಂಜಸವೇ ಆಗಿದೆ.

ಆದ್ದರಿಂದ ''ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಶ್ಚಕ್ಷುಶ್ಶ್ರೋತ್ರಂ ಮನೋ ವಾಕ್ಪ್ರಾಣಃ'' (ಐ.ಆ.2-1-4) ಎಂಬ ಐತರೇಯದಲ್ಲಿ ಶ್ರುತವಾಗುತ್ತಿರುವ ಪ್ರಾಣಶಬ್ದದಿಂದ ವಾಚ್ಯನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

''ತಾ ವಾ ಏತಾಃ'' ಎಂಬ ಐತರೇಯದಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣು ಎಂದು ಸಿದ್ಧವಾದಮೇಲೆ, ''ತದ್ವೈ ತ್ವಂ ಪ್ರಾಣೋऽಭವಃ'' (ತೈ.ಆ. 3-14-4) ಎಂಬ ತೈತ್ತಿರೀಯದಲ್ಲಿ ಪ್ರಾಣಶಬ್ದವಾಚ್ಯನಾದವನೂ ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಈ ಎರಡೂ ಅಧಿಕರಣಗಳಲ್ಲಿ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾದಮೇಲೆ, ಆನಂದಮಯನಾದ ವ್ಯಕ್ತಿಯೂ ವಿಷ್ಣುವೇ ಎಂದು ಸಿದ್ಧವಾಗಿ, ಅಥಾತೋ ಬ್ರಹ್ಮಜಿಜ್ಞಾಸಾ ಎನ್ನುವಲ್ಲಿ ಆ ಬ್ರಹ್ಮನ (ವಿಷ್ಣುವಿನ) ಜಿಜ್ಞಾಸೆ ಮಾಡಬೇಕೆಂದು (ವಿಧಿಸಿದ್ದು) ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

**ಇಲ್ಲಿಗೆ ಪಾದಾಂತ್ಯಪ್ರಾಣಾಧಿಕರಣವು ಸಮಾಪ್ತವಾಯಿತು.**

# प्रथमोऽध्यायः

## द्वितीयः पादः

*ಅಧಿಕರಣ – 1*

## ಸರ್ವಗತತ್ವಾಧಿಕರಣ

### ಪಾದಸಂಗತಿ

**ಸೂ.ರ.:– लिङ्गात्मकानां शब्दानां विष्णौ प्रवृत्तिः प्रदर्श्यतेऽस्मिन्पादे प्राधान्येन ।**

**ಅನು.:–** ಮೊದಲನೇ ಸಮನ್ವಯಾಧ್ಯಾಯದಲ್ಲಿ ಎಲ್ಲ ಶಬ್ದಗಳನ್ನೂ ಸಮನ್ವಯ ಮಾಡಲು ಹೊರಟ ವ್ಯಾಸರು ಮೊದಲನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ನಾಮಾತ್ಮಕ-ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿ ಮುಗಿಸಿ, ಪ್ರಕೃತ ಎರಡನೇ ಈ ಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ಲಿಂಗಾತ್ಮಕವಾದ ಶಬ್ದಗಳ ಸಮನ್ವಯವನ್ನು ಪ್ರಧಾನವಾಗಿ ಪರಮಾತ್ಮನಲ್ಲಿ ಮಾಡಿ ತೋರಿಸುತ್ತಾರೆ.

### ಅಧಿಕರಣ ಸಂಗತಿ

**ಸೂ.ರ.:– अत्रान्यत्र प्रसिद्धसर्वगतत्वरूपभावलिङ्गं ब्रह्मणि समन्वीयते ।**

**ಅನು.:–** ಅನ್ಯತ್ರ ಪ್ರಸಿದ್ಧವಾದ ಸರ್ವಗತತ್ವ ಎಂಬ ಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ ಮೊದಲನೇ ಈ ಸರ್ವಗತತ್ವಾಧಿಕರಣದಲ್ಲಿ.

''ಬ್ರಹ್ಮ ತತಮ್'' ಎಂಬುದಾಗಿ ವಿಷ್ಣುವಿಗೆ ಸರ್ವಗತತ್ವವು ಹೇಳಲ್ಪಟ್ಟಿದೆ. ಅದೇ ಸರ್ವಗತತ್ವವು ''ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾ-ವಧ್ವರ್ಯವಃ ಏತಂ ಮಹಾವ್ರತೇ ಛಂದೋಗಾ ...'' ಎಂಬುದಾಗಿ ಬೇರೊಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಇಲ್ಲಿ ಶ್ರುತನಾಗುತ್ತಿರುವ ಸರ್ವಗತನಾದ ವ್ಯಕ್ತಿ ಯಾರೆಂದು ಜಿಜ್ಞಾಸೆ. ವಿಷ್ಣುವಿನಿಂದ ಭಿನ್ನನಾದವನು ಸರ್ವಗತನಾದರೆ ಏಕಪ್ರಕರಣತ್ವ ನಿಮಿತ್ತದಿಂದಾಗಿ ಹಿಂದಿನ ಪ್ರಕರಣದಲ್ಲಿ ಪ್ರಾಣಶಬ್ದವಾಚ್ಯನಾದವನೂ ಅವನೇ ಆಗಬೇಕಾಗುತ್ತದೆ. ಹೀಗಾಗಿ ಇಲ್ಲಿ ಸರ್ವಗತನಾದ ವ್ಯಕ್ತಿ ವಿಷ್ಣುವೋ? ಬೇರೆಯವರೋ? ಎಂದು ಸಂದೇಹ.

## ಪೂರ್ವಪಕ್ಷ

**ಸೂ.ರ.:– नन्वादित्य एवायं सर्वगतो भवेत् । तस्यैतस्यासावादित्य (ऐ.आ.३-२-३) इत्यादि बह्वादित्यश्रुतेः । सूर्य आत्मेति सौरमन्त्रोदाहरणाच्च । एतमस्यामेतमिति क्षित्यादिपूक्त्वादित्येऽनुक्तत्वलिङ्गाच्च ।**

ಅನು.:– "ಏತಂ ಹ್ಯೇವ ಬಹ್ವೃಚಾ" ಎನ್ನುವಲ್ಲಿ ಸರ್ವಗತತ್ವೇನ ಶ್ರುತನಾಗುತ್ತಿರುವ ವ್ಯಕ್ತಿ ಆದಿತ್ಯನೇ ಆಗುತ್ತಾನೆ. "ತಸ್ಯೈತಸ್ಯಾಸಾವಾದಿತ್ಯಃ" (ಐ.ಆ. 3-2-3) ಇತ್ಯಾದಿಯಾಗಿ ಬಹು ಆದಿತ್ಯಶ್ರುತಿ ಇರುವುದರಿಂದ.

"ಸೂರ್ಯ ಆತ್ಮಾ ಜಗತಃ" ಎಂಬುದಾಗಿ ಸೌರಮಂತ್ರವನ್ನು ಉದಾಹರಿಸಿದ್ದ-ರಿಂದಲೂ ಸೂರ್ಯನೇ ಇಲ್ಲಿ ಸರ್ವಗತನಾಗಬೇಕು.

ಮತ್ತು ಸರ್ವಗತನಾದ ವ್ಯಕ್ತಿಯನ್ನು ಹೇಳುವಾಗ "ಏತಮಗ್ನೌ ಏತಂ ವಾಯೌ ಏತಮಾಕಾಶೇ ತಮಪ್ಸು ಏತಂ ಸರ್ವೇಷು ಭೂತೇಷು" ಎಂಬುದಾಗಿ (ಸರ್ವಗತಾನಾದ ಈ ವ್ಯಕ್ತಿ ಅಗ್ನಿಯಲ್ಲಿದ್ದಾನೆ ಆಕಾಶದಲ್ಲಿದ್ದಾನೆ ನೀರಿನಲ್ಲಿದ್ದಾನೆ ಎಲ್ಲ ಭೂತಗಳಲ್ಲಿದ್ದಾನೆ ಎಂದು) ಸರ್ವಗತನಾದ ವ್ಯಕ್ತಿಗೆ ಕ್ಷಿತ್ಯಾದಿಗಳಲ್ಲಿ ವರ್ತಮಾನತ್ವವನ್ನು ಹೇಳಿ ಏತಮಾದಿತ್ಯೇ (ಆದಿತ್ಯನಲ್ಲಿದ್ದಾನೆ) ಎಂಬುದಾಗಿ ಆದಿತ್ಯನಲ್ಲಿ ವರ್ತಮಾನತ್ವವನ್ನು ಹೇಳಿಲ್ಲ.

"ಸರ್ವಗತನಾದ ವ್ಯಕ್ತಿ ಆದಿತ್ಯನಲ್ಲಿ ಇದ್ದಾನೆ" ಎಂದು ಹೇಳಿದ್ದರೆ ಆದಿತ್ಯನು ಸರ್ವಗತನಾಗಲು ಸಾಧ್ಯವಿರುತ್ತಿರಲಿಲ್ಲ. ಆದರೆ ಸರ್ವಗತನಾದ ವ್ಯಕ್ತಿ ಕ್ಷಿತ್ಯಾದಿಗಳಲ್ಲಿ ಇದ್ದಾನೆ ಎಂದು ಹೇಳಿದ್ದಾರೆಯೇ ಹೊರತು ಆದಿತ್ಯನಲ್ಲಿ ಇದ್ದಾನೆ ಎಂದು ಹೇಳಿಲ್ಲ. ಆದ್ದರಿಂದ ಆದಿತ್ಯನೇ ಸರ್ವಗತನಾದ ವ್ಯಕ್ತಿ ಆಗಬಹುದು.

**ಸೂ.ರ.:– यद्वा । सर्वजीवानामेतत्सर्वगतत्वम् । चक्षुर्मयत्वादिलिङ्गात् । न च चक्षुर्मयत्वादिलिङ्गमतन्तर्यामिविषयम् । तस्यापरिच्छिन्नत्वेन सर्वेषु भूतेष्वित्युक्ताल्पौकस्त्वायोगात् । तस्माद्विष्णवन्यस्यैव सर्वगतत्वेन तस्यैव प्रागुक्तं प्राणत्वमानन्दमयत्वं चेति प्राप्ते सूत्रमाह ।**

ಅನು.:– ಅಥವಾ ಎಲ್ಲ ಜೀವರು ಸರ್ವಗತರಾದ ವ್ಯಕ್ತಿಗಳಾಗಿದ್ದಾರೆ. ಯಾಕೆ? "ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ"

ಎಂಬುದಾಗಿ ಚಕ್ಷುರ್ಮಯತ್ವ ಮೊದಲಾದ ಜೀವರ ಲಿಂಗಗಳು ಶ್ರುತವಾಗುತ್ತಿ-ರುವುದರಿಂದ ಜೀವರು ಸರ್ವಗತರಾದ ವ್ಯಕ್ತಿಗಳಾಗಬಹುದು.

ಈ ಚಕ್ಷುರ್ಮಯತ್ವ ಮೊದಲಾದ ಲಿಂಗಗಳು ಜೀವರ ವಿಷಯಕವೇ ಏಕೆ ಆಗಬೇಕು? ಅರ್ಥಾತ್ ಜೀವರಲ್ಲಿ ಅಂತರ್ಯಾಮಿಯಾದ ಭಗವಂತನ ವಿಷಯಕವಾಗಿವೆ ಎಂದು ಹೇಳಬಹುದಲ್ಲವೇ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ ಆ ಭಗವಂತ ಅಪರಿಚ್ಛಿನ್ನನಾದ ವ್ಯಕ್ತಿಯಾದ್ದರಿಂದ (ದೇಶದ ಸೀಮೆ ಇಲ್ಲವಾದ್ದರಿಂದ) "ಏತಂ ಸರ್ವೇಷು ಭೂತೇಷು" ಎಂಬುದಾಗಿ ಹೇಳಿದ ಅಲ್ಪೌಕಸ್ತ್ವವು (ಕೆಲವು ದೇಶದಲ್ಲಿ ಮಾತ್ರ ಇರುವುದು) ಭಗವಂತನಿಗೆ ಕೂಡುವುದಿಲ್ಲ.

ಆದ್ದರಿಂದ ಆದಿತ್ಯ ಅಥವಾ ಜೀವರು ಹೀಗೆ ವಿಷ್ಣುವಿನಿಂದ ಭಿನ್ನರಾದವರೇ ಸರ್ವಗತ-ರಾಗುವುದರಿಂದ ಹಿಂದೆ ಹೇಳಿದ ಪ್ರಾಣತ್ವ-ಆನಂದಮಯತ್ವಗಳೂ ಅವರಿಗೇ ಕೂಡುತ್ತವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳಲು ಸೂತ್ರವು ಹೊರಡುತ್ತದೆ :-

## ॐ सर्वत्र प्रसिद्धोपदेशात् ॐ (१-२-१)

**ಸೂತ್ರಾರ್ಥ** :- (ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿರುವ ತತ್ತು ಎಂಬ ಪದವನ್ನು ಅನುವರ್ತನೆ ಮಾಡಿಕೊಳ್ಳಬೇಕು.) ಸರ್ವತ್ರ = ಪೃಥಿವ್ಯಾದಿಗಳಲ್ಲಿ ಎಲ್ಲೆಡೆ ಇರುವುದಾಗಿ (ಸರ್ವಗತನಾಗಿ) ಹೇಳಲ್ಪಡುತ್ತಿರುವ ವಸ್ತು ತತ್ತು = ನಾರಾಯಣ ಎಂಬ ಬ್ರಹ್ಮನೇ ಆಗಿದ್ದಾನೆ. ಬೇರೆಯವರು ಆಗುವುದಿಲ್ಲ. ಕುತಃ = ಯಾಕೆ? ಪ್ರಸಿದ್ಧೋಪದೇಶಾತ್ = "ಏತಮೇವ ಬ್ರಹ್ಮ" (ಐ.ಆ.3-2-3-12) ಎಂಬುದಾಗಿ ನಾರಾಯಣನಿಗೆ ವಾಚಕವಾಗಿ ಶ್ರುತ್ಯಾದಿಪ್ರಸಿದ್ಧವಾದ ಬ್ರಹ್ಮಶಬ್ದವು ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವುದರಿಂದ.

### ಸಿದ್ಧಾಂತ

**ಸೂ.ರ.:**– एवं चैतमेवेति सर्वभूतगते वस्तुनि नारायणैकनिष्ठत्वेन स यश्चायमिति (ऐ.आ.३-२-३) श्रुतिप्रसिद्धब्रह्मशब्दोपदेशात्सर्वेषु भूतेष्वन्तर्गततयोच्यमानो नारायण एवेति सिद्धम् ।

ಅನು.:– "ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ" (ಐ.ಆ. 3-2-4) ಎಂಬುದಾಗಿ

ಪೃಥಿವ್ಯಾದಿಗಳಲ್ಲಿ ಎಲ್ಲೆಡೆ ಇರುವವನಾಗಿ ಹೇಳಲ್ಪಡುತ್ತಿರುವ ವ್ಯಕ್ತಿ (ಸರ್ವಗತನಾದ ವ್ಯಕ್ತಿ) ನಾರಾಯಣನೇ ಆಗುತ್ತಾನೆ. ಏಕೆ? ''ಏತಮೇವ ಬ್ರಹ್ಮೇತ್ಯಾಚಕ್ಷತೇ'' ಎಂಬುದಾಗಿ ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಬ್ರಹ್ಮಶಬ್ದವು ಶ್ರುತವಾಗುತ್ತಿದೆ. ಆ ಬ್ರಹ್ಮಶಬ್ದ-ವಾದರೋ ನಾರಾಯಣನಲ್ಲಿಯೇ ಪ್ರಸಿದ್ಧವಾಗಿದೆ.

ಆದ್ದರಿಂದ ನಾರಾಯಣನಿಗೆ ಮಾತ್ರ ವಾಚಕವಾಗಿ ಪ್ರಸಿದ್ಧವಾದ ಬ್ರಹ್ಮಶಬ್ದವು ಶ್ರುತ-ವಾಗುತ್ತಿರುವುದರಿಂದ ಸರ್ವಗತನಾದ ವ್ಯಕ್ತಿ (ಆದಿತ್ಯನಲ್ಲಿ ಅಥವಾ ಜೀವರಲ್ಲಿ ಅಂತರ್ಯಾಮಿಯಾದ) ನಾರಾಯಣನೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ – 2

**ಸೂ.ರ.:– युक्त्यन्तरेण विष्णोरेवात्रोक्तसर्वगतत्वं प्रतिपादयत्सूत्र-मवतारयति ।**

**ಅನು.:–** ಇಲ್ಲಿ ಹೇಳಿದ ಸರ್ವಗತತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆ ಎಂಬುದನ್ನು ಮತ್ತೊಂದು ಯುಕ್ತಿಯಿಂದಲೂ ತಿಳಿಸುವ ಸೂತ್ರವನ್ನು ಹೇಳುತ್ತಾರೆ :-

**ॐ विवक्षितगुणोपपत्तेश्च ॐ (१-२-२)**

**ಸೂತ್ರಾರ್ಥ :-** (ಚ ಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿ ಅಥವಾ ಅವಧಾರಣ ಎಂಬ ಅರ್ಥದಲ್ಲಿ ಇದೆ.) ಸರ್ವಗತೇ ಶ್ರುತ್ಯಾ ಎಂಬ ಎರಡು ಶಬ್ದಗಳನ್ನು ಶೇಷ ಮಾಡಿಕೊಳ್ಳಬೇಕು.

ವಿವಕ್ಷಿತಗುಣೋಪಪತ್ತೇಶ್ಚ = ವಿವಕ್ಷಿತಾನಾಂ ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಶ್ರುತಿಯಿಂದ ತನ್ನಿಷ್ಠವಾಗಿ (ತತ್ಪರವಾಗಿ) ಹೇಳಲು ಯೋಗ್ಯವಾದ, ಅಥವಾ ವಕ್ಷ್ಯ-ಮಾಣವಾದ ಗುಣಾನಾಂ ಅಶ್ರುತತ್ವ ಮೊದಲಾದ ಗುಣಗಳು ಉಪಪತ್ತೇಃ ಏವ ವಿಷ್ಣುವಿಗೆ ಮಾತ್ರ ಯೋಗ್ಯವಾಗಿರುವುದರಿಂದ, ಅವನಲ್ಲಿಯೇ ಉಪಪನ್ನವಾಗುವುದರಿಂದ, ಬೇರೆಯವರಲ್ಲಿ ಉಪಪನ್ನವಾಗುವುದಿಲ್ಲವಾದ್ದರಿಂದ ವಿಷ್ಣುರೇವ ಸರ್ವಗತಃ ವಿಷ್ಣುವೇ ಸರ್ವಗತನಾದ ವ್ಯಕ್ತಿಯಾಗುತ್ತಾನೆ.

**ಸೂ.ರ.:– एवं च योऽतोऽश्रुतः, (ऐ.आ. ३-२-४) न ते विष्णो, (ऋ.७-९९-२) स सविता, (चतुर्वेदशिखायां) इत्यादिश्रुतिभिः सर्वत्र-गतनिष्ठतया वक्तुं योग्यानां वक्ष्यमाणानामश्रुतत्वादिगुणानां विष्णोरेव योग्यत्वेन सर्वत्रोच्यमानो नारायण एवेति सिद्धम् ।**

**ಅನು.:–** ಸ ಯೋಽತೋಽಶ್ರುತಃ (ಐ.ಆ.3-2-4), ನ ತೇ ವಿಷ್ಣೋ (ಋ. 7-99-2), ಸ ಸವಿತಾ (ಚತುರ್ವೇದಶಿಖಾ) ಇತ್ಯಾದಿ ಶ್ರುತಿಗಳಿಂದ ಸರ್ವಗತನಾದ ವ್ಯಕ್ತಿಯಲ್ಲಿ ಇವೆ ಎಂದು ಹೇಳಲು ಯೋಗ್ಯವಾದ, ವಕ್ಷ್ಯಮಾಣವಾದ ಅಶ್ರುತತ್ವ ಮೊದಲಾದ ಗುಣಗಳು ವಿಷ್ಣುವಿಗೆ ಮಾತ್ರ ಯೋಗ್ಯವಾದ್ದರಿಂದ ಪೃಥಿವ್ಯಾದಿಗಳಲ್ಲಿ ಎಲ್ಲೆಡೆ ಹೇಳಲ್ಪಡು-ತ್ತಿರುವ (ಸರ್ವಗತನಾದ) ವ್ಯಕ್ತಿ ನಾರಾಯಣನೇ ಆಗುತ್ತಾನೆ. ಬೇರೆ ಯಾರೂ ಆಗುವುದಿಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 3

## ಆಕ್ಷೇಪ

**ಸೂ.ರ.:– ननु यथा ब्रह्मशब्दादश्रुतत्वादिलिङ्गैश्च विष्णुः सर्वगत इत्युच्यते तथाऽऽदित्यो रस (ऐ.आ.३-२-३) इत्यादित्यशब्दाचक्षुर्मय इति (ऐ.आ.३-२-१) श्रुतौ ज्ञानकरणात्मकदेहाभिमानित्वेन जीवे प्रसिद्ध-चक्षुर्मयत्वादिलिङ्गैश्चादित्यः सर्वजीवा वा भवेयुरिति प्राप्ते सूत्रितम् ।**

**ಅನು.:–** ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಬ್ರಹ್ಮಶಬ್ದವು ಶ್ರುತವಾಗು-ತ್ತಿರುವುದರಿಂದ ಹಾಗೂ ಅಶ್ರುತತ್ವಾದಿಲಿಂಗಗಳು ಇರುವುದರಿಂದ ವಿಷ್ಣುವು ಸರ್ವಗತನಾದ ವ್ಯಕ್ತಿ ಎಂದು ಹೇಗೆ ಹೇಳುತ್ತೀರೋ ಅದರಂತೆ ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಆದಿತ್ಯೋ ರಸಃ (ಐ.ಆ.3-2-3) ಎಂಬುದಾಗಿ ಆದಿತ್ಯಶಬ್ದವು ಶ್ರುತವಾಗುತ್ತಿರುವುದರಿಂದ, ಮತ್ತು ಚಕ್ಷುರ್ಮಯಃ (ಐ.ಆ.3-2-1) ಎಂಬ ಶ್ರುತಿಯಲ್ಲಿ ಜ್ಞಾನಕರಣಾತ್ಮಕ ದೇಹಾಭಿಮಾನಿಯಾದ್ದರಿಂದ ಜೀವನಲ್ಲಿ ಪ್ರಸಿದ್ಧವಾದ ಚಕ್ಷುರ್ಮಯತ್ವಾದಿ ಲಿಂಗಗಳೂ ಇರುವುದರಿಂದ ಸರ್ವಗತನಾದ ವ್ಯಕ್ತಿ ಆದಿತ್ಯನಾಗಬಹುದು ಅಥವಾ ಜೀವರೇ ಸರ್ವಗತ-ರಾಗಬಹುದು ಎಂಬುದಾಗಿ ಆಕ್ಷೇಪ ಬಂದರೆ ಅದಕ್ಕಾಗಿ ಸೂತ್ರ ಹೇಳುತ್ತಾರೆ :-

**ॐ अनुपपत्तेस्तु न शारीरः ॐ (१-२-३)**

**ಸೂತ್ರಾರ್ಥ :-** (ಏವ ಎಂಬ ಅವಧಾರಣಾರ್ಥದಲ್ಲಿ ತುಶಬ್ದವು ಪ್ರಯೋಗಿಸ-ಲ್ಪಟ್ಟಿದೆ) ಶಾರೀರಃ = ಜೀವ ಅಥವಾ ಆದಿತ್ಯನು ನ ಸರ್ವಗತಃ = ಸರ್ವಗತನಾಗಲು ಸಾಧ್ಯ-ವಿಲ್ಲ. ಕುತಃ = ಯಾಕೆ? ಅನುಪಪತ್ತೇಃ (ತು) ಏವ = ಒಬ್ಬನೇ ಜೀವನಿಗೆ ಸರ್ವಶರೀರಸ್ಥತ್ವವು ಕೂಡುವುದಿಲ್ಲವಾದ್ದರಿಂದಲೇ.

**ಸೂ.ರ.:– एवं च सर्वजीवस्य समानभोगरूपोपपत्तिविरुद्धत्वात् । एकैकस्य जीवस्य सर्वशरीरस्थत्वानुपपत्तेः । एकस्य जीवस्यादित्यस्य वा सर्वशरीरस्थत्वे सर्वसुखदुःखादिभोगप्राप्त्या सर्वगतत्वायोगेन श्रुतेर्बाधित विषयत्वप्रसङ्गात् । तस्मात्सर्वभूतेष्वन्तर्गततयोच्यमानो नारायण एवेति सिद्धम् ।**

**ಅನು.:–** 1. ಎಲ್ಲ ಜೀವರೂ ಎಲ್ಲ ಶರೀರಗಳಲ್ಲಿ ಇರುವುದಾದರೆ (ಸರ್ವಗತ-ರಾಗುವುದಾದರೆ) ಎಲ್ಲರಿಗೂ ಸಮಾನಭೋಗ ಬರಬೇಕಾದೀತು. ಆದ್ದರಿಂದ ಸಮಾನ-ಭೋಗರೂಪವಾದ ಉಪಪತ್ತಿವಿರುದ್ಧವಾದದ್ದರಿಂದ ಎಲ್ಲ ಜೀವರೂ ಸರ್ವಗತರಾಗಲು ಸಾಧ್ಯವಿಲ್ಲ.

2. ಇನ್ನು ಒಬ್ಬನೇ ಜೀವನಿಗೆ ಸರ್ವಗತತ್ವವನ್ನು ಹೇಳೋಣ ಎಂದರೆ, ಒಬ್ಬ ಜೀವನು ಒಂದು ಶರೀರದಲ್ಲಿ ಇರಬಹುದೇ ಹೊರತು ಒಬ್ಬನೇ ಜೀವ ಎಲ್ಲ ಶರೀರಗಳಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಒಬ್ಬನಿಗೆ ಸರ್ವಶರೀರಸ್ಥತ್ವವು ಅನುಪಪನ್ನವಾದ್ದರಿಂದ ಒಬ್ಬನೇ ಜೀವ ಸರ್ವಗತನಾಗಲು ಸಾಧ್ಯವಿಲ್ಲ.

3. ಅಥವಾ ಒಬ್ಬನೇ ಜೀವನಾಗಲೀ, ಒಬ್ಬನೇ ಆದಿತ್ಯನಾಗಲೀ ಎಲ್ಲ ಶರೀರಗಳಲ್ಲಿ ಇದ್ದಾನೆ ಎಂದು ಅಂಗೀಕರಿಸಿದರೆ ಎಲ್ಲರ ಸುಖ-ದುಃಖಾದಿಗಳ ಭೋಗ ಇವನಿಗೆ ಬರಬೇಕಾದ ಅತಿಪ್ರಸಂಗ ಬರುತ್ತದೆ. ಒಬ್ಬ ಜೀವನಿಗೆ ಅಥವಾ ಒಬ್ಬ ಆದಿತ್ಯನಿಗೆ ಸರ್ವಸುಖದುಃಖಾದಿಭೋಗವು ಅನುಪಪನ್ನವಾದ್ದರಿಂದ ಒಬ್ಬ ಜೀವ ಅಥವಾ ಒಬ್ಬ ಆದಿತ್ಯನೂ ಸರ್ವಗತನಾಗಲು ಸಾಧ್ಯವಿಲ್ಲ.

ಈ ರೀತಿಯಾಗಿ ಎಲ್ಲ ಜೀವರೂ ಸರ್ವಗತರಾಗಲು ಸಾಧ್ಯವಿಲ್ಲ, ಒಬ್ಬ ಜೀವನೂ ಸರ್ವಗತನಾಗಲು ಸಾಧ್ಯವಿಲ್ಲ, ಒಬ್ಬ ಆದಿತ್ಯನೂ ಸರ್ವಗತನಾಗಲು ಸಾಧ್ಯವಿಲ್ಲ ಎಂದಮೇಲೆ ಸರ್ವಗತನಾದ ವ್ಯಕ್ತಿಯನ್ನು ಹೇಳಿಕೊಡುವ ಶ್ರುತಿಗೆ ಜೀವರಾಗಲೀ ಆದಿತ್ಯನಾಗಲೀ ವಿಷಯ ಎಂದು ಹೇಳಿದರೆ ಬಾಧ ಬರುತ್ತದೆ. ಶ್ರುತಿಯು ಬಾಧಿತವಾದ ವಿಷಯ ಉಳ್ಳದ್ದಾಗುತ್ತದೆ. ಆದ್ದರಿಂದ ಜೀವರಾಗಲೀ ಆದಿತ್ಯನಾಗಲೀ ಸರ್ವಗತರಾಗಲು ಸಾಧ್ಯವಿಲ್ಲ.

ನಾರಾಯಣನು ಸರ್ವಗತನಾದ ವ್ಯಕ್ತಿ ಎಂದು ಅಂಗೀಕರಿಸಿದರೆ ಈ ಹಿಂದೆ ಬಂದ ಯಾವ ಅನುಪಪತ್ತಿಗಳೂ ಬರುವುದಿಲ್ಲವಾದ್ದರಿಂದ ನಾರಾಯಣನೇ ಸರ್ವಗತನಾದ ವ್ಯಕ್ತಿ ಎಂದು ಸಿದ್ಧವಾಗುತ್ತದೆ.

ಸೂತ್ರ – 4

**ಸೂ.ರ.:– युक्त्यन्तरेण शारीरस्य सर्वगतत्वं पराकुर्वत्सूत्रमुपन्यस्यति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಜೀವನಿಗೆ ಸರ್ವಗತತ್ವವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ :-

**ॐ कर्मकर्तृव्यपदेशाच्च ॐ (१.२.४)**

**ಸೂತ್ರಾರ್ಥ :-** ಕರ್ಮಕರ್ತೃವ್ಯಪದೇಶಾಚ್ಚ = ಸ ಏತಮಾತ್ಮಾನಂ ಎಂಬುದಾಗಿ ಶಂಸನಕ್ರಿಯೆಯಲ್ಲಿ ಸರ್ವಗತನಾದ ವ್ಯಕ್ತಿಗೆ ಕರ್ಮತ್ವವನ್ನು ಹೇಳಿದ್ದರಿಂದ, ಅದೇ ಕ್ರಿಯೆಯಲ್ಲಿ ಶಂಸತಿ ಎಂಬುದಾಗಿ ಜೀವನಿಗೆ ಕರ್ಮತ್ವಕ್ಕೆ ವಿರುದ್ಧವಾದ ಕರ್ತೃತ್ವವನ್ನು ಹೇಳಿದ್ದರಿಂದ ನ ಜೀವಃ ಸರ್ವಗತಃ = ಜೀವನು ಸರ್ವಗತನಾಗಲು ಸಾಧ್ಯವಿಲ್ಲ.

**ಸೂ.ರ.:– एवं च सर्वत्रोक्तस्य सर्वगतस्य प्रकृतस्यैतमात्मानमित्यैतरेयश्रुतौ शंसनक्रियायां स एतमात्मानमिति कर्मत्वेन शारीरस्य च तस्यामेव कर्तृत्वेन व्यपदेशात् । एकस्यां क्रियायां तयोरुत्सर्गतो भिन्नत्वनियमादपवादकारणाभावाच्च सर्वत्रोच्यमानो विष्णुरेवेति सिद्धम् ।**

**ಅನು.:–** ಸ ಏತಮಾತ್ಮಾನಂ ಎಂಬ ಐತರೇಯಶ್ರುತಿಯಲ್ಲಿ ಶಂಸನಕ್ರಿಯೆಯನ್ನು ಹೇಳುವಾಗ ಆ ಶಂಸನಕ್ರಿಯೆಯಲ್ಲಿ ಪೃಥಿವ್ಯಾದಿಗಳಲ್ಲಿ ಎಲ್ಲೆಡೆ ಇರುವ ಸರ್ವಗತನಾದ ವ್ಯಕ್ತಿಯನ್ನು ಕರ್ಮವಾಗಿ ಹೇಳಿದ್ದಾರೆ. ಅದೇ ಶಂಸನಕ್ರಿಯೆಯಲ್ಲಿ ಶಂಸತಿ ಎಂಬುದಾಗಿ ಜೀವನನ್ನು ಕರ್ತೃವನ್ನಾಗಿ ಹೇಳಿದ್ದಾರೆ.

ಶಂಸನಕ್ರಿಯೆಯಲ್ಲಿ ಸರ್ವಗತನಾದ ವ್ಯಕ್ತಿ ಕರ್ಮ ಆಗಿದ್ದಾನೆ. ಅದೇ ಶಂಸನಕ್ರಿಯೆ-ಯಲ್ಲಿ ಜೀವನು ಕರ್ತೃವಾಗಿದ್ದಾನೆ.

ಒಂದೇ ಕ್ರಿಯೆಯಲ್ಲಿ (ಕರ್ತೃತ್ವ-ಕರ್ಮತ್ವಗಳು ಒಬ್ಬರಿಗೇ ಕೂಡದ ಕಾರಣ) ಕರ್ತೃವಾದವನು, ಕರ್ಮ ಆದವನು ಸ್ವಾಭಾವಿಕವಾಗಿ ಭಿನ್ನರಾಗಿರುತ್ತಾರಾದ್ದರಿಂದ, ಅಪವಾದ ಏನಾದರೂ ಹೇಳಲು ವಿಶೇಷ ಕಾರಣವೂ ಯಾವುದಿಲ್ಲವಾದ್ದರಿಂದ ಪೃಥಿವ್ಯಾದಿಗಳಲ್ಲಿ ಎಲ್ಲೆಡೆ ಇರುವುದಾಗಿ ಶ್ರುತನಾಗುತ್ತಿರುವ ಸರ್ವಗತನಾದ ವ್ಯಕ್ತಿ ಜೀವನಾಗಲು ಸಾಧ್ಯವಿಲ್ಲ. ಕಿಂತು ನಾರಾಯಣನೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ – 5

## ಆಕ್ಷೇಪ

**ಸೂ.ರ.:–** **ननु ब्रह्मशब्दाद्विष्णुरेव सर्वगत इति न युज्यते । तच्छब्दस्य जीवेऽपि वृत्तेः । न चासौ जीवेऽमुख्य इति तदग्रहः । चक्षुर्मयत्वादिबाधकबलेनामुख्यार्थस्यापि ग्रहणोपपत्तेः ।**

**ಅನು.:–** ಸರ್ವಗತನಾದ ವ್ಯಕ್ತಿಯ ವಿಷಯದಲ್ಲಿ ಬ್ರಹ್ಮಶಬ್ದವು ಶ್ರುತವಾಗುತ್ತಿರು-ವುದರಿಂದ ವಿಷ್ಣುವೇ ಸರ್ವಗತನಾದ ವ್ಯಕ್ತಿ ಎಂದು ಹೇಳುವುದು ಸರಿಯಾಗುವುದಿಲ್ಲ, ಏಕೆಂದರೆ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮಾತ್ರ ಪ್ರವೃತ್ತವಾಗುತ್ತಿದ್ದರೆ ಆಗ ಹೀಗೆ ಹೇಳಬಹುದಿತ್ತು. ಆದರೆ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮಾತ್ರ ಪ್ರವೃತ್ತವಾಗಿಲ್ಲ. ಕಿಂತು ಜೀವನಲ್ಲಿಯೂ ಪ್ರವೃತ್ತವಾಗಿದೆ. (ಬ್ರಹ್ಮಶಬ್ದವು ಜೀವವಾಚಕವೂ ಆಗಿದೆ.) ಆದ್ದರಿಂದ ಬ್ರಹ್ಮಶಬ್ದ ಇದ್ದಮಾತ್ರಕ್ಕೆ ವಿಷ್ಣುವೇ ಎಂದು ನಿರ್ಧರಿಸಲು ಆಗುವುದಿಲ್ಲ, ಜೀವನೂ ಆಗಬಹುದಾಗಿದೆ.

ನಿಜವೇ, ಬ್ರಹ್ಮಶಬ್ದವು ಜೀವನಲ್ಲಿಯೂ ಪ್ರವೃತ್ತವಾಗುತ್ತದೆ ಎನ್ನುವುದು ಸತ್ಯವೇ. ಆದರೆ ಬ್ರಹ್ಮಶಬ್ದವು ಜೀವನಲ್ಲಿ ಮುಖ್ಯವಾಗಿಲ್ಲ. ಕಿಂತು ಅಮುಖ್ಯವಾಗಿದೆ. ಆದರೆ ಅದೇ ಶಬ್ದ ಬ್ರಹ್ಮನಲ್ಲಿ ಮುಖ್ಯವಾಗಿರುವುದರಿಂದ ಮುಖ್ಯಾರ್ಥನಾದ ಬ್ರಹ್ಮನನ್ನೇ ತೆಗೆದುಕೊಳ್ಳಬೇಕಲ್ಲ! ಎಂದು ಶಂಕೆ ಬಂದರೆ ಅದು ಸರಿಯಲ್ಲ.

ಮುಖ್ಯಾರ್ಥನಾಗಿದ್ದಾನೆ ಎಂಬ ಕಾರಣಕ್ಕೆ ಬ್ರಹ್ಮನನ್ನು ತೆಗೆದುಕೊಂಡುಬಿಟ್ಟರೆ, ಅದೇ ಪ್ರಸಂಗದಲ್ಲಿ ಸರ್ವಗತನಾದ ವ್ಯಕ್ತಿಗೆ ಚಕ್ಷುರ್ಮಯತ್ವಾದಿಗಳನ್ನು ಹೇಳಿದ್ದಾರೆ. ಆ ಚಕ್ಷುರ್ಮಯತ್ವಾದಿಗಳು ಜೀವನಿಗೆ ಕೂಡುತ್ತವೆಯೇ ಹೊರತು ಬ್ರಹ್ಮನಿಗೆ ಕೂಡುವುದಿಲ್ಲ. ಹೀಗಾಗಿ ಚಕ್ಷುರ್ಮಯತ್ವಾದಿ ಬಾಧಕ ಇರುವುದರಿಂದ ಅಮುಖ್ಯಾರ್ಥನಾದರೂ ಬ್ರಹ್ಮಶಬ್ದದಿಂದ ಜೀವನನ್ನೇ ತೆಗೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಜೀವನೇ ಸರ್ವಗತನಾದ ವ್ಯಕ್ತಿಯಾಗುತ್ತಾನೆ.

**ಸೂ.ರ.:–** **न चाश्रुतत्वादिगुणशून्यरूपबाधकेन न जीवः । श्रुत्वाप्येनमिति गीतायां जीवस्याद्भुतत्वादिश्रवणात् ।**

**ಅನು.:–** ಆ ರೀತಿ ಜೀವನೇ ಸರ್ವಗತನಾದ ವ್ಯಕ್ತಿಯಾಗುವುದಾದರೆ, ಸರ್ವಗತನಾದ ವ್ಯಕ್ತಿಗೆ ಅಶ್ರುತತ್ವಾದಿಗುಣಗಳನ್ನು ಹೇಳಿದ್ದಾರೆ. ಜೀವನಿಗೆ ಅಶ್ರುತತ್ವಾದಿ ಆ ಗುಣಗಳು

ಕೂಡುವುದಿಲ್ಲವಲ್ಲ? ಅರ್ಥಾತ್ ಅಶ್ರುತತ್ವಾದಿಗುಣಶೂನ್ಯರೂಪವಾದ ಬಾಧಕ ಇರುವುದರಿಂದ ಜೀವನು ಸರ್ವಗತನಾಗಲು ಸಾಧ್ಯವಿಲ್ಲವಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. "ಶ್ರುತ್ವಾಽಪ್ಯೇನಮ್ ವೇದ ನ ಚೈವ ಕಶ್ಚಿತ್" ಎಂಬುದಾಗಿ ಗೀತೆಯಲ್ಲಿ ಜೀವನಿಗೆ ಅಶ್ರುತತ್ವಾದಿಗುಣಗಳನ್ನು ಹೇಳಿದ್ದಾರೆ. ಆದ್ದರಿಂದ ಜೀವನಿಗೆ ಅಶ್ರುತತ್ವಾದಿ ಗುಣಗಳೂ ಉಪಪನ್ನವಾಗಬಹುದು.

**ಸೂ.ರ.:– नाप्येकशरीरस्थत्वानुपपत्तिर्बाधिका । तस्या विष्णावपि साम्यात् ।**

**ಅನು.:–** ಜೀವನೇ ಸರ್ವಗತನಾಗುವುದಾದರೆ, ಒಬ್ಬನೇ ಜೀವ ಎಲ್ಲ ಶರೀರಗಳಲ್ಲಿ ಇರಲು ಸಾಧ್ಯವಿಲ್ಲವಾದ್ದರಿಂದ ಅನೇಕಶರೀರಸ್ಥತ್ವ ಎಂಬ ಬಾಧಕ ಎದುರಾಗುತ್ತದೆ. ಆದ್ದರಿಂದ ಜೀವ ಹೇಗೆ ಸರ್ವಗತನಾಗಲು ಸಾಧ್ಯ? ಎಂದರೆ, ಹಾಗಾದರೆ ಒಬ್ಬನೇ ವಿಷ್ಣು ಅವನೇ ಎಲ್ಲ ಶರೀರಗಳಲ್ಲಿ ಇರಲು ಹೇಗೆ ಸಾಧ್ಯ? ಅರ್ಥಾತ್ ಅನೇಕಶರೀರಸ್ಥತ್ವ ಎಂಬ ಬಾಧಕ ಜೀವನಿಗೆ ಇರುವಂತೆ ವಿಷ್ಣುವಿಗೂ ಸಮಾನವೇ ಆಗಿದೆ.

ನ ಚ (ಸೂತ್ರಾರ್ಥರತ್ನಾವಲಿಯ ಈ ವಾಕ್ಯವು ಏನೋ ತಪ್ಪಾಗಿ ಮುದ್ರಿತವಾಗಿದೆ ಎಂದು ಅನಿಸುತ್ತದೆ. ತತ್ವಪ್ರಕಾಶಿಕಾದಲ್ಲಿ ಈ ವಾಕ್ಯದ ಅಭಿಪ್ರಾಯ ಸ್ಪಷ್ಟವಾಗುತ್ತದೆ.)

**ಸೂ.ರ.:– न च चक्षुर्मयत्वादिबाधकान्न जीवः । एकस्यैव कर्मकर्तृत्वयोरुपपत्तेः ।**

**ಅನು.:–** ಜೀವನೇ ಸರ್ವಗತನಾಗುವುದಾದರೆ, ಕರ್ಮಕರ್ತೃವ್ಯಪದೇಶಾಚ್ಚ ಎಂಬ ಸೂತ್ರದಲ್ಲಿ ಹೇಳಿದಂತೆ ಒಬ್ಬನೇ ಜೀವನಿಗೆ ಒಂದೇ ಶಂಸನಕ್ರಿಯೆಯಲ್ಲಿ ಕರ್ತೃತ್ವ - ಕರ್ಮತ್ವಗಳು ಬರಬೇಕಾಗುತ್ತದೆಯಲ್ಲವೇ? ಎಂದರೆ, ನಿಜ. ಹಾಗೆಂದು ವಿಷ್ಣುವು ಸರ್ವಗತನಾಗಿದ್ದಾನೆ ಎಂದು ಹೇಳಿದರೆ ಚಕ್ಷುರ್ಮಯತ್ವಾದಿಗಳು ಬಾಧಕವಾಗುತ್ತವೆ. ಹಾಗಾಗಿ ಚಕ್ಷುರ್ಮಯತ್ವಾದಿ ಬಾಧಕ ಇರುವುದರಿಂದಾಗಿ ಒಬ್ಬ ಜೀವನಿಗೇ ಕರ್ತೃತ್ವ - ಕರ್ಮತ್ವಗಳೆರಡನ್ನೂ ಅಂಗಿಕರಿಸುವುದು ಉಪಪನ್ನವಾಗುತ್ತದೆ.

**ಸೂ.ರ.:– ततश्च सर्वगतो जीव एवेति प्राप्ते सूत्रितम् ।**

**ಅನು.:–** ಆದ್ದರಿಂದ ಜೀವನೇ ಸರ್ವಗತನಾದ ವ್ಯಕ್ತಿ ಆಗುತ್ತಾನೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವು ಹೊರಡುತ್ತದೆ :-

## ॐ शब्दविशेषात् ॐ (१.२.५)

**ಸೂತ್ರಾರ್ಥ** :- ಶಬ್ದವಿಶೇಷಾತ್ = "ಏತಮೇವ ಬ್ರಹ್ಮ" (ಐ.ಆ. 3-2-3) ಎಂಬ ವಾಕ್ಯದಲ್ಲಿ ಅವಧಾರಣಾರ್ಥಕವಾದ ಏವಶಬ್ದರೂಪವಾದ ವಿಶೇಷಣ ಉಳ್ಳದ್ದಾಗಿ ಬ್ರಹ್ಮಶಬ್ದವು ಶ್ರುತವಾಗುತ್ತಿರುವುದರಿಂದ ಬ್ರಹ್ಮಶಬ್ದವು ಜೀವವಾಚಕವಾಗುವುದಿಲ್ಲ.

**ಸೂ.ರ.:– एवं च निर्दिष्टवाक्ये हेतुत्वेन प्रकृतब्रह्मशब्दस्य सावधारणत्वरूपविशेषवत्त्वात् ।**

**ಅನು.:–** "ಏತಮೇವ ಬ್ರಹ್ಮ" (ಐ.ಆ. 3-2-3) ಎಂಬ ವಾಕ್ಯದಲ್ಲಿ ಸರ್ವಗತನಾದ ವ್ಯಕ್ತಿ ವಿಷ್ಣುವೇ ಎನ್ನುವುದಕ್ಕೆ ಹೇತುವಾಗಿ ಪ್ರಕೃತವಾದ ಬ್ರಹ್ಮಶಬ್ದವು ಅವಧಾರಣಾರ್ಥಕ ಏವಶಬ್ದರೂಪ ವಿಶೇಷದಿಂದ ಸಹಿತವಾದ್ದರಿಂದ, ಅಂತಹ ಬ್ರಹ್ಮಶಬ್ದದಿಂದ ವಿಷ್ಣುವು ವಾಚ್ಯನಾಗುತ್ತಾನೆಯೇ ಹೊರತು ಜೀವನು ವಾಚ್ಯನಾಗುವುದಿಲ್ಲ.

**ಸೂ.ರ.:– एवकारशिरस्कब्रह्मशब्दवाच्यत्वे जीवस्य मुख्यब्रह्मत्वं प्राप्तं स्यात् । तच्चायुक्तम् । तस्याब्रह्मत्वेन प्रसिद्धत्वात् । अतः सर्वगतो विष्णुरेवेति सिद्धम् ।**

**ಅನು.:–** ಅವಧಾರಣಾರ್ಥಕ ಏವಕಾರಸಹಿತವಾದ ಬ್ರಹ್ಮಶಬ್ದದಿಂದ ಜೀವನೇ ವಾಚ್ಯನಾಗಲಿ ಎಂದರೆ, ಹಾಗೆ ಆದರಿಂದ ಜೀವನು ವಾಚ್ಯನಾಗಿಬಿಟ್ಟರೆ ಜೀವನೇ ಮುಖ್ಯಬ್ರಹ್ಮನಾಗಬೇಕಾದ ಅತಿಪ್ರಸಂಗ ಬರುತ್ತದೆ. ಅದು ಸರಿಯಾಗುವುದಿಲ್ಲ. ಜೀವನು ಬ್ರಹ್ಮನಲ್ಲ ಎಂದೇ ಪ್ರಸಿದ್ಧನಾದ್ದರಿಂದ ಅವಧಾರಣಾರ್ಥಕ ಏವಕಾರಸಹಿತವಾದ ಬ್ರಹ್ಮಶಬ್ದದಿಂದ ಜೀವನು ವಾಚ್ಯನಾಗಲು ಸಾಧ್ಯವಿಲ್ಲ.

ಆದ್ದರಿಂದ ಏತಮೇವ ಬ್ರಹ್ಮ ಎಂಬ ವಾಕ್ಯದಲ್ಲಿ ಅವಧಾರಣಾರ್ಥಕ ಏವಕಾರ-ಸಹಿತವಾದ ಬ್ರಹ್ಮಶಬ್ದವು ಶ್ರುತವಾಗುತ್ತಿರುವುದರಿಂದ ವಿಷ್ಣುವೇ ಸರ್ವಗತನಾದ ವ್ಯಕ್ತಿ ಎಂದು ಸಿದ್ಧವಾಗುತ್ತದೆ.

ಸೂತ್ರ - 6

**ಸೂ.ರ.:– स्मृतिसमाख्ययाऽपि विष्णोः सर्वगतत्वं साधयत्सूत्र-मुपन्यस्यति ।**

**ಅನು.**:– ಸ್ಮೃತಿಸಮಾಖ್ಯಾದಿಂದಲೂ ಸಹ ವಿಷ್ಣುವಿಗೆ ಸರ್ವಗತತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ :-

**ॐ स्मृतेश्च ॐ (१.२.६)**

**ಸೂತ್ರಾರ್ಥ** :- ಕೇವಲ ಏತಮೇವ ಬ್ರಹ್ಮ (ಐ.ಆ.3-2-3) ಎಂಬುದಾಗಿ ಶ್ರುತ್ಯುಕ್ತ-ವಾದದ್ದರಿಂದಾಗಿ ಬ್ರಹ್ಮಶಬ್ದವು ಜೀವಪರ ಅಲ್ಲ ಎಂದಷ್ಟೇ ಹೇಳುವುದಿಲ್ಲ. ಕಿಂತು ಸ್ಮೃತೇಶ್ಚ = "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ।" (ಗೀತಾ 10-20) ಎಂಬುದಾಗಿ ಸ್ಮೃತಿ ಇರುವುದರಿಂದಲೂ ಸಹ ಬ್ರಹ್ಮಶಬ್ದವು ಜೀವಪರ ಅಲ್ಲ.

**ಸೂ.ರ.**:– **एवं च निर्दिष्टस्मृतिवाक्यात् ।**

**ಅನು.**:– "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ" (ಗೀತಾ 10-20) ಎಂಬುದಾಗಿ ನಿರ್ದಿಷ್ಟವಾದ ಸ್ಮೃತಿವಾಕ್ಯ ಇರುವುದರಿಂದ ಬ್ರಹ್ಮಶಬ್ದವು ಜೀವಪರ ಅಲ್ಲ.

**ಸೂ.ರ.**:– **जीवेशयोर्भेदमिथ्यात्वकल्पनस्य सूत्रकृताऽविवक्षितत्वात् । द्वा सुपर्णेत्यादि (मुं.उ.३-१-१) प्रमाणविरुद्धत्वेन च तथा न कल्पनीयत्वाऽत्सर्वगतो विष्णुरेवेति सिद्धम् ।**

**ಅನು.**:– ಜೀವ-ಬ್ರಹ್ಮರಲ್ಲಿ ಭೇದವು ಮಿಥ್ಯಾಭೂತವಾದ್ದರಿಂದ (ಅಭೇದ ಇರುವುದರಿಂದ) ಬ್ರಹ್ಮಶಬ್ದವು ಬ್ರಹ್ಮಪ್ರತಿಪಾದಕವಾದ ಮೇಲೆ ಜೀವಪ್ರತಿಪಾದಕವೂ ಆದಂತೆಯೇ. ಅಂದಮೇಲೆ ಬ್ರಹ್ಮಶಬ್ದವು ಜೀವಪರ ಅಲ್ಲ ಎಂದು ಹೇಗೆ ಹೇಳುತ್ತೀರಿ? ಎಂದರೆ, ಅದು ಸರಿಯಲ್ಲ.

ಜೀವ-ಬ್ರಹ್ಮರಲ್ಲಿ ಭೇದವು ಮಿಥ್ಯಾಭೂತವಾಗಿದೆ ಎನ್ನುವುದು ಸೂತ್ರಕಾರರಿಗೇ ವಿವಕ್ಷಿತವಾಗಿಲ್ಲ. ಮತ್ತು ಜೀವ-ಬ್ರಹ್ಮರಲ್ಲಿ ಸತ್ಯವಾದ ಭೇದವನ್ನು ಹೇಳುವ "ದ್ವಾ ಸುಪರ್ಣಾ" ಇತ್ಯಾದಿ ಶ್ರುತಿಪ್ರಮಾಣಗಳಿಗೆ ವಿರುದ್ಧವೂ ಆಗಿದೆ. ಆದ್ದರಿಂದ ಜೀವ-ಬ್ರಹ್ಮರ ಭೇದಕ್ಕೆ ಮಿಥ್ಯಾತ್ವವನ್ನು ಕಲ್ಪಿಸುವುದು ಸರಿಯಲ್ಲ.

ಹಾಗಾಗಿ ಏತಮೇವ ಬ್ರಹ್ಮ ಎಂಬುದಾಗಿ ಶ್ರುತಿ ಇರುವಂತೆ "ಅಹಮಾತ್ಮಾ ಗುಡಾಕೇಶ" ಎಂಬುದಾಗಿ ಸ್ಮೃತಿವಾಕ್ಯವೂ ಇರುವುದರಿಂದ ಸರ್ವಗತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

## ಸೂತ್ರ - 7

**ಸೂ.ರ.:– ननु सर्वेषु भूतेष्वित्यल्पस्थाने साकल्येन स्थितिकथनात् । जीवधर्म व्यपदेशाच्च । सर्वगतो जीव एव न विष्णुः अपरिच्छिन्ने जीवधर्मरहिते च तस्मिंस्तदुभयव्यपदेशायोगादिति प्राप्ते समादधत्सूत्र-मुपन्यस्यति ।**

**ಅನು.:–** ಸರ್ವಗತನಾದ ವ್ಯಕ್ತಿಗೆ ಸರ್ವೇಷು ಭೂತೇಷು (ಐ.ಆ.3-2-3) ಎಂಬು-ದಾಗಿ ಜೀವರ ಹೃದಯಾಕಾಶರೂಪವಾದ ಅಲ್ಪಸ್ಥಾನದಲ್ಲಿ ಸಾಕಲ್ಯೇನ ಸ್ಥಿತಿಯನ್ನು ಹೇಳಿರುವುದರಿಂದ, ಮತ್ತು ಚಕ್ಷುರ್ಮಯತ್ವ ಮೊದಲಾದ ಜೀವಧರ್ಮಗಳನ್ನು ಹೇಳಿದ್ದರಿಂದ ಸರ್ವಗತನಾದ ವ್ಯಕ್ತಿ ಜೀವನೇ ಆಗಬೇಕು.

ಅಪರಿಚ್ಛಿನ್ನನಾದ ವಿಷ್ಣುವಿಗೆ ಹೃದಯಾಕಾಶರೂಪ ಅಲ್ಪಸ್ಥಾನಸ್ಥಿತಿಯು ಕೂಡುವುದಿಲ್ಲ-ವಾದ್ದರಿಂದ ಮತ್ತು ಜೀವಧರ್ಮರಹಿತನಾದ ವಿಷ್ಣುವಿನಲ್ಲಿ ಚಕ್ಷುರ್ಮಯತ್ವಾದಿ ಧರ್ಮಗಳು ಉಪಪನ್ನವಾಗುವುದಿಲ್ಲವಾದ್ದರಿಂದ, ಈ ಹೃದಯಾಕಾಶರೂಪ ಅಲ್ಪಸ್ಥಾನಸ್ಥಿತಿ ಹಾಗೂ ಚಕ್ಷುರ್ಮಯತ್ವಾದಿ ಜೀವಧರ್ಮಗಳು ಎರಡನ್ನೂ ಹೇಳುತ್ತಿರುವುದರಿಂದ ವಿಷ್ಣುವು ಸರ್ವಗತನಾದ ವ್ಯಕ್ತಿಯಾಗಲು ಸಾಧ್ಯವಿಲ್ಲ.

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ.

**ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ (१.२.७)**

**ಸೂತ್ರಾರ್ಥ :-** ಅರ್ಭಕೌಕಸ್ತ್ವಾತ್ = ಸರ್ವೇಷು ಭೂತೇಷು (ಐ.ಆ. 3-2-3) ಎಂಬುದಾಗಿ ಸರ್ವಗತನಾದ ವ್ಯಕ್ತಿಗೆ ಎಲ್ಲ ಜೀವರ ಹೃದಯಾಕಾಶರೂಪವಾದ ಅಲ್ಪಸ್ಥಾನಸ್ಥಿತಿಯನ್ನು ಹೇಳಿದ್ದರಿಂದಾಗಿ, ತದ್ವ್ಯಪದೇಶಾತ್ = ಶ್ರುತಿ-ಲಿಂಗಾದಿಗಳಿಂದ ಚಕ್ಷುರ್ಮಯತ್ವ ಮೊದಲಾದ ಜೀವಧರ್ಮಗಳನ್ನು ಹೇಳಿದ್ದರಿಂದಾಗಿಯೂ, ನೇತಿ ಚೇತ್ = ವಿಷ್ಣುವೇ ಸರ್ವಗತ ಎಂದು ಹೇಳಿದ್ದು ಸರಿಯಲ್ಲ ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ. ಕುತಃ=ಯಾಕೆ? ಹೃದಯಾಕಾಶರೂಪ ಅಲ್ಪಸ್ಥಾನಸ್ಥಿತಿ ಹಾಗೂ ಚಕ್ಷುರ್ಮಯತ್ವಾದಿ ಧರ್ಮಗಳು ಎರಡೂ ವಿಷ್ಣುವಿನಲ್ಲಿಯೇ ಉಪಪನ್ನವಾಗುವುದರಿಂದ.

ಈ ಎರಡನ್ನೂ ವಿಷ್ಣುವಿಗೆ ಹೇಳುವುದು ವ್ಯರ್ಥವಲ್ಲವೇ? ಎಂದು ವೈಯರ್ಥ್ಯಶಂಕೆ ಮಾಡಬೇಡಿ. ಏವಂ ನಿಚಾಯ್ಯತ್ವಾತ್ = ಅರ್ಭಕೌಕಸ್ತ್ವಾದಿರೂಪದಿಂದ ವಿಷ್ಣುವೇ ಉಪಾಸ್ಯನಾದ್ದರಿಂದಾಗಿ (ಉಪಾಸನೆಗಾಗಿ ಅರ್ಭಕೌಕಸ್ತ್ವಾದಿಗಳನ್ನು ಹೇಳಿದ್ದರಿಂದಾಗಿ) ವೈಯರ್ಥ್ಯ ಇಲ್ಲ. ಚಕ್ಷುರ್ಮಯತ್ವಾದಿ ಧರ್ಮಗಳು ಬ್ರಹ್ಮಪರವಾದ್ದರಿಂದ ಅದರ ವಿರೋಧವೂ ಬರುವುದಿಲ್ಲ.

ವ್ಯಾಪ್ತನಾದ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತಿಯು ಹೇಗೆ ಕೂಡುತ್ತದೆ? ಎಂದರೆ, ವ್ಯೋಮವಚ್ಚ = ಆಕಾಶವು ವ್ಯಾಪ್ತವಾದರೂ ಸಹ ಗೃಹಾದಿ ಏಕದೇಶ ಅವಸ್ಥಿತಿಯು ಅದಕ್ಕೆ ಹೇಗೆ ಉಪಪನ್ನವಾಗುತ್ತದೆಯೋ ಅದರಂತೆ ವಿಷ್ಣುವು ವ್ಯಾಪ್ತನಾದರೂ ಸಹ ಹೃದಯಾಕಾಶರೂಪ ಅಲ್ಪಸ್ಥಾನಸ್ಥಿತಿಯೂ ಉಪಪನ್ನವಾಗುತ್ತದೆ.

**ಸೂ.ರ.:– एवं चापरिच्छिन्नादिरूपस्यार्भकौकस्त्वादिकथनमप्रयोजनम् । उतायुक्तम् । नाद्यः । तस्य तेन रूपेणोपास्यत्वेन व्यपदेशस्य सप्रयोजनत्वात् । न द्वितीयः । सर्वगतस्यापि व्योम्नोंऽशस्य साकल्येनाल्पौकस्त्वदर्शनेन तदभेदादाकाशस्याल्पौकस्त्ववद्भगवतः साकल्येनाल्पौकस्त्वोपपत्तेः । ईश्वरस्य सर्वेन्द्रियस्वामित्वेन चक्षुर्मयत्वादेरप्युपपत्तेः ।**

ಅನು.:– ಅಪರಿಚ್ಛಿನ್ನಾದಿರೂಪನಾದ ವಿಷ್ಣುವಿಗೆ ಅರ್ಭಕೌಕಸ್ತ್ವಾದಿಗಳನ್ನು ಹೇಳಿದ್ದು ಪ್ರಯೋಜನಶೂನ್ಯ ಎಂದು ಅಭಿಪ್ರಾಯವೋ? ಅಥವಾ ಅಪರಿಚ್ಛಿನ್ನನಾದವನಿಗೆ ಅರ್ಭಕೌಕಸ್ತ್ವಾದಿಗಳನ್ನು ಹೇಳಲು ಬರುವುದೇ ಇಲ್ಲ ಎಂದು ಅಭಿಪ್ರಾಯವೋ?

1. ಪ್ರಯೋಜನಶೂನ್ಯ ಎಂದು ಹೇಳುವುದು ಸರಿಯಲ್ಲ. ಏಕೆಂದರೆ – ಅಪರಿಚ್ಛಿನ್ನನಾದ ವಿಷ್ಣುವು ಅರ್ಭಕೌಕಸ್ತ್ವಾದಿರೂಪದಿಂದ (ಜೀವರ ಹೃದಯಾಕಾಶವೃತ್ತಿಯಾಗಿದ್ದಾನೆ ಎಂಬುದಾಗಿ) ಉಪಾಸ್ಯನಾಗಿದ್ದರಿಂದ (ಉಪಾಸನೆಗೆ ಯೋಗ್ಯನಾದ್ದರಿಂದ), ಅರ್ಭಕೌಕಸ್ತ್ವಾದಿರೂಪದಿಂದ ಉಪಾಸನೆಯೇ ಪ್ರಯೋಜನವಾಗಿರುವುದರಿಂದ ಪ್ರಯೋಜನಶೂನ್ಯ ಎನ್ನುವುದು ಸರಿಯಲ್ಲ.

2. ಹೇಳಲು ಬರುವುದಿಲ್ಲ ಎನ್ನುವುದೂ ಸರಿಯಲ್ಲ. ಏಕೆಂದರೆ – ಆಕಾಶವು ಸರ್ವತ್ರ ವ್ಯಾಪ್ತವಾದರೂ ಅದಕ್ಕೆ ಗೃಹಾದಿ ಅಲ್ಪೌಕಸ್ತ್ವವು ಕಂಡಂತೆ, ವಿಷ್ಣುವು ಅಪರಿಚ್ಛಿನ್ನನಾದರೂ

(ಸರ್ವತ್ರ ವ್ಯಾಪ್ತನಾದರೂ) ಜೀವರ ಹೃದಯಾಕಾಶರೂಪ ಅಲೌಕಸ್ತ್ವವು ಉಪಪನ್ನ-ವಾಗುತ್ತದೆ.

ಇನ್ನು ಚಕ್ಷುರ್ಮಯತ್ವ ಮೊದಲಾದ ಜೀವಧರ್ಮಗಳನ್ನು ಹೇಗೆ ಹೇಳುವುದು? ಎಂದರೆ, ವಿಷ್ಣುವು ಚಕ್ಷು ಮೊದಲಾದ ಎಲ್ಲ ಇಂದ್ರಿಯಗಳಿಗೂ ಸ್ವಾಮಿಯಾಗಿದ್ದರಿಂದ (ನಿಯಾಮಕನಾದ್ದರಿಂದ) ಚಕ್ಷುರ್ಮಯತ್ವಾದಿಗಳೂ ಉಪಪನ್ನವಾಗುತ್ತದೆ.

**ಸೂ.ರ.:– न चादित्येऽनुक्तत्वलिङ्गविरोधः । यश्चासावादित्य इति पूर्ववाक्य आदित्यस्थत्वस्योक्तत्वेनानुक्तत्वस्यासिद्धत्वात् । अतः सर्वगतो विष्णुरेवेति सिद्धम् ।**

**ಅನು.:–** "ಏತಮಸ್ಯಾಂ ಏತಮಗ್ನೌ ಏತಂ ವಾಯೌ ..." ಎಂಬುದಾಗಿ ಸರ್ವಗತನಾದ ವ್ಯಕ್ತಿ ಕ್ಷಿತ್ಯಾದಿಗಳಲ್ಲಿ ಇದ್ದಾನೆ ಎಂದು ಹೇಳಿ, ಆದಿತ್ಯನಲ್ಲಿ ಇದ್ದಾನೆ ಎಂದು ಹೇಳಲಿಲ್ಲ. ಆದ್ದರಿಂದ ಆದಿತ್ಯನೇ ಸರ್ವಗತನಾಗಬೇಕು ಎಂದು ಶಂಕೆ ಬಂದರೆ, ಅದೂ ಸರಿಯಲ್ಲ.

"ಯಶ್ಚಾಸಾವಾದಿತ್ಯೇ" ಎಂಬುದಾಗಿ ಹಿಂದಿನವಾಕ್ಯದಲ್ಲಿ ಸರ್ವಗತನಾದ ವ್ಯಕ್ತಿ ಆದಿತ್ಯನಲ್ಲಿಯೂ ಇದ್ದಾನೆ ಎಂಬುದಾಗಿ ಹೇಳಿದ್ದರಿಂದಾಗಿ "ಆದಿತ್ಯನಲ್ಲಿ ಇದ್ದಾನೆ ಎಂದು ಹೇಳಿಲ್ಲ" ಎಂಬ ಆಕ್ಷೇಪ ಸರಿಯಲ್ಲ. ಆದ್ದರಿಂದ ಸರ್ವಗತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 8

**ಸೂ.ರ.:– पुनरुक्तमाक्षिप्य समादधत्सूत्रमाह–**

**ಅನು.:–** "ಸರ್ವಗತನಾದ ವ್ಯಕ್ತಿ ವಿಷ್ಣು ಆಗಲು ಸಾಧ್ಯವಿಲ್ಲ" ಎಂಬುದಾಗಿ ಮತ್ತೆ ಆಕ್ಷೇಪ ಮಾಡಿಕೊಂಡು, ಅದಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ –

**ॐ सम्भोगप्राप्तिरिति चेन्न वैशेष्यात् ॐ (१.२.८)**

**ಸೂತ್ರಾರ್ಥ :-** ಯಾವ ಕಾರಣ ಆಕಾಶದಂತೆ ಬ್ರಹ್ಮನು ಸರ್ವಜೀವಶರೀರಸ್ಥ-ನಾಗಿದ್ದಾನೆ ಎಂದು ಅಂಗೀಕರಿಸಿದರೆ ಸಂಭೋಗಪ್ರಾಪ್ತಿಃ = ಜೀವನ ಸಮಾನಭೋಗಪ್ರಾಪ್ತಿ ಆಗುವುದೋ ಆ ಕಾರಣ (ಸಮಾನಭೋಗಪ್ರಾಪ್ತಿ ಎಂಬ ಬಾಧಕ ಇರುವುದರಿಂದ) ಇತಿ

ಚೇತ್ = ಬ್ರಹ್ಮನು ಸರ್ವಗತನಾದ ವ್ಯಕ್ತಿಯಾಗಲು ಸಾಧ್ಯವಿಲ್ಲ ಎಂದು ಆಕ್ಷೇಪ ಬಂದರೆ, ನ = ಈ ಆಕ್ಷೇಪವು ಸರಿಯಲ್ಲ. ಯಾಕೆ? ವೈಶೇಷ್ಯಾತ್ = ಬ್ರಹ್ಮನಿಗೆ ಸಾಮರ್ಥ್ಯವಿಶೇಷ ಇರುವುದರಿಂದ, ಬ್ರಹ್ಮನು ಸರ್ವಜೀವಶರೀರಸ್ಥನಾದರೂ ಜೀವನ ಸಮಾನಭೋಗಪ್ರಾಪ್ತಿ ಎಂಬ ಬಾಧಕವಿಲ್ಲ.

**ಸೂ.ರ.:– एवं च सर्वज्ञताऽल्पज्ञताभेदात् सामर्थ्यवैशेष्याच्चाग्नि-स्तम्भनवतो दाहाभाववत्समानभोगाप्राप्तेः सर्वगतो विष्णुरेवेति सिद्धम् ।**

**ಅನು.:–** ಬ್ರಹ್ಮನು ಸರ್ವಜ್ಞನಾಗಿದ್ದಾನೆ, ಜೀವನು ಅಲ್ಪಜ್ಞನಾಗಿದ್ದಾನೆ. ಹೀಗೆ ಸರ್ವಜ್ಞತ್ವ-ಅಲ್ಪಜ್ಞತ್ವಗಳ ಭೇದ ಇರುವುದರಿಂದ, ಮತ್ತು ಅಗ್ನಿಸ್ತಂಭನ ವಿದ್ಯೆ ಬಲ್ಲವನಿಗೆ ದಾಹ ಹೇಗೆ ಆಗುವುದಿಲ್ಲವೋ ಅದರಂತೆ ಸಾಮರ್ಥ್ಯವಿಶೇಷ ಉಳ್ಳವನಾದ್ದರಿಂದ ವಿಷ್ಣುವಿಗೆ ಜೀವನ ಸಮಾನಭೋಗಪ್ರಾಪ್ತಿ ಎನ್ನುವುದು ಆಗುವುದಿಲ್ಲ. ಆದ್ದರಿಂದ ಸರ್ವಗತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸರ್ವಗತತ್ವಾಧಿಕರಣವು ಮುಗಿಯಿತು.

ಅಧಿಕರಣ – 2

## ಅತ್ತೃತ್ವಾಧಿಕರಣ

### ಸಂಗತಿ

**ಸೂ.ರ.:– अत्र लोकतोऽन्यत्र प्रसिद्धादितिशब्देन सहोक्तात्तृत्वलिङ्गस्य हरौ समन्वयः क्रियते ।**

**ಅನು.:–** ಲೋಕತಃ ಅನ್ಯತ್ರಪ್ರಸಿದ್ಧವಾದ, ಅದಿತಿಶಬ್ದದ ಜೊತೆಗೆ ಶ್ರುತವಾಗುತ್ತಿರುವ ಅತ್ತೃತ್ವಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ ಎರಡನೇ ಈ ಅತ್ತೃತ್ವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु जन्मादिसूत्रोक्तसंहर्तृत्वापरपर्यायात्तृत्वं स यद्यदेवेति (बृ.३-२-५) वाक्येनादितेरेवास्तु । अदितिश्रुते(कठ.४-७)रदितित्वमिति निरवकाशलिङ्गाच्च ।**

**ಅನು.:–** ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಿಂದ ಸಂಹರ್ತೃತ್ವವನ್ನು ಹೇಳಿದಿರಿ. ಆ ಸಂಹರ್ತೃತ್ವಕ್ಕೆ ಅಪರಪರ್ಯಾಯವಾದ ಅತ್ತೃತ್ವವು "ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್" (ಬೃ.ಉ.3-2-5) ಎಂಬುದಾಗಿ ಅದಿತಿಗೆ ಶ್ರುತವಾಗುತ್ತಿದೆಯಾದ್ದರಿಂದ ಅದಿತಿಗೇನೇ ಅತ್ತೃತ್ವವು ಇರಲಿ. ಯಾಕೆ? ಅತ್ತೃತ್ವವನ್ನು ಹೇಳುವ ಈ ಶ್ರುತಿಯು ಅದಿತಿಶ್ರುತಿಯಾಗಿದ್ದರಿಂದ. ಮತ್ತು "ತದದಿತೇರದಿತಿತ್ವಂ" ಎಂಬುದಾಗಿ ಅದಿತಿತ್ವ ಎಂಬ ನಿರವಕಾಶಲಿಂಗ ಇರುವುದರಿಂದ.

**ಸೂ.ರ.:– न च योगबलाददितिश्रुतिर्विष्णुविषया । अदितित्वलिङ्गस्य निरवकाशत्वात् ।**

**ಅನು.:–** ಅದಿತಿಶ್ರುತಿ ಇರುವುದರಿಂದ ಅದಿತಿಯೇ ಅತ್ತಾ ಆಗಬೇಕು ಎಂದು ಏಕೆ ಹೇಳುತ್ತೀರಿ? ಅದಿತಿಶ್ರುತಿಯು ಯೋಗಬಲದಿಂದ ವಿಷ್ಣುವಿಷಯಕವಾಗಿದೆ ಎಂದು ಹೇಳಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಅದಿತಿತ್ವ ಎಂಬ ನಿರವಕಾಶಲಿಂಗ ಇರುವುದರಿಂದ ಅದಿತಿಶ್ರುತಿಯನ್ನು ವಿಷ್ಣುವಿಷಯಕವನ್ನಾಗಿ ಹೇಳಲು ಬರುವುದಿಲ್ಲ.

**ಸೂ.ರ.:– न च स इति पुल्लिङ्गानुपपत्तिः । पुंशक्तियुक्तत्वेन कूटस्थोऽक्षर उच्यत (भ.गी.१५-१६) इत्यादिवत्पुल्लिङ्गोपपत्तेश्चेति प्राप्ते सूत्रं पठति ।**

**ಅನು.:–** ಅತ್ತೃತ್ವವು ಅದಿತಿಗೆ ಇರುವುದಾದರೆ, ಅದಿತಿಯು ಸ್ತ್ರೀ ಆದ್ದರಿಂದ ಸಾ ಎಂಬುದಾಗಿ ಸ್ತ್ರೀಲಿಂಗಶಬ್ದವನ್ನು ಶ್ರುತಿಯಲ್ಲಿ ಬಳಸಬೇಕಿತ್ತು. ಈಗಲಾದರೂ ಸಃ ಎಂಬುದಾಗಿ ಪುಲ್ಲಿಂಗಶಬ್ದ ಕಾಣುತ್ತಿರುವುದರಿಂದ ಅತ್ತೃತ್ವವನ್ನು ಅದಿತಿಗೆ ಹೇಗೆ ಹೇಳುವುದು? ಎಂದು ಶಂಕಿಸಲು ಅವಕಾಶವಿಲ್ಲ.

ಅದಿತಿಯು ತಾನು ಸ್ವಯಂ ಸ್ತ್ರೀ ಆದರೂ ಪುರುಷನ ಶಕ್ತಿ ಉಳ್ಳವಳಾದ್ದರಿಂದ, ಮಹಾಲಕ್ಷ್ಮೀದೇವಿಯು ಸ್ತ್ರೀ ಆದರೂ "ಕೂಟಸ್ಥೋಽಕ್ಷರ ಉಚ್ಯತೇ" ಎಂಬುದಾಗಿ ಅವಳ ವಿಷಯದಲ್ಲಿ ಅಕ್ಷರಃ ಎಂದು ಪುಲ್ಲಿಂಗಶಬ್ದವನ್ನು ಬಳಸಿದಂತೆ ಇಲ್ಲಿಯೂ ಪುಲ್ಲಿಂಗಶಬ್ದಪ್ರಯೋಗವು ಉಪಪನ್ನವಾಗುತ್ತದೆ.

ಆದ್ದರಿಂದ ಅದಿತಿಯೇ ಅತ್ತೃತ್ವ ಉಳ್ಳವಳಾಗುತ್ತಾಳೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ :-

### ॐ अत्ता चराचरग्रहणात् ॐ (१.२.९)

**ಸೂತ್ರಾರ್ಥ :-** ಅತ್ತಾ = ಸರ್ವಂ ವಾ ಅತ್ತಿ ಎನ್ನುವಲ್ಲಿ ಎಲ್ಲವನ್ನೂ ಸಂಹಾರ ಮಾಡುವ ವ್ಯಕ್ತಿ (ಅತ್ತಾ ಆದ ವ್ಯಕ್ತಿ) ವಿಷ್ಣುವೇ ಆಗುತ್ತಾನೆ. ನ ತು ಅದಿತಿಃ = ಹೊರತು ಅದಿತಿಯು ಅತ್ತಾ ಆಗುವುದಿಲ್ಲ. ಕುತಃ=ಯಾಕೆ? ಚರಾಚರಗ್ರಹಣಾತ್ = ಸರ್ವಂ ವಾ ಅತ್ತಿ ಎಂಬ ಶ್ರುತಿಯಲ್ಲಿ ಚರಾಚರಾತ್ಮಕವಾದ (ಚೇತನಾಚೇತನಾತ್ಮಕವಾದ) ಎಲ್ಲ ಪ್ರಪಂಚವನ್ನೂ (ಅದ್ಯತಯಾ ಸ್ವೀಕಾರ ಮಾಡಿದ್ದರಿಂದ) ಸಂಹಾರ ಮಾಡುತ್ತಾನೆ ಎಂದು ಹೇಳಿದ್ದರಿಂದ.

**ಸೂ.ರ.:– एवं चाद्यत्वेन चराचरस्य ग्रहणात् ।**

**ಅನು.:–** ಚೇತನಾಚೇತನಾತ್ಮಕವಾದ ಪ್ರಪಂಚವನ್ನು ಅದ್ಯತಯಾ ಸ್ವೀಕಾರ ಮಾಡಿದ್ದರಿಂದ, ಅಂತಹ ಚೇತನಾಚೇತನಾತ್ಮಕ ಪ್ರಪಂಚವನ್ನು ಸಂಹಾರ ಮಾಡುವ ಸಾಮರ್ಥ್ಯ ವಿಷ್ಣುವಿಗೆ ಮಾತ್ರ ಇದೆಯೇ ಹೊರತು ಅದಿತಿಗೆ ಇಲ್ಲವಾದ್ದರಿಂದ ಅತ್ತಾ ಎಂದರೆ ವಿಷ್ಣುವೇ ಆಗುತ್ತಾನೆ. ಹೊರತು ಅದಿತಿಯು ಅತ್ತಾ ಆಗುವುದಿಲ್ಲ.

**ಸೂ.ರ.:– न चादितिश्रुतिविरोधः । अदितिश्रुतेर्यो देवानां नामधेति (ऋ.१-८२-३) श्रुतिबलेन विष्णुपरत्वस्य वक्तुं शक्यत्वात् ।**

**ಅನು.:–** ಸರ್ವಂ ವಾ ಅತ್ತಿ ಎಂಬ ಶ್ರುತಿಯು ಅದಿತಿಶ್ರುತಿಯಾಗಿರುವುದರಿಂದ ವಿಷ್ಣುವೇ ಅತ್ತಾ ಎನ್ನುವುದಾದರೆ ಈ ಅದಿತಿಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ ಅದು ಸರಿಯಲ್ಲ.

''ಯೋ ದೇವಾನಾಂ ನಾಮಧಾ'' (ಋ 1-82-3) ಎಂಬುದಾಗಿ ಶ್ರುತಿಬಲ-ದಿಂದಾಗಿ (ಎಲ್ಲ ನಾಮಗಳೂ ಭಗವದ್ವಾಚಕವಾಗಿವೆ ಎಂದು ಹೇಳುವ ಶ್ರುತಿ ಇರುವುದರಿಂದಾಗಿ) ಅದಿತಿಶ್ರುತಿಯೂ ಸಹ ವಿಷ್ಣುಪರವೇ ಆಗಿದೆ ಎಂದು ಹೇಳಲು ಬರುತ್ತದೆ. ಆದ್ದರಿಂದ ಅದಿತಿಶ್ರುತಿಯ ವಿರೋಧವೂ ಬರುವುದಿಲ್ಲ.

**ಸೂ.ರ.:– न चादितित्वरूपाखण्डधर्मविरोधः । विष्णोरपि विद्वद्रूढि-विषयत्वेनादितित्वरूपाखण्डधर्मस्यापि तत्रावर्जनीयत्वात् । अतो विष्णोरेवै तद्वाक्यप्रतिपाद्यत्वेनात्तृत्वान्न पूर्वोक्तलक्षणस्यातिव्याप्तिरिति सिद्धम् ।**

**ಅನು.:–** ಈ ಅದಿತಿಶ್ರುತಿಯಲ್ಲಿ ಅದಿತಿತ್ವ ಎಂಬ ಅಖಂಡಧರ್ಮವನ್ನು ಹೇಳುತ್ತಿದ್ದಾರೆ. ಆ ಧರ್ಮವಾದರೋ ಅದಿತಿಗೆ ಮಾತ್ರ ಉಪಪನ್ನವಾಗುವುದರಿಂದ, ವಿಷ್ಣುವೇ ಅತ್ತಾ ಎಂದು ಹೇಳಿದರೆ ಅದಿತಿತ್ವ ಎಂಬ ಅಖಂಡಧರ್ಮದ ವಿರೋಧ ಬರುವುದಿಲ್ಲವೇ? ಎಂದರೆ, ಅದೂ ಸರಿಯಲ್ಲ. ಅದಿತಿಶಬ್ದಕ್ಕೆ ಅದಿತಿಯಲ್ಲಿ ಕೇವಲ ರೂಢಿ ಇದ್ದರೂ, ವಿಷ್ಣುವಿನಲ್ಲಿ ವಿದ್ವದ್ರೂಢಿ ಇರುವುದರಿಂದ ಅದಿತಿತ್ವ ಎಂಬ ಅಖಂಡಧರ್ಮವೂ ವಿಷ್ಣುವಿನಲ್ಲಿ (ಉಪಪನ್ನವಾಗುತ್ತದೆ) ಅವರ್ಜನೀಯವಾಗಿದೆ. ಆದ್ದರಿಂದ ಅದಿತಿತ್ವ ಎಂಬ ಅಖಂಡಧರ್ಮದ ವಿರೋಧವೂ ಬರುವುದಿಲ್ಲ.

ಆದ್ದರಿಂದ – ''ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ। ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್.'' (ಬೃ.ಉ. 3-2-5)

ಎಂಬ ಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನಾಗುವುದರಿಂದ ಅತ್ತಾ ಅವನೇ ಆಗುತ್ತಾನೆ. ಅತ್ತಾ ಅವನೇ ಆಗುತ್ತಾನೆ ಎಂದಮೇಲೆ ಹಿಂದೆ ಹೇಳಿದ ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಸಂಹಾರಕರ್ತೃವಾದ ವ್ಯಕ್ತಿಯೂ ಅವನೇ ಆಗುತ್ತಾನೆ. ಹಾಗಾಗಿ ಜನ್ಮಾದಿಸೂತ್ರದಲ್ಲಿ ಹೇಳಿದ ಸಂಹಾರಕರ್ತೃತ್ವಲಕ್ಷಣಕ್ಕೆ ಅತಿವ್ಯಾಪ್ತಿದೋಷವೂ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ – 10

**ಸೂ.ರ.:– यदा निरवकाशसर्वात्तृत्वलिङ्गमात्रात्सावकाशादिति-**

श्रुत्यदितित्वलिङ्गयोर्बाधेनात्ता विष्णुरेवेति सिद्धम् । तदा किमु वाच्यं निरवकाशप्रकरण समुचितलिङ्गादित्यर्थं प्रतिपादयत्सूत्रं पठति ।

ಅನು.:– ಕೇವಲ ನಿರವಕಾಶವಾದ ಸರ್ವಾತ್ತೃತ್ವಲಿಂಗಮಾತ್ರದಿಂದಲೇ ಸಾವಕಾಶ-ವಾದ ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗಗಳಿಗೆ ಬಾಧ ಬರುತ್ತದೆಯಾದ್ದರಿಂದ ವಿಷ್ಣುವೇ ಅತ್ತಾ ಆಗುತ್ತಾನೆ ಎಂದು ಸಿದ್ಧವಾಗುವುದಾದರೆ, ಇನ್ನು ನಿರವಕಾಶಪ್ರಕರಣದಿಂದ ಸಮುಚ್ಚಿತವಾದ ಲಿಂಗದಿಂದಾಗಿ ವಿಷ್ಣುವೇ ಅತ್ತಾ ಎಂದು ಸಿದ್ಧವಾಗುತ್ತದೆ ಎಂದು ಹೇಳುವುದೇನು? ಎಂಬುದಾಗಿ ಕೈಮುತ್ಯವನ್ನು ತಿಳಿಸುವ ಸೂತ್ರವನ್ನು ಹೇಳುತ್ತಾರೆ –

### ॐ प्रकरणाच ॐ (१.२.१०)

ಸೂತ್ರಾರ್ಥ :- ಪ್ರಕರಣಾಚ್ಚ = ನೈವೇಹ = ಕಿಂಚನ ಎಂಬುದಾಗಿ ವಿಷ್ಣುಪ್ರಕರಣ ಬಲದಿಂದಾಗಿಯೂ ಸಹ ವಿಷ್ಣುವೇ ಅತ್ತಾ ಎಂದು ಸಿದ್ಧವಾಗುತ್ತದೆ.

ಸೂ.ರ.:– एवं च नेहासीत्किञ्चने(ब्रह्मवैवर्ते)त्यप्संवत्सरसृष्ट्यादिना निरवकाशविष्णुप्रकरणबलादत्ता विष्णुरेवेति सिद्धम् ।

ಅನುವಾದ :–

नेहासीत्किञ्चनाप्यादौ मृत्युरासीद्धरिस्तदा ।
सोत्मनो मनसाऽस्राक्षीदप एव जनार्दनः ॥
शयानस्तासु भगवान् निर्ममेऽण्डं महत्तरम् ।
तत्र संवत्सरं नाम ब्रह्माणमसृजत्प्रभुः ॥
तमत्तुं व्याददादास्यं तदाऽसौ विरुराव ह ।
अथ तं कृपया विष्णुः सृष्टिकर्मण्ययोजयत् ॥
सोऽसृजद्भुवनं विश्वमद्यार्थं हरये विभुः ।

ಎಂಬುದಾಗಿ ಇಲ್ಲಿ ಅಪ್-ಸಂವತ್ಸರ ಸೃಷ್ಟ್ಯಾದಿಗಳನ್ನು ಹೇಳಿದ್ದರಿಂದಾಗಿ ಇದು ವಿಷ್ಣುಪ್ರಕರಣವೇ ಆಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ನಿರವಕಾಶವಾದ ವಿಷ್ಣುಪ್ರಕರಣದಿಂದಾಗಿ ವಿಷ್ಣುವೇ ಅತ್ತಾ ಆಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಅತ್ತೃತ್ವಾಧಿಕರಣವು ಮುಗಿಯಿತು.

ಅಧಿಕರಣ – 3

# ಗುಹಾಧಿಕರಣ

## ಸಂಗತಿ

ಸೂ.ರ.:– अत्र लोकतोऽन्यत्र प्रसिद्धकर्मफलभोक्तृत्वलिङ्गस्य विष्णौ समन्वयः प्रतिपाद्यते ।

ಅನು.:– ಲೋಕತಃ ಅನ್ಯತ್ರ ಪ್ರಸಿದ್ಧವಾದ ಕರ್ಮಫಲಭೋಕ್ತೃತ್ವಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಮೂರನೆಯ ಈ ಗುಹಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु ऋतं पिबन्ताविति वाक्योक्तौ जीवौ न त्वेकः परमेश्वरः । द्विवचनश्रुतेः (कठः१-३-१) एकस्मिन्द्विवचनायोगात् । एवं च हरिवज्जीवस्यापि स्वातन्त्र्येण पातृत्वेन तद्वदेव सर्वात्तृत्वमपि । स्वतन्त्रस्य तदनङ्गीकारे कारणाभावात् । ततश्चातिव्याप्तिः ।

ಅನುವಾದ :–

ऋतं पिवन्तौ सुकृतस्य लोके गुहां प्रविष्टौ परमे परार्धे ।
छायातपौ ब्रह्मविदो वदन्ति पञ्चाग्नयो ये च त्रिनाचिकेताः ॥

(कठ. उ. १-३-१)

ಎಂಬುದಾಗಿ ಕರ್ಮಫಲಭೋಕ್ತೃಗಳಾದ ಇಬ್ಬರು ಶ್ರುತರಾಗುತ್ತಿದ್ದಾರೆ. ಆ ಕರ್ಮಫಲ-ಭೋಕ್ತೃಗಳಾದ ಇಬ್ಬರು ಜೀವರೇ ಆಗುತ್ತಾರೆ. ಹೊರತು ಒಬ್ಬನೇ ಪರಮಾತ್ಮ ಆಗುವುದಿಲ್ಲ. ಯಾಕೆ? ಋತಂ ಪಿಬಂತೌ ಎಂಬುದಾಗಿ ದ್ವಿವಚನಶ್ರುತಿಯಿದೆ. ಒಬ್ಬನೇ ವ್ಯಕ್ತಿಯಲ್ಲಿ ದ್ವಿವಚನಪ್ರಯೋಗವು ಕೂಡುವುದಿಲ್ಲ. ಇಬ್ಬರು ಜೀವರಲ್ಲಿ ದ್ವಿವಚನಪ್ರಯೋಗವು ಉಪಪನ್ನವಾಗುತ್ತದೆ.

ಹಾಗಾದರೆ ಪರಮಾತ್ಮನಿಗೆ ಸ್ವಾತಂತ್ರ್ಯೇಣ ಪಾತೃತ್ವ ಇರುವಂತೆ ಜೀವನಿಗೂ ಸ್ವಾತಂತ್ರ್ಯೇಣ ಪಾತೃತ್ವ ಇರುವುದರಿಂದಾಗಿ, ಅದರಂತೆಯೇ ಸರ್ವಾತ್ತೃತ್ವವೂ ಸಹ ಜೀವನಿಗೆ ಉಪಪನ್ನವಾಗುತ್ತದೆ. ಆದ್ದರಿಂದ ಅತ್ತೃತ್ವಲಕ್ಷಣಕ್ಕೆ ಜೀವನಲ್ಲಿ ಅತಿವ್ಯಾಪ್ತಿ ಬರುತ್ತದೆ.

**ಸೂ.ರ.:– यद्वा, तद्वाक्योक्तौ जीवपरौ । द्विवचनश्रुतेः । एवमपि जीव एव पाता न विभुः । कर्मबन्धविधुरस्य कर्मफलात्तृत्वायोगात् ।**

**ಅನು.:–** ಅಥವಾ ಋತಂ ಪಿಬಂತೌ ಎಂಬ ವಾಕ್ಯದಲ್ಲಿ ಕರ್ಮಫಲಭೋಕ್ತೃಗಳಾದ ವ್ಯಕ್ತಿಗಳು ಎಂದರೆ ಜೀವ ಹಾಗೂ ಪರಮಾತ್ಮ ಇಬ್ಬರೂ ಆಗುತ್ತಾರೆ. ಯಾಕೆಂದರೆ, ಪಿಬಂತೌ ಎಂಬುದಾಗಿ ದ್ವಿವಚನಶ್ರುತಿ ಇರುವುದರಿಂದ.

ಈ ರೀತಿಯಾಗಿ ಜೀವ-ಪರಮಾತ್ಮ ಇಬ್ಬರೂ ಇಲ್ಲಿ ಪ್ರಕೃತರಾದರೂ ಸಹ ಕರ್ಮಫಲ-ಭೋಕ್ತೃವಾದ ವ್ಯಕ್ತಿ (ಪಾತಾ) ಎಂದರೆ ಜೀವ ಒಬ್ಬನೇ. ಹೊರತು ಭಗವಂತ ಅಲ್ಲ. ಯಾಕೆಂದರೆ, ಪರಮಾತ್ಮನಾದರೂ ಕರ್ಮಬಂಧವಿಧುರನಾಗಿದ್ದಾನೆ. ಅಂತಹ ಕರ್ಮಬಂಧ-ವಿಧುರನಾದ ವ್ಯಕ್ತಿಗೆ ಕರ್ಮಫಲಾತೃತ್ವವು ಕೂಡುವುದಿಲ್ಲ.

**ಸೂ.ರ.:– न च सर्वं वाऽत्तीति सर्वात्तृत्वोक्तिविरोधः । अनश्नन्न्य इति (मु.उ.३-१-१) श्रुतिविरोधेन सङ्कोचसम्भवात् ।**

**ಅನು.:–** ಜೀವನೇ ಇಲ್ಲಿ ಪಾತಾ ಎನ್ನುವುದಾದರೆ, ಸರ್ವಂ ವಾ ಅತ್ತಿ ಎಂಬುದಾಗಿ ಪೃಥಿವ್ಯಾದಿ ಸರ್ವಾತ್ತೃತ್ವವನ್ನು ಇಲ್ಲಿ ಹೇಳಿದ್ದರಿಂದ ಜೀವನಿಗೆ ಸರ್ವಾತ್ತೃತ್ವವನ್ನು ಹೇಳಬೇಕಾಗುತ್ತದೆ. ಆದರೆ ಜೀವನಿಗೆ ಸರ್ವಾತ್ತೃತ್ವವು ಕೂಡುವುದಿಲ್ಲವಾದ್ದರಿಂದ ಸರ್ವಂ ವಾ ಅತ್ತಿ ಎಂದು ಹೇಳಿದ ಸರ್ವಾತ್ತೃತ್ವವಿರೋಧ ಬರುತ್ತದೆ ಎಂದರೆ, ಅದು ಸರಿಯಲ್ಲ. ''ಅನಶ್ನನ್ನಃ ಅಭಿಚಾಕಷೀತಿ'' ಎಂಬ ಶ್ರುತಿಯ ವಿರೋಧ ಬರುವುದರಿಂದ ಸರ್ವಂ ವಾ ಅತ್ತಿ ಎನ್ನುವಲ್ಲಿ ಸರ್ವಶಬ್ದಕ್ಕೆ ಸಂಕೋಚ ಮಾಡಬಹುದಾಗಿದೆ. ಹಾಗಾಗಿ ಸರ್ವಾತ್ತೃತ್ವವು ಜೀವನಿಗೆ ಕೂಡದಿದ್ದರೂ ಘಟಾದಿಕಿಂಚಿದತ್ತೃತ್ವವು ಹೇಳಬಹುದಾದ್ದರಿಂದ ಯಾವ ವಿರೋಧವೂ ಬರುವುದಿಲ್ಲ.

**ಸೂ.ರ.:– न च पिबन्ताविति द्वयोः पातृत्वोक्तिविरोधः । छत्रिन्यायेन पातृत्वोपचाराङ्गीकारात् ।**

**ಅನು.:–** ಜೀವ-ಪರಮಾತ್ಮರಲ್ಲಿ ಜೀವನಿಗೆ ಮಾತ್ರ ಪಾತೃತ್ವವನ್ನು ಹೇಳುವುದಾದರೆ,

ಪಿಬಂತೌ ಎಂಬುದಾಗಿ ಇಬ್ಬರಿಗೂ ಪಾತೃತ್ವವನ್ನು ಹೇಳಿದ್ದರ ವಿರೋಧ ಬರುತ್ತದೆಯಲ್ಲ? ಎಂದರೆ, ಹಾಗೆ ವಿರೋಧ ಬರುವುದಿಲ್ಲ. ಛತ್ರಿಣೋ ಯಾಂತಿ ಎಂದು ಹೇಳಿದಾಗ ಅಛತ್ರಿ-ಗಳನ್ನೂ ಉಪಚಾರದಿಂದ ಛತ್ರಿಗಳೆಂದು ಕರೆಯುವಂತೆ, ಪಾತೃವಾಗದ ಪರಮಾತ್ಮನನ್ನೂ ಉಪಚಾರದಿಂದ ಪಾತೃವೆಂದು ಕರೆದಿದ್ದಾರೆ. ಹಾಗಾಗಿ ಆ ವಿರೋಧವೂ ಬರುವುದಿಲ್ಲ.

**ಸೂ.ರ.:– तथाऽपि जीवेशत्वे को हेतुरिति चेत् । एकस्य पातृत्वान्यथाऽनुपपत्त्या जीवत्वे सिद्धे द्वितीयस्य सजातीयस्यैव ग्राह्यत्वात् । न च द्वावपि जीवौ युक्तौ । एकस्मिन् शरीरे भोक्तृजीवद्वयायोगात् । तस्माज्जीवेशावेव ग्राह्यौ । तथाऽपि जीवस्यैव पातृत्वेन न तस्य लक्षणत्वाभिमतं सर्वात्तृत्वमित्यसम्भवः ।**

**ಅನು.:–** ಆದರೂ ಪಾತೃಶಬ್ದದಿಂದ ಜೀವ-ಪರಮಾತ್ಮರನ್ನೇ ತೆಗೆದುಕೊಳ್ಳುವುದು ಯಾಕೆ? ಎಂದರೆ, ಇಲ್ಲಿ ಪಾತೃತ್ವವನ್ನೂ ಹೇಳಿದ್ದಾರೆ. ಆ ಪಾತೃತ್ವವಾದರೂ ಜೀವನಿಗೆ ಮಾತ್ರ ಕೂಡುತ್ತದೆ. ಹೀಗಾಗಿ ಪಾತೃತ್ವಾನ್ಯಥಾನುಪಪತ್ತಿಯಿಂದಾಗಿ ಒಬ್ಬನು ಜೀವ ಎಂದು ಸಿದ್ಧವಾದ ಮೇಲೆ, ಮತ್ತೊಬ್ಬನನ್ನು ಜೀವನಿಗೆ ಸಜಾತೀಯನಾದವನನ್ನೇ ತೆಗೆದುಕೊಳ್ಳಬೇಕು.

ಸರಿ ಹಾಗಾದರೆ, ಇಬ್ಬರೂ ಜೀವರೇ ಆಗಲಿ ಎಂದರೆ ಅದು ಸರಿಯಲ್ಲ. ಒಂದೇ ಶರೀರದಲ್ಲಿ ಇಬ್ಬರು ಭೋಕ್ತೃಗಳಾದವರು ಇರಲು ಸಾಧ್ಯವಿಲ್ಲ. ಆದ್ದರಿಂದ ಪಾತೃಗಳೆಂದರೆ ಜೀವ-ಪರಮಾತ್ಮರನ್ನೇ ತೆಗೆದುಕೊಳ್ಳಬೇಕು.

ಜೀವ-ಪರಮಾತ್ಮ ಇಬ್ಬರನ್ನೂ ಪಾತೃಪದದಿಂದ ತೆಗೆದುಕೊಂಡರೂ ಜೀವನಿಗೆ ಮಾತ್ರ ಪಾತೃತ್ವ ಇದೆಯೇ ಹೊರತು ಪರಮಾತ್ಮನಿಗೆ ಪಾತೃತ್ವ ಇಲ್ಲ. ಪಾತೃತ್ವ ಇಲ್ಲ ಎಂದಮೇಲೆ ಸರ್ವಾತ್ತೃತ್ವ ಲಕ್ಷಣವೂ ಪರಮಾತ್ಮನಿಗೆ ಕೂಡುವುದಿಲ್ಲವಾದ್ದರಿಂದ ಅಸಂಭವ ಬರುತ್ತದೆ.

**ಸೂ.ರ.:– यद्वा, पुनरस्तु द्वावपि जीवौ । न चैकस्मिन् शरीरे भोक्तृजीवद्वया योगः । व्रीह्यादिशरीर उत्पत्स्यमानजीवस्य प्रमाणान्तर-सिद्धत्वान्न तु न तस्य भोक्तृत्वमिति चेन्न । तच्छरीरावच्छेदेन पातृत्वा-भावेऽपि वस्तुतः पातृत्वसद्भावात् । एवं चेश्वरस्य कर्मफलात्तृत्वा-भावेनासम्भव एवेति प्राप्ते सूत्रितम् ।**

**ಅನು.:**– ಅಥವಾ, ಕರ್ಮಫಲಭೋಕ್ತೃವಾದ ವ್ಯಕ್ತಿಗಳು ಎಂದರೆ ಜೀವರೇ (ಇಬ್ಬರು ಜೀವರೇ) ಆಗಲಿ. ಒಂದೇ ಶರೀರದಲ್ಲಿ ಭೋಕ್ತೃಗಳಾದ ಇಬ್ಬರು ಜೀವರು ಇರಲು ಸಾಧ್ಯವಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ವ್ರೀಹ್ಯಾದಿದ್ವಾರಾ ಪುತ್ರಜೀವನು ಪಿತೃಶರೀರವನ್ನು ಪ್ರವೇಶ ಮಾಡಿದಾಗ ಆ ವ್ರೀಹ್ಯಾದಿಶರೀರದಲ್ಲಿ ಹುಟ್ಟಲಿರುವ ಜೀವನು ಪ್ರಮಾಣಾಂತರ ಸಿದ್ಧನಾದ್ದರಿಂದ ಒಂದೇ ಶರೀರದಲ್ಲಿ ಇಬ್ಬರು ಜೀವರು ಇರಬಹುದು. ಆದರೂ ಸಹ ವ್ರೀಹ್ಯಾದಿಶರೀರದಲ್ಲಿ ಉತ್ಪತ್ಸ್ಯಮಾನನಾದ ಆ ಜೀವನಿಗೆ ಭೋಕ್ತೃತ್ವ ಇಲ್ಲ ಎಂದು ಹೇಳುವುದು ಸರಿಯಲ್ಲ. ಆ ಜೀವನಿಗೆ ವ್ರೀಹ್ಯಾದಿಶರೀರಾವಚ್ಛೇದೇನ ಭೋಕ್ತೃತ್ವ ಇಲ್ಲದೇ ಹೋದರೂ ಸಹ ವಾಸ್ತವಿಕವಾಗಿ (ಪುತ್ರಾದಿಶರೀರಾವಚ್ಛೇದೇನ) ಭೋಕ್ತೃತ್ವ ಉಂಟೇ ಉಂಟು.

ಆದ್ದರಿಂದ ಪರಮಾತ್ಮನಿಗೆ ಕರ್ಮಫಲಭೋಕ್ತೃತ್ವವು ಇಲ್ಲವಾದ್ದರಿಂದ, ಸರ್ವಾತ್ತೃತ್ವವು ಕೂಡುವುದಿಲ್ಲವಾದ್ದರಿಂದ ಅತ್ತಾ ಚರಾಚರಗ್ರಹಣಾತ್ ಎಂಬ ಸೂತ್ರದಲ್ಲಿ ಹೇಳಿದ ಅತ್ತೃತ್ವಲಕ್ಷಣಕ್ಕೆ ಅಸಂಭವದೋಷ ಬರುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವು ಹೊರಡುತ್ತದೆ:–

## ॐ गुहां प्रविष्टावात्मानौ हि तद्दर्शनात् ॐ (१.२.११)

**ಸೂತ್ರಾರ್ಥ :**- (ತತ್ತು ಎಂಬ ಪದವನ್ನು ಹಿಂದಿನ ಸೂತ್ರದಿಂದ ಅನುವರ್ತನೆ ಮಾಡಿಕೊಳ್ಳಬೇಕು. ಮತ್ತು ವಿಭಕ್ತಿವಿಪರಿಣಾಮವನ್ನೂ ಮಾಡಿಕೊಳ್ಳಬೇಕು.)

ಆತ್ಮಾನೌ = ಋತಂ ಪಿಬಂತೌ ಎಂಬುದಾಗಿ ಕಠೋಪನಿಷತ್ತಿನಲ್ಲಿರುವ ಪಿಬತ್ ಶಬ್ದದಿಂದ ವಾಚ್ಯರಾದ ಶುಭಕರ್ಮಫಲಭೋಕ್ತೃಗಳಾದವರು ಆತ್ಮ-ಅಂತರಾತ್ಮ ಎಂಬ ಎರಡು ವಿಷ್ಣುರೂಪಗಳೇ ಆಗಿವೆ. ಹೊರತು ಜೀವ-ಪರಮಾತ್ಮರು ಅಲ್ಲ. ಕುತಃ = ಯಾಕೆ? ಹಿ = ಯಾವ ಕಾರಣ (ತತ್) ತೌ = ಕರ್ಮಫಲಭೋಕ್ತೃಗಳಾದ ಅವರು ಗುಹಾಂ ಪ್ರವಿಷ್ಟಾ = ಜೀವರ ಹೃದಯಗುಹಾದಲ್ಲಿ ಪ್ರವಿಷ್ಟರಾದವರಾಗಿದ್ದಾರೆಯೋ ತಸ್ಮಾತ್ = ಆ ಕಾರಣ.

ಇಲ್ಲಿ ಹಿಶಬ್ದದಿಂದ ಗುಹಾಸ್ಥಿತತ್ವಲಿಂಗವು ಯೋ ವೇದ ನಿಹಿತಂ ಗುಹಾಯಾಮ್ (ತೈ. 2-1) ಎಂಬ ಶ್ರುತಿಯಿಂದ ಪ್ರಸಿದ್ಧವಾಗಿದೆ ಎಂದು ಸೂಚಿಸುತ್ತಿದ್ದಾರೆ.

ವಿಷ್ಣುವೇ ಆತ್ಮ-ಅಂತರಾತ್ಮ ಎಂಬ ರೂಪಗಳಿಂದ ಹೃದಯಗುಹಾಸ್ಥಿತನಾಗುತ್ತಾನೆ ಎಂಬ ವಿಷಯದಲ್ಲಿ ಏನು ಪ್ರಮಾಣ? ಎಂದರೆ, ಅದಕ್ಕೆ ಉತ್ತರರೂಪವಾಗಿ ಹೇಳಿದ್ದು ತದ್ದರ್ಶನಾತ್ = ವಿಷ್ಣುವೇ ಎರಡುರೂಪಗಳಿಂದ ಹೃದಯಗುಹಾಸ್ಥಿತನಾಗಿದ್ದಾನೆ

ಎಂಬುದಾಗಿ "ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ" (ಋ.ಸಂ. 10-114-1) ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ.

**ಸೂ.ರ.:- एवं चोक्तवाक्ये यौ पिबन्तौ तौ विष्णुरूपे एव । गुहाप्रविष्टत्व लिङ्गात् ।**

**ಅನು.:-** "ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ" ಎಂಬುದಾಗಿ ಗೃಹಾಪ್ರವಿಷ್ಟತ್ವ-ಲಿಂಗವು ಶ್ರುತವಾಗುತ್ತಿರುವುದರಿಂದ "ಋತಂ ಪಿಬಂತೌ" ಎಂಬ ವಾಕ್ಯದಲ್ಲಿ ಕರ್ಮಫಲ-ಭೋಕ್ತೃಗಳಾಗಿ ಪ್ರತಿಪಾದ್ಯರಾಗುತ್ತಿರುವವರು ಆತ್ಮ-ಅಂತರಾತ್ಮ ಎಂಬ ಭಗವಂತನ ರೂಪಗಳೇ ಆಗಿವೆ.

**ಸೂ.ರ.:- न चैतल्लिङ्गं जीवेऽप्यस्तीति न विष्णुत्वनिर्णायकमिति वाच्यम् । यो वेद निहितमिति गुहानिहितत्वस्येश्वरे प्रसिद्धत्वेन प्रसिद्धस्यैव ग्राह्यत्वात् ।**

**ಅನು.:-** ಗುಹಾಸ್ಥಿತತ್ವ ಲಿಂಗವು ಜೀವನಲ್ಲಿಯೂ ಇರುವುದರಿಂದ ಅದು ವಿಷ್ಣುತ್ವ-ನಿರ್ಣಾಯಕವಾಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಯೋ ವೇದ ನಿಹಿತಂ ಗುಹಾಯಾಮ್ ಎಂಬುದಾಗಿ ಶ್ರುತಿ ಹೇಳಿದಂತೆ ಗುಹಾಸ್ಥಿತತ್ವಲಿಂಗವು ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ್ದರಿಂದ, ಪ್ರಸಿದ್ಧವಾದ ಅರ್ಥವನ್ನು ಸ್ವೀಕರಿಸುವುದೇ ಯೋಗ್ಯವಾದ್ದರಿಂದ ಗುಹಾಸ್ಥಿತತ್ವಲಿಂಗದಿಂದಾಗಿ ವಿಷ್ಣುವನ್ನು ತೆಗೆದುಕೊಳ್ಳಬೇಕು.

**ಸೂ.ರ.:- न च द्विवचनश्रुतिविरोधः । रूपद्वयाभिप्रायेण सावकाशत्वात् ।**

**ಅನು.:-** ವಿಷ್ಣುವೇ ಹೃದಯಗೃಹಾಸ್ಥಿತನಾಗಿದ್ದಾನೆ ಎಂದು ಹೇಳುವುದಾದರೆ, ಋತಂ ಪಿಬನ್ ಎಂಬುದಾಗಿ ಏಕವಚನಪ್ರಯೋಗ ಇರಬೇಕಿತ್ತು. ಆದರೆ ಪಿಬಂತೌ ಎಂದು ಪ್ರಕೃತ ದ್ವಿವಚನ ಶ್ರುತವಾಗುತ್ತಿದೆ. ಒಬ್ಬನ ವಿಷಯದಲ್ಲಿ ದ್ವಿವಚನಪ್ರಯೋಗವು ಅನುಪಪನ್ನ-ವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ವ್ಯಕ್ತಿ ಒಬ್ಬನೇ ಆದರೂ ರೂಪಗಳು ಎರಡು ಇರುವುದರಿಂದ, ಎರಡು ರೂಪಗಳ ಅಭಿಪ್ರಾಯದಲ್ಲಿ ಶ್ರುತಿಯು ಸಾವಕಾಶ-ವಾಗಿದೆ. (ದ್ವಿವಚನಪ್ರಯೋಗ ಮಾಡಿದೆ.)

**ಸೂ.ರ.:– न चैकैकेनैव रूपेण प्रवेशेन रूपद्वयाभावः । धर्मा समन्ता त्रिवृतमिति प्रमाणेनैकस्मिन्नपि शरीरे रूपद्वयस्यैव सिद्धत्वात् ।**

**ಅನು.:–** ಶರೀರದಲ್ಲಿ ಪ್ರವೇಶ ಮಾಡಬೇಕಾದರೆ ಒಂದೊಂದು ರೂಪದಿಂದ ಮಾತ್ರ ಪ್ರವೇಶ ಮಾಡಬೇಕಿರುವುದರಿಂದ ಎರಡು ರೂಪಗಳನ್ನು ಹೇಳುವುದು ಸರಿಯಾಗು-ವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. "ಘರ್ಮಾ ಸಮಂತಾ ತ್ರಿವೃತಂ" ಎಂಬ ಶ್ರುತಿಪ್ರಮಾಣದಿಂದಾಗಿ ಒಂದೇ ಶರೀರದಲ್ಲಿ ವಿಷ್ಣುವಿನ ಎರಡು ರೂಪಗಳು ಇವೆ ಎಂದು ಸಿದ್ಧವಾಗಿರುವುದರಿಂದ (ವಿಷಯವು ಪ್ರಾಮಾಣಿಕವಾದ್ದರಿಂದ) ಅಂಗೀಕಾರಾರ್ಹವಾಗಿದೆ.

**ಸೂ.ರ.:– न च विष्णोः पातृत्वाङ्गीकारेऽनश्नन्नन्य इत्यादि-श्रुतिविरोधः । शुभं पिबत्यसाविति (पाद्मे.) प्रमाणेन विष्णोः पातृत्वस्य सिद्धत्वेन तस्या अशुभभोगाभावविषयत्वात् ।**

**ಅನು.:–** ವಿಷ್ಣುವಿಗೆ ಪಾತೃತ್ವವನ್ನು (ಕರ್ಮಫಲಭೋಕ್ತೃತ್ವವನ್ನು) ಅಂಗೀಕರಿಸು-ವುದಾದರೆ ಅನಶ್ನನ್ನನ್ಯಃ ಅಭಿಚಾಕಶೀತಿ ಎಂಬುದಾಗಿ ವಿಷ್ಣುವಿಗೆ ಪಾತೃತ್ವಾಭಾವವನ್ನು ತಿಳಿಸುವ ಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ.

शुभं पिबत्यसौ नित्यं नाशुभं स हरिः पिबेत् ।
पूर्णानन्दमयस्यास्य चेष्टा न ज्ञायते क्वचित् ॥

ಎಂಬುದಾಗಿ ಪಾದ್ಮಪುರಾಣವು ಹೇಳಿದಂತೆ ವಿಷ್ಣುವಿಗೆ ಪಾತೃತ್ವವು ಸಿದ್ಧವಾದ್ದರಿಂದ (ಪಾತೃತ್ವವೇ ಇಲ್ಲ ಎನ್ನಲು ಬರುವುದಿಲ್ಲವಾದ್ದರಿಂದ ಕಿಂತು) ಶ್ರುತಿಗೆ ಅಶುಭವಾದ ಭೋಗವು ವಿಷ್ಣುವಿಗೆ ಇಲ್ಲ ಎಂದೇ ಅರ್ಥೈಸಬೇಕಿದೆ. ಆದ್ದರಿಂದ ಅನಶ್ನನ್ ಎಂಬ ಮಾತಿನ ವಿರೋಧವೂ ಬರುವುದಿಲ್ಲ.

**ಸೂ.ರ.:– न च पूर्णस्य कर्मबन्धविधुरत्वेन कर्मफलभोगानुपपत्तिः । नियोगतो भोगासम्भवेऽपि स्वेच्छया तत्सम्भवात् । ततश्च विष्णोरेव पातृत्वेनात्तृत्वलक्षणं युक्तमिति सिद्धम् ।**

**ಅನು.:–** ವಿಷ್ಣುವು ಪೂರ್ಣನಾದ ವ್ಯಕ್ತಿಯಾಗಿದ್ದಾನೆ. ಅಂತೆಯೇ ಕರ್ಮಬಂಧ-ರಹಿತನಾಗಿದ್ದಾನೆ. ಅಂದಮೇಲೆ ವಿಷ್ಣುವಿಗೆ ಕರ್ಮಫಲಭೋಗವು ಅನುಪಪನ್ನ-

ವಾಗುವುದಲ್ಲವೇ? ಎಂದರೆ, ಅದು ಸರಿಯಲ್ಲ. ನಿಯೋಗದಿಂದಾಗಿ ವಿಷ್ಣುವಿಗೆ ಭೋಗವು ಅಸಂಭಾವಿತವಾದರೂ ಸಹ ತನ್ನ ಇಚ್ಛೆಯಿಂದಾಗಿ ಭೋಗವು ಸಂಭಾವಿತವಾಗಿದೆ.

ಆದ್ದರಿಂದ ವಿಷ್ಣುವೇ ಪಾತೃವಾಗಿದ್ದಾನೆ ಎಂದು ಸಿದ್ಧವಾಗುವುದರಿಂದ ಅತ್ತಾ ಚರಾಚರಗ್ರಹಣಾತ್ ಎಂಬ ಸೂತ್ರದಲ್ಲಿ ವಿಷ್ಣುವಿಗೆ ಹೇಳಿದ ಅತ್ತೃತ್ವ ಲಕ್ಷಣವೂ ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 12

**ಸೂ.ರ.:- यदा निरवकाशगुहानिहितत्वलिङ्गस्य सावकाशाद्विवचनश्रुतितोऽपि प्राबल्याद्विष्णोः प्रकृत्यर्थभोक्तृत्वसम्भवाच्च स एव पातेति सिद्ध्यति । किं पुनर्निरवकाशश्रुत्याऽपीत्यर्थं प्रतिपादयत्सूत्रं पठति ।**

ಅನು.:- ಸಾವಕಾಶವಾದ ದ್ವಿವಚನಶ್ರುತಿಗಿಂತಲೂ ನಿರವಕಾಶವಾದ ಗುಹಾನಿಹಿತತ್ವ-ಲಿಂಗಕ್ಕೆ ಪ್ರಾಬಲ್ಯ ಇರುವುದರಿಂದ, ವಿಷ್ಣುವಿಗೆ ಶುಭಕರ್ಮಫಲಭೋಕ್ತೃತ್ವವೂ ಉಪಪನ್ನ-ವಾಗುವುದರಿಂದಲೂ ಸಹ ವಿಷ್ಣುವೇ ಪಾತಾ ಆಗಿದ್ದಾನೆ ಎಂದು ಸಿದ್ಧವಾಗುವುದಾದರೆ, ಇನ್ನು ನಿರವಕಾಶವಾದ ಶ್ರುತಿಯಿಂದಲೂ ಸಿದ್ಧವಾಗುತ್ತದೆ ಎಂದು ಏನು ಹೇಳುವುದು? ಎಂಬುದಾಗಿ ಕೈಮುತ್ಯವನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ.

## ॐ विशेषणाच्च ॐ (१.२.१२)

**ಸೂತ್ರಾರ್ಥ** :- ವಿಶೇಷಣಾಚ್ಚ = ಯಃ ಸೇತುಃ (ಕಠ 1-3-2) ಎಂಬುದಾಗಿ ಏಕವಚನದಿಂದ ವಿಶೇಷಣ ಕೊಟ್ಟಿರುವುದರಿಂದಾಗಿ ಒಬ್ಬನೇ ಪಾತಾ ಆಗಬೇಕು. ಸೇತುತ್ವ-ಬ್ರಹ್ಮತ್ವಾದಿಗಳಿಂದ ವಿಶೇಷಣ ಕೊಟ್ಟಿರುವುದರಿಂದಾಗಿ ಆ ಪಾತಾ ವಿಷ್ಣುವೇ ಆಗುತ್ತಾನೆ ಹೊರತು ಜೀವ ಅಲ್ಲ ಎಂದು ಸಿದ್ಧವಾಗುತ್ತದೆ.

**ಸೂ.ರ.:- एवं च न केवलं गुहाप्रविष्टत्वलिङ्गबलादेव पिबन्तौ विष्णुरूपे किन्तु यः सेतुरीजानानामिति श्रुतौ ब्रह्मैकवचनशब्दाभ्यां विशेषणादपि विष्णुरेव पातेति सिद्धम् ।**

ಅನು.:- ಕೇವಲ ಗುಹಾಪ್ರವಿಷ್ಟತ್ವ ಲಿಂಗ ಇರುವುದರಿಂದಾಗಿ ಕರ್ಮಫಲಭೋಕ್ತೃ-ಗಳಾದವರು ವಿಷ್ಣುವಿನ ಎರಡು ರೂಪಗಳೇ ಎಂದು ಸಿದ್ಧವಾಗುತ್ತದೆ ಎಂದಷ್ಟೇ ಅಲ್ಲ,

ಪರಂತು "ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್" (ಕ.ಉ. 1-3-2) ಎಂಬುದಾಗಿ ಏಕವಚನಶಬ್ದ-ಬ್ರಹ್ಮಶಬ್ದಗಳು ಇರುವುದರಿಂದಲೂ (ಏಕವಚನ-ಬ್ರಹ್ಮಶಬ್ದಗಳಿಂದ ವಿಶೇಷಣ ಕೊಟ್ಟಿರುವುದರಿಂದಲೂ) ಸಹ,

पृथग्वक्तुं गुणास्तस्य न शक्यन्तेऽपितत्वतः ।
यतोऽतो ब्रह्मशब्देन सर्वेषां ग्रहणं भवेत् ॥

एतस्माद्ब्रह्मशब्दोऽयं विष्णोरेव विशेषणम् ।
अमिता हि गुणा यस्मान्नान्येषां तमृते विभुम् ॥

ಎಂಬುದಾಗಿ ಬ್ರಾಹ್ಮಪುರಾಣದಲ್ಲಿ ತಿಳಿಸಿದಂತೆ ಗುಣಪೂರ್ಣತ್ವವನ್ನು ಹೇಳಿಕೊಡುವ ಬ್ರಹ್ಮಶಬ್ದವು ವಿಷ್ಣುವಿಗೆ ಮಾತ್ರ (ವಿಶೇಷಣವಾಗುವುದರಿಂದ) ವಾಚಕವಾಗುವುದರಿಂದ ಋತಂ ಪಿಬಂತೌ ಎಂಬುದಾಗಿ ಶ್ರುತನಾಗುತ್ತಿರುವ ಕರ್ಮಫಲಭೋಕ್ತೃವಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಇಲ್ಲಿಗೆ ಗುಹಾಧಿಕರಣವು ಮುಗಿಯಿತು.

### ಅಧಿಕರಣ – 4

## ಅಂತರಾಧಿಕರಣ

### ಸಂಗತಿ

**ಸೂ.ರ.:– अत्र चक्षुरन्तस्थत्वलिङ्गं ब्रह्मणि समन्वीयते ।**

**ಅನು.:–** ಅಗ್ನಿಶ್ರುತಿಸಾಹಿತ್ಯೇನ ಅನ್ಯತ್ರ ಪ್ರಸಿದ್ಧವಾದ ಚಕ್ಷುರಂತಃಸ್ಥತ್ವಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ನಾಲ್ಕನೇ ಈ ಅಂತರಾಧಿಕರಣದಲ್ಲಿ.

ಯಶ್ಚಾಸಾವಾದಿತ್ಯೇ ಎಂಬುದಾಗಿ ಆನಂದಮಯನಾದ ವ್ಯಕ್ತಿಗೆ ಆದಿತ್ಯಸ್ಥತ್ವವನ್ನು ಹೇಳಿದೆ. ಅರ್ಥಾತ್ ಅಕ್ಷಿಸ್ಥತ್ವವನ್ನೂ ಹೇಳಿದಂತೆಯೇ ಆಗಿದೆ. ಆ ಅಕ್ಷಿಸ್ಥತ್ವವಾದರೂ ಯ ಏಷೋಽಂತರಕ್ಷಿಣಿ ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಒಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಆ ಛಾಂದೋಗ್ಯಶ್ರುತಿಯಲ್ಲಿ ಶ್ರುತನಾಗುತ್ತಿರುವ ಅಕ್ಷಿಸ್ಥನಾದ ವ್ಯಕ್ತಿ ಯಾರೆಂದು ನಿರ್ಣಯ ಮಾಡಲು ಈ ಅಧಿಕರಣ ಹೊರಟಿದೆ.

### ಪೂರ್ವಪಕ್ಷ

**ಸೂ.ರ.:– ननु य एषोऽतरक्षिणीति (छां.४-१५) वाक्योक्तोऽग्नि-रेवाक्षिस्थो भवेत् । य एष आदित्य (छां.४-११) इत्यग्नेरेवादित्य-स्थत्वाभिधानात् ।**

**ಅನು.:–** "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ" (ಛಾಂ. 4-15)

ಎಂಬ ಛಾಂದೋಗ್ಯದಲ್ಲಿ ಶ್ರುತನಾಗುತ್ತಿರುವ ಅಕ್ಷಿಸ್ಥನಾದ ವ್ಯಕ್ತಿ ಅಗ್ನಿಯೇ ಆಗಬೇಕು ಎಂದು ಪೂರ್ವಪಕ್ಷ. ಯಾಕೆ? "ಯ ಏಷ ಆದಿತ್ಯೇ" (ಛಾಂ. 4-11) ಎಂಬುದಾಗಿ ಅಗ್ನಿಗೇನೇ ಆದಿತ್ಯಸ್ಥತ್ವವನ್ನು ಹೇಳಿದ್ದರಿಂದ.

**ಸೂ.ರ.:– न चाग्नेरादित्यस्थत्वेऽप्यक्षिस्थत्वं कुत इति वाच्यम् । आदित्यश्चक्षुर्भूत्वेति श्रुतेः । अक्ष्यादित्ययोरेकत्वात् । आदित्य-स्थत्वेनाग्नेरक्षिस्थत्व सिद्धेः ।**

**ಅನು.:–** ಹೌದು ಯ ಏಷ ಆದಿತ್ಯೇ ಎಂಬುದಾಗಿ ಅಗ್ನಿಗೆ ಆದಿತ್ಯಸ್ಥತ್ವವನ್ನು ಹೇಳಿದ್ದಾರೆ. ಹೊರತು ಅಕ್ಷಿಸ್ಥತ್ವವನ್ನು ಹೇಳಿಲ್ಲ. ಅಂದಮೇಲೆ ಆದಿತ್ಯಸ್ಥತ್ವವನ್ನು ಹೇಳಿದ ಮಾತ್ರಕ್ಕೆ ಅಕ್ಷಿಸ್ಥತ್ವವು ಹೇಗೆ ಸಿದ್ಧಿಸುತ್ತದೆ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಯಾಕೆಂದರೆ : ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್ ಎಂದು ಶ್ರುತಿ ಇರುವುದರಿಂದ ಆದಿತ್ಯ – ಅಕ್ಷಿ ಎರಡೂ ಒಂದೇ ಆಗಿವೆ. ಹೀಗಾಗಿ ಅಗ್ನಿಗೆ ಆದಿತ್ಯಸ್ಥತ್ವವನ್ನು ಹೇಳಿದರೆ ಅಕ್ಷಿಸ್ಥತ್ವವನ್ನೂ ಹೇಳಿದಂತೆಯೇ. ಅಗ್ನಿಗೆ ಆದಿತ್ಯಸ್ಥತ್ವವನ್ನು ಹೇಳಿದ್ದರಿಂದಲೇ ಅಕ್ಷಿಸ್ಥತ್ವವೂ ಸಿದ್ಧಿಸುತ್ತದೆ.

**ಸೂ.ರ.:– न च सोऽहमस्मी(छां.४-१०-५)त्युपदिष्टः कुतोऽग्निरिति । अस्मिन्नुपदेशे बव्हग्निश्रुतिसद्भावात् । न च यश्चासाविति समाख्या-बलाद्विष्णुरेवादित्यस्थः । सोऽहमस्मीत्यभ्यासादभ्यासस्य च समाख्यातो बलवत्त्वात् ।**

**ಅನು.:–** ಯಶ್ಚಾಸಾವಾದಿತ್ಯೇ ಎಂಬುದಾಗಿ ಸಮಾಖ್ಯಾ ಇರುವುದರಿಂದ ಅದರ ಬಲದಿಂದಾಗಿ ವಿಷ್ಣುವೇ ಆದಿತ್ಯಸ್ಥನಾಗಬಹುದಲ್ಲ? ಎಂದರೆ, ಅದು ಸರಿಯಲ್ಲ. 'ಸೋಽಹಮಸ್ಮಿ ಸ ಏವಾಹಮಸ್ಮಿ' ಎಂಬುದಾಗಿ ಅಗ್ನಿಯ ವಿಷಯದಲ್ಲಿ ಅಭ್ಯಾಸ ಇದೆ. ಅಭ್ಯಾಸವು ಸಮಾಖ್ಯಾಗಿಂತಲೂ ಪ್ರಬಲವಾಗಿದೆ. ಹೀಗಾಗಿ ಅಭ್ಯಾಸ ಸಾಮರ್ಥ್ಯದಿಂದಾಗಿ ಅಗ್ನಿಯೇ ಆದಿತ್ಯಸ್ಥನೆಂದು ಸಿದ್ಧನಾಗುತ್ತಾನೆ.

**ಸೂ.ರ.:– न च विष्णुग्रहणेऽपूर्वतया अभ्यासस्यापि बाधः । स च एवं विद्वानित्यर्थवादात् । अर्थवादस्य चापूर्वतायाः प्राबल्यात् । अत आदित्यस्थोऽग्निस्ततोऽक्षिस्थश्चेति प्राप्ते सूत्रमाह ।**

**ಅನು.:–** ಆದಿತ್ಯಸ್ಥನಾದವನು ವಿಷ್ಣು ಎಂದು ಗ್ರಹಣ ಮಾಡಿದರೆ ಅಪೂರ್ವತಾ ಇರುವುದರಿಂದ ಅಭ್ಯಾಸಕ್ಕೂ ಬಾಧ ಹೇಳಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ''ಸ ಯ ಏತದೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯುರೇತಿ'' ಎಂದು ಹೇಳಿದ್ದರಿಂದ ಅದು ಅರ್ಥವಾದ ಆಗಿದೆ. ಅರ್ಥವಾದವಾದರೂ ಅಪೂರ್ವತಾಕಿಂತಲೂ ಪ್ರಬಲವಾಗಿದೆ.

ಆದ್ದರಿಂದ ಅರ್ಥವಾದಬಲದಿಂದಾಗಿ ಅಗ್ನಿಯೇ ಆದಿತ್ಯಸ್ಥನಾದವನು ಎಂದು

ಸಿದ್ಧವಾಗುವುದರಿಂದ, ಅದರಿಂದ ಅಕ್ಷಿಸ್ಥನಾದವನೂ ಅಗ್ನಿಯೇ ಎಂದು ಸಿದ್ಧವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳಲು ಸೂತ್ರ ಹೊರಡುತ್ತದೆ :-

**ॐ अन्तर उपपत्तेः ॐ (१.२.१३)**

**ಸೂತ್ರಾರ್ಥ** :- ಅಂತರಃ=ಯ ಏಷೋಽಂತರಕ್ಷಿಣಿ ಎಂಬ ಶ್ರುತಿಯಲ್ಲಿ ಶ್ರುತನಾಗುತ್ತಿರುವ ಚಕ್ಷುರಂತಃಸ್ಥಿತನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ. ಹೊರತು ಅಗ್ನಿ ಆಗುವುದಿಲ್ಲ, ಕುತಃ? ಯಾಕೆ? ಉಪಪತ್ತೇಃ = ಚಕ್ಷುರಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ ಅಮೃತತ್ವ - ಬ್ರಹ್ಮಶಬ್ದಗಳು ಶ್ರುತವಾಗುತ್ತಿವೆ. ಆ ಅಮೃತತ್ವ - ಬ್ರಹ್ಮಶಬ್ದಗಳಾದರೋ ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ.

## ಸಿದ್ಧಾಂತ

**ಸೂ.ರ.:– एवं चैतदमृतमभयमि (छां.४-१५-१) त्यमृतत्वाभयत्वादिलिङ्गश्रवणाद् ब्रह्मादिशब्दश्रुतेश्च विष्णुरेव चक्षुरन्तर इति सिद्धम् ।**

**ಅನು.:–** ಏತದಮೃತಮಭಯಮೇತದ್ ಬ್ರಹ್ಮ (ಛಾಂ. 4-15-1) ಎಂಬುದಾಗಿ ಚಕ್ಷುರಂತಃಸ್ಥಿತನಾದ ವ್ಯಕ್ತಿಯ ವಿಷಯದಲ್ಲಿ ಅಮೃತ-ಬ್ರಹ್ಮಗಳು ಶ್ರುತವಾಗುತ್ತಿವೆ. ''ತ್ರಿಪಾದಸ್ಯಾಮೃತಂ ದಿವಿ'' (ಋ.ಸಂ. 10-90-3) ಎಂಬುದಾಗಿ ವಿಷ್ಣುವಿಗೇ ಅಮೃತತ್ವಾದಿಗಳು ಕೂಡುತ್ತವೆ ಎಂದು ಶ್ರುತಿ ಹೇಳಿದೆ. ಬ್ರಹ್ಮಶಬ್ದವೂ ವಿಷ್ಣುವಿಗೇ ಉಪಪನ್ನವಾಗುತ್ತದೆ.

ಹೀಗೆ ವಿಷ್ಣುವಿಗೆ ಮಾತ್ರ ಉಪಪನ್ನವಾಗುವ ಅಮೃತತ್ವ - ಬ್ರಹ್ಮಶಬ್ದಗಳು ಚಕ್ಷುರಂತಸ್ಥಿತನಾಗುವ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವುದರಿಂದ ಯ ಏಷೋಽಂತರಕ್ಷಿಣಿ ಎಂಬ ಶ್ರುತಿಯಲ್ಲಿ ಶ್ರುತನಾಗುತ್ತಿರುವ ಚಕ್ಷುರಂತಸ್ಥಿತನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 14

**ಸೂ.ರ.:– युक्त्यन्तरेण विष्णोश्चक्षुरन्तःस्थत्वं साधयत्सूत्रमुपन्यस्यति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ವಿಷ್ಣುವಿಗೆ ಚಕ್ಷುರಂತಃಸ್ಥಿತತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ –

## ॐ स्थानादिव्यपदेशाच्च ॐ (१.२.१४)

**ಸೂತ್ರಾರ್ಥ** :- ಸ್ಥಾನಾದಿವ್ಯಪದೇಶಾಚ್ಚ = ಸ್ಥಾನಶಕ್ತಿ (ಬ್ರಹ್ಮಸ್ಥಾನಭೂತ ಅಕ್ಷಿಶಕ್ತಿ) ಹಾಗೂ ಸ್ವರೂಪಶಕ್ತಿ (ಅಲ್ಲಿ ಅಧಿಷ್ಠಾತೃವಾದ ಬ್ರಹ್ಮನ ಶಕ್ತಿ) ಇವುಗಳನ್ನು "ಸರ್ಪಿರ್ವೋದಕಂ ವಾ ಸಿಂಚತಿ" (ಛಾಂ.4-15) ಎಂಬುದಾಗಿ ಹೇಳಿದ್ದರಿಂದಲೂ ಸಹ ಚಕ್ಷುರಂತಸ್ಥಃ-ನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಸೂ.ರ.:-** **एवं च सर्पिर्वोदकमिति श्रुतौ स्थानशक्तेर्वामनिः (छां.४.१९.३) भामनिरिति (चतुर्वेदशिखायां) स्वरूपशक्तेश्चोक्तत्वात् । तयोश्चान्यत्रासम्भवात् । चक्षुरन्तःस्थो विष्णुरेवेति सिद्धम् ।**

**ಅನುವಾದ :-** **"तद्यदस्मिन् सर्पिर्वोदकं वा सिञ्चति वर्त्मनी एव गच्छति" (छां.उ.४-१९)**

ಎಂಬುದಾಗಿ ಚಕ್ಷುರಂತಃಸ್ಥನಾದ ವ್ಯಕ್ತಿಗೆ ಸ್ಥಾನಶಕ್ತಿಯನ್ನು (ಅಕ್ಷಿಸ್ಥನಾದ ಪುರುಷನ ಸಂಬಂಧದಿಂದಾಗಿ ಅಕ್ಷಿಗಳಿಗೆ ಅಸಂಗತ್ವರೂಪವಾದ ಶಕ್ತಿಯನ್ನು) ಹೇಳಲಾಗಿದೆ. ಮತ್ತು

**ಸೂ.ರ.:-** **"एतं संयद्वाम इत्याचक्षत एतं हि सर्वाणि वामान्यभि-संयन्ति । एष उ एव वामनिरेष हि सर्वाणि वामानि नयति एष उ एव भामनिरेष हि सर्वेषु लोकेषु भाति" (चतुर्वेदशिखा) ।**

**ಅನು.:-** ಎಂಬುದಾಗಿ ಚಕ್ಷುರಂತಃಸ್ಥನಾದ ವ್ಯಕ್ತಿಗೆ ಸಂಯದ್ವಾಮತ್ವಾದಿ ಸ್ವರೂಪಶಕ್ತಿ-ಯನ್ನು ಹೇಳಲಾಗಿದೆ. ಇಂತಹ ಸ್ಥಾನಶಕ್ತಿ-ಸ್ವರೂಪಶಕ್ತಿಗಳು ವಿಷ್ಣುವಿಗೆ ಮಾತ್ರ ಉಪಪನ್ನ-ವಾಗುತ್ತವೆ. ವಿಷ್ಣುವನ್ನು ಬಿಟ್ಟು ಉಳಿದವರಿಗೆ ಉಪಪನ್ನವಾಗುವುದಿಲ್ಲ. ಆದ್ದರಿಂದ ಚಕ್ಷುರಂತಃಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 15

**ಸೂ.ರ.:-प्रकरणबलाच्चक्षुरन्तःस्थत्वं विष्णोः प्रतिपादयत्सूत्रपन्यस्यति ।**

**ಅನು.:-** ಪ್ರಕರಣಬಲದಿಂದಲೂ ಸಹ ವಿಷ್ಣುವಿಗೆ ಚಕ್ಷುರಂತಃಸ್ಥತ್ವವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ :-

## ॐ सुखविशिष्टाभिधानादेव च ॐ (१.२.१५)

**ಸೂತ್ರಾರ್ಥ :-** ಸುಖವಿಶಿಷ್ಟಾಭಿಧಾನಾತ್ ಏವ = ಪ್ರಕರಣದ ಆದಿಯಲ್ಲಿ ''ಕಂ ಬ್ರಹ್ಮ'' (ಛಾಂ.4-10) ಎಂಬುದಾಗಿ ವಿಶಿಷ್ಟಸುಖವನ್ನು ಪೂರ್ಣಸುಖವನ್ನು ಹೇಳಿದ್ದ-ರಿಂದಲೇನೇ ವಿಷ್ಣುವೇ ಚಕ್ಷುರಂತಃಸ್ಥನಾದವನು ಎಂದು ಸಿದ್ಧವಾಗುತ್ತದೆ ಎಂದಮೇಲೆ ಚ = ''ಖಂ ಬ್ರಹ್ಮ'' ಎಂಬುದಾಗಿ ಪೂರ್ಣಜ್ಞಾನವನ್ನು ಹೇಳಿದ್ದರಿಂದಲೂ ಸಹ ವಿಷ್ಣುವೇ ಚಕ್ಷುರಂತಃಸ್ಥನಾದವನು ಎಂದು ಸಿದ್ಧವಾಗುತ್ತದೆ ಎಂದು ಹೇಳುವುದೇನು?

**ಸೂ.ರ.:– एवं चोपक्रमे प्राणो ब्रह्म कं ब्रह्मेति श्रवणेनास्य प्रकरणस्य वैष्णवत्वात् तत्र पूर्णसूखस्य खं ब्रह्मेति पूर्णज्ञानस्य चाभिधानात् । पूर्णानन्दत्वस्य निरवधिकपूर्णानन्दत्वाभिप्रायकत्वात् । मुख्ये सत्यमुख्यायोगात् । अतश्चक्षुरन्तरो विष्णुरेवेति सिद्धम् ।**

**ಅನು.:–** ಉಪಕ್ರಮದಲ್ಲಿ ಪ್ರಾಣೋ ಬ್ರಹ್ಮ ಎಂಬುದಾಗಿ ಮುಖ್ಯಪ್ರಾಣನಿಗೆ ಎಲ್ಲ ಜೀವರಿಗಿಂತ ಉತ್ತಮತ್ವವನ್ನು ಹೇಳಿ, ಕಂ ಬ್ರಹ್ಮ ಖಂ ಬ್ರಹ್ಮ ಎಂಬುದಾಗಿ ಪೂರ್ಣಸುಖ – ಪೂರ್ಣಜ್ಞಾನಗಳನ್ನು ಹೇಳುತ್ತಿದ್ದಾರೆ. ಹೀಗೆ ಪ್ರಕರಣದ ಆದಿಯಲ್ಲಿ ಪೂರ್ಣಸುಖಾದಿಗಳನ್ನು ಹೇಳಿದ್ದರಿಂದಲೇ ಈ ಪ್ರಕರಣವು ವಿಷ್ಣುಪ್ರಕರಣ ಎಂದು ಸಿದ್ಧವಾಗುತ್ತದೆ.

ಎಲ್ಲ ಚೇತನರೂ ಪೂರ್ಣಸುಖವುಳ್ಳವರೇ ಆದ್ದರಿಂದ ವೈಷ್ಣವತ್ವವು ಹೇಗೆ ನಿಶ್ಚಿತವಾಗುತ್ತದೆ ? ಎಂದರೆ, ಇಲ್ಲಿ ಪೂರ್ಣಾನಂದತ್ವ ಎಂದರೆ ನಿರವಧಿಕ ಪೂರ್ಣಾನಂದತ್ವ ಎಂದೇ ಅಭಿಪ್ರಾಯವಿದೆ. ಚೇತನರಿಗೆ ಪೂರ್ಣಾನಂದತ್ವ ಇದ್ದರೂ ನಿರವಧಿಕ ಪೂರ್ಣಾನಂದತ್ವ ಇಲ್ಲ. ಮುಖ್ಯವಾದ ನಿರವಧಿಕ ಆನಂದತ್ವವನ್ನೇ ತೆಗೆದುಕೊಳ್ಳಲು ಬರುವಾಗ ಅಮುಖ್ಯವಾದ ಆನಂದವನ್ನು ತೆಗೆದುಕೊಳ್ಳುವುದು ಸರಿಯಲ್ಲ.

ಆದ್ದರಿಂದ ಪೂರ್ಣಾನಂದತ್ವಾದಿಗಳು ಶ್ರುತವಾಗುವುದರಿಂದ ವಿಷ್ಣುಪ್ರಕರಣ ಎಂದು ನಿಶ್ಚಯವಾಗುವುದರಿಂದ, ಅಂತಹ ವಿಷ್ಣುಪ್ರಕರಣದಲ್ಲಿ ಶ್ರುತನಾಗುತ್ತಿರುವ ಚಕ್ಷುರಂತಃಸ್ಥನಾದವನು ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ – 16

**ಸೂ.ರ.:– नन्वेतदुपक्रमे सुखज्ञानयोरभिधानेऽपि नाक्षिस्थप्रकरणस्य वैष्णवत्त्वं युक्तम् । छान्दोग्ये प्राणो ब्रह्मेति (छां.४-१०) विद्यां य**

**एष आदित्य इति (छां.४-११) विद्यां चोक्त्वाऽग्निभिरुपकोसलं प्रति 'अस्मद्विद्या चात्मविद्या चोक्ता' इत्युक्तत्वेनाद्याया विष्णुविषयत्वस्य द्वितीयायाश्चाग्निविषयत्वस्यैव युक्तत्वात् । य एषोऽन्तरक्षिणी (छां.४-१५)त्यक्षिस्थविद्याया आदित्यविद्ययैकार्थत्वात् ।**

**ಅನು.:–** ಈ ಪ್ರಕರಣದ ಉಪಕ್ರಮದಲ್ಲಿ ಪೂರ್ಣಸುಖ - ಪೂರ್ಣಜ್ಞಾನಗಳನ್ನು ಹೇಳಿದ್ದರೂ ಸಹ ಅಕ್ಷಿಸ್ಥಪ್ರಕರಣವು ವಿಷ್ಣುವಿಷಯಕ ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ - ಛಾಂದೋಗ್ಯೋಪನಿಷತ್ತಿನಲ್ಲಿ "ಪ್ರಾಣೋ ಬ್ರಹ್ಮ" (ಛಾಂ.4-10) ಎಂಬುದಾಗಿ ವಿದ್ಯೆಯನ್ನು ಮತ್ತು "ಯ ಏಷ ಆದಿತ್ಯೇ ಪುರುಷಃ" (ಛಾಂ.4-11) ಎಂಬುದಾಗಿ ವಿದ್ಯೆಯನ್ನೂ ಸಹ ಹೇಳಿ ಅಗ್ನಿಗಳು ಉಪಕೋಸಲನನ್ನು ಕುರಿತು "ಅಸ್ಮದ್ವಿದ್ಯಾ ಚಾತ್ಮವಿದ್ಯಾ ಚೋಕ್ತಾ" ಎಂಬುದಾಗಿ ಹೇಳಿದ್ದರಿಂದಾಗಿ ಮೊದಲನೇ ವಿದ್ಯೆ ವಿಷ್ಣುವಿಷಯಕ, ಎರಡನೇ ವಿದ್ಯೆ ಅಗ್ನಿವಿಷಯಕ ಎಂದೇ ಹೇಳುವುದು ಸೂಕ್ತವಾಗುತ್ತದೆ. ಇನ್ನು "ಯ ಏಷೋಽಂತರಕ್ಷಿಣಿ" (ಛಾಂ.4-15) ಎಂಬ ಅಕ್ಷಿಸ್ಥವಿದ್ಯೆಯು ಆದಿತ್ಯವಿದ್ಯೆಯ ಸಮಾನಾರ್ಥಕವಾಗಿದೆ.

**ಸೂ.ರ.:– न चोपक्रमविरोधः । ह्यायाम्यग्निमितिवदुपक्रमस्योपपत्तेः । आत्मविद्यायाः पृथगुक्तत्वेनास्मद्विद्याया अन्तर्यामिपरत्वायोगात् । तस्मादग्निविषयत्वमेव चक्षुरन्तःस्थविद्याया इति प्राप्ते सूत्रितम् ।**

**ಅನು.:–** ಅಗ್ನಿಗಳು ಅಸ್ಮದ್ವಿದ್ಯಾ ಎಂಬುದಾಗಿ ಹೇಳಿದ್ದರೂ ಸಹ ಅದು ಅಂತರ್ಯಾಮಿಯಾದ ಭಗವಂತನ ಪರವಾಗಿ ಹೇಳಿದ್ದು ಎಂದು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಹಾಗೆ ಅದು ಅಂತರ್ಯಾಮಿಪರವೇ ಆಗಿದ್ದಿದ್ದರೆ ಆತ್ಮವಿದ್ಯಾ ಎಂಬುದಾಗಿ ಮತ್ತೆ ಪ್ರತ್ಯೇಕವಾಗಿ ಹೇಳಬಾರದಿತ್ತು. ಈಗಲಾದರೋ ಅಸ್ಮದ್ವಿದ್ಯಾ ಎಂದು ಹೇಳಿ ಮತ್ತೆ ಆತ್ಮವಿದ್ಯಾ ಎಂಬುದಾಗಿಯೂ ಪ್ರತ್ಯೇಕವಾಗಿ ಹೇಳಿದ್ದರಿಂದ, ಅಸ್ಮದ್ವಿದ್ಯಾ ಎಂದು ಅಗ್ನಿಗಳು ಹೇಳಿದ್ದು ಅದು ಅಂತರ್ಯಾಮಿಪರವಾಗಿಲ್ಲ ಎಂದು ತಿಳಿಯುತ್ತದೆ.

ಆದ್ದರಿಂದ ಯ ಏಷೋಽಂತರಕ್ಷಿಣಿ ಎಂಬುದಾಗಿ ಹೇಳಿದ ಚಕ್ಷುರಂತಃಸ್ಥವಿದ್ಯೆಯು ಅಗ್ನಿವಿಷಯಕವೇ ಆಗಿದೆ. ಈ ರೀತಿಯಾಗಿ ಆಕ್ಷೇಪ ಬಂದರೆ ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವು ಹೊರಡುತ್ತದೆ–

## ॐ श्रुतोपनिषत्कगत्यभिधानाच्च ॐ (१,२.१६)

**ಸೂತ್ರಾರ್ಥ** :- ಶ್ರುತೋಪನಿಷತ್ಕಗತ್ಯಭಿಧಾನಾಚ್ಚ (ಶ್ರುತೋಪನಿಷದಾಂ) = ಈ ವಿದ್ಯೆಯನ್ನು ಕೇಳಿದ - ತಿಳಿಯಲ್ಪಟ್ಟ - ಧ್ಯಾನ (ಉಪಾಸನೆ) ಮಾಡಿದ ಪುರುಷರಿಗೆ (ಕೇನ) = ವಾಯುದೇವರಿಂದ (ಕಯೋಃ) = ಕಾರ್ಯ - ಪರಬ್ರಹ್ಮರ (ಗತೇಃ) = ಪ್ರಾಪ್ತಿಯಾಗುವುದು ಎಂಬುದಾಗಿ "ಸ ಏನಾನ್ಬ್ರಹ್ಮ ಗಮಯತಿ" (ಛಾಂ. 4-15) ಎಂಬ ಶ್ರುತಿಯಲ್ಲಿ (ಅಭಿಧಾನಾಚ್ಚ) ಹೇಳಿದ್ದರಿಂದಲೂ ಸಹ ಚಕ್ಷುರಂತಃಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं च स एनानित्युपसंहारेऽभिधानेनाक्षिस्थविद्याया विष्णुविषयत्वात् । अन्यविद्यया अन्यप्राप्त्ययोगादस्य प्रकरणस्य वैष्णवत्त्वं सिद्धम् ।**

**ಅನು.**:– "ಸ ಏನಾನ್ಬ್ರಹ್ಮ ಗಮಯತಿ" (ಛಾಂ. 4-14) ಎಂಬ ಉಪಸಂಹಾರದಲ್ಲಿ ಯಾರು ಈ ಚಕ್ಷುರಂತಃಸ್ಥವಿದ್ಯೆಯನ್ನು ತಿಳಿದು ಉಪಾಸನೆ ಮಾಡುವರೋ ಅವರನ್ನು ಪರಬ್ರಹ್ಮಲೋಕಕ್ಕೆ ಕೊಂಡೊಯ್ಯುತ್ತಾರೆ ವಾಯುದೇವರು ಎಂಬುದಾಗಿ ಫಲರೂಪವಾಗಿ ಪರಬ್ರಹ್ಮಲೋಕಪ್ರಾಪ್ತಿಯನ್ನು ಹೇಳಿದ್ದಾರೆ.

ಬೇರೆಯವರ ವಿದ್ಯೆಯನ್ನು ಉಪಾಸನೆ ಮಾಡಿದರೆ ಬೇರೆಲೋಕ ಸಿಗುತ್ತದೆ. ಹೊರತು ಪರಬ್ರಹ್ಮಲೋಕಪ್ರಾಪ್ತಿಯಾಗುವುದಿಲ್ಲ. ಪರಬ್ರಹ್ಮಲೋಕ ಪ್ರಾಪ್ತಿಯು ಪರಬ್ರಹ್ಮನ ವಿದ್ಯೆಯಿಂದಲೇ ಸಾಧ್ಯವಾಗುತ್ತದೆ. ಪ್ರಕೃತದಲ್ಲಿ ಫಲರೂಪವಾಗಿ ಪರಬ್ರಹ್ಮಲೋಕ-ಪ್ರಾಪ್ತಿಯಾಗುತ್ತದೆ ಎಂದು ಹೇಳುತ್ತಿದ್ದಾರೆ ಎಂದಮೇಲೆ ಈ ವಿದ್ಯೆಯು ಪರಬ್ರಹ್ಮ (ವಿಷ್ಣು) ವಿಷಯಕವೇ ಆಗಿದೆ ಎಂದು ತಿಳಿದುಬರುತ್ತದೆ.

ಆದ್ದರಿಂದ ಈ ಪ್ರಕರಣವು ವಿಷ್ಣುಪ್ರಕರಣವಾದ್ದರಿಂದ ಪ್ರಕರಣಬಲದಿಂದಾಗಿ ಚಕ್ಷುರಂತಃಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 17

### ಆಕ್ಷೇಪ

**ಸೂ.ರ.:– ननु सोऽहमस्मी(छां.४-१०-५)त्याद्युपदेशस्यान्तर्यामि-विषयत्वकल्पनया विष्णोरक्षिस्थत्वाग्रहणे उपदेशबलेनैवाग्नेरक्षिस्थत्वं किं न स्यादित्यतो बाधकसद्भावादिति समादधत्सूत्रं पठति ।**

**ಅನು.**:- ಸೋऽಹಮಸ್ಮಿ ಮೊದಲಾದ ಉಪದೇಶಕ್ಕೆ ಅಂತರ್ಯಾಮಿ ವಿಷಯಕತ್ವ-ವನ್ನು ಕಲ್ಪಿಸಿ ವಿಷ್ಣುವು ಅಕ್ಷಿಸ್ಥನಾದವನು ಎಂದು ಏಕೆ ಹೇಳಬೇಕು? ಸೋऽಹಮಸ್ಮಿ ಎಂಬುದಾಗಿ ಅಗ್ನಿದೇವರೇ ಉಪದೇಶ ಮಾಡಿದ್ದರಿಂದಾಗಿ, ಉಪದೇಶಬಲದಿಂದಲೇ ಅಗ್ನಿಯೇ ಅಕ್ಷಿಸ್ಥನಾದವನು ಎಂದು ಹೇಳಬಹುದಲ್ಲವೇ?

ಈ ರೀತಿಯಾಗಿ ಆಕ್ಷೇಪ ಬಂದರೆ, ಹಾಗೆ ಹೇಳುವುದಾದರೆ ಬಾಧಕ ಇದೆ ಎಂಬುದಾಗಿ ಬಾಧಕವನ್ನು ತೋರಿಸುವ ಮೂಲಕ ಈ ಆಕ್ಷೇಪಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ:-

**ॐ अनवस्थितेरसम्भवाच्च नेतरः ॐ (१.२.१७)**

**ಸೂತ್ರಾರ್ಥ** :- ಇತರಃ = ಅಗ್ನಿಯು ನ = ಚಕ್ಷುರಂತಃಸ್ಥನಾಗುವುದಿಲ್ಲ, ಕಿಂತು ವಿಷ್ಣುವೇ ಚಕ್ಷುರಂತಸ್ಥನಾಗುತ್ತಾನೆ. ಕುತಃ = ಯಾಕೆ? ಅನವಸ್ಥಿತೇಃ = ಜೀವನಾದ ಅಗ್ನಿಯು ಮತ್ತೊಬ್ಬ ಜೀವನಿಗೆ ನಿಯಾಮಕನಾಗುವುದಾದರೆ, ಅವನೂ (ಅಗ್ನಿಯೂ) ಜೀವನೇ ಆದ್ದರಿಂದ ಅವನಿಗೆ ಮತ್ತೊಬ್ಬ ಜೀವನು ನಿಯಾಮಕವಾಗಬೇಕು, ಅವನಿಗೂ ಮತ್ತೊಬ್ಬ ಜೀವನು ನಿಯಾಮಕನಾಗಬೇಕು, ಈ ರೀತಿಯಾಗಿ ಅನವಸ್ಥಾ ಬರುವುದರಿಂದ ಮತ್ತು ಅಸಂಭವಾಚ್ಚ = ಅಗ್ನಿ ಮೊದಲಾದ ಜೀವರಿಗೆ ಜೀವಾಂತರನಿಯಾಮಕತ್ವವು ಅಸಂಭಾವಿತವೂ ಆದ್ದರಿಂದ.

**ಸೂ.ರ.**:- **एवं चाग्नेरपि जीवत्वेन नियामकत्वासम्भवेन चक्षुर्गतत्व-सम्भावनाविरहात् । अस्तु वा कथञ्चित्सम्भावना । तथाऽपि नासौ चक्षुरन्तरोऽभ्युपगन्तव्यः । अग्नेरपि जीवत्वेन तत्प्रेरणाय जीवान्तरस्य भाव्यत्वात् । तस्याप्येवं तस्याप्येवमित्यनवस्थितेः । तस्माद्विष्णुरेवाक्ष्या-दित्यस्थो दृष्टिगोचरोऽतः स एवानन्दमयस्तज्ज्ञानादेव मोक्ष इति सिद्धम् ।**

**ಅನು.**:- ಅಗ್ನಿಯೂ ಒಬ್ಬ ಜೀವನೇ ಆದ್ದರಿಂದ ಅವನಿಗೆ ನಿಯಾಮಕತ್ವವು ಕೂಡುವುದಿಲ್ಲ- ವಾದ್ದರಿಂದ ಅಗ್ನಿಗೆ ಚಕ್ಷುರಂತಃಸ್ಥಿತತ್ವವು ಸಂಭಾವಿತವಲ್ಲ.

ಅಥವಾ ಅಗ್ನಿಗೆ ನಿಯಾಮಕತ್ವವು ಸಂಭಾವಿತ ಎಂದು ಒಪ್ಪಿದರೂ ಸಹ ಅವನು ಚಕ್ಷುರಂತಃಸ್ಥನಾಗಲು ಸಾಧ್ಯವಿಲ್ಲ. ಯಾಕೆಂದರೆ, ಅಗ್ನಿಯೂ ಒಬ್ಬ ಜೀವನೇ ಆದ್ದರಿಂದ ಅವನನ್ನು ಪ್ರೇರಿಸುವುದಕ್ಕಾಗಿ ಮತ್ತೊಬ್ಬ ಜೀವನನ್ನು ಒಪ್ಪಬೇಕಾಗುತ್ತದೆ. ಆ ಪ್ರೇರಕನಾದ

ಜೀವನೂ ಒಬ್ಬ ಜೀವನೇ ಆದ್ದರಿಂದ ಅವನ ಪ್ರೇರಣೆಗಾಗಿ ಮತ್ತೊಬ್ಬ ಜೀವನನ್ನು ಒಪ್ಪಬೇಕು. ಅವನಿಗೆ ಮತ್ತೊಬ್ಬ ಜೀವನು ಪ್ರೇರಕ, ಅವನಿಗೆ ಇನ್ನೊಬ್ಬ ಜೀವನು ಪ್ರೇರಕ ಎಂಬುದಾಗಿ ಅಂಗೀಕರಿಸುತ್ತಾ ಹೋದರೆ ಅನವಸ್ಥಾ ಬರುತ್ತದೆ.

ಆದ್ದರಿಂದ ಆದಿತ್ಯಸ್ಥನಾದವನು ಚಕ್ಷುರಂತಃಸ್ಥನಾದವನು ವಿಷ್ಣುವೇ ಎಂದು ಹೇಳಬೇಕೇ ಹೊರತು ಅಗ್ನಿ ಮೊದಲಾದವರು ಯಾರೂ ಆಗುವುದಿಲ್ಲ.

ವಿಷ್ಣುವೇ ಆದಿತ್ಯಸ್ಥ, ಅವನೇ ಚಕ್ಷುರಂತಃಸ್ಥ ಎಂದು ಸಿದ್ಧವಾದಮೇಲೆ ಅವನೇ ಆನಂದಮಯನಾಗಬೇಕು, ಅವನ ಜ್ಞಾನದಿಂದಲೇ ಮೋಕ್ಷವಾಗುತ್ತದೆ ಎಂಬುದಾಗಿ ಸಿದ್ಧವಾಗುತ್ತದೆ.

**ಇಲ್ಲಿಗೆ ಅಂತರಾಧಿಕರಣವು ಮುಗಿಯಿತು.**

*ಅಧಿಕರಣ – 5*

# ಅಂತರ್ಯಾಮ್ಯಧಿಕರಣ

## ಸಂಗತಿ

**ಸೂ.ರ.:– अत्रान्तःस्थत्वरूपभावसहितं नियमनक्रियात्मकं लिङ्गं ब्रह्मणि समन्वीयते ।**

**ಅನು.:–** ಅಂತಃಸ್ಥತ್ವರೂಪಭಾವಸಹಿತವಾದ (ಪೃಥಿವ್ಯಾದಿಶರೀರತ್ವಲಿಂಗಸಾಹಿತ್ಯೇನ) ಅನ್ಯತ್ರಪ್ರಸಿದ್ಧವಾದ ನಿಯಮನಕ್ರಿಯಾತ್ಮಕವಾದ ಲಿಂಗವನ್ನು (ಅಂತರ್ಯಾಮಿತ್ವ-ಲಿಂಗವನ್ನು) ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಐದನೇ ಈ ಅಂತರ್ಯಾ-ಮ್ಯಧಿಕರಣದಲ್ಲಿ.

ಅಕ್ಷಿಸ್ಥನಾದ ಪುರುಷನಿಗೆ "ಏತದಮೃತಮಭಯಮ್" ಎಂಬುದಾಗಿ ಅಮೃತತ್ವವನ್ನು ಹೇಳಿದೆ. ಅಮೃತತ್ವವು ಕಾಣ್ವ-ಮಾಧ್ಯಂದಿನ ಶ್ರುತಿಗಳಲ್ಲಿ "ಏಷ ತ ಆತ್ಮಾಂತರ್ಯಾಮ್ಯ-ಮೃತಃ" ಎಂಬುದಾಗಿ ಅಂತರ್ಯಾಮಿಯಾದ ಬೇರೊಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಆ ಅಂತರ್ಯಾಮಿಯಾದವನು ಯಾರು? ಎಂಬುದಾಗಿ ಈ ಅಧಿಕರಣದಲ್ಲಿ ನಿರ್ಣಯಿಸುತ್ತಾರೆ.

## ಪೂರ್ವಪಕ್ಷ

**ಸೂ.ರ.:– ननु प्रकृतिरेवान्तर्यामी । यस्य पृथिवीत्यादिना (बृ. ५-७-३) पृथिव्यादिशरीरत्वव्यपदेशात् । शरीरशब्दस्य स्वरूपेऽपि प्रयोगदर्शनेन तस्य तत्रोपपत्तेः ।**

**ಅನು.:–** "ಏಷ ತ ಆತ್ಮಾಂತರ್ಯಾಮ್ಯಮೃತಃ" (ಬೃ.ಉ. 5-7-3) ಎಂಬುದಾಗಿ ಶ್ರುತವಾಗುತ್ತಿರುವ ಅಂತರ್ಯಾಮಿಯಾದ ವಸ್ತು ಅದು ಪ್ರಕೃತಿಯೇ ಆಗುತ್ತದೆ. "ಯಸ್ಯ ಪೃಥಿವೀ ಶರೀರಂ" (ಬೃ.ಉ. 5-7-3) ಇತ್ಯಾದಿಯಾಗಿ ಅಂತರ್ಯಾಮಿಯಾದದ್ದಕ್ಕೆ ಪೃಥಿವ್ಯಾದಿಶರೀರತ್ವವನ್ನು ಹೇಳಿದ್ದಾರೆ. ಶರೀರಶಬ್ದಕ್ಕೆ ಸ್ವರೂಪ ಎಂಬ ಅರ್ಥದಲ್ಲಿಯೂ ಪ್ರಯೋಗ ಕಂಡಿದ್ದರಿಂದ ಪೃಥಿವ್ಯಾದಿಸ್ವರೂಪತ್ವವು ಪ್ರಕೃತಿಗೆ ಉಪಪನ್ನವಾಗುತ್ತದೆ-ಯಾದ್ದರಿಂದ ಪ್ರಕೃತಿಯೇ ಅಂತರ್ಯಾಮಿಯಾಗುತ್ತದೆ.

**ಸೂ.ರ.:– न च यः पृथिव्यामित्यादिना पृथिव्यादिस्थत्वोक्तिविरोधः । व्याप्तं कार्येषु कारणमिति वचनात् । तस्य तत्रोपपत्तेः ।**

**ಅನು.:–** ಪ್ರಕೃತಿಯು ಅಂತರ್ಯಾಮಿಯಾಗಲು ಹೇಗೆ ಸಾಧ್ಯ? ಏಕೆಂದರೆ – "ಯಃ ಪೃಥಿವ್ಯಾಂ ತಿಷ್ಠನ್" ಎಂಬುದಾಗಿ ಅಂತರ್ಯಾಮಿಯಾದ ವಸ್ತುವಿಗೆ ಪೃಥಿವ್ಯಾದಿಸ್ಥತ್ವವನ್ನು ಹೇಳಿದ್ದಾರೆ. ಪ್ರಕೃತಿಯು ಪೃಥಿವ್ಯಾದಿಸ್ಥವಾಗಲು ಸಾಧ್ಯವಿಲ್ಲವಾದ್ದರಿಂದ ಪ್ರಕೃತಿಗೆ ಅಂತರ್ಯಾಮಿತ್ವವನ್ನು ಹೇಳಿದರೆ ಪೃಥಿವ್ಯಾದಿಸ್ಥತ್ವದ ವಿರೋಧ ಬರುತ್ತದೆಯಲ್ಲವೇ? ಎಂದು ಶಂಕೆ ಬಂದರೆ ಅದು ಸರಿಯಲ್ಲ.

'ವ್ಯಾಪ್ತಂ ಕಾರ್ಯೇಷು ಕಾರಣಮ್' ಎಂಬುದಾಗಿ ಕಾರಣವಾದದ್ದು ಕಾರ್ಯ-ವಾದದ್ದರಲ್ಲಿ ಇರುತ್ತದೆ ಎಂದು ಹೇಳಿದ್ದರಿಂದ, ಕಾರಣವಾದ ಪ್ರಕೃತಿಯು ಕಾರ್ಯವಾದ ಪೃಥಿವ್ಯಾದಿಗಳಲ್ಲಿ ಇರಬಹುದಾಗಿದೆ.

**ಸೂ.ರ.:– न च प्रकृतेरचेतनत्वेन पृथिव्यादिनियामकत्वायोगः । कार्यस्य कारणाधीनत्वेन चेतनप्रकृतेरपि नियामकत्वोपचारोपपत्तेः ।**

**ಅನು.:–** ಪ್ರಕೃತಿಯು ಅಚೇತನವಾದ್ದರಿಂದ ಅದಕ್ಕೆ ಪೃಥಿವ್ಯಾದಿನಿಯಾಮಕತ್ವವು ಹೇಗೆ ಕೂಡುತ್ತದೆ? ಎಂದರೆ, ಕಾರ್ಯವು ಕಾರಣಾಧೀನವಾದ್ದರಿಂದ ಚೇತನಪ್ರಕೃತಿಗೂ ಸಹ ಔಪಚಾರಿಕವಾಗಿ ನಿಯಾಮಕತ್ವವು ಉಪಪನ್ನವಾಗುತ್ತದೆ.

**ಸೂ.ರ.:– न चामृतत्वविरोधः । तस्य विष्णाविवात्रापि योगेनोपपत्तेः ।**

**ಅನು.:–** ಅಂತರ್ಯಾಮಿಯಾದ ವ್ಯಕ್ತಿಗೆ ಅಮೃತತ್ವವನ್ನು ಹೇಳಿದ್ದಾರೆ. ಪ್ರಕೃತಿಗೆ ಅಮೃತತ್ವವು ಹೇಗೆ ಕೂಡುತ್ತದೆ? ಅರ್ಥಾತ್ ಅಮೃತತ್ವವು ವಿಷ್ಣುಲಿಂಗವಾದ್ದರಿಂದ ಅಂತರ್ಯಾಮಿಯಾದವನೂ ವಿಷ್ಣುವೇ ಆಗಬೇಕಲ್ಲವೇ? ಎಂದರೆ, ಅದೂ ಸರಿಯಲ್ಲ. ಅಮೃತತ್ವವೆಂಬ ವಿಷ್ಣುಲಿಂಗ ಇದ್ದರೂ ಸಹ ಅಂತರ್ಯಾಮಿತ್ವವನ್ನು ವಿಷ್ಣುವಿಗೆ ಒಪ್ಪಲು ಬರುವುದಿಲ್ಲ. ಪೃಥಿವ್ಯಾದಿಶರೀರತ್ವರೂಪವಾದ ಅಂತರ್ಯಾಮಿತ್ವವನ್ನು ಯಾವ ರೀತಿ-ಯಿಂದಲೂ ಅವನಿಗೆ ಒಪ್ಪಲು ಬರುವುದಿಲ್ಲ. ವಿಷ್ಣುವಿಗೆ ಪೃಥಿವ್ಯಾದಿಭಿನ್ನತ್ವವನ್ನು ಚಿಚ್ಛರೀರತ್ವವನ್ನು ಒಪ್ಪಿದ್ದರಿಂದ ಪೃಥಿವ್ಯಾದಿಶರೀರತ್ವವನ್ನು ಒಪ್ಪಲು ಬರುವುದಿಲ್ಲ. ಆದ್ದರಿಂದ ಅಮೃತತ್ವವನ್ನು ವಿಷ್ಣುವಿನಲ್ಲಿ ಕಥಂಚಿತ್ ಒಪ್ಪುವಂತೆ ಪ್ರಕೃತಿಗೂ ಯೋಗದಿಂದ ಒಪ್ಪಬಹುದಾಗಿದೆ.

**ಸೂ.ರ.:– तत्तज्जीवानां वैतदन्तर्यामित्वम् । पृथिव्यादिशरीरत्वादेस्तेष्वति सुघटत्वात् । ततश्च प्रकृत्यादेरेवान्तर्यामित्वेन तत्र श्रुतममृतत्वं नाक्षिस्थस्य विष्णुत्वसाधकमिति प्राप्ते सूत्रितम् ।**

**ಅನು.:–** ಅಥವಾ ಈ ಅಂತರ್ಯಾಮಿತ್ವವನ್ನು ಆ ಆ ಜೀವರಾಶಿಗಳಿಗಾದರೂ ಹೇಳಬಹುದು. ಆ ಜೀವರಿಗೆ ಪೃಥಿವ್ಯಾದಿಶರೀರತ್ವವು ಸುಘಟವಾಗುತ್ತದದೆಯಾದ್ದರಿಂದ, ಆ ಆ ಜೀವರೇ ಅಂತರ್ಯಾಮಿಗಳಾಗಬಹುದು.

ಹೀಗೆ ಪ್ರಕೃತ್ಯಾದಿಗಳೇ ಅಂತರ್ಯಾಮಿಯಾಗುವುದರಿಂದ, ಆ ಅಂತರ್ಯಾಮಿ-ಯಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವ ಅಮೃತತ್ವವು ''ಅಕ್ಷಿಸ್ಥನಾದವನು ವಿಷ್ಣುವೇ'' ಎನ್ನುವುದಕ್ಕೆ ಸಾಧಕವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವು ಹೊರಡುತ್ತದೆ–

**ॐ अन्तर्याम्यधिदैवादिषु तद्धर्मव्यपदेशात् ॐ (१.२.१८)**

**ಸೂತ್ರಾರ್ಥ :-** ಅಂತರ್ಯಾಮೀ = ಏಷ ತ ಆತ್ಮಾಂತರ್ಯಾಮೀ ಎಂಬುದಾಗಿ ಪ್ರತ್ಯುಕ್ತನಾಗುತ್ತಿರುವ ಅಂತರ್ಯಾಮಿಯಾದ ವ್ಯಕ್ತಿ ವಿಷ್ಣುರೇವ ನ ಪ್ರಧಾನಾದಿ = ವಿಷ್ಣುವೇ ಆಗುತ್ತಾನೆ. ಹೊರತು ಪ್ರಕೃತ್ಯಾದಿಗಳು ಆಗುವುದಿಲ್ಲ. ಕುತಃ = ಯಾಕೆ? ಅಧಿದೈವಾದಿಷು

= ಅಧಿದೈವ - ಅಧ್ಯಾತ್ಮ - ಅಧಿಭೂತಾದಿ ಪ್ರಕರಣಗಳಲ್ಲಿ ತದ್ಧರ್ಮವ್ಯಪದೇಶಾತ್ = ಅಂತರ್ಯಾಮಿಯಾದವನ ವಿಷಯದಲ್ಲಿ ಯಂ ಪೃಥಿವೀ ನ ವೇದ (ಬೃ.ಉ. 5-7-3) ಎಂಬುದಾಗಿ ಶ್ರುತಿಯಲ್ಲಿ ಅವಿದಿತತ್ವ ಮೊದಲಾದ ವಿಷ್ಣುಧರ್ಮಗಳನ್ನು ಹೇಳಿದ್ದರಿಂದ.

### ಸಿದ್ಧಾಂತ

**ಸೂ.ರ.:- एवं च पृथिव्यादिदेवताऽविदितत्वान्तराख्यधर्म-व्यपदेशादन्तर्यामी विष्णुरेवेति सिद्धम् ।**

**ಅನು.:-** ಈ ಅಂತರ್ಯಾಮಿಯಾದ ವ್ಯಕ್ತಿಯ ವಿಷಯದಲ್ಲಿ ''ಯಂ ಪೃಥಿವೀ ನ ವೇದ'' ''ಯಃ ಪೃಥಿವೀಮಂತರೋ ಯಮಯತಿ'' ಎಂಬುದಾಗಿ ಪೃಥಿವ್ಯಾದಿದೇವತಾ ಅವಿದಿತತ್ವ - ತದಂತರತ್ವಾದಿಧರ್ಮಗಳು ಶ್ರುತವಾಗುತ್ತಿವೆ. ಆ ಪೃಥಿವ್ಯಾದಿದೇವತಾ ಅವಿದಿತತ್ವ - ತದಂತರತ್ವಾದಿಧರ್ಮಗಳು ವಿಷ್ಣುವಿನ ಧರ್ಮಗಳೇ ಆಗಿವೆ ಎಂಬುದಾಗಿ ''ನ ತೇ ವಿಷ್ಣೋ ಜಾಯಮಾನೋ ನ ಜಾತಃ'' (ಋ.ಸಂ. 7-99-2) ''ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽವಿಜ್ಞಾತೋಽನಾದಿಷ್ಟಃ ಸರ್ವೇಷಾಂ ಭೂತಾನಾಮಂತರಪುರುಷಃ'' (ಐ.ಆ. 3-2-4) ಇತ್ಯಾದಿ ಶ್ರುತಿಸಿದ್ಧವಾಗಿವೆ. ಆದ್ದರಿಂದ ಅವಿದಿತತ್ವ - ಅಂತರತ್ವ ಮೊದಲಾದ ವಿಷ್ಣುವಿನ ಧರ್ಮಗಳು ಶ್ರುತವಾಗುತ್ತಿರುವುದರಿಂದ ಅಂತರ್ಯಾಮಿಯಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 19

### ಸಂಗತಿ

**ಸೂ.ರ.:- एवं निरवकाशलिङ्गेन विष्णोरन्तर्यामित्वं समर्थ्य प्रकृत्यादेरन्तर्यामित्वं तत्प्रकृतिजीवसाधारणं युक्त्या पराकुर्वत्सूत्रमाह ।**

**ಅನು.:-** ಈ ರೀತಿಯಾಗಿ ಪೃಥಿವ್ಯಾದಿದೇವತಾ ಅವಿದಿತತ್ವ - ತದಂತರತ್ವ ಮೊದಲಾದ ನಿರವಕಾಶಲಿಂಗದಿಂದ ವಿಷ್ಣುವೇ ಅಂತರ್ಯಾಮಿಯಾದವನು ಎಂದು ಸಮರ್ಥಿಸಿ, ಪ್ರಕೃತದಲ್ಲಿ ಪ್ರಕೃತಿ ಹಾಗೂ ಜೀವ ಇಬ್ಬರಲ್ಲಿಯೂ ಸಾಧಾರಣವಾದ ಅಂತರ್ಯಾಮಿತ್ವವನ್ನು ಪ್ರಕೃತ್ಯಾದಿಗಳಿಗೆ ಯುಕ್ತಿಯಿಂದ ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ :-

**ॐ न च स्मार्तमतद्धर्माभिलापात् ॐ (१.२.१९)**

**ಸೂತ್ರಾರ್ಥ :-** ಸ್ಮಾರ್ತಂ ಚ = ಕಾಪಿಲಸ್ಮೃತಿಯಲ್ಲಿ ಪ್ರತಿಪಾದ್ಯವಾಗಿರುವ ಪ್ರಧಾನ

ಹಾಗೂ ಜೀವ ಇಬ್ಬರೂ ನ = ಅಂತರ್ಯಾಮಿ ಆಗುವುದಿಲ್ಲ. ಕುತಃ? = ಯಾಕೆ? ಅತದ್ಧರ್ಮಾಭಿಲಾಪಾತ್ = ತದ್ಧರ್ಮಾಣಾಂ ಪ್ರಕೃತಿಯ ಧರ್ಮವಾದ ತ್ರಿಗುಣತ್ವ, ಜೀವರ ಧರ್ಮವಾದ ಸಂಸಾರಿತ್ವ ಮೊದಲಾದ ಧರ್ಮಗಳನ್ನು ಅನಭಿಲಾಪಾತ್ ಹೇಳಿಲ್ಲವಾದ್ದರಿಂದ.

**ಸೂ.ರ.:– एवं च विष्णवसाधारणपृथिव्याद्यविदितत्वादि-धर्मोपदेशवत्कपिलस्मृत्युक्तप्रकृतिप्रधानजीवासाधारणोपादानत्वजडत्व-त्रिगुणत्वसंसारित्वादिधर्माणामनुक्तत्वादन्तर्यामी विष्णुरेवेति सिद्धम् ।**

**ಅನು.:–** ವಿಷ್ಣುವಿನ ಅಸಾಧಾರಣಧರ್ಮವಾದ ಪೃಥಿವ್ಯಾದ್ಯವಿದಿತತ್ವ - ತದಂತರತ್ವ ಮೊದಲಾದ ಧರ್ಮಗಳನ್ನು ಹೇಳಿದಂತೆ, ಕಪಿಲಸ್ಮೃತ್ಯುಕ್ತವಾದ ಪ್ರಕೃತಿ - ಪ್ರಧಾನ - ಜೀವರಲ್ಲಿ ಅಸಾಧಾರಣವಾದ ಉಪದಾನತ್ವ - ಜಡತ್ವ - ತ್ರಿಗುಣತ್ವ - ಸಂಸಾರಿತ್ವ ಮೊದಲಾದ ಧರ್ಮಗಳನ್ನು ಅಂತರ್ಯಾಮಿಯ ವಿಷಯದಲ್ಲಿ ಹೇಳಿಲ್ಲವಾದ್ದರಿಂದ "ಏಷ ತ ಆತ್ಮಾಂತರ್ಯಾಮ್ಯಮೃತಃ" (ಬೃ.ಉ. 5-7-3) ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದ ಅಂತರ್ಯಾಮಿಯಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ - 20

**ಸಂಗತಿ**

**ಸೂ.ರ.:– जीवस्यान्तर्यामित्वं तत्साधकाभावेन निरस्तमपि पुनर्बाधकाख्यविशेषयुक्त्या निराकुर्वत्सूत्रमुपन्यस्यति ।**

**ಅನು.:–** ಜೀವನ ಅಸಾಧಾರಣವಾದ ಸಂಸಾರಿತ್ವ ಮೊದಲಾದ ಧರ್ಮಗಳನ್ನು ಹೇಳಿಲ್ಲವಾದ್ದರಿಂದ (ಜೀವನಿಗೆ ಅಂತರ್ಯಾಮಿತ್ವಸಾಧಕವಾದದ್ದು ಇಲ್ಲವಾದ್ದರಿಂದ) ಜೀವನು ಅಂತರ್ಯಾಮಿ ಆಗುವುದಿಲ್ಲ ಎಂಬುದಾಗಿ ಜೀವನಿಗೆ ಅಂತರ್ಯಾಮಿತ್ವವು ನಿರಾಕೃತವಾಗಿದ್ದರೂ ಸಹ, ಜೀವನು ಅಂತರ್ಯಾಮಿ ಎನ್ನುವುದಾದರೆ ಬಾಧಕವೂ ಇದೆ ಎಂಬುದಾಗಿ ವಿಶೇಷ ಬಾಧಕವನ್ನು ಹೇಳುವ ಮೂಲಕವಾಗಿಯೂ ಸಹ ಮತ್ತೆ ಜೀವನಿಗೆ ಅಂತರ್ಯಾಮಿತ್ವವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ -

**ॐ शारीरश्चोभयेऽपि हि भेदेनैनमधीयते ॐ (१.२.२०)**

**ಸೂತ್ರಾರ್ಥ :-** ಹಿ = ಯಾವ ಕಾರಣ ಉಭಯೇ = ಮಾಧ್ಯಂದಿನರು ಹಾಗೂ ಕಾಣ್ವರು "ಆತ್ಮನೋಽಂತರಃ" (ಬೃ. 5-7-22) "ವಿಜ್ಞಾನಾದಂತರಃ" (ಬೃ. 5-7-22)

ಎಂಬುದಾಗಿ ಏನಂ = ಜೀವನನ್ನು ಭೇದೇನ = ಅಂತರ್ಯಾಮಿಯಾದವನಿಂದ ಭಿನ್ನನಾಗಿ ಅಧೀಯತೇ = ಪಠಿಸುತ್ತಾರೆಯೋ ಆ ಕಾರಣದಿಂದಲೂ ಸಹ ಶಾರೀರಶ್ಚ = ಜೀವನೂ ಸಹ ನ ಅಂತರ್ಯಾಮೀ = ಅಂತರ್ಯಾಮಿಯಾಗುವುದಿಲ್ಲ.

**ಸೂ.ರ.:– एवं चोभयशाखिभिरात्मानमन्तर इति विज्ञानादन्तर इति च जीवस्य ब्रह्मणो भेदेनोपदेशादन्तर्यामी विष्णुरेवेति सिद्धम् ।**

**ಅನು.:**– ಮಾಧ್ಯಂದಿನರು "ಆತ್ಮನೋಽಂತರಃ" "ಯ ಆತ್ಮನಿ ತಿಷ್ಠನ್ನಾತ್ಮನೋಽ-ಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ" (ಬೃ. ಮಾಧ್ಯಂದಿನಪಾಠಃ) ಎಂಬುದಾಗಿ, ಕಾಣ್ವರು "ವಿಜ್ಞಾನಾದಂತರಃ" "ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಮ್" (ಬೃ. 5-7-22) ಎಂಬುದಾಗಿ ಜೀವನನ್ನು ಅಂತರ್ಯಾಮಿಯಾದ ಬ್ರಹ್ಮನಿಂದ ಭಿನ್ನನನ್ನಾಗಿ ಉಪದೇಶಿಸಿದ್ದರಿಂದ "ಏಷ ತ ಆತ್ಮಾಂತರ್ಯಾಮ್ಯಮೃತಃ" (ಬೃ.ಉ. 5-7-3) ಎಂಬ ಶ್ರುತಿಯಲ್ಲಿ ಅಂತರ್ಯಾಮಿ-ಯಾಗಿ ಪ್ರತಿಪಾದ್ಯನಾಗುತ್ತಿರುವ ವ್ಯಕ್ತಿ ಜೀವ ಅಲ್ಲ ಕಿಂತು ವಿಷ್ಣುವೇ ಆಗುತ್ತಾನೆ ಎಂಬುದಾಗಿ ಸಿದ್ಧವಾಗುತ್ತದೆ.

**ಅಂತರ್ಯಾಮ್ಯಧಿಕರಣವು ಮುಗಿಯಿತು.**

ಅಧಿಕರಣ – 6

# ಅದೃಶ್ಯತ್ವಾಧಿಕರಣ

## ಸಂಗತಿ

**ಸೂ.ರ.:– अत्र अदृश्यत्वाद्यभावाख्यलिङ्गं ब्रह्मणि समन्वीयते ।**

**ಅನು.:–** ಅಕ್ಷರಶಬ್ದಸಾಹಿತ್ಯೇನ ಅನ್ಯತ್ರಪ್ರಸಿದ್ಧವಾದ ಅದೃಶ್ಯತ್ವಾದಿ ಲಿಂಗಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಿ ತೋರಿಸುತ್ತಾರೆ ಆರನೇ ಈ ಅದೃಶ್ಯತ್ವಾಧಿಕರಣದಲ್ಲಿ.

ಅದೃಶ್ಯೇಽನಾತ್ಮ್ಯೇ ಎಂಬುದಾಗಿ ಆನಂದಮಯನಾದ ವ್ಯಕ್ತಿಗೆ ಅದೃಶ್ಯತ್ವಾದಿ ಗುಣಗಳು ಹೇಳಲ್ಪಟ್ಟಿವೆ. ಆ ಅದೃಶ್ಯತ್ವಾದಿ ಗುಣಗಳು ಆಥರ್ವಣದಲ್ಲಿ "ಯತ್ತದದ್ರೇಶ್ಯ-ಮಗ್ರಾಹ್ಯಮ್....." ಎಂಬುದಾಗಿ ಬೇರೊಬ್ಬ ವ್ಯಕ್ತಿಗೆ ಶ್ರುತವಾಗುತ್ತಿವೆ. ಇಲ್ಲಿ ಅದೃಶ್ಯತ್ವಾದಿ ಗುಣಗಳುಳ್ಳ ವ್ಯಕ್ತಿ ವಿಷ್ಣು ಆಗದಿದ್ದರೆ ಹಿಂದಿನ ಆನಂದಮಯತ್ವವೂ ಅವನಿಗೆ ಕೂಡುವುದಿಲ್ಲ. ಹಾಗಾಗಿ ಆಥರ್ವಣದಲ್ಲಿ ಶ್ರುತನಾಗುತ್ತಿರುವ ಅದೃಶ್ಯತ್ವಾದಿ ಗುಣಗಳುಳ್ಳ ವ್ಯಕ್ತಿ ಯಾರು? ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु यत्तदद्रेश्यमि(मुं.१-१-६)त्युक्तादृश्यत्वादिगुणको न विष्णुः किन्तु जडप्रकृतिः । अक्षरात्सम्भवतीहेति (मुं.१-१-७) अक्षरशब्दश्रवणात् । न चाक्षरशब्दो विष्णावपि सावकाशः । तत्परतः पराभिधानात् । न च विष्णोः परोऽस्ति । पृथिव्यादिदृष्टान्ते नोपादानतया जगत्कारणत्वाभिधानाच्च ।**

**ಅನುವಾದ :–**

"यत्तदद्रेश्यमग्राह्यमगोत्रमवर्णमचक्षुःश्रोत्रं तदपाणिपादम् ।
नित्यं विभुं सर्वगतं सुसूक्ष्मं तदव्ययं यद्भूतयोनिं परिपश्यन्ति धीराः ॥"

(मुं.उ. १-१-६)

ಎಂಬುದಾಗಿ ಅದೃಶ್ಯತ್ವಾದಿ ಗುಣಗಳುಳ್ಳವನಾಗಿ ಶ್ರುತನಾಗುತ್ತಿರುವ ವ್ಯಕ್ತಿ ವಿಷ್ಣು ಅಲ್ಲ. ಕಿಂತು ಜಡಪ್ರಕೃತಿಯೇ ಆಗುತ್ತದೆ. ಯಾಕೆ?

ಕಾರಣ 1 : ''ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾ-ಮೋಷಧಯಃ ಸಂಭವಂತಿ । ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಽಕ್ಷರಾ-ತ್ಸಂಭವತೀಹ ವಿಶ್ವಂ'' (ಮುಂ.ಉ. 1-1-7)

ಎಂಬುದಾಗಿ ಅದೃಶ್ಯತ್ವಾದಿಗುಣಕನಾದ ವ್ಯಕ್ತಿಯ ವಿಷಯದಲ್ಲಿ ಅಕ್ಷರಶಬ್ದವು ಶ್ರುತವಾಗುತ್ತಿದೆ. ಈ ಅಕ್ಷರಶಬ್ದವಾದರೂ ಜಡಪ್ರಕೃತಿಗೆ ವಾಚಕವಾಗಿದೆ. ಅಕ್ಷರಶಬ್ದವು ವಿಷ್ಣುವಿನಲ್ಲಿಯೂ ಪ್ರವೃತ್ತವಾಗಬಹುದಾದ್ದರಿಂದ ಸಾವಕಾಶವಾಗಿದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಏಕೆಂದರೆ ಅಲ್ಲಿ ಮುಂದಿನ ವಾಕ್ಯದಲ್ಲಿ

**ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥**

ಎಂಬುದಾಗಿ ಅಕ್ಷರಶಬ್ದವಾಚ್ಯವಾದದ್ದಕ್ಕಿಂತಲೂ ಪರನಾದವನು ಇದ್ದಾನೆ ಎಂದು ಹೇಳುವುದುಂಟು. ಪ್ರಕೃತ ವಿಷ್ಣುವು ಅಕ್ಷರಶಬ್ದವಾಚ್ಯನಾಗಿಬಿಟ್ಟರೆ ಅವನಿಗಿಂತಲೂ ಪರನಾದ ವ್ಯಕ್ತಿ ಇರಬೇಕಾಗುತ್ತದೆ. ಆದರೆ ಅದು ಅಸಂಭಾವಿತವಾಗಿದೆ. ಹಾಗಾಗಿ ಅಕ್ಷರಾತ್ ಪರತಃ ಪರತ್ವಯುಕ್ತಿಯಿಂದಾಗಿ ಅಕ್ಷರಶಬ್ದವಾಚ್ಯನಾದವನು ವಿಷ್ಣು ಅಲ್ಲ. ಕಿಂತು ಜಡಪ್ರಕೃತಿಯೇ ಎಂದು ತಿಳಿಯುತ್ತದೆ.

ಕಾರಣ 2 : ಮತ್ತು ಪೃಥಿವ್ಯಾದಿದೃಷ್ಟಾಂತಗಳಿಂದ ಉಪಾದಾನತಯಾ ಜಗತ್ಕಾರಣತ್ವ-ವನ್ನು ಹೇಳಿದ್ದಾರೆ. ಈ ಜಗದುಪಾದಾನಕಾರಣತ್ವವು ಜಡಪ್ರಕೃತಿಗೆ ಕೂಡುತ್ತದೆಯೇ ಹೊರತು ವಿಷ್ಣುವಿಗೆ ಕೂಡುವುದಿಲ್ಲ. ಆದ್ದರಿಂದಲೂ ಅಕ್ಷರಶಬ್ದವಾಚ್ಯವಾದದ್ದು ಜಡಪ್ರಕೃತಿಯೇ ಆಗುತ್ತದೆ. ಹೀಗೆ ಅಕ್ಷರಶಬ್ದವು ಶ್ರುತವಾಗುತ್ತಿರುವುದರಿಂದ ಅದೃಶ್ಯತ್ವಾದಿಗುಣಗಳುಳ್ಳದ್ದು ಜಡಪ್ರಕೃತಿಯೇ ಆಗುತ್ತದೆ.

**ಸೂ.ರ.:– चित्प्रकृतेर्वैतदद्दश्यत्वादिकम् । तस्यामक्षरशब्दस्य कूटस्थ इति (भ.गी. १५-१६) स्मृतिसिद्धत्वात् । विकारित्वेन जगत्काणत्व-वचनं विकाराभिमानित्वाद्युज्यते । अक्षरात्परत (मुं.२-१-२) इत्येतदपि परतोऽक्षरादिति सामानाधिकरण्येनोपपद्यते ।**

**ಅನು.:–** ಅಥವಾ ಚಿತ್ಪ್ರಕೃತಿಯಾದರೂ ( ಲಕ್ಷ್ಮೀದೇವಿಯಾದರೂ) ಅದೃಶ್ಯತ್ವಾದಿ-ಗುಣಕವಾಗಬಹುದು. ಆ ಚಿತ್ಪ್ರಕೃತಿಗೆ "ಕೂಟಸ್ಥೋಽಕ್ಷರ ಉಚ್ಯತೇ" ಎಂದು ಹೇಳಿದ್ದರಿಂದ ಅಕ್ಷರಶಬ್ದವಾಚ್ಯತ್ವವೂ ( ಉಪಪನ್ನವಾಗುತ್ತದೆ) ಸ್ಮೃತಿಸಿದ್ಧವಾಗಿದೆ.

ಅವಳು ವಿಕಾರಾಭಿಮಾನಿನಿಯಾದ್ದರಿಂದ ಉಪಾದಾನತಯಾ ಜಗತ್ಕಾರಣತ್ವ-ವಚನವೂ ಉಪಪನ್ನವಾಗುತ್ತದೆ.

ಮತ್ತು ಅವಳು ಬ್ರಹ್ಮಾದಿಗಳಿಗಿಂತಲೂ ಪರಳಾದದ್ದರಿಂದ ಪರಾತ್ ಅಕ್ಷರಾತ್ = ಬ್ರಹ್ಮಾದಿಗಳಿಗಿಂತ ಪರಳಾದ ಚಿತ್ಪ್ರಕೃತಿಗಿಂತಲೂ ಪರಃ = ಪರನಾದವನು ವಿಷ್ಣು ಎಂಬುದಾಗಿ ಸಾಮಾನಾಧಿಕರಣ್ಯೇನ ಅನ್ವಯವನ್ನೂ ಮಾಡಬಹುದಾಗಿದೆ. ಆದ್ದರಿಂದ ಚಿತ್ಪ್ರಕೃತಿಯಾದ ಮಹಾಲಕ್ಷ್ಮೀದೇವಿಯಾದರೂ ಅದೃಶ್ಯತ್ವಾದಿಗುಣಕಳಾಗಬಹುದಾಗಿದೆ.

**ಸೂ.ರ.:– हिरण्यगर्भस्य वैतदद्दश्यत्वादिकम् । स ब्रह्मविद्यामित्यादि (मुं.उ.१-१-१) ब्रह्मशब्दात् ।**

**ಅನು.:–** ಅಥವಾ ಹಿರಣ್ಯಗರ್ಭನಾದರೂ ಈ ಅದೃಶ್ಯತ್ವಾದಿಗುಣಕನಾಗಬಹುದು. ಯಾಕೆ? "ಸ ಬ್ರಹ್ಮವಿದ್ಯಾಮ್..." (ಮುಂ.ಉ. 1-1-1) ಎಂಬುದಾಗಿ ಬ್ರಹ್ಮಶಬ್ದವು ಶ್ರುತವಾಗಿದೆ. ಬ್ರಹ್ಮಶಬ್ದವು ಹಿರಣ್ಯಗರ್ಭನಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಹಿರಣ್ಯಗರ್ಭನಾದರೂ ಅದೃಶ್ಯತ್ವಾದಿಗುಣಕನಾಗಬಹುದು.

**ಸೂ.ರ.:– रुद्रस्य वैतदद्दश्यत्वादिकम् । कर्तारमीशामि (मुं.उ.३-१-३) तीशशब्दश्रवणादिति प्राप्ते सूत्रितम् ।**

**ಅನು.:–** ಅಥವಾ ರುದ್ರದೇವರಾದರೂ ಈ ಅದೃಶ್ಯತ್ವಾದಿಗುಣಕರಾಗಬಹುದು. ಯಾಕೆ? "ಕರ್ತಾರಮೀಶಮ್..." (ಮುಂ.ಉ. 3-1-3) ಎಂಬುದಾಗಿ ಈಶಶಬ್ದವು ಶ್ರುತವಾಗುತ್ತಿದೆ. ಈಶಶಬ್ದವಾದರೂ ರುದ್ರದೇವರಲ್ಲಿಯೇ ಪ್ರಸಿದ್ಧವಾಗಿದೆ. ಆದ್ದರಿಂದ ರುದ್ರದೇವರಾದರೂ ಅದೃಶ್ಯತ್ವಾದಿಗುಣಕರಾಗಬಹುದು.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳಲು ಸೂತ್ರವು ಪ್ರವೃತ್ತವಾಗುತ್ತದೆ–

**ॐ अद्दश्यत्वादिगुणको धर्मोक्तेः ॐ (१.२.२१)**

**ಸೂತ್ರಾರ್ಥ :-** ಅದೃಶ್ಯತ್ವಾದಿಗುಣಕಃ = "ಯತ್ತದದ್ರೇಶ್ಯಮ್" ಎಂದು ಶ್ರುತಿಯಲ್ಲಿ

ಶ್ರುತನಾಗುತ್ತಿರುವ ಅದೃಶ್ಯತ್ವಾದಿ ಧರ್ಮವಿಶಿಷ್ಟನಾದ ಅಕ್ಷರಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ. ಹೊರತು ಪ್ರಕೃತ್ಯಾದಿಗಳು ಆಗುವುದಿಲ್ಲ. ಕುತಃ = ಯಾಕೆ? ಧರ್ಮೋಕ್ತೇಃ = ಋಗಾದಿ ಪರವಿದ್ಯಾವಿಷಯತ್ವರೂಪವಾದ ವಿಷ್ಣುವಿನ ಧರ್ಮವು "ಯಯಾ" ಎಂಬ ಶ್ರುತಿಯಿಂದ ಶ್ರುತವಾಗುತ್ತಿರುವುದರಿಂದ.

## ಸಿದ್ಧಾಂತ

**ಸೂ.ರ.:– एवं चाथ परा यये(मुं.१-१-५)त्यदृश्यत्वादिगुणकस्य परविद्या-विषयत्वाभिधानाददृश्यत्वादिगुणको विष्णुरेवेति सिद्धं ।**

**ಅನು.:–** ಅದೃಶ್ಯತ್ವಾದಿಗುಣಗಳುಳ್ಳ ವ್ಯಕ್ತಿಗೆ

**"तत्कर्म हरितोषं यत्सा विद्या तन्मतिर्यया ।" "अथ द्वे वाव विद्ये वेदितव्ये परा चैवापरा च । तत्र ये वेदा यान्यङ्गानि यान्युपाङ्गानि यानि प्रत्यङ्गानि साऽपरा । अथ परा यया स हरिर्वेदितव्यो योऽसावदृश्यो निर्गुणः परः परमात्मा"** (मुं.उ. १-१-५)

ಎಂಬುದಾಗಿ ಋಗಾದಿ ಪರವಿದ್ಯಾವಿಷಯತ್ವವನ್ನು ಹೇಳುತ್ತಿದ್ದಾರೆ. ಈ ಋಗಾದಿ ಪರವಿದ್ಯಾವಿಷಯತ್ವವು ಪ್ರಕೃತಿ – ಬ್ರಹ್ಮ – ಶಿವಾದಿಗಳಿಗೆ ಉಪಪನ್ನವಾಗುವುದಿಲ್ಲ. ಅದು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆ. ಆದ್ದರಿಂದ ಅದು ವಿಷ್ಣುವಿನ ಅಸಾಧಾರಣ-ಧರ್ಮವಾಗಿದೆ.

ಇಂತಹ ಋಗಾದಿ ಪರವಿದ್ಯಾವಿಷಯತ್ವ ಎಂಬ ವಿಷ್ಣುವಿನ ಅಸಾಧಾರಣಧರ್ಮವು ಶ್ರುತವಾಗುತ್ತಿರುವುದರಿಂದ ಅದೃಶ್ಯತ್ವಾದಿಧರ್ಮವಿಶಿಷ್ಟ ಅಕ್ಷರಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 22

## ಸಂಗತಿ

**ಸೂ.ರ.:– ननु विष्णुप्रापकपरविद्याविषयत्ववज्जडप्रकृतिविरिञ्चरुद्र-प्रापकानामपि भावात्त एवादृशत्वादिगुणकाः किं न स्युरित्यतो विशेष-युक्त्या पराकुर्वत्सूत्रं पठति ।**

**ಅನು.:–** ವಿಷ್ಣುಪ್ರಾಪ್ರಕವಾದ ಪರವಿದ್ಯಾವಿಷಯತ್ವವು ಶ್ರುತವಾಗುತ್ತಿರುವಂತೆ ಜಡಪ್ರಕೃತಿ - ಬ್ರಹ್ಮ-ರುದ್ರ ಪ್ರಾಪಕವಾದ ಧರ್ಮಗಳೂ ಶ್ರುತವಾಗುತ್ತಿರುವುದರಿಂದ ಆ ಜಡಪ್ರಕೃತಿ - ಬ್ರಹ್ಮ-ರುದ್ರರೇ ಯಾಕೆ ಅದೃಶ್ಯತ್ವಾದಿಗುಣಕರಾಗಬಾರದು? ಎಂಬುದಾಗಿ ಶಂಕೆ ಬಂದರೆ, ಈ ಶಂಕೆಗೆ ಉತ್ತರ ನೀಡಿ ನಿರಾಕರಣೆ ಮಾಡಿದ್ದರೂ ಸಹ ವಿಶೇಷಯುಕ್ತಿಯಿಂದಲೂ ಸಹ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ विशेषणभेदव्यपदेशाभ्यां च नेतरौ ॐ (१.२.२२)**

**ಸೂತ್ರಾರ್ಥ :-** ಇತರೌ ಚ = ಎರಡು ಪ್ರಕೃತಿಗಳು (ಚಿತ್ಪ್ರಕೃತಿ - ಜಡಪ್ರಕೃತಿಗಳು) ಹಾಗೂ ಬ್ರಹ್ಮ- ರುದ್ರರು ನಾದೃಶ್ಯತ್ವಾದಿಗುಣಕೌ = ಅದೃಶ್ಯತ್ವಾದಿಗುಣಗಳುಳ್ಳವರಾಗಿಲ್ಲ, ಕುತಃ? = ಯಾಕೆ? ವಿಶೇಷಣಭೇದವ್ಯಪದೇಶಾಭ್ಯಾಂ = ''ಯಃ ಸರ್ವಜ್ಞಃ'' (ಮುಂ. 1-1-9) ಎಂಬುದಾಗಿ ಸಾರ್ವಜ್ಞ್ಯಾದಿ ವಿಶೇಷಣ ನೀಡಿದ್ದರಿಂದ ಎರಡು ಪ್ರಕೃತಿಗಳು ಅದೃಶ್ಯತ್ವಾದಿಗುಣಕರಲ್ಲ, 'ತಸ್ಮಾದಿತತ್' (ಮುಂ.1.1.9) ಎಂಬುದಾಗಿ ಅದೃಶ್ಯತ್ವಾದಿಗುಣಕನಾದ ಅಕ್ಷರಪುರುಷನಿಂದ ಬ್ರಹ್ಮ-ರುದ್ರರಿಗೆ ಭೇದ ಹೇಳಿದ್ದರಿಂದ ಬ್ರಹ್ಮ-ರುದ್ರರೂ ಅದೃಶ್ಯತ್ವಾದಿಗುಣಕರಾಗುವುದಿಲ್ಲ.

**ಸೂ.ರ.:– एवं च जडप्रकृतित्वविरोधिसार्वज्ञ्यादिविशेषणस्य तस्मादेतदिति विरिञ्चत्वविरोधि जुष्टं यदा पश्यत्यन्यमिति (मुं.३-१-२) रुद्रत्वविरोधि भेदव्यपदेशस्य चाभावेनासम्भवात् ।**

**ಅನು.:–** 1) ''ತಪಸಾ ಚೀಯತೇ ಬ್ರಹ್ಮ'' ಎಂಬುದಾಗಿ ಹೇಳಿದಾಗ ಅಕ್ಷರಪುರುಷನಾದ ಬ್ರಹ್ಮನಿಗೆ ಅಜ್ಞಾನವಿದೆ ಎಂದು ಅನ್ಯಥಾಪ್ರತೀತಿ ಬಂದಾಗ ಅದನ್ನು ನಿರಾಕರಿಸುವುದಕ್ಕಾಗಿ ''ಯಸ್ಯ ಜ್ಞಾನಮಯಂ ತಪಃ'' (ಮುಂ.ಉ. 1-1-9) ಎಂದು ಜ್ಞಾನಮಯತ್ವವನ್ನು ಉತ್ತರವಾಗಿ ಹೇಳಿದೆ. ಆ ಜ್ಞಾನಮಯತ್ವವಿಷಯದಲ್ಲಿಯೇ ಆಶಂಕೆ ಬಂದಾಗ ಅದಕ್ಕೆ ಹೇತುವಾಗಿ ಅದೃಶ್ಯತ್ವಾದಿಗುಣಕನಾದ ವಿಷ್ಣುವಿಗೆ ''ಯಃ ಸರ್ವಜ್ಞಃ ಸರ್ವವಿತ್'' (ಮುಂ.ಉ. 1-1-9) ಎಂಬುದಾಗಿ ಸಾರ್ವಜ್ಞವಿಶೇಷಣವನ್ನು ಹೇಳಿದ್ದಾರೆ. ಈ ಸಾರ್ವಜ್ಞ್ಯವಿಶೇಷಣವು ಎರಡು ಪ್ರಕೃತಿಗಳಿಗೂ ಸಂಭಾವಿತವಾಗದ ಕಾರಣ (ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ) ಪ್ರಕೃತಿದ್ವಯಗಳು ಅದೃಶ್ಯತ್ವಾದಿಗುಣಕರಾಗುವುದಿಲ್ಲ.

2) ಮತ್ತು ''ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ'' (ಮುಂ. 1-1-9) ''ತಸ್ಮಾತ್ = ಅಕ್ಷರಪುರುಷನಾದ ವಿಷ್ಣುವಿನಿಂದ ಏತದ್ ಬ್ರಹ್ಮ =

ಚತುರ್ಮುಖಬ್ರಹ್ಮನು ಜಾಯತೇ = ಹುಟ್ಟುತ್ತಾನೆ' ಎಂಬುದಾಗಿ ಚತುರ್ಮುಖಬ್ರಹ್ಮನಿಗೆ ಅಕ್ಷರಜನ್ಯತ್ವವನ್ನು ಹೇಳಿದ್ದರಿಂದ ಚತುರ್ಮುಖಬ್ರಹ್ಮನೂ ಅದೃಶ್ಯತ್ವಾದಿಗುಣಕನಾಗುವುದಿಲ್ಲ.

3) ಮತ್ತು "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ" (ಮುಂ.ಉ. 3-1-2) ಅನ್ಯಂ ಈಶಂ ಎಂಬುದಾಗಿ ಅಕ್ಷರಪುರುಷನಿಗೆ ಪ್ರಸಿದ್ಧ ಈಶನಿಂದ ಭೇದವನ್ನು ಹೇಳಿದ್ದರಿಂದ ರುದ್ರನೂ ಅದೃಶ್ಯತ್ವಾದಿ ಗುಣಕನಾಗುವುದಿಲ್ಲ.

**ಸೂ.ರ.:– न च परतःपराभिधानान्न विष्णुरिति वाच्यम् । अपरं त्वक्षरमिति (स्कान्दे) त्र्यक्षराभिधानेन परतो मध्यमाक्षरात्परत्वसम्भवेनाविरोधा ददृश्यत्वादिगुणको विष्णुरेवेति सिद्धम् ।**

**ಅನು.:–** ವಿಷ್ಣುವಿಗೆ ಅದೃಶ್ಯತ್ವಾದಿಗುಣಕ ಅಕ್ಷರತ್ವವನ್ನು ಹೇಳಿದರೆ ಪರತಃ ಪರಾಭಿಧಾನವು ಹೇಗೆ ಉಪಪನ್ನವಾಗುತ್ತದೆ? ಅರ್ಥಾತ್ ಪರತಃ ಪರಾಭಿಧಾನ ಹೇಳಿದ್ದರಿಂದ ವಿಷ್ಣುವು ಅದೃಶ್ಯತ್ವಾದಿಗುಣಕ ಅಕ್ಷರನಾಗುವುದಿಲ್ಲವಲ್ಲ? ಎಂದು ಶಂಕೆ ಬಂದರೆ, ಅದೂ ಸರಿಯಲ್ಲ.

**अपरं त्वक्षरं या सा प्रकृतिर्जडरूपिका ।**
**श्रीः परा प्रकृतिः प्रोक्ता चेतना विष्णुसंश्रया ॥**
**तामक्षरं परं प्राहुः परतः परमक्षरम् ।**
**हरिमेवाखिलगुणमक्षरत्रयमीरितम् ॥**

ಎಂಬುದಾಗಿ ಸ್ಕಾಂದಪುರಾಣದಲ್ಲಿ ಮೂರು ಅಕ್ಷರಪುರುಷರನ್ನು ಹೇಳಿದ್ದರಿಂದ ಪರಾತ್ ಅಕ್ಷರಾತ್ = ಮಧ್ಯಮ ಅಕ್ಷರಕ್ಕಿಂತಲೂ ಪರಃ = ಉತ್ತಮನಾಗಿದ್ದಾನೆ ವಿಷ್ಣು ಎಂದು ಅರ್ಥ ಹೇಳಲು ಬರುತ್ತದೆಯಾದ್ದರಿಂದ, ಅದೃಶ್ಯತ್ವಾದಿಗುಣಕನಾದ ಅಕ್ಷರನು ವಿಷ್ಣುವೇ ಎಂದು ಹೇಳಿದರೆ ಪರಾತ್ಪರತ್ವವಚನವಿರೋಧ ಬರುವುದಿಲ್ಲ.

ಆದ್ದರಿಂದ ವಿಷ್ಣುವಿನ ಅಸಾಧಾರಣಧರ್ಮವಾದ ಪರವಿದ್ಯಾವಿಷಯತ್ವ ಎಂಬ ಧರ್ಮವನ್ನು ಹೇಳಿದ್ದರಿಂದ ಅದೃಶ್ಯತ್ವಾದಿಗುಣಕನಾದ ಅಕ್ಷರಪುರುಷ ವಿಷ್ಣುವೇ ಎಂದು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 23

**ಸಂಗತಿ**

**ಸೂ.ರ.:– युक्त्यन्तरेण विष्णोरेवादृश्यत्वादिगुणकत्वं साधयत्सूत्रमवतारयति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ "ಅದೃಶ್ಯತ್ವಾದಿಗುಣಕನಾದವನು ವಿಷ್ಣುವೇ" ಎಂದು ಸಾಧಿಸುವ ಸೂತ್ರವನ್ನು ಹೇಳುತ್ತಾರೆ -

**ॐ रूपोपन्यासाच्च ॐ (१.२.२३)**

**ಸೂತ್ರಾರ್ಥ :-** ರೂಪೋಪನ್ಯಾಸಾಚ್ಚ = "ಯದಾ ಪಶ್ಯಃ ಪಶ್ಯತೇ" (ಮುಂ. 3-1-3) ಎಂಬುದಾಗಿ ವಿಷ್ಣುವಿನಲ್ಲಿ ಅಸಾಧಾರಣವಾದ ಸ್ವರ್ಣರೂಪವನ್ನು ಪ್ರತಿಪಾದನೆ ಮಾಡಿದ್ದರಿಂದಲೂ ಸಹ ಅದೃಶ್ಯತ್ವಾದಿಗುಣಕನಾದವನು ವಿಷ್ಣುವೇ ಆಗುತ್ತಾನೆ.

**ಸೂ.ರ.:– एवं च विष्ण्वसाधारणरुक्मरूपप्रतिपादनात् । एको नारायण इत्यत्र शुक्लादिरूपाणां मनुष्यादौ मिश्रीकरणस्योक्तत्वाददृश्यत्वादिगुणको विष्णुरेवेति सिद्धम् ।**

**ಅನುವಾದ :– "यदा पश्यः पश्यते रुक्मवर्णं कर्तारमीशं पुरुषं ब्रह्मयोनिम्" । (मुं.उ. ३-१-३)**

ಎಂಬುದಾಗಿ ಅದೃಶ್ಯತ್ವಾದಿಗುಣಕನಾದವನಿಗೆ ರುಕ್ಮವರ್ಣವನ್ನು ಹೇಳಿದ್ದಾರೆ. ಈ ರುಕ್ಮವರ್ಣವಾದರೂ ವಿಷ್ಣುವಿನಲ್ಲಿ ಮಾತ್ರ ಇರುವ ಅಸಾಧಾರಣರೂಪವಾಗಿದೆ. ಆದ್ದರಿಂದ ವಿಷ್ಣುವಿನ ಅಸಾಧಾರಣರೂಪವಾದ ರುಕ್ಮರೂಪವನ್ನು ಹೇಳಿದ್ದರಿಂದ ವಿಷ್ಣುವೇ ಅದೃಶ್ಯತ್ವಾದಿಗುಣಕನಾಗಿದ್ದಾನೆ.

ಬ್ರಹ್ಮಾದಿಗಳಿಗೂ ರೂಪ ಇರುವುದರಿಂದ ವಿಷ್ಣುವೇ ಎಂದು ಹೇಗೆ ನಿಶ್ಚಯ ಮಾಡುತ್ತೀರಿ? ಎಂದರೆ,

**"एको नारायण आसीन्न ब्रह्मा न च शङ्करः । स मुनिर्भूत्वा समचिन्तयत् । तत एते व्यजायन्त विश्वो हिरण्यगर्भोऽग्निर्यमो वरुणरुद्रेन्द्रा**

इति । तस्य हैतस्य परमस्य नारायणस्य चत्वारि रूपाणि शुक्लं रक्तं रौक्मं कृष्णमिति । स एतान्येतेभ्योऽभ्यचीक्लृपत् । विमिश्राणि व्यमिश्रयत् ।''

ಎಂಬುದಾಗಿ ಶುಕ್ಲಾದಿರೂಪಗಳನ್ನು ಮನುಷ್ಯಾದಿಗಳಲ್ಲಿ ಮಿಶ್ರೀಕರಣ ಮಾಡಿದ್ದನ್ನು ಹೇಳಿದ್ದರಿಂದ ರುಕ್ಮರೂಪವು ವಿಷ್ಣುವಿಗೆ ಮಾತ್ರ ಅಸಾಧಾರಣವಾಗುತ್ತದೆ. ಆದ್ದರಿಂದ ವಿಷ್ಣುವಿನ ಅಸಾಧಾರಣಧರ್ಮವಾದ ರುಕ್ಮರೂಪವನ್ನು ಹೇಳಿದ್ದರಿಂದ ವಿಷ್ಣುವೇ ಅದೃಶ್ಯತ್ವಾದಿಗುಣಕನಾಗುತ್ತಾನೆ ಎಂದು ಸಿದ್ಧವಾಗುತ್ತದೆ.

ಅದೃಶ್ಯತ್ವಾಧಿಕರಣವು ಮುಗಿಯಿತು.

ಅಧಿಕರಣ – 7

## ವೈಶ್ವಾನರಾಧಿಕರಣ

### ಸಂಗತಿ

**ಸೂ.ರ.:– अत्र पाचकत्वाद्यनेकलिङ्गसमन्वयसिद्ध्यर्थं ब्रह्मणि वैश्वानरनामसमन्वयः क्रियते ।**

ಪಾಚಕತ್ವಾದಿ ಅನೇಕ ಲಿಂಗಗಳ ಸಮನ್ವಯಸಿದ್ಧಿಗಾಗಿ ವೈಶ್ವಾನರ ನಾಮಸಮನ್ವಯ-ವನ್ನು ಬ್ರಹ್ಮನಲ್ಲಿ ಮಾಡುತ್ತಾರೆ ಏಳನೇ ಈ ವೈಶ್ವಾನರಾಧಿಕರಣದಲ್ಲಿ.

ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವಿಗೆ ಅದೃಶ್ಯತ್ವಾದಿಗಳನ್ನು ಹೇಳಲಾಗಿದೆ. ಆ ಅದೃಶ್ಯತ್ವಾದಿಗುಣಗಳಲ್ಲಿ ''ನಿತ್ಯಂ ವಿಭುಂ ಸರ್ವಗತಮ್'' ಎಂಬುದಾಗಿ ಸರ್ವಗತತ್ವವೂ ಹೇಳಲ್ಪಟ್ಟಿದೆ. ಹಾಗೆ ಅದೃಶ್ಯತ್ವಾದಿಗುಣಗಳಲ್ಲಿ ಒಂದಾದ ಸರ್ವಗತತ್ವವು ''ಯಸ್ತ್ವೇತ-ಮೇವಂ ಪ್ರಾದೇಶಮಾತ್ರಮಭಿವಿಮಾನಮ್ ...'' ಎಂಬುದಾಗಿ ಛಂದೋಗಶ್ರುತಿಯಲ್ಲಿ ವೈಶ್ವಾನರನಿಗೆ ಶ್ರುತವಾಗುತ್ತಿದೆ. ಹೀಗಾಗಿ ಆ ವೈಶ್ವಾನರ ಯಾರು? ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नायं वैश्वानरो विष्णुः । साधकशून्यत्वात् । सर्वगतत्वलिङ्गस्यान्यत्र प्रसिद्धवैश्वानरश्रुत्या बाधितत्वात् ।**

**ಅನುವಾದ :–**

**''यस्त्वेतमेवं प्रादेशमात्रमभिविमानमात्मानं वैश्वानरमुपास्ते''**

**(छां.उ. ५-१८-१)**

ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಶ್ರುತನಾಗುತ್ತಿರುವ ವೈಶ್ವಾನರನು ವಿಷ್ಣು ಅಲ್ಲ. ಯಾಕೆಂದರೆ – ವೈಶ್ವಾನರನು ವಿಷ್ಣುವೇ ಎಂದು ಸಾಧಿಸಲು ಸಾಧಕವಾದ ಯಾವ ಲಿಂಗವೂ ಇಲ್ಲವಾದ್ದರಿಂದ. ಸಾಧಕಲಿಂಗ ಯಾವುದೂ ಇಲ್ಲ ಎಂದು ಏಕೆ ಹೇಳುತ್ತೀರಿ? ಸರ್ವಗತತ್ವ ಎಂಬ ಲಿಂಗ ಇದೆಯಲ್ಲ? ಎಂದರೆ, ಈ ಸರ್ವಗತತ್ವಲಿಂಗವು ಅನ್ಯತ್ರ ಪ್ರಸಿದ್ಧವಾದ ವೈಶ್ವಾನರಶ್ರುತಿಯಿಂದ ಬಾಧಿತವಾಗುವುದರಿಂದ ಸರ್ವಗತತ್ವಲಿಂಗವು ಸಾಧಕ-ವಾಗುವುದಿಲ್ಲ.

**ಸೂ.ರ.:– न च लिङ्गस्य निरवकाशत्वेन तेन श्रुतिबाधः । श्रुतेरपि निरवकाशत्वात् । वैश्वानरश्रुतेर्निर्बाधसाधकशून्यत्वेनाग्निविष्ण्वोः साधारणत्वेन चान्यतरनिश्चायकत्वाभावात् । अतो वैश्वानरो न विष्णुरिति प्राप्ते सूत्रमाह ।**

ಅನು.:– ಸರ್ವಗತತ್ವಲಿಂಗವು ನಿರವಕಾಶವಾದ್ದರಿಂದ ಇದರಿಂದಲೇ ವೈಶ್ವಾನರಶ್ರುತಿಗೆ ಬಾಧ ಹೇಳಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಯಾಕೆ? ಸರ್ವಗತತ್ವಲಿಂಗವು ನಿರವಕಾಶವಾಗಿರುವಂತೆ ವೈಶ್ವಾನರಶ್ರುತಿಯೂ ನಿರವಕಾಶವೇ ಆಗಿದೆ. ಹೀಗಾಗಿ ಲಿಂಗದಿಂದ ಶ್ರುತಿಗೆ ಬಾಧ ಹೇಳಲು ಬರುವುದಿಲ್ಲ.

ವೈಶ್ವಾನರಶ್ರುತಿಯು ಬಾಧರಹಿತಸಾಧಕಶೂನ್ಯವಾಗಿರುವುದರಿಂದ ಅಗ್ನಿ – ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದ್ದರಿಂದ ಅದು ಅನ್ಯತರನಿರ್ಣಾಯಕವಾಗುವುದಿಲ್ಲ. ಆದ್ದರಿಂದ ಯಸ್ತ್ವೇತಮೇವಂ ಎಂಬ ಛಂದೋಗಶ್ರುತಿಯಲ್ಲಿ ಶ್ರುತನಾಗುತ್ತಿರುವ ವೈಶ್ವಾನರನು ವಿಷ್ಣು ಅಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ वैश्वानरः साधारणशब्दविशेषात् ॐ (१.२.२४)

**ಸೂತ್ರಾರ್ಥ** :- ವೈಶ್ವಾನರಃ = "ಯಸ್ತ್ವೇತಮೇವಂ" ಇತ್ಯಾದಿ (ಛಾಂ. 5-18-1) ಶ್ರುತಿಯಲ್ಲಿರುವ ವೈಶ್ವಾನರಾದಿಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಹೊರತು ಅಗ್ನಿ ಆಗುವುದಿಲ್ಲ. ಕುತಃ = ಯಾಕೆ? ಸಾಧಾರಣಶಬ್ದವಿಶೇಷಾತ್ = ಅಗ್ನಿ-ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ ವೈಶ್ವಾನರ ಶಬ್ದವು "ಆತ್ಮಾನಂ ವೈಶ್ವಾನರಂ" ಎಂಬ ಶ್ರುತಿಯಲ್ಲಿ ಆತ್ಮಶಬ್ದದಿಂದ ವಿಶೇಷಿತವಾದ್ದರಿಂದ.

### ಸಿದ್ಧಾಂತ

**ಸೂ.ರ.:– एवं च साधारणस्यापि वैश्वानरशब्दस्य विष्णवैकनिष्ठतया श्रुत्यादिसिद्धेनात्मानं वैश्वानरमित्यात्मशब्दविशेषितत्वाद्विष्णुपरत्व-सम्भवात् । प्रसिद्ध्यादेरन्यथोपपन्नत्वेन निर्णयकारणाभावाच्छब्द विशेषादात्मशब्दाद्वैश्वानरो विष्णुरेवेति सिद्धम् ।**

**ಅನು.**:– ವೈಶ್ವಾನರಶಬ್ದವು ಅಗ್ನಿ - ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದ್ದರೂ ಸಹ, ಆತ್ಮಾನಂ ವೈಶ್ವಾನರಂ ಎಂಬುದಾಗಿ ಆತ್ಮಶಬ್ದದಿಂದ ವಿಶೇಷಿತವಾಗಿದೆ. ಆ ಆತ್ಮಶಬ್ದವಾದರೂ ವಿಷ್ಣುವಿಗೆ ಮಾತ್ರ ವಾಚಕವಾಗಿದೆ ಎಂದು ಶ್ರುತ್ಯಾದಿಸಿದ್ಧವಾಗಿದೆ. ಹೀಗೆ ವಿಷ್ಣುಮಾತ್ರವಾಚಕವಾದ ಆತ್ಮಶಬ್ದದಿಂದ ವಿಶೇಷಿತವಾದ್ದರಿಂದ ವೈಶ್ವಾನರಶಬ್ದವು ವಿಷ್ಣುವಾಚಕವೆಂದು ಸಿದ್ಧವಾಗುತ್ತದೆ.

ವೈಶ್ವಾನರಶಬ್ದಕ್ಕೆ ಅಗ್ನಿಯಲ್ಲಿ ಪ್ರಸಿದ್ಧಿ ಇದೆಯಲ್ಲ? ಎಂದರೆ, ಆ ಪ್ರಸಿದ್ಧ್ಯಾದಿಗಳು ಅನ್ಯಥೋಪಪನ್ನವಾದ್ದರಿಂದ ಅಗ್ನಿಯೇ ಎಂದು ನಿರ್ಣಯ ಮಾಡಲು ಕಾರಣವಿಲ್ಲ. ಆದರೆ ವಿಷ್ಣುವೇ ಎಂದು ನಿರ್ಣಯ ಮಾಡಲು ಆತ್ಮಶಬ್ದವು (ಶಬ್ದವಿಶೇಷವು) ಇರುವುದರಿಂದ ಯಸ್ತ್ವೇತಮೇವಂ ಎಂಬ ಶ್ರುತಿಯಲ್ಲಿ ಶ್ರುತನಾಗುತ್ತಿರುವ ವೈಶ್ವಾನರನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 25

### ಆಕ್ಷೇಪ

**ಸೂ.ರ.:– ननु नायं वैश्वानरो विष्णुरेवेति घटते । सामानाधिकरण्या-विरोधात्। विष्णुत्वनिश्चायकवदग्नित्वनिश्चायकसद्भावादिति प्राप्ते सूत्रमाह ।**

**ಅನು.**:– ಯಸ್ತ್ವೇತಮೇವಂ ಎಂಬ ಶ್ರುತಿಯಲ್ಲಿ ವಾಚ್ಯನಾದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯಿಸಲು ಬರುವುದಿಲ್ಲ. ವಿಷ್ಣುವೇ ಎಂದು ನಿಶ್ಚಯಿಸುವ ಆತ್ಮಶಬ್ದ ಇರುವಂತೆ, ಅಗ್ನಿಯೇ ಎಂದು ನಿಶ್ಚಯಿಸುವ ವೈಶ್ವಾನರಶಬ್ದವೂ ಇರುವುದರಿಂದ "ವಿಷ್ಣುವೇ ವೈಶ್ವಾನರ" ಎಂದು ನಿರ್ಣಯಿಸಲು ಬರುವುದಿಲ್ಲವಲ್ಲ? ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವು ಹೊರಡುತ್ತದೆ –

## ॐ स्मर्यमाणमनुमानं स्यादिति ॐ (१.२.२५)

**ಸೂತ್ರಾರ್ಥ** :- ಇತಿ ಸ್ಮರ್ಯಮಾಣಂ = ಅಹಂ ವೈಶ್ವಾನರೋ ಭೂತ್ವಾ (ಭ.ಗೀ. 15-14) ಎಂಬುದಾಗಿ ಸ್ಮೃತಿಯಲ್ಲಿ ಹೇಳಲ್ಪಟ್ಟ ವಿಷ್ಣುವಿಗೆ ವೈಶ್ವಾನರತ್ವವು ಅನುಮಾನಂ ಸ್ಯಾತ್ = ಈ ವೈಶ್ವಾನರವಿದ್ಯೆಯು ಗೀತೋಕ್ತಭಗವತ್ಪರವಾಗಿದೆ ಎನ್ನುವುದಕ್ಕೆ ಅನುಮಾಪಕವಾಗುತ್ತದೆ.

ಸೂ.ರ.:– **एवं च गीतास्मृतेर्वैश्वानरविद्यासमानोक्तिरूपत्वादस्यास्तत्समाख्यानान्निर्णायकत्वेन वैश्वानरो विष्णुरेवेति सिद्धम् ।**

**ಅನುವಾದ :–**

**अहं वैश्वानरो भूत्वा प्राणिनां देहमाश्रितः ।**
**प्राणापानसमायुक्तः पचाम्यन्नं चतुर्विधम् ॥**

ಎಂಬುದಾಗಿ ಭಗವದ್ಗೀತೆಯಲ್ಲಿ ಅತ್ಯಂತ ಸ್ಪಷ್ಟವಾಗಿ ವಿಷ್ಣುವಿಗೆ ವೈಶ್ವಾನರತ್ವನ್ನು ಹೇಳಲಾಗಿದೆ. ಈ ಗೀತಾಸ್ಮೃತಿಯು ವೈಶ್ವಾನರವಿದ್ಯೆಗೆ ಸಮಾನೋಕ್ತಿರೂಪವಾದ್ದರಿಂದ, ಈ ಗೀತಾಸ್ಮೃತಿಯು ವೈಶ್ವಾನರವಿದ್ಯೆಗೆ ಸಮಾಖ್ಯಾ ಆಗುತ್ತದೆಯಾದ್ದರಿಂದ ನಿರ್ಣಾಯಕವಾಗುತ್ತದೆ. ಹೀಗೆ ವಿಷ್ಣುವೇ ವೈಶ್ವಾನರ ಎನ್ನುವುದಕ್ಕೆ ನಿರ್ಣಾಯಕವಾದ ಗೀತಾಸ್ಮೃತಿರೂಪವಾದ ಸಮಾಖ್ಯಾ ಇರುವುದರಿಂದಾಗಿ ಯಸ್ತ್ವೇತಮೇವಂ ಎಂಬ ಶ್ರುತಿಯಲ್ಲಿ (ವೈಶ್ವಾನರವಿದ್ಯೆಯಲ್ಲಿ) ಪ್ರಸಕ್ತನಾಗಿರುವ ವೈಶ್ವಾನರನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ.

### ಸೂತ್ರ – 26

### ಆಕ್ಷೇಪ

ಸೂ.ರ.:– **ननु वैश्वानरमृत आजातमग्निमि(ऋ.६-७-१)त्यग्निशब्दस्य वैश्वानरे तद्धुतं भवति । हृदयं गार्हपत्य (छां.५-१८-२) इत्यग्निलिङ्गस्य**

**येनेदमन्नं पच्यत (बृ.७-९-१) इत्यादिना पाचकत्वेनान्तःप्रतिष्ठानस्य च श्रवणात्। एतेषां विष्णावनवकाशात्। इत्यादिना वैश्वानरस्य विष्णुत्व-माक्षिप्य समादधत्सूत्रमाह।**

**ಅನು.:–** ಆತ್ಮಶಬ್ದವಿಶೇಷಣದಿಂದ ಹಾಗೂ ಸಮಾಖ್ಯಾ ಇರುವುದರಿಂದ ವಿಷ್ಣುವೇ ವೈಶ್ವಾನರ ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ವಿಷ್ಣುತ್ವನಿಶ್ಚಾಯಕವಾದ ಆತ್ಮಶಬ್ದಾದಿಗಳು ಇರುವಂತೆ, ಅಗ್ನಿತ್ವನಿಶ್ಚಾಯಕವಾದವುಗಳೂ ಇವೆ. ಅದು ಹೇಗೆಂದರೆ:-

1. ವೈಶ್ವಾನರಶಬ್ದವು ಆತ್ಮಶಬ್ದದಿಂದ ಸಮಾನಾಧಿಕೃತವಾಗಿದೆ ಹೇಗೋ ಅದರಂತೆ "ಅಯಮಗ್ನಿರ್ವೈಶ್ವಾನರಃ" (ಬೃ.ಉ. 7-9-1) "ವೈಶ್ವಾನರಮೃತ ಆಜಾತಮಗ್ನಿಮ್" (ಋ.ಸಂ. 6-7-1) ಎಂಬುದಾಗಿ ವೈಶ್ವಾನರಶಬ್ದವು ಅಗ್ನಿಶಬ್ದದಿಂದಲೂ ಸಮಾನಾಧಿ ಕೃತವಾಗಿದೆ. ಅರ್ಥಾತ್ ಅಗ್ನಿತ್ವನಿಶ್ಚಾಯಕವಾಗುವ ಅಗ್ನಿಶಬ್ದವೂ ಶ್ರುತವಾಗುತ್ತಿದೆ.

2. ಮತ್ತು "ವೈಶ್ವಾನರೇ ತದ್ಹುತಂ ಭವತಿ" (ಛಾಂ.ಉ. 5-24-4) "ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ" (ಛಾಂ. 5-18-2) ಎಂಬುದಾಗಿ ಹೋಮಾಧಿಕರಣತ್ವ - ಗಾರ್ಹಪತ್ಯಾದ್ಯಂಗತ್ವ ಎಂಬ ಅಗ್ನಿಲಿಂಗಗಳೂ ಶ್ರುತವಾಗುತ್ತಿವೆ.

3. ಮತ್ತು "ಅಯಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ" (ಬೃ.ಉ. 7-9-1) "ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಮ್" (ಛಾಂ.ಉ. 5-19-1)

ಎಂಬುದಾಗಿ ಪಾಚಕತ್ವೇನ ಅಂತಃಪ್ರತಿಷ್ಠಾನ ಲಿಂಗವೂ ಶ್ರುತವಾಗುತ್ತಿದೆ.

ಈ ಅಗ್ನಿಶಬ್ದ - ಹೋಮಾಧಿಕರಣತ್ವ - ಪಾಚಕತ್ವೇನ ಅಂತಃಪ್ರತಿಷ್ಠಾನಾದಿಗಳು ವಿಷ್ಣುವಿನಲ್ಲಿ ಸಮನ್ವಯವಾಗಲು ಸಾಧ್ಯವಿಲ್ಲವಾದ್ದರಿಂದ ಇಲ್ಲಿ ಪ್ರತಿಪಾದ್ಯನಾಗುತ್ತಿರುವ ವೈಶ್ವಾನರನು ವಿಷ್ಣು ಆಗುವುದಿಲ್ಲ (ಅಗ್ನಿಯೇ ಆಗುತ್ತಾನೆ) ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ -

**ॐ शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात्पुरुषविधमपि चैनमधीयते ॐ (१.२.२६)**

ಸೂತ್ರಾರ್ಥ :- ಶಬ್ದಾದಿಭ್ಯಃ = ಅಗ್ನಿಶಬ್ದ ಹಾಗೂ ಹೋಮಾಧಿಕರಣತ್ವ ರೂಪವಾದ

ಲಿಂಗ ಇರುವುದರಿಂದ ಅಂತಃಪ್ರತಿಷ್ಠಾನಾತ್ = ಪಾಚಕತ್ವೇನ ಶರೀರದ ಒಳಗೆ ಇರುವುದಾಗಿ ಹೇಳಿದ್ದರಿಂದಲೂ ಸಹ ನ = ವೈಶ್ವಾನರನು ವಿಷ್ಣು ಆಗುವುದಿಲ್ಲ. ಕಿಂತು ಅಗ್ನಿಯೇ ವೈಶ್ವಾನರ ಆಗುತ್ತಾನೆ ಇತಿ ಚೇತ್ = ಈ ರೀತಿಯಾಗಿ ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಕುತಃ = ಯಾಕೆ? ತಥಾ ದೃಷ್ಟ್ಯುಪದೇಶಾತ್ = ಅಗ್ನಿ ಮೊದಲಾದ ನಾಮಗಳು, ಹೋಮಾಧಿಕರಣತ್ವ ರೂಪವಾದ ಅಗ್ನಿಲಿಂಗ, ಪಾಚಕತ್ವರೂಪವಾದ (ಪಚನಕ್ರಿಯಾ-ರೂಪವಾದ) ಅಗ್ನಿಯ ಕರ್ಮ ಇವುಗಳುಳ್ಳವನಾಗಿ ಭಗವಂತನ ಉಪಾಸನೆ ಮಾಡ-ಬೇಕೆಂದು ಉಪದೇಶ ಮಾಡಿದ್ದರಿಂದ. (ಹೀಗೆ ಅಗ್ನ್ಯಾದಿಶ್ರುತಿಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾದ್ದರಿಂದ "ವಿಷ್ಣುವೇ ವೈಶ್ವಾನರ" ಎಂದು ಹೇಳಿದರೆ ಅವುಗಳ ವಿರೋಧ ಬರುವುದಿಲ್ಲ ಎಂದು ಭಾವ.

ಮತ್ತು ಅಸಂಭವಾಚ್ಚ = ಈ ವೈಶ್ವಾನರನಾದವನಿಗೆ ಶ್ರುತವಾಗುತ್ತಿರುವ ಆತ್ಮತ್ವ - ಬ್ರಹ್ಮತ್ವ ಮೊದಲಾದವುಗಳು ಅಗ್ನ್ಯಾದಿಗಳಿಗೆ ಅಸಂಭಾವಿತವೂ ಆದ್ದರಿಂದ ಇಲ್ಲಿ ಶ್ರುತನಾಗುತ್ತಿರುವ ವೈಶ್ವಾನರನು ವಿಷ್ಣುವೇ ಆಗುತ್ತಾನೆ.

ಅಪಿ = ಮತ್ತು, ಯತಃ = ಯಾವ ಕಾರಣ ಛಂದೋಗಾಃ = ಛಾಂದೋಗ್ಯೋಪನಿಷತ್ತು ಏನಂ = ಈ ವೈಶ್ವಾನರನನ್ನು ಪುರುಷವಿಧಂ ಚ = ಪುರುಷಸೂಕ್ತಪ್ರತಿಪಾದ್ಯನಾದ ನಾರಾಯಣನಿಗೆ ಸಮಾನಗುಣಗಳುಳ್ಳವನನ್ನಾಗಿಯೇ ಅಧೀಯತೇ = ಹೇಳುತ್ತಿದೆಯೋ ಅತೋಽಪಿ ವಿಷ್ಣುರೇವ = ಆ ಕಾರಣದಿಂದಲೂ ವೈಶ್ವಾನರನು ವಿಷ್ಣುವೇ ಆಗುತ್ತಾನೆ. ಚ = ಪುರುಷಸೂಕ್ತವು ವಿಷ್ಣುಪರವಾಗಿದೆ ಎನ್ನುವುದು ಬಹುಪ್ರಮಾಣಸಿದ್ಧವಾಗಿದೆ.

**ಸೂ.ರ.:- एवं च सर्वनामा सर्वकर्मेत्यादिना महोपनिषदि तत्तन्नामलिङ्गत्वेन दृष्ट्युपदेशात् ।**

**ಅನುವಾದ :- अथ हेममात्मानमणोरणीयांसं परतः परं विश्वं हरिमुपासीतेति । सर्वनामा सर्वकर्मा सर्वलिङ्गः सर्वगुणः सर्वकामः सर्वधर्मः सर्वरूप इति ॥**

ಎಂಬುದಾಗಿ ಮಹೋಪನಿಷತ್ತಿನಲ್ಲಿ ಅಗ್ನ್ಯಾದಿನಾಮ - ಲಿಂಗ - ಕರ್ಮ ಉಳ್ಳವನಾಗಿ ವಿಷ್ಣುವಿನ ಉಪಾಸನೆ ಮಾಡಬೇಕೆಂದು ಉಪದೇಶ ಮಾಡಿದ್ದರಿಂದ, ವೈಶ್ವಾನರನು ವಿಷ್ಣುವೇ ಆಗುತ್ತಾನೆ.

**ಸೂ.ರ.:– को न आत्मा किं ब्रह्मेति (छां. ५-११-१) विष्णोरेवारम्भात् ।**

**ಅನು.:–** ಮತ್ತು, "ಕೋ ನ ಆತ್ಮಾ ಕಿಂ ಬ್ರಹ್ಮ" (ಛಾಂ. 5-11-1) ಎಂಬ ವಿಚಾರ-ಪೂರ್ವಕ- ವಾಗಿ ವೈಶ್ವಾನರವಿದ್ಯೆಯನ್ನು ಆರಂಭಿಸಿದ್ದರಿಂದಲೂ ಸಹ ಈ ಪ್ರಕರಣವು ವಿಷ್ಣುಪ್ರಕರಣ ಎಂದು ತಿಳಿಯುತ್ತದೆ. ಹೀಗೆ ಪ್ರಕರಣಬಲದಿಂದಲೂ ಸಹ ವೈಶ್ವಾನರನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಸೂ.ರ.:– चन्द्रमा मनसो जात (तै.आ. ३-१२) इत्यादिना यः पुरुषाख्यो विष्णुरभिहितो मूर्धैव सुतेजा (छां. ५-१८-२) इत्यादिना वैश्वानरस्य तद्विधत्वाभिधानाच्च । ततश्च वैश्वानरो विष्णुरेवेति सिद्धम् ।**

**ಅನು.:–** ಮತ್ತು, "ಚಂದ್ರಮಾ ಮನಸೋ ಜಾತಃ" ಪುರುಷನಾಮಕನಾದ ವಿಷ್ಣುವು ಪುರುಷಸೂಕ್ತದಲ್ಲಿ "ಶೀರ್ಷ್ಣೋ ದ್ಯೌ ಸಮವರ್ತತ" "ಚಕ್ಷೋಃ ಸೂರ್ಯೋಽಜಾಯತ" "ಪ್ರಾಣಾದ್ವಾಯುರಜಾಯತ" "ಪದ್ಭ್ಯಾಂ ಭೂಮಿರಜಾಯತ" ಇತ್ಯಾದಿ ವಾಕ್ಯಗಳಿಂದ ದ್ಯುಭ್ವಾದಿಜನಕಶೀರ್ಷಾದಿಗಳುಳ್ಳವನಾಗಿ ಹೇಗೆ ಪ್ರತಿಪಾದ್ಯನಾಗಿದ್ದಾನೋ ಅದೇ ರೀತಿಯಾಗಿ ದ್ಯುಭ್ವಾದಿಜನಕಶೀರ್ಷಾದಿಗಳುಳ್ಳವನಾಗಿಯೇ ವೈಶ್ವಾನರನೂ ಸಹ ಛಾಂದೋಗ್ಯೋಪನಿಷತ್ತಿನಲ್ಲಿ "ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಪೃಥಿವ್ಯೇವ ಪಾದೌ ಗ್ವರ್ತ್ಮಾ" (ಛಾಂ.ಉ. 5-18-3)

ಎಂಬುದಾಗಿ ಶ್ರುತನಾಗುತ್ತಿರುವುದರಿಂದಲೂ ಸಹ ಯಸ್ತ್ವೇತಮೇವಂ ಎಂಬ ಶ್ರುತಿಯಲ್ಲಿ(ಈ ವೈಶ್ವಾನರವಿದ್ಯೆಯಲ್ಲಿ) ಪ್ರತಿಪಾದ್ಯನಾಗುತ್ತಿರುವ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 27

### ಆಕ್ಷೇಪ

**ಸೂ.ರ.:– ननु वैश्वानरशब्दस्य तेजसि भूतेऽग्निदेवतायां च प्रसिद्धत्वादत्राप्यसौ तत्परः स्यादिति प्राप्ते तन्निरासाय सूत्रमुपन्यस्यति ।**

**ಅನು.:–** ವೈಶ್ವಾನರಶಬ್ದವು ಅಗ್ನಿದೇವತೆಯಲ್ಲಿ ಹಾಗೂ ಅವರಿಂದ ಅಭಿಮನ್ಯಮಾನವಾದ ತೇಜಸ್ಸು ಎಂಬ ಭೂತದಲ್ಲಿ ಪ್ರಸಿದ್ಧವಾಗಿದ್ದರಿಂದ ಯಸ್ತ್ವೇತಮೇವಂ

ಎಂಬ ವೈಶ್ವಾನರವಿದ್ಯೆಯಲ್ಲಿ ಪ್ರತಿಪಾದ್ಯರಾದವರೂ ಅಗ್ನಿದೇವತೆ ಹಾಗೂ ತೇಜೋಭೂತವೇ ಆಗಲಿ ಎಂಬುದಾಗಿ ಆಕ್ಷೇಪ ಬಂದರೆ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ :-

## ॐ अत एव न देवता भूतं च ॐ (१.२.२७)

**ಸೂತ್ರಾರ್ಥ** :- ದೇವತಾ = ಅಗ್ನ್ಯಾದಿರೂಪವಾದ ದೇವತೆಯು ಭೂತಂ ಚ = ಅವರಿಂದ ಅಭಿಮನ್ಯಮಾನವಾದ ತೇಜೋಭೂತವೂ ಸಹ ನ = ವೈಶ್ವಾನರಶಬ್ದದಿಂದ ವಾಚ್ಯರಾಗುವುದಿಲ್ಲ. ಕುತಃ = ಯಾಕೆ? ಅತ ಏವ = ನಿರವಕಾಶವಾದ ಆತ್ಮಶಬ್ದ ಮೊದಲಾದ ಹೇತುವಿನಿಂದಲೇ.

**ಸೂ.ರ.:–** **एवं च निरवकाशात्मशब्दश्रवणाद्वैश्वानरशब्दवाच्यो विष्णुरेवेति सिद्धम् ।**

**ಅನು.:–** ನಿರವಕಾಶವಾದ ಆತ್ಮಶಬ್ದವು ಶ್ರುತವಾಗುತ್ತಿರುವುದರಿಂದ (ವೈಶ್ವಾನರಶಬ್ದವು ಆತ್ಮಶಬ್ದದಿಂದ ಸಮಾನಾಧಿಕೃತವಾಗಿರುವುದರಿಂದ) ಯಸ್ತ್ವೇತಮೇವಂ ಎಂಬ ಶ್ರುತಿಯಲ್ಲಿ (ವೈಶ್ವಾನರವಿದ್ಯೆಯಲ್ಲಿ) ಶ್ರುತವಾಗುತ್ತಿರುವ ವೈಶ್ವಾನರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ – 28

### ಆಕ್ಷೇಪ

**ಸೂ.ರ.:–** **ननु लोके वेदे चाग्न्यादिपदानामीशादन्यत्र व्यवहार-प्रसिद्धिदर्शनात् । तस्य च कारणान्तराभावात्तदन्यथाऽनुपपत्त्याऽन्येषां वाच्यत्वमङ्गीकार्यम् । अन्यथा तद्विरोधः स्यादिति प्राप्ते तन्निरासाय सूत्रं व्याचष्टे ।**

**ಅನು.:–** ಲೋಕದಲ್ಲಿ ಹಾಗೂ ವೇದದಲ್ಲಿ ಅಗ್ನಿ ಮೊದಲಾದ ಪದಗಳಿಗೆ ಭಗವಂತನನ್ನು ಬಿಟ್ಟು ಉಳಿದವರಲ್ಲಿ (ಅಗ್ನ್ಯಾದಿದೇವತೆಗಳಲ್ಲಿ) ವ್ಯವಹಾರಪ್ರಸಿದ್ಧಿ ಕಂಡಿದೆ. ಈ ಪ್ರಸಿದ್ಧಿಗೆ ತತ್ತಚ್ಛಬ್ದವಾಚ್ಯತ್ವವೇ ಕಾರಣ ಎಂದು ಹೇಳಬೇಕು. ಯಾಕೆ? ಈ ಕಾರಣವನ್ನು ಬಿಟ್ಟು ಬೇರೆ ಯಾವ ಕಾರಣವೂ ಇಲ್ಲವಾದ್ದರಿಂದ. ಹೀಗಾಗಿ ತತ್ತಚ್ಛಬ್ದವಾಚ್ಯತ್ವವು ಇಲ್ಲದೇ

ವ್ಯವಹಾರಪ್ರಸಿದ್ಧಿಯು ಕೂಡುವುದಿಲ್ಲವಾದ್ದರಿಂದ ವ್ಯವಹಾರ ಪ್ರಸಿದ್ಧ್ಯನ್ಯಥಾನು-ಪಪತ್ತಿಯಿಂದ ಅಗ್ನ್ಯಾದಿದೇವತೆಗಳಿಗೇನೇ ತತ್ತಚ್ಛಬ್ದವಾಚ್ಯತ್ವವನ್ನು (ಹೇಳಬೇಕು) ಅಂಗೀಕರಿಸಬೇಕು.

ಒಂದುವೇಳೆ ಅಗ್ನ್ಯಾದಿದೇವತೆಗಳಿಗೆ ಅಗ್ನ್ಯಾದಿಪದವಾಚ್ಯತ್ವವನ್ನು ಅಂಗೀಕರಿಸದೇ ಹೋದರೆ, ವ್ಯವಹಾರಪ್ರಸಿದ್ಧಿಯ ವಿರೋಧ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ साक्षादप्यविरोधं जैमिनिः ॐ (१.२.२८)

**ಸೂತ್ರಾರ್ಥ :-** ಸಾಕ್ಷಾತ್ = ಮುಖ್ಯವೃತ್ತಿಯಿಂದ ಅಪಿ = ಬ್ರಹ್ಮನಿಗೆ ಅಗ್ನ್ಯಾದಿ-ಶಬ್ದವಾಚ್ಯತ್ವ ಇದ್ದರೂ ಸಹ ಅವಿರೋಧಂ = ಅಜ್ಞಾನಾದಿನಿಮಿತ್ತಾಂತರದಿಂದ ಅಗ್ನ್ಯಾದಿ-ಗಳಲ್ಲಿ (ತತ್ತಚ್ಛಬ್ದಗಳು ಪ್ರವೃತ್ತವಾಗುತ್ತವೆ ಎಂಬುದಾಗಿ) ತತ್ತಚ್ಛಬ್ದಗಳಿಗೆ ವಿರೋಧಾ-ಭಾವವನ್ನು ಜೈಮಿನಿಃ = ಜೈಮಿನಿ ಆಚಾರ್ಯರು ಹೇಳುತ್ತಾರೆ.

**ಸೂ.ರ.:– एवं चाग्न्यादिशब्दानां ब्रह्मवदग्न्याद्यवाचित्वेऽप्यग्न्यादि-ज्ञानार्थमभिज्ञैरन्यत्र व्यवहारात् । अनभिज्ञैस्तु परममुख्यार्थभगवदज्ञानादेव मुख्यार्थेऽग्न्यादावेव प्रयोगेण प्रसिद्ध्युपपत्तेरग्न्यादिशब्दा विष्णुवाचकाः ।**

**ಅನು.:– ಜ್ಞಾನಿಗಳ ವ್ಯವಹಾರ :** ಅಗ್ನ್ಯಾದಿಶಬ್ದಗಳು ಬ್ರಹ್ಮನನ್ನು ಪರಮಮುಖ್ಯ ವೃತ್ತಿಯಿಂದ ತಿಳಿಸುವಂತೆ ಅಗ್ನ್ಯಾದಿಗಳನ್ನು ಪರಮಮುಖ್ಯವೃತ್ತಿಯಿಂದ ತಿಳಿಸುವುದಿಲ್ಲ-ವಾದರೂ ಸಹ, ಅಗ್ನ್ಯಾದಿಗಳ ಜ್ಞಾನಕ್ಕಾಗಿ ಅಗ್ನ್ಯಾದಿಶಬ್ದಗಳನ್ನು ಅಗ್ನ್ಯಾದಿದೇವತೆಗಳಲ್ಲಿ ವ್ಯವಹಾರ ಮಾಡುತ್ತಾರೆ.

**ಅಜ್ಞಾನಿಗಳ ವ್ಯವಹಾರ :** ಅಗ್ನ್ಯಾದಿಶಬ್ದಗಳಿಗೆ ಪರಮಮುಖ್ಯಾರ್ಥನಾದವನು ಭಗವಂತ ಎಂಬ ಜ್ಞಾನ ಇಲ್ಲದಿರುವುದರಿಂದಲೇ ಕೇವಲ ಮುಖ್ಯಾರ್ಥನಾದ ಅಗ್ನ್ಯಾದಿ-ಗಳಲ್ಲಿಯೇ ಅಗ್ನ್ಯಾದಿಶಬ್ದಗಳನ್ನು ವ್ಯವಹಾರ ಮಾಡುತ್ತಾರೆ ಅಜ್ಞಾನಿಗಳು.

ಆದ್ದರಿಂದ ಅಜ್ಞಾನಮೂಲಕವಾಗಿ ವ್ಯವಹಾರ ಮಾಡುವುದರಿಂದ ವ್ಯವಹಾರ-ಪ್ರಸಿದ್ಧಿಯು ಉಪಪನ್ನವಾಗುವುದರಿಂದ (ಅನ್ಯಥೋಪಪತ್ತಿ ಇರುವುದರಿಂದ ಅನ್ಯಥಾನು-ಪಪತ್ತಿಯಿಂದ ಸಾಧಿಸಲು ಆಗುವುದಿಲ್ಲವಾದ್ದರಿಂದ) ಅಗ್ನ್ಯಾದಿಶಬ್ದಗಳು ವಿಷ್ಣುವಾಚಕವೇ ಆಗುತ್ತದೆ.

**ಸೂ.ರ.:– न च जैमिन्यादिमतानां व्यासमतेन परस्परं विरोधः । व्यासचित्तस्थितं मतापरपर्यायं ज्ञानाख्यमहाकाशमपेक्ष्य गृहाद्यवच्छिन्नाकाशत्वपरिमितविषयाणि कानिचिदेतान्यूरीकृत्य जैमिन्याद्या व्यवहरन्ति । व्यासचित्तस्थिताकाशादिति (स्कान्द) स्मृतेः । अतस्तेषां मतानामविरोध इति सिद्धम् ।**

**ಅನು.:–** ಹಾಗಾದರೆ ಜೈಮಿನ್ಯಾದಿಗಳ ಮತಕ್ಕೂ ವ್ಯಾಸರ ಮತಕ್ಕೂ ಪರಸ್ಪರವಿರೋಧ ಬರುತ್ತದೆಯಲ್ಲವೇ? ಎಂದರೆ, ವಿರೋಧ ಬರುವುದಿಲ್ಲ.

**व्यासचित्तस्थिताकाशादवच्छिन्नानि कानिचित् ।**
**अन्ये व्यवहरन्त्येतान्यूरीकृत्य गृहादिवत् ॥**

ಎಂಬುದಾಗಿ ಸ್ಕಾಂದಸ್ಮೃತಿಯು ಹೇಳುವಂತೆ ಆಕಾಶ ವಿಸ್ತಾರವಾದರೂ (ಅಪರಿಮಿತವಾದರೂ) ನಮ್ಮ ನಮ್ಮ ಮನೆಯೊಳಗಿನ ಆಕಾಶ ನಮ್ಮದು ನಮ್ಮದು ಎಂಬುದಾಗಿ ವ್ಯವಹರಿಸುವಂತೆ, ವೇದವ್ಯಾಸರ ಮನಸ್ಸಿನಲ್ಲಿರುವ ಅನೇಕ ಅಭಿಪ್ರಾಯ ವಿಶೇಷಗಳನ್ನು ಒಬ್ಬೊಬ್ಬ ಶಿಷ್ಯರು ಗ್ರಹಿಸಿ ತಮ್ಮ ತಮ್ಮ ಮತವನ್ನಾಗಿ ಹೇಳುತ್ತಾರೆ.

ಆದ್ದರಿಂದ ಜೈಮಿನ್ಯಾದಿಗಳ ಮತಕ್ಕೂ ವ್ಯಾಸರ ಮತಕ್ಕೂ ವಿರೋಧ ಬರುವುದಿಲ್ಲ-ವಾದ್ದರಿಂದ, ಅಗ್ನ್ಯಾದಿಶಬ್ದಗಳು (ಸಾಕ್ಷಾತ್) ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕವೇ ಆಗಿವೆ ಎಂದು ತಿಳಿಯುತ್ತದೆ.

## ಸೂತ್ರ – 29
## ಆಕ್ಷೇಪ

**ಸೂ.ರ.:– ननु लौकिकप्रसिद्धेरज्ञानादिमूलत्वेनान्यथोपपत्तावपि वैदिकाग्न्यादिसूक्तमन्त्रादिप्रसिद्ध्यन्यथाऽनुपपत्त्याऽग्न्यादीनां सूक्तादिगताग्न्यादिशब्दवाच्यत्वं स्यात् । तत्राज्ञानादिमूलकत्वकल्पनाऽयोगेनान्यथोपपत्त्यभावात् । नापि व्यवहारार्थत्वेनान्यथोपपत्तिः । अनादित्वादिति प्राप्ते सूत्रितम् ।**

**ಅನು.:–** ಲೌಕಿಕಪ್ರಸಿದ್ಧಿಯು ಅಜ್ಞಾನಾದಿಮೂಲವಾದ್ದರಿಂದ ಅನ್ಯಥೋಪಪತ್ತಿ ಇದ್ದರೂ ಸಹ ವೈದಿಕ ಅಗ್ನ್ಯಾದಿಸೂಕ್ತಮಂತ್ರಾದಿಪ್ರಸಿದ್ಧ್ಯನ್ಯಥಾನುಪಪತ್ತಿಯಿಂದ ಅಗ್ನ್ಯಾದಿಗಳಿಗೆ ಅಗ್ನ್ಯಾದಿಶಬ್ದವಾಚ್ಯತ್ವವು ಸಿದ್ಧಿಸುತ್ತದೆ.

ವೈದಿಕವಾದ ಅಗ್ನ್ಯಾದಿಮಂತ್ರಗಳು ಸೂಕ್ತಗಳು ಅಗ್ನ್ಯಾದಿಗಳನ್ನು ತಿಳಿಸುತ್ತವೆ ಎಂಬುದಾಗಿ ಪ್ರಸಿದ್ಧಿ ಇದೆ. ಇಲ್ಲಿ ಅಜ್ಞಾನಾದಿಮೂಲಕತ್ವಕಲ್ಪನಾ ಮಾಡಲು ಅವಕಾಶ-ವಿರುವುದಿಲ್ಲ. ಹೀಗಾಗಿ ಇಂತಹ ಪ್ರಸಿದ್ಧಿಯಾದರೋ ಅಗ್ನ್ಯಾದಿಗಳಿಗೆ ವೈದಿಕ ಅಗ್ನ್ಯಾದಿಸೂಕ್ತ - ಮಂತ್ರಪ್ರತಿಪಾದ್ಯತ್ವವನ್ನು ಅಂಗೀಕರಿಸಿದಾಗ ಮಾತ್ರ ಉಪಪನ್ನವಾಗುವುದರಿಂದ, ವೈದಿಕ ಅಗ್ನ್ಯಾದಿಸೂಕ್ತ ಮಂತ್ರಪ್ರಸಿದ್ಧ್ಯನ್ಯಥಾನುಪಪತ್ತಿಯಿಂದ ಅಗ್ನ್ಯಾದಿಗಳಿಗೆ ಅಗ್ನ್ಯಾದಿ-ಶಬ್ದವಾಚ್ಯತ್ವವು ಸಿದ್ಧವಾಗುತ್ತದೆ.

ವ್ಯವಹಾರಕ್ಕಾಗಿ ಅಗ್ನ್ಯಾದಿಸೂಕ್ತ-ಮಂತ್ರಾದಿಗಳು ಅಗ್ನ್ಯಾದಿಗಳನ್ನು ತಿಳಿಸುತ್ತವೆ ಎಂದು ಹೇಳಲು ಬರುವುದಿಲ್ಲ. ಈ ಅಗ್ನ್ಯಾದಿಸೂಕ್ತ - ಮಂತ್ರಾದಿಗಳು ಅನಾದಿಯಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अभिव्यक्तेरित्याश्मरथ्यः ॐ (१.२.२९)

**ಸೂತ್ರಾರ್ಥ :-** ಅಭಿವ್ಯಕ್ತೇಃ = ಅಗ್ನ್ಯಾದಿಗಳಲ್ಲಿ ಬ್ರಹ್ಮನ ಉಪಾಸನೆ ಮಾಡಿದರೆ ಆ ಅಗ್ನ್ಯಾದಿಗಳಲ್ಲಿ ಬ್ರಹ್ಮನ ಅಭಿವ್ಯಕ್ತಿ ಆಗುವುದರಿಂದ, ತನ್ನಿಮಿತ್ತವಾದದ್ದು ಅಗ್ನ್ಯಾದಿಸೂಕ್ತ-ನಿಯಮವು ಇತಿ = ಎಂಬುದಾಗಿ ಆಶ್ಮರಥ್ಯಃ = ಆಶ್ಮರಥ್ಯಾಚಾರ್ಯರು ತಿಳಿಯುತ್ತಾರೆ.

**ಸೂ.ರ.:– एवं चाग्न्यादिसूक्तैरुपासकानामग्न्यादौ च भगवदभिव्यक्त्या सूक्तनियमसम्भवादग्न्यादिशब्दवाच्यो विष्णुरेवेति सिद्धम् । ततश्चाश्म-रथ्याचार्यमतेना विरोध इति सिद्धम् ।**

**ಅನು.:–** ಆದ್ದರಿಂದ ಅಗ್ನ್ಯಾದಿಸೂಕ್ತಗಳಿಂದ ಬ್ರಹ್ಮನ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳಲ್ಲಿ ಭಗವಂತನ ಅಭಿವ್ಯಕ್ತಿ ಆಗುವುದರಿಂದ, ತನ್ನಿಮಿತ್ತವಾಗಿ ಸೂಕ್ತನಿಯಮವು ಸಂಭಾವಿತವಾಗುವುದರಿಂದ ಅಗ್ನ್ಯಾದಿಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೀಗಾಗಿ ವ್ಯಾಸರ ಮತಕ್ಕೆ ಆಶ್ಮರಥ್ಯರ ಮತದಿಂದಲೂ ವಿರೋಧ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 30

**ಸಂಗತಿ**

**ಸೂ.ರ.:– प्रकारान्तरेण सूक्तादिनियमस्यान्यथोपपत्तिं कथयत्सूत्रमुपन्यस्यति ।**

**ಅನು.:–** ಮತ್ತೊಂದು ಪ್ರಕಾರದಿಂದಲೂ ಸಹ ಸೂಕ್ತಾದಿನಿಯಮಕ್ಕೆ ಅನ್ಯಥೋಪಪತ್ತಿಯನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ–

**ॐ अनुस्मृतेर्बादरिः ॐ (१.२.३०)**

**ಸೂತ್ರಾರ್ಥ :-** ಅನುಸ್ಮೃತೇಃ = ತತ್ತತ್ಸೂಕ್ತಾದ್ಯುಪಾಸಕರಾದವರಿಗೆ ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನ ಅನುಸಂಧಾನವನ್ನು ಹೇಳಿದ್ದ ಕಾರಣದಿಂದಾಗಿ ಅಗ್ನ್ಯಾದಿಸೂಕ್ತವ್ಯವಸ್ಥೆಯು ಕೂಡುತ್ತದೆ ಎಂಬುದಾಗಿ ಬಾದರಿಃ = ಬಾದರಿಗಳು (ಬದರರ ಮಕ್ಕಳಾದ ಶುಕಾಚಾರ್ಯರು) ಹೇಳುತ್ತಾರೆ.

**ಸೂ.ರ.:– एवं चाग्न्यादिसूक्तैरुपासकानामग्न्यादौ विष्णोः स्मर्तव्यत्वात्सूक्तनियमसम्भवादग्न्यादिशब्दवाच्यो विष्णुरेवेति सिद्धम् । तथा च वदरात्मजस्य शुकाचार्यस्य मतस्याविरोध इति स्थितम् ।**

**ಅನು.:–** ಅಗ್ನ್ಯಾದಿಸೂಕ್ತಗಳಿಂದ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳಲ್ಲಿ ವಿಷ್ಣುವು ಸ್ಮರ್ತವ್ಯನಾದ್ದರಿಂದ, (ಅಗ್ನ್ಯಾದಿಗಳಲ್ಲಿ ವಿಷ್ಣುವಿನ ಅನುಸಂಧಾನ ಮಾಡಬೇಕಾದ್ದರಿಂದ) ಆ ನಿಮಿತ್ತವಾಗಿ ಅಗ್ನ್ಯಾದಿಸೂಕ್ತನಿಯಮವು ಸಂಭವಿಸುವುದರಿಂದ ಅಗ್ನ್ಯಾದಿಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೀಗಾಗಿ ಬದರರ ಮಕ್ಕಳಾದ ಶುಕಾಚಾರ್ಯರ ಮತಕ್ಕೂ ವ್ಯಾಸರ ಮತಕ್ಕೂ ವಿರೋಧ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 31

**ಸಂಗತಿ**

**ಸೂ.ರ.:– रीत्यन्तरेण सूक्तनियमस्यान्यथोपपत्तिं प्रतिपादयत्सूत्रं व्याचष्टे ।**

**ಅನು.:–** ಮತ್ತೊಂದು ರೀತಿಯಿಂದಲೂ ಸೂಕ್ತನಿಯಮಕ್ಕೆ ಅನ್ಯಥೋಪಪತ್ತಿಯನ್ನು ಹೇಳುವ ಸೂತ್ರ ಹೇಳುತ್ತಾರೆ –

**ॐ सम्पत्तेरिति जैमिनिस्तथा हि दर्शयति ॐ (१.२.३१)**

**ಸೂತ್ರಾರ್ಥ :-** ಹಿ = ಯಾವ ಕಾರಣ ತಂ ಯಥಾ ಯಥಾ ಉಪಾಸತೇ ಎಂಬ ಪ್ರಸಿದ್ಧಶ್ರುತಿಯು ತಥಾ ದರ್ಶಯತಿ = ಜೈಮಿನಿಗಳ ಮತ ಹೇಗಿದೆಯೋ ಹಾಗೆಯೇ ಪ್ರತಿಪಾದಿಸುತ್ತದೆ, ಆದ್ದರಿಂದ ಜೈಮಿನಿಃ = ಜೈಮಿನಿ ಋಷಿಗಳು ತಮ್ಮ ಮತಕ್ಕೆ ಅನುಕೂಲ-ವಾಗುವ ಶ್ರುತಿಗೆ ಅನುಸಾರವಾಗಿ ಸಂಪತ್ತೇಃ=ಅಗ್ನ್ಯಾದಿಸೂಕ್ತಗಳಿಂದ ಬ್ರಹ್ಮನ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದರಿಂದ, ಇತಿ ಆಹ=ಆ ವಿವಕ್ಷೆಯಿಂದಾಗಿ ಸೂಕ್ತಾದಿನಿಯಮವು ಉಪಪನ್ನವಾಗುತ್ತದೆ ಎಂದು ಹೇಳುತ್ತಾರೆ.

**ಸೂ.ರ.:–** **एवं चाग्न्यादिसूक्तादिषु मुख्यतः परब्रह्मण एव प्रतिपाद्यत्वेऽपि सूक्तादिनियमो युज्यते । भगवदुपासकानामग्न्यादिप्राप्ति-र्भवति । अतो लौकिकव्यवहाराविरोध इति जैमिनिर्मन्यते । अतः सूक्तनियमोऽभ्युपगन्तव्य इति सिद्धम् ।**

**ಅನು.:–** ಅಗ್ನ್ಯಾದಿಸೂಕ್ತಾದಿಗಳಲ್ಲಿ ಮುಖ್ಯವಾಗಿ ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದರೂ ಸೂಕ್ತಾದಿನಿಯಮವು ಉಪಪನ್ನವಾಗುತ್ತದೆ. ಯಾಕೆಂದರೆ - ತಂ ಯಥಾ ಯಥೋಪಾಸತೇ ತತ್ತದೇವ ಭವತಿ ಎಂಬುದಾಗಿ ಶ್ರುತಿಯು ಹೇಳುವಂತೆ ಅಗ್ನ್ಯಾದಿಗಳಲ್ಲಿ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಪ್ರಾಪ್ತಿಯಾಗುತ್ತದೆ. ಆ ಅಭಿಪ್ರಾಯದಲ್ಲಿ ಅಗ್ನ್ಯಾದಿ-ಸೂಕ್ತಾದಿಗಳಿಂದ ಅಗ್ನ್ಯಾದಿಗಳ ವ್ಯವಹಾರ ಮಾಡುವುದು. ಹೀಗಾಗಿ ಲೌಕಿಕವ್ಯವಹಾರದ ವಿರೋಧವೂ ಬರುವುದಿಲ್ಲ ಎಂಬುದಾಗಿ ಜೈಮಿನಿಋಷಿಗಳು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಸೂಕ್ತನಿಯಮವನ್ನು ಅಂಗೀಕರಿಸಬೇಕು ಎಂದು ಸಿದ್ಧವಾಗುತ್ತದೆ.

ಸೂತ್ರ – 32

ಆಕ್ಷೇಪ

**ಸೂ.ರ.:–** **नन्वग्न्यादिसूक्तादिभिर्ब्रह्मोपासकस्याग्न्यादिप्राप्तिर्भवतीति वक्तुं न युक्तम् । मद्भक्ता यान्ती(गी. ७-२३)त्यादेरन्योपासकस्यान्यप्राप्त्य-योगात् । श्रुतेति सूत्रे तदनभ्युपगमाच्चेति प्राप्ते सूत्रमाह ।**

**ಅನು.:–** "ಅಗ್ನ್ಯಾದಿಸೂಕ್ತಾದಿಗಳಿಂದ ಬ್ರಹ್ಮನ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಪ್ರಾಪ್ತಿಯಾಗುತ್ತದೆ" ಎಂದು ಹೇಳುವುದು ಸರಿಯಲ್ಲ. ಯಾಕೆಂದರೆ – "ಮದ್ಭಕ್ತಾ ಯಾಂತಿ ಮಾಮಪಿ" (ಗೀತಾ 7-23) ಎಂಬುದಾಗಿ ಹೇಳಿದಂತೆ ಯಾರದೋ ಉಪಾಸನೆ-ಯಿಂದ ಯಾರದೋ ಪ್ರಾಪ್ತಿಯು ಉಪಪನ್ನವಾಗುವುದಿಲ್ಲ. ಬ್ರಹ್ಮನ ಉಪಾಸನೆ ಮಾಡಿದರೆ ಬ್ರಹ್ಮನ ಪ್ರಾಪ್ತಿಯಾಗಬಹುದೇ ಹೊರತು ಬ್ರಹ್ಮನ ಉಪಾಸನೆಯಿಂದ ಅಗ್ನ್ಯಾದಿಪ್ರಾಪ್ತಿ ಆಗುವುದು ಸಾಧ್ಯವಿಲ್ಲ.

## ॐ श्रुतोपनिषत्कगत्यभिधानाच्च ॐ (१.२.३२)

ಎಂಬ ಸೂತ್ರದಲ್ಲಿ ಯಾರದೋ ಉಪಾಸನೆಯಿಂದ ಯಾರದೋ ಪ್ರಾಪ್ತಿಯನ್ನು ಅಂಗೀಕರಿಸಿಯೂ ಇಲ್ಲ.

ಆದ್ದರಿಂದ ಬ್ರಹ್ಮನ ಉಪಾಸನೆಯಿಂದ ಅಗ್ನ್ಯಾದಿಪ್ರಾಪ್ತಿಯನ್ನು ಹೇಳಿದ್ದು ಸಮಂಜಸ-ವಾಗುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸೂತ್ರ ಹೇಳುತ್ತಾರೆ –

## ॐ आमनंति चैनमस्मिन् ॐ (१.२.३३)

**ಸೂತ್ರಾರ್ಥ :-** (ಶಂಕಾನಿವಾರಣೆಗಾಗಿ "ಚ" ಶಬ್ದವನ್ನು ಇಟ್ಟಿದ್ದಾರೆ.) ಯಸ್ಮಾತ್ = ಯಾವ ಕಾರಣ ಏನಂ=ಈ ವಿಷ್ಣುವನ್ನು ಅಸ್ಮಿನ್ ಅಗ್ನ್ಯಾದೌ ಆಮನಂತಿ = "ಯೋಽಗ್ನೌ ತಿಷ್ಠನ್" (ಬೃ. 5-7-5) ಇತ್ಯಾದಿ ಶ್ರುತಿಗಳು ಅಗ್ನ್ಯಾದಿಸ್ಥಿತನನ್ನಾಗಿ ಪ್ರತಿಪಾದಿಸುತ್ತವೆಯೋ ತಸ್ಮಾತ್=ಆ ಕಾರಣದಿಂದ ಚ=ಕಥಮಗ್ನ್ಯಾದಿಷು ವಿಷ್ಣೂಪಾಸ್ತ್ಯಾಽಗ್ನ್ಯಾದಿಪ್ರಾಪ್ತಿ-ರ್ಭವತೀತಿ ಶಂಕಾ ನಿವೃತ್ತಾ = ಅಗ್ನ್ಯಾದಿಗಳಲ್ಲಿ ವಿಷ್ಣುವಿನ ಉಪಾಸನೆ ಮಾಡುವುದರಿಂದ ಅಗ್ನ್ಯಾದಿಗಳ ಪ್ರಾಪ್ತಿ ಹೇಗೆ ಆಗುತ್ತದೆ? ಎಂಬ ಶಂಕೆಯು ಪರಿಹೃತವಾಯಿತು. ಕುತಃ = ಯಾಕೆ?

ಅಗ್ನ್ಯಾದಿಪದೇನ ತತ್ಸ್ಥಭಗವತ್ಪ್ರಾಪ್ತೇರೇವ ಅಭಿಪ್ರೇತತ್ವಾತ್ = ಅಗ್ನ್ಯಾದಿಪ್ರಾಪ್ತಿ-ಯಾಗುತ್ತದೆ ಎನ್ನುವಲ್ಲಿ ಅಗ್ನ್ಯಾದಿಪದದಿಂದ ಅಗ್ನ್ಯಾದ್ಯಂತರ್ಗತನಾದ ವಿಷ್ಣುವಿನ ಪ್ರಾಪ್ತಿ-ಯಾಗುತ್ತದೆ ಎಂದೇ ಅಭಿಪ್ರೇತವಾಗಿದ್ದರಿಂದ.

**ಸೂ.ರ.:–** एवं च तत्तत्सूक्तोपासकानामग्न्यादिपदेन तदन्तर्गतविष्णु-प्राप्तेर्विवक्षितत्वात् । विष्णूपासकस्याग्न्यादिप्राप्त्युक्तेरयोगात् । न च विष्णोरग्न्याद्यन्तर्गतत्वासिद्धिः । योऽग्नौ तिष्ठन्नित्यादिश्रुतेः । अतोऽग्न्यादि-शब्दवाच्यो विष्णुरेवेति सिद्धम् ।

**ಅನು.:–** ''ಅಗ್ನ್ಯಾದಿಸೂಕ್ತಗಳಿಂದ ವಿಷ್ಣುವಿನ ಉಪಾಸನೆ ಮಾಡುವವರಿಗೆ ಅಗ್ನ್ಯಾದಿ-ಪ್ರಾಪ್ತಿಯಾಗುತ್ತದೆ'' ಎಂದು ಹೇಳಿದಾಗ ಅಲ್ಲಿ ಅಗ್ನ್ಯಾದಿಪದದಿಂದ ತದಂತರ್ಗತನಾದ ವಿಷ್ಣುವನ್ನು ವಿವಕ್ಷಿಸಿ ಅಗ್ನ್ಯಾದಿಗಳಲ್ಲಿ ಅಂತರ್ಗತನಾದ ವಿಷ್ಣುವಿನ ಪ್ರಾಪ್ತಿಯನ್ನೇ ವಿವಕ್ಷಿಸಿರು-ವುದರಿಂದ ವಿಷ್ಣುವನ್ನು ಉಪಾಸನೆ ಮಾಡಿದವರಿಗೆ ಅಗ್ನ್ಯಾದಿಪ್ರಾಪ್ತಿ ಹೇಗೆ ಆಗುತ್ತದೆ? ಎಂಬ ಶಂಕೆಗೆ ಅವಕಾಶವಿಲ್ಲ.

ವಿಷ್ಣುವು ಅಗ್ನ್ಯಾದಿಗಳಲ್ಲಿ ಅಂತರ್ಗತನಾಗಿದ್ದಾನೆ ಎನ್ನುವುದೇ ಹೇಗೆ ಸಿದ್ದವಾಗಿದೆ? ಎಂದು ಶಂಕೆ ಮಾಡಬೇಡಿ.

''ಯೋಽಗ್ನೌ ತಿಷ್ಠನ್'' (ಬೃ.ಉ. 5-7-5) ''ಯ ಏವ ಏತಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷಃ'' (ಬೃ.ಉ. 4-5-3)

ಇತ್ಯಾದಿ ಶ್ರುತಿಗಳಿಂದ ವಿಷ್ಣುವು ಅಗ್ನ್ಯಾದಿಗಳಲ್ಲಿ ಅಂತರ್ಗತನಾಗಿದ್ದಾನೆ ಎನ್ನುವುದು ಸಿದ್ಧವಾಗಿದೆ.

ಹಾಗಾಗಿ ಅಗ್ನ್ಯಾದಿ ಅಧಿಷ್ಠಾನಗಳಲ್ಲಿ ವಿಷ್ಣುವಿನ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳಲ್ಲಿ ಅಂತರ್ಗತನಾಗಿರುವ ವಿಷ್ಣುವಿನ ಪ್ರಾಪ್ತಿಯಾಗುತ್ತದೆ ಎಂದು ವಿವಕ್ಷೆ ಮಾಡಿದ್ದರಿಂದ ''ವಿಷ್ಣುವಿನ ಉಪಾಸನೆಗೆ ವಿಷ್ಣುಪ್ರಾಪ್ತಿಯೇ ಫಲ'' ಎಂದು ಅಭಿಪ್ರೇತ-ವಾಗಿದ್ದರಿಂದ ಯಾವ ವಿರೋಧವೂ ಬರುವುದಿಲ್ಲ.

ಆದ್ದರಿಂದ – ''ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ'' (ಛಾಂ.ಉ. 5-18-1)

ಎಂಬುದಾಗಿ (ವೈಶ್ವಾನರವಿದ್ಯೆಯಲ್ಲಿ) ಛಾಂದೋಗ್ಯಶ್ರುತಿಯಲ್ಲಿ ಶ್ರುತವಾಗುತ್ತಿರುವ ಅಗ್ನಿ-ವೈಶ್ವಾನರ ಮೊದಲಾದ ಶಬ್ದಗಳಿಂದ ವಾಚ್ಯನಾಗುವ ವ್ಯಕ್ತಿ ವಿಷ್ಣುವೇ ಆಗಿದ್ದಾನೆ ಎಂದು ಸಿದ್ಧವಾಯಿತು.

**ವೈಶ್ವಾನರಾಧಿಕರಣವು ಮುಗಿಯಿತು.**

# प्रथमोऽध्यायः

## तृतीयः पादः

ಅಧಿಕರಣ – 1

## ದ್ಯುಭ್ವಾಧಿಕರಣ

### ಪಾದಸಂಗತಿ

ಸೂ.ರ.:– तत्र चान्यत्र च प्रसिद्धानां विष्णौ समन्वयः प्रायेणास्मिन्पादे क्रियते ।

ಅನು.:– ಹರಿಯಲ್ಲಿ ಹಾಗೂ ಇತರರಲ್ಲಿ ಶ್ರುತ್ಯಾದಿಪ್ರಸಿದ್ಧವಾದ ನಾಮಲಿಂಗಾತ್ಮಕ-ವಾದ ಶಬ್ದಗಳನ್ನು ವಿಷ್ಣುವಿನಲ್ಲಿ ಪ್ರಾಯಶಃ ಸಮನ್ವಯ ಮಾಡುತ್ತಾರೆ ಈ ಮೂರನೇ ಪಾದದಲ್ಲಿ.

### ಅಧಿಕರಣ ಸಂಗತಿ

ಸೂ.ರ.:– अत्रोभयत्र प्रसिद्धसर्वाधारत्वलिङ्गं ब्रह्मणि समन्वीयते ।

ಅನು.:– ಹರಿಯಲ್ಲಿ ಹಾಗೂ ಇತರರಲ್ಲಿ ಪ್ರಸಿದ್ಧವಾದ ಸರ್ವಾಧಾರತ್ವಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಮೊದಲನೇ ಈ ದ್ಯುಭ್ವಾಧಿಕರಣದಲ್ಲಿ.

ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರಪುರುಷನಾದ ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹಿಂದೆ ಹೇಳಲಾಗಿದೆ. ಆ ಪರವಿದ್ಯಾವಿಷಯತ್ವವು ಆಥರ್ವಣದಲ್ಲಿ ಯಸ್ಮಿನ್ ದ್ಯೌಃ ಎಂದು ಶ್ರುತನಾಗುತ್ತಿರುವ ದ್ಯುಭ್ವಾದ್ಯಾಯತನನಾದ ಒಬ್ಬ ವ್ಯಕ್ತಿಗೆ ಶ್ರುತವಾಗುತ್ತಿದೆ. ಹೀಗಾಗಿ ಈ ದ್ಯುಭ್ವಾದ್ಯಾಯತನನಾದ ವ್ಯಕ್ತಿ ಯಾರೆಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु रुद्रस्यैव द्युभ्वाद्यायतनत्वं भवेत् । अत्रोक्तप्राणाधारत्वस्य प्राणानां ग्रन्थिरसी(महा.ना.१६-२)त्यादिना तस्मिन्प्रतीतेः ।

**मन ओतं चेत्यादिना मन आयतनत्वस्य तस्मिन्नैवोक्तत्वात् । प्राणाधारत्वलिङ्गेन प्राणेश्वर (घृतसूक्ते) इत्यादिना तस्य प्रतीतेः ।**

**ಅನುವಾದ :– "यस्मिन् द्यौः पृथिवी चान्तरिक्षमोतं मनः सह प्राणैश्च सर्वैः तमेवैकं जानथ आत्मानम्..." (मुं.उ.२-२-५)**

ಎಂಬುದಾಗಿ ಶ್ರುತವಾಗುತ್ತಿರುವ ದ್ಯುಭ್ವಾದ್ಯಾಯತನತ್ವವು ರುದ್ರದೇವರಿಗೇ ಹೇಳಬೇಕು.

ಯಾಕೆಂದರೆ – ಇಲ್ಲಿ ಹೇಳುತ್ತಿರುವ ಪ್ರಾಣಾಧಾರತ್ವವು "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾऽऽವಿಶಾಂತಕಃ" (ಮ.ನಾ.ಉ. 35) ಎಂಬುದಾಗಿ ರುದ್ರದೇವರಲ್ಲಿ ಶ್ರುತವಾಗುತ್ತಿದೆ.

ಮತ್ತು ಇಲ್ಲಿ ಹೇಳುತ್ತಿರುವ ಮನ ಆಯತನತ್ವವೂ ಸಹ "ಮನೋ ವೈ ರುದ್ರ ಓತಂ ಚ ಪ್ರೋತಂ ಚ" ಎಂಬುದಾಗಿ ರುದ್ರದೇವರಲ್ಲಿಯೇ ಶ್ರುತವಾಗುತ್ತಿದೆ. ಈ ಎಲ್ಲ ಶ್ರುತಿಗಳು ವಿಷ್ಣುವಿಷಯಕವೇ ಆಗಬಹುದಲ್ಲ? ಎಂದರೆ, ಆ ಶಂಕೆಗೆ ಅವಕಾಶವಿಲ್ಲ. ಯಾಕೆಂದರೆ – "ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ" (ಘೃತಸೂಕ್ತಂ) ಇತ್ಯಾದಿಯಾಗಿ ಪ್ರಾಣಾಧಾರತ್ವ-ಲಿಂಗವು ರುದ್ರದೇವರಲ್ಲಿ ಪ್ರತೀತವಾಗುತ್ತಿದೆ. ಆದ್ದರಿಂದ ದ್ಯುಭ್ವಾದ್ಯಾಯತನನಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವ ಪ್ರಾಣಾಧಾರತ್ವ – ಮನ ಆಯತನತ್ವಾದಿಗಳು ರುದ್ರನಿಗೆ ಶ್ರುತವಾಗುತ್ತಿರುವುದರಿಂದ ದ್ಯುಭ್ವಾದ್ಯಾಯತನತ್ವವನ್ನು ರುದ್ರದೇವರಿಗೇ ಹೇಳಬೇಕು.

**ಸೂ.ರ.:– जीवस्य वा भवेत् । स एषोऽतश्चरत (मुं.२-२-६) इत्यादिना जीवलिङ्गप्रतीतेः । इति प्राप्ते सूत्रमुपन्यस्यति ।**

**ಅನು.:–** ಅಥವಾ ಜೀವನಿಗಾದರೂ ದ್ಯುಭ್ವಾದ್ಯಾಯತನತ್ವವನ್ನು ಹೇಳಬೇಕು. ಯಾಕೆಂದರೆ – "ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋऽಂತಶ್ಚರತೇ ಬಹುಧಾ ಜಾಯಮಾನಃ" ಎಂಬುದಾಗಿ ದ್ಯುಭ್ವಾದ್ಯಾಯತನನಾದ ವ್ಯಕ್ತಿಯ ವಿಷಯದಲ್ಲಿ ಬಹುಧಾ ಜಾಯಮಾನತ್ವರೂಪವಾದ ಜೀವನ ಲಿಂಗವು ಶ್ರುತವಾಗುತ್ತಿರುವುದರಿಂದ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ द्युभ्वाद्यायतनं स्वशब्दात् ॐ (१.३.१)

**ಸೂತ್ರಾರ್ಥ :-** ದ್ಯುಭ್ವಾದ್ಯಾಯತನಂ = "ಯಸ್ಮಿನ್ ದ್ಯೌಃ ಪೃಥಿವೀ ..." (ಮುಂ. 2-2-5) ಎಂಬ ಶ್ರುತಿಯಲ್ಲಿ ಶ್ರುತನಾಗುತ್ತಿರುವ ಸ್ವರ್ಗಭೂಮ್ಯಾದಿಸರ್ವಾಶ್ರಯನಾದ (ದ್ಯುಭ್ವಾದ್ಯಾಯತನನಾದ) ವ್ಯಕ್ತಿ ವಿಷ್ಣುವೇ ಆಗುತ್ತಾನೆ. ಹೊರತು ಬೇರೆಯವರು ಆಗುವುದಿಲ್ಲ.

ಕುತಃ = ಯಾಕೆ? ಸ್ವಶಬ್ದಾತ್ = ಸ್ವಶಬ್ದ (ಸ್ವ ಎಂಬ ಶಬ್ದ)ದಿಂದ ಗೃಹೀತವಾದ (ಸ್ವಶಬ್ದಪರ್ಯಾಯವಾದ) ಬ್ರಹ್ಮವಾಚಕವಾದ ಆತ್ಮಶಬ್ದವು ಇರುವುದರಿಂದ.

### ಸಿದ್ಧಾಂತ

**ಸೂ.ರ.:-** एवं च तमेवैकमात्मानमि(मुं.२-२-५)त्यात्मशब्दाद्विष्णोर्द्युभ्वाद्यायतनत्वमिति सिद्धम् ।

**ಅನು.:-** "ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ" ಎಂಬುದಾಗಿ ದ್ಯುಭ್ವಾದ್ಯಾಯತನನಾದ ವ್ಯಕ್ತಿಯನ್ನು ಹೇಳುವ ಶ್ರುತಿಯಲ್ಲಿ ಮುಂದೆ "ತಮೇವೈಕಂ ಜಾನಥ ಆತ್ಮಾನಂ ..." ಎಂಬುದಾಗಿ ಆತ್ಮಶಬ್ದವು ಶ್ರುತವಾಗುತ್ತಿದೆ. ಈ ಆತ್ಮಶಬ್ದವಾದರೋ ಬ್ರಹ್ಮವಾಚಕವೇ ಆಗಿದೆ ಎಂದು ಪ್ರಸಿದ್ಧವಾಗಿದೆ. ಹೀಗಾಗಿ ಬ್ರಹ್ಮವಾಚಕವಾದ ಆತ್ಮಶಬ್ದವು ಇರುವುದರಿಂದ ದ್ಯುಭ್ವಾದ್ಯಾಯತನನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ - 2

### ಆಕ್ಷೇಪ

**ಸೂ.ರ.:-** ननु विष्णौ मुख्योऽप्यात्मशब्दोऽरा इव रथनाभावित्यत्र वहुधा जायमानत्वरूपजीवलिङ्गात् । तस्य जीवत्वादेव प्राणित्वसिद्धेः । ततश्च जीव एव द्युभ्वाद्यायतनं इति प्राप्ते सूत्रं पठति ।

**ಅನು.:-** "ತಮೇವೈಕಂ ಜಾನಥ ಆತ್ಮಾನಂ ಎನ್ನುವಲ್ಲಿ ಆತ್ಮಶಬ್ದ ಇರುವುದರಿಂದ ದ್ಯುಭ್ವಾದ್ಯಾಯತನನಾದವನು ವಿಷ್ಣುವೇ" ಎಂದು ಹೇಗೆ ಹೇಳುತ್ತೀರಿ? ಏಕೆಂದರೆ - ಆತ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದ್ದರೂ ಸಹ "ಅರಾ ಇವ ರಥನಾಭೌ ಸಂಹತಾ ಯತ್ರ

ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ'' ಎನ್ನುವಲ್ಲಿ ಬಹುಧಾ ಜಾಯಮಾನತ್ವ ರೂಪವಾದ ಜೀವಲಿಂಗವು ಶ್ರುತವಾಗುತ್ತಿರುವುದರಿಂದ, ಮತ್ತು ಜೀವನಿಗೆ (ಜೀವನಾದ್ದರಿಂದಲೇ) ಪ್ರಾಣಿತ್ವವೂ (ಪ್ರಾಣಾಧಾರತ್ವವೂ) ಸಿದ್ಧಿಸುವುದರಿಂದ ದ್ಯುಭ್ವಾದ್ಯಾಯತನನಾದ ವ್ಯಕ್ತಿ ಜೀವನೇ ಆಗುತ್ತಾನೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ मुक्तोपसृप्यव्यपदेशात् ॐ (१.३.२)

**ಸೂತ್ರಾರ್ಥ:-** ವಿಷ್ಣುವಿನಿಂದ ಭಿನ್ನನಾದ ವ್ಯಕ್ತಿಗೆ (ಜೀವನಿಗೆ) ದ್ಯುಭ್ವಾದ್ಯಾಯ-ತನತ್ವವು ಕೂಡುವುದಿಲ್ಲ. ಕಿಂತು ವಿಷ್ಣುವಿಗೇ ದ್ಯುಭ್ವಾದ್ಯಾಯತನತ್ವವು ಉಪಪನ್ನವಾಗುತ್ತದೆ. ಕುತಃ=ಯಾಕೆ? ಮುಕ್ತೋಪಸೃಪ್ಯವ್ಯಪದೇಶಾತ್ = (ಇದು ಭಾವಪ್ರಧಾನ ನಿರ್ದೇಶವಾಗಿದೆ) ದ್ಯುಭ್ವಾದ್ಯಾಯತನನಾದ ವ್ಯಕ್ತಿಗೆ ''ಅಮೃತಸ್ಯೈಷ ಸೇತುಃ'' ಎಂಬುದಾಗಿ ಮುಕ್ತಪ್ರಾಪ್ಯತ್ವ-ವನ್ನು ಹೇಳಿದ್ದರಿಂದ, ಆ ಮುಕ್ತಪ್ರಾಪ್ಯತ್ವವಾದರೋ ವಿಷ್ಣು ಬಿಟ್ಟು ಬೇರೆಯವರಲ್ಲಿ ಉಪಪನ್ನವಾಗುವುದಿಲ್ಲವಾದ್ದರಿಂದ.

**ಸೂ.ರ.:– एवं चामृतस्यैष सेतु(मुं.२-२-५)ब्रह्मविदाप्नोति परमि (तै.२-१)त्यादिषु मुक्तप्राप्यत्ववचनाद्विष्णोर्द्युभ्वाद्यायतनत्वमिति सिद्धम् ।**

**ಅನು.:–** ''ಅಮೃತಸ್ಯೈಷ ಸೇತುಃ'' (ಮುಂ. 2-2-5) ''ಬ್ರಹ್ಮವಿದಾಪ್ನೋತಿ ಪರಮ್'' (ತೈ. 2-1) ಎಂಬುದಾಗಿ ದ್ಯುಭ್ವಾದ್ಯಾಯತನನಾದ ವ್ಯಕ್ತಿಗೆ ಮುಕ್ತಪ್ರಾಪ್ಯತ್ವವನ್ನು ಹೇಳುತ್ತಿದ್ದಾರೆ. ಈ ಮುಕ್ತಪ್ರಾಪ್ಯತ್ವಧರ್ಮವಾದರೋ ವಿಷ್ಣುವಿಗೆ ಮಾತ್ರ ಕೂಡುತ್ತದೆ (ಇತರರಿಗೆ ಕೂಡುವುದಿಲ್ಲ). ಆದ್ದರಿಂದ ಯಸ್ಮಿನ್ ದ್ಯೌಃ ಪೃಥಿವೀ ... ಎಂಬುದಾಗಿ ಶ್ರುತನಾಗುತ್ತಿರುವ ದ್ಯುಭ್ವಾದ್ಯಾಯತನನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ – 3

### ಆಕ್ಷೇಪ

**ಸೂ.ರ.:– ननु विष्णुप्रापकवत् रुद्रप्रकृत्योरपि प्रापकसद्भावा-त्तयोर्द्युभ्वाद्यायतनत्वं स्यादिति प्राप्ते सूत्रं पठति ।**

**ಅನು.:–** ವಿಷ್ಣುವಿಗೆ ದ್ಯುಭ್ವಾದ್ಯಾಯತನತ್ವವನ್ನು ನಿಶ್ಚಯಿಸುವ ಆತ್ಮಶಬ್ದರೂಪವಾದ ಲಿಂಗ ಇರುವಂತೆ, ರುದ್ರ – ಪ್ರಕೃತಿಗಳಿಗೂ ದ್ಯುಭ್ವಾದ್ಯಾಯತನತ್ವವನ್ನು ನಿಶ್ಚಯಿಸುವ

ಲಿಂಗಗಳೂ ಇರುವುದರಿಂದ ರುದ್ರ - ಪ್ರಕೃತಿಗಳೂ ದ್ಯುಭ್ವಾದ್ಯಾಯತನರಾಗಲಿ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ -

**ॐ नानुमानमतच्छब्दात् ॐ (१.३.३)**

**ಸೂತ್ರಾರ್ಥ** :- ಅನುಮಾನಂ (ಆನುಮಾನಂ) = ಅನುಮಾನಸಿದ್ಧವಾದ ಪ್ರಾಮಾಣ್ಯ ಉಳ್ಳ ಪಾಶುಪತಾದಿ ಆಗಮಗಳಿಂದ ಸರ್ವಾಶ್ರಯತ್ವೇನ ಕಲ್ಪಿತರಾದ ರುದ್ರಪ್ರಧಾನಾದಿಕಂ = ರುದ್ರ - ಪ್ರಧಾನಾದಿಗಳು ದ್ಯುಭ್ವಾದ್ಯಾಯತನಂ ನ = ದ್ಯುಭ್ವಾದ್ಯಾಯತನ ಆಗುವುದಿಲ್ಲ. ಕುತಃ = ಯಾಕೆ? ಅತಚ್ಛಬ್ದಾತ್ = ಭಸ್ಮಧರತ್ವ - ಉಗ್ರತ್ವ ಮೊದಲಾದ ರುದ್ರಾದಿಗಳನ್ನು ಹೇಳುವ ಶಬ್ದ - ಲಿಂಗಾದಿಗಳು ಇಲ್ಲವಾದ್ದರಿಂದ.

**ಸೂ.ರ.:- एवं च रुद्रादिशब्दानां सावकाशत्वेन प्राणानामि(महा ना.१६-२)त्यादिवाक्यस्य रुद्रपरत्वानिर्णयेनासाधकत्वात् । निरवकाशानां च भस्मधरोग्रादिशब्दानामभावात् । ततश्च विष्णोर्द्युभ्वाद्यायतनत्वमिति सिद्धम् ।**

**ಅನು.**:- ದ್ಯುಭ್ವಾದ್ಯಾಯತನನಾದ ವ್ಯಕ್ತಿಯ ವಿಷಯದಲ್ಲಿ ರುದ್ರ ಮುಂತಾದ ಶಬ್ದಗಳು ಶ್ರುತವಾಗುತ್ತಿದ್ದರೂ ಸಹ ಆ ಶಬ್ದಗಳು ಸಾವಕಾಶವಾಗಿವೆ. ಹೀಗಾಗಿ "ಪ್ರಾಣಾನಾಂ ಗ್ರಂಥಿರಸಿ" (ಮಹಾ.ನಾ. 16,2) ಇತ್ಯಾದಿ ವಾಕ್ಯಗಳು ರುದ್ರಪರವಾಗಿವೆ ಎಂದು ನಿರ್ಣಯಿಸಲು ಸಾಧ್ಯವಿಲ್ಲವಾದ್ದರಿಂದ ಅವು ಸಾಧಕವಾಗುವುದಿಲ್ಲ.

ರುದ್ರಾದಿಗಳಿಗೆ ಮಾತ್ರ ವಾಚಕತ್ವೇನ ಪ್ರಸಿದ್ಧವಾದ "ಭಸ್ಮಧರ" "ಉಗ್ರ" ಮೊದಲಾದ ನಿರವಕಾಶಶಬ್ದಗಳು ದ್ಯುಭ್ವಾದ್ಯಾಯತನನಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿಲ್ಲ.

ಆದ್ದರಿಂದ ಶ್ರುತವಾಗುತ್ತಿರುವ ರುದ್ರಾದಿಶಬ್ದಗಳು ಸಾವಕಾಶವಾದ್ದರಿಂದ ಸಾಧಕವಾಗುವುದಿಲ್ಲ. ಇನ್ನು ನಿರವಕಾಶವಾದ ಭಸ್ಮಧರ ಉಗ್ರ ಮುಂತಾದ ಶಬ್ದಗಳು ಇಲ್ಲ. ಆದ್ದರಿಂದ ದ್ಯುಭ್ವಾದ್ಯಾಯತನನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 4

**ಆಕ್ಷೇಪ**

**ಸೂ.ರ.:- ननु स एष (मुं.२-२-६) इत्यत्र बहुधा जायमानत्व-रूपजीवलिङ्गश्रवणात्प्राणित्वसिद्धेश्च जीवसामान्यस्य, वायुना वै गौतम-**

**सूत्रेणायं लोक इति (बृ.५-७-२) विषयभूतलोकाधारत्वस्य वायुनिष्ठत्वेन श्रवणाद्वायोर्वा द्युभ्वाद्यायतनत्वं स्यादिति प्राप्ते सूत्रमुपन्यस्यति ।**

**ಅನು.:–** ಜೀವ – ವಾಯುಗಳು ದ್ಯುಭ್ವಾದ್ಯಾಯತನರಾಗಲಿ ಎಂದು ಆಕ್ಷೇಪ. ಏಕೆಂದರೆ "ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ" ಎನ್ನುವಲ್ಲಿ ಬಹುಧಾ ಜಾಯಮಾನತ್ವ ರೂಪವಾದ ಜೀವಲಿಂಗವು ಶ್ರುತವಾಗುತ್ತಿರುವುದರಿಂದ ಮತ್ತು ಜೀವರಿಗೆ ಪ್ರಾಣಿತ್ವವೂ ಸಿದ್ಧಿಸುವುದರಿಂದ ಜೀವರೇ ದ್ಯುಭ್ವಾದ್ಯಾಯತನರಾಗಲಿ.

ಅಥವಾ – "ವಾಯುನಾ ವೈ ಗೌತಮಸೂತ್ರೇಣಾಯಂ ಲೋಕಃ" (ಬೃ. 5-7-2) ಎಂಬುದಾಗಿ ವಿಷಯಭೂತಲೋಕಾಧಾರತ್ವವು ವಾಯುದೇವರಲ್ಲಿ ಇದೆ ಎಂದು ಶ್ರುತವಾಗುತ್ತಿರುವುದರಿಂದ ವಾಯುದೇವರು ದ್ಯುಭ್ವಾದ್ಯಾಯತನರಾಗಲಿ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ –

### ॐ प्राणभृच्च ॐ (१.३.५)

**ಸೂತ್ರಾರ್ಥ :-** ಪ್ರಾಣಭೃಚ್ಚ = ಜೀವರೂ (ವಾಯುವೂ) ಸಹ ಅದೇ ಕಾರಣಕ್ಕಾಗಿಯೇ ದ್ಯುಭ್ವಾದ್ಯಾಯತನರಾಗುವುದಿಲ್ಲ.

**ಸೂ.ರ.:– एवं च प्रागुक्तसावकाशसाधकसद्भावेऽपि निरवकाशात्म-शब्दाभावादेव तत्प्रापकत्वेनाभिमतस्य बहुधा जन्मादेरजायमान इति (तै.आ.३-१३-१) श्रुतेर्विष्णावेव सम्भवाच्च न जीवस्य वायोर्वा द्युभ्वाद्यायतनत्वमिति सिद्धम् ।**

**ಅನು.:–** ಹಿಂದೆ ಹೇಳಿದಂತೆ ಜೀವರನ್ನು ವಾಯುವನ್ನು ತಿಳಿಸುವ ಸಾವಕಾಶ ಸಾಧಕಗಳು (ಶಬ್ದಗಳು) ಇದ್ದರೂ ಸಹ, ಜೀವ-ವಾಯುಗಳನ್ನು ಸಾಧಿಸುವ ನಿರವಕಾಶವಾದ ಶಬ್ದಗಳು ಯಾವುದೂ ಇಲ್ಲವಾದ್ದರಿಂದ ಮತ್ತು ಜೀವನಿಗೆ ಸಾಧಕವಾಗಿ ಅಭಿಮತವಾದ ಬಹುಧಾ ಜಾಯಮಾನತ್ವಾದಿಗಳು "ಅಜಾಯಮಾನೋ ಬಹುಧಾ ವಿಜಾಯತೇ" (ತೈ.ಆ. 3-13-1) ಎಂಬುದಾಗಿ ಶ್ರುತಿಯೇ ಹೇಳುವಂತೆ ವಿಷ್ಣುವಿನಲ್ಲಿಯೇ ಸಂಭಾವಿತವಾಗಿರುವುದರಿಂದಲೂ ಸಹ ಜೀವನಾಗಲೀ ವಾಯುವಾಗಲೀ ದ್ಯುಭ್ವಾದ್ಯಾಯತನರಾಗಲು ಸಾಧ್ಯವಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 5
## ಆಕ್ಷೇಪ

**ಸೂ.ರ.:– ननु जीवलिङ्गस्य किं विष्णुत्वप्रतिपादनायासेन जीवस्यैव द्युभ्वाद्यायतनत्वे विष्णोस्तल्लाभसम्भवात् । न चोक्तहेतुविरोधः । जीवेशा-भेदाभिप्रायेण जीवेऽप्यात्मशब्दाद्युक्तिसम्भवाज्जीव एव द्युभ्वाद्यायतनत्वेन प्रतिपाद्यो भवेदिति प्राप्ते सूत्रमाह ।**

**ಅನು.:–** ಬಹುಧಾ ಜಾಯಮಾನತ್ವ ರೂಪವಾದ ಜೀವಲಿಂಗವು ವಿಷ್ಣುವನ್ನು ಪ್ರತಿಪಾದಿಸುತ್ತಿದೆ ಎಂದು ಸಾಧಿಸುವ ಆಯಾಸ ಏಕೆ ಮಾಡುತ್ತೀರಿ? ಜೀವನಿಗೇ ದ್ಯುಭ್ವಾದ್ಯಾಯತನತ್ವವನ್ನು ಅಂಗೀಕರಿಸಿಬಿಟ್ಟರೆ ವಿಷ್ಣುವಿಗೂ ಆ ದ್ಯುಭ್ವಾದ್ಯಾಯತನತ್ವವು ಸಿದ್ಧವಾಗುತ್ತದೆ.

ಅಲ್ಲ, ಜೀವನಿಗೆ ದ್ಯುಭ್ವಾದ್ಯಾಯತನತ್ವವನ್ನು ಹೇಗೆ ಹೇಳುವುದು? ವಿಷ್ಣುವಿನಲ್ಲಿ ಅಸಾಧಾರಣವಾದ ಆತ್ಮಶಬ್ದವು ಇರುವಂತೆ, ಜೀವವಾಚಕವಾದ ಶಬ್ದವು ಇಲ್ಲವಲ್ಲ? ಎಂದರೆ ಅದು ಸರಿಯಲ್ಲ. ಜೀವ-ಬ್ರಹ್ಮರಲ್ಲಿ ಅಭೇದ ಇರುವುದರಿಂದ, ವಿಷ್ಣುವಿನಲ್ಲಿ ಆತ್ಮಶಬ್ದವು ಇದ್ದಮೇಲೆ ಜೀವನಲ್ಲಿಯೂ ಆತ್ಮಶಬ್ದವು ಇದ್ದಂತೆಯೇ. ಆದ್ದರಿಂದ ಜೀವನೇ ದ್ಯುಭ್ವಾದ್ಯಾಯತನತ್ವೇನ ಪ್ರತಿಪಾದ್ಯನಾಗಲಿ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ -

**ॐ भेदव्यपदेशात् ॐ (१.३.५)**

**ಸೂತ್ರಾರ್ಥ :-** ಭೇದವ್ಯಪದೇಶಾತ್ = "ಅನ್ಯಮೀಶಮ್" ಎಂಬುದಾಗಿ ಜೀವ - ಬ್ರಹ್ಮರಲ್ಲಿ ಭೇದವನ್ನು ಹೇಳಿದ್ದರಿಂದ ಜೀವ-ಬ್ರಹ್ಮರಲ್ಲಿ ಐಕ್ಯವನ್ನು ಹೇಳಲು ಬರುವುದಿಲ್ಲ.

**ಸೂ.ರ.:– एवं च जुष्टं यदा पश्यती(मुं.३-१-१)त्यत्र दर्शनकर्तृत्वेन प्रकृतजीवस्येशपदोक्तेश्वराद्भेदोक्तेर्विष्णुरेव द्युभ्वाद्यायतनत्वेन प्रतिपाद्य इति सिद्धम् ।**

**ಅನು.:–** "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಂ" (ಮುಂ.ಉ. 3-1-1) ಎಂಬುದಾಗಿ ದರ್ಶನಕರ್ತೃತ್ವೇನ ಪ್ರಕೃತನಾದ ಜೀವನಿಗೆ ಈಶಪದವಾಚ್ಯನಾದ

ಭಗವಂತನಿಂದ ಭೇದವನ್ನೇ ಹೇಳಿದ್ದರಿಂದಾಗಿ ಜೀವ-ಬ್ರಹ್ಮರಲ್ಲಿ ಐಕ್ಯವನ್ನು ಹೇಳಲು ಬರುವುದಿಲ್ಲ. ಹೀಗಾಗಿ ವಿಷ್ಣುವೇ ದ್ಯುಭ್ವಾದ್ಯಾಯತನತ್ವೇನ ಪ್ರತಿಪಾದ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 6

### ಆಕ್ಷೇಪ

**ಸೂ.ರ.:– ननु जीवस्य कस्माच्चिदीशादन्यत्वमुच्यते न तु परमात्मनः । ततश्च न तयोर्भेद इति प्राप्ते पराकुर्वत्सूत्रमाह ।**

**ಅನು.:–** ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ ಎಂಬುದಾಗಿ ಜೀವನಿಗೆ ಪರಮಾತ್ಮನಿಂದ ಭೇದವನ್ನು ಹೇಳುತ್ತಿಲ್ಲ. ಅಲ್ಲಿ ಈಶಪದದಿಂದ ಪರಮಾತ್ಮನನ್ನೇ ವಿವಕ್ಷಿಸಿಲ್ಲ. ಬೇರೆ ಯಾರೋ ಒಬ್ಬ ವ್ಯಕ್ತಿಯನ್ನು ವಿವಕ್ಷಿಸಲಾಗಿದೆ. ಹೀಗಾಗಿ ಜೀವನಿಗೆ ಈಶಪದವಾಚ್ಯನಾದ ಯಾರೋ ಒಬ್ಬ ವ್ಯಕ್ತಿಯಿಂದ ಭೇದವನ್ನು ಹೇಳಲಾಗಿದೆ. ಆದ್ದರಿಂದ ಜೀವ-ಪರಮಾತ್ಮರಲ್ಲಿ ಭೇದ ಏನಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्रकरणात् ॐ (१.३.६)**

**ಸೂತ್ರಾರ್ಥ :-** ಪ್ರಕರಣಾತ್ = "ಅನ್ಯಮ್" (ಮುಂ. 3-1-1) ಇತ್ಯಾದಿಗಳು ವಿಷ್ಣುಪ್ರಕರಣವಾದ್ದರಿಂದ ಇಲ್ಲಿ ಜೀವನಿಗೆ ವಿಷ್ಣುವಿನಿಂದ ಭೇದವೇ ಹೇಳಲ್ಪಡುತ್ತಿದೆ. ಹೊರತು ಬೇರೆ ಯಾರಿಂದಲೋ ಭೇದ ಅಲ್ಲ.

**ಸೂ.ರ.:– एवं च द्वे विद्य (मुं.१-१-४) इत्यस्य परविद्याविषय-वस्तुनोऽत्राधीतत्वेन विष्णुप्रकरणत्वात्परमात्मन एव भेदव्यपदेशाव-गतेर्विष्णुरेव द्युभ्वाद्यायतन इति सिद्धम् ।**

**ಅನು.:–** ಇಲ್ಲಿ ದ್ವೇ ವಿದ್ಯೇ ವೇದಿತವ್ಯೇ (ಮುಂ. 1-1-4) ಎಂಬುದಾಗಿ ಪರವಿದ್ಯಾ-ವಿಷಯವಾದ ವಸ್ತುವು ಅಧೀತವಾಗುತ್ತಿರುವುದರಿಂದ, ಆ ಪರವಿದ್ಯಾವಿಷಯವಾದ ವಸ್ತುವು ವಿಷ್ಣುವೇ ಆಗಿದ್ದರಿಂದ ಈ ಪ್ರಕರಣವು ವಿಷ್ಣುಪ್ರಕರಣ ಎಂದು ತಿಳಿದುಬರುತ್ತದೆ.

ಹೀಗೆ ಈ ಪ್ರಕರಣವು ವಿಷ್ಣುಪ್ರಕರಣವಾದ್ದರಿಂದ ಈಶಪದದಿಂದ ಪರಮಾತ್ಮನೇ ಪ್ರಸ್ತುತನಾಗುತ್ತಾನೆ. ಅಂತಹ ಪರಮಾತ್ಮನಿಂದಲೇ ಜೀವನಿಗೆ ಭೇದವು ವ್ಯಪದೇಶಗೊಳ್ಳುತ್ತಿದೆ.

ಆದ್ದರಿಂದ ಜೀವ-ಪರಮಾತ್ಮರಲ್ಲಿ ಭೇದವೇ ಇರುವುದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾದ ವ್ಯಕ್ತಿ ಎಂದು ಸಿದ್ಧವಾಗುತ್ತದೆ.

### ಸೂತ್ರ – 7

### ಸಂಗತಿ

**ಸೂ.ರ.:– एवं न केवलं जुष्टमिति भेदश्रुतेर्जीवेशभेदोऽत्र प्रकरणे विवक्षित इति ज्ञायते किंतु लिङ्गादपीत्याह सूत्रकृत् ।**

**ಅನು.:–** ಕೇವಲ "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್" ಎಂಬುದಾಗಿ ಭೇದಶ್ರುತಿ ಇರುವುದರಿಂದ ಈ ಪ್ರಕರಣದಲ್ಲಿ ಜೀವೇಶಭೇದವು ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ ಎಂದಷ್ಟೇ ಅಲ್ಲ. ಕಿಂತು ಲಿಂಗದಿಂದಲೂ ಸಹ ಈ ಪ್ರಕರಣದಲ್ಲಿ ಜೀವ-ಬ್ರಹ್ಮರ ಭೇದವು ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ ಎಂಬುದನ್ನು ಹೇಳುತ್ತಾರೆ ಸೂತ್ರಕಾರರು –

**ॐ स्थित्यदनाभ्यां च ॐ (१.३.७)**

**ಸೂತ್ರಾರ್ಥ :–** ಸ್ಥಿತ್ಯದನಾಭ್ಯಾಂ = ಜೀವ – ಬ್ರಹ್ಮರಲ್ಲಿ ದ್ವಾ ಸುಪರ್ಣಾ (ಮುಂ. 3-1-1) ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಕರ್ಮಫಲ ಅನುಪಜೀವನಸ್ಥಿತಿ – ತದುಪಜೀವನ ರೂಪವಾದ ಹೇತುಗಳಿಂದಲೂ ಸಹ ಜೀವ-ಬ್ರಹ್ಮರಲ್ಲಿ ಐಕ್ಯವನ್ನು ಹೇಳಬಾರದು (ಭೇದವನ್ನೇ ಹೇಳಬೇಕು) ಎಂದು ತಿಳಿಯುತ್ತದೆ.

**ಸೂ.ರ.:– एवं च निर्दिष्टश्रुत्या जीवेशयोर्भेदस्य सिद्धत्वान्न जीवः किन्तु विष्णुरेव द्युभ्वाद्यायतन इति सिद्धम् ।**

**ಅನುವಾದ :– द्वा सुपर्णा सयुजा सखाया समानं वृक्षं परिषस्वजाते । तयोरन्यः पिप्पलं स्वाद्वत्त्यनश्नन्यो अभिचाकशीति ॥ (मुं.उ.३-१-१)**

**ಅನು.:–** ಎಂಬುದಾಗಿ ಶ್ರುತಿಯು ಜೀವನಿಗೆ ಕರ್ಮಫಲತದುಪಜೀವನವನ್ನು ಬ್ರಹ್ಮನಿಗೆ ಕರ್ಮಫಲ ಅನುಪಜೀವನಸ್ಥಿತಿಯನ್ನು ಹೇಳುವ ಮೂಲಕ ಭೇದವನ್ನು ಸ್ಪಷ್ಟವಾಗಿ ತಿಳಿಸುತ್ತಿದೆ.

ಶ್ರುತಿಯಿಂದ ಜೀವ-ಬ್ರಹ್ಮರ ಭೇದವು ಸಿದ್ಧವಾದ್ದರಿಂದ "ಯಸ್ಮಿನ್ ದ್ಯೌಃ ಪೃಥಿವೀ ..." (ಮುಂ. 2-2-5) ಎಂಬುದಾಗಿ ಶ್ರುತನಾಗುತ್ತಿರುವ ದ್ಯುಭ್ವಾದ್ಯಾಯತನನಾದ ವ್ಯಕ್ತಿ ವಿಷ್ಣುವೇ ಹೊರತು ಜೀವನಲ್ಲ ಎಂದು ಸಿದ್ಧವಾಗುತ್ತದೆ.

ದ್ಯುಭ್ವಾದ್ಯಧಿಕರಣವು ಮುಗಿಯಿತು.

ಅಧಿಕರಣ - 2

# ಭೂಮಾಧಿಕರಣ

## ಸಂಗತಿ

**ಸೂ.ರ.:– अत्र भूमनाम्नो विष्णौ समन्वयः क्रियते ।**

**ಅನು.:–** ವಿಷ್ಣು-ವಾಯು ಇಬ್ಬರಲ್ಲಿಯೂ ಸಾಧಾರಣವಾದ ಭೂಮನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಎರಡನೇ ಈ ಭೂಮಾಧಿಕರಣದಲ್ಲಿ.

ಆನಂದಮಯಾಧಿಕರಣದಲ್ಲಿ ವಿಷ್ಣುವಿಗೆ ಪೂರ್ಣಾನಂದತ್ವವನ್ನು ಹೇಳಿದೆ. ಆ ಪೂರ್ಣಾನಂದತ್ವವು ''ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ'' ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಭೂಮನಾದ (ಭೂಮಶಬ್ದವಾಚ್ಯನಾದ) ವ್ಯಕ್ತಿಗೆ ಶ್ರುತವಾಗುತ್ತದೆ. ಆ ಭೂಮನಾದ ವ್ಯಕ್ತಿ ವಿಷ್ಣು ಅಲ್ಲ ಎಂದಾದರೆ ಆನಂದಮಯತ್ವವೂ ಇತರರಿಗೇ ಬರಬೇಕಾಗುವುದರಿಂದ ಅದನ್ನು ಇಲ್ಲಿ ನಿರ್ಣಯಿಸಲಾಗುತ್ತದೆ. (ಈ ಭೂಮನಾದ ವ್ಯಕ್ತಿ ಯಾರು? ಎಂದು ವಿಚಾರ ಮಾಡುತ್ತಾರೆ.)

## ಪೂರ್ವಪಕ್ಷ

**ಸೂ.ರ.:– ननु भूमाख्यः प्राणो भवेत् । प्राणो वेति (छां.७-१५-१) प्राणस्योत्तमत्वमुक्त्वा तदुत्तममनुक्त्वा भूम्न आम्नातत्वात् । उत्क्रान्तप्राणान् शूलेने(छां.७-१५-३)त्यनेनोत्क्रमणलिङ्गश्रवणात् । न चेदं लिङ्गं विष्णाववकाशमर्हति । सर्वगतत्वात् । प्राणशब्दस्य वायु-वाच्यत्वात् । ततश्चानन्दमयोऽपि स एवेति प्राप्ते सूत्रमुपन्यस्यति ।**

**ಅನು.:–** ಯೋ ವೈ ಭೂಮಾ ತತ್ಸುಖಮ್ ಎಂಬುದಾಗಿ ಶ್ರುತಿಯಲ್ಲಿ ಶ್ರುತ-ನಾಗುತ್ತಿರುವ ಭೂಮಶಬ್ದವಾಚ್ಯನಾದ ವ್ಯಕ್ತಿ ಮುಖ್ಯಪ್ರಾಣದೇವರಾಗುತ್ತಾರೆ. ಯಾಕೆಂದರೆ-ನಾಮವಾಗಾದಿ ತಾರತಮ್ಯವನ್ನು ಆಶಾವರೆಗೆ ಹೇಳಿ ಪ್ರಾಣೋ ವಾ ಆಶಾಯಾ ಭೂಯಾನ್ ಎಂಬುದಾಗಿ ಆಶಾಕಿಂತಲೂ ಪ್ರಾಣದೇವರಿಗೆ ಉತ್ತಮತ್ವವನ್ನು ಹೇಳಿ, ಆ ಪ್ರಾಣದೇವರಿಗಿಂತಲೂ ಉತ್ತಮನಾದ ವ್ಯಕ್ತಿಯನ್ನು ಯಾರನ್ನೂ ಹೇಳದೇ ಯೋ ವೈ ಭೂಮಾ ತತ್ಸುಖಮ್ ಎಂಬುದಾಗಿ ಭೂಮವ್ಯಕ್ತಿಯನ್ನು ಹೇಳಿದ್ದರಿಂದ.

ಪ್ರಾಣೋ ವಾ ಆಶಾಯಾ ಭೂಯಾನ್ ಎಂಬುವಲ್ಲಿ ಪ್ರಾಣಶಬ್ದ ಇದ್ದರೂ ಸಹ ಓಂ ಅತ ಏವ ಪ್ರಾಣಃ ಓಂ ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ ಪ್ರಾಣಶಬ್ದವು ವಿಷ್ಣುವಾಚಕವೂ ಆಗಬಹುದು. ಹೀಗಾಗಿ ವಿಷ್ಣುವೇ ಭೂಮಶಬ್ದವಾಚ್ಯನಾಗುತ್ತಾನೆ? ಎಂದರೆ, ಅದು ಸರಿಯಲ್ಲ. ಪ್ರಾಣೋ ವಾ ಎನ್ನುವಲ್ಲಿ ವಿಷ್ಣುವು ಪ್ರಾಣಶಬ್ದವಾಚ್ಯನಾಗಲು ಸಾಧ್ಯವಿಲ್ಲ. ಏಕೆಂದರೆ - ''ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷನ್ ದಹೇತ್'' ಇತ್ಯಾದಿಯಾಗಿ ಪ್ರಾಣನಿಗೆ ಉತ್ಕ್ರಮಣಾದಿಗಳನ್ನು ಹೇಳುತ್ತಿದ್ದಾರೆ. ಈ ಉತ್ಕ್ರಮಣಾದಿಗಳು ವಾಯುವಿನಲ್ಲಿಯೇ ಕೂಡುತ್ತವೆ. ಶ್ರೀಹರಿಯು ಸರ್ವಗತನಾದ್ದರಿಂದ ಅವನಲ್ಲಿ ಉತ್ಕ್ರಮಣಾದಿಗಳು ಕೂಡುವುದಿಲ್ಲ. ಆದ್ದರಿಂದ ಉತ್ಕ್ರಮಣಾದಿಗಳು ಶ್ರುತವಾಗುತ್ತಿರು-ವುದರಿಂದ ಪ್ರಾಣೋ ವಾ ಎನ್ನುವಲ್ಲಿ ಪ್ರಾಣಶಬ್ದದಿಂದ ವಾಚ್ಯನಾದ ವ್ಯಕ್ತಿ ವಾಯುವೇ ಆಗುತ್ತಾನೆ ಹೊರತು ವಿಷ್ಣು ಆಗುವುದಿಲ್ಲ.

ಅಂದಮೇಲೆ ಪ್ರಾಣೋ ವಾ ಆಶಾಯಾ ಭೂಯಾನ್ ಎಂಬುದಾಗಿ ಶ್ರುತನಾಗು-ತ್ತಿರುವ ಭೂಮಶಬ್ದವಾಚ್ಯನಾದವನು ಮುಖ್ಯಪ್ರಾಣನೇ ಆಗುತ್ತಾನೆ. ಹೀಗಾಗಿ ಆನಂದಮಯತ್ವವೂ ಅವನಿಗೇ ಕೂಡುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ भूमा सम्प्रसादादध्युपदेशात् ॐ (१.३.८)

**ಸೂತ್ರಾರ್ಥ** :- ಭೂಮಾ = ಯೋ ವೈ ಭೂಮಾ (ಛಾಂ. 7-23) ಎಂಬ ಶ್ರುತಿಯಲ್ಲಿ ಭೂಮಶಬ್ದೋಕ್ತಪೂರ್ಣನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ. ಕುತಃ = ಯಾಕೆ? ಸಂಪ್ರಸಾದಾತ್ = ಭೂಮನಾದ ವ್ಯಕ್ತಿಗೆ ''ತತ್ಸುಖಮ್'' ಎಂಬುದಾಗಿ ಸಂಪ್ರಸಾದಶಬ್ದಿತವಾದ ಪೂರ್ಣಸುಖರೂಪತ್ವವನ್ನು ಹೇಳಿದ್ದರಿಂದ. ಕಿಂಚ = ಮತ್ತು ಅಧ್ಯುಪದೇಶಾತ್ = ನಾಮಾದಿಗಳಿಗಿಂತಲೂ ಮೇಲೆ, ನಾಮಾದಿದೇವತೆಗಳಿಗಿಂತಲೂ ಉತ್ತಮವಾಗಿ ಭೂಮವ್ಯಕ್ತಿಯನ್ನು ಹೇಳಿದ್ದರಿಂದ.

### ಸಿದ್ಧಾಂತ

**ಸೂ.ರ.**:- एवं च विष्णुरेवायं भूमा । पूर्णसुखत्वात् । तस्य चान्यत्र निरवकाशत्वात् ।

**ಅನು.**:- ಯೋ ವೈ ಭೂಮಾ ಎಂಬುದಾಗಿ ಶ್ರುತನಾಗುತ್ತಿರುವ ಭೂಮವ್ಯಕ್ತಿ ವಿಷ್ಣುವೇ ಆಗುತ್ತಾನೆ. ''ತತ್ಸುಖಮ್'' ಎಂಬುದಾಗಿ ಆ ಭೂಮನಾದ ವ್ಯಕ್ತಿಗೆ ಪೂರ್ಣಸುಖತ್ವವನ್ನು

ಹೇಳುತ್ತಿದ್ದಾರೆ. ಈ ಪೂರ್ಣಸುಖತ್ವವಾದರೋ ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತದೆ. ಬೇರೆಯವರಲ್ಲಿ ಅದು ಉಪಪನ್ನವಾಗುವುದಿಲ್ಲ. ಆದ್ದರಿಂದ ಪೂರ್ಣಸುಖತ್ವ ಹೇಳಿದ್ದರಿಂದಾಗಿ ವಿಷ್ಣುವೇ ಭೂಮನಾಗುತ್ತಾನೆ.

**ಸೂ.ರ.:- किंचास्य भूम्नः सर्वेषामुपर्युपदेशः श्रूयते । न चास्यान्यत्रावकाशः ।**

**ಅನು.:-** ಮತ್ತು, ಈ ಭೂಮನಾದ ವ್ಯಕ್ತಿಯನ್ನು ಎಲ್ಲರಿಗಿಂತಲೂ ಮೇಲೆ ಉಪದೇಶ ಮಾಡುತ್ತಿದ್ದಾರೆ. ಈ ಸರ್ವೋತ್ತಮತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆಯೇ ಹೊರತು ಬೇರೆಯವರಿಗೆ ಉಪಪನ್ನವಾಗುವುದಿಲ್ಲ. ಹೀಗಾಗಿ ಸರ್ವೋತ್ತಮತ್ವವನ್ನು ಹೇಳಿದ್ದರಿಂದಲೂ ಸಹ ವಿಷ್ಣುವೇ ಭೂಮವ್ಯಕ್ತಿಯಾಗುತ್ತಾನೆ.

**ಸೂ.ರ.:- न चोपक्रमे प्राणशब्दश्रवणेन कथमसौ विष्णुरिति वाच्यम् । प्राणशब्देनापि विष्णोरुक्तत्वात् ।**

**ಅನು.:-** ಉಪಕ್ರಮದಲ್ಲಿ ಪ್ರಾಣೋ ವಾ ಆಶಾಯಾ ಭೂಯಾನ್ ಎಂಬುದಾಗಿ ಪ್ರಾಣಶಬ್ದವು ಶ್ರುತವಾಗುತ್ತಿರುವುದರಿಂದ ವಿಷ್ಣು ಹೇಗೆ ಭೂಮವ್ಯಕ್ತಿ ಆಗುತ್ತಾನೆ? (ಪ್ರಾಣನೇ ಭೂಮವ್ಯಕ್ತಿ ಆಗಬೇಕಲ್ಲವೇ?) ಎಂದರೆ, ಅದು ಸರಿಯಲ್ಲ. ಓಂ ಅತ ಏವ ಪ್ರಾಣಃ ಓಂ ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಪ್ರಾಣಶಬ್ದದಿಂದಲೂ ಸಹ ವಿಷ್ಣುವೇ ಪ್ರತಿಪಾದ್ಯನಾಗುತ್ತಿದ್ದಾನೆ. ಹೀಗಾಗಿ ಪ್ರಾಣಶಬ್ದವೂ ಬಾಧಕವಾಗುವುದಿಲ್ಲ.

**ಸೂ.ರ.:- न चोत्क्रमणादिलिङ्गविरोधः । तमुत्क्रान्तमिति (बृ. ६-४-२) श्रुतिसिद्धत्वेन तस्य विष्णावेव मुख्यत्वात् ।**

**ಅನು.:-** ಪ್ರಾಣಶಬ್ದ ಇದ್ದರೂ ಸಹ ವಿಷ್ಣುವೇ ಭೂಮವ್ಯಕ್ತಿಯಾಗುವುದಾದರೆ, "ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷನ್ ದಹೇತ್" ಎಂಬುದಾಗಿ ಪ್ರಾಣನಿಗೆ ಉತ್ಕ್ರಮಣಾದಿಗಳನ್ನು ಹೇಳುತ್ತಿದ್ದಾರೆ. ಈ ಉತ್ಕ್ರಮಣಾದಿಗಳು ಸರ್ವಗತನಾದ ವಿಷ್ಣುವಿಗೆ ಕೂಡುವುದಿಲ್ಲವಾದ್ದರಿಂದ ಇದೇ ಬಾಧಕವಾಗುತ್ತದೆಯಲ್ಲವೇ? ಎಂದರೆ, ಅದೂ ಸರಿಯಲ್ಲ.

"ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ" (ಬೃ.ಉ. 6-4-2) ಇತ್ಯಾದಿಯಾಗಿ ಮುಖ್ಯವಾಗಿ ವಿಷ್ಣುವಿಗೇ ಉತ್ಕ್ರಮಣಾದಿಗಳು ಸಿದ್ಧವಾಗಿವೆ. ಅರ್ಥಾತ್ ವಿಷ್ಣುವು

ಸರ್ವಗತನಾದರೂ ಸಹ ರೂಪಾಂತರವಿವಕ್ಷೆಯಿಂದಾಗಿ ಉತ್ಕ್ರಮಣಾದಿಗಳನ್ನು ಹೇಳಬಹುದಾದ್ದರಿಂದ, ಪ್ರಾಣಶಬ್ದದಿಂದ ವಿಷ್ಣುವನ್ನು ಅಂಗೀಕಾರ ಮಾಡಿದರೂ ಯಾವ ಬಾಧಕ ಇಲ್ಲ.

**ಸೂ.ರ.:– अथवाऽयं प्राणो वायुरेव । तथाऽपि न तस्य भूमत्व-प्राप्तिः । एष तु वेत्यादिना सूचितप्रश्नाद्यध्याहारेण प्राणाद्विष्णो-र्भूयस्त्वमुक्त्वा भूम्न आम्नानात् । सर्वेषां नामादीनामुपरि विष्णोः सर्वोत्तम त्वेनाभिधानात् । भूमा विष्णुरेवेति सिद्धम् ।**

**ಅನು.:–** ಅಥವಾ ಪ್ರಾಣೋ ವಾ ಆಶಾಯಾ ಭೂಯಾನ್ ಎನ್ನುವಲ್ಲಿ ಪ್ರಾಣಶಬ್ದದಿಂದ ವಾಚ್ಯನಾದ ವ್ಯಕ್ತಿ ಮುಖ್ಯಪ್ರಾಣನೇ ಎಂದೂ ಅಂಗೀಕರಿಸಬಹುದಾಗಿದೆ. ಅಂದಮಾತ್ರಕ್ಕೆ ಈ ಮುಖ್ಯಪ್ರಾಣನೇ ಭೂಮವ್ಯಕ್ತಿ ಆಗಬೇಕಿಲ್ಲ. "ಏಷ ತು ವಾ ಅತಿವದತಿ" ಇತ್ಯಾದಿ ಪ್ರಶ್ನಾದಿಗಳ ಅಧ್ಯಾಹಾರ ಮಾಡುವುದರಿಂದ ಮುಖ್ಯಪ್ರಾಣನಿಗಿಂತಲೂ ವಿಷ್ಣುವಿಗೇ ಭೂಯಸ್ತ್ವವನ್ನು ಹೇಳಿ ಭೂಮವ್ಯಕ್ತಿಯನ್ನು ಹೇಳಿದ್ದಾರೆ. ನಾಮ – ವಾಗಾದಿ ಎಲ್ಲರಿಗಿಂತಲೂ ಮೇಲೆ ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳಲಾಗಿದೆ. ಈ ಸರ್ವೋತ್ತಮತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ ಯೋ ವೈ ಭೂಮಾ ತತ್ಸುಖಮ್ ಎನ್ನುವಲ್ಲಿ ಶ್ರುತನಾಗುತ್ತಿರುವ ಭೂಮವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 9

**ಸೂ.ರ.:– युक्त्यन्तरेण विष्णोर्भूमत्वं प्रतिपादयत्सूत्रं पठति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ವಿಷ್ಣುವಿಗೆ ಭೂಮತ್ವವನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ –

### ॐ धर्मोपपत्तेश्च ॐ (१.३.९)

**ಸೂತ್ರಾರ್ಥ :-** ಧರ್ಮೋಪಪತ್ತೇಶ್ಚ = ಸ ಏವಾಧಸ್ತಾತ್ (ಛಾಂ. 7-25) ಇತ್ಯಾದಿ-ಯಾಗಿ ಆ ಭೂಮವ್ಯಕ್ತಿಯ ವಿಷಯದಲ್ಲಿ ಸರ್ವಗತತ್ವಾದಿಧರ್ಮಗಳು ಶ್ರುತವಾಗು-ತ್ತಿರುವುದರಿಂದ ಈ ಸರ್ವಗತತ್ವಾದಿಧರ್ಮಗಳು ವಿಷ್ಣುವಿಗೆ ಮಾತ್ರ ಉಪಪನ್ನವಾಗು-ವುದರಿಂದ ವಿಷ್ಣುವೇ ಭೂಮವ್ಯಕ್ತಿಯಾಗುತ್ತಾನೆ.

**ಸೂ.ರ.:– एवं च प्राणपदेन वाय्वन्तर्गतस्य विष्णोरभिधानात् । आत्मन आकाश (तै.आ. २-१) इत्यत्र सम्भूतपदेन भूतस्य तदभिमानि-देहस्य स्वरूपोत्पत्यभिधानेऽपि तदभिमानिनो हरेश्च देहसम्बन्ध प्रादुर्भावयोश्चाभिधानवत् भूमा वाव प्राणादित्यनेन स्वरूपोत्तमत्वस्य भूम्नोऽभिधानेऽपि वाय्वन्तर्गताद्रूपात्प्रसादोन्मुखत्वरूपोत्तमत्वविशिष्टभूमाभि-धानसम्भवेन प्रश्नप्रतिवचनसहिष्णुत्वसंभवात् ।**

**ಅನು.:–** ಪ್ರಾಣೋ ವಾ ಆಶಾಯಾ ಭೂಯಾನ್ ಎಂಬುದಾಗಿ ಪ್ರಾಣಶಬ್ದ ಇದ್ದರೂ ಸಹ, ಆ ಪ್ರಾಣಶಬ್ದದಿಂದ ವಾಯುವಿನಲ್ಲಿ ಅಂತರ್ಗತನಾದ ವಿಷ್ಣುವನ್ನು ಹೇಳಲಾಗಿದೆ. (ವಿವಕ್ಷಿಸಬೇಕು)

"ಆತ್ಮನ ಆಕಾಶಃ ಸಂಭೂತಃ" (ತೈ.ಆ. 2-1) ಎನ್ನುವಲ್ಲಿ ಸಂಭೂತ ಪದದಿಂದ ಆಕಾಶಭೂತ (ದ್ರವ್ಯ) ಹಾಗೂ ಭೂತಕ್ಕೆ ಅಭಿಮಾನಿಯಾದವನ ದೇಹ ಇವುಗಳಿಗೆ ಸ್ವರೂಪತಃ ಉತ್ಪತ್ತಿಯನ್ನು ಹೇಳಿದ್ದರೂ ಸಹ, ಅಭಿಮಾನಿಯಾದ ದೇವತೆಗೆ ದೇಹಸಂಬಂಧ ಮತ್ತು ಶ್ರೀಹರಿಗೆ ಪ್ರಾದುರ್ಭಾವಗಳನ್ನು ಹೇಳುವಂತೆ ಭೂಮಾ ವಾವ ಪ್ರಾಣಾತ್ ವಿವರಣೆ - ಸ್ಪಷ್ಟನೆ ಬೇಕು ಎನ್ನುವುದರಿಂದ ಭೂಮವ್ಯಕ್ತಿಗೆ ಸ್ವರೂಪೋತ್ತಮತ್ವವನ್ನು ಹೇಳಿದರೂ ಸಹ, ವಾಯುವಿನಲ್ಲಿ ಅಂತರ್ಗತವಾದ ರೂಪದಿಂದ ಪ್ರಸಾದೋನ್ಮುಖತ್ವರೂಪವಾದ ಉತ್ತಮತ್ವದಿಂದ ವಿಶಿಷ್ಟನಾದ ಭೂಮವ್ಯಕ್ತಿಯನ್ನು ಹೇಳಲು ಸಂಭಾವಿತವಾಗಿರುವುದರಿಂದ ಪ್ರಶ್ನೆ-ಪ್ರತಿವಚನಸಹಿಷ್ಣುತ್ವವು ಸಂಭಾವಿತವಾಗಿದೆ.

**ಸೂ.ರ.:– किं च स एवाधस्तादित्यादिना भूम्नि सर्वगतत्वादयो धर्माः श्रूयन्ते । नैतेऽन्यत्रावकाशा लभन्ते । ततश्च निरवकाशेभ्यः सर्वगतत्वादिभ्यो भूमा विष्णुरेवेति तस्यैवानन्दमयत्वमिति सिद्धम् ।**

**ಅನು.:–** ಮತ್ತು, "ಸ ಏವಾಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ ।" ಇತ್ಯಾದಿಯಾಗಿ ಭೂಮನಾದ ಆ ವ್ಯಕ್ತಿಯಲ್ಲಿ ಸರ್ವಗತತ್ವಾದಿಧರ್ಮಗಳು ಶ್ರುತವಾಗುತ್ತಿವೆ. ಈ ಸರ್ವಗತತ್ವಾದಿ ಧರ್ಮಗಳು ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತವೆಯೇ ಹೊರತು ವಿಷ್ಣು ಬಿಟ್ಟು ಉಳಿದವರಿಗೆ ಕೂಡುವುದಿಲ್ಲ. ಅರ್ಥಾತ್ ಸರ್ವಗತತ್ವಾದಿ ಧರ್ಮಗಳು ವಿಷ್ಣುವಿನ ನಿರವಕಾಶಧರ್ಮಗಳಾಗಿವೆ.

ಹೀಗಾಗಿ ಇಂತಹ ನಿರವಕಾಶವಾದ ಸರ್ವಗತತ್ವಾದಿಧರ್ಮಗಳೂ ಶ್ರುತವಾಗು-ತ್ತಿರುವುದರಿಂದ ಯೋ ವೈ ಭೂಮಾ ತತ್ಸುಖಮ್ ಎಂಬುದಾಗಿ ಶ್ರುತನಾಗುತ್ತಿರುವ ಭೂಮನಾದ ವ್ಯಕ್ತಿ ವಿಷ್ಣುವೇ ಎಂದು ತಿಳಿಯುತ್ತದೆ. ವಿಷ್ಣುವೇ ಭೂಮವ್ಯಕ್ತಿ ಆದಮೇಲೆ ಹಿಂದೆ ಹೇಳಿದ ಆನಂದಮಯತ್ವವೂ ವಿಷ್ಣುವಿಗೇ ಕೂಡುತ್ತದೆ ಎಂದು ಸಿದ್ಧವಾಗುತ್ತದೆ.

**ಭೂಮಾಧಿಕರಣ ಮುಗಿಯಿತು.**

*ಅಧಿಕರಣ – 3*

# ಅಕ್ಷರಾಧಿಕರಣ

## ಸಂಗತಿ

**ಸೂ.ರ.:– अत्र अक्षरनामसमन्वयः क्रियते ।**

**ಅನು.:–** ಅವಿನಾಶಿತ್ವವು ಸಮಾನವಾದ್ದರಿಂದ ಚಿತ್ಪ್ರಕೃತಿ – ಹರಿ ಇಬ್ಬರಲ್ಲಿಯೂ ಸಾಧಾರಣವಾದ "ಅಕ್ಷರ" ನಾಮವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಮೂರನೇ ಈ ಅಕ್ಷರಾಧಿಕರಣದಲ್ಲಿ.

ಹಿಂದೆ ವಿಷ್ಣುವಿಗೆ ಅದೃಶ್ಯತ್ವಾದಿಗುಣಗಳು ಹೇಳಲ್ಪಟ್ಟಿವೆ. ಆ ಅದೃಶ್ಯತ್ವಾದಿಗುಣಗಳು "ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತ್ರಮತಂ ..." ಎಂಬುದಾಗಿ ವಾಜಸನೇಯಕದಲ್ಲಿ ಅಕ್ಷರನಾದ ಪುರುಷನಿಗೆ ಶ್ರುತವಾಗುತ್ತಿವೆ. ಈ ಅಕ್ಷರನಾದ ಪುರುಷ ವಿಷ್ಣು ಅಲ್ಲ ಎಂದಾದರೆ ಅದೃಶ್ಯತ್ವಾದಿಗಳೂ ಬೇರೆಯವರಿಗೆ ಕೂಡಬೇಕಾಗುತ್ತದೆ. ಆದ್ದರಿಂದ ಈ ಅಕ್ಷರಪುರುಷ ಯಾರು? ಎಂದು ಚರ್ಚಿಸಿ ವಿಷ್ಣುವೇ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वेतदक्षरं मध्यमं श्रीतत्वमेव । अदृष्टमिति श्रुतेः ।**

**(बृ.५-८-११)**

**ಅನು.:–** "ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ..." (ಬೃ. 5-8-11) ಎಂಬುದಾಗಿ ಶ್ರುತವಾಗುತ್ತಿರುವ ಅಕ್ಷರಶಬ್ದವಾಚ್ಯವಾದದ್ದು ಮಧ್ಯಮ ಶ್ರೀತತ್ತ್ವವೇ ಆಗುತ್ತದೆ. ಯಾಕೆಂದರೆ, ಅಕ್ಷರಶಬ್ದವು ಶ್ರೀತತ್ತ್ವಕ್ಕೆ ವಾಚಕವಾಗಿದೆ ಎನ್ನುವುದು ಪ್ರಸಿದ್ಧವೇ ಆಗಿದೆ.

**ಸೂ.ರ.:– अहं सोममित्यादिना (ऋ. १०-१२५-२) तद्धर्मत्वेनावगत चन्द्रसूर्याद्याधारत्वस्य सूर्याचन्द्रमसावि(बृ.५-८-९)त्यादिनाऽक्षरप्रतीतेश्च ।**

**ಅನು.:–** ಮತ್ತು, "ಏತಸ್ಯ ವಾऽಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" (ಬೃ. 5-8-9) ಇತ್ಯಾದಿಯಾಗಿ ಆ ಅಕ್ಷರಪುರುಷನಿಗೆ ಚಂದ್ರ-ಸೂರ್ಯಾದ್ಯಾಧಾರತ್ವವು ಪ್ರತೀತವಾಗುತ್ತಿದೆ. ಅಂತಹ ಆ ಚಂದ್ರಸೂರ್ಯಾದ್ಯಾಧಾರತ್ವ ಎಂಬ ಧರ್ಮವಾದರೂ "ಅಹಂ ಸೋಮಮಾಹನಸಂ ಬಿಭರ್ಮಿ" (ಋ.ಸಂ. 10-125-2) ಎಂಬುದಾಗಿ ಮಧ್ಯಮ ಶ್ರೀತತ್ತ್ವದ ಧರ್ಮವಾಗಿದೆ ಎಂದು ತಿಳಿಯುತ್ತಿದೆ. ಹೀಗೆ ಮಧ್ಯಮ ಶ್ರೀತತ್ತ್ವದ ಧರ್ಮವಾಗಿರುವ ಚಂದ್ರಸೂರ್ಯಾದ್ಯಾಧಾರತ್ವವು ಅಕ್ಷರನಿಗೆ ಪ್ರತೀತವಾಗುತ್ತಿರುವುದರಿಂದ ಮಧ್ಯಮ ಶ್ರೀತತ್ತ್ವವೇ ಅಕ್ಷರಶಬ್ದವಾಚ್ಯವಾಗಬೇಕು.

**ಸೂ.ರ.:– न च श्रीतत्वलिङ्गतया प्रसिद्धचन्द्रसूर्याद्याधारत्वबलाद्यद्यक्षरं श्रीतत्वमुच्यते । तर्हि विष्णुलिङ्गतया प्रसिद्धादद्दश्यत्वादिबलाद्विष्णुरेव किं न स्यादिति वाच्यम् । अद्दश्यत्वादीनां ये त्वक्षरमनिर्देश्यामि (भ.गी.१२-३)त्यादिना सावकाशत्वात् ।**

**ಅನು.:–** ಶ್ರೀತತ್ತ್ವದ ಲಿಂಗ ಎಂಬುದಾಗಿ ಪ್ರಸಿದ್ಧವಾಗಿರುವ ಚಂದ್ರಸೂರ್ಯಾ-ದ್ಯಾಧಾರತ್ವ ಧರ್ಮವು ಇರುವುದರಿಂದ ಅದರ ಬಲದಿಂದ ಶ್ರೀತತ್ತ್ವವೇ ಅಕ್ಷರಶಬ್ದವಾಚ್ಯ-ವಾಗುತ್ತದೆ ಎಂದು ಹೇಳುವುದಾದರೆ, ವಿಷ್ಣುವಿನ ಲಿಂಗ ಎಂಬುದಾಗಿ ಪ್ರಸಿದ್ಧವಾಗಿರುವ ಅದೃಶ್ಯತ್ವಾದಿಧರ್ಮಗಳು ಇರುವುದರಿಂದ ಅವುಗಳ ಬಲದಿಂದ ವಿಷ್ಣುವೇ ಅಕ್ಷರ ಯಾಕೆ ಆಗಬಾರದು? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ವಿಷ್ಣುವಿನ ಲಿಂಗ ಎಂಬುದಾಗಿ ಪ್ರಸಿದ್ಧವಾಗಿರುವ ಅದೃಶ್ಯತ್ವಾದಿ-ಧರ್ಮಗಳು ವಿಷ್ಣುವಿನಲ್ಲಿ ನಿರವಕಾಶವಾಗಿದ್ದರೆ ಆಗ ಈ ಶಂಕೆ ಸರಿಯಾಗುತ್ತಿತ್ತು. ಆದರೆ ಅದೃಶ್ಯತ್ವಾದಿಧರ್ಮಗಳು ವಿಷ್ಣುವಿನಲ್ಲಿ ನಿರವಕಾಶವಾಗಿಲ್ಲ. ಅರ್ಥಾತ್ "ಯೇ ತ್ವಕ್ಷರಮನಿರ್ದೇಶ್ಯಮ್" (ಭ.ಗೀ. 12-3) ಇತ್ಯಾದಿಯಾಗಿ ಮಧ್ಯಮ ಶ್ರೀತತ್ತ್ವಕ್ಕೂ

ಅದೃಶ್ಯತ್ವಾದಿಧರ್ಮಗಳು ಸಂಭಾವಿತವಾಗಿವೆ ಎಂದು ತಿಳಿದುಬರುವುದರಿಂದ ಅವು ಶ್ರೀತತ್ತ್ವದಲ್ಲಿಯೂ ಸಾವಕಾಶವಾಗಿವೆ.

**ಸೂ.ರ.:–** न चाक्षरश्रुतेरदृश्यत्वादिलिङ्गानां च मध्यमोत्तमाक्षरयोः साम्येऽत्र मध्यममेवोच्यत इति निर्बन्धे को हेतुरिति वाच्यम् । न तदश्नाति किंचनेत्यक्षरस्यानशनोक्तेः । तच्च विष्णोर्विरुद्धम् । अत्ता चराचरग्रहणा-दित्युक्तत्वात् । न च मध्यमाक्षरस्यानशनाङ्गीकारे विरोधोऽस्ति । अत एतदक्षरं मध्यमं श्रीतत्वमेवेति प्राप्ते सूत्रितम् ।

**ಅನು.:–** ಅಕ್ಷರಶ್ರುತಿ – ಅದೃಶ್ಯತ್ವಾದಿಲಿಂಗಗಳು ಮಧ್ಯಮ ಅಕ್ಷರ – ಉತ್ತಮ ಅಕ್ಷರ ಇಬ್ಬರಲ್ಲಿಯೂ ಸಮಾನವಾಗಿದ್ದಾಗ ಮಧ್ಯಮ ಅಕ್ಷರವೇ ಇಲ್ಲಿ ಪ್ರತಿಪಾದ್ಯ ಎಂದು ನಿರ್ಬಂಧ ಮಾಡುವುದರಲ್ಲಿ ಏನು ಕಾರಣ? ಎಂದು ಶಂಕೆ ಮಾಡುವುದು ಸರಿಯಲ್ಲ.

ಏಕೆಂದರೆ – ಅಲ್ಲಿ ನ ತದಶ್ನಾತಿ ಕಿಂಚನ ಎಂಬುದಾಗಿ ಅಕ್ಷರಪುರುಷನಿಗೆ ಅನಶನ-ಧರ್ಮವನ್ನು ಹೇಳಿದ್ದಾರೆ. ಈ ಅನಶನಧರ್ಮವಾದರೋ ವಿಷ್ಣುವಿಗೆ ವಿರುದ್ಧವಾಗಿದೆ.

ಓಂ ಅತ್ತಾ ಚರಾಚರಗ್ರಹಣಾತ್ ಓಂ ಎಂಬುದಾಗಿ ವಿಷ್ಣುವಿಗೆ ಅತ್ತೃತ್ವವನ್ನು ಸಮರ್ಥಿಸಿದ್ದರಿಂದ ಅನಶನಧರ್ಮವು ವಿಷ್ಣುವಿಗೆ ಕೂಡುವುದಿಲ್ಲ. ಆದರೆ ಅದೇ ಅನಶನಧರ್ಮವು ಮಧ್ಯಮ ಶ್ರೀತತ್ತ್ವಕ್ಕೆ ಹೇಳಿದರೆ ಯಾವ ವಿರೋಧವೂ ಬರುವುದಿಲ್ಲ.

ಆದ್ದರಿಂದ – ''ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ...'' ಎಂಬುದಾಗಿ ಶ್ರುತನಾಗುತ್ತಿರುವ ಅಕ್ಷರಪುರುಷನು ಮಧ್ಯಮ ಶ್ರೀತತ್ತ್ವವೇ ಆಗುತ್ತದೆ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ अक्षरमम्बरान्तधृतेः ॐ (१.३.१०)

**ಸೂತ್ರಾರ್ಥ :-** ಅಕ್ಷರಂ = ತದ್ವಾ ಏತದಕ್ಷರಂ ಎಂಬುದಾಗಿ ಅಕ್ಷರಶಬ್ದವಾಚ್ಯ-ವಾದದ್ದು ಬ್ರಹ್ಮನೇ ಆಗುತ್ತಾನೆ. ನ ಚಿತ್ಪ್ರಕೃತಿಃ = ಹೊರತು ಮಧ್ಯಮ ಶ್ರೀತತ್ತ್ವ ಆಗುವುದಿಲ್ಲ. ಕುತಃ = ಯಾಕೆ? ಅಂಬರಾಂತಧೃತೇಃ = ಈ ಅಕ್ಷರಪುರುಷನ ವಿಷಯದಲ್ಲಿ ಏತಸ್ಮಿನ್ ಖಲ್ವಕ್ಷರೇ (ಬೃ. 5-8-11) ಎಂಬುದಾಗಿ ಆಕಾಶಾಂತಪದಾರ್ಥಾಧಾರಕತ್ವವು ಶ್ರುತವಾಗುತ್ತಿರುವುದರಿಂದ.

## ಸಿದ್ಧಾಂತ

**ಸೂ.ರ.:- एवं चाकाश एव तदोतं च प्रोतं चे (बृ. ५-८-७) त्याकाशाख्यप्रकृतेः सर्वाधारत्वमुक्त्वा एतस्मिन्खल्वक्षर इत्यादिनाऽक्षरस्य तदाधारत्वश्रवणादक्षरशब्दवाच्यो विष्णुरेवेति सिद्धम् ।**

**ಅನು.:-** "ಆಕಾಶ ಏವ ತದೋತಂ ಚ ಪ್ರೋತಂ ಚ" (ಬೃ. 5-8-7) ಎಂಬುದಾಗಿ ಆಕಾಶ- ರೂಪವಾದ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ "ಏತಸ್ಮಿನ್ ಖಲ್ವಕ್ಷರೇ ..." ಇತ್ಯಾದಿಯಾಗಿ ಅಕ್ಷರಪುರುಷನಿಗೆ ತಧಾಧಾರತ್ವ (ಆಕಾಶಾಧಾರತ್ವ) ವನ್ನು ಹೇಳಿದ್ದರಿಂದ, ಆ ಆಕಾಶಾಂತಪದಾರ್ಥಾಧಾರತ್ವವು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ "ತದ್ವಾ ಏತದಕ್ಷರಂ" ಎಂಬುದಾಗಿ ಶ್ರುತನಾಗುತ್ತಿರುವ ಅಕ್ಷರಪುರುಷನು ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 11

**ಸೂ.ರ.:- युक्त्यन्तरेण विष्णोरेवाक्षरत्वं प्रतिपादयत्सूत्रं व्याचष्टे ।**

**ಅನು.:-** ಮತ್ತೊಂದು ಯುಕ್ತಿಯಿಂದಲೂ ಸಹ ವಿಷ್ಣುವಿಗೇ ಅಕ್ಷರತ್ವವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

### ॐ सा च प्रशासनात् ॐ (१.३.११)

**ಸೂತ್ರಾರ್ಥ :-** ಚ = (ಯತಃ) ಯಾವ ಕಾರಣ ಸಾ = ಆಕಾಶಾಂತಪದಾರ್ಥ- ಧಾರಣವು ಪ್ರಶಾಸನಾತ್ = ವಿಷ್ಣುವಿನ ಆಜ್ಞಾಮಾತ್ರದಿಂದಲೇ ಆಗುತ್ತದೆ ಎಂಬುದಾಗಿ "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ (ಬೃ.ವಿ. 5-8-9)" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆಯೋ ಅತೋऽಪಿ ಬ್ರಹ್ಮೈವಾಕ್ಷರಶಬ್ದವಾಚ್ಯಂ, ನ ಚೇತನಪ್ರಕೃತಿಃ = ಆ ಕಾರಣಕ್ಕಾಗಿಯೂ ಸಹ ಬ್ರಹ್ಮನೇ ಅಕ್ಷರಶಬ್ದವಾಚ್ಯನಾಗುತ್ತಾನೆ. ಹೊರತು ಮಧ್ಯಮ ಶ್ರೀತತ್ವ ಆಗುವುದಿಲ್ಲ.

**ಸೂ.ರ.:- एवं चाक्षरस्याज्ञामात्रेण सर्वाधारत्वश्रवणात् । समाधगर्भेति (ऋ.१-१६४-३६) श्रुतेः । अतोऽक्षरशब्दवाच्यो विष्णुरेवेति सिद्धम् ।**

ಅನು.:– ಅಕ್ಷರಪುರುಷನ ಆಜ್ಞಾಮಾತ್ರದಿಂದಲೇ ಸರ್ವಾಧಾರತ್ವವು ಶ್ರುತವಾಗುತ್ತಿರುವುದರಿಂದ, ''ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ'' (ಋ.ಸಂ. 1-164-36) ಎಂಬುದಾಗಿ ಶ್ರುತಿಯಿರುವುದರಿಂದಾಗಿ ಆ ಪ್ರಶಾಸನವು (ಆಜ್ಞೆಯು) ವಿಷ್ಣುವಿನದ್ದೇ ಆಗಿದೆ ಎಂದು ತಿಳಿಯುವುದರಿಂದ, ಅಕ್ಷರಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 12

ಸೂ.ರ.:– युक्त्यन्तरेण विष्णोरक्षत्वं प्रतिपादयत्सूत्रमाह ।

ಅನು.:– ಮತ್ತೊಂದು ಯುಕ್ತಿಯಿಂದಲೂ ವಿಷ್ಣುವಿಗೆ ಅಕ್ಷರತ್ವವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

**ॐ अन्यभावव्यावृत्तेश्च ॐ (१.३.१२)**

ಸೂತ್ರಾರ್ಥ :- ಅನ್ಯಭಾವಾನಾಂ = ವಿಷ್ಣುವಿನಿಂದ ಭಿನ್ನವಾದ ವಸ್ತುಗಳ ಸ್ವಭಾವಗಳಾದ ಸ್ಥೂಲತ್ವಾದಿಗಳ ವ್ಯಾವೃತ್ತೇಃ=''ಅಸ್ಥೂಲಮನಣು'' (ಬೃ.5-8-8) ಎಂದು ಶ್ರುತಿಯಲ್ಲಿ ಅಭಾವವನ್ನು ಹೇಳಿದ್ದರಿಂದಲೂ ಸಹ ಬ್ರಹ್ಮನೇ ಅಕ್ಷರಪುರುಷನಾಗುತ್ತಾನೆ.

ಸೂ.ರ.:– एवं चास्थूलमित्यादिनाऽन्यवस्तुस्वभावानां स्थौल्यादीनां व्यावृत्त्यभिधानादक्षरशब्दवाच्यो विष्णुरेवेति सिद्धम् ।

ಅನು.:– ಅಸ್ಥೂಲಮನಣು .... ಇತ್ಯಾದಿಯಾಗಿ ವಿಷ್ಣುಭಿನ್ನವಸ್ತುಗಳ ಸ್ವಭಾವಗಳಾದ ಸ್ಥೌಲ್ಯಾದಿಗಳ ವ್ಯಾವೃತ್ತಿಯನ್ನು ಹೇಳಿದ್ದರಿಂದಾಗಿ (ಉಳಿದವರ ಸ್ವಭಾವಗಳಾದ ಸ್ಥೌಲ್ಯಾದಿಗಳು ಈ ಅಕ್ಷರನಲ್ಲಿ ಇಲ್ಲ ಎಂದು ಹೇಳಿದ್ದರಿಂದಾಗಿ) ''ತದ್ವಾ ಏತದಕ್ಷರಂ'' ಎಂಬುದಾಗಿ ಶ್ರುತನಾಗುತ್ತಿರುವ ಅಕ್ಷರನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

ಅಕ್ಷರಾಧಿಕರಣವು ಮುಗಿಯಿತು.

ಅಧಿಕರಣ - 4

# ಸದಧಿಕರಣ

## ಸಂಗತಿ

**ಸೂ.ರ.:- अत्र अनेकप्रकरणात्मकं 'सदेव' इत्यादिस्थानं समन्वीयते ।**

**ಅನು.:-** ಸದೇವ ಸೌಮ್ಯ ಇತ್ಯಾದಿ ಸೃಷ್ಟಿಪ್ರತಿಪಾದಕಸ್ಥಾನಗತವಾದ, ಕಾರಣತ್ವ ಸಾಮ್ಯದಿಂದಾಗಿ ಬ್ರಹ್ಮ-ಪ್ರಧಾನಗಳಲ್ಲಿ ಸಾಧಾರಣವಾದ ಸತ್ ನಾಮವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ನಾಲ್ಕನೇ ಈ ಸದಧಿಕರಣದಲ್ಲಿ.

(ಅನೇಕಪ್ರಕರಣಾತ್ಮಕವಾದ ಸದೇವ ಇತ್ಯಾದಿ ಸ್ಥಾನವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ಈ ಸದಧಿಕರಣದಲ್ಲಿ.)

ಜನ್ಮಾದ್ಯಸ್ಯ ಯತಃ ಎಂಬುದಾಗಿ ವಿಷ್ಣುವಿಗೆ ಜಗತ್ಸ್ರಷ್ಟೃತ್ವವನ್ನು ಹೇಳಲಾಗಿದೆ. ಆ ಜಗತ್ಸ್ರಷ್ಟೃತ್ವವು "ತತ್ತೇಜೋ ಅಸೃಜತ" ಇತ್ಯಾದಿಯಾಗಿ ಸತ್ ವಸ್ತುವಿಗೆ ಶ್ರುತವಾಗುತ್ತಿದೆ. ಆ ಸತ್‌ವಸ್ತುವು ವಿಷ್ಣು ಅಲ್ಲ ಎಂದಾದರೆ ಜಗತ್ಸ್ರಷ್ಟೃತ್ವವೂ ಬೇರೆಯವರಿಗೆ ಕೊಡಬೇಕಾಗುತ್ತದೆ. ಆದ್ದರಿಂದ ಆ ಸತ್ ವಸ್ತು ವಿಷ್ಣುವೋ ಅಲ್ಲವೋ ಎಂದು ವಿಚಾರ ಮಾಡಿ, ಸತ್ ವಸ್ತು ವಿಷ್ಣುವೇ ಎಂದು ನಿರ್ಣಯ ಮಾಡುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- ननु सत् प्रधानमेव भवेत् । न विष्णुः । सतो बहु स्यामिति (छां.६-२) बहुधाभावाख्यविकारित्वश्रवणात् । न च विकारित्वं परमात्मनि सम्भवति । अविकारः सदा शुद्ध इत्यादिना तस्याविकारित्वात् । ततश्च प्रधानमेव सदिति तस्यैव जगत्कर्तृत्वमिति प्राप्ते सूत्रमाह ।**

**ಅನು.:-** "ಸದೇವ ಸೌಮ್ಯೇದಮಗ್ರ ಆಸೀತ್" (ಛಾಂ.ಉ. 6-2-1) ಎಂಬುದಾಗಿ

ಜಗತ್ಸ್ರಷ್ಟೃತ್ವಪ್ರತಿಪಾದಕವಾದ ಈ ವಾಕ್ಯದಲ್ಲಿ ಶ್ರುತವಾಗುತ್ತಿರುವ ಸತ್‌ವಸ್ತು ಪ್ರಧಾನವೇ ಆಗುತ್ತದೆ. ಹೊರತು ವಿಷ್ಣು ಆಗುವುದಿಲ್ಲ.

ಯಾಕೆಂದರೆ - ಆ ಸತ್‌ವಸ್ತುವಿಗೆ "ಬಹು ಸ್ಯಾಂ ಪ್ರಜಾಯೇಯ" (ಛಾಂ.ಉ. 6-2-3) ಎಂಬುದಾಗಿ ಬಹುಭಾವ ಎಂಬ ವಿಕಾರಿತ್ವವು ಶ್ರುತವಾಗುತ್ತಿದೆ. ಈ ವಿಕಾರಿತ್ವವು ವಿಷ್ಣುವಿಗೆ ಕೂಡುವುದಿಲ್ಲ.

"ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ" ಎಂಬುದಾಗಿ ವಿಷ್ಣುವಿಗೆ ಅವಿಕಾರಿತ್ವವು ಸಿದ್ಧವಾಗಿರುವುದರಿಂದ ವಿಷ್ಣುವಿಗೆ ಬಹುಭಾವರೂಪ ವಿಕಾರಿತ್ವವು ಕೂಡುವುದಿಲ್ಲ.

ಆದ್ದರಿಂದ ಬಹುಭಾವರೂಪ ವಿಕಾರಿತ್ವವು ಶ್ರುತವಾಗುತ್ತಿರುವುದರಿಂದ ಸದೇವ ಸೌಮ್ಯ ಎನ್ನುವಲ್ಲಿ ಸತ್‌ವಸ್ತು ಪ್ರಧಾನವೇ ಆಗುತ್ತದೆ. ಹೊರತು ವಿಷ್ಣು ಆಗುವುದಿಲ್ಲ. ಅಂದಮೇಲೆ ಜಗತ್ಸ್ರಷ್ಟೃತ್ವವೂ ಪ್ರಧಾನಕ್ಕೇ ಕೂಡುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ ईक्षतिकर्मव्यपदेशात्सः ॐ (१.३.१३)**

**ಸೂತ್ರಾರ್ಥ :-** ಸಃ = "ಸದೇವ" (ಛಾಂ. 6-2) ಇತ್ಯಾದಿ ಪ್ರಕರಣಸ್ಥಿತವಾದ ಸತ್ ಮೊದಲಾದ ಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಹೊರತು ಪ್ರಧಾನ ಆಗುವುದಿಲ್ಲ. ಕುತಃ = ಯಾಕೆ? ಈಕ್ಷತಿಕರ್ಮವ್ಯಪದೇಶಾತ್ = ತದೈಕ್ಷತ (ಛಾಂ. 6-2-3) ಎಂಬುದಾಗಿ ಚೇತನನಿಷ್ಠವಾದ, ಐಕ್ಷತ ಶಬ್ದದಿಂದ ಉಪಲಕ್ಷಿತವಾದ ದರ್ಶನರೂಪವಾದ ಕ್ರಿಯೆಯನ್ನು ಹೇಳಿದ್ದರಿಂದ.

## ಸಿದ್ಧಾಂತ

**ಸೂ.ರ.:- एवं च तदैक्षतेति ईक्षत्याख्यव्यापारश्रवणात्तेन प्रेक्षापूर्वकारित्वलाभात् । ईक्षणस्याचेतने प्रधाने कथमप्ययोगात् ।**

**ಅನು.:-** ಸತ್‌ವಸ್ತುವಿನ ವಿಷಯದಲ್ಲಿ ತದೈಕ್ಷತ ಎಂಬುದಾಗಿ ಈಕ್ಷತಿರೂಪವಾದ ವ್ಯಾಪಾರವು ಶ್ರುತವಾಗುತ್ತಿರುವುದರಿಂದ, ಅದರಿಂದ ಪ್ರೇಕ್ಷಾಪೂರ್ವಕಾರಿತ್ವವು ಲಭಿಸುತ್ತಿದೆ. ಇಂತಹ ಈಕ್ಷತಿಕ್ರಿಯೆಯಾದರೋ ಅಚೇತನವಾದ ಪ್ರಧಾನದಲ್ಲಿ ಯಾವ ರೀತಿಯಿಂದಲೂ ಕೂಡುವುದಿಲ್ಲ. ಹೀಗಾಗಿ ಚೇತನನಾದ ವಿಷ್ಣುವಿಗೇ ಅದು ಉಪಪನ್ನವಾಗುವುದರಿಂದ ವಿಷ್ಣುವೇ ಸತ್‌ವಸ್ತು ಆಗುತ್ತಾನೆ.

**ಸೂ.ರ.:– मा भूत्तर्ह्यचेतना प्रकृतिः । चेतना प्रकृतिः किं न स्यादिति चेत् । चेतन प्रकृतेः स्त्रीत्वेन स्वातन्त्र्येण सर्जकत्वायोगात् ।**

**ಅನು.:–** ಹಾಗಾದರೆ ಅಚೇತನವಾದ ಪ್ರಧಾನವು ಸತ್‌ವಸ್ತು ಆಗುವುದು ಬೇಡ. ಕಿಂತು ಚೇತನಪ್ರಕೃತಿ ಸತ್‌ವಸ್ತು ಆಗಬಾರದು ಏಕೆ? ಎಂದರೆ, ಅದು ಸರಿಯಲ್ಲ, ಆ ಚೇತನಪ್ರಕೃತಿಯು ಸ್ತ್ರೀ ಆದ್ದರಿಂದ ಅವಳಿಗೆ ಸ್ವಾತಂತ್ರ್ಯೇಣ ಸರ್ಜಕತ್ವವು (ಸೃಷ್ಟಿಕರ್ತೃತ್ವವು) ಕೂಡುವುದಿಲ್ಲ. ಆದ್ದರಿಂದ ಚೇತನಪ್ರಕೃತಿಯೂ ಸತ್‌ವಸ್ತು ಆಗಲು ಸಾಧ್ಯವಿಲ್ಲ.

**ಸೂ.ರ.:– न च बहुभावाख्यप्रधानलिङ्गश्रवणेन स न विष्णुरिति वाच्यम् । अजायमानो बहुधा विजायत (तै.आ.३-१३-१) इत्यविकारस्यापि बहुभावश्रवणेन तस्य सावकाशत्वात् । सदिति विष्णुरेवोक्तस्तस्यैव स्रष्टृत्वमिति सिद्धम् ।**

**ಅನು.:–** ಹೌದು, ಅಲ್ಲಿ ಬಹುಭಾವವನ್ನು ಹೇಳುತ್ತಿದ್ದಾರೆ. ಆ ಬಹುಭಾವವಾದರೂ ಪ್ರಧಾನದ ಲಿಂಗವಾಗಿದೆ. ಅವಿಕಾರಿಯಾಗಿರುವ ವಿಷ್ಣುವಿಗೆ ಅದು ಕೂಡುವುದಿಲ್ಲ. ಹೀಗಾಗಿ ಬಹುಭಾವರೂಪವಾದ ಪ್ರಧಾನದ ಲಿಂಗವು ಶ್ರುತವಾಗುತ್ತಿರುವುದರಿಂದ ಸತ್‌ವಸ್ತು ವಿಷ್ಣು ಆಗಲು ಸಾಧ್ಯವಿಲ್ಲವಲ್ಲ? ಎಂದರೆ, ಅದು ಸರಿಯಲ್ಲ.

ವಿಷ್ಣು ಅವಿಕಾರಿಯಾಗಿದ್ದರೂ ಸಹ "ಅಜಾಯಮಾನೋ ಬಹುಧಾ ವಿಜಾಯತೇ" (ತೈ.ಆ.3-13-1) ಎಂಬುದಾಗಿ ಬಹುಭಾವವು ಶ್ರುತವಾಗುತ್ತಿರುವುದರಿಂದ ಬಹುಭಾವಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಹೀಗಾಗಿ ಬಹುಭಾವ ಶ್ರುತವಾದ ಮಾತ್ರಕ್ಕೆ ವಿಷ್ಣು ಸತ್‌ವ್ಯಕ್ತಿ ಅಲ್ಲ ಎನ್ನಲು ಬರುವುದಿಲ್ಲ.

ಆದ್ದರಿಂದ ತದೈಕ್ಷತ ಎಂಬುದಾಗಿ ಚೇತನನಿಷ್ಠವಾದ ಈಕ್ಷಣಕ್ರಿಯೆಯನ್ನು ಹೇಳುತ್ತಿರುವುದರಿಂದ ಸದೇವ ಸೌಮ್ಯೇದಮಗ್ರ ಆಸೀತ್ ಎನ್ನುವಲ್ಲಿ ಶ್ರುತನಾಗುತ್ತಿರುವ ಸತ್‌ವಸ್ತು ವಿಷ್ಣುವೇ ಆಗುತ್ತಾನೆ, ಅವನಿಗೇ ಜಗತ್ಸ್ರಷ್ಟೃತ್ವವೂ ಉಪಪನ್ನವಾಗುತ್ತದೆ ಎಂದು ಸಿದ್ಧವಾಗುತ್ತದೆ.

ಸದಧಿಕರಣವು ಮುಗಿಯಿತು.

ಅಧಿಕರಣ – 5

# ದಹರಾಧಿಕರಣ

## ಸಂಗತಿ

**ಸೂ.ರ.:– अत्र सर्वाधारतयाऽन्वेष्टव्यतया च साक्षाद्वा व्यवधानेन वा सामान्यतो हृत्पद्मस्थत्वलिङ्गस्य ब्रह्मणि समन्वयः क्रियते ।**

**ಅನು.:–** ಸರ್ವಾಧಾರತ್ವೇನ ಅನ್ವೇಷ್ಟವ್ಯತ್ವೇನ (ಅನ್ವೇಷಣ ವಿಷಯತ್ವೇನ) ಸಾಕ್ಷಾತ್ತಾಗಿ ಅಥವಾ ವ್ಯವಧಾನದಿಂದ ಸಾಮಾನ್ಯತಃ ಹೃತ್ಪದ್ಮಸ್ಥತ್ವ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಐದನೇ ಈ ದಹರಾಧಿಕರಣದಲ್ಲಿ.

(ಆಕಾಶ-ಬ್ರಹ್ಮರಲ್ಲಿ ಸಾಧಾರಣವಾದ ಹೃತ್ಪದ್ಮಸ್ಥತ್ವ ಲಿಂಗವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ.)

ಹಿಂದೆ "ಏತಸ್ಯ ವಾಽಕ್ಷರಸ್ಯ" ಇತ್ಯಾದಿಯಾಗಿ ವಿಷ್ಣುವಿಗೆ ಚಂದ್ರ-ಸೂರ್ಯಾ-ದ್ಯಾಧಾರತ್ವವನ್ನು ಹೇಳಿದೆ. ಆ ಸರ್ವಾಧಾರತ್ವವು "ಏತಸ್ಮಿನ್ ಬ್ರಹ್ಮಪುರೇ ದಹರಂ ..." ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಹೃತ್ಪದ್ಮಸ್ಥಿತನಾದ ವ್ಯಕ್ತಿಗೆ ಶ್ರುತವಾಗುತ್ತಿದೆ. ಈ ಹೃತ್ಪದ್ಮಸ್ಥಿತನಾದ ವ್ಯಕ್ತಿ ವಿಷ್ಣು ಅಲ್ಲ ಎಂದಾದರೆ ಸರ್ವಾಧಾರತ್ವವೂ ಬೇರೆಯವರಿಗೇ ಕೊಡಬೇಕಾಗುತ್ತದೆ. ಆದ್ದರಿಂದ ಈ ಹೃತ್ಪದ್ಮಸ್ಥಿತನಾದ ವ್ಯಕ್ತಿ ಯಾರು? ವಿಷ್ಣುವೋ? ಅಲ್ಲವೋ? ಎಂದು ಚರ್ಚೆ ಮಾಡಿ, ವಿಷ್ಣುವೇ ಹೃತ್ಪದ್ಮಸ್ಥಿತನಾದವನು ಎಂದು ನಿರ್ಣಯಿಸು-ತ್ತಾರೆ ಈ ದಹರಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वाकाश एव हृत्पद्मस्थो भवेत् । दहरोऽस्मिन्निति (छां.८-१) पद्मस्थे दहराकाशस्थितिश्रवणात् । तस्यान्ते सुषिरमिति (महा ना.११) व्याख्यानाच्च ।**

**ಅನು.:–** "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ .... ಕಿಂ ತದತ್ರ ವಿದ್ಯತೇ ...." (ಛಾಂ.ಉ. 8-1-2)

ಎಂಬುದಾಗಿ ಶ್ರುತವಾಗುತ್ತಿರುವ ಸರ್ವಾಧಾರತಯಾ ಹೃತ್ಪದ್ಮಸ್ಥಿತವಾದ ವಸ್ತು ಆಕಾಶವೇ ಆಗುತ್ತದೆ. ಯಾಕೆ? ''ದಹರೋಽಸ್ಮಿನ್ನಂತರ ಆಕಾಶಃ'' ಎಂಬುದಾಗಿ ಹೃತ್ಪದ್ಮದಲ್ಲಿ ದಹರಾಕಾಶಸ್ಥಿತಿಯು ಶ್ರುತವಾಗುತ್ತಿರುವುದರಿಂದ, ಮತ್ತು ತಸ್ಯೈವೋಭೇ ಅಸ್ಮಿನ್ ಎಂಬುದಾಗಿ ಆ ಆಕಾಶಕ್ಕೇನೇ ಸರ್ವಾಧಾರತ್ವವೂ ಶ್ರುತವಾಗುತ್ತಿರುವುದರಿಂದ.

ಆಕಾಶವೇ ಸರ್ವಾಧಾರತಯಾ ಹೃತ್ಪದ್ಮಸ್ಥಿತವಾಗಲಿ. ಆದರೆ ಓಂ ಆಕಾಶಸ್ತಲ್ಲಿಂಗಾತ್ ಓಂ ಎಂದು ಹೇಳಿದ ನ್ಯಾಯದಂತೆ ಆ ಆಕಾಶವು ವಿಷ್ಣುವೇ ಆಗಲಿ? ಅವನೇ ಹೃತ್ಪದ್ಮಸ್ಥಿತನಾಗಲಿ? ಎಂದರೆ, ಅದು ಸರಿಯಲ್ಲ.

''ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್'' (ಮ.ನಾ.ಉ. 11) ಎಂಬುದಾಗಿ ಪ್ರಸಿದ್ಧವಾದ ಆಕಾಶಕ್ಕೇನೇ ಸರ್ವಾಧಾರತಯಾ ಹೃತ್ಪದ್ಮಸ್ಥಿತತ್ವವನ್ನು ಹೇಳಿದ್ದರಿಂದ, ಇಲ್ಲಿನ ಆಕಾಶಶಬ್ದಕ್ಕೆ ಆಕಾಶ ಎಂದೇ ವ್ಯಾಖ್ಯಾನ ಮಾಡಿದ್ದರಿಂದ, ಆಕಾಶವೇ ಸರ್ವಾಧಾರತಯಾ ಹೃತ್ಪದ್ಮಸ್ಥಿತವಾಗುತ್ತದೆ.

**ಸೂ.ರ.:– आकाशशब्देन यदि सुषिरमेवाभिमतं तस्मिंश्च यदन्तरिति हृत्पद्मस्थाकाशगतः सर्वाधारतयोच्येत तर्हि वाक्यान्वयानुपपत्तेः । तथाहि । तस्मिन्नित्यत्र विष्णुत्वाभिप्राये किं तत्र विद्यत इति प्रश्नस्य ब्रह्म विद्यत इति परिहारं विना यावान्वा इत्यादेरभिप्रायासंगतिः ।**

**ಅನು.:–** ಒಂದುವೇಳೆ ಆಕಾಶಶಬ್ದದಿಂದ ಸುಷಿರವೇ ಅಭಿಪ್ರೇತವಾಗಿದ್ದರೆ, ಮತ್ತು ತಸ್ಮಿನ್ ಯದಂತಃ ಎಂಬುದಾಗಿ ಹೃತ್ಪದ್ಮಸ್ಥ ಆಕಾಶಗತನಾದ ವಿಷ್ಣುವೇ ಸರ್ವಾಧಾರತ್ವೇನ ಪ್ರತಿಪಾದ್ಯನಾಗಿದ್ದಾದರೆ ಆಗ ವಾಕ್ಯದ ಅನ್ವಯವು ಅನುಪಪನ್ನವಾಗುತ್ತದೆ.

ಏಕೆಂದರೆ - ತಸ್ಮಿನ್ ಯದಂತಃ ಎನ್ನುವಲ್ಲಿ ವಿಷ್ಣುವೇ ಪ್ರತಿಪಾದ್ಯ ಎಂದು ಅಭಿಪ್ರಾಯವಾಗಿದ್ದರೆ, ಕಿಂ ತತ್ರ ವಿದ್ಯತೇ? ಎಂಬ ಶಿಷ್ಯರ ಪ್ರಶ್ನೆಗೆ ಗುರುಗಳು ಬ್ರಹ್ಮ ವಿದ್ಯತೇ ಎಂದು ಪರಿಹಾರ ಹೇಳಬೇಕಿತ್ತು. ಆದರೆ ಆ ರೀತಿ ಪರಿಹಾರ ಹೇಳದೇ ''ಯಾವಾನ್ವಾ ಅಯಮಾಕಾಶಃ ತಾವಾನೇಷೋಽಂತರ್ಹೃದಯ ಆಕಾಶಃ'' ಇತ್ಯಾದಿಯಾಗಿ ಹೇಳುವ ಅಭಿಪ್ರಾಯವು ಅಸಂಗತವಾಗುತ್ತದೆ.

**ಸೂ.ರ.:– आकाशपक्षे त्वस्त्यस्यान्वयः । हृदयाकाशस्थमुपास्य-मित्युक्ते किं तत्र स्थितमिति प्रश्ने यावान्वेति प्रागुक्ताकाशस्य**

**विशिष्योभेऽस्मिन्नित्यादिपरिहारसंश्लेषात् । न च यावानित्यादिनाऽऽकाशाख्यो विष्णुः सर्वाधारतया परिहारे कथ्यत इत्यन्वयोपपत्तिः । तमिन्सर्वं प्रतिष्ठितमिति साक्षात्सुषिरस्यैव सर्वाधारत्वोक्तिविरोधात् । अत आकाशस्यैव सर्वाधारतया हृत्पद्मस्थत्वम् । अतो भगवदितरदेव चन्द्रादित्याधाराक्षरमिति प्राप्ते सूत्रितम् ।**

**ಅನು.:–** ಆಕಾಶವು ಸರ್ವಾಧಾರತ್ವೇನ ಪ್ರತಿಪಾದ್ಯ ಎಂಬ ಪಕ್ಷದಲ್ಲಿ ಈ ವಾಕ್ಯಾನ್ವಯಾನುಪಪತ್ತಿ ಇರುವುದಿಲ್ಲ. ಅರ್ಥಾತ್ ಅನ್ವಯವು ಉಪಪನ್ನವಾಗುತ್ತದೆ.

ಹೃದಯಾಕಾಶಸ್ಥಂ ಉಪಾಸ್ಯಮ್ ಎಂದು ಹೇಳಿದಾಗ ತತ್ರ ಕಿಂ ಸ್ಥಿತಂ? (ಅಲ್ಲಿ ಇರುವುದೇನು?) ಎಂದು ಪ್ರಶ್ನೆ ಬಂದಾಗ, ಯಾವಾನ್ ವಾ ಅಯಮಾಕಾಶಃ ಎಂಬುದಾಗಿ ಹಿಂದೆ ಹೇಳಿದ ಆಕಾಶದ ಬಗ್ಗೇನೇ ವಿಶೇಷವಾಗಿ "ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ" ಇತ್ಯಾದಿಯಾಗಿ ಪರಿಹಾರವು ಸರಿಯಾಗುತ್ತದೆ (ಪರಿಹಾರ ಸಂಶ್ಲೇಷವಾಗುತ್ತದೆ). ಯಾವಾನ್ ವಾ ಅಯಮಾಕಾಶಃ ಇತ್ಯಾದಿಯಾಗಿ ಪರಿಹಾರದಲ್ಲಿ ಆಕಾಶನಾಮಕನಾದ ವಿಷ್ಣುವು ಸರ್ವಾಧಾರತಯಾ ಹೇಳಲ್ಪಡುವುದಿಲ್ಲ. ಆದ್ದರಿಂದ ಆಕಾಶಪಕ್ಷದಲ್ಲಿ ಅನ್ವಯವು ಉಪಪನ್ನವಾಗುತ್ತದೆ.

ಮತ್ತು ತಸ್ಮಿನ್ ಸರ್ವಂ ಪ್ರತಿಷ್ಠಿತಂ ಎಂಬುದಾಗಿ ಸಾಕ್ಷಾತ್ತಾಗಿ ಸುಷಿರಕ್ಕೇನೇ ಸರ್ವಾಧಾರತ್ವವನ್ನು ಹೇಳಿದ್ದರ ವಿರೋಧ ಬರುತ್ತದೆ.

ಆದ್ದರಿಂದ ಅಥ ಯದಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ... ಎಂಬುದಾಗಿ ಶ್ರುತವಾಗುತ್ತಿರುವ ಸರ್ವಾಧಾರತಯಾ ಹೃತ್ಪದ್ಮಸ್ಥವಾದದ್ದು ಆಕಾಶವೇ ಆಗುತ್ತದೆ. ಅಂತೆಯೇ ಭಗವಂತನಿಂದ ಭಿನ್ನವಾದ ವಸ್ತುವೇ (ಆಕಾಶವೇ) ಚಂದ್ರ-ಆದಿತ್ಯಾಧಾರವಾದ ಅಕ್ಷರವಾಗುತ್ತದೆ. ಈ ರೀತಿಯಾಗಿ ಪೂವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೊರಡುತ್ತದೆ –

**ॐ दहर उत्तरेभ्यः ॐ (१.३.१४)**

**ಸೂತ್ರಾರ್ಥ :–** ದಹರೇ = "ದಹರಂ ಪುಂಡರೀಕಂ ವೇಶ್ಮ" ಎಂಬುದಾಗಿ ವಾಕ್ಯ-ಪ್ರತಿಪಾದ್ಯವಾದ ಹೃತ್ಪದ್ಮಸ್ಥ ಅಲ್ಪಾಕಾಶದಲ್ಲಿ ಇರುವ ವ್ಯಕ್ತಿ ವಿಷ್ಣುರೇವ ನ ಜೀವಾದಿಃ = ವಿಷ್ಣುವೇ ಆಗುತ್ತಾನೆ. ಹೊರತು ಜೀವಾದಿಗಳು ಆಗುವುದಿಲ್ಲ. ಕುತಃ = ಯಾಕೆ? ಉತ್ತರೇಭ್ಯಃ = "ಯ ಆತ್ಮಾ ಅಪಹತಪಾಪ್ಮಾ" (ಛಾಂ. 8-7) ಇತ್ಯಾದಿ ಉತ್ತರವಾಕ್ಯದಲ್ಲಿ ಹೇಳಿದ ನಿರ್ಗತಪಾಪ್ಮತ್ವ ಮೊದಲಾದ ಧರ್ಮಗಳಿಂದಾಗಿ.

## ಸಿದ್ಧಾಂತ

**ಸೂ.ರ.:- एवं च दहरपद्मस्थो विष्णुरेव भवेत् । अपहतपाप्मेत्याद्युत्तरवाक्ये हृत्पद्मस्थस्यापहतपाप्मत्वादिगुणश्रवणात् ।**

**ಅನು.:-** ಯ ಆತ್ಮಾ ಅಪಹತಪಾಪ್ಮಾ (ಛಾಂ. 8-7) ಇತ್ಯಾದಿ ಉತ್ತರವಾಕ್ಯಗಳಲ್ಲಿ ಹೃತ್ಪದ್ಮಸ್ಥನಾದ ಪುರುಷನಿಗೆ ಅಪಹತಪಾಪ್ಮತ್ವಾದಿ ಗುಣಗಳು ಶ್ರುತವಾಗುತ್ತಿರುವುದರಿಂದ ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ... ಎಂಬುದಾಗಿ ಶ್ರುತನಾಗುತ್ತಿರುವ ಸರ್ವಾಧಾರತಯಾ ಹೃತ್ಪದ್ಮಸ್ಥನಾದವನು ವಿಷ್ಣುವೇ ಆಗುತ್ತಾನೆ.

**ಸೂ.ರ.:- पापाद्यभावस्यान्यत्र कथञ्चिद्योगेऽपि । सर्वथा सत्यकामत्वादिकस्यायोगात् । योऽशनायेति (बृ. ५-५) श्रुतेः ।**

**ಅನು.:-** ಅಪಹತಪಾಪ್ಮತ್ವಾದಿಗಳು ಇದ್ದಮಾತ್ರಕ್ಕೆ ಅವು ವಿಷ್ಣುತ್ವನಿಶ್ಚಾಯಕ ಹೇಗೆ ಆಗುತ್ತವೆ? ಎಂದರೆ, "ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ" (ಬೃ.ಉ. 5-5) ಎಂದು ಶ್ರುತಿ ಇರುವುದರಿಂದ ಅಪಹತಪಾಪ್ಮತ್ವಾದಿಗಳು ವಿಷ್ಣುವಿನಲ್ಲಿ ಮಾತ್ರ ಇರುವ ಧರ್ಮಗಳೆಂದು ತಿಳಿಯುವುದರಿಂದ ವಿಷ್ಣುತ್ವನಿಶ್ಚಾಯಕವಾಗುತ್ತವೆ.

ರಮಾದಿಗಳಲ್ಲಿಯೂ ಕಥಂಚಿತ್ ಪಾಪಾದ್ಯಭಾವವನ್ನು ಹೇಳಬಹುದಲ್ಲ? ಎಂದರೆ, ಹಾಗೆ ಒಂದುವೇಳೆ ಕಥಂಚಿತ್ ಅಪಹತಪಾಪ್ಮತ್ವವನ್ನು ಕೂಡಿಸಿದರೂ ಸಹ ಅಲ್ಲಿಯೇ ಶ್ರುತವಾಗುತ್ತಿರುವ ಸತ್ಯಕಾಮತ್ವಾದಿಧರ್ಮಗಳು ಯಾವ ರೀತಿಯಿಂದಲೂ ಉಳಿದವರಿಗೆ ಕೂಡುವುದಿಲ್ಲ.

**ಸೂ.ರ.:- निरपेक्षगुणानामन्यत्राभावात् । नित्यतीर्णेति (पाद्म) वचनात् । सापेक्षनिरपेक्षयोर्निरपेक्षस्य स्वीकार्यत्वात् । अतो हृत्पद्मस्थो विष्णुरेवेति सिद्धम् ।**

**ಅನು.:-** ಈ ಗುಣಗಳು ಸಾಪೇಕ್ಷವಾಗಿ ಉಳಿದವರಿಗೂ ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ.

ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ ।
ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ ॥

ಎಂಬುದಾಗಿ ಪಾದ್ಮಪುರಾಣವಚನ ಇರುವುದರಿಂದ ನಿರಪೇಕ್ಷವಾದ ಗುಣಗಳು ವಿಷ್ಣುವಿನಲ್ಲಿ ಮಾತ್ರ ಇವೆ. ಉಳಿದವರಲ್ಲಿ ಸಾಪೇಕ್ಷವಾದ ಗುಣಗಳು ಇವೆ. ಸಾಪೇಕ್ಷ-ನಿರಪೇಕ್ಷವಾದವುಗಳಲ್ಲಿ ನಿರಪೇಕ್ಷವಾದದ್ದೇ ಸ್ವೀಕಾರ್ಯವಾದ್ದರಿಂದ, ನಿರಪೇಕ್ಷವಾದ ಗುಣಗಳು ವಿಷ್ಣುವಿನಲ್ಲಿ ಮಾತ್ರ ಇರುವುದರಿಂದ, ನಿರಪೇಕ್ಷವಾದ ಈ ಗುಣಗಳು ವಿಷ್ಣುತ್ವನಿಶ್ಚಾಯಕವಾಗುತ್ತವೆ.

ಆದ್ದರಿಂದ ಉತ್ತರವಾಕ್ಯಗಳಲ್ಲಿ ಅಪಹತಪಾಪ್ಮತ್ವಾದಿ ಧರ್ಮಗಳು ಶ್ರುತವಾಗುತ್ತಿರುವುದರಿಂದ, ನಿರಪೇಕ್ಷವಾದ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಕೂಡುವುದರಿಂದ, ಸತ್ಯಕಾಮತ್ವಾದಿಗಳೂ ವಿಷ್ಣುವಿನಲ್ಲಿ ಮಾತ್ರ ಇರುವ ಧರ್ಮಗಳಾದ್ದರಿಂದ

"ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ..."

ಎಂಬುದಾಗಿ ಶ್ರುತವಾಗುತ್ತಿರುವ ಸರ್ವಾಧಾರತಯಾ ಹೃತ್ಪದ್ಮಸ್ಥಿತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 15

**ಸಂಗತಿ**

**ಸೂ.ರ.:– युक्त्यन्तरेण विष्णोर्हृत्पद्मस्थत्वं प्रतिपादयत्सूत्रमुपन्यस्यति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಪ್ರತಿಪಾದಿಸುವ ಸೂತ್ರವನ್ನು ಉಪನ್ಯಾಸ ಮಾಡುತ್ತಾರೆ –

**ॐ गतिशब्दाभ्यां तथा हि दृष्टं लिङ्गं च ॐ (१.३.१५)**

**ಸೂತ್ರಾರ್ಥ :-** ಗತಿಶಬ್ದಾಭ್ಯಾಂ = "ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಮ್" (ಛಾಂ. 8-3-2) ಎಂಬ ವಾಕ್ಯದಲ್ಲಿ ಶ್ರುತವಾಗುತ್ತಿರುವ ಸುಪ್ತಪ್ರಾಪ್ಯತ್ವ – ಬ್ರಹ್ಮಶಬ್ದಗಳೆಂಬ ಹೇತುಗಳಿಂದಾಗಿ ದಹರಹೃತ್ಪದ್ಮಸ್ಥಂ ಬ್ರಹ್ಮೈವ = ಹೃತ್ಪದ್ಮಸ್ಥನಾದ ವ್ಯಕ್ತಿ ಬ್ರಹ್ಮನೇ ಆಗುತ್ತಾನೆ. ಚ (ಕಿಂಚ) = ಮತ್ತು ಯತಃ = ಯಾವ ಕಾರಣ "ಅರಶ್ಚ" (ಛಾಂ. 8-5-3) ಎಂಬ ಶ್ರುತಿಯಲ್ಲಿ ತಥಾ = ಸುಪ್ತಪ್ರಾಪ್ಯತ್ವದಂತೆ ಹಿ = ವಿಷ್ಣುನಿಷ್ಠತ್ವೇನ ಪ್ರಸಿದ್ಧವಾದ ಲಿಂಗಂ = ಅರಣ್ಯಾಖ್ಯಸುಧಾಸಮುದ್ರಾಶ್ರಯ ಲೋಕವತ್ವರೂಪಜ್ಞಾಪಕವಾದ ಲಿಂಗವೂ ಸಹ ಹೃತ್ಪದ್ಮಸ್ಥೇ ದೃಷ್ಟಂ = ಹೃತ್ಪದ್ಮಸ್ಥನಾದ ವ್ಯಕ್ತಿಯ ವಿಷಯದಲ್ಲಿ ಹೇಳಲ್ಪಟ್ಟಿದೆಯೋ ಅತೋಽಪಿ

= ಆ ಕಾರಣದಿಂದಲೂ ಸಹ ದಹರಹೃತ್ಪದ್ಮಸ್ಥೋ ವಿಷ್ಣುರೇವ = ದಹರಹೃತ್ಪದ್ಮಸ್ಥನಾದವನು ವಿಷ್ಣುವೇ.

**ಸೂ.ರ.:– एवं चाहरहर्गच्छन्त्य इति सुप्तप्राप्यत्वाभिधानात् । सुप्तप्राप्यत्वस्य विष्णुलिङ्गत्वात् । सता सोम्येति (छां. ६-८) श्रुतेः ।**

**ಅನು.:–** ದಹರಹೃತ್ಪದ್ಮಸ್ಥನಾದ ವ್ಯಕ್ತಿಯ ವಿಷಯದಲ್ಲಿ "ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ" (ಛಾಂ.ಉ. 8-3-2) ಎಂದು ಶ್ರುತಿ ಇರುವುದರಿಂದ ಸುಪ್ತಪ್ರಾಪ್ಯತ್ವವು ವಿಷ್ಣುವಿಗೆ ಮಾತ್ರ ಇರುವ ಧರ್ಮವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಸುಪ್ತಪ್ರಾಪ್ಯತ್ವ ಧರ್ಮವು ಶ್ರುತವಾಗುತ್ತಿರುವುದರಿಂದ ದಹರಹೃತ್ಪದ್ಮಸ್ಥನಾದವನು ವಿಷ್ಣುವೇ ಎಂದು ತಿಳಿದುಬರುತ್ತದೆ.

**ಸೂ.ರ.:– अरण्यनामामृतसमुद्रद्वयाश्रयलोकवत्त्वरूपलिङ्गस्य हृत्पद्मस्थस्य दृष्टत्वाच्च । अरश्चेति श्रुतेः । ततश्च विष्णुरेव हृत्पद्मस्थ इति सिद्धम् ।**

**ಅನು.:–** ಮತ್ತು, ದಹರಹೃತ್ಪದ್ಮಸ್ಥನಾದ ವ್ಯಕ್ತಿಯ ವಿಷಯದಲ್ಲಿ "ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ" (ಛಾಂ.ಉ. 8-5-3) ಎಂಬುದಾಗಿ ಅರಣ್ಯನಾಮಾಮೃತ-ಸಮುದ್ರದ್ವಯಾಶ್ರಯಲೋಕವತ್ವರೂಪಲಿಂಗವೂ ದೃಷ್ಟವಾಗುತ್ತಿದೆ. ಈ ಲಿಂಗವಾದರೂ "ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ" ಇತ್ಯಾದಿಯಾಗಿ ವಿಷ್ಣುವಿನ ಲಿಂಗವಾಗಿಯೇ ಹೇಳಲ್ಪಡುತ್ತಿದೆ.

ಆದ್ದರಿಂದ ವಿಷ್ಣುವಿನ ಧರ್ಮವಾದ ಸುಪ್ತಪ್ರಾಪ್ಯತ್ವವು ಹಾಗೂ ಬ್ರಹ್ಮಶಬ್ದವು ಮತ್ತು ಅರಣ್ಯನಾಮಾಮೃತಸಮುದ್ರದ್ವಯಾಶ್ರಯಲೋಕವತ್ವರೂಪವಾದ ಲಿಂಗ ಇವುಗಳೆಲ್ಲವೂ ದಹರಹೃತ್ಪದ್ಮಸ್ಥನಾದ ವ್ಯಕ್ತಿಯ ವಿಷಯದಲ್ಲಿ ಶ್ರುತವಾಗುತ್ತಿರುವುದರಿಂದ, ಅಥ ಯದಿದಮಸ್ಮಿನ್ ಬ್ರಹ್ಮಪುರೇ ... ಎಂಬುದಾಗಿ ಸರ್ವಾಧಾರತಯಾ ಹೃತ್ಪದ್ಮಸ್ಥನಾಗಿ ಶ್ರುತನಾಗುತ್ತಿರುವ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 16

**ಸೂ.ರ.:– हेत्वन्तरेण विष्णोर्हृत्पद्मस्थत्वं प्रतिपादयत्सूत्रं पठति ।**

**ಅನು.:–** ಮತ್ತೊಂದು ಹೇತುವಿನಿಂದಲೂ ಸಹ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ –

## ॐ धृतेश्च महिम्नोऽस्यास्मिन्नुपलब्धेः ॐ (१.३.१६)

**ಸೂತ್ರಾರ್ಥ** :- ಧೃತೇಃ = "ಸ ಏಷ ಸೇತುರ್ವಿಧೃತಿಃ" (ಛಾಂ. 8-4) ಎಂಬುದಾಗಿ ಹೃತ್ಪದ್ಮಸ್ಥನಾದವನಿಗೆ ಸರ್ವಾಧಾರತ್ವವು ಶ್ರುತವಾಗುತ್ತಿರುವುದರಿಂದಲೂ ಸಹ ವಿಷ್ಣುವೇ ಹೃತ್ಪದ್ಮಸ್ಥನಾದವನು ಆಗುತ್ತಾನೆ. ಚ (ಕಿಂಚ) = ಮತ್ತು ಮಹಿಮ್ನಃ = ಛಾಂದೋಗ್ಯದಲ್ಲಿ ಹೃತ್ಪದ್ಮಸ್ಥನಾದವನಲ್ಲಿ ಇರುವುದಾಗಿ ಹೇಳಿದ ಸರ್ವೇಶ್ವರತ್ವಾದಿ ಮಹಿಮೆಯು ಅಸ್ಮಿನ್ = ಏಷ ಸರ್ವೇಶ್ವರಃ ಎಂಬ ವಾಜಸನೇಯವಾಕ್ಯದಲ್ಲಿ ಉಪಲಬ್ಧೇ = ಶ್ರುತವಾಗುತ್ತಿರುವುದರಿಂದಾಗಿ ತತ್ಸಮಾಖ್ಯಾನಾತ್ = ಅದರ ಸಮಾಖ್ಯಾ ಇರುವುದರಿಂದಲೂ ಸಹ ವಿಷ್ಣುವೇ ಹೃತ್ಪದ್ಮಸ್ಥನಾದವನು ಎಂದು ಸಿದ್ಧವಾಗುತ್ತದೆ.

ಸಮಾಖ್ಯಾ ಇರುವ ಮಾತ್ರದಿಂದ ವಿಷ್ಣುವೇ ಎಂದು ಹೇಗೆ ನಿಶ್ಚಯವಾಗುತ್ತದೆ? ಎಂದರೆ, ಅದಕ್ಕೆ ಹೇಳಿದರು – ಅಸ್ಯ = ಈ ವಿಷ್ಣುಮಹಿಮೆಯು ಅಸ್ಮಿನ್ = ವಾಜಸನೇಯಕ ವಾಕ್ಯದಲ್ಲಿ ಶ್ರವಣಾದೇವ = ಶ್ರುತವಾಗುತ್ತಿರುವುದರಿಂದಲೇನೇ ಹಾಗೆ ನಿಶ್ಚಯವಾಗುತ್ತದೆ.

**ಸೂ.ರ.:– एवं च वाजसनेयके वाक्ये य एषोऽन्तर्हृदय (बृ.६-४-२२) इत्याद्युक्त्वैष सर्वेश्वर इत्यादिना हृदये विष्णोरुक्तत्वेन तत्समाख्यानात् ।**

**ಅನು.:–** ವಾಜಸನೇಯಕದಲ್ಲಿ "ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ" (ಬೃ.ಉ. 6-4-22) ಇತ್ಯಾದಿಯಾಗಿ ಹೇಳಿ "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣಃ" "ಏಷಾಂ ಲೋಕಾನಾ-ಸಂಭೇದಾಯ" ಇತ್ಯಾದಿಯಾಗಿ ಹೃದಯದಲ್ಲಿ ವಿಷ್ಣುವನ್ನು ಹೇಳಿದ್ದರಿಂದ, ಅದರ ಸಮಾಖ್ಯಾ ಇರುವುದರಿಂದಾಗಿ ಇಲ್ಲಿ ಹೃತ್ಪದ್ಮಸ್ಥಿತನಾದವನೂ ವಿಷ್ಣುವೇ ಆಗಬೇಕು.

**ಸೂ.ರ.:– एतस्मिन्खल्वक्षरे, (बृ.५-८-११) स हि सर्वाधिपतिः, (महा ना.११) सर्वेशो विष्णुरेवैकः, (स्कान्दे) इत्यादि श्रुतिस्मृतिषूक्त-लिङ्गानामन्यत्र सावकाशत्वाभावात् । अतो हृत्पद्मस्थो विष्णुरेवेति सिद्धम् ।**

**ಅನು.:–** ಹೃತ್ಪದ್ಮಸ್ಥಿತನಾದವನಿಗೆ ಸರ್ವಾಧಾರತ್ವವು ಶ್ರುತವಾಗುತ್ತಿರುವುದರಿಂದ ವಿಷ್ಣುವೇ ಹೃತ್ಪದ್ಮಸ್ಥನಾಗುತ್ತಾನೆ ಎಂದು ಹೇಳಿದಿರಿ. ಈ ಸರ್ವಾಧಾರತ್ವವು ವಿಷ್ಣುತ್ವನಿಶ್ಚಾಯಕ

ಹೇಗೆ ಆಗುತ್ತದೆ? (ಅರ್ಥಾತ್ ಸರ್ವಾಧಾರತ್ವವನ್ನು ಬೇರೆಯವರಿಗೂ ಹೇಳಿ ಸಾವಕಾಶ ಮಾಡಬಹುದಲ್ಲ?) ಎಂದರೆ, ಅದು ಸರಿಯಲ್ಲ.

**ಸೂ.ರ.:– "एतस्मिन् खल्वक्षरे गार्ग्याकाश ओतश्च प्रोतश्च" (बृ.उ.५-८-११) "एतस्य वा अक्षरस्य प्रशासने गार्गि" (बृ.उ.५-८-९) "स हि सर्वाधिपतिः स हि सर्वपालः स ईशः स विष्णुः" "पतिं विश्वस्यात्मेश्वरम्" (म.ना.उ.११)**

**ಅನು.:–** ಇತ್ಯಾದಿ ಶ್ರುತಿಗಳಲ್ಲಿ ಹಾಗೂ "ಸರ್ವೇಶೋ ವಿಷ್ಣುರೇವೈಕೋ ನಾನ್ಯೋಽಸ್ತಿ ಜಗತಃ ಪತಿಃ ।" ಎಂಬುದಾಗಿ ಸ್ಕಾಂದಪುರಾಣಗಳಲ್ಲಿ ಈ ಸರ್ವಾಧಾರತ್ವಾದಿಮಹಿಮೆಗಳು ವಿಷ್ಣುವಿನ ಮಹಿಮೆಗಳೇ ಆಗಿವೆ ಎಂದು ತಿಳಿಸಿರುವುದರಿಂದ, ಈ ಮಹಿಮೆಗಳನ್ನು ಬೇರೆಯವರಲ್ಲಿ ಸಾವಕಾಶ ಮಾಡಲು ಬರುವುದಿಲ್ಲ.

ಆದ್ದರಿಂದ ಹೃತ್ಪದ್ಮಸ್ಥಿತನಾದವನ ವಿಷಯದಲ್ಲಿ ಸರ್ವಾಧಾರತ್ವಾದಿಮಹಿಮೆಗಳು ಶ್ರುತವಾಗುತ್ತಿರುವುದರಿಂದ, ಸರ್ವಾಧಾರತಯಾ ಹೃತ್ಪದ್ಮಸ್ಥಿತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 17

**ಸೂ.ರ.:– समाख्यारूपयुक्त्यंतरेण विष्णोर्हृत्पद्मगताकाशस्थत्वं साधयत्सूत्रं पठति ॥**

**ಅನು.:–** ಸಮಾಖ್ಯಾರೂಪವಾದ ಮತ್ತೊಂದು ಯುಕ್ತಿಯಿಂದಲೂ ಸಹ ವಿಷ್ಣುವಿಗೆ ಹೃತ್ಪದ್ಮಗತಾಕಾಶಸ್ಥತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ –

**ॐ प्रसिद्धेश्च ॐ (१.३.१७)**

**ಸೂತ್ರಾರ್ಥ :-** ಪ್ರಸಿದ್ಧೇಶ್ಚ= "ದಹರಂ ವಿಪಾಪ್ಮಮ್" (ಮಹಾ ನಾ. 10-7) ಎಂಬ ಶ್ರುತಿಯಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವಪ್ರಸಿದ್ಧಿ ಇರುವುದರಿಂದಲೂ ಸಹ, ವಿಷ್ಣುವೇ ಹೃತ್ಪದ್ಮಸ್ಥನಾದವನು.

**ಸೂ.ರ. :– एवं च दहरं विपाप्ममिति समाख्यारूपश्रुत्यन्तरे विष्णोर्हृत्पद्मस्थत्वप्रसिद्धेः ।**

**ಅನುವಾದ :– दहरं विपाप्मं परवेश्मभूतं यत्पुण्डरीकं पुरमध्यसंस्थम् । तत्रापि दहं (दहरं) गगनं विशोकस्तस्मिन् यदन्तस्तदुपासितव्यम् ॥ (म.ना.उ.१०-७)**

ಎಂಬುದಾಗಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವಪ್ರಸಿದ್ಧಿ ಇರುವುದರಿಂದಲೂ ಸಹ ವಿಷ್ಣುವೇ ಹೃತ್ಪದ್ಮಸ್ಥವ್ಯಕ್ತಿಯಾಗುತ್ತಾನೆ.

**ಸೂ.ರ.:– न च प्रश्नोत्तरयोरसङ्गतिः । ब्रह्मपुरशब्देनैव हृत्पद्मस्थस्य ब्रह्मत्वे सिद्धे स्वरूपमात्रे प्रश्नायोगात् । कीदृशं तदिति भावेन किं तदिति प्रश्ने ब्रह्मस्वरूपनिरूपणाय यावानित्यदिपरिहारसंश्लेषात् ।**

**न च साक्षात्पद्मगतस्य विष्णुत्वाभ्युपगमे सुषिरशब्दस्याकाशवाचित्वेन पद्मगताकाशस्यैव विष्णुत्वाङ्गीकारे वा दहरपद्मस्याकाशत्वं विष्णोस्त्वाकाशगतत्वमिति तस्यैव सर्वाधारत्वमित्यभ्युपगमेऽपि वा साक्षात्सुषिरस्य सर्वाधारत्वोक्तेः सुषिरश्रुतिविरोधः । यथा मन्दिरस्थमञ्जूपान्तर्गतमपि वस्तु मन्दिरस्थमिति सञ्ज्ञीयते तथेहापि सुषिरश्रुतेः सुषिरस्याकाशस्यैव साक्षात्सर्वाधारत्वप्रतिपादिकायास्तस्यान्त इति (महा ना.११) सुषिरपदघटितश्रुतेः पद्मगतसुषिरान्तस्थपरमात्मानमपेक्ष्य प्रवृत्तत्वात् । अतो हृत्पद्मस्थो विष्णुरेवेति सिद्धम् ॥**

**ಅನು.:–** ವಿಷ್ಣುವಿಗೆ ಸರ್ವಾಧಾರತ್ವವನ್ನು ಹೇಳುವುದಾದರೆ ಸಾಕ್ಷಾತ್ತಾಗಿ ಸುಷಿರಕ್ಕೇನೇ ಸರ್ವಾಧಾರತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವುದಿಲ್ಲವೇ? ಎಂದರೆ, ಅದು ಸರಿಯಲ್ಲ.

ಸಾಕ್ಷಾತ್ತಾಗಿ ಪದ್ಮಗತನಾದವನೇ ವಿಷ್ಣು ಎಂದು ಅಂಗೀಕಾರ ಮಾಡಿದರೂ, ಅಥವಾ ಸುಷಿರಶಬ್ದವು ಆಕಾಶವಾಚಿಯಾದ್ದರಿಂದ ಪದ್ಮಗತವಾದ ಆಕಾಶಕ್ಕೇನೇ ವಿಷ್ಣುತ್ವವನ್ನು ಅಂಗೀಕಾರ ಮಾಡಿದರೂ ಸಹ, ಅಥವಾ ದಹರಪದ್ಮವೇ ಆಕಾಶ ಇನ್ನು ವಿಷ್ಣು ಆ ಆಕಾಶಗತನಾಗಿದ್ದಾನೆ ಎಂಬುದಾಗಿ ವಿಷ್ಣುವಿಗೇ ಸರ್ವಾಧಾರತ್ವವನ್ನು ಅಂಗೀಕಾರ ಮಾಡಿದರೂ ಸಹ ಸಾಕ್ಷಾತ್ತಾಗಿ ಸುಷಿರಕ್ಕೇನೇ ಸರ್ವಾಧಾರತ್ವವನ್ನು ಹೇಳಿದ ಮಾತಿಗೆ ಸುಷಿರಶ್ರುತಿಯ ವಿರೋಧ ಬರುವುದಿಲ್ಲ.

ಹೇಗೆ ಮಂದಿರದಲ್ಲಿರುವುದು ಮಂಜೂಷಾ, ಆ ಮಂಜೂಷಾಂತರ್ಗತವಾದದ್ದು ಯಾವುದೋ ವಸ್ತು, ಹೀಗಿದ್ದರೂ ಸಹ ಆ ಮಂದಿರಸ್ಥಮಂಜೂಷಾಂತರ್ಗತವಾದ ವಸ್ತುವೂ ಮಂದಿರಸ್ಥವೆಂದೇ ಹೇಳಲ್ಪಡುತ್ತದೆಯೋ, ಅದೇ ರೀತಿಯಾಗಿ ಸುಷಿರಕ್ಕೇನೇ (ಆಕಾಶಕ್ಕೇನೇ) ಸಾಕ್ಷಾತ್ತಾಗಿ ಸರ್ವಾಧಾರತ್ವವನ್ನು ಪ್ರತಿಪಾದನೆ ಮಾಡುವ, ಸುಷಿರಪದದಿಂದ ಘಟಿತವಾದ "ತಸ್ಯಾಂತಃ" (ಮ.ನಾ. 11) ಎಂಬ ಸುಷಿರಶ್ರುತಿಯೂ ಸಹ ಪದ್ಮಗತವಾದ ಆಕಾಶ ಆ ಆಕಾಶಾಂತರ್ಗತನಾದವನು ಪರಮಾತ್ಮ ಅವನನ್ನು ಅಪೇಕ್ಷಿಸಿ ಪ್ರವೃತ್ತವಾಗಿದೆ.

ಆದ್ದರಿಂದ "ಅಥ ಯದಿದಮಸ್ಮಿನ್ ಬ್ರಹ್ಮಪುರೇ ..." ಎಂಬುದಾಗಿ ಸರ್ವಾ-ಧಾರತಯಾ ಹೃತ್ಪದ್ಮಸ್ಥನಾಗಿ ಶ್ರುತನಾಗುತ್ತಿರುವ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ - 18

### ಆಕ್ಷೇಪ

**ಸೂ.ರ.:– नन्वाकाशस्य सर्वाधारतया हृत्पद्मस्थत्वं जीवस्यैव भवेत् । उत्तरत्र परंज्योतिरित्युक्त (छां.८-१२-३) हृत्पद्मस्थात्मतया परामर्शात् । दहरस्थत्वलिङ्गात् । न चान्वयानुपपत्तिः । विष्णुपक्षे वाक्ययोजना-वज्जीवपक्षेऽपि योजयितुं शक्यत्वादित्यादिना भगवतो हृत्पद्मस्थत्वमाक्षिप्य समादधत्सूत्रमाह ।**

**ಅನು.:–** ಆಕಾಶಕ್ಕೆ ಯಾವ ಸರ್ವಾಧಾರತಯಾ ಹೃತ್ಪದ್ಮಸ್ಥತ್ವವು ಶ್ರುತವಾಗುತ್ತಿದೆ ಅದು ಜೀವನಿಗೇ ಹೇಳಬಹುದಲ್ಲವೇ? ಅರ್ಥಾತ್ ಸರ್ವಾಧಾರತಯಾ ಹೃತ್ಪದ್ಮಸ್ಥನಾದವನು ಜೀವನೇ ಆಗಬಹುದಲ್ಲವೇ?

ಏಕೆಂದರೆ :- "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ" (ಛಾಂ.ಉ. 8-12-3) ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಸಂಪ್ರಸಾದಪದದಿಂದ ಪ್ರಕೃತನಾದ, ಅಭಿನಿಷ್ಪದ್ಯತೇ ಎಂಬುದಾಗಿ ಕರ್ತೃತ್ವೇನ ಉಕ್ತನಾದ ಜೀವನನ್ನು "ಏಷ ಆತ್ಮೇತಿ ಹೋವಾಚ" (ಛಾಂ.ಉ. 4-15-1) ಎಂದು ಏತಚ್ಛಬ್ದದಿಂದ ಪರಾಮರ್ಶ ಮಾಡಿಕೊಂಡು, ಆತ್ಮಪದದಿಂದ "ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ" ಎಂದು ಹೇಳಿದ ಹೃತ್ಪದ್ಮಸ್ಥತ್ವವನ್ನು ವಿಧಾನ ಮಾಡಿದ್ದರಿಂದ. ಮತ್ತು ದಹರಸ್ಥತ್ವ ಲಿಂಗವೂ ಶ್ರುತವಾಗುತ್ತಿದೆ. ಅದೂ ಆತ್ಮನಿಗೆ ಉಪಪನ್ನವಾದ್ದರಿಂದ ಜೀವನೇ ಹೃತ್ಪದ್ಮಸ್ಥನಾಗುತ್ತಾನೆ.

ಜೀವನೇ ಹೃತ್ಪದ್ಮಸ್ಥನಾಗುವುದಾದರೆ ವಾಕ್ಯದ ಅನ್ವಯ ಹೇಗೆ ಉಪಪನ್ನವಾಗುತ್ತದೆ? ಎಂದರೆ, ವಿಷ್ಣುವಿನ ಪಕ್ಷದಲ್ಲಿ ವಾಕ್ಯದ ಯೋಜನಾ ಮಾಡುವಂತೆ, ಜೀವನ ಪಕ್ಷದಲ್ಲಿಯೂ ವಾಕ್ಯದ ಯೋಜನೆ ಮಾಡಬಹುದಾಗಿದೆ.

ಆದ್ದರಿಂದ ಹೃತ್ಪದ್ಮಸ್ಥತ್ವವು ಭಗವಂತನಿಗೆ ಏಕೆ ಹೇಳಬೇಕು? ಜೀವನಿಗೇನೇ ಹೇಳಬಹುದಲ್ಲವೇ? ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ इतरपरामर्शात्स इति चेन्नासम्भवात् ॐ (१.३.१८)**

**ಸೂತ್ರಾರ್ಥ :-** ಇತರಪರಾಮರ್ಶಾತ್ = "ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. 8-12-3) ಎಂದು ಪ್ರಕೃತನಾದ ಜೀವನನ್ನು "ಏಷ ಆತ್ಮಾ" (ಛಾಂ. 4-15-1) ಎಂದು ಏತಚ್ಛಬ್ದದಿಂದ ಹೃತ್ಪದ್ಮಸ್ಥ ಆತ್ಮತ್ವೇನ ಪರಾಮರ್ಶ ಮಾಡಿದ್ದರಿಂದ (ಗ್ರಹಣ ಮಾಡಿದ್ದರಿಂದ) ಸಃ ಇತಿ ಚೇತ್ ನ = ಜೀವನೇ ಹೃತ್ಪದ್ಮಸ್ಥನಾಗುತ್ತಾನೆ ಎಂದು ಆಕ್ಷೇಪ ಬಂದರೆ, ಅದು ಸರಿಯಲ್ಲ. ಅಸಂಭವಾತ್ = ಹೃತ್ಪದ್ಮಸ್ಥನಾದ ವ್ಯಕ್ತಿಯಲ್ಲಿ ಶ್ರುತವಾಗುತ್ತಿರುವ ಅಪಹತ-ಪಾಪ್ಮತ್ವಾದಿ ಗುಣಗಳು ಜೀವನಲ್ಲಿ ಸ್ವಾತಂತ್ರ್ಯೇಣ ಅಸಂಭಾವಿತವಾದ್ದರಿಂದ.

**ಸೂ.ರ.:– एवं च जीवस्य अपहतपाप्मत्वाद्यसम्भवेन विष्णुरेव हृत्पद्मस्थ इति सिद्धम् ।**

**ಅನು.:–** "ಯ ಆತ್ಮಾಽಪಹತಪಾಪ್ಮಾ" (ಛಾಂ. 8-7) ಎಂಬುದಾಗಿ ಹೃತ್ಪದ್ಮಸ್ಥನಾದ ವ್ಯಕ್ತಿಗೆ ಅಪಹತಪಾಪ್ಮತ್ವಾದಿ ಧರ್ಮಗಳು ಶ್ರುತವಾಗುತ್ತಿವೆ. ಈ ಅಪಹತಪಾಪ್ಮತ್ವಾದಿಗಳು ಜೀವನಲ್ಲಿ ಅಸಂಭಾವಿತವಾದ್ದರಿಂದ ಜೀವನು ಹೃತ್ಪದ್ಮಸ್ಥನಾಗಲು ಸಾಧ್ಯವಿಲ್ಲ.

ಅಪಹತಪಾಪ್ಮತ್ವಾದಿಗಳು "ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ" (ಬೃ.ಉ. 5-5) ಎಂದು ಶ್ರುತಿಯು ಹೇಳುವಂತೆ ವಿಷ್ಣುವಿನ ಅಸಾಧಾರಣಧರ್ಮಗಳಾಗಿರುವುದರಿಂದ ಹೃತ್ಪದ್ಮಸ್ಥನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 19

**ಆಕ್ಷೇಪ**

**ಸೂ.ರ.:– नन्वेष संप्रसाद इत्युक्तजीवस्य स तत्र पर्येतीत्यादिना**

**सत्यकामत्वप्रतीतेस्तत एव विशोकत्वादिसिद्धेरुक्तगुणासम्भवादिति जीव एव हृत्पद्मस्थ इति प्राप्ते समादधत्सूत्रं पठति ।**

**ಅನು.:–** "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ..." ಎಂದು ಸಂಪ್ರಸಾದ ಪದದಿಂದ ಪ್ರಕೃತನಾದ ಜೀವನಿಗೆ "ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ" (ಛಾಂ.ಉ.8-12-3) ಇತ್ಯಾದಿಯಾಗಿ ಮುಂದೆ ಸತ್ಯಕಾಮತ್ವವು ಪ್ರತೀತವಾಗುತ್ತಿರುವುದರಿಂದ, ಆದ್ದರಿಂದಲೇ (ಸತ್ಯಕಾಮತ್ವವು ಇರುವುದರಿಂದಲೇ) ವಿಶೋಕತ್ವಾದಿಗಳೂ ಸಿದ್ಧಿಸುವುದರಿಂದ, ಜೀವನಿಗೆ ಅಪಹತಪಾಪ್ಮತ್ವಾದಿ ಗುಣಗಳ ಅಸಂಭವ ಇಲ್ಲವಾದ್ದರಿಂದ ಜೀವನೇ ಹೃತ್ಪದ್ಮಸ್ಥನಾಗಬಹುದು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ उत्तराचेदाविर्भूतस्वरूपमस्तु ॐ (१.३.१९)

**ಸೂತ್ರಾರ್ಥ :-** (ತು ಶಬ್ದವು ಏವ ಎಂಬ ಅರ್ಥದಲ್ಲಿದೆ. ನ ಎನ್ನುವುದನ್ನು ಶೇಷ ಮಾಡಿಕೊಳ್ಳಬೇಕು.) ಉತ್ತರಾತ್ ಚೇತ್ = "ಸ ತತ್ರ ಪರ್ಯೇತಿ" (ಛಾಂ. 8-12-3) ಎಂಬ ಉತ್ತರವಾಕ್ಯದಿಂದಾಗಿ ಜೀವಸ್ಯ ಸತ್ಯಕಾಮತ್ವಾದಿಪ್ರತೀತೇಃ = ಜೀವನಿಗೆ ಸತ್ಯಕಾಮತ್ವಾದಿಗಳು ತೋರುವುದರಿಂದ ತತ ಏವ ವಿಶೋಕತ್ವಾದೇಃ ಸಂಭವಾತ್ = ಆದ್ದರಿಂದಲೇ ವಿಶೋಕತ್ವಾದಿಗಳು ಸಂಭಾವಿತವಾದ್ದರಿಂದ ಸ ಏವ ಹೃತ್ಪದ್ಮಸ್ಥ ಇತಿ ಚೇತ್ = ಜೀವನೇ ಹೃತ್ಪದ್ಮಸ್ಥನಾಗುತ್ತಾನೆ ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ.

ಕುತಃ = ಯಾಕೆ? ಯತಃ = ಯಾವ ಕಾರಣ ತದ್ವಾಕ್ಯೇ = ಆ ಸ ತತ್ರ ಪರ್ಯೇತಿ ಎಂಬ ವಾಕ್ಯದಲ್ಲಿ ಸ್ವೇನೇತ್ಯುತ್ತರವಾಕ್ಯಬಲಾತ್ = "ಸ್ವೇನ ರೂಪೇಣ ಅಭಿನಿಷ್ಪದ್ಯತೇ" ಎಂಬ ಉತ್ತರವಾಕ್ಯಬಲದಿಂದಾಗಿ ಆವಿರ್ಭೂತಸ್ವರೂಪಃ (ತು) ಏವ = ಸ್ವರೂಪಾವಿರ್ಭಾವವನ್ನು ಪಡೆದ ಮುಕ್ತನೇ ಪ್ರತಿಪಾದ್ಯಃ = ಪ್ರತಿಪಾದ್ಯನಾಗಿದ್ದಾನೆ. ನ ಜೀವಮಾತ್ರಂ = ಹೊರತು ಎಲ್ಲ ಜೀವರೂ ಪ್ರತಿಪಾದ್ಯರಾಗಿಲ್ಲ.

ಮುಕ್ತಶ್ಚ ನ ಸ್ವತೋಽಪಹತಪಾಪ್ಮತ್ವಾದಿಗುಣಕಃ = ಮುಕ್ತನಾದರೂ ಸ್ವತಃ ಸ್ವಾತಂತ್ರ್ಯೇಣ ಅಪಹತಪಾಪ್ಮತ್ವಾದಿಗುಣಗಳುಳ್ಳವನಾಗಿಲ್ಲ. ಅತೋ ನ ತಸ್ಯಾಪಿ ಹೃತ್ಪದ್ಮಸ್ಥತ್ವಮಿತ್ಯರ್ಥಃ = ಆದ್ದರಿಂದ ಆ ಮುಕ್ತನಾದ ಜೀವನೂ ಹೃತ್ಪದ್ಮಸ್ಥನಾಗುವುದಿಲ್ಲ.

**ಸೂ.ರ.:– एवं चोत्तरवाक्ये मुक्तजीवस्योच्यमानत्वेन हृत्पद्मस्थस्य देहान्तर्वर्तितया मुक्तत्वायोगात् ।**

ಅನು.:– ಜೀವನಿಗೆ ಸತ್ಯಕಾಮತ್ವಾದಿಗಳನ್ನು ತಿಳಿಸುವ "ಸ ತತ್ರ ಪರ್ಯೇತಿ" ಎಂಬ ಉತ್ತರವಾಕ್ಯದಲ್ಲಿ ಮುಕ್ತನಾದ ಜೀವನು ಪ್ರತಿಪಾದ್ಯನಾಗುತ್ತಿದ್ದಾನೆ. ಈ ಹೃತ್ಪದ್ಮಸ್ಥನಾದವನಾದರೂ ದೇಹದ ಒಳಗೆ ಇರುವವನಾದ್ದರಿಂದ, (ಮುಕ್ತಜೀವನು ದೇಹದ ಹೊರಗೆ ಇರುತ್ತಾನಾದ್ದರಿಂದ) ಈ ಹೃತ್ಪದ್ಮಸ್ಥಿತನಾದ ವ್ಯಕ್ತಿ ಮುಕ್ತಜೀವನಾಗಿರಲು ಸಾಧ್ಯವಿಲ್ಲ.

**ಸೂ.ರ.:– न चैतद्वाक्यस्य मुक्तविषयत्वेऽपि मुक्तस्यापि जीवत्वेऽपहतपाप्मत्वादिसम्भवाभावेन जीव एव तद्गुणको हृत्पद्मगततया भाविभाविनोच्यत इति वाच्यम् । मुक्तस्यापीश्वरप्रसादादेव तद्गुणाविर्भावेन स्वतोऽपहतपाप्मत्वाद्यसम्भवात् । हृत्पद्मस्थो विष्णुरेवेति सिद्धम् ॥**

ಅನು.:– ಸ ತತ್ರ ಪರ್ಯೇತಿ ಎಂಬ ಈ ಉತ್ತರವಾಕ್ಯವು ಮುಕ್ತವಿಷಯಕವಾಗಿದ್ದರೂ ಸಹ, ಆ ಮುಕ್ತನಾದವನೂ ಒಬ್ಬ ಜೀವನೇ ಆಗಿದ್ದರಿಂದ ಜೀವನಿಗೆ ಅಪಹತಪಾಪ್ಮತ್ವಾದಿಗಳು ಸಂಭವಿಸಬಹುದಾಗಿದೆ. ಹೀಗಾಗಿ ಈ ಜೀವನೇ ಮುಂದೆ ಮುಕ್ತನಾದ ಮೇಲೆ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾಗುತ್ತಾನಾದ್ದರಿಂದ, ಮುಂದೆ ಬರಲಿರುವ ಅಪಹತಪಾಪ್ಮತ್ವಾದಿಗುಣಗಳ ಅಭಿಪ್ರಾಯದಿಂದ ಈ ಸಂಸಾರಿಯಾದ ಜೀವನೇ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾಗಿ ಹೃತ್ಪದ್ಮಗತನಾಗಿ ಇಲ್ಲಿ ಈಗ ಪ್ರತಿಪಾದ್ಯನಾಗುತ್ತಿದ್ದಾನೆ ಎಂದು ಹೇಳಬಹುದಲ್ಲವೇ? ಎಂದು ಆಕ್ಷೇಪ ಬಂದರೆ, ಅದು ಸರಿಯಲ್ಲ.

ನಿಜ. ಇದು ಯಾವಾಗ? ಮುಕ್ತನಲ್ಲಿಯೂ ಸ್ವಾತಂತ್ರ್ಯೇಣ ಅಪಹತಪಾಪ್ಮತ್ವಾದಿ ಗುಣಗಳು ಇರುತ್ತಿದ್ದರೆ, ಆಗ ಈ ರೀತಿ ಶಂಕೆಗೆ ಅವಕಾಶವಿರುತ್ತಿತ್ತು. ಆದರೆ ಮುಕ್ತನಿಗೂ ಸ್ವಾತಂತ್ರ್ಯೇಣ ಅಪಹತಪಾಪ್ಮತ್ವಾದಿ ಗುಣಗಳು ಇಲ್ಲ. ಪರಮಾತ್ಮನ ಅನುಗ್ರಹದಿಂದಲೇ ಅವನಿಗೂ ಅಪಹತಪಾಪ್ಮತ್ವಾದಿ ಗುಣಗಳು ಬರಬೇಕು, ಸ್ವರೂಪಾವಿರ್ಭಾವ ಆಗಬೇಕು.

ಆದ್ದರಿಂದ ಮುಕ್ತನಾದ ಜೀವನಿಗೆ ಆಗಲೀ, ಸಂಸಾರಿಯಾದ ಜೀವನಿಗೆ ಆಗಲೀ ಸ್ವತಃ ಅಪಹತಪಾಪ್ಮತ್ವಾದಿ ಗುಣಗಳು ಇಲ್ಲವಾದ್ದರಿಂದ, ಪ್ರಕೃತದಲ್ಲಿ ಹೃತ್ಪದ್ಮಸ್ಥನಾದ ವ್ಯಕ್ತಿಯಲ್ಲಿ ಅಪಹತಪಾಪ್ಮತ್ವಾದಿಗಳು ಶ್ರುತವಾಗುತ್ತಿರುವುದರಿಂದ, ಹೃತ್ಪದ್ಮಸ್ಥನಾದವನು ವಿಷ್ಣುವೇ ಎಂದು ಸಿದ್ಧವಾಯಿತು.

### ಸೂತ್ರ – 20

### ಆಕ್ಷೇಪ

**ಸೂ.ರ.:– ननु 'एषः' इति (छां.८-३-४) जीवं परामृश्य 'आत्मा'**

**इति तस्य हृत्पद्मस्थात्मत्वाभिधानादमुख्यापहतपाप्मत्वादिगुणोऽपि जीव एतच्छब्दपरामर्शबलाद्धृत्पद्मस्थात्मा स्यादिति प्राप्ते सूत्रितम् ॥**

**ಅನು.:–** "ಏಷಃ" (ಛಾಂ. 8-3-4) ಎಂಬುದಾಗಿ ಜೀವನನ್ನು ಪರಾಮರ್ಶ ಮಾಡಿಕೊಂಡು "ಆತ್ಮಾ" ಎಂಬುದಾಗಿ ಅವನಿಗೆ ಹೃತ್ಪದ್ಮಸ್ಥ ಆತ್ಮತ್ವವನ್ನು ಹೇಳಿದ್ದರಿಂದಾಗಿ, ಪರಾಮರ್ಶಬಲದಿಂದ ಅಮುಖ್ಯವಾಗಿ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾದರೂ ಜೀವನೇ ಹೃತ್ಪದ್ಮಸ್ಥ ಆತ್ಮಾ ಆಗಲಿ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ -

**ॐ अन्यार्थश्च परामर्शः ॐ (१.३.२०)**

**ಸೂತ್ರಾರ್ಥ :-** (ಚ ಶಬ್ದವು ಏವ ಎಂಬ ಅರ್ಥದಲ್ಲಿದೆ.) ಪರಾಮರ್ಶಃ = "ಏಷ ಆತ್ಮಾ" ಎಂಬ ವಾಕ್ಯದಲ್ಲಿರುವ ಏತಚ್ಛಬ್ದವು ಅನ್ಯಾರ್ಥಃ = "ಪರಂಜ್ಯೋತಿಃ" ಎಂದು ಹೇಳಿದ ಪರಮಾತ್ಮನನ್ನು ತಿಳಿಸುತ್ತಿದೆ. ಹೊರತು ಜೀವನನ್ನು ತಿಳಿಸುತ್ತಿಲ್ಲ.

**ಸೂ.ರ.:– एवं चैष आत्मेति परमात्मानमेवैष इति परामृश्य तस्यात्मत्वोक्तेर्न जीवः किंतु विष्णुरेव हृत्पद्मस्थ इति सिद्धम् ।**

**ಅನು.:–** ಹೀಗೆ ಶಂಕೆಗೆ ಅವಕಾಶ ಇರುತ್ತಿತ್ತು. ಯಾವಾಗ? ಏಷ ಎಂಬ ಶಬ್ದದಿಂದ ಜೀವನನ್ನು ಪರಮಾರ್ಶ ಮಾಡಿಕೊಂಡು ಅವನಿಗೆ ಹೃತ್ಪದ್ಮಸ್ಥತ್ವವನ್ನು ವಿಧಾನ ಮಾಡುತ್ತಿದ್ದರೆ ಈ ರೀತಿ ಶಂಕಿಸಬಹುದಾಗಿತ್ತು. ಆದರೆ ಆ ರೀತಿ ಜೀವನನ್ನು ಪರಾಮರ್ಶಿಸಿ ಅವನಿಗೆ ಹೃತ್ಪದ್ಮಸ್ಥವನ್ನು ವಿಧಾನ ಮಾಡುತ್ತಿಲ್ಲ.

ಕಿಂತು ಯಂ ಪರಂಜ್ಯೋತಿರಾಖ್ಯಂ ಭಗವಂತಮಭಿಸಂಪದ್ಯ ಜೀವಃ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಏಷ ಆತ್ಮಾ (ಯಾವ ಪರಂಜ್ಯೋತಿ ಎಂಬ ಹೆಸರುಳ್ಳ ಪರಮಾತ್ಮ-ನನ್ನು ಹೊಂದಿ ಜೀವನು ಸ್ವರೂಪಾವಿರ್ಭಾವವನ್ನು ಮಾಡಿಕೊಳ್ಳುತ್ತಾನೋ (ಏಷಃ) ಅಂತಹ ಪರಮಾತ್ಮನು ಆತ್ಮಾ ಹೃತ್ಪದ್ಮಸ್ಥನಾಗಿದ್ದಾನೆ) ಎಂಬುದಾಗಿ ಏತಚ್ಛಬ್ದದಿಂದ ಪರಮಾತ್ಮನನ್ನು ಪರಾಮರ್ಶ ಮಾಡಿಕೊಂಡು ಅವನಿಗೆ ಹೃತ್ಪದ್ಮಸ್ಥ ಆತ್ಮತ್ವವನ್ನು ವಿಧಾನ ಮಾಡುತ್ತಿರುವುದರಿಂದ,

ಹೃತ್ಪದ್ಮಸ್ಥನಾದವನು ಜೀವ ಆಗುವುದಿಲ್ಲ ಕಿಂತು ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 21
## ಆಕ್ಷೇಪ

**ಸೂ.ರ.:– ननु यथा जीवेऽसम्भाव्यमानापहतपाप्मत्वादिगुणश्रवणान्न जीवस्तथा परमात्मन्यसम्भाव्यमानजीवलिङ्गस्याप्यल्पस्थानस्थितत्वस्य श्रवणात् । ततश्च हृत्पद्मस्थो जीव एवेति प्राप्ते सूत्रं पठति ।**

**ಅನು.:–** ಯಾವ ರೀತಿಯಾಗಿ "ಜೀವನಲ್ಲಿ ಅಸಂಭಾವ್ಯಮಾನವಾದ ಅಪಹತ-ಪಾಪ್ಮತ್ವಾದಿ ಗುಣಗಳು ಶ್ರುತವಾಗುತ್ತಿರುವುದರಿಂದ ಜೀವನು ಹೃತ್ಪದ್ಮಸ್ಥನಲ್ಲ" ಎಂದು ಹೇಳುತ್ತೀರೋ ಅದೇ ರೀತಿಯಾಗಿ "ಪರಮಾತ್ಮನಲ್ಲಿ ಅಸಂಭಾವ್ಯಮಾನವಾದ ಅಲ್ಪಸ್ಥಾನ-ಸ್ಥಿತತ್ವ ಎಂಬ ಜೀವಲಿಂಗವು ಶ್ರುತವಾಗುತ್ತಿರುವುದರಿಂದ ಪರಮಾತ್ಮನು ಹೃತ್ಪದ್ಮಸ್ಥನಲ್ಲ" ಎಂಬುದಾಗಿಯೂ ಹೇಳಲು ಬರುತ್ತದೆಯಾದ್ದರಿಂದ ಜೀವನೇ ಹೃತ್ಪದ್ಮಸ್ಥನಾಗಲಿ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನವನ್ನು ಹೇಳಲು ಸೂತ್ರವನ್ನು ಹೇಳುತ್ತಾರೆ –

### ॐ अल्पश्रुतेरिति चेत्तदुक्तम् ॐ (१.३.२१)

**ಸೂತ್ರಾರ್ಥ :-** ಅಲ್ಪಶ್ರುತೇಃ = "ದಹರ" (ಛಾಂ.8-1-1) ಎಂಬುದಾಗಿ ಅಲ್ಪಸ್ಥಾನ ಸ್ಥಿತತ್ವವನ್ನು ಹೇಳಿದ್ದರಿಂದಾಗಿ ಜೀವ ಏವ ಹೃತ್ಪದ್ಮಸ್ಥ ಇತಿ ಚೇತ್ = ಜೀವನೇ ಹೃತ್ಪದ್ಮಸ್ಥನಾಗಲಿ ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ ಕುತಃ = ಯಾಕೆ? ಯತಃ = ಯಾವ ಕಾರಣ ತದುಕ್ತಂ = ಆ ಅಲ್ಪಸ್ಥಾನಸ್ಥಿತತ್ವವು "ನಿಚಾಯ್ಯತ್ವಾದೇವಂ ವ್ಯೋಮವಚ್ಚ" ಎಂಬ ಹಿಂದಿನ ಸೂತ್ರದಲ್ಲಿ ಪರಮಾತ್ಮನು ವ್ಯಾಪ್ತನಾದರೂ ಸಹ ಉಪಾಸನೆಗಾಗಿ ಅಲ್ಪಸ್ಥಾನಸ್ಥಿತತ್ವವು ವಿಷ್ಣುವಿಗೆ ಹೇಳಲ್ಪಟ್ಟಿದೆ, ಮತ್ತು "ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್" (ಛಾಂ.ಉ. 3-14-3) ಎಂಬುದಾಗಿ ಶ್ರುತಿಯಲ್ಲಿಯೂ ಹೇಳಲ್ಪಟ್ಟಿದೆಯೋ ಅತಃ = ಆ ಕಾರಣ ಪರಮಾತ್ಮನೇ ಹೃತ್ಪದ್ಮಸ್ಥನಾಗಬಹುದು.

**ಸೂ.ರ.:– एवं च निचाय्यात्वादेवमित्यत्र सर्वगतस्यापि विष्णोर्व्योमवदल्प स्थानस्थितेरुक्तत्वात् । एष म (छां.३-१४-३) इत्यत्र सर्वगततया श्रुत्यक्तत्वाच्च हृत्पद्मस्थो विष्णुरेवेति सिद्धम् ।**

**ಅನು.:–** ಪರಮಾತ್ಮನು ಸರ್ವಗತನಾದರೂ ಸಹ ಆಕಾಶದಂತೆ ಅಲ್ಪಸ್ಥಾನಸ್ಥಿತತ್ವವನ್ನು ಹೇಳಬಹುದು ಎಂಬುದಾಗಿ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತತ್ವವನ್ನು ಉಪಾಸನೆಗಾಗಿ

ನಿಚಾಯ್ಯತ್ವಾದೇವಂ ವ್ಯೋಮವಚ್ಚ ಎಂಬ ಸೂತ್ರದಲ್ಲಿ ಉಪಪಾದನೆ ಮಾಡಿದ್ದಾರಾದ್ದರಿಂದ, ಮತ್ತು "ಏಷ ಮೇ ಆತ್ಮಾಽಂತರ್ಹೃದಯೇ ಜ್ಯಾಯಾನ್" ಎಂಬುದಾಗಿ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತತ್ವವನ್ನು ಶ್ರುತಿಯೂ ತಿಳಿಸುತ್ತಿರುವುದರಿಂದ ವ್ಯಾಪ್ತನಾದ ಪರಮಾತ್ಮನಿಗೆ ಅಲ್ಪಸ್ಥಾನಸ್ಥಿತತ್ವವನ್ನು ಹೇಳಿದರೆ ಯಾವ ಬಾಧಕವೂ ಇಲ್ಲ.

ಆದ್ದರಿಂದ "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಮ್ ..." (ಛಾಂ.ಉ. 8-1-1) ಎಂಬುದಾಗಿ ಶ್ರುತನಾಗುತ್ತಿರುವ ಸರ್ವಾಧಾರತಯಾ ಹೃತ್ಪದ್ಮಸ್ಥಿತನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ದಹರಾಧಿಕರಣವು ಮುಗಿಯಿತು.

ಅಧಿಕರಣ – 6

# ಅನುಕೃತ್ಯಾಧಿಕರಣ

## ಸಂಗತಿ

**ಸೂ.ರ.:– अत्रानुकूल्येन गृह्यमाणत्वं लिङ्गं ब्रह्मणि समन्वीयते ।**

**ಅನು.:–** ಭಗವಂತನಲ್ಲಿ ಹಾಗೂ ಜ್ಞಾನಿಸುಖದಲ್ಲಿ ಸಾಧಾರಣವಾದ ಆನುಕೂಲ್ಯೇನ [ಆನುಕೂಲ್ಯೇನ ಗೃಹ್ಯಮಾಣತ್ವಂ ನಾಮ ಕಥಂ ನು ತದ್ವಿಜಾನೀಯಾಮಿತಿ ಜ್ಞಾನಾರ್ಥಂ ಪ್ರಾರ್ಥಿತತ್ವಮ್। (ತತ್ವಪ್ರಕಾಶಿಕಾ – ಅನುಕೃತ್ಯಾಧಿಕರಣ)] ಗೃಹ್ಯಮಾಣತ್ವ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಆರನೆಯ ಈ ಅನುಕೃತ್ಯಾಧಿಕರಣದಲ್ಲಿ.

ಹಿಂದೆ ವಿಷ್ಣುವಿಗೆ ಅದೃಶ್ಯತ್ವಾದಿಗುಣಗಳನ್ನು ಹೇಳಿದೆ. ಅವುಗಳಲ್ಲಿ ಅದೃಶ್ಯತ್ವ-ಅಜ್ಞೇಯತ್ವ ಗುಣಗಳು

**तदेतदिति मन्यन्तेऽनिर्देश्यं परमं सुखम् ।**
**कथं नु तद्विजानीयां किमु भाति न भाति वा ॥**

ಎಂಬುದಾಗಿ ಆನೂಕೂಲ್ಯೇನ (ಕಥಂ ನು ತದ್ವಿಜಾನೀಯಾಮ್ ಎಂದು ಜ್ಞಾನಕ್ಕಾಗಿ

ಪ್ರಾರ್ಥಿತವಾದ) ಗೃಹ್ಯಮಾಣವಾದ ಒಂದು ವಸ್ತುವಿಗೆ ಶ್ರುತವಾಗುತ್ತಿದೆ. ಈ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ವಿಷ್ಣು ಅಲ್ಲ ಎಂದಾದರೆ ಅದೃಶ್ಯತ್ವ-ಅಜ್ಞೇಯತ್ವಗಳೂ ಬೇರೆಯವರಿಗೆ ಹೇಳಬೇಕಾಗುತ್ತದೆ. ಆದ್ದರಿಂದ ಇಲ್ಲಿ ಶ್ರುತವಾಗುತ್ತಿರುವ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ವಿಷ್ಣುವೇ ಎಂದು ಸಮರ್ಥಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** **ननु ज्ञानिसुखस्यैवानुकूल्येन गृह्यमाणत्वं भवेत् । परमं सुखमिति (कठ.५-१३,१४) सुखश्रुतेः । तेषां सुखमिति ज्ञानिसुखस्यैव प्रकृतत्वात् । तस्यैव तच्छब्देन परामर्शस्य युक्तत्वात् ।**

**ಅನು.:–** ಇಲ್ಲಿ ಶ್ರುತವಾಗುತ್ತಿರುವ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ಜ್ಞಾನಿಸುಖವೇ ಆಗುತ್ತದೆ. ಏಕೆಂದರೆ – "ಪರಮಂ ಸುಖಂ" ಎಂಬುದಾಗಿ ಸುಖವೇ ಶ್ರುತವಾಗುತ್ತಿರುವುದರಿಂದ. (ಸುಖವನ್ನು ತಿಳಿಸುವ ಶ್ರುತಿ ಇರುವುದರಿಂದ.)

ಈ ಸುಖಶ್ರುತಿಯು ವಿಷ್ಣುವಿನಲ್ಲಿಯೂ (ಸಮನ್ವಯ ಮಾಡಲು ಸಂಭಾವಿತವಾದ್ದರಿಂದ) ಸಾವಕಾಶವಾದ್ದರಿಂದ ಸುಖಪದದಿಂದ ವಿಷ್ಣುವನ್ನೇ ಗ್ರಹಣ ಮಾಡಬಹುದಲ್ಲ? ಎಂದರೆ, ಅದು ಸರಿಯಲ್ಲ.

**एको वशी सर्वभूतान्तरात्मा एकं रूपं बहुधा यः करोति ।**
**तमात्मस्थं येऽनुपश्यन्ति धीराः तेषां सुखं शाश्वतं नेतरेषाम् ॥**

ಎಂಬುದಾಗಿ ಹಿಂದೆ ಜ್ಞಾನಿಸುಖವೇ ಪ್ರಕೃತವಾಗಿದೆ. ಅಂತಹ ಪ್ರಕೃತವಾದ ಜ್ಞಾನಿಸುಖವನ್ನೇ "ತದೇತದಿತಿ ಮನ್ಯಂತೇ" ಎಂದು ಏತಚ್ಛಬ್ದದಿಂದ ಪರಾಮರ್ಶ ಮಾಡಿಕೊಳ್ಳುವುದು ಸಮಂಜಸವಾಗುತ್ತದೆ.

**ಸೂ.ರ.:–** **न च वाच्यं भगवतोऽपि प्रकृतत्वात्तत्परामर्शोऽयमिति । तस्य नपुंसकशब्देनाप्रकृतस्य तदित्यादिपरामर्शायोगात् । सम्भवत्समीपपरामर्शं विहाय दूरस्थपरामर्शग्रहणे कारणाभावादिति प्राप्ते सूत्रितम् ।**

**ಅನು.**:- ಜ್ಞಾನಿಸುಖವು ಹೇಗೆ ಪ್ರಕೃತವಾಗಿದೆಯೋ ಅದರಂತೆ ಅದರ ಹಿಂದೆ ಭಗವಂತನೂ ಪ್ರಕೃತನಾಗಿರುವುದರಿಂದ, ಅಂತಹ ಪ್ರಕೃತನಾದ ಭಗವಂತನನ್ನು ಏತಚ್ಛಬ್ದದಿಂದ ಪರಾಮರ್ಶ ಮಾಡಬಹುದಲ್ಲ? ಎಂದು ಶಂಕಿಸುವುದು ಸರಿಯಲ್ಲ.

ಏಕೆಂದರೆ - ಭಗವಂತ ಪ್ರಕೃತನಾಗಿದ್ದರೂ ಸಹ ನಪುಂಸಕಶಬ್ದದಿಂದ ಪ್ರಕೃತನಾಗಿಲ್ಲ. ಹಾಗೆ ನಪುಂಸಕಶಬ್ದದಿಂದ ಪ್ರಕೃತನಾಗದ ಭಗವಂತನನ್ನು ತತ್ ಏತತ್ ಎಂಬುದಾಗಿ ನಪುಂಸಕಶಬ್ದದಿಂದ ಪರಾಮರ್ಶ ಮಾಡಲು ಬರುವುದಿಲ್ಲ.

ಮತ್ತು ಸಮೀಪದಲ್ಲಿಯೇ ಪ್ರಕೃತವಾದ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದನ್ನು ಬಿಟ್ಟು ದೂರದಲ್ಲಿ ಪ್ರಕೃತನಾದ ಭಗವಂತನನ್ನು ಪರಾಮರ್ಶ ಮಾಡಿ ಗ್ರಹಣ ಮಾಡುವುದಕ್ಕೆ ವಿಶೇಷಕಾರಣವೂ ಇಲ್ಲ.

ಆದ್ದರಿಂದ ಜ್ಞಾನಿಸುಖವೇ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತುವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ अनुकृतेस्तस्य च ॐ (१.३.२२)

**ಸೂತ್ರಾರ್ಥ** :- (ಚಶಬ್ದವು ಸಮುಚ್ಚಯಾರ್ಥದಲ್ಲಿದೆ. ತಸ್ಯ ಎನ್ನುವುದು ಶ್ರುತಿಯ ಪ್ರತೀಕಗ್ರಹಣವಾಗಿದೆ. ಅನುಕೃತಿ ಎಂದರೆ ಅನುಕ್ರಿಯಾ.)

"ಕಥಂ ನು ತದ್ವಿಜಾನೀಯಾಮ್" (ಕಠ 5-14) ಎಂಬುದಾಗಿ ಜ್ಞಾನಾರ್ಥಂ ಪ್ರಾರ್ಥಿತವಾದ, ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ಬ್ರಹ್ಮನೇ ಆಗುತ್ತಾನೆ. ಕುತಃ = ಯಾಕೆ? ಅನುಕೃತೇಃ="ತಮೇವ ಭಾಂತಮನುಭಾತಿ ಸರ್ವಂ" (ಕಠ 2-5-15) ಎಂಬುದಾಗಿ ವಾಕ್ಯಶೇಷದಲ್ಲಿ ಸೂರ್ಯಾದಿಗಳಿಗೆ ಭಗವತ್ಕ್ರಿಯಾನುಸಾರಿಪ್ರಕಾಶ-ರೂಪಕ್ರಿಯಾಕರ್ತೃತ್ವವು ಶ್ರುತವಾಗುತ್ತಿರುವುದರಿಂದ, "ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಕಠ. 2-5-15) ಎಂಬುದಾಗಿ ಜಗತ್ತಿಗೆ ಪರಮಾತ್ಮಪ್ರಭಾಪ್ರಕಾಶತ್ವಶ್ರುತಿ ಇರುವುದರಿಂದ.

## ಸಿದ್ಧಾಂತ

ಸೂ.ರ.:- एवं च तमेव भान्तमिति सूर्यादितेजसां विष्णवधीनत्व-श्रवणात् । तस्य भासेति सर्वजगत्प्रकाशकत्वोक्तेश्च ।

**ಅನು.:–** "ತಮೇವ ಭಾಂತಮನುಭಾತಿ ಸರ್ವಮ್" (ಕಠ 2-5-15) ಎಂಬುದಾಗಿ ಸೂರ್ಯಾದಿಗಳ ತೇಜಸ್ಸು ವಿಷ್ಣುವಿನ ಅಧೀನವಾಗಿದೆ ಎಂದು ಶ್ರುತವಾಗುತ್ತಿರುವುದರಿಂದ ಮತ್ತು "ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಕಠ 2-5-15) ಎಂಬುದಾಗಿ ಸರ್ವಜಗತ್ಪ್ರಕಾಶಕತ್ವವನ್ನು ಹೇಳಿದ್ದರಿಂದಲೂ ಸಹ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ವಿಷ್ಣುವೇ ಎಂದು ತಿಳಿಯುತ್ತದೆ.

**ಸೂ.ರ.:– अहं तत्तेज इति (चतुर्वेदशिखायां.) श्रुत्या यदादित्यगतमिति (भ.गी.१५-१२) स्मृत्या च तल्लिङ्गद्वयस्य विष्णुलिङ्गत्वावगतेः ।**

**ಅನು.:–** "ಅಹಂ ತತ್ತೇಜೋ ರಶ್ಮೀತ್" (ಚತುರ್ವೇದಶಿಖಾ) ಎಂಬ ಶ್ರುತಿಯಿಂದ ಹಾಗೂ "ಯದಾದಿತ್ಯಗತಂ ತೇಜಃ" (ಭ.ಗೀ. 15-12) ಎಂಬ ಸ್ಮೃತಿಯಿಂದಲೂ ಸಹ ಈ ಎರಡೂ ಲಿಂಗಗಳು (ಸೂರ್ಯಾದಿತೇಜಸಾಂ ವಿಷ್ಣ್ವಧೀನತ್ವ - ಸರ್ವಜಗತ್ಪ್ರಕಾಶಕತ್ವಗಳು) ವಿಷ್ಣುವಿನ ಲಿಂಗಗಳಾಗಿವೆ ಎಂದು ತಿಳಿಯಬರುತ್ತಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ಬ್ರಹ್ಮನೇ ಆಗುತ್ತಾನೆ ಹೊರತು ಜ್ಞಾನಿಸುಖ ಆಗುವುದಿಲ್ಲ.

**ಸೂ.ರ.:– न च सुखश्रुतिविरोधः । परमं सुखमिति (कठ.५-१३,१४) सुखश्रुतेरपि तत्परत्वात् । चेतनश्चेतनानामिति परमात्मनोऽपि प्रकृतत्वात् । यदनिर्देश्यं परमं सुखं कथं नु तद्विजानीयामित्यानुकूल्येन गृह्णन्ति । तदनिर्देश्यं सुखमेतत्प्रकृतपरमात्मनो रूपमिति मन्यंत इति वाक्ययोजनया परमात्मनः परामर्शोपपत्तेः । सूर्यादिप्रकाशनियामकत्वादीनां लिङ्गानामन्यत्रानवकाशेन दूरस्थपरामर्शस्यैव न्याय्यत्वात् । ततश्चानुकूल्येन गृह्यमाणो विष्णुरेवेति सिद्धम् ॥**

**ಅನು.:–** ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ಬ್ರಹ್ಮನೇ ಎಂದು ಹೇಳಿದರೆ "ಪರಮಂ ಸುಖಂ" ಎಂಬುದಾಗಿ ಸುಖಕ್ಕೆ ಆನುಕೂಲ್ಯೇನ ಗೃಹ್ಯಮಾಣತ್ವವನ್ನು ತಿಳಿಸುವ ಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಶ್ರುತಿಯ ವಿರೋಧ ಬರುವುದಿಲ್ಲ. ಏಕೆಂದರೆ - ಪರಮಂ ಸುಖಂ ಎಂಬ ಸುಖಶ್ರುತಿಯೂ ಸಹ ಭಗವಂತನನ್ನೇ ಪ್ರತಿಪಾದಿಸುತ್ತಿದೆ.

ಪರಮಂ ಸುಖಂ ಎಂಬ ಶ್ರುತಿ ಭಗವಂತನನ್ನು ತಿಳಿಸಲು ಹೇಗೆ ಸಾಧ್ಯ? ಭಗವಂತ ಹಿಂದೆ ಪ್ರಕೃತನೇ ಆಗಿಲ್ಲವಲ್ಲ? ಎಂದರೆ, ಅದು ಸರಿಯಲ್ಲ, ಚೇತನಶ್ಚೇತನಾನಾಮ್ ಎಂಬುದಾಗಿ ಭಗವಂತ ಹಿಂದೆ ಪ್ರಕೃತನಾಗಿದ್ದಾನೆ.

ನಪುಂಸಕಶಬ್ದದಿಂದ ಪ್ರಕೃತನಾಗದ ಭಗವಂತನನ್ನು ಸುಖಶಬ್ದದಿಂದ ಹೇಗೆ ಪರಾಮರ್ಶ ಮಾಡಲು ಸಾಧ್ಯ? ಎಂದರೆ, "ಯತ್ ಅನಿರ್ದೇಶ್ಯಂ ಪರಮಂ ಸುಖಂ ಕಥಂ ನು ತದ್ವಿಜಾನೀಯಾಮಿತಿ ಆನುಕೂಲ್ಯೇನ ಗೃಹ್ಣಂತಿ, ತತ್ ಅನಿರ್ದೇಶ್ಯಂ ಸುಖಂ ಏತತ್ಪ್ರಕೃತಪರಮಾತ್ಮನೋ ರೂಪಮಿತಿ ಮನ್ಯಂತೇ" ಎಂಬುದಾಗಿ ವಾಕ್ಯಯೋಜನೆಯನ್ನು ಮಾಡಲು ಬರುತ್ತದೆಯಾದ್ದರಿಂದ ಭಗವಂತನನ್ನು ಪರಾಮರ್ಶ ಮಾಡಲು ಬಂದೇ ಬರುತ್ತದೆ.

ಹಾಗಾದರೆ ಸಮೀಪಸ್ಥವಾದ ಸುಖವನ್ನೇ ಪರಾಮರ್ಶ ಮಾಡಲು ಬರುವಾಗ ದೂರಸ್ಥನಾದ ಭಗವಂತನನ್ನು ಪರಾಮರ್ಶ ಮಾಡುವುದು ಉಚಿತವಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆ ಬರುತ್ತದೆ ಎಂದರೆ, ಅದಕ್ಕೂ ಉತ್ತರ ತಿಳಿಯಬಹುದಾಗಿದೆ. ಸಮೀಪಸ್ಥ ಎಂಬ ಕಾರಣಕ್ಕೆ ಸುಖವನ್ನು ಪರಾಮರ್ಶ ಮಾಡಿಕೊಳ್ಳುವುದಾದರೆ ಸೂರ್ಯಾದಿಪ್ರಕಾಶ-ನಿಯಾಮಕತ್ವ ಮೊದಲಾದ ಲಿಂಗಗಳನ್ನು ಸುಖಕ್ಕೆ ಹೇಳಬೇಕಾಗುತ್ತದೆ. ಆದರೆ ಸೂರ್ಯಾದಿಪ್ರಕಾಶನಿಯಾಮಕತ್ವ ಮೊದಲಾದ ಲಿಂಗಗಳು ವಿಷ್ಣು ಬಿಟ್ಟು ಉಳಿದವರಿಗೆ ಕೂಡುವುದಿಲ್ಲವಾದ್ದರಿಂದ (ಇತರತ್ರ ಆ ಲಿಂಗಗಳಿಗೆ ಅವಕಾಶ ಇಲ್ಲವಾದ್ದರಿಂದ) ವಿಷ್ಣುವಿನ ಅಸಾಧಾರಣಲಿಂಗಬಲದಿಂದಾಗಿ ದೂರಸ್ಥನಾದ ಭಗವಂತನನ್ನು ಪರಾಮರ್ಶ ಮಾಡಿಕೊಳ್ಳುವುದೇ ಯುಕ್ತವಾಗಿದೆ.

ಆದ್ದರಿಂದ ತಮೇವ ಭಾಂತಂ ಅನುಭಾತಿ ಸರ್ವಂ ಎಂಬುದಾಗಿ ಸೂರ್ಯಾದಿಗಳ ತೇಜಸ್ಸಿಗೆ ವಿಷ್ಣ್ವಧೀನತ್ವವು ಶ್ರುತವಾಗುತ್ತಿರುವುದರಿಂದ, ಮತ್ತು ತಸ್ಯ ಭಾಸಾ ಸರ್ವಮಿದಂ ವಿಭಾತಿ ಎಂಬುದಾಗಿ ಸರ್ವಜಗತ್ಪ್ರಕಾಶಕತ್ವವೂ ಶ್ರುತವಾಗುತ್ತಿರುವುದರಿಂದ, ಈ ಎರಡು ಲಿಂಗಗಳೂ ವಿಷ್ಣುವಿನ ಅಸಾಧಾರಣಲಿಂಗಗಳೇ ಆಗಿದ್ದರಿಂದ

**ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।**
**ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥**

ಎಂಬುದಾಗಿ ಶ್ರುತವಾಗುತ್ತಿರುವ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ಬ್ರಹ್ಮನೇ (ವಿಷ್ಣುವೇ) ಎಂದು ಸಿದ್ಧವಾಗುತ್ತದೆ.

ಸೂತ್ರ – 23

ಸಂಗತಿ

ಸೂ.ರ.:– यदेता लिङ्गद्वयस्य विष्णुनिष्ठत्वमहमिति (चतुर्वेद-शिखायां.) श्रुत्योपपादितं तत्स्मृत्याऽप्युपपादयत्सूत्रमुपन्यस्यति ।

ಅನು.:– ಸೂರ್ಯಾದಿತೇಜಸ್ಸಿಗೆ ವಿಷ್ಣ್ವಧೀನತ್ವ – ಸರ್ವಜಗತ್ಪ್ರಕಾಶಕತ್ವ ಎಂಬ ಎರಡು ಲಿಂಗಗಳೂ ವಿಷ್ಣುನಿಷ್ಠವಾದವುಗಳು ಎಂಬುದಾಗಿ "ಅಹಂ ತತ್ತೇಜೋ ರಶ್ಮೀತ್" ಎಂಬ ಶ್ರುತಿಯಿಂದ ಏನು ಉಪಪಾದನೆ ಮಾಡಿದೆ ಅದನ್ನು ಸ್ಮೃತಿಯಿಂದಲೂ ಉಪಪಾದನೆ ಮಾಡುವ ಸೂತ್ರವನ್ನು ಹೇಳುತ್ತಾರೆ :

ॐ अपि स्मर्यते ॐ (१.३.२३)

ಸೂತ್ರಾರ್ಥ :- ಹೇತುಭೂತವಾದ ಅನುಕೃತ್ವಾದಿಗಳು ವಿಷ್ಣುಧರ್ಮವಾಗಿವೆ ಎಂಬುದಾಗಿ ಕೇವಲ ಶ್ರುತಿಯಲ್ಲಿ ಶ್ರುತವಾಗುತ್ತಿಲ್ಲ. ಕಿಂತು ಸ್ಮರ್ಯತೇ ಅಪಿ = ಕೃಷ್ಣಾದಿಗಳಿಂದ "ಯದಾದಿತ್ಯಗತಂ ತೇಜಃ" (ಭ.ಗೀ. 15-12) ಇತ್ಯಾದಿ ಸ್ಮೃತ್ಯಾದಿ-ಗಳಲ್ಲಿಯೂ ಹೇಳಲ್ಪಡುತ್ತಿದೆ.

ಸೂ.ರ.:– एवं च यदादित्यगतमित्यादिस्मृत्युक्तत्वेनापि विष्णुधर्मत्वश्रवणादानुकूल्येन गृह्यमाणं ब्रह्मैवेति सिद्धम् ।

ಅನುವಾದ :–

यदादित्यगतं तेजो जगद्भासयतेऽखिलम् ।
यच्चन्द्रमसि यच्चाग्नौ तत्तेजो विद्धि मामकम् ॥

(भ.गी. १५-१२)

न तद्भासयते सूर्यो न शशाङ्को न पावकः ।
यद्गत्वा न निवर्तन्ते तद्धाम परमं मम ॥ (भ.गी. १५-६)

ಇತ್ಯಾದಿ ಸ್ಮೃತಿಗಳಲ್ಲಿಯೂ ಸಹ ಸೂರ್ಯಾದಿತೇಜಸ್ಸಿಗೆ ವಿಷ್ಣ್ವಧೀನತ್ವಸರ್ವ-ಜಗತ್ಪ್ರಕಾಶಕತ್ವ ಲಿಂಗಗಳು ವಿಷ್ಣುನಿಷ್ಠವಾದವುಗಳು ಎಂದು ಹೇಳಿರುವುದರಿಂದ, ಇಂತಹ

ವಿಷ್ಣುವಿನ ಅಸಾಧಾರಣಲಿಂಗಗಳಾದ ಸೂರ್ಯಾದಿತೇಜಸ್ಸಿಗೆ ವಿಷ್ಣ್ವಧೀನತ್ವ - ಸರ್ವಜಗತ್ಪ್ರಕಾಶಕತ್ವಗಳು ಅನುಕೂಲ್ಯೇನ ಗೃಹ್ಯಮಾಣವಾದ ವಸ್ತುವಿಗೆ ಶ್ರುತವಾಗುತ್ತಿರು-ವುದರಿಂದ

**ತದೇತದಿತಿ ಮನ್ಯಂತೇऽನಿರ್ದೇಶ್ಯಂ ಪರಮಂ ಸುಖಮ್ ।**
**ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥**

ಎಂದು ಶ್ರುತವಾಗುತ್ತಿರುವ ಆನುಕೂಲ್ಯೇನ ಗೃಹ್ಯಮಾಣವಾದ ವಸ್ತು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಅಂತೆಯೇ ಅದೃಶ್ಯತ್ವಾದಿಗುಣಗಳೂ ವಿಷ್ಣುವಿಗೇ ಎಂದೂ ಸಿದ್ಧವಾಗುತ್ತದೆ.

**ಅನುಕೃತ್ಯಾಧಿಕರಣವು ಮುಗಿಯಿತು.**

*ಅಧಿಕರಣ - 7*

# ವಾಮನಾಧಿಕರಣ

## ಸಂಗತಿ

**ಸೂ.ರ.:- अत्र ईशाननामसमन्वयः क्रियते ।**

**ಅನು.:-** ಭಗವಂತ ಹಾಗೂ ವಾಯುದೇವರಲ್ಲಿ ಸಾಧಾರಣವಾದ ''ಈಶಾನ'' ನಾಮವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ಏಳನೆಯ ಈ ವಾಮನಾಧಿ-ಕರಣದಲ್ಲಿ

ಅಥಾತೋ ಬ್ರಹ್ಮಜಿಜ್ಞಾಸಾ ಎಂಬುದಾಗಿ ಹಿಂದೆ ವಿಷ್ಣುವಿಗೆ ಜಿಜ್ಞಾಸ್ಯತ್ವವನ್ನು ಹೇಳಿದೆ. ಆ ಜಿಜ್ಞಾಸ್ಯತ್ವವು - ''ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ... '' ''ಊರ್ಧ್ವಂ ಪ್ರಾಣಮ್'' ಎಂಬುದಾಗಿ ಕಾಠಕದಲ್ಲಿ ಈಶಾನನಿಗೆ ಶ್ರುತವಾಗುತ್ತಿದೆ. ಈ ಈಶಾನನು ವಿಷ್ಣು ಅಲ್ಲ ಎಂದಾದರೆ ಜಿಜ್ಞಾಸ್ಯತ್ವವೂ ಬೇರೆಯವರಿಗೆ ಹೇಳಬೇಕಾಗುತ್ತದೆ. ಆದ್ದರಿಂದ ಈ ಈಶಾನನು ಯಾರು? ಎಂದು ಚರ್ಚಿಸಿ ವಿಷ್ಣುವೇ ಈಶಾನ ಎಂದು ನಿರ್ಣಯ ಮಾಡುತ್ತಾರೆ ಈ ವಾಮನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वीशानो वायुरेव भवेत् । एवमेवैष (प्रश्न.३-४) इत्यत्र प्राणव्यवस्थापकत्वं योऽयं मध्यमेति (बृ.३-५-२१) मध्यमत्वं कुविदंग इति (ऋ.७-९१-१) सर्वदेवोपास्यत्वमेवमादिवायुधर्माणां श्रवणात् ।**

**ಅನು.:–** ಈಶಾನೋ ಭೂತಭವ್ಯಸ್ಯ ಎಂಬುದಾಗಿ ಶ್ರುತನಾಗುತ್ತಿರುವ ವ್ಯಕ್ತಿ ವಾಯುದೇವರೇ ಆಗುತ್ತಾರೆ. ಏಕೆಂದರೆ - ''ಊರ್ಧ್ವಂ ಪ್ರಾಣಂ ಉನ್ನಯತಿ'' ಎಂಬ ವಾಕ್ಯದಲ್ಲಿ ಈಶಾನನಿಗೆ ಪ್ರಾಣವ್ಯವಸ್ಥಾಪಕತ್ವ - ಮಧ್ಯಮತ್ವ - ಸರ್ವದೇವೋಪಾಸ್ಯತ್ವ ಲಿಂಗಗಳು (ಧರ್ಮಗಳು) ಶ್ರುತವಾಗುತ್ತಿವೆ.

ಈ ಲಿಂಗಗಳು ಶ್ರುತವಾಗುತ್ತಿದ್ದರೂ ವಾಯುವೇ ಈಶಾನ ಏಕೆ ಆಗಬೇಕು? ವಿಷ್ಣು ಏಕೆ ಆಗಬಾರದು? ಎಂದು ಶಂಕೆ ಬಂದರೆ, ಅದು ಸರಿಯಲ್ಲ, ಏಕೆಂದರೆ

''ಯಥಾ ಸಮ್ರಾಡೇವಾಧಿಕೃತಾನ್ವಿನಿಯುಂಕ್ತ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಇತಿ ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸಂನಿಧತ್ತೇ'' (ಪ್ರ.ಉ. 3–4) ಎಂಬುದಾಗಿ ಪ್ರಾಣವ್ಯವಸ್ಥಾಪಕತ್ವವು ವಾಯುವಿನ ಧರ್ಮವಾಗಿ ಶ್ರುತವಾಗುತ್ತಿದೆ.

''ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ'' (ಬೃ.ಉ. 3–5–21) ಎಂಬುದಾಗಿ ಮಧ್ಯಮತ್ವವು ವಾಯುವಿನ ಧರ್ಮವಾಗಿ ಶ್ರುತವಾಗುತ್ತಿದೆ.

''ಕುವಿದಂಗ'' (ಋ.ಸಂ. 7–91–1) ಎಂಬುದಾಗಿ ಸರ್ವದೇವೋಪಾಸ್ಯತ್ವವು ವಾಯುವಿನ ಧರ್ಮವಾಗಿ ಶ್ರುತವಾಗುತ್ತಿದೆ.

ಹೀಗೆ ವಾಯುಮಾತ್ರನಿಷ್ಠವಾದ ಪ್ರಾಣವ್ಯವಸ್ಥಾಪಕತ್ವ-ಮಧ್ಯಮತ್ವ-ಸರ್ವದೇವೋಪಾಸ್ಯತ್ವ ಲಿಂಗಗಳು ಈಶಾನನಿಗೆ ಶ್ರುತವಾಗುತ್ತಿರುವುದರಿಂದ ಈಶಾನನು ವಾಯುದೇವರೇ ಆಗುತ್ತಾರೆ. ವಾಯುದೇವರಿಗೇ ಜಿಜ್ಞಾಸ್ಯತ್ವವೂ ಅಂಗೀಕಾರ್ಯವಾಗಿದೆ.

**ಸೂ.ರ.:– न चेदमनिष्टम् । वायोरपि जिज्ञास्यताऽभ्युपगमात् । विष्णुजिज्ञास्यत्वस्याबाधात् । ततश्चेशानपदोक्तगुणस्य वायुनिष्ठत्वान्न विष्णोः सर्वगुणपूर्णत्वमिति प्राप्ते सूत्रितम् ॥**

**ಅನು.**:– ಹೌದು, ಇದು ನಮಗೇನೂ ಅನಿಷ್ಟವಾಗುವುದಿಲ್ಲ, ಏಕೆಂದರೆ– ವಿಷ್ಣುವಿನಂತೆ ವಾಯುದೇವರಿಗೂ ಜಿಜ್ಞಾಸ್ಯತ್ವವನ್ನು ಒಪ್ಪಿದ್ದರಿಂದ, ವಿಷ್ಣುವಿನ ಜಿಜ್ಞಾಸ್ಯತ್ವಕ್ಕೆ ಬಾಧ ಬರುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ವಾಯುದೇವರಿಗೆ ಸರ್ವದೇವೋಪಾಸ್ಯತ್ವವನ್ನು ಹೇಳಿದರೆ ಅವರಿಗೆ ಮೋಕ್ಷದಾತೃತ್ವವು ಅಂಗೀಕೃತವಾಗುತ್ತದೆ. ಉಳಿದ ಎಲ್ಲ ಐಶ್ವರ್ಯಗಳನ್ನೂ ಪಡೆದಿರುವ ದೇವತೆಗಳಿಗೆ ಮೋಕ್ಷ ಬಿಟ್ಟು ಬೇರೆ ಪ್ರಯೋಜನ ಯಾವುದೂ ಇಲ್ಲ. ಹಾಗಾಗಿ ಮೋಕ್ಷರೂಪ ಪ್ರಯೋಜನ-ಕ್ಕಾಗಿಯೇ ವಾಯುದೇವರನ್ನು ದೇವತೆಗಳು ಉಪಾಸನೆ ಮಾಡಬೇಕು. ವಾಯುದೇವರನ್ನು ಉಪಾಸನೆ ಮಾಡುವುದರಿಂದ ವಾಯುದೇವರೇ ಮೋಕ್ಷವನ್ನು ಕೊಡುತ್ತಾರೆ ಎಂದಮೇಲೆ ವಿಷ್ಣುವಿನ ಉಪಾಸನೆ ಏಕೆ ಮಾಡಬೇಕು? ಎಂದು ಆಗುವುದರಿಂದ "ಮೋಕ್ಷಕ್ಕಾಗಿ ವಿಷ್ಣುವೇ ಜಿಜ್ಞಾಸ್ಯನಾಗಿದ್ದಾನೆ" ಎನ್ನುವುದು ಅನುಪಪನ್ನವಾಗಬೇಕಾಗುತ್ತದೆ. ಆದ್ದರಿಂದ ನಿಮಗೇನೂ ಅನಿಷ್ಟವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ಅಂದಮೇಲೆ ಈಶಾನನಿಗೆ ಶ್ರುತವಾಗುತ್ತಿರುವ ಪ್ರಾಣವ್ಯವಸ್ಥಾಪಕತ್ವಾದಿ ಲಿಂಗಗಳು ವಾಯುಮಾತ್ರನಿಷ್ಠವಾದ ಲಿಂಗಗಳಾದ್ದರಿಂದ ಈಶಾನೋ ಭೂತಭವ್ಯಸ್ಯ .... ಎಂದು ಶ್ರುತನಾಗುತ್ತಿರುವ ಈಶಾನನು ವಾಯುದೇವರೇ ಆಗುತ್ತಾರೆ, ಅವರೇ ಜಿಜ್ಞಾಸ್ಯರಾಗುತ್ತಾರೆ (ಗುಣಪೂರ್ಣರಾಗುತ್ತಾರೆ) ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ शब्दादेव प्रमितः ॐ (१.३.२४)**

**ಸೂತ್ರಾರ್ಥ** :- ಪ್ರಮಿತಃ="ಈಶಾನೋ ಭೂತಭವ್ಯಸ್ಯ" (ಕಠ 4-12) ಎಂಬುದಾಗಿ ಈಶಾನಶಬ್ದವಾಚ್ಯತ್ವೇನ ಪ್ರಮಿತನಾದವನು (ತತ್ವತಃ ನಿಶ್ಚಿತನಾದವನು) ವಿಷ್ಣುವೇ ಆಗುತ್ತಾನೆ ನ ತು ವಾಯುಃ = ಹೊರತು ವಾಯುದೇವರು ಆಗುವುದಿಲ್ಲ. ಕುತಃ = ಯಾಕೆ? ಶಬ್ದಾದೇವ ="ಮಧ್ಯೇ ವಾಮನಮ್" (ಕಠ .5-3) ಎಂಬುದಾಗಿ ನಿರವಕಾಶವಾದ ವಾಮನಶ್ರುತಿ (ಶಬ್ದ) ಇರುವುದರಿಂದಲೇ.

## ಸಿದ್ಧಾಂತ

**ಸೂ.ರ.**:– एवं च वामनश्रुतिसद्भावात् । तस्याश्च महायोगरूढि-सिद्धायास्तत्प्रमापकत्वात् ।

**ಅನು.:**– "ಮಧ್ಯೇ ವಾಮನಮ್" (ಕಠ. 5-3) ಎಂಬುದಾಗಿ ವಾಮನಶ್ರುತಿ ಇರುವುದರಿಂದ, ಆ ವಾಮನಶಬ್ದವಾದರೂ ಮಹಾಯೋಗರೂಢಿಸಿದ್ಧವಾಗಿದ್ದರಿಂದ ವಿಷ್ಣುಪ್ರಮಾಪಕವಾಗಿದೆ. ಆದ್ದರಿಂದ ವಾಮನಶ್ರುತಿಬಲದಿಂದಾಗಿ ಈಶಾನನಾದವನು ವಿಷ್ಣುವೇ ಆಗುತ್ತಾನೆ

**ಸೂ.ರ.:– लिङ्गापेक्षया श्रुतेः प्राबल्यात् ।**

**ಅನು.:**– ವಿಷ್ಣುವಿನ ವಿಷಯದಲ್ಲಿ ವಾಮನಶ್ರುತಿ ಇರುವಂತೆ, ವಾಯುದೇವರ ವಿಷಯದಲ್ಲಿ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳೂ ಇವೆ. ಹಾಗಾಗಿ ವಿಷ್ಣುವೇ ಎಂದು ಹೇಗೆ ನಿಶ್ಚಯ ಮಾಡುತ್ತೀರಿ? ಎಂದರೆ, ಅದು ಸರಿಯಲ್ಲ. ವಾಯುದೇವರ ವಿಷಯದಲ್ಲಿ ಲಿಂಗಗಳು ಇದ್ದರೂ ಸಹ ಆ ಲಿಂಗಗಳಿಗಿಂತಲೂ ಶ್ರುತಿಯೇ ಪ್ರಬಲವಾದ್ದರಿಂದ, ಪ್ರಬಲಶ್ರುತಿಗೆ ಅನುಸಾರವಾಗಿ ವಿಷ್ಣುವೇ ಈಶಾನ ಎಂದು ನಿಶ್ಚಯ ಮಾಡಬಹುದಾಗಿದೆ.

**ಸೂ.ರ.:– तेषामपि लिङ्गानां तद्वै त्वं प्राण (तै.आ.३-१४-४) इत्यत्र वैष्णवत्त्वस्य सिद्धत्वात् । विष्णुरेवेशान इति सिद्धम् ॥**

**ಅನು.:**– ಮತ್ತು, ಅಷ್ಟೇ ಅಲ್ಲದೇ ಆ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳೂ ಸಹ "ತದ್ವೈ ತ್ವಂ ಪ್ರಾಣೋ ಅಭವಃ" (ತೈ.ಆ. 3-14-4) ಎಂದು ಶ್ರುತಿಯು ಹೇಳುವಂತೆ ವಿಷ್ಣುವಿಗೆ ಸಂಬಂಧಿಸಿದ ಲಿಂಗಗಳೇ ಆಗಿವೆ.

ಆದ್ದರಿಂದ "ಈಶಾನೋ ಭೂತಭವ್ಯಸ್ಯ ... " ಎಂದು ಶ್ರುತನಾಗುತ್ತಿರುವ ಈಶಾನನು ವಿಷ್ಣುವೇ ಆಗುತ್ತಾನೆ. ಅವನೇ ಜಿಜ್ಞಾಸ್ಯನಾಗುತ್ತಾನೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 25

### ಆಕ್ಷೇಪ

**ಸೂ.ರ.:– ननु माभूत्प्राणव्यवस्थापकत्वादिलिङ्गेनेशानस्य वायुत्वसिद्धिः । अङ्गुष्ठमात्रत्वलिङ्गेन तु सिध्येदेव । तस्य विष्णावसम्भवात् । यद्यपि विष्णौ परिमितत्वं सम्भवति । तथाऽप्यङ्गुष्ठमात्र इति (महा ना.१६-३) विशिष्योक्तिबललभ्यपरिमाणान्तरव्यवच्छेदस्यासम्भव एवेति प्राप्ते समादधत्सूत्रमाह ॥**

**ಅನು.**:– "ಪ್ರಾಣವ್ಯವಸ್ಥಾಪಕತ್ವಾದಿಲಿಂಗಗಳಿಂದಾಗಿ ವಾಯುದೇವರೇ ಈಶಾನರು" ಎಂದು ಸಿದ್ಧಿಸುವುದು ಬೇಡ. ಕಿಂತು "ಅಂಗುಷ್ಠಮಾತ್ರಃ" ಎಂದು ಹೇಳಿದ ಅಂಗುಷ್ಠ-ಮಾತ್ರತ್ವಲಿಂಗದಿಂದ ವಾಯುದೇವರೇ ಈಶಾನರು ಎಂದು ಸಿದ್ಧಿಸಿಯೇ ಸಿದ್ಧಿಸುತ್ತಿದೆ.

"ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ। ಈಶಾನೋ ಭೂತಭವ್ಯಸ್ಯ ...." ಎಂಬುದಾಗಿ ಈಶಾನನಿಗೆ ಅಂಗುಷ್ಠಮಾತ್ರತ್ವವನ್ನು ಹೇಳುತ್ತಿದ್ದಾರೆ. (ಅಂಗುಷ್ಠಮಾತ್ರ-ಪರಿಮಾಣ ಉಳ್ಳವನು ಎಂದು ಹೇಳುತ್ತಿದ್ದಾರೆ.) ಈ ಅಂಗುಷ್ಠಮಾತ್ರತ್ವವು ವ್ಯಾಪ್ತನಾದ ವಿಷ್ಣುವಿಗೆ ಕೂಡುವುದಿಲ್ಲ. ಆದ್ದರಿಂದ ಅಂಗುಷ್ಠಮಾತ್ರತ್ವಲಿಂಗದಿಂದಾಗಿ ವಾಯುದೇವರೇ ಈಶಾನರಾಗಬೇಕು.

ಯದ್ಯಪಿ ವಿಷ್ಣುವಿಗೂ ಪರಿಮಿತತ್ವವು (ಉಂಟು) ಕೂಡುತ್ತದೆ. ಆದರೂ ಸಹ "ಅಂಗುಷ್ಠಮಾತ್ರ:" (ಮಹಾ.ನಾ. 16-3) ಎಂಬುದಾಗಿ ಪ್ರತ್ಯೇಕವಾಗಿ ಹೇಳಿದ್ದರ ಬಲದಿಂದ ಲಭ್ಯವಾಗುವ ಪರಿಮಾಣಾಂತರವ್ಯವಚ್ಛೇದವು ವಿಷ್ಣುವಿಗೆ ಅಸಂಭಾವಿತವೇ ಆಗಿದೆ. ಆದ್ದರಿಂದ ಅಂಗುಷ್ಠಮಾತ್ರತ್ವ ಲಿಂಗದಿಂದಾಗಿ ವಾಯುದೇವರೇ ಈಶಾನ-ರಾಗಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ–

## ॐ हृद्यपेक्षया तु मनुष्याधिकारत्वात् ॐ (१.३.२५)

**ಸೂತ್ರಾರ್ಥ** :- (ತುಶಬ್ದವು ಏವ ಎಂಬ ಅರ್ಥದಲ್ಲಿದೆ. ಅಪಿ ಎಂಬ ಅರ್ಥದಲ್ಲಿಯೂ ಸಹ ಇದೆ.) ಸರ್ವಗತಸ್ಯಾಪಿ ವಿಷ್ಣೋಃ ಅಂಗುಷ್ಠಮಾತ್ರತ್ವೋಕ್ತಿಃ = ವಿಷ್ಣು ಸರ್ವಗತನಾದರೂ ಸಹ ಅವನಿಗೆ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಹೃದ್ಯಪೇಕ್ಷಯಾ ತು (ಏವ) = ಅಂಗುಷ್ಠಪರಿಮಿತವಾದ ಹೃದಯಾಕಾಶದ ಅಪೇಕ್ಷೆಯಿಂದಲೇನೇ ಹೇಳಿದ್ದು. ಅಂದಮಾತ್ರಕ್ಕೆ ವಿಷ್ಣುವಿಗೆ ಪರಿಚ್ಛಿನ್ನತ್ವವನ್ನು ತಿಳಿಯಬಾರದು.

ಹಾಗಾದರೆ - ಪಶ್ವಾದಿಗಳಿಗೆ ಅಂಗುಷ್ಠವೇ ಇರುವುದಿಲ್ಲವಾದ್ದರಿಂದ ಅಂಗುಷ್ಠ-ಮಾತ್ರತ್ವವನ್ನು ಹೇಳಿದ್ದು ಸರ್ವಾಧಿಕಾರಿಕ ಹೇಗೆ ಆಗುತ್ತದೆ? ಎಂದು ಶಂಕೆ ಬಂದರೆ, ಅದಕ್ಕಾಗಿ ಹೇಳಿದರು : ಮನುಷ್ಯಾಧಿಕಾರತ್ವಾತ್ = ಈ ವೇದವಿದ್ಯೋಪಾಸನೆಯು ಮನುಷ್ಯಾಧಿಕಾರಿಕವಾಗಿದ್ದರಿಂದ ಅವರನ್ನು(ಮನುಷ್ಯರನ್ನು) ಕುರಿತು ಈ ವೇದವಿದ್ಯೆಯು ಪ್ರವೃತ್ತವಾಗಬಹುದಾಗಿದೆ. ಆದ್ದರಿಂದ ಪಶ್ವಾದಿಗಳಿಗೆ ಅಂಗುಷ್ಠ ಇಲ್ಲದಿದ್ದರೂ ಸಹ ಯಾವ ದೋಷವಿಲ್ಲ.

**ಸೂ.ರ.:–** **एवं च हृद्यवकाशेऽभिव्यक्तस्य परमात्मनोऽङ्गुष्ठमितत्वेन तथोपासनायैव श्रुतावङ्गुष्ठमात्रत्वस्योक्तत्वेन परिमाणान्तरव्यवच्छेदाभिप्रायकल्पनायोगात् । यद्यपीतरप्राणिनामङ्गुष्ठाभावस्तथाऽपि मनुष्याणामेव वेदविद्याधिकारात्तान् प्रत्यङ्गुष्ठमात्रत्वोक्तेर्युक्तत्वात् । तस्मादीशानो विष्णुरेवेति ईशानपदोक्तं गुणवत्वं जिज्ञास्यत्वं च तस्यैवेति सिद्धम् ॥**

**ಅನು.:–** ಹೃದಯಾಕಾಶದಲ್ಲಿ ಅಭಿವ್ಯಕ್ತನಾಗುವ ಪರಮಾತ್ಮನು ಅಂಗುಷ್ಠ-ಪರಿಮಿತನಾದ್ದರಿಂದ, ಆ ಅಂಗುಷ್ಠಪರಿಮಿತನಾದ ಪರಮಾತ್ಮನನ್ನು ಹಾಗೆ ಉಪಾಸನೆ ಮಾಡುವುದಕ್ಕಾಗಿಯೇ ಶ್ರುತಿಯಲ್ಲಿ "ಅಂಗುಷ್ಠಮಾತ್ರಃ ಪುರುಷಃ" ಎಂದು ಅಂಗುಷ್ಠ-ಮಾತ್ರತ್ವವನ್ನು ಹೇಳಿದ್ದರಿಂದ, ಪರಿಮಾಣಾಂತರವ್ಯವಚ್ಛೇದಾಭಿಪ್ರಾಯವನ್ನು ಕಲ್ಪಿಸುವುದು ಸಮಂಜಸವಾಗುವುದಿಲ್ಲ.

ಯದ್ಯಪಿ ಇತರ ಪ್ರಾಣಿಗಳಿಗೆ ಅಂಗುಷ್ಠವು ಇರುವುದಿಲ್ಲ. ಆದರೂ ಮನುಷ್ಯರಿಗೆ ಮಾತ್ರ ಈ ವೇದವಿದ್ಯಾಧಿಕಾರ ಇರುವುದರಿಂದ, ಅಂತಹ ಮನುಷ್ಯರನ್ನು ಕುರಿತು ಅಂಗುಷ್ಠಮಾತ್ರತ್ವವನ್ನು ಹೇಳಿದ ಮಾತು ಯುಕ್ತವೇ ಆಗುತ್ತದೆ.

ಆದ್ದರಿಂದ ಹೃದಯಾಕಾಶವು ಅಂಗುಷ್ಠಪರಿಮಿತವಾಗಿರುವುದರಿಂದ ಆ ವಿವಕ್ಷೆಯಿಂದ ಅಲ್ಲಿ ಅಭಿವ್ಯಕ್ತನಾಗುವ ಪರಮಾತ್ಮನಿಗೆ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಯುಕ್ತವೇ ಆಗುವುದರಿಂದ (ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಬಾಧಕ ಆಗುವುದಿಲ್ಲವಾದ್ದರಿಂದ), ಮತ್ತು "ಮಧ್ಯೇ ವಾಮನಮ್" (ಕಠ 5-3) ಎಂಬುದಾಗಿ ವಾಮನಶ್ರುತಿಯೂ ಇರುವುದರಿಂದ, ಹಾಗೂ ಹಿಂದೆ ಹೇಳಿದ ಪ್ರಕಾರ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳೂ ವಿಷ್ಣುಸಂಬಂಧಿಯಾದ ಲಿಂಗಗಳೇ ಆದ್ದರಿಂದಲೂ ಸಹ

ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ।

ಈಶಾನೋ ಭೂತಭವ್ಯಸ್ಯ .....

ಎಂಬುದಾಗಿ ಶ್ರುತನಾಗುತ್ತಿರುವ ಈಶಾನನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೀಗಾಗಿ ಆ ವಿಷ್ಣುವಿಗೇ ಜಿಜ್ಞಾಸ್ಯತ್ವವೂ ಉಪಪನ್ನವಾಗುತ್ತದೆ ಎಂದು ಸಿದ್ಧವಾಯಿತು.

ವಾಮನಾಧಿಕರಣವು ಮುಗಿಯಿತು.

ಅಧಿಕರಣ – 8

# ದೇವತಾಧಿಕರಣ

## ಸಂಗತಿ

**ಸೂ.ರ.:– अत्र देवानां ब्रह्मविद्याधिकारः समर्थ्यते ।**

**ಅನು.:–** ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವು ಇದೆ ಎಂಬುದಾಗಿ ಸಮರ್ಥನೆ ಮಾಡುತ್ತಾರೆ ಎಂಟನೇ ಈ ದೇವತಾಧಿಕರಣದಲ್ಲಿ.

''ಮನುಷ್ಯಾಧಿಕಾರತ್ವಾತ್'' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯಾಧಿಕಾರ ಇದೆ ಎಂದು ಹೇಳಿದೆ. ಹಾಗೊಂದುವೇಳೆ ವೇದವಿದ್ಯಾಧಿಕಾರವು ದೇವತೆಗಳಿಗೆ ಇಲ್ಲ ಎಂದಾದರೆ ಆಗ ''ವಿಶ್ವೇದೇವಾ ಉಪಾಸತೇ'' ಇತ್ಯಾದಿಶ್ರುತಿಗಳಿಗೆ ಅಪ್ರಾಮಾಣ್ಯ ಬರಬೇಕಾಗುತ್ತದೆ. (ವಿಷ್ಣುವಿಗೆ ಸರ್ವದೇವೋಪಾಸ್ಯತ್ವವು ಅನುಪಪನ್ನ-ವಾಗಬೇಕಾಗುತ್ತದೆ) ಆದ್ದರಿಂದ ದೇವತೆಗಳಿಗೂ ವೇದವಿದ್ಯಾಧಿಕಾರ ಇದೆ ಎಂದು ಸಮರ್ಥನೆ ಮಾಡುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न देवानां वेदविद्याधिकारः सम्भवति । तेषामनादिनित्यपदत्वे वा विद्यादिना प्राप्तपदत्वे वाऽधिकारासम्भवात् ।**

**ಅನು.:–** ದೇವತೆಗಳಿಗೆ ವೇದವಿದ್ಯಾಧಿಕಾರ ಸಂಭವಿಸುವುದಿಲ್ಲ. ದೇವತೆಗಳು ಅನಾದಿನಿತ್ಯಪದ (ಸ್ಥಾನ) ಉಳ್ಳವರು ಎಂದು ಅಂಗೀಕರಿಸಿದರೆ ಅಥವಾ ವಿದ್ಯಾದಿಗಳಿಂದ ಪಡೆದ ಪದ ಉಳ್ಳವರು ಎಂದು ಅಂಗೀಕರಿಸಿದರೂ ಸಹ ಅವರಿಗೆ ವೇದವಿದ್ಯಾಧಿಕಾರವು ಸಂಭವಿಸುವುದಿಲ್ಲ.

**ಸೂ.ರ.:– देवानां प्राप्तपदत्वेनावाप्तमोक्षेतरसकलपुरुषार्थानां सर्वज्ञत्वे मोक्षप्राप्तिं जानतां क्वापि कामनाऽसम्भवात् ।**

**ಅನು.:–** ದೇವತೆಗಳು ಅನಾದಿನಿತ್ಯವಾದ ಪದ (ದೇವತಾಸ್ಥಾನ) ಉಳ್ಳವರು ಎಂದು ಅಂಗೀಕರಿಸಿದರೆ, ಈಗಾಗಲೇ ತಮ್ಮ ದೇವತಾಪದವಿಯನ್ನು ಹೊಂದುಬಿಟ್ಟಿದ್ದರಿಂದ, ಪಡೆದ

ಮೋಕ್ಷವನ್ನು ಬಿಟ್ಟು ಉಳಿದ ಎಲ್ಲ ಪುರುಷಾರ್ಥಗಳ ಬಗ್ಗೆ ಎಂದಿಗೂ ಕಾಮನೆ ಬರಲು ಸಾಧ್ಯವಿಲ್ಲ.

**ಸೂ.ರ.:– देवानामुत्पत्तिविनाशित्वे ततः पूर्वं देवताऽभावेन देवत्वप्राप्त्यर्थं देवैरनुष्ठीयमानशतकृत्वादिकर्मणां व्यङ्ग्यत्वेन देवादिपदा-प्रापकत्वात् । न हि व्यङ्गं कर्म फलजनकम् । बाह्यकृतयज्ञादेरपि फलजनकत्वप्रसंगात् ।**

**ಅನು.:–** ಇನ್ನು ದೇವತೆಗಳು ಉತ್ಪತ್ತಿ-ವಿನಾಶ ಉಳ್ಳವರು ಎಂದು ಅಂಗೀಕರಿಸಿದರೆ (ದೇವತೆಗಳು ಅನಾದಿಕಾಲದಿಂದಲೂ ದೇವತಾಪದವಿಯನ್ನು ಹೊಂದಿಲ್ಲ, ಕಿಂತು ವಿದ್ಯಾದಿಗಳಿಂದ ದೇವತಾಪದವಿಯನ್ನು ಒಂದೊಮ್ಮೆ ಪಡೆದವರು ಎಂದು ಅಂಗೀಕರಿಸಿದರೆ), ವಿದ್ಯಾದಿಗಳನ್ನು ಆಚರಿಸುವುದಕ್ಕಿಂತ ಮೊದಲು ಅವರಿಗೆ ದೇವತ್ವ ಇಲ್ಲ ಎಂದಾಗುವುದರಿಂದ ದೇವತ್ವವನ್ನು ಪಡೆಯುವುದಕ್ಕಾಗಿ ಅವರು ಮಾಡುವ ಶತಕೃತ್ವಾದಿ ಕರ್ಮಗಳು ವ್ಯಂಗ್ಯವಾಗುತ್ತವೆ. ಹೀಗಾಗಿ ಆ ಕರ್ಮಗಳು ದೇವಾದಿ ಪದಪ್ರಾಪಕ-ವಾಗುವುದಿಲ್ಲ (ದೇವಾದಿಪದಗಳನ್ನು ತಂದುಕೊಡುವುದಿಲ್ಲ).

ವ್ಯಂಗ್ಯವಾದ ಕರ್ಮ ಎಂದಿಗೂ ಫಲಜನಕವಾಗುವುದಿಲ್ಲ, ಹಾಗೊಂದುವೇಳೆ ವ್ಯಂಗ್ಯವಾದ ಕರ್ಮಗಳೂ ಫಲಜನಕವಾಗುವುದಾದರೆ, ವೇದಬಾಹ್ಯರು (ಬೌದ್ಧಾದಿಗಳು) ಮಾಡುವ ಯಜ್ಞಾದಿಗಳೂ ಫಲಜನಕವಾಗಬೇಕಾಗುತ್ತದೆ.

ಆದ್ದರಿಂದ ದೇವತೆಗಳು ಉತ್ಪತ್ತಿ-ವಿನಾಶ ಉಳ್ಳವರು ಎಂದು ಅಂಗೀಕರಿಸಲೂ ಬರುವುದಿಲ್ಲ.

**ಸೂ.ರ.:– तथा चासतो वन्ध्यापुत्रस्याधिकारादर्शनाद्देवानां नाधिकार इति प्राप्ते सूत्रितम् ॥**

**ಅನು.:–** ಹಾಗಾದರೆ ದೇವತೆಗಳು ಅನಾದಿನಿತ್ಯ ಪದ ಉಳ್ಳವರು ಎಂದು ಹೇಳಲೂ ಬರುವುದಿಲ್ಲ, ಮತ್ತು ಉತ್ಪತ್ತಿ-ವಿನಾಶ ಉಳ್ಳವರು ಎಂದು ಹೇಳಲೂ ಬರುವುದಿಲ್ಲ ಎಂದಾದರೆ, ವಂಧ್ಯಾಸುತನಂತೆ ದೇವತೆಗಳು ಅಸತ್ ಎಂದಾಗುತ್ತಾರೆ. ವಂಧ್ಯಾಸುತನು ಅಸತ್ ಆದ್ದರಿಂದ ಅವನಿಗೆ ಯಾವುದೇ ಅಧಿಕಾರ ಹೇಗೆ ಇಲ್ಲವೋ ಅದರಂತೆ ಪ್ರಕೃತ ದೇವತೆಗಳೂ ಅಸತ್ ಆದ್ದರಿಂದ ಅವರಿಗೂ ವೇದವಿದ್ಯಾಧಿಕಾರ ಇಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ तदुपर्यपि बादरायणः सम्भवात् ॐ (१.३.२६)

**ಸೂತ್ರಾರ್ಥ** :- ದೇವತ್ವಯೋಗ್ಯಮನುಷ್ಯರಿಗೆ ಕೇವಲ ಮನುಷ್ಯತ್ವದಶೆಯಲ್ಲಿ ಅಷ್ಟೇ ವೇದವಿದ್ಯಾಧಿಕಾರ ಇದೆ ಎಂದು ಅಲ್ಲ. ಕಿಂತು ತದುಪರ್ಯಪಿ = ದೇವಾದಿಪದವಿಯನ್ನು ಹೊಂದಿದ ಅನಂತರದಲ್ಲಿಯೂ ಸಹ ವೇದವಿದ್ಯಾಧಿಕಾರ ಇದ್ದೇ ಇದೆ. ಕುತಃ = ಯಾಕೆ? ಸಂಭವಾತ್ = ಅವರಿಗೂ ಸಹ ಅಧಿಕಾರಪ್ರಯೋಜಕವಾದ ವಿಶಿಷ್ಟಬುದ್ಧಿಯು ಸಂಭಾವಿತ-ವಾದ್ದರಿಂದ ಇತಿ = ಎಂಬುದಾಗಿ ಬಾದರಾಯಣಃ = ವೇದವ್ಯಾಸರು ಹೇಳುತ್ತಾರೆ.

### ಸಿದ್ಧಾಂತ

**ಸೂ.ರ.:–** एवं च न देवानां तिर्यगादीनामिव वेदविद्याधिकारोऽसम्भावितः । सम्भावकस्य विशिष्टबुद्ध्यादेर्भावात् ।

**ಅನು.:–** ತಿರ್ಯಗಾದಿಯೋನಿಗಳಲ್ಲಿದ್ದವರಿಗೆ ವೇದವಿದ್ಯಾಧಿಕಾರವು ಹೇಗೆ ಅಸಂಭಾವಿತವೋ ಅದರಂತೆ ದೇವತೆಗಳಿಗೆ ವೇದವಿದ್ಯಾಧಿಕಾರವು ಅಸಂಭಾವಿತವೇನಲ್ಲ. ಯಾಕೆ? ಸಂಭಾವಕವಾದ (ಅಧಿಕಾರಪ್ರಯೋಜಕವಾದ) ವಿಶಿಷ್ಟಬುದ್ಧ್ಯಾದಿಗಳು ದೇವತೆಗಳಲ್ಲಿ ಇರುವುದರಿಂದ.

**ಸೂ.ರ.:–** सत्यां च सम्भावनायामयं प्रयोग उपजायते । देवा वेदविद्याधिकारवन्तः । तदुपर्यपि देवत्वप्राप्त्युपर्यपि देवाधिकारोपयोगिनोः सामर्थ्यविद्वत्वयोरर्थित्वस्य मोक्षगतातिशययोग्यत्वादेव संभवात् ।

**ಅನು.:–** ದೇವತೆಗಳಿಗೆ ವೇದವಿದ್ಯಾಧಿಕಾರ ಸಂಭವ ಇದೆ ಎಂದಾಗ, ಈ ರೀತಿ ಅನುಮಾನ- ಪ್ರಯೋಗ ಮಾಡಬಹುದಾಗಿದೆ.

ದೇವಾಃ, ವೇದವಿದ್ಯಾಧಿಕಾರವಂತಃ, ತದುಪರ್ಯಪಿ ದೇವತ್ವಪ್ರಾಪ್ತ್ಯುಪರ್ಯಪಿ ದೇವಾಧಿಕಾರೋಪಯೋಗಿನೋಃ ಸಾಮರ್ಥ್ಯವಿದ್ವತ್ವಯೋಃ ಅರ್ಥಿತ್ವಸ್ಯ ಮೋಕ್ಷಗತಾತಿ-ಶಯಯೋಗ್ಯತ್ವಾದೇವ ಸಂಭವಾತ್ ।

ದೇವತೆಗಳು, ವೇದವಿದ್ಯಾಧಿಕಾರ ಉಳ್ಳವರಾಗಿದ್ದಾರೆ. ಯಾಕೆ? ದೇವತ್ವವನ್ನು ಹೊಂದಿದ ನಂತರವೂ ಸಹ ದೇವಾಧಿಕಾರಕ್ಕೆ ಉಪಯೋಗಿಯಾದ ಸಾಮರ್ಥ್ಯ-ವಿದ್ವತ್ವಗಳ ಅರ್ಥಿತ್ವವು ಮೋಕ್ಷಗತ ಆನಂದಾತಿಶಯಯೋಗ್ಯವಾದ ಕಾರಣ ದೇವತೆಗಳಲ್ಲಿ ಸಂಭಾವಿತವಾದ್ದರಿಂದ.

**ಸೂ.ರ.:– न च देवा न विद्याधिकारिणोऽमनुष्यत्वात्तिर्यगादिवदिति मानम् । विशिष्टबुद्ध्यादिराहित्यस्योपाधित्वात् ।**

**ಅನು.:–** ದೇವಾಃ ವೇದವಿದ್ಯಾಧಿಕಾರವಂತಃ .... ಸಂಭವಾತ್ ಎಂಬ ನಿಮ್ಮ ಅನುಮಾನ ಸರಿಯಾದದ್ದಲ್ಲ. ಏಕೆಂದರೆ–

ದೇವಾಃ, ನ ವಿದ್ಯಾಧಿಕಾರಿಣಃ, ಮನುಷ್ಯತ್ವಾತ್ ತಿರ್ಯಗಾದಿವತ್ ಎಂಬ ಪ್ರತಿಪಕ್ಷಾನುಮಾನದ ವಿರೋಧ ಬರುತ್ತದೆಯಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ದೇವಾಃ ನ ವಿದ್ಯಾಧಿಕಾರಿಣಃ ಎಂಬ ಪ್ರತಿಪಕ್ಷಾನುಮಾನವೇ ಸರಿಯಾದದ್ದಲ್ಲ, ಕಾರಣ ವಿಶಿಷ್ಟಬುದ್ಧ್ಯಾದಿರಾಹಿತ್ಯ ಎಂಬ ಉಪಾಧಿ ಬರುತ್ತದೆ. ಹೇಗೆಂದರೆ – ಉಪಾಧಿಯಾಗಬೇಕಾದರೆ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗಬೇಕು. ಯತ್ರ ಯತ್ರ ವಿದ್ಯಾಧಿಕಾರಾಭಾವಃ ತತ್ರ ತತ್ರ ವಿಶಿಷ್ಟಬುದ್ಧ್ಯಾದಿರಾಹಿತ್ಯಂ ಎಂಬ ವ್ಯಾಪ್ತಿ ದೃಷ್ಟಾಂತವಾದ ತಿರ್ಯಗಾದಿಗಳಲ್ಲಿ ಕಂಡಿದೆ. ತಿರ್ಯಗಾದಿಗಳಲ್ಲಿ ವಿದ್ಯಾಧಿಕಾರವೂ ಇಲ್ಲ ಮತ್ತು ವಿಶಿಷ್ಟಬುದ್ಧ್ಯಾದಿಗಳೂ ಇಲ್ಲ, ಆದ್ದರಿಂದ ಅಲ್ಲಿ ಸಾಧ್ಯವ್ಯಾಪಕತ್ವ ಇದೆ. ಇನ್ನು ಪಕ್ಷವಾದ ದೇವತೆಗಳಲ್ಲಿ ಮನುಷ್ಯತ್ವ ಇದ್ದರೂ ವಿಶಿಷ್ಟಬುದ್ಧ್ಯಾದಿರಾಹಿತ್ಯ ಇಲ್ಲ (ವಿಶಿಷ್ಟಬುದ್ಧ್ಯಾದಿಗಳೇ ಇವೆ). ಆದ್ದರಿಂದ ಸಾಧನಾವ್ಯಾಪಕವೂ ಆಯಿತು. ಆದ್ದರಿಂದ ಪ್ರತಿಪಕ್ಷಾನುಮಾನಕ್ಕೆ ವಿಶಿಷ್ಟಬುದ್ಧ್ಯಾದಿರಾಹಿತ್ಯ ಎಂಬ ಉಪಾಧಿ ಬರುತ್ತದೆ. ಹೀಗೆ ಸೋಪಾಧಿಕವಾದ್ದರಿಂದ ಪ್ರತಿಪಕ್ಷಾನುಮಾನವೇ ಸರಿಯಾದದ್ದಲ್ಲ.

**ಸೂ.ರ.:– न च जरितार्यादिष्वनधिकारेऽपि विशिष्टबुद्ध्यादेः सत्वेन विशिष्टबुद्ध्यादिराहित्याभावेन साध्याव्यापकत्वान्नायमुपाधिरिति । तेषामधिकारित्वेनानधिकाररूपसाध्यस्य तत्राभावात् । अयमग्ने जरितेति (ऋ. १०-१४२-१) श्रुतेः ।**

**ಅನು.:–** ಹೌದು, ಸಾಧ್ಯವ್ಯಾಪಕತಾಭಂಗ ಬರುತ್ತದೆಯಲ್ಲವೇ? ಏಕೆಂದರೆ - ಜರಿತಾರ್ಯಾದಿಗಳಲ್ಲಿ ವೇದವಿದ್ಯಾಧಿಕಾರಾಭಾವ ಎಂಬ ಸಾಧ್ಯವು ಇದ್ದರೂ ಸಹ ವಿಶಿಷ್ಟಬುದ್ಧ್ಯಾದಿಗಳೇ ಇರುವ ಕಾರಣ ವಿಶಿಷ್ಟಬುದ್ಧ್ಯಾದಿರಾಹಿತ್ಯ ಎಂಬ ಉಪಾಧಿ ಇಲ್ಲವಾದ್ದರಿಂದ ಸಾಧ್ಯವ್ಯಾಪಕತಾಭಂಗ ಬರುತ್ತದೆಯಲ್ಲವೇ? ಎಂದು ಶಂಕೆ ಬಂದರೆ, ಅದು ಸರಿಯಲ್ಲ.

"ಅಯಮಗ್ನೇ ಜರಿತಾ" (ಋ. 10-142-1) ಎಂಬುದಾಗಿ ಶ್ರುತಿ ಇರುವುದರಿಂದ ಜರಿತಾರ್ಯಾದಿಗಳಿಗೂ ವೇದವಿದ್ಯಾಧಿಕಾರ ಇದೆ ಎಂದು ತಿಳಿದುಬರುತ್ತದೆ. ಹೀಗಾಗಿ ಜರಿತಾರ್ಯಾದಿಗಳು ವೇದವಿದ್ಯಾಧಿಕಾರಿಗಳೇ ಆಗಿದ್ದರಿಂದ, ವಿಶಿಷ್ಟಬುದ್ಧ್ಯಾದಿರಾಹಿತ್ಯ ಎಂಬ ಉಪಾಧಿ ಹೇಗೆ ಇಲ್ಲವೋ ಅದರಂತೆ ವಿದ್ಯಾಧಿಕಾರಾಭಾವ ಎಂಬ ಸಾಧ್ಯವೂ ಇಲ್ಲವಾದ್ದರಿಂದ ಜರಿತಾರ್ಯಾದಿಗಳಲ್ಲಿ ಸಾಧ್ಯವ್ಯಾಪಕತಾಭಂಗ ಬರುವುದಿಲ್ಲ.

**ಸೂ.ರ.:– ननु तेषामप्यधिकारे पूर्वाधिकरणविरोधः । अमनुष्यत्वादित्यधिकारनिषाधादिति चेन्न । भावानवबोधात् । पूर्वाधिकारिणेऽङ्गुष्ठाभावेनाङ्गुष्ठमात्रविद्यायामनधिकार उक्तः । इह तु तत्रोक्तमङ्गीकृत्य विद्यान्तराधिकाराभिधानात् । अतो देवानां वेदविद्याधिकार इति सिद्धम् ।**

**ಅನು.:–** ಹೌದು, ಜರಿತಾರ್ಯಾದಿಗಳಿಗೂ ವೇದವಿದ್ಯಾಧಿಕಾರವನ್ನು ಅಂಗೀಕರಿಸು-ವುದಾದರೆ, ಪೂರ್ವಾಧಿಕರಣದಲ್ಲಿ ತಿರ್ಯಗಾದಿಗಳು ಮನುಷ್ಯರಲ್ಲ, ಆದ್ದರಿಂದ ಅವುಗಳಿಗೆ ವೇದವಿದ್ಯಾಧಿಕಾರ ಇಲ್ಲ ಎಂದು ಜರಿತಾರ್ಯಾದಿಗಳಿಗೆ ಅಧಿಕಾರವನ್ನು ನಿಷೇಧ ಮಾಡಿದ್ದರಿಂದ ಪೂರ್ವಾಧಿಕರಣವಿರೋಧ ಬರುತ್ತದೆಯಲ್ಲವೇ? ಎಂದರೆ, ನಮ್ಮ ಅಭಿಪ್ರಾಯ ಸರಿಯಾಗಿ ತಿಳಿದಿಲ್ಲ.

ಪೂರ್ವಾಧಿಕರಣದಲ್ಲಿ ತಿರ್ಯಗಾದಿಗಳಿಗೆ ಅಂಗುಷ್ಠ ಇರುವುದಿಲ್ಲವಾದ್ದರಿಂದ ಅಂಗುಷ್ಠಮಾತ್ರವಿದ್ಯೆಯಲ್ಲಿ ತಿರ್ಯಗಾದಿಗಳಿಗೆ ಅಧಿಕಾರ ಇಲ್ಲ ಎಂದು ಹೇಳಿದೆ. ಪ್ರಕೃತ ಈ ಅಧಿಕರಣದಲ್ಲಿ ಹಿಂದೆ ಹೇಳಿದ ಅಂಗುಷ್ಠಮಾತ್ರವಿದ್ಯೆಯಲ್ಲಿ ಅಧಿಕಾರಾಭಾವವನ್ನು ಅಂಗೀಕರಿಸಿ, ಬೇರೆ ವಿದ್ಯೆಯಲ್ಲಿ ತಿರ್ಯಗಾದಿಗಳಿಗೆ ಅಧಿಕಾರ ಇಲ್ಲ ಎಂದು ನಿಷೇಧ ಮಾಡುತ್ತಿದ್ದೇವೆ. ಆದ್ದರಿಂದ ನಮಗೆ ಪೂರ್ವಾಧಿಕರಣದ ವಿರೋಧ ಬರುವುದಿಲ್ಲ. ಹೀಗಾಗಿ ದೇವತೆಗಳಿಗೆ ವೇದವಿದ್ಯಾಧಿಕಾರ ಇದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 27

### ಆಕ್ಷೇಪ

**ಸೂ.ರ.:– ननु यद्देवानां सादिविनाशित्वमिति द्वितीयकल्पमङ्गीकृत्य वेदविद्याधिकारकथनं तदयुक्तम् । देवानां सादिविनाशित्वे ततः पूर्वं देवताऽभावेन पूर्वकल्पे प्रवृत्तकर्मण्युद्देशाभावाद्वैयर्थ्याख्यविरोधापत्तेरित्याक्षिप्य समादधत्सूत्रं पठति ।**

**ಅನು.:–** ದೇವತೆಗಳಿಗೆ ಸಾದಿವಿನಾಶಿತ್ವವನ್ನು ಹೇಳುವ ಎರಡನೇ ಪಕ್ಷವನ್ನು ಅಂಗೀಕರಿಸಿ ದೇವತೆಗಳಿಗೂ ವೇದವಿದ್ಯಾಧಿಕಾರ ಇದೆ ಎಂಬುದಾಗಿ ಹೇಳಿದ್ದು ಸರಿಯಲ್ಲ. ಏಕೆಂದರೆ - ದೇವತೆಗಳಿಗೆ ಸಾದಿವಿನಾಶಿತ್ವವನ್ನು ಹೇಳಿದರೆ, ಅದಕ್ಕೂ ಮೊದಲು ಅವರಿಗೆ ದೇವತ್ವವು ಇರುವುದಿಲ್ಲವಾದ್ದರಿಂದ, ಪೂರ್ವಕಲ್ಪದಲ್ಲಿ (ದೇವತೆಗಳೇ ಇರುವುದಿಲ್ಲವಾದ್ದರಿಂದ) ಪ್ರವೃತ್ತಕರ್ಮದಲ್ಲಿ ಉದ್ದೇಶ್ಯರಾದ ವ್ಯಕ್ತಿಗಳೇ ಇರುವುದಿಲ್ಲವಾದ್ದರಿಂದ ವೈಯರ್ಥ್ಯ-ರೂಪವಾದ ವಿರೋಧ ಬರಬೇಕಾಗುತ್ತದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ–

## ॐ विरोधः कर्मणीति चेन्नानेकप्रतिपत्तेर्दर्शनात् ॐ (१.३.२७)

**ಸೂತ್ರಾರ್ಥ :** ದೇವಾದೀನಾಂ ಸಾದಿತ್ವೇ = ದೇವಾದಿಗಳಿಗೆ ಸಾದಿತ್ವವನ್ನು ಅಂಗೀಕರಿಸುವುದಾದರೆ ಕರ್ಮಣಿ = ಪೂರ್ವಕಲ್ಪದಲ್ಲಿ ಪ್ರವೃತ್ತಯಜ್ಞಾದಿಕರ್ಮದಲ್ಲಿ (ಯಜ್ಞಾದಿಕರ್ಮವಿಷಯದಲ್ಲಿ) ವಿರೋಧಃ = ಉದ್ದೇಶ್ಯರಾದ ವ್ಯಕ್ತಿಗಳೇ ಇಲ್ಲವಾದ್ದರಿಂದ (ಉದ್ದೇಶ್ಯಾಭಾವನಿಮಿತ್ತ) ವೈಯ್ಯರ್ಥ್ಯರೂಪವಾದ ವಿರೋಧ ಬರುತ್ತದೆ ಇತಿ ಚೇತ್ ನ = ಎಂದು ಆಕ್ಷೇಪ ಬಂದರೆ ಅದು ಸರಿಯಲ್ಲ. ಕುತಃ = ಯಾಕೆ? ಅನೇಕಪ್ರತಿಪತ್ತೇಃ ದರ್ಶನಾತ್ = ಅನೇಕಜನ ಯೋಗ್ಯಮನುಷ್ಯರಿಗೆ ದೇವತಾಪದಪ್ರಾಪ್ತಿಯು "ಯತ್ರ ಪೂರ್ವೇ" (ತೈ.ಆ. 3-12) ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ.

**ಸೂ.ರ.:–** **एवं च तेषां प्रवाहतोऽनादिनित्यत्वेनैतद्देवानामभावेऽपि देवतान्तरसद्भावात् । तेह नाकमिति श्रुतौ एकैकगणशोऽनन्तानां देवत्वादियोग्यमनुष्याणां वियाकर्मभ्यां पूर्वं पूर्वं देवतापदप्राप्तेर्दर्शनात् । ततश्च वैयर्थ्याख्यविरोधाभाव इति सिद्धम् ॥**

**ಅನು.:–** ದೇವತೆಗಳು ಸಾದಿವಿನಾಶಿಗಳಾದರೂ ಸಹ ಪ್ರವಾಹತಃ ಅನಾದಿನಿತ್ಯ-ರಾದ್ದರಿಂದ ಪೂರ್ವಕಲ್ಪದಲ್ಲಿ ಪ್ರವೃತ್ತಯಜ್ಞಾದಿಕರ್ಮಗಳನ್ನು ಮಾಡುವಾಗ ಈಗಿನ ದೇವತೆಗಳೇ ಇಲ್ಲದಿದ್ದರೂ ಸಹ ಬೇರೆ ದೇವತೆಗಳು ಇದ್ದೇ ಇರುತ್ತಾರೆ. "ತೇಹ ನಾಕಂ ..." ಎಂಬ ಶ್ರುತಿಯಲ್ಲಿ ಪ್ರತಿಯೊಂದು ದೇವತಾಗಣಕ್ಕೂ ಅನಂತಸಂಖ್ಯಾಕರಾದ ದೇವತ್ವಾದಿ-ಯೋಗ್ಯರಾದ ಮನುಷ್ಯರು ವಿದ್ಯಾ-ಕರ್ಮಗಳಿಂದ ಹಿಂದೆ ಹಿಂದೆ ದೇವತಾಪದವಿಯನ್ನು ಹೊಂದಿದ್ದಾರೆ ಎಂದು ಶ್ರುತವಾಗುತ್ತಿದೆ.

ಆದ್ದರಿಂದ ಪೂರ್ವಕಲ್ಪದಲ್ಲಿ ಯಜ್ಞಾದಿಕರ್ಮ ಮಾಡುವಾಗ ಈಗಿನ ದೇವತೆಗಳೇ ಇಲ್ಲದಿದ್ದರೂ ಸಹ ಬೇರೆ ದೇವತೆಗಳು ಇದ್ದೇ ಇರುತ್ತಾರೆ. ದೇವತೆಗಳು ಪ್ರವಾಹತಃ ಅನಾದಿನಿತ್ಯರಾದ್ದರಿಂದ ಆ ಆ ದೇವತಾಪದವಿಯಲ್ಲಿ ಒಂದಲ್ಲ ಒಂದು ದೇವತೆಗಳು ಇದ್ದೇ ಇರುತ್ತಾರೆ. ಆದ್ದರಿಂದ ವೈಯರ್ಥ್ಯರೂಪವಾದ ವಿರೋಧ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ – 28

## ಆಕ್ಷೇಪ

**ಸೂ.ರ.:– ननु वेदानित्यत्वे प्रामाण्यायोगेन नित्यत्वं तावदङ्गीकार्यम् । वाचा विरूपेति (ऋ.८-६४-६) श्रुतेः ।**

**ಅನು.:–** ವೇದಗಳಿಗೆ ಅನಿತ್ಯತ್ವವನ್ನು ಅಂಗೀಕರಿಸಿದರೆ ಪ್ರಾಮಾಣ್ಯ ಕೂಡುವುದಿಲ್ಲ-ವಾದ್ದರಿಂದ "ವಾಚಾ ವಿರೂಪ ನಿತ್ಯಯಾ" (ಋ. 8-64-6) ಎಂದು ಶ್ರುತಿಯಿರು-ವುದರಿಂದ ವೇದಗಳಿಗೆ ನಿತ್ಯತ್ವವನ್ನು ಒಪ್ಪಲೇಬೇಕಿದೆ.

**ಸೂ.ರ.:– तद्वाच्या देवा यद्यनित्यास्तर्हि पूर्वदेवतापरित्यागेनान्य-देवतावाचकत्वमभ्युपेयम् । न चैतद्घटते । वाक्यस्यार्थेन स्वाभाविक-सम्बन्धात् । न हि किमपि वाक्यं कंचित्कालं कंचिदर्थं प्रतिपाद्य तमपहाय कालान्तरेऽर्थान्तरं प्रतिपादयतीति दृष्टचरं येन वेदेऽपि तथा स्यात् । वेदे तथात्वमङ्गीकुर्वाणेन वेदस्यार्थेन सम्बन्धः काल्पनिक इत्यङ्गीकार्यः । तथा काल्पनिकसम्बन्धस्याप्रामाण्यप्रयोजकत्वाद्वेदाप्रामाण्यम् ।**

**ಅನು.:–** ಅಂತಹ ನಿತ್ಯವಾದ ವೇದಗಳಲ್ಲಿ ವಾಚ್ಯರಾದ ದೇವತೆಗಳು ಒಂದುವೇಳೆ ಅನಿತ್ಯರು ಎಂದು ಅಂಗೀಕರಿಸಿದರೆ, ಆಗ "ವೇದಗಳು ಹಿಂದಿನ ದೇವತೆಗಳನ್ನು ಬಿಟ್ಟು (ಪ್ರತಿಪಾದಿ- ಸದೇ) ಈಗಿರುವ ಬೇರೊಬ್ಬ ದೇವತೆಯನ್ನು ಪ್ರತಿಪಾದಿಸುತ್ತಿವೆ" ಎಂದು ಒಪ್ಪಬೇಕಾಗುತ್ತದೆ. ಆದರೆ ಈ ರೀತಿ ಒಪ್ಪುವುದು ಸಾಧ್ಯವಾಗುವುದಿಲ್ಲ. ವಾಕ್ಯಗಳಿಗೆ ಅರ್ಥಗಳ ಜೊತೆ ಸ್ವಾಭಾವಿಕ ಸಂಬಂಧ ಇರುವುದರಿಂದ.

ಯಾವ ಒಂದು ವಾಕ್ಯವೂ ಸಹ ಸ್ವಲ್ಪಕಾಲದವರೆಗೆ ಒಂದು ಅರ್ಥವನ್ನು ಪ್ರತಿಪಾದಿಸಿ ನಂತರ ಮತ್ತೊಂದು ಕಾಲದಲ್ಲಿ ಆ ಅರ್ಥವನ್ನು ಬಿಟ್ಟು ಬೇರೊಂದು ಅರ್ಥವನ್ನು

ಪ್ರತಿಪಾದಿಸುವುದು ಕಂಡಿಲ್ಲ. ಒಂದುವೇಳೆ ಹಾಗೆ ಕಂಡಿದ್ದರೆ, ವೇದವೂ ಸಹ ಸ್ವಲ್ಪಕಾಲದವರೆಗೆ ಒಬ್ಬ ದೇವತೆಯನ್ನು ಪ್ರತಿಪಾದಿಸಿ ಕಾಲಾಂತರದಲ್ಲಿ ಮತ್ತೊಬ್ಬ ದೇವತೆಯನ್ನು ಪ್ರತಿಪಾದಿಸುತ್ತದೆ ಎಂದು ಅಂಗೀಕರಿಸಬಹುದಿತ್ತು.

ಪ್ರಕೃತ ''ವೇದವು ಹಿಂದೆ ಒಬ್ಬ ದೇವತೆಯನ್ನು ಪ್ರತಿಪಾದಿಸಿ ಈಗ ಮತ್ತೊಬ್ಬ ದೇವತೆಯನ್ನು ಪ್ರತಿಪಾದಿಸುತ್ತಿದೆ'' ಎಂದು ಒಪ್ಪುವ ನೀವು ವೇದಗಳಿಗೆ ಅರ್ಥದ ಜೊತೆಗೆ ಕಾಲ್ಪನಿಕಸಂಬಂಧವನ್ನು ಒಪ್ಪಿದಂತಾಗುತ್ತದೆ. ಆ ವಿಧವಾದ ಕಾಲ್ಪನಿಕಸಂಬಂಧವು ಅಪ್ರಾಮಾಣ್ಯಕ್ಕೆ ಪ್ರಯೋಜಕವಾದ್ದರಿಂದ ವೇದಕ್ಕೆ ಅಪ್ರಮಾಣ್ಯ ಬರಬೇಕಾಗುತ್ತದೆ.

**ಸೂ.ರ.:– काल्पनिकसम्बन्धस्य प्रामाण्यप्रयोजकत्वेऽपि वेदप्रामाण्यं न घटते । प्रामाणिकत्वेन पूर्वदेवताप्रवाहनियमेऽपि प्रमाणाभावेनोत्तरकल्पेष्वपि देवताप्रवाहनियमाभावेन काल्पनिकसम्बन्धस्याप्यभावादित्याक्षिप्य समादधत्सूत्रमाह ।**

**ಅನು.:–** ಕಾಲ್ಪನಿಕಸಂಬಂಧವು ಪ್ರಾಮಾಣ್ಯಕ್ಕೆ ಪ್ರಯೋಜಕ ಎಂದು ಆದರೂ ಸಹ ವೇದಗಳಿಗೆ ಪ್ರಾಮಾಣ್ಯ ಕೂಡುವುದಿಲ್ಲ. ಪೂರ್ವದೇವತಾಪ್ರವಾಹವು ಪ್ರಾಮಾಣಿಕವಾದ್ದರಿಂದಾಗಿ ಪೂರ್ವದೇವತಾಪ್ರವಾಹನಿಯಮ ಇದ್ದರೂ ಸಹ, ಉತ್ತರ ಕಲ್ಪಗಳಲ್ಲಿಯೂ ಸಹ ದೇವತಾಪ್ರವಾಹದ ವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದಾಗಿ ಉತ್ತರಕಲ್ಪಗಳಲ್ಲಿ ದೇವತಾಪ್ರವಾಹನಿಯಮ ಇಲ್ಲವಾದ್ದರಿಂದ ಪ್ರಕೃತ ವೇದಗಳಿಗೆ ಅರ್ಥದ ಜೊತೆ ಕಾಲ್ಪನಿಕಸಂಬಂಧವೂ ಇಲ್ಲ.

ಹೀಗೆ ವೇದಗಳಿಗೆ ಅರ್ಥದ ಜೊತೆ ಸ್ವಾಭಾವಿಕಸಂಬಂಧವೂ ಇಲ್ಲ, ಕಾಲ್ಪನಿಕಸಂಬಂಧವೂ ಇಲ್ಲವಾದ್ದರಿಂದ ವೇದಪ್ರತಿಪಾದ್ಯರಾದ ದೇವತೆಗಳಿಗೆ ಅನಿತ್ಯತ್ವವನ್ನು ಹೇಳುವುದಾದರೆ ವೇದಗಳಿಗೆ ಅಪ್ರಾಮಾಣ್ಯವೇ ಬರುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ शब्द इति चेन्नातः प्रभवात्प्रत्यक्षानुमानाभ्याम् ॐ**

**(१.३.२८)**

**ಸೂತ್ರಾರ್ಥ :-** ವೇದಪ್ರತಿಪಾದ್ಯರಾದ ದೇವತೆಗಳಿಗೆ ಆದ್ಯಂತವತ್ವವನ್ನು (ಅನಿತ್ಯತ್ವವನ್ನು) ಅಂಗೀಕರಿಸುವುದಾದರೆ ಶಬ್ದೇ = ವೇದಗಳಲ್ಲಿ ಅಪ್ರಾಮಾಣ್ಯ ರೂಪವಾದ

ವಿರೋಧ ಬರಬೇಕಾಗುತ್ತದೆ. ನಿತ್ಯತ್ವೇನ ಶ್ರುತಿಸಿದ್ಧವೇದವಾಚಾಂ ಕದಾಚಿತ್ ವಾಚ್ಯ-ಹೀನತ್ವಾತ್=ನಿತ್ಯತ್ವೇನ ಶ್ರುತಿಸಿದ್ಧವಾದ ವೇದವಾಕ್ಯಗಳಿಗೆ ಕೆಲವೊಮ್ಮೆ ವಾಚ್ಯವಾದ ಅರ್ಥವೇ ಇಲ್ಲದಿರುವುದರಿಂದ.

ಇತಿ ಚೇತ್ ನ = ಈ ರೀತಿಯಾಗಿ ಆಕ್ಷೇಪ ಬಂದರೆ ಅದು ಸರಿಯಲ್ಲ. ಅತಃ = ''ಧಾತಾ ಯಥಾ'' (ಮಹಾ.ನಾ. 5-7) ಎಂದು ವೇದವಾಕ್ಯ ಇರುವುದರಿಂದ. ತಥಾ = ಅದೇ ರೀತಿಯಾಗಿ ಪ್ರತ್ಯಕ್ಷಾನುಮಾನಾಭ್ಯಾಮ್ = ದೊಡ್ಡವರ ಪ್ರತ್ಯಕ್ಷ ಇರುವುದರಿಂದ, ಮತ್ತು ದೇವತೆಗಳಿಗೆ ಪ್ರವಾಹತಃ ಉತ್ಪತ್ತಿಸಾಧಕವಾದ ಲಿಂಗ ಇರುವುದರಿಂದ ಪ್ರಭವಾತ್ = ಪ್ರತಿಕಲ್ಪದಲ್ಲಿಯೂ ನಿಯಮೇನ ಪ್ರಭವಶಬ್ದವಾಚ್ಯಉತ್ಪತ್ತಿಯು ತಿಳಿದು ಬರುವುದರಿಂದಲೂ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಹೇಳಿದ್ದು ಸಮಂಜಸವೇ ಆಗಿದೆ.

**ಸೂ.ರ.:– एवं च सूर्याचन्द्रमसाविति श्रुतेः । महतां प्रत्यक्षात् । उत्तरकल्पः देववान् अप्रलयकालत्वादित्यनुमानस्य च भावात् ।**

**ಅನು.:–** ''ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್'' (ಮ.ನಾ.ಉ. 5-7) ಎಂಬುದಾಗಿ ಶ್ರುತಿ ಇರುವುದರಿಂದ, ಮತ್ತು ದೊಡ್ಡವರ ಪ್ರತ್ಯಕ್ಷವೂ ಪ್ರಮಾಣವಾಗಿ ಇರುವುದರಿಂದ ಹಾಗೂ ಉತ್ತರಕಲ್ಪಃ ದೇವವಾನ್ ಅಪ್ರಲಯಕಾಲತ್ವಾತ್ ಎಂಬ ಅನುಮಾನವೂ ಪ್ರಮಾಣವಾಗಿ ಇರುವುದರಿಂದ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಅಂಗೀಕರಿಸಲೇಬೇಕು.

**ಸೂ.ರ.:– न च सम्बन्धस्य काल्पनिकत्वान्न प्रामाण्यप्रयोजकत्वमिति वाच्यम् । अन्यान्यदेवतासम्बन्धस्यानादिनिधनेति प्रामाण्यसिद्ध-त्वेनाकाल्पनिकत्वात् । तथा च वैयर्थ्याख्यविरोधाभाव इति सिद्धम् ।**

**ಅನು.:–** ದೇವತೆಗಳಿಗೆ ಉತ್ಪತ್ತಿ-ವಿನಾಶಗಳನ್ನು ಹೇಳಿದರೆ ವೇದಗಳಿಗೂ ಅರ್ಥಕ್ಕೂ ಕಾಲ್ಪನಿಕ- ಸಂಬಂಧವನ್ನೇ ಹೇಳಬೇಕಾಗುವುದರಿಂದ, ಆ ಕಾಲ್ಪನಿಕಸಂಬಂಧವು ಪ್ರಾಮಾಣ್ಯ ಪ್ರಯೋಜಕವಾಗುವುದಿಲ್ಲ (ಅರ್ಥಾತ್ ವೇದಗಳಿಗೆ ಅಪ್ರಾಮಾಣ್ಯ ಬರಬೇಕಾಗುವು-ದಲ್ಲ?) ಎಂದರೆ, ಅದು ಸರಿಯಲ್ಲ.

ಅನಾದಿನಿಧನಾ ಎಂಬುದಾಗಿ ಪ್ರಾಮಾಣ್ಯಸಿದ್ಧವಾದ್ದರಿಂದ ವೇದಗಳಿಗೆ ಒಂದಲ್ಲ ಒಂದು ಕಾಲದಲ್ಲಿ ಒಬ್ಬರಲ್ಲಿ ಒಬ್ಬ ದೇವತೆಯ ಸಂಬಂಧ ಇದ್ದೇ ಇರುವುದರಿಂದ, ಆ

ಅನ್ಯಾನ್ಯದೇವತಾಸಂಬಂಧವು ಕಾಲ್ಪನಿಕಸಂಬಂಧವಾಗಿಲ್ಲ. ಕಿಂತು ಸ್ವಾಭಾವಿಕಸಂಬಂಧವೇ ಆಗಿದೆ.

ಆದ್ದರಿಂದ ವೇದಗಳಿಗೂ - ಅರ್ಥಕ್ಕೂ (ವೇದಪ್ರತಿಪಾದ್ಯದೇವತೆಗಳಿಗೂ) ಇರುವ ಸಂಬಂಧ ಸ್ವಾಭಾವಿಕ ಸಂಬಂಧವೇ ಆಗಿರುವುದರಿಂದ, ಸ್ವಾಭಾವಿಕಸಂಬಂಧವು ಪ್ರಾಮಾಣ್ಯಕ್ಕೆ ಪ್ರಯೋಜಕವೇ ಆಗಿದ್ದರಿಂದ ವೇದಗಳಿಗೆ ಅಪ್ರಮಾಣ್ಯರೂಪವಾದ (ವೈಯರ್ಥ್ಯರೂಪವಾದ) ವಿರೋಧ ಇಲ್ಲ(ಪ್ರಾಮಾಣ್ಯವೇ ಇದೆ) ಎಂದು ಸಿದ್ಧವಾಗುತ್ತದೆ.

ಸೂತ್ರ - 29

**ಸೂ.ರ.:– युक्त्यन्तरेण देवप्रवाहस्य नित्यतां साधयत्सूत्रमुपन्यस्यति ।**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ದೇವತೆಗಳ ಪ್ರವಾಹಕ್ಕೆ ನಿತ್ಯತ್ವವನ್ನು ಸಾಧಿಸುವ ಸೂತ್ರವನ್ನು ಹೇಳುತ್ತಾರೆ–

**ॐ अत एव च नित्यत्वम् ॐ (१.३.२९)**

**ಸೂತ್ರಾರ್ಥ :-** ಅತ ಏವ ಚ = ಪೂರ್ವಪಕ್ಷಿಯು ಹೇಳಿರುವ ವೇದನಿತ್ಯತ್ವ ಕಾರಣದಿಂದಲೇನೇ ತದನ್ಯಥಾನುಪಪತ್ತಿಯಿಂದಲೂ ಸಹ ನಿತ್ಯತ್ವಮ್ = ಅಂತಹ ನಿತ್ಯವಾದ ವೇದಗಳಿಂದ ವಾಚ್ಯರಾದ ದೇವತೆಗಳ ಪ್ರವಾಹಕ್ಕೆ ನಿತ್ಯತ್ವವು ಸಿದ್ಧಿಸುತ್ತದೆ.

**ಸೂ.ರ.:– एवं च परेणाभिहितवेदनित्यत्वस्यान्यथाऽनुपपत्त्यैव देवता प्रवाहनित्यत्वस्य सिद्धत्वात् । वाच्यस्य नित्यत्वाभावे एवंरूपाया वाचां नित्यत्वं नोपपद्यते । उत्पत्तिविनाशित्वात्स्वरूपनित्यत्वायोगेन तेषां प्रवाहरूपेणैव नित्यत्वं सिद्धम् ।**

**ಅನು.:–** ಈ ಅಧಿಕರಣದ ಮೂರನೇ ಸೂತ್ರದಲ್ಲಿ (28ನೇ ಸೂತ್ರದಲ್ಲಿ) ಪೂರ್ವಪಕ್ಷಿಯು ವೇದಗಳಿಗೆ ನಿತ್ಯತ್ವವನ್ನು ಹೇಳಿದ್ದಾನೆ. ಇಂತಹ ವೇದಗಳಿಂದ ವಾಚ್ಯರಾದ ದೇವತೆಗಳು ನಿತ್ಯರು ಆಗದೇ ಹೋದರೆ ವೇದಗಳಿಗೆ ನಿತ್ಯತ್ವವು ಕೂಡುವುದಿಲ್ಲ. ಅರ್ಥಾತ್ ವೇದಗಳಿಗೆ ನಿತ್ಯತ್ವವು ವಾಚ್ಯರಾದ ದೇವತೆಗಳಿಗೆ ನಿತ್ಯತ್ವವನ್ನು ಒಪ್ಪದ ಹೊರತು ಕೂಡುವುದಿಲ್ಲ. ಹೀಗಾಗಿ ವೇದಗಳಿಗೆ ಹೇಳಿರುವ ನಿತ್ಯತ್ವಾನ್ಯಥಾನುಪಪತ್ತಿಯಿಂದಲೂ ಸಹ ದೇವತೆಗಳಿಗೆ ನಿತ್ಯತ್ವವು ಸಿದ್ಧವಾಗುತ್ತದೆ.

ದೇವತೆಗಳಿಗೆ ನಿತ್ಯತ್ವವನ್ನು ಹೇಳುವುದೇ ಆದರೂ ಸ್ವರೂಪನಿತ್ಯತ್ವವನ್ನೇ ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ದೇವತೆಗಳಿಗೆ ಉತ್ಪತ್ತಿವಿನಾಶಗಳು ಇರುವುದರಿಂದಾಗಿ ಸ್ವರೂಪನಿತ್ಯತ್ವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಪ್ರವಾಹರೂಪದಿಂದಲೇ ನಿತ್ಯತ್ವವನ್ನು ಹೇಳಬೇಕು.

ಆದ್ದರಿಂದ ಪೂರ್ವಪಕ್ಷಿಯು ಹೇಳಿರುವ ವೇದನಿತ್ಯತ್ವಾನ್ಯಥಾನುಪಪತ್ತಿಯಿಂದಲೂ ಸಹ ದೇವತೆಗಳಿಗೆ ಪ್ರವಾಹತಃ ನಿತ್ಯತ್ವವು ಸಿದ್ಧವಾಗುತ್ತದೆ.

ಸೂತ್ರ – 30

**ಆಕ್ಷೇಪ**

**ಸೂ.ಅ.:– ननु देवताप्रवाहस्य नित्यत्वेऽपि वेदप्रामाण्यस्यानुपपद्यमानत्वं भवेत्। पूर्वकल्पमुक्तानामुत्तरकल्पे पुनरावर्तनत्वे मुक्तेरपुनरावृत्तित्वात्। तदन्येषां पुनरावर्तनत्वे धर्मिभूतदेवानित्यत्वहेतुकं विरोधाभावेऽपि नामरूपादिधर्मवैचित्र्यकृतविरोधापत्तेः। वाचकवेदस्य प्रतिकल्पं पाठभेदाभावेनैकविधत्वात्। वाच्यदेवानां च नानाविधनामरूपवत्त्वादिति प्राप्ते सूत्रमाह।**

**ಅನು.:–** ಹಿಂದೆ ಹೇಳಿದಂತೆ ದೇವತಾಪ್ರವಾಹವು ನಿತ್ಯ ಎಂದೇ ಅಂಗೀಕರಿಸಿದರೂ ಸಹ ವೇದಗಳಿಗೆ ಪ್ರಾಮಾಣ್ಯವು (ಅನುಪಪದ್ಯಮಾನವೇ) ಕೂಡುವುದಿಲ್ಲ.

ಹೇಗೆಂದರೆ - ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳೇ ಉತ್ತರಕಲ್ಪದಲ್ಲಿ ಪುನರಾವರ್ತನಗೊಳ್ಳುತ್ತಾರೆಯೋ? ಅಥವಾ ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳಿಂದ ಭಿನ್ನರಾದ (ಬೇರೆ) ದೇವತೆಗಳೇ ಉತ್ತರಕಲ್ಪದಲ್ಲಿ ಇರುತ್ತಾರೆ ಎಂದು ಹೇಳುತ್ತೀರೋ?

ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳೇ ಉತ್ತರಕಲ್ಪದಲ್ಲಿ ಪುನರಾವರ್ತನಗೊಳ್ಳುತ್ತಾರೆಂಬ ಮೊದಲನೇ ಪಕ್ಷ ಸರಿಯಲ್ಲ. ಮುಕ್ತಿಯು ಅಪುನರಾವೃತ್ತಿಸ್ಥಳವಾದ್ದರಿಂದ (ಮುಕ್ತಿಗೆ ಹೋದವರಿಗೆ ಪುನರಾವೃತ್ತಿ ಇಲ್ಲವಾದ್ದರಿಂದ) ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳೇ ಉತ್ತರಕಲ್ಪದಲ್ಲಿ ಪುನರಾವರ್ತನಗೊಳ್ಳಲು ಸಾಧ್ಯವಿಲ್ಲ.

ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳೇ ಉತ್ತರಕಲ್ಪದಲ್ಲಿ ಪುನರಾವರ್ತನ-

ಗೊಳ್ಳುವುದಿಲ್ಲ, ಕಿಂತು ಅವರಿಂದ ಭಿನ್ನರಾದ ಬೇರೆ ದೇವತೆಗಳೇ ಬರುತ್ತಾರೆ ಎಂದು ಹೇಳುವ ಎರಡನೇ ಪಕ್ಷವೂ ಸರಿಯಲ್ಲ. ಆಗ ಧರ್ಮಿಗಳಾದ ದೇವತೆಗಳಿಗೆ ಅನಿತ್ಯತ್ವ-ನಿಮಿತ್ತಕವಾಗಿ ವಿರೋಧ ಬರದಿದ್ದರೂ ಸಹ ನಾಮ-ರೂಪಾದಿ ಧರ್ಮವೈಚಿತ್ರ್ಯಾದಿ ನಿಮಿತ್ತಕವಾಗಿ ವಿರೋಧ ಬಂದೇ ಬರುತ್ತದೆ.

ಅದರ ಭಾವವೇನೆಂದರೆ - ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳಿಗಿದ್ದ ನಾಮ-ರೂಪಾದಿಗಳೇ ಬೇರೆ ಆಗಿವೆ. ಉತ್ತರಕಲ್ಪದಲ್ಲಿರುವ ದೇವತೆಗಳಿಗೆ ಇರುವ ನಾಮ-ರೂಪಾದಿಗಳೇ ಬೇರೆ ಇವೆ. ಹೀಗೆ ನಾಮ-ರೂಪಾದಿ ವೈಚಿತ್ರ್ಯ ಇದೆ. ವಾಚ್ಯರಾದ ದೇವತೆಗಳು ನಾನಾವಿಧ ನಾಮ-ರೂಪಾದಿಗಳುಳ್ಳವರಾಗಿದ್ದಾರೆ. ಆದರೆ ಅಂತಹ ವಿಚಿತ್ರ ನಾಮ-ರೂಪಾದಿಗಳುಳ್ಳ ದೇವತೆಗಳನ್ನು ತಿಳಿಸುವ ವೇದಗಳು (ವಾಚಕ ವೇದವು) ಪ್ರತಿಕಲ್ಪದಲ್ಲಿಯೂ ಪಾಠಭೇದವಿಲ್ಲದ ಕಾರಣ ಏಕವಿಧವಾಗಿದೆ.

ಆದ್ದರಿಂದ ನಾಮರೂಪಾದಿ ವೈಚಿತ್ರ್ಯನಿಮಿತ್ತವಾದ ವಿರೋಧ (ಅಪ್ರಾಮಾಣ್ಯ) ವೇದಗಳಿಗೆ ಬಂದೇ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ समाननामरूपत्वाचावृत्तावप्यविरोधो दर्शनात्स्मृतेश्च ॐ**

**(१.३.३०)**

**ಸೂತ್ರಾರ್ಥ** :– ಅವೃತ್ತಾವಪಿ = ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳು (ಉತ್ತರಕಲ್ಪದಲ್ಲಿ) ಮತ್ತೆ ತಮ್ಮ ಸ್ಥಾನದಲ್ಲಿ ಇಲ್ಲದಿದ್ದರೂ ಸಹ ಅವಿರೋಧಃ = ಅವರನ್ನು ತಿಳಿಸುವ ಏಕವಿಧವಾದ ವೇದಗಳಿಗೆ ಅಪ್ರಾಮಾಣ್ಯರೂಪವಾದ ವಿರೋಧವು ಇಲ್ಲ. ಕುತಃ = ಯಾಕೆ? ಸಮಾನನಾಮರೂಪತ್ವಾತ್ = ಈ ಕಲ್ಪದಲ್ಲಿ ಹುಟ್ಟಿದ ದೇವತೆಗಳೂ ಸಹ ಹಿಂದಿನ ಕಲ್ಪದಲ್ಲಿದ್ದ ದೇವತೆಗಳ ಸಮಾನನಾಮರೂಪಗಳುಳ್ಳವರಾದ್ದರಿಂದ. ತಥಾ ಚ ಪ್ರತಿಪಾದ್ಯರಾದ ದೇವತೆಗಳೂ ಏಕವಿಧರೇ ಆದ್ದರಿಂದ (ಸಮಾನ ನಾಮ-ರೂಪಾದಿ-ಗಳುಳ್ಳವರಾದ್ದರಿಂದ) ಅಂತಹ ದೇವತೆಗಳನ್ನು ತಿಳಿಸುವ ವೇದಗಳಿಗೆ ಅಪ್ರಾಮಾಣ್ಯವು ಇಲ್ಲ ಎಂದು ಭಾವ.

ಏಕವಿಧತ್ವಮೇವ ಕುತಃ ? = ವಾಚ್ಯರಾದ ದೇವತೆಗಳಿಗೆ ಏಕವಿಧತ್ವವೇ ಹೇಗೆ ಸಿದ್ಧವಾಗುತ್ತದೆ? ಎಂದರೆ ಅದಕ್ಕೆ ಹೇಳುತ್ತಾರೆ - ದರ್ಶನಾತ್ = "ಯಥಾ ಪೂರ್ವಂ" (ಮ.ನಾ. 5-7) ಎಂಬುದಾಗಿ ಶ್ರುತಿ ಇರುವುದರಿಂದ ಚ = ಮತ್ತು ಸ್ಮೃತೇಃ =

ಅನಾದಿನಿಧನಾ ಎಂಬುದಾಗಿ ಸ್ಮೃತಿಯೂ ಇರುವುದರಿಂದ, ವಾಚ್ಯರಾದ ದೇವತೆಗಳಿಗೆ ಏಕವಿಧತ್ವವು ಸಿದ್ಧಿಸುತ್ತದೆ.

**ಸೂ.ರ.:– एवं चेन्द्रादिदेवतानां वेदे यादृशे नामरूपे प्रतिपाद्येते तयोरेव कल्पान्तरे जायमानानां देवानामभ्युपगमात् । तत्प्रामाणिकत्वे यथा पूर्वमिति श्रुतेरनादिनिधनेति स्मृतेश्च सद्भावात् । तथा च वेदाप्रामाण्याख्यविरोधाभाव इति सिद्धम् ।**

**ಅನು.:–** ವೇದಗಳಲ್ಲಿ ಇಂದ್ರಾದಿದೇವತೆಗಳಿಗೆ ಎಂತಹ ನಾಮ-ರೂಪಗಳು ಪ್ರತಿಪಾದ್ಯವಾಗುತ್ತಿವೆಯೋ ಅವೇ ನಾಮರೂಪಗಳೇ ಉತ್ತರಕಲ್ಪದಲ್ಲಿ ಹುಟ್ಟುವ ದೇವತೆಗಳಿಗೆ ಇವೆ ಎಂದು ಅಂಗೀಕರಿಸಿದ್ದೇವೆ. ಅರ್ಥಾತ್ ಪೂರ್ವಕಲ್ಪದ ದೇವತೆಗಳು ಹಾಗೂ ಉತ್ತರಕಲ್ಪದ ದೇವತೆಗಳು ಸಮಾನವಾದ ನಾಮ-ರೂಪಾದಿಗಳುಳ್ಳವರಾಗಿದ್ದಾರೆ. ಈ ವಿಷಯದಲ್ಲಿ ''ಯಥಾ ಪೂರ್ವಮ್'' (ಮಹಾ.ನಾ. 5-7) ಎಂಬ ಶ್ರುತಿಯೂ ಪ್ರಮಾಣವಾಗಿದೆ. ಮತ್ತು

**ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।**
**ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯ ।**
**ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥**

ಎಂಬ ಸ್ಮೃತಿಯೂ ಪ್ರಮಾಣವಾಗಿದೆ. ಆದ್ದರಿಂದ ವಾಚ್ಯರಾದ ದೇವತೆಗಳೂ ಏಕವಿಧರೇ (ಸಮಾನ ನಾಮರೂಪಾದಿಗಳುಳ್ಳವರೇ) ಆಗಿದ್ದರಿಂದ ತದ್ವಾಚಕವಾದ ಏಕವಿಧವಾದ ವೇದಗಳಿಗೆ ಅಪ್ರಾಮಾಣ್ಯರೂಪವಾದ ವಿರೋಧ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 31

**ಸೂ.ರ.:– ननु न देवानां वेदविद्याधिकारो युक्तः । वेदविद्या मुख्य फलार्थास्तदितरफलार्थाश्चेति द्विविधाः । मोक्षेतरफला अपि ब्रह्मकर्मभेदान्मधुविद्याऽग्निष्टोमविद्या चेति द्विविधाः । तत्र तावन्न देवानां मोक्षेतरफलकद्विविधविद्यास्वधिकारो युज्यते । तत्साध्यानां मोक्षेतरफलानां मध्ये केषाञ्चिद्योग्यानां प्राप्तत्वेनायोग्यानां च प्राप्तुमशक्यत्वेनार्थित्वा-**

**भावादिति जैमिनिमतावलंबेन वेदविद्याधिकारत्वस्य सामान्यनिषेधप्राप्ते सूत्रमाह ।**

**ಅನು.:–** ಆದರೂ ಸಹ ದೇವತೆಗಳಿಗೆ ವೇದವಿದ್ಯಾಧಿಕಾರವು ಯುಕ್ತವಾಗುವುದಿಲ್ಲ. ಏಕೆಂದರೆ – ವೇದವಿದ್ಯೆಗಳು ಮೋಕ್ಷವೇ ಫಲವಾಗಿ ಉಳ್ಳ ವಿದ್ಯೆಗಳು ಹಾಗೂ ಮೋಕ್ಷಭಿನ್ನ-ವಾದ ಫಲ ಉಳ್ಳ ವಿದ್ಯೆಗಳು ಎಂಬುದಾಗಿ ಎರಡುವಿಧವಾಗಿವೆ.

ಅವುಗಳಲ್ಲಿ ಮೋಕ್ಷಭಿನ್ನ ಫಲ ಉಳ್ಳವಿದ್ಯೆಗಳೂ ಸಹ, ಬ್ರಹ್ಮ-ಕರ್ಮ ಭೇದದಿಂದಾಗಿ ಮಧುವಿದ್ಯೆಗಳು-ಅಗ್ನಿಷ್ಟೋಮವಿದ್ಯೆಗಳು ಎಂಬುದಾಗಿ ಪುನಃ ಎರಡುವಿಧವಾಗಿವೆ. ಇವುಗಳಲ್ಲಿ ಮೋಕ್ಷಭಿನ್ನ ಫಲ ಉಳ್ಳ ಎರಡುವಿಧ ವಿದ್ಯೆಗಳಲ್ಲಿ (ಮಧುವಿದ್ಯಾದಿಗಳಲ್ಲಿ) ದೇವತೆಗಳಿಗೆ ಅಧಿಕಾರವು ಕೂಡುವುದಿಲ್ಲ. ಏಕೆಂದರೆ – ಆ ಮಧುವಿದ್ಯಾದಿಗಳಿಗೆ ಶ್ರುತವಾಗುತ್ತಿರುವ ಫಲಗಳಲ್ಲಿ ವಸ್ವಾದಿಪದರೂಪವಾದ ಕೆಲವು ಯೋಗ್ಯವಾದ ಫಲಗಳನ್ನು ದೇವತೆಗಳು ಈಗಾಗಲೇ ಹೊಂದಿದ್ದರಿಂದ ತದ್ವಿಷಯದಲ್ಲಿ ಅರ್ಥಿತ್ವವು ಕೂಡುವುದಿಲ್ಲ. ಮತ್ತೆ ರುದ್ರಾದಿಪದರೂಪವಾದ ಕೆಲವು ಫಲಗಳನ್ನು ಹೊಂದಲು ಸಾಧ್ಯವಿಲ್ಲದ್ದರಿಂದ ತದ್ವಿಷಯದಲ್ಲಿಯೂ ಅರ್ಥಿತ್ವವು ಕೂಡುವುದಿಲ್ಲ.

ಈ ರೀತಿಯಾಗಿ ಜೈಮಿನಿಗಳ ಮತವನ್ನು ಅವಲಂಬಿಸಿ ದೇವತೆಗಳಿಗೆ ವೇದವಿದ್ಯಾಧಿಕಾರ ಸಾಮಾನ್ಯನಿಷೇಧವು ಪ್ರಾಪ್ತವಾದರೆ ಅದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ मध्वादिष्वसम्भवादनधिकारं जैमिनिः ॐ (१.३.३१)**

**ಸೂತ್ರಾರ್ಥ :–** ಮಧ್ವಾದಿಷು = "ಅಸೌ ವಾऽऽದಿತ್ಯೋ ದೇವ ಮಧು" (ಛಾಂ 3-1-1) ಇತ್ಯಾದಿಯಾಗಿ ಹೇಳಿದ ಮಧುವಿದ್ಯಾ ಮೊದಲಾದ ವಿದ್ಯಾದಿಗಳಲ್ಲಿ ಅನಧಿಕಾರಂ = ದೇವತೆಗಳಿಗೆ ಅಧಿಕಾರಾಭಾವವನ್ನು ಜೈಮಿನಿಃ = ಜೈಮಿನಿ ಆಚಾರ್ಯರು ತಿಳಿಯುತ್ತಾರೆ. ಕುತಃ = ಯಾಕೆ? ಅಸಂಭವಾತ್ = ದೇವತೆಗಳಿಗೆ ಅರ್ಥಿತ್ವ-ತತ್ಪದಯೋಗ್ಯತ್ವಾದಿಗಳು ಕೂಡದ ಕಾರಣ.

**ಸೂ.ರ.:– एवं च कक्षद्वयमध्ये प्रथमे तथा द्वितीयस्य प्रथमेऽसम्भवात् । द्वितीयस्य द्वितीयेऽर्थित्वाभावाचाधिकारस्य निषेधान्न त्वधिकारमात्रस्य निषेधात् जैमिन्याचार्यमताविरोध इति सिद्धम् ।**

**ಅನು.:–** ಮೋಕ್ಷೇತರ ಫಲಕವಾದ ಎರಡು ವಿಧ ವಿದ್ಯೆಗಳಲ್ಲಿ 'ಅಸೌ ವಾ ಆದಿತ್ಯೋ

ದೇವಮಧು' ಎಂದು ಪ್ರಸ್ತಾವಿಸಿ ಶ್ರುತವಾಗುತ್ತಿರುವ 'ಸ ಏತದೇವಾಮೃತಂ ವೇದ....' ಇತ್ಯಾದಿ ವಾಕ್ಯಗಳಲ್ಲಿ ವಸ್ವಾದಿಪದಗಳು ಮಧ್ವಾದಿವಿದ್ಯೆಗಳಲ್ಲಿ ಹೇಳಿದ ಉಪಾಸನೆಯಿಂದ ಪ್ರಾಪ್ಯವಾದ ಫಲವಾಗಿದೆ ಎಂದು ತಿಳಿದುಬರುತ್ತಿದೆ. ವಸ್ವಾದಿದೇವತೆಗಳು ಆ ವಸ್ವಾದಿಪದಗಳನ್ನು ಹೊಂದಿದ್ದರಿಂದ ಆ ವಿಷಯದಲ್ಲಿ ಅರ್ಥಿತ್ವ ಕೂಡದು. ಕಾರಣ ಅವರಿಗೆ ಅಧಿಕಾರ ಸಂಭವಿಸುವುದಿಲ್ಲ.

ಇನ್ನು ದ್ವಿತೀಯವಿದ್ಯಾದ್ಯಮೃತವಿದ್ಯಾಫಲವಾದ ರುದ್ರಾದಿಪದಗಳು ವಸ್ವಾದಿದೇವತೆಗಳಿಗೆ ಅಯೋಗ್ಯಫಲವಾದ್ದರಿಂದ (ತಮಗೆ ಹೊಂದಲು ಯೋಗ್ಯವಲ್ಲದ ಕಾರಣ) ಆ ವಿಷಯದಲ್ಲಿ ಅವರಿಗೆ ಅರ್ಥಿತ್ವ ಇಲ್ಲ. ಈ ರೀತಿಯಾಗಿ ದೇವತೆಗಳಿಗೆ ನಿಷೇಧಿಸಿದ್ದಾರೆಯೇ ಹೊರತು ಒಟ್ಟಿನಲ್ಲಿ ದೇವತೆಗಳಿಗೆ ಅಧಿಕಾರವೇ ಇಲ್ಲ ಎಂದು ಸರ್ವಥಾ ಅಧಿಕಾರ ನಿಷೇಧ ಮಾಡಿಲ್ಲ. ಆದ್ದರಿಂದ ಜೈಮಿನಿ ಆಚಾರ್ಯರ ಮತದ ವಿರೋಧ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 32

**ಸೂ.ರ.:– ननु मास्तु मोक्षेतरफलविद्यास्वधिकारो देवानाम् । तथाऽपि सत्यं ज्ञानमि(तै.२-१-१)त्यादिमोक्षार्थविद्यास्वधिकारो भविष्यति । तत्रार्थित्वसम्भवादित्याशङ्कां परिहरत्सूत्रं पठति ।**

**ಅನು.:–** ಮೋಕ್ಷಭಿನ್ನ ಫಲ ಉಳ್ಳ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರ ಇರುವುದು ಬೇಡ. ಆದರೆ "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ. 2-1-1) ಇತ್ಯಾದಿ ಮೋಕ್ಷಫಲಕವಾದ ವಿದ್ಯೆಗಳಲ್ಲಿ ಅಧಿಕಾರ ಸಂಭವಿಸುತ್ತದೆ. ಅಂತಹ ಮೋಕ್ಷಫಲಕವಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅರ್ಥಿತ್ವವು ಸಂಭವಿಸುವುದರಿಂದ ಎಂದು ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ ज्योतिषि भावाच ॐ (१.३.३२)**

**ಸೂತ್ರಾರ್ಥ :–** ಜ್ಯೋತಿಷಿ = ದೇವತೆಗಳ ಜ್ಞಾನದಲ್ಲಿ ಭಾವಾತ್ = ಎಲ್ಲ ವಸ್ತುಗಳೂ ಅಂತರ್ಭಾವ ಆಗುವುದರಿಂದ, ಸಿದ್ಧವಾದ ಜ್ಞಾನ ಉಳ್ಳ ದೇವತೆಗಳಿಗೆ ಜ್ಞಾನದ ವಿಷಯ-ದಲ್ಲಿ ಅರ್ಥಿತ್ವವು ಕೂಡುವುದಿಲ್ಲ. ಆದ್ದರಿಂದ ಮೋಕ್ಷವಿದ್ಯೆಗಳಲ್ಲಿಯೂ ಅಧಿಕಾರ ಇಲ್ಲ.

**ಸೂ.ರ.:– एवं च देवानां सार्वज्ञ्येन सर्वब्रह्मकर्मविद्यासाध्यज्ञानानां**

**नियमेन प्राप्तत्वेनात एव वेदद्रष्टृत्वात् । ततश्च तेषामुभयविद्यासाध्य-ज्ञानेऽर्थिताया असम्भवात् । तस्माज्जैमिनिमताविरोध इति सिद्धम् ।**

**ಅನು.:–** ಮೋಕ್ಷಾರ್ಥವಿದ್ಯೆಗಳಲ್ಲಿಯೂ ಸಹ ದೇವತೆಗಳಿಗೆ ಅಧಿಕಾರವು ಸಂಭವಿಸು-ವುದಿಲ್ಲ. ಅಲ್ಲಿ ಹೇಳಿದ ಉಪಾಸನೆಯಲ್ಲಿ ಅರ್ಥಿತ್ವ ಇರುವುದಿಲ್ಲವಾದ್ದರಿಂದ. ವಿದ್ಯಾ-ವಿಚಾರದಲ್ಲಿ ಅರ್ಥಿತ್ವವು ಎರಡು ವಿಧವಾಗಿ ಇರುತ್ತದೆ. ಜ್ಞಾನಕ್ಕಾಗಿ ಅರ್ಥಿತ್ವ ಹಾಗೂ ಫಲಕ್ಕಾಗಿ ಅರ್ಥಿತ್ವ ಎಂದು. ಇವುಗಳಲ್ಲಿ ದೇವತೆಗಳಿಗೆ ಮೋಕ್ಷಕ್ಕಾಗಿ ಅರ್ಥಿತ್ವ ಇದ್ದರೂ ಸಹ ಆ ಮೋಕ್ಷಕ್ಕೆ ಸಾಧನವಾದ, ವಿದ್ಯಾಸಾಧ್ಯವಾದ ಜ್ಞಾನದ ವಿಷಯದಲ್ಲಿ ಅರ್ಥಿತ್ವವು ಕೂಡುವುದಿಲ್ಲ.

ಯಾಕೆ? ದೇವತೆಗಳು ಸರ್ವಜ್ಞರಾದ್ದರಿಂದ, ಎಲ್ಲ ಬ್ರಹ್ಮವಿದ್ಯೆ-ಕರ್ಮವಿದ್ಯೆಗಳಿಂದ ಸಾಧ್ಯವಾಗುವ ಜ್ಞಾನಗಳನ್ನು ನಿಯಮೇನ ಹೊಂದಿದ್ದರಿಂದಾಗಿ, ಆದ್ದರಿಂದಲೇ ವೇದ-ದ್ರಷ್ಟ್ರಗಳಾಗಿದ್ದರಿಂದ ದೇವತೆಗಳಿಗೆ ಎರಡುವಿಧವಿದ್ಯಾಸಾಧ್ಯವಾದ ಜ್ಞಾನದ ವಿಷಯದಲ್ಲಿ ಅರ್ಥಿತ್ವವು ಅಸಂಭಾವಿತವಾಗಿದೆ.

ಆದ್ದರಿಂದ ಜೈಮಿನಿಗಳ ಮತದಿಂದ ವಿರೋಧ ಇಲ್ಲ ಎಂದು ಅಭಿಪ್ರಾಯ.

### ಸೂತ್ರ – 33

### ಸಂಗತಿ

**ಸೂ.ರ.:– एवं देवैर्मोक्षेतरयोग्यफलानां प्राप्तत्वात् । अयोग्यानां प्राप्तुमशक्यत्वात् । मोक्षस्यापि ब्रह्मज्ञानित्वेनार्थतो लब्धत्वात् । अर्थित्वा-भावेन तेषां कास्वपि विद्यास्वधिकाराभावे जैमिनिमतावलंबिना समर्थिते पुनरधिकारं समर्थयत्सूत्रमुपन्यस्यति ।**

**ಅನು.:–** ಮೋಕ್ಷೇತರವಾದ ಫಲವೂ ಸಹ ಯೋಗ್ಯವಾದದ್ದು ಯೋಗ್ಯವಲ್ಲದ್ದು ಎಂಬುದಾಗಿ ಎರಡುವಿಧವಾಗಿದೆ. ಅವುಗಳಲ್ಲಿ ಮೋಕ್ಷೇತರವಾದ ಯೋಗ್ಯಫಲವನ್ನು ದೇವತೆಗಳು ಈಗಾಗಲೇ ಹೊಂದುಬಿಟ್ಟಿದ್ದಾರೆ. ಯೋಗ್ಯವಲ್ಲದ ಫಲವನ್ನು ಹೊಂದಲು ಸಾಧ್ಯವೂ ಇಲ್ಲ. ಇನ್ನು ಮೋಕ್ಷವೇ ಫಲ ಎನ್ನುವುದೂ ಸರಿಯಾಗುವುದಿಲ್ಲ. ಏಕೆಂದರೆ - ದೇವತೆಗಳು ಬ್ರಹ್ಮಜ್ಞಾನಿಗಳಾದ್ದರಿಂದ (ಅಪರೋಕ್ಷಜ್ಞಾನ ಪಡೆದವರಾದ್ದರಿಂದ) ಅವರಿಗೆ ಇಂದಲ್ಲ ನಾಳೆ ಮೋಕ್ಷವು ಕಟ್ಟಿಟ್ಟ ಬುತ್ತಿಯಾಗಿದೆ. ಅರ್ಥಾತ್ ದೇವತೆಗಳಿಗೆ ಮೋಕ್ಷವು ಅರ್ಥತಃ ಲಬ್ಧವಾಗಿಬಿಟ್ಟಿದೆ. ಹೀಗಾಗಿ ಪಡೆದಿರುವ ಫಲದ ವಿಷಯದಲ್ಲಿ ಅವರಿಗೆ

ಅರ್ಥಿತ್ವವು ಕೂಡುವುದಿಲ್ಲವಾದ್ದರಿಂದ, ದೇವತೆಗಳಿಗೆ ಯಾವ ವಿದ್ಯೆಗಳಲ್ಲಿಯೂ ಅಧಿಕಾರವಿರುವುದಿಲ್ಲ ಎಂಬುದಾಗಿ ಜೈಮಿನಿಮತಾವಲಂಬಿಯಾದವನು ಸಮರ್ಥಿಸಿದಾಗ, ದೇವತೆಗಳಿಗೆ ಅಧಿಕಾರವನ್ನು ಮತ್ತೆ ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ भावं तु बादरायणोऽस्ति हि ॐ (१.३.३३)

**ಸೂತ್ರಾರ್ಥ :–** ಬಾದರಾಯಣಸ್ತು = ವೇದವ್ಯಾಸದೇವರಾದರೋ ಹಿ = ಯಾವ ಕಾರಣ ದೇವಾನಾಮಪಿ ಅಸ್ತಿ = ದೇವತೆಗಳಿಗೂ ಸಹ ವಿದ್ಯಾಸಾಧ್ಯಪ್ರಕಾಶವಿಶೇಷ ಎಂಬ ಮೋಕ್ಷಫಲದಲ್ಲಿ ಅತಿಶಯವು ಇದೆಯೋ ತಸ್ಮಾತ್ = ಆ ಕಾರಣ ಭಾವಂ = ದೇವತೆಗಳಿಗೆ ಅಧಿಕಾರ ಇದೆ ಎಂಬುದನ್ನು (ಎಂಬುದಾಗಿ) ಮನ್ಯತೇ = ತಿಳಿಯುತ್ತಾರೆ. ಜೈಮಿನಿಮತಂ ತು = ಜೈಮಿನಿಗಳ ಮತವಾದರೂ, ದೇವತೆಗಳು ಜ್ಞಾನಫಲವನ್ನು ಹೊಂದಿದ್ದರಿಂದಾಗಿ ಪಡೆದಿರುವ ಫಲಕ್ಕಾಗಿ ಅಧಿಕಾರ ಇಲ್ಲ ಎಂಬ ಅಭಿಪ್ರಾಯ ಉಳ್ಳದ್ದಾಗಿದೆ.

**ಸೂ.ರ.:– एवं च यद्यपि देवाः प्राप्तपदा ब्रह्मज्ञानित्वात्सिद्धमोक्ष-तदिरफलाः प्राप्तुमशक्यायोग्यफलाश्च । तथाऽपि प्राप्तपदानामपि देवानां मध्वादि विद्यासूक्तोपासनाकर्मकरणाभ्यां फलविशेषभावेन स्वस्वयोग्यस्य ज्ञान मात्रेणासाध्यस्य मोक्षफलेऽतिशयस्य भावेन सिद्धेरर्थित्वसम्भवात् ।**

**ಅನು.:–** ಯದ್ಯಪಿ ದೇವತೆಗಳು ತಮ್ಮ ತಮ್ಮ ಸ್ಥಾನಗಳನ್ನು ಪಡೆದವರಾಗಿದ್ದಾರೆ. ಬ್ರಹ್ಮಜ್ಞಾನಿಗಳಾದ್ದರಿಂದ ಮೋಕ್ಷ - ಇತರ ಫಲಗಳು ಸಿದ್ಧವೂ ಆಗಿವೆ. ಆದರೂ ಸಹ ದೇವತೆಗಳು ತಮ್ಮ ತಮ್ಮ ಸ್ಥಾನಗಳನ್ನು ಹೊಂದಿದವರಾಗಿದ್ದರೂ ಸಹ ಮಧುವಿದ್ಯಾದಿಗಳಲ್ಲಿ ಹೇಳಿದ ಉಪಾಸನಾ - ಕರ್ಮಗಳನ್ನು ಮಾಡುವುದರಿಂದ ಫಲವಿಶೇಷ ಇರುವುದರಿಂದ ಅರ್ಥಾತ್ ತಮಗೆ ತಮಗೆ ಯೋಗ್ಯವಾದ, ಜ್ಞಾನಮಾತ್ರದಿಂದ ಸಾಧ್ಯವಾಗದ ಮೋಕ್ಷಫಲದಲ್ಲಿ ಅತಿಶಯವು ಇರುವುದರಿಂದ ಮೋಕ್ಷದ ವಿಷಯದಲ್ಲಿ ಅವರಿಗೆ ಅರ್ಥಿತ್ವವು ಸಂಭವಿಸುತ್ತದೆ.

**ಸೂ.ರ.:– मोक्षफल आनन्दातिशयरूपविद्याफलस्य भावेन ज्ञानार्थ-मप्यधिकारसम्भवात् । यावत्सेवापर इति स्कांदवचनात् ।**

**ಅನುವಾದ :–**

यावत्सेवा परे तत्वे तावत्सुखविशेषता ।<br>
सम्भवाच्च प्रकाशस्य परमेकमृते हरिम् ।।

तेषां सामर्थ्ययोगाच्च देवानामप्युपासनम् ।
सर्वं विधीयते नित्यं सर्वयज्ञादिकर्म च ॥

**ಅನು.:**– ಎಂಬುದಾಗಿ ಸ್ಕಾಂದಪುರಾಣದ ವಚನ ಇರುವುದರಿಂದ ದೇವತೆಗಳಿಗೆ ಮೋಕ್ಷಫಲದಲ್ಲಿ ಆನಂದಾತಿಶಯ ರೂಪವಾದ ವಿದ್ಯಾಫಲವು ಇರುವುದರಿಂದ (ಜ್ಞಾನದ ವಿಷಯದಲ್ಲಿಯೂ ಅರ್ಥಿತ್ವವು ಸಂಭವಿಸುವುದರಿಂದ) ಜ್ಞಾನಕ್ಕಾಗಿಯೂ ಅಧಿಕಾರ ಸಂಭವಿಸುತ್ತದೆ.

**ಸೂ.ರ.:**– भगवद्व्यतिरिक्तानां निरुपचरितसार्वज्ञ्याभावेन विद्याविचारेण ज्ञानलाभसम्भवात् ।

**ಅನು.:**– ದೇವತೆಗಳಿಗೆ ಜ್ಞಾನವು ನಿತ್ಯಸಿದ್ಧವಾದ್ದರಿಂದ (ಸರ್ವಜ್ಞರಾದ್ದರಿಂದ) ಜ್ಞಾನದ ವಿಚಾರದಲ್ಲಿ ಅರ್ಥಿತ್ವ ಕೂಡುವುದಿಲ್ಲವಲ್ಲ? ಎಂದರೆ ಅದು ಸರಿಯಲ್ಲ. ದೇವತೆಗಳು ಸರ್ವಜ್ಞರಾದರೂ ಸಹ ಭಗವಂತನಿಗೆ ಹೇಗೆ ನಿರುಪಚರಿತ ಸಾರ್ವಜ್ಞ್ಯ ಇದೆಯೋ ಹಾಗೆ ನಿರುಪಚರಿತವಾದ ಸಾರ್ವಜ್ಞ್ಯ ದೇವತೆಗಳಿಗೆ ಇಲ್ಲ. ಹೀಗಾಗಿ ವಿದ್ಯಾವಿಚಾರ ಮಾಡುವುದರಿಂದ ಅವರಿಗೆ ಜ್ಞಾನಲಾಭವು ಸಂಭವಿಸುತ್ತದೆ. ಆದ್ದರಿಂದ ದೇವತೆಗಳಿಗೆ ಜ್ಞಾನಕ್ಕಾಗಿ ಅಧಿಕಾರ ಉಪಪನ್ನವಾಗುತ್ತದೆ.

**ಸೂ.ರ.:**– जैमिनिमतस्य देवानां प्राप्तफलार्थमनधिकाराभिप्रायेणाविरुद्धत्वात् ।

**ಅನು.:**– ಹಾಗಾದರೆ ದೇವತೆಗಳಿಗೆ ಅಧಿಕಾರ ಇದೆ ಎನ್ನುವುದಾದರೆ, ಜೈಮಿನಿ ಋಷಿಗಳು ಅಧಿಕಾರ ಇಲ್ಲ ಎಂದು ಅಭಿಪ್ರಾಯಪಟ್ಟಿರುವುದರಿಂದ ಜೈಮಿನಿಮತದ ವಿರೋಧ ಬರುವುದಿಲ್ಲವೇ? ಎಂದರೆ, ವಿರೋಧ ಬರುವುದಿಲ್ಲ. ಏಕೆಂದರೆ – ದೇವತೆಗಳು ಜ್ಞಾನ ಹಾಗೂ ಸ್ಥಾನ ಮೊದಲಾದ ಫಲಗಳನ್ನು ಈಗಾಗಲೇ ಹೊಂದಿದ್ದರಿಂದ ಪಡೆದಿರುವ ಫಲಕ್ಕಾಗಿ (ಆ ಆ ವಿದ್ಯೆಗಳಲ್ಲಿ ಹೇಳಿದ ಫಲಕ್ಕಾಗಿ ಹಾಗೂ ಮೊದಲೇ ಪಡೆದಿರುವ ಜ್ಞಾನಕ್ಕಾಗಿ) ಅಧಿಕಾರ ಇಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ವೇದವ್ಯಾಸರಾದರೂ ಜೈಮಿನಿಗಳು ಹೇಳಿದ ಅಭಿಪ್ರಾಯವನ್ನು ಅಂಗೀಕರಿಸಿ, ಜ್ಞಾನಾದಿಫಲಗಳನ್ನು ದೇವತೆಗಳು ಪಡೆದಿದ್ದರೂ ಸಹ ಉಪಾಸನಾ-ಕರ್ಮಗಳಿಂದಾಗಿ ಅತಿಶಯರೂಪವಾದ ಫಲವು ಅವರಿಗೂ ಇದ್ದೇ ಇದೆಯಾದ್ದರಿಂದ ಆ ವಿಷಯದಲ್ಲಿ ಅಧಿಕಾರ ಕೂಡುತ್ತದೆ ಎಂದು ಅಭಿಪ್ರಾಯಪಟ್ಟಿದ್ದರಿಂದ ಇಬ್ಬರ ಮತಗಳಲ್ಲಿ ಯಾವ ವಿರೋಧವೂ ಇಲ್ಲ.

**ಸೂ.ರ.:– एवं भगवता बादरायणेन देवानां मध्वाद्यशेषविद्या-स्वधिकारभावस्योक्तत्वात् । ततश्च सर्वदेवोपास्यत्वं विष्णोर्युक्तमिति सिद्धम् ।**

**ಅನು.:–** ಈ ರೀತಿಯಾಗಿ ದೇವತೆಗಳಿಗೆ ಮಧುವಿದ್ಯಾದಿ ಎಲ್ಲ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರ ಇದೆ ಎಂದು ವೇದವ್ಯಾಸರು ಸಮರ್ಥಿಸಿದ್ದರಿಂದಾಗಿ, ವಿಷ್ಣುವಿಗೆ ಸರ್ವದೇವೋಪಾಸ್ಯತ್ವವು ಉಪಪನ್ನ ಎಂದು ಸಿದ್ಧವಾಯಿತು.

**ದೇವತಾಧಿಕರಣವು ಮುಗಿಯಿತು.**

*ಅಧಿಕರಣ – 9*

# ಅಪಶೂದ್ರಾಧಿಕರಣ

## ಸಂಗತಿ

**ಸೂ.ರ.:– अत्र त्रिवर्णेतरस्य शूद्रस्य वेदोक्तब्रह्मविद्याधिकारो निराक्रियते ।**

**ಅನು.:–** ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಎಂಬ ಮೂರು ವರ್ಣದವರಿಂದ ಭಿನ್ನರಾದ ಶೂದ್ರರಿಗೆ ವೇದೋಕ್ತಬ್ರಹ್ಮವಿದ್ಯಾಧಿಕಾರವನ್ನು ನಿಷೇಧಿಸುತ್ತಾರೆ ಒಂಭತ್ತನೆಯ ಈ ಅಪಶೂದ್ರಾಧಿಕರಣದಲ್ಲಿ.

ವೇದವಿದ್ಯೆಗಳಲ್ಲಿ ಮನುಷ್ಯರು ಅಧಿಕಾರಿಗಳು ಎಂದು ಹಿಂದೆ ಹೇಳಿದೆ. ಆ ವೇದ-ವಿದ್ಯಾಧಿಕಾರವು ಶೂದ್ರಾದಿಗಳಿಗೂ ಇರುವುದಾದರೆ ಶ್ರುತ್ಯಾದಿವಿರೋಧ ಬರಬೇಕಾಗುತ್ತದೆ. ಆದ್ದರಿಂದ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವು ನಿಷೇಧ್ಯವಾಗಿದೆ. ಹೀಗಾಗಿ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರ ಇದೆಯೇ? ಇಲ್ಲವೇ? ಎಂದು ಚರ್ಚಿಸಿ ವೇದವಿದ್ಯಾಧಿಕಾರ ಇಲ್ಲ ಎಂದು ನಿರ್ಣಯ ಮಾಡುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु शूद्राणां वेदविद्याधिकारो भवेत् । आह हारेत्वेति (छां.४-२-३) श्रुतेः ।**

**ಅನು.:–** ತಮುಹ ಪರಃ ಪ್ರತ್ಯುವಾಚಾಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು (ಛಾಂ.ಉ.4-2-3) ಎಂಬುದಾಗಿ ಶ್ರುತಿ ಇರುವುದರಿಂದ (ಶೂದ್ರನೆಂದು ಸಂಬೋಧಿಸಲ್ಪಟ್ಟ ಪೌತ್ರಾಯಣನನ್ನು ಕುರಿತು ರೈಕ್ವ ಋಷಿಯು ಹೇಳಿದ್ದರಿಂದ) ಶೂದ್ರರಿಗೂ ವೇದವಿದ್ಯಾಧಿಕಾರವು ಇದೆ.

**ಸೂ.ರ.:– मनुष्यत्वात् । भगवता सूत्रकृताऽधिकारप्रयोजकत्वेन मनुष्याधिकारत्वादित्यनेन मनुष्यत्वस्याभिधानात् । अन्यथाऽविशेषात्त्रैवर्णिकस्यापि तन्न स्यात् ।**

**ಅನು.:–** ಅಷ್ಟೇ ಅಲ್ಲದೇ ಮನುಷ್ಯತ್ವ ಹೇತುವಿನಿಂದಲೂ ಸಹ ಶೂದ್ರರಿಗೆ ವೇದವಿದ್ಯಾಧಿಕಾರವು ಉಪಪನ್ನವಾಗುತ್ತದೆ. ಅದರ ಅಭಿಪ್ರಾಯ : ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಎಂಬ ಸೂತ್ರದಿಂದ ವೇದವ್ಯಾಸರು ವೇದವಿದ್ಯಾಧಿಕಾರಕ್ಕೆ ಪ್ರಯೋಜಕವಾಗಿ ಮನುಷ್ಯತ್ವವನ್ನು ಹೇಳಿದ್ದಾರೆ. ಆ ಮನುಷ್ಯತ್ವ ಎನ್ನುವುದು ಶೂದ್ರರು ಹಾಗೂ ದ್ವಿಜಾತಿಗಳು (ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು) ಇಬ್ಬರಲ್ಲಿಯೂ ಸಮಾನವಾಗಿಯೇ ಇದೆ. ಹಾಗಾಗಿ ವೇದವಿದ್ಯಾಧಿಕಾರಕ್ಕೆ ಪ್ರಯೋಜಕವಾದ ಮನುಷ್ಯತ್ವವು ದ್ವಿಜಾತಿಗಳಲ್ಲಿ ಇರುವುದರಿಂದ ಅವರಿಗೆ ವೇದವಿದ್ಯಾಧಿಕಾರ ಹೇಗೆ ಇದೆಯೋ ಅದರಂತೆ ಅಂತಹ ಮನುಷ್ಯತ್ವವು ಶೂದ್ರರಲ್ಲಿಯೂ ಇರುವುದರಿಂದ ಶೂದ್ರರಿಗೂ ವೇದವಿದ್ಯಾಧಿಕಾರ ಇದೆ.

ಶೂದ್ರರಲ್ಲಿ ಮನುಷ್ಯತ್ವ ಇದ್ದರೂ ಅವರಿಗೆ ವೇದವಿದ್ಯಾಧಿಕಾರ ಇಲ್ಲ ಎನ್ನುವುದಾದರೆ ಸಮಾನನ್ಯಾಯದಿಂದ ತ್ರೈವರ್ಣಿಕರಲ್ಲಿ ಮನುಷ್ಯತ್ವ ಇದ್ದರೂ ಅವರಿಗೂ ವೇದವಿದ್ಯಾಧಿಕಾರ ಇಲ್ಲದೇ ಹೋಗಬೇಕಾಗುತ್ತದೆ.

**ಸೂ.ರ.:– शूद्रस्य विशिष्टबुद्ध्यायादेः सत्वात् । तस्य पौत्रायणस्य वैदिकसंवर्ग विद्याध्ययनदर्शनादिति प्राप्ते सूत्रितम् ।**

**ಅನು.:–** ವೇದವಿದ್ಯಾಧಿಕಾರಕ್ಕೆ ಮನುಷ್ಯತ್ವ ಒಂದೇ ಪ್ರಯೋಜಕ ಅಲ್ಲ, ಕಿಂತು

ವಿಶಿಷ್ಟಬುದ್ಧ್ಯಾದಿಗಳೂ ಪ್ರಯೋಜಕವಾಗಿವೆ. ಪ್ರಕೃತದಲ್ಲಿ ಶೂದ್ರರಲ್ಲಿ ಮನುಷ್ಯತ್ವ ಇದ್ದರೂ ವಿಶಿಷ್ಟಬುದ್ಧ್ಯಾದಿಗಳು ಇಲ್ಲದ ಕಾರಣ ಅವರಿಗೆ ವೇದವಿದ್ಯಾಧಿಕಾರ ಕೊಡುವುದಿಲ್ಲ ಎಂದರೆ, ಅದು ಸರಿಯಲ್ಲ.

ಶೂದ್ರರಿಗೆ ಮನುಷ್ಯತ್ವ ಇರುವಂತೆ ವಿಶಿಷ್ಟಬುದ್ಧ್ಯಾದಿಗಳೂ ಇದ್ದೇ ಇವೆ. ಶೂದ್ರರಿಗೆ ವಿಶಿಷ್ಟಬುದ್ಧ್ಯಾದಿಗಳು ಇದ್ದದ್ದು ಎಲ್ಲಿಯೂ ಕಂಡಿಲ್ಲವಲ್ಲ? ಎಂದರೆ, ಅದೂ ಸರಿಯಲ್ಲ. ಛಾಂದೋಗ್ಯೋಪನಿಷತ್ತಿನಲ್ಲಿ ಶೂದ್ರನೆಂದು ಸಂಬೋಧಿಸಲ್ಪಟ್ಟ ಪೌತ್ರಾಯಣನು ವೈದಿಕಸಂವರ್ಗ ವಿದ್ಯಾಧ್ಯಯನ ಮಾಡಿದ್ದು ಕಂಡಿದೆ. ಆದ್ದರಿಂದ ಶೂದ್ರರಿಗೂ ವೇದವಿದ್ಯಾಧಿಕಾರ ಇದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತವನ್ನು ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ शुगस्य तदनादरश्रवणात्तदाद्रवणात्सूच्यते हि ॐ (१.३.३४)**

**ಸೂತ್ರಾರ್ಥ :**– ಅಸ್ಯ = ಈ ಪೌತ್ರಾಯಣ ಎಂಬ ರಾಜನಿಗೆ ತದನಾದರಶ್ರವಣಾತ್ = "ಕಂವರ ಏನಮ್" (ಛಾಂ. 4-1-3) ಎಂಬುದಾಗಿ ಹಂಸಕೃತವಾದ ಅನಾದರಶ್ರವಣ-ನಿಮಿತ್ತದಿಂದಾಗಿ ಶುಕ್ = ಶೋಕವಾಗಿದೆ. ಆದರೂ ಅವನಿಗೆ ಶೋಕ ಇದೆ ಎಂದು ಹೇಗೆ ತಿಳಿಯುತ್ತದೆ? ಎಂದರೆ, ಹಿ = ಯಾವ ಕಾರಣ "ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ" ಎಂಬ ಉತ್ತರವಾಕ್ಯದಿಂದ ಸೂಚ್ಯತೇ = ಅವನಿಗಾದ ಶೋಕವು ಸೂಚಿತವಾಗುತ್ತದೆಯೋ (ಶೋಕವಾಗಿದೆ ಎಂದು ತಿಳಿಯುತ್ತದೆಯೋ) ತಸ್ಮಾತ್ = ಆ ಕಾರಣ ತದಾದ್ರವಣಾತ್ = ಆ ಶೋಕದಿಂದ ಆದ್ರವಣ ಆದದ್ದರಿಂದಲೇನೇ ಶೂದ್ರ ಎಂಬುದಾಗಿ ಪೌತ್ರಾಯಣರಾಜನು ರೈಕ್ವ ಋಷಿಯಿಂದ ಸಂಬೋಧಿಸಲ್ಪಟ್ಟಿದ್ದಾನೆ. ನ ತು ವರ್ಣಾವರತ್ವಾಭಿಪ್ರಾಯೇಣ = ಹೊರತು ಶೂದ್ರಯೋನಿನಿಮಿತ್ತವಾಗಿ ಶೂದ್ರ ಎಂದು ಸಂಬೋಧಿಸಿಕೊಳ್ಳಲ್ಪಟ್ಟಿಲ್ಲ.

ಆದ್ದರಿಂದ ಈ ಜ್ಞಾಪಕಬಲದಿಂದಾಗಿ ಶೂದ್ರರಿಗೆ ವೇದವಿದ್ಯಾಧಿಕಾರವನ್ನು ತಿಳಿಯಲು ಆಗುವುದಿಲ್ಲ ಎಂದು ಅಭಿಪ್ರಾಯ.

### ಸಿದ್ಧಾಂತ

ಶೂದ್ರರಿಗೆ ವೇದವಿದ್ಯಾಧಿಕಾರ ಇಲ್ಲ ಎಂದು ಸಿದ್ಧಾಂತ.

**ಸೂ.ರ.:– एवं च संस्कारविधुरत्वात् । अध्ययनादेः संस्कार-सापेक्षत्वात् । नाग्निरित्यनेन (पैङ्गिश्रुतौ) शूद्रस्य संस्कारनिषेधपरत्वात् ।**

**ततश्च त्रिवर्णेतरस्य शूद्रस्य ब्रह्मविद्याधिकारनिषेध इति सिद्धम् ।**

**ಅನು.:–** ಶೂದ್ರರಿಗೆ ವೇದವಿದ್ಯಾಧಿಕಾರ ಹೇಳಲು ಬರುವುದಿಲ್ಲ. ಏಕೆಂದರೆ - ವೇದಾಧ್ಯಯನಾದಿಗಳು ಸಂಸ್ಕಾರಸಾಪೇಕ್ಷವಾಗಿವೆ. ಶೂದ್ರರಿಗಾದರೂ ಯಾವ ಸಂಸ್ಕಾರಗಳೂ ಇಲ್ಲ. ನಾಗ್ನಿಃ ಎಂಬುದಾಗಿ ಪೈಂಗಿಶ್ರುತಿಯಲ್ಲಿ ಶೂದ್ರರಿಗೆ ಸಂಸ್ಕಾರ ನಿಷೇಧಿಸಿದ್ದಾರೆ. ಹೀಗಾಗಿ ಶೂದ್ರರಿಗೆ ಯಾವಾಗ ಸಂಸ್ಕಾರ ಇಲ್ಲ ಎಂದಾಗುತ್ತದೆ ಆಗ ಆ ಸಂಸ್ಕಾರಸಾಪೇಕ್ಷವಾದ ವೇದಾಧ್ಯಯನಾದಿಗಳೂ ಇಲ್ಲ ಎಂದು ಸಿದ್ಧವಾಗುತ್ತದೆ.

ಮತ್ತೆ ಪೌತ್ರಾಯಣನನ್ನು ಕುರಿತು ರೈಕ್ವ ಋಷಿಗಳು ಶೂದ್ರ ಎಂಬುದಾಗಿ ಸಂಬೋಧಿಸಿದ್ದಾರಲ್ಲ? ಎಂದರೆ, ಸಂಬೋಧಿಸಿದ್ದು ನಿಜ. ಅಂದಮಾತ್ರಕ್ಕೆ ಅವರಲ್ಲಿ ನಿಜವಾಗಿ (ಶೂದ್ರಯೋನಿನಿಮಿತ್ತವಾಗಿ) ಶೂದ್ರತ್ವ ಇದೆ ಎಂದು ಅರ್ಥವಲ್ಲ, ಕಿಂತು ಶೂದ್ರಶಬ್ದಪ್ರವೃತ್ತಿನಿಮಿತ್ತವಾದದ್ದು ಶೋಕದಿಂದ ಆದ್ರವಣ. ಅಲ್ಲಿ ಪೌತ್ರಾಯಣರಿಗೆ ಶೋಕದಿಂದ ಆದ್ರವಣ ಆದ ನಿಮಿತ್ತದಿಂದಾಗಿ ಶೂದ್ರ ಎಂದು ಕರೆದಿದ್ದಾರೆ ಅಷ್ಟೇ.

ಆದ್ದರಿಂದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಎಂಬ ತ್ರೈವರ್ಣಿಕರಿಂದ ಭಿನ್ನರಾದ ಶೂದ್ರರಿಗೆ ವೇದವಿದ್ಯಾಧಿಕಾರವನ್ನು ನಿಷೇಧ ಮಾಡಿದ್ದರಿಂದ, ಶೂದ್ರರಿಗೆ ವೇದವಿದ್ಯಾಧಿಕಾರ ಇಲ್ಲ ಎಂದು ಸಿದ್ಧವಾಗುತ್ತದೆ.

ಸೂತ್ರ – 35

## ಆಕ್ಷೇಪ

**ಸೂ.ರ.:– ननु शूद्रस्य रूढार्थ एवाङ्गीकार्यः । योगाद्रूढेः प्राबल्यात् । पौत्रायणनिदर्शनेनैव शूद्रस्य वेदाधिकारसिद्धेः । शूद्रस्यापि पौत्रायणस्य वैदिकसंवर्गविद्याध्ययनदर्शनात् ।**

**ಅನು.:–** ''ತಮುಹ ಪರಃ ಪ್ರತ್ಯುವಾಚಾಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು'' (ಛಾಂ. 4-2-3) ಎಂಬುದಾಗಿ ಪೌತ್ರಾಯಣನನ್ನು ಕುರಿತು ಶೂದ್ರ ಎಂದು ಸಂಬೋಧನ ಮಾಡಿದಾಗ, ಶುಚಾ ಆದ್ರವಣಾತ್ ಶೂದ್ರಃ (ದುಃಖದಿಂದ ಆದ್ರವಣ ಆಗಿದ್ದರಿಂದ ಶೂದ್ರ) ಎಂಬುದಾಗಿ ಯೌಗಿಕವಾದ ಅರ್ಥವನ್ನು ಯಾಕೆ ಹೇಳಬೇಕು? ಯೋಗಕ್ಕಿಂತಲೂ ರೂಢಿ ಪ್ರಬಲವಾದ್ದರಿಂದ ವರ್ಣಾವರತ್ವನಿಮಿತ್ತವಾಗಿಯೇ ಶೂದ್ರ ಎಂಬುದಾಗಿ ರೂಢವಾದ ಅರ್ಥವನ್ನೇ ಅಂಗೀಕರಿಸೋಣ.

ಪೌತ್ರಾಯಣನು ಶೂದ್ರನಾದರೂ ಸಹ ಅವನಿಗೆ ವೈದಿಕಸಂವರ್ಗವಿದ್ಯಾಧ್ಯಯನ

ಕಂಡಿದ್ದರಿಂದ, ಅಂತಹ ಪೌತ್ರಾಯಣನ ನಿದರ್ಶನ (ದೃಷ್ಟಾಂತ)ದಿಂದಲೇ ಶೂದ್ರರಿಗೂ ವೇದಾಧಿಕಾರ ಇದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– न च पौत्रायणः शूद्र एव नेति वाच्यम् । आह हारेत्वा शूद्रेति (छां.४-२-३) सम्बोधितत्वेन तस्य शूद्रत्वादिति प्राप्ते तन्निरासार्थं सूत्रमाह ।**

**ಅನು.:–** ಪೌತ್ರಾಯಣನು ಶೂದ್ರನೇ ಆಗಿಲ್ಲ, ಹೀಗಾಗಿ ಪೌತ್ರಾಯಣನ ದೃಷ್ಟಾಂತದಿಂದ ಶೂದ್ರರಿಗೆ ವೇದಾಧಿಕಾರವು ಹೇಗೆ ಸಿದ್ಧವಾಗುತ್ತದೆ? ಎಂದು ಶಂಕಿಸುವುದು ಸರಿಯಲ್ಲ. "ಆಹ ಹಾರೇತ್ವಾ ಶೂದ್ರ" ಎಂಬುದಾಗಿ ರೈಕ್ವ ಋಷಿಯಿಂದ ಶೂದ್ರ ಎಂದೇ ಸಂಬೋಧಿಸಲ್ಪಟ್ಟಿದ್ದರಿಂದ, ಪೌತ್ರಾಯಣನು ಶೂದ್ರನೇ ಎಂದು ತಿಳಿದುಬರುತ್ತದೆ. ಆದ್ದರಿಂದ ಪೌತ್ರಾಯಣನ ದೃಷ್ಟಾಂತದಿಂದಾಗಿ ಶೂದ್ರರಿಗೂ ವೇದಾಧಿಕಾರ ಹೇಳಬಹುದು ಎಂಬುದಾಗಿ ಆಕ್ಷೇಪ ಬಂದರೆ, ಆದನ್ನು ನಿರಾಕರಿಸುವುದಕ್ಕಾಗಿ ಸೂತ್ರ ಹೇಳುತ್ತಾರೆ–

**ॐ क्षत्रियत्वावगतेश्चोत्तरत्र चैत्ररथेन लिङ्गात् ॐ (१.३.३५)**

**ಸೂತ್ರಾರ್ಥ:–** ಉತ್ತರತ್ರ = "ಅಯಮಶ್ವತರೀರಥಃ" (ಛಾಂ. 4-2-2) ಎಂಬುದಾಗಿ ಉತ್ತರ ವಾಕ್ಯದಲ್ಲಿ ಶ್ರುತೇನ = ಶ್ರುತವಾಗುತ್ತಿರುವ ಚೈತ್ರರಥೇನ ಲಿಂಗಾತ್ ಚ = ಚಿತ್ರರಥ (ಅಶ್ವತರೀಯುಕ್ತರಥ) ಸಂಬಂಧಿತ್ವ ರೂಪವಾದ ಲಿಂಗದಿಂದಲೂ ಸಹ (ಲಿಂಗವು ಜ್ಞಾಪಕವಾಗಿ ಇರುವುದರಿಂದಲೂ ಸಹ) ಕ್ಷತ್ರಿಯತ್ವಾವಗತೇಃ = ಪೌತ್ರಾಯಣ-ನಿಗೆ ಕ್ಷತ್ರಿಯತ್ವವು ತಿಳಿದುಬರುವುದರಿಂದ ನ ಪೌತ್ರಾಯಣಃ ಶೂದ್ರಃ = ಪೌತ್ರಾಯಣನು ಶೂದ್ರನಲ್ಲ.

**ಸೂ.ರ.:– एवं च पौत्रायणस्य शूद्रत्वे प्रमाणाभावात् । शूद्रशब्देन सम्बोधनस्याप्रामाण्यात् । न च शूद्रशब्देन सम्बोधनमेव तत्र प्रमाणम् । शोकाद्द्रवणयोगेन तत्र शूद्रशब्दस्य प्रवृत्तत्वेन तस्य रूढिलभ्यवर्णावर-कत्वासाधकत्वात् ।**

**ಅನು.:–** ಪೌತ್ರಾಯಣನು ಶೂದ್ರನಾಗಿದ್ದರೆ ಅವನ ದೃಷ್ಟಾಂತದಿಂದಾಗಿ ಶೂದ್ರರಿಗೆ ವೇದಾಧಿಕಾರವು ಸಿದ್ಧಿಸುತ್ತಿತ್ತು. ಆದರೆ ಪೌತ್ರಾಯಣನು ಶೂದ್ರನೇ ಅಲ್ಲ. ಯಾಕೆ? ಪೌತ್ರಾಯಣನು ಶೂದ್ರನಾಗಿದ್ದಾನೆ ಎಂಬ ವಿಷಯದಲ್ಲಿ ಯಾವ ಪ್ರಮಾಣ ಇಲ್ಲ.

ಪ್ರಮಾಣ ಇಲ್ಲ ಎಂದೇಕೆ? ಶೂದ್ರಶಬ್ದದಿಂದ ಸಂಬೋಧನ ಮಾಡಿದ್ದೇ ಪ್ರಮಾಣ ಆಗುವುದಲ್ಲವೇ? ಎಂದರೆ, ಕೇವಲ ಶೂದ್ರಶಬ್ದದಿಂದ ಸಂಬೋಧನ ಮಾಡಿದ್ದು ಆ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ - ಪೌತ್ರಾಯಣನಿಗೆ ಶೋಕಾದ್ರವಣ (ಆದದ್ದರಿಂದಾಗಿ) ಯೋಗದಿಂದಾಗಿ ಅಲ್ಲಿ ಶೂದ್ರಶಬ್ದವು ಪ್ರವೃತ್ತವಾಗಿದೆ. ಹೀಗಾಗಿ ಶೂದ್ರ ಎಂಬ ಸಂಬೋಧನವು ರೂಢಿಲಭ್ಯವಾದ ವರ್ಣಾವರಕತ್ವಕ್ಕೆ ಸಾಧಕವಾಗುವುದಿಲ್ಲ.

**ಸೂ.ರ.:– किं च नासौ पौत्रायणः शूद्रः । महतां क्षत्रियत्वानुभवात् । अन्येपामयमश्वतरीरथ इति चैत्ररथेन लिङ्गेन तत्र क्षत्रियत्वावगतेश्च । ततश्च शूद्रस्य वेदानधिकारत्वं सिद्धम् ।**

**ಅನು.:–** ಮತ್ತು, ಈ ಪೌತ್ರಾಯಣನು ಶೂದ್ರನಾಗಿರಲು ಸಾಧ್ಯವೂ ಇಲ್ಲ. ಏಕೆಂದರೆ ದೊಡ್ಡವರಿಗೆ ಅವನಲ್ಲಿ ಕ್ಷತ್ರಿಯತ್ವದ ಅನುಭವವೂ ಇರುವುದರಿಂದ, ಹಾಗೂ ಉಳಿದವರು ಅಯಮಶ್ವತರೀರಥಃ ಎಂಬ ಉತ್ತರವಾಕ್ಯದಲ್ಲಿ ಚೈತ್ರರಥರೂಪವಾದ (ಅಶ್ವತರೀ-ಯುಕ್ತವಾದ ರಥವು ಪೌತ್ರಾಯಣನದ್ದಾಗಿತ್ತು ಎಂದು ಶ್ರುತವಾಗುತ್ತಿರುವ) ಲಿಂಗದಿಂದಾಗಿ ಅವನಲ್ಲಿ ಕ್ಷತ್ರಿಯತ್ವ ತಿಳಿಯುತ್ತಾರಾದ್ದರಿಂದ ಪೌತ್ರಾಯಣನು ಶೂದ್ರನಾಗಿರಲು ಸಾಧ್ಯವಿಲ್ಲ.

ಹೀಗೆ ಪೌತ್ರಾಯಣನು ನಿಜವಾಗಿ ಶೂದ್ರನೇ ಅಲ್ಲ ಎಂದು ಸಿದ್ಧವಾದ ಮೇಲೆ, ಅವನ ದೃಷ್ಟಾಂತದಿಂದಾಗಿ ಶೂದ್ರರಿಗೆ ವೇದಾಧಿಕಾರವು ಸಿದ್ಧಿಸುವುದಿಲ್ಲ. ಅರ್ಥಾತ್ ಶೂದ್ರರಿಗೆ ವೇದಾಧಿಕಾರವು ಇಲ್ಲ ಎಂದೇ ಸಿದ್ಧವಾಗುತ್ತದೆ.

ಸೂತ್ರ – 36

### ಆಕ್ಷೇಪ

**ಸೂ.ರ.:– ननु शूद्रस्य वेदाधिकारः स्यात् । तस्यापि रथित्वसम्भवात् । रथस्य यत्र वेद इति (ब्रह्मवैवर्ते) वेदव्याप्यत्वाच्छूद्रे च तदभावाद्रथस्याप्यभाव इति शङ्काऽनुदयात् । शूद्रेऽपि वेदाधिकाराङ्गीकारात् । इति प्राप्ते तत्परिहाराय सूत्रं पठति ।**

**ಅನು.:–** ಶೂದ್ರರಿಗೂ ಸಹ ವೇದಾಧಿಕಾರ ಇದೆ. ಅರ್ಥಾತ್ ''ಪೌತ್ರಾಯಣನಿಗೆ ರಥಿತ್ವವು ಶ್ರುತವಾಗುತ್ತಿರುವುದರಿಂದಾಗಿ ಕ್ಷತ್ರಿಯತ್ವವು ತಿಳಿದುಬರುವುದರಿಂದ, ರಥಿತ್ವಲಿಂಗದಿಂದಾಗಿ ಶೂದ್ರರಿಗೆ ವೇದಾಧಿಕಾರ ಇಲ್ಲ ಎಂದು ಹೇಳಬೇಕು'' ಎಂಬುದಾಗಿ

ಹಿಂದೆ ಹೇಳಿದ್ದು ಸರಿಯಲ್ಲ. ಏಕೆಂದರೆ ರಥಿತ್ವಲಿಂಗವು ಕ್ಷತ್ರಿಯರಿಗೆ ಕೊಡುವಂತೆ ಶೂದ್ರರಿಗೂ ಕೂಡಬಹುದಾಗಿದೆ.

ಶೂದ್ರರಿಗೆ ರಥಿತ್ವವು ಹೇಗೆ ಕೂಡುತ್ತದೆ? ಏಕೆಂದರೆ, ಯತ್ರ ವೇದ ಎಂಬುದಾಗಿ ಬ್ರಹ್ಮವೈವರ್ತದಲ್ಲಿ ಹೇಳಿದಂತೆ ರಥವು ವೇದವ್ಯಾಪ್ಯವಾಗಿದೆ ಎಂದು ತಿಳಿದುಬರುತ್ತದೆ. ಅರ್ಥಾತ್ ರಥವು ವೇದದಿಂದ ಅವಿನಾಭೂತವಾಗಿದೆ. ಪ್ರಕೃತದಲ್ಲಿ ಶೂದ್ರರಿಗೆ ವೇದ (ವೇದಾಧ್ಯಯನ) ಇಲ್ಲವಾದ್ದರಿಂದ ರಥವೂ (ರಥಿತ್ವವೂ) ಉಪಪನ್ನವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಕಾರಣ - ಶೂದ್ರರಿಗೂ ವೇದಾಧ್ಯಯನ ಒಪ್ಪಿದ್ದರಿಂದ ರಥವೂ (ರಥಿತ್ವವೂ) ಅವರಿಗೆ ಉಪಪನ್ನವಾಗಬಹುದು. ಆದ್ದರಿಂದ ಶೂದ್ರರಿಗೂ ರಥಿತ್ವ ಹೇಳಬಹುದು ಎಂದಮೇಲೆ ಅವರಿಗೂ ವೇದಾಧಿಕಾರ ಹೇಳಬಹುದು.

ಈ ರೀತಿಯಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ संस्कारपरामर्शात् तदभावाभिलापाच्च ॐ (१.३.३६)

**ಸೂತ್ರಾರ್ಥ :–** ಸಂಸ್ಕಾರಪರಾಮರ್ಶಾತ್ = ''ಅಷ್ಟವರ್ಷಂ ಬ್ರಾಹ್ಮಣಮುಪ-ನಯೀತ । ತಮಧ್ಯಾಪಯೀತ'' ಎಂಬುದಾಗಿ ತಚ್ಛಬ್ದದಿಂದ ಉಪನಯನರೂಪವಾದ ಸಂಸ್ಕಾರಸಹಿತನಾದವನಿಗೆ ವೇದಾಧ್ಯಯನವು ಶ್ರುತವಾಗುತ್ತಿರುವುದರಿಂದ, ಚ = ಮತ್ತು ತದಭಾವಾಭಿಲಾಪಾತ್ = ''ನಾಗ್ನಿರ್ನ ಯಜ್ಞೋ'' ಎಂಬುದಾಗಿ ಪೈಂಗಿಶ್ರುತಿಯಲ್ಲಿ ಶೂದ್ರನಿಗೆ ಸಂಸ್ಕಾರ ಇಲ್ಲ ಎಂದೇ ಹೇಳಿದ್ದರಿಂದ ನ ತಸ್ಯ ವೇದಾಧ್ಯಧಿಕಾರಃ = ಶೂದ್ರರಿಗೆ ವೇದಾದಿಗಳಲ್ಲಿ ಅಧಿಕಾರ ಇಲ್ಲ.

**ಸೂ.ರ.:–** **एवं चाध्ययनार्थं संस्कारसापेक्षत्वावगमात् । शूद्रस्य संस्काराभावस्योक्तत्वात् ।**

**ಅನು.:–** ವೇದಾಧ್ಯಯನ ಮಾಡಬೇಕಾದರೆ ಉಪನಯನ ರೂಪವಾದ ಸಂಸ್ಕಾರ ಆಗಲೇಬೇಕು. ಅರ್ಥಾತ್ ಅಧ್ಯಯನವು ಸಂಸ್ಕಾರಸಾಪೇಕ್ಷವಾಗಿದೆ. ಪ್ರಕೃತದಲ್ಲಿ ''ನಾಗ್ನಿರ್ನ ಯಜ್ಞೋ ನ ಕ್ರಿಯಾ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ'' ಎಂಬುದಾಗಿ ಪೈಂಗಿಶ್ರುತಿಯಲ್ಲಿ ಶೂದ್ರರಿಗೆ ಸಂಸ್ಕಾರ ಇಲ್ಲ ಎಂದೇ ಹೇಳಿದ್ದರಿಂದ, ಸಂಸ್ಕಾರ ಶೂನ್ಯರಾದ ಶೂದ್ರರಿಗೆ (ವೇದಾಧ್ಯಯನ) ವೇದಾಧಿಕಾರ ಇಲ್ಲ.

**ಸೂ.ರ.:– उत्तमस्त्रीणां तु न शूद्रवत् सपत्नीमि(मन्त्रप्रश्न.१-१६)त्यादिष्वधिकारदर्शनात् । स्त्रीणां प्रधानकर्मैवेति व्यासस्मृतेः । तथा च शूद्रस्य वेदानधिकार इति सिद्धम् ।**

**ಅನು.:–** ಸಂಸ್ಕಾರ ಇಲ್ಲದ ಕಾರಣಕ್ಕೆ ಶೂದ್ರರಿಗೆ ವೇದಾಧಿಕಾರ ಇಲ್ಲ ಎನ್ನುವುದಾದರೆ, ಉತ್ತಮಸ್ತ್ರೀಯರಿಗೂ ಉಪನಯನ ಸಂಸ್ಕಾರ ಇಲ್ಲವಾದ್ದರಿಂದ ಉತ್ತಮಸ್ತ್ರೀಯರಿಗೂ ವೇದಾಧಿಕಾರ ಇಲ್ಲದೇ ಹೋಗಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದು ಸರಿಯಲ್ಲ.

ಸಂಸ್ಕಾರಾಭಾವ ನಿಮಿತ್ತದಿಂದ ಶೂದ್ರರಿಗೆ ಹೇಗೆ ವೇದವಿದ್ಯಾಧಿಕಾರ ಇಲ್ಲವೋ ಅದರಂತೆ ಉತ್ತಮಸ್ತ್ರೀಯರಿಗೂ ಸಂಸ್ಕಾರಾಭಾವ ನಿಮಿತ್ತದಿಂದಾಗಿ ವೇದಾಧಿಕಾರ ಇಲ್ಲ ಎನ್ನುವುದು ಸರಿಯಲ್ಲ. "ಸಪತ್ನೀಂ ಮೇ ಪರಾಧಮ" ಇತ್ಯಾದಿ ವಿದ್ಯೆಗಳಲ್ಲಿ ಶಚ್ಯಾದಿಗಳಿಗೆ (ವೇದದ್ರಷ್ಟೃಗಳಾದ್ದರಿಂದ) ಅಧಿಕಾರವು ಕಂಡಿದೆ.

ಅಷ್ಟೇ ಅಲ್ಲದೇ, ಸ್ತ್ರೀಯರಿಗೆ ಸಂಸ್ಕಾರವೇ ಇಲ್ಲ ಎನ್ನುವುದೂ ಸರಿಯಲ್ಲ. "ಸ್ತ್ರೀಣಾಂ ಪ್ರಧಾನಕರ್ಮೈವ ಯಥೋಪನಯನಂ ತಥಾ" ಎಂಬುದಾಗಿ ವ್ಯಾಸಸ್ಮೃತಿ ಇರುವುದರಿಂದ ಬ್ರಾಹ್ಮಣರಿಗೆ ಉಪನಯನವು ಹೇಗೆ ಸಂಸ್ಕಾರವೋ ಅದರಂತೆ ಸ್ತ್ರೀಯರಿಗೆ ವಿವಾಹವೇ ಸಂಸ್ಕಾರವಾಗಿದೆ. ಹೀಗಾಗಿ ಸ್ತ್ರೀಯರಿಗೂ ಸಂಸ್ಕಾರ ಇದ್ದೇ ಇದೆಯಾದ್ದರಿಂದ ಉತ್ತಮ-ಸ್ತ್ರೀಯರಿಗೆ ವೇದವಿದ್ಯಾಧಿಕಾರವನ್ನು ಹೇಳಬಹುದಾಗಿದೆ.

ಆದ್ದರಿಂದ ಸಂಸ್ಕಾರಯುಕ್ತನಾದವನಿಗೇ ಅಧ್ಯಯನವನ್ನು ಹೇಳಿದ್ದರಿಂದ, ನಾಗ್ನಿರ್ನ ಯಜ್ಞಃ ಎಂಬುದಾಗಿ ಶೂದ್ರರಿಗೆ ಸಂಸ್ಕಾರವನ್ನು ನಿಷೇಧ ಮಾಡಿದ್ದರಿಂದಾಗಿ ಶೂದ್ರರಿಗೆ ವೇದಾಧಿಕಾರ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ – 37

## ಆಕ್ಷೇಪ

**ಸೂ.ರ.:– नन्वथाऽपि शूद्रस्य वेदाधिकारो युक्तः । शूद्रं नोपनीयेतेति निषेधाभावेन तस्यापि संस्कारसम्भवात् । नाग्निरिति (पैङ्गि) श्रुतौ तु संस्काराभावस्यैवोक्तत्वेन सर्वथा न कार्यमिति निषेधाभावान्न तद्विरोध इति प्राप्ते सूत्रितम् ।**

**ಅನು.:–** ಆದರೂ ಸಹ ಶೂದ್ರರಿಗೆ ವೇದಾಧಿಕಾರವು ಉಪಪನ್ನವಾಗುತ್ತದೆ. ಏಕೆಂದರೆ "ಅಷ್ಟವರ್ಷಂ ಬ್ರಾಹ್ಮಣಮುಪನಯೀತ" ಎಂಬುದಾಗಿ ಬ್ರಾಹ್ಮಣನಿಗೆ ಉಪನಯನವನ್ನು ವಿಧಾನ ಮಾಡಿದ್ದಾರೆಯೇ ಹೊರತು "ಶೂದ್ರಂ ನೋಪನೀಯೇತ" (ಶೂದ್ರರಿಗೆ ಉಪನಯನ ಮಾಡಬೇಡಿ) ಎಂಬುದಾಗಿ ಶೂದ್ರರಿಗೆ ಉಪನಯನವನ್ನು ನಿಷೇಧ ಮಾಡಿಲ್ಲವಾದ್ದರಿಂದ.

ನಾಗ್ನಿರ್ನ ಯಜ್ಞೋ ನ ಕ್ರಿಯಾ ಎಂಬುದಾಗಿ ಪೈಂಗಿಶ್ರುತಿಯಲ್ಲಿ ನಿಷೇಧ ಮಾಡಿದ್ದಾರಲ್ಲವೇ? ಎಂದರೆ, ಅದು ಸರಿಯಲ್ಲ, ಪೈಂಗಿಶ್ರುತಿಯಲ್ಲಿ ಶೂದ್ರನಿಗೆ ಸಂಸ್ಕಾರದ ಅಭಾವವನ್ನು ಹೇಳಿದ್ದಾರೆಯೇ ಹೊರತು "ಶೂದ್ರರಿಗೆ ಸಂಸ್ಕಾರವನ್ನು ಮಾಡಲೇಬೇಡಿ" ಎಂಬುದಾಗಿ ಸಂಸ್ಕಾರವನ್ನು ಸರ್ವಥಾ ನಿಷೇಧ ಮಾಡಿಲ್ಲ, ಆದ್ದರಿಂದ ಪೈಂಗಿಶ್ರುತಿಯ ವಿರೋಧವೂ ಬರುವುದಿಲ್ಲ.

"ಭೀಮನು ಬರಲಿ" ಎಂಬ ಮಾತಿಗೆ "ಭೀಮನು ಸರ್ವಥಾ ಬರುವುದೇ ಬೇಡ" ಎಂಬ ಮಾತು ವಿರುದ್ಧವಾಗುತ್ತದೆಯೇ ಹೊರತು "ಭೀಮ ಬಂದಿಲ್ಲ" ಎಂಬ ಮಾತು ವಿರುದ್ಧವಾಗುವುದಿಲ್ಲ. ಅದರಂತೆಯೇ "ಶೂದ್ರರಿಗೆ ಸಂಸ್ಕಾರ ಇರಲಿ" ಎಂಬ ಮಾತಿಗೆ "ಶೂದ್ರರಿಗೆ ಸಂಸ್ಕಾರ ಮಾಡಲೇಬಾರದು" ಎಂಬ ಮಾತು ವಿರುದ್ಧವಾಗುತ್ತದೆಯೇ ಹೊರತು "ಶೂದ್ರರಿಗೆ ಸಂಸ್ಕಾರ ಇಲ್ಲ" ಎಂಬ ಮಾತು ವಿರುದ್ಧವಾಗುವುದಿಲ್ಲ. ಪ್ರಕೃತದಲ್ಲಿ "ಶೂದ್ರರಿಗೆ ಸಂಸ್ಕಾರ ಇರಲಿ" ಎಂಬ ನಮ್ಮ ಅಭಿಪ್ರಾಯಕ್ಕೆ "ಶೂದ್ರರಿಗೆ ಸಂಸ್ಕಾರ ಇಲ್ಲ" ಎಂದು ತಿಳಿಸುತ್ತಿರುವ ನಾಗ್ನಿರ್ನ ಯಜ್ಞೋ ನ ಕ್ರಿಯಾ ಎಂಬ ಶ್ರುತಿಯ ವಿರೋಧ ಬರುವುದಿಲ್ಲ ಎಂದು ಅಭಿಪ್ರಾಯ.

ಆದ್ದರಿಂದ ಶೂದ್ರರಿಗೂ ಸಂಸ್ಕಾರವನ್ನು ಅಂಗೀಕರಿಸಬಹುದಾಗಿದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

### ॐ तदभावनिर्धारणे च प्रवृत्तेः ॐ (१.३.३७)

**ಸೂತ್ರಾರ್ಥ :–** ತದಭಾವನಿರ್ಧಾರಣೇ = ಸತ್ಯಕಾಮ ಎಂಬ ಪುರುಷನಿಗೆ ಶೂದ್ರತ್ವಾಭಾವ ನಿಶ್ಚಯವಾದ ನಂತರವೇ ಪ್ರವೃತ್ತೇಶ್ಚ = ಗೌತಮಋಷಿಗಳು ಆ ಸತ್ಯಕಾಮನ ಉಪನಯನದಲ್ಲಿ ಪ್ರವೃತ್ತವಾದದ್ದರಿಂದಲೂ ಸಹ, ಈ ಒಂದು ಜ್ಞಾಪಕ ಇರುವುದರಿಂದಲೂ ಸಹ ಶೂದ್ರರಿಗೆ ಸಂಸ್ಕಾರ ಇಲ್ಲ ಎಂದು ತಿಳಿಯುತ್ತದೆ.

**ಸೂ.ರ.:– एवं च विपक्षे बाधकोक्तिरूपतया व्यतिरेकव्याप्त्युक्तिरूपतया वा सत्यकामस्य शूद्रत्वाभावनिर्णायकत्वेन गौतमस्य प्रवृत्त्युपपत्तेः।**

**नैतदब्राह्मण इति (छां.४-४) श्रुतेः संस्कारनिषेधज्ञापकलिङ्गाच्च । ततश्च शूद्रस्य वेदानधिकारत्वं सिद्धम् ।**

**ಅನು.:-** ಸತ್ಯಕಾಮನು ಗೌತಮರ ಬಳಿ ವೇದಾಧ್ಯಯನಕ್ಕೆ ಬಂದಾಗ, ನಿನ್ನ ಗೋತ್ರ ಯಾವುದು? ಎಂಬುದಾಗಿ ಪ್ರಶ್ನಿಸುತ್ತಾರೆ ಗೌತಮರು. ತನ್ನ ಗೋತ್ರ ತಿಳಿಯದ ಸತ್ಯಕಾಮನು - ''ನಾಹಮೇತದ್ವೇದ ಭೋ ಯದ್ಗೋತ್ರೋಽಹಮಸ್ಮಿ'' (ಛಾಂ.ಉ. 4-4) ನನ್ನ ಗೋತ್ರ ಯಾವುದೆಂದು ನನಗೆ ಗೊತ್ತಿಲ್ಲ ಎಂಬುದಾಗಿ ಸತ್ಯವನ್ನೇ ನುಡಿಯುತ್ತಾನೆ. ಅವನು ಸತ್ಯ ಮಾತನಾಡಿದ್ದನ್ನು ಕೇಳಿದ ಗೌತಮರು - ''ನೈತದಬ್ರಾಹ್ಮಣೋ ವಿವಕ್ತುಮರ್ಹತಿ'' (ಛಾಂ.ಉ. 4-5) ಇವನು ಈ ರೀತಿ ಸತ್ಯವನ್ನು ನುಡಿದಿದ್ದಾನೆ ಎಂದಮೇಲೆ ಇವನು ಬ್ರಾಹ್ಮಣನೇ ಆಗಿರಬೇಕು. (ಶೂದ್ರನಾಗಿರಲು ಸಾಧ್ಯವಿಲ್ಲ) ಎಂಬುದಾಗಿ ನಿರ್ಣಯ ಮಾಡಿಕೊಂಡು ಅವನ ಉಪನಯನ ಮಾಡುವುದರಲ್ಲಿ ಪ್ರವೃತ್ತರಾಗುತ್ತಾರೆ.

ಈ ಗೌತಮರ ಪ್ರವೃತ್ತಿಯು ವಿಪಕ್ಷೇ ಬಾಧಕೋಕ್ತಿ ರೂಪವಾಗಿಯಾದರೂ ಅಥವಾ ವ್ಯತಿರೇಕವ್ಯಾಪ್ತಿ ರೂಪವಾಗಿಯಾದರೂ ಸತ್ಯಕಾಮನಿಗೆ ಶೂದ್ರತ್ವಾಭಾವ-ನಿರ್ಣಾಯಕವಾಗಿರುವುದರಿಂದ, ಮತ್ತು ''ನೈತದಬ್ರಾಹ್ಮಣೋ ವಿವಕ್ತುಮರ್ಹತಿ'' ಎಂಬ ಶ್ರುತಿಯಿಂದಾಗಿ ಶೂದ್ರರಿಗೆ ಸಂಸ್ಕಾರನಿಷೇಧಜ್ಞಾಪಕವಾದ ಲಿಂಗವೂ ಇರುವುದರಿಂದಲೂ ಸಹ ಶೂದ್ರರಿಗೆ ವೇದಾಧಿಕಾರ ಇಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ - 38

## ಆಕ್ಷೇಪ

**ಸೂ.ರ.:- ननु विशेषादित्युक्तरीत्या शूद्रस्यापि विशिष्टबुद्ध्यादि-मत्वेनाधिकारः सिद्ध्येत् । अन्यथा तेन देवताद्यधिकारसिद्धिरपि न स्यादिति प्राप्ते सूत्रमाह ।**

**ಅನು.:-** ''ವಿಶೇಷಾತ್'' ಎಂದು ಹೇಳಿದ ಪ್ರಕಾರ ಶೂದ್ರರಿಗೂ ವಿಶಿಷ್ಟಬುದ್ಧ್ಯಾದಿಗಳು ಇರುವುದರಿಂದ ಅವರಿಗೂ ವೇದಾಧಿಕಾರ ಇರಲಿ. ಒಂದುವೇಳೆ ವಿಶಿಷ್ಟಬುದ್ಧ್ಯಾದಿಗಳು ಇದ್ದರೂ ಶೂದ್ರರಿಗೆ ವೇದಾಧಿಕಾರ ಬೇಡ ಎನ್ನುವುದಾದರೆ, ದೇವತೆಗಳಿಗೂ ಸಹ ವಿಶಿಷ್ಟಬುದ್ಧ್ಯಾದಿಗಳು ಇದ್ದರೂ ವೇದಾಧಿಕಾರ ಇಲ್ಲದೇ ಹೋಗಲಿ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ-

## ॐ श्रवणाध्ययनार्थप्रतिषेधात्स्मृतेश्च ॐ (१.३.३८)

ಶ್ರವಣಾಧ್ಯಯನಾರ್ಥಪ್ರತಿಷೇಧಾತ್ = "ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರ-ಪರಿಪೂರಣಮ್" (ಗೌ.ಧ. 12-4-7) ಎಂಬ ಶ್ರುತಿಯಲ್ಲಿ ಶೂದ್ರನಾದವನಿಗೆ ವೇದಗಳ ಶ್ರವಣ-ಅಧ್ಯಯನ-ಅರ್ಥಾವಧಾರಣಗಳು ನಿಷಿದ್ಧವಾದ್ದರಿಂದ ಸ್ಮೃತೇಶ್ಚ = "ನಾಗ್ನಿರ್ನ ಯಜ್ಞಃ ಶೂದ್ರಸ್ಯ" ಎಂಬುದಾಗಿ ನಿಷೇಧಕ ಸ್ಮೃತಿಯೂ ಇರುವುದರಿಂದ ಶೂದ್ರರಿಗೆ ವೇದಾದಿಗಳಲ್ಲಿ ಅಧಿಕಾರ ಇಲ್ಲ.

**ಸೂ.ರ.:- एवं च शूद्रस्य वेदश्रवणाध्ययनार्थावधारणानां प्रतिषिद्धत्वात् । तथा च अनिषिद्धत्वे सति विशिष्टबुद्ध्यादिमत्त्वस्यैव वेदाधिकार प्रयोजकत्वेनाभिमतत्वात्तस्य च शूद्रेऽभावात् । स्मृत्या च तस्यैवाध्ययननिषेधावगमात् ।**

ಅನು.:- "ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಮ್ । ಅಧ್ಯಯನೇ ಜಿಹ್ವಾಚ್ಛೇದಃ । ಅರ್ಥಾವಧಾರಣೇ ಹೃದಯವಿದಾರಣಮ್" (ಗೌ.ಧ. 12-4-7) ಎಂಬುದಾಗಿ ಶ್ರುತಿಯಲ್ಲಿ ಶೂದ್ರನಾದವನಿಗೆ ವೇದಗಳ ಶ್ರವಣ-ಅಧ್ಯಯನ-ಅರ್ಥಾವಧಾರಣಗಳನ್ನು ನಿಷೇಧಿಸಿದ್ದರಿಂದ ಶೂದ್ರರಿಗೆ ವೇದಾಧಿಕಾರ ಇಲ್ಲ.

ವಿಶಿಷ್ಟಬುದ್ಧ್ಯಾದಿಗಳು ವೇದಾಧಿಕಾರಕ್ಕೆ ಪ್ರಯೋಜಕವಾದ್ದರಿಂದ ಪ್ರಕೃತ ಶೂದ್ರರಿಗೆ ವಿಶಿಷ್ಟಬುದ್ಧ್ಯಾದಿಗಳು ಇರುವುದರಿಂದ ವೇದಾಧಿಕಾರ ಬರಲಿ ಎಂದು ಆಕ್ಷೇಪಿಸುವುದು ಸರಿಯಲ್ಲ. ಯಾಕೆಂದರೆ - ಕೇವಲ ವಿಶಿಷ್ಟಬುದ್ಧ್ಯಾದಿಗಳು ವೇದಾಧಿಕಾರಕ್ಕೆ ಪ್ರಯೋಜಕ-ವಲ್ಲ. ಕಿಂತು ಅನಿಷಿದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಗಳು ಪ್ರಯೋಜಕವಾಗಿವೆ. ಈ ಶೂದ್ರರಿಗೆ ವಿಶಿಷ್ಟಬುದ್ಧ್ಯಾದಿಗಳು ಇದ್ದರೂ ಸಹ ಅಧಿಕಾರವು ನಿಷಿದ್ಧವಾಗಿದ್ದರಿಂದ ಅನಿಷಿದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಗಳು ಇಲ್ಲ. ಹಾಗಾಗಿ ವೇದಾಧಿಕಾರ ಇಲ್ಲ.

**ಸೂ.ರ.:- विदुरादीनामुत्पन्नज्ञानविशेषवत्त्वान्निषेधविषयत्वा-भावेनापवादविषयत्वात् । ततश्च शूद्रादीनामधिकाराभावाच्छूद्रादिभि-र्वेदविद्याविज्ञेयो न भवति भगवान्हरिरिति सिद्धम् ।**

ಅನು.:- ಶೂದ್ರರಿಗೆ ವೇದಾಧಿಕಾರ ಇಲ್ಲವೇ ಇಲ್ಲ ಎಂದು ಹೇಗೆ ಹೇಳುತ್ತೀರಿ? ವಿದುರಾದಿಗಳು ಶೂದ್ರರಾದರೂ ಸಹ ವೇದಾಧ್ಯಯನಾದಿಗಳನ್ನು ಮಾಡಿದ್ದು

ಕಂಡಿದೆಯಲ್ಲ? ಎಂದರೆ, ವಿದುರಾದಿಗಳು ಜ್ಞಾನವಿಶೇಷವನ್ನು ಪಡೆದವರಾದ್ದರಿಂದ ಅವರು ಶ್ರುತಿ-ಸ್ಮೃತಿಗಳ ನಿಷೇಧಕ್ಕೆ ವಿಷಯರಲ್ಲ. ಕಿಂತು ಶೂದ್ರರಿಗೆ ವೇದಾಧಿಕಾರ ಇಲ್ಲ ಎಂಬುದಾಗಿ ಸಾಮಾನ್ಯನಿಯಮವಿದ್ದರೂ ಸಹ ವಿದುರಾದಿಗಳು ಆ ನಿಯಮಕ್ಕೆ ಅಪವಾದರಾಗಿದ್ದಾರೆ. ಅರ್ಥಾತ್ ವಿದುರಾದಿಗಳು ಅಪವಾದಕ್ಕೆ ವಿಷಯರಾಗಿದ್ದಾರೆ.

ಆದ್ದರಿಂದ ವೇದಾಧಿಕಾರಕ್ಕೆ ಪ್ರಯೋಜಕವಾದದ್ದು ಅನಿಷದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಗಳು. ಅವು ಶೂದ್ರರಲ್ಲಿ ಇಲ್ಲದ ಕಾರಣ (ಶೂದ್ರರಲ್ಲಿ ವೇದಾಧಿಕಾರವು ನಿಷಿದ್ಧವಾಗಿದ್ದರಿಂದ) ಶೂದ್ರರಿಗೆ ವೇದಾಧಿಕಾರ ಇಲ್ಲ ಎಂದು ತಿಳಿಯುತ್ತದೆ.

ಯಾವಾಗ ಶೂದ್ರರಿಗೆ ವೇದಾಧಿಕಾರ ಇಲ್ಲ ಎಂದಾಗುತ್ತದೆ ಆಗ ಭಗವಾನ್ ಶ್ರೀಹರಿಯು ಶೂದ್ರಾದಿಗಳಿಂದ ವೇದವಿದ್ಯಾವಿಜ್ಞೇಯನಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಅಪಶೂದ್ರಾಧಿಕರಣವು ಮುಗಿಯಿತು**

*ಅಧಿಕರಣ – 10*

## ಕಂಪನಾಧಿಕರಣ

### ಸಂಗತಿ

**ಸೂ.ರ.:– अत्र वज्रनाम ब्रह्मणि समन्वीयते ।**

**ಅನು.:–** ಲೋಕಪ್ರಸಿದ್ಧಿ ಹಾಗೂ ಭಗವಂತನ ಲಿಂಗ ಇವುಗಳಿಂದಾಗಿ ಸಾಧಾರಣವಾದ ವಜ್ರ- ನಾಮವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ಈ ಹತ್ತನೇ ಕಂಪನಾಧಿಕರಣದಲ್ಲಿ.

ತಮೇವಂ ವಿದ್ವಾನ್ ಇತ್ಯಾದಿಯಾಗಿ ಭಗವಂತನ ಜ್ಞಾನದಿಂದಲೇ ಮೋಕ್ಷ ಎಂದು ಹೇಳಿದೆ. ಕಾಠಕದಲ್ಲಿಯಾದರೂ 'ಯದಿದಂ ಕಿಂಚ' ಎಂಬುದಾಗಿ ವಜ್ರಜ್ಞಾನದಿಂದ ಮೋಕ್ಷ ಎಂದು ಹೇಳಲಾಗುತ್ತಿದೆ. ಆ ವಜ್ರ ವಿಷ್ಣು ಅಲ್ಲ ಎಂದಾದರೆ, ಮತ್ತೊಬ್ಬರ ಜ್ಞಾನದಿಂದ ಮೋಕ್ಷ ಎಂದು ಆಗಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಕಾಠಕದಲ್ಲಿ ಶ್ರುತವಾಗುತ್ತಿರುವ

ಆ ವಜ್ರ ವಿಷ್ಣುವೇ? ಬೇರೆಯೇ? ಎಂದು ಚರ್ಚೆ ಮಾಡಿ, ವಿಷ್ಣುವೇ ಎಂದು ನಿರ್ಣಯ ಮಾಡುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** नतु यदिदं किमि(कठ.६-२)त्यत्रोक्तं वज्रमिन्द्रायुधमेव स्यात् । वज्रश्रुतेः । उद्यतत्वलिंगाच्च । तर्ह्यायुध एवोपपद्यते ।

**ಅನುವಾದ :–**

यदिदं किञ्च जगत्सर्वं प्राण एजति निःसृतम् ।
महद्भयं वज्रमुद्यतं य एतद्विदुरमृतास्ते भवन्ति ॥
(क.उ. २-३-२)

ಎಂಬುದಾಗಿ ಶ್ರುತವಾಗುತ್ತಿರುವ ವಜ್ರವು ಇಂದ್ರದೇವರ ಆಯುಧವೇ ಆಗುತ್ತದೆ. ಯಾಕೆ? "ಮಹದ್‌ಭಯಂ ವಜ್ರಮುದ್ಯತಂ" ಎಂಬುದಾಗಿ ವಜ್ರಶ್ರುತಿ ಇರುವುದರಿಂದ ಹಾಗೂ ಉದ್ಯತತ್ವ ಲಿಂಗವೂ ಇರುವುದರಿಂದ. ಆದ್ದರಿಂದ ಇಲ್ಲಿ ಶ್ರುತವಾಗುತ್ತಿರುವ ವಜ್ರವೆಂದರೆ ಇಂದ್ರಾಯುಧವೇ ಆಗುತ್ತದೆ.

**ಸೂ.ರ.:–** न च वज्रज्ञानेन मोक्षोक्तेर्विष्णुरिति वाच्यम् । लिङ्गमात्राच्छ्रुतिलिङ्गयोः प्राबल्यात् । न च लिङ्गस्य निरवकाशतया प्राबल्यम् । श्रुतिलिङ्गयोरपि निरवकाशत्वात् ।

**ಅನು.:–** ಇಲ್ಲಿ ವಜ್ರಜ್ಞಾನದಿಂದ ಮೋಕ್ಷವನ್ನು ಹೇಳುತ್ತಿದ್ದಾರೆ. ಅರ್ಥಾತ್ ಮೋಕ್ಷಜನಕ ಜ್ಞಾನವಿಷಯತ್ವ ಲಿಂಗವು ಶ್ರುತವಾಗುತ್ತಿದೆ. ಈ ಲಿಂಗವು ವಿಷ್ಣುನಿಷ್ಠವಾದ್ದರಿಂದ ವಿಷ್ಣುವೇ ವಜ್ರಶಬ್ದವಾಚ್ಯನಾಗುತ್ತಾನೆ ಎಂದು ಆಕ್ಷೇಪಿಸುವುದು ಸರಿಯಲ್ಲ. ವಿಷ್ಣುವಿನ ವಿಷಯದಲ್ಲಿ ಮೋಕ್ಷಜನಕ ಜ್ಞಾನವಿಷಯತ್ವ ಎಂಬ ಒಂದು ಲಿಂಗವು ಮಾತ್ರ ಇದೆ. ಆದರೆ ಇಂದ್ರಾಯುಧದ ವಿಷಯದಲ್ಲಿ ಶ್ರುತಿ-ಲಿಂಗ ಎರಡೂ ಇರುವುದರಿಂದ ಪ್ರಾಬಲ್ಯ ಇದೆ. ಹೀಗಾಗಿ ಇಂದ್ರಾಯುಧವೇ ವಜ್ರವಾಗಿದೆ.

ನಿಜವೇ ವಿಷ್ಣುವಿನ ವಿಷಯದಲ್ಲಿ ಒಂದೇ ಲಿಂಗ ಇದ್ದರೂ ಆ ಲಿಂಗವು ನಿರವಕಾಶ-ವಾಗಿರುವುದರಿಂದ ಶ್ರುತಿ-ಲಿಂಗ ಎರಡಕ್ಕಿಂತಲೂ ಇದೇ ಪ್ರಬಲವಾಗುತ್ತದೆಯಲ್ಲವೇ?

ಎಂದರೆ, ಅದು ಸರಿಯಲ್ಲ. ವಿಷ್ಣುವಿನ ವಿಷಯದಲ್ಲಿ ಇರುವ ಮೋಕ್ಷಜನಕಜ್ಞಾನವಿಷಯತ್ವ-ಲಿಂಗವು ಹೇಗೆ ನಿರವಕಾಶವಾಗಿದೆಯೋ ಅದರಂತೆ ಇಂದ್ರಾಯುಧದ ವಿಷಯದಲ್ಲಿ ಇರುವ ಶ್ರುತಿ-ಲಿಂಗಗಳೂ ನಿರವಕಾಶವೇ ಆಗಿವೆ. ಹೀಗಾಗಿ ಶ್ರುತಿ-ಲಿಂಗ ಎರಡೂ ನಿರವಕಾಶ-ವಾದ್ದರಿಂದ ಇವುಗಳಿಗೇನೇ ಪ್ರಾಬಲ್ಯ ಇದೆ.

**ಸೂ.ರ.:– न चैवं सति मोक्षजनकज्ञानविषयत्वलिङ्गस्य विष्णवैक-निष्ठत्वविघातादस्य वज्रस्येन्द्रायुधत्वं नानिष्टमिति वाच्यम् । फलोपहितस्य मोक्षजनकज्ञानविषयत्वलिङ्गस्याविघातेऽपि तद्योग्यत्वरूपलिङ्गस्य विष्णवैक-निष्ठत्वविघातात् । ततश्च वज्रमिन्द्रायुधमेवेति न विष्णुज्ञानादेव मोक्ष इति प्राप्ते सूत्रमाह ।**

**ಅನು.:–** ಆದ್ದರಿಂದ ಇಲ್ಲಿ ಶ್ರುತವಾಗುತ್ತಿರುವ ವಜ್ರವು ಇಂದ್ರಾಯುಧವೇ ಆಗುತ್ತದೆ. ಹೀಗಾಗಿ ವಜ್ರಜ್ಞಾನದಿಂದಲೇ ಮೋಕ್ಷವಾಗುತ್ತದೆ. ಹೊರತು ವಿಷ್ಣುಜ್ಞಾನದಿಂದಲೇ ಮೋಕ್ಷ ಅಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ–

### ॐ कम्पनात् ॐ (१.३.३९)

ಮಹದ್ಭಯಂ ವಜ್ರಮ್ ಎಂಬುದಾಗಿ ಶ್ರುತವಾಗುತ್ತಿರುವ ವಜ್ರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನೆ ಹೊರತು ಇಂದ್ರಾಯುಧ ಆಗುವುದಿಲ್ಲ. ಕುತಃ = ಯಾಕೆ? ಕಂಪನಾತ್ = "ಸರ್ವಂ ಪ್ರಾಣ ಏಜತಿ" (ಕಠ 2-3-2) ಎಂಬುದಾಗಿ ಕಂಪನಶಬ್ದಿತ ಸರ್ವಚೇಷ್ಟಕತ್ವ ಲಿಂಗವು ಶ್ರುತವಾಗುತ್ತಿರುವುದರಿಂದ.

### ಸಿದ್ಧಾಂತ

**ಸೂ.ರ.:– एवं चैजतीति कंपनवचनात् । अमृतास्त (कठ.२-३-२) इति फलोपहितमोक्षजनकज्ञानविषयत्वाभिधानात् ।**

**ಅನು.:–** "ಸರ್ವಂ ಪ್ರಾಣ ಏಜತಿ" ಎಂಬುದಾಗಿ ಕಂಪನಶಬ್ದಿತವಾದ ಸರ್ವಚೇಷ್ಟಕತ್ವ ಲಿಂಗವು ಶ್ರುತವಾಗುತ್ತಿರುವುದರಿಂದ, "ಅಮೃತಾಸ್ತೇ ಭವಂತಿ" ಎಂಬುದಾಗಿ ಫಲೋಪಸಹಿತ ಮೋಕ್ಷಜನಕಜ್ಞಾನವಿಷಯತ್ವವನ್ನು ಹೇಳಿದ್ದರಿಂದ, ಅದು ವಿಷ್ಣುಮಾತ್ರನಿಷ್ಠವಾದ್ದರಿಂದ ವಜ್ರಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

**ಸೂ.ರ.:– न चोद्यतत्वलिङ्गविरोधः । उद्यतत्वलिङ्गस्योद्यमित्त्वार्थत्वेन सावकाशत्वात् ।**

**ಅನು.:–** ವಜ್ರಮುದ್ಯತಂ ಎಂಬುದಾಗಿ ಉದ್ಯತತ್ವ ಲಿಂಗವು ಶ್ರುತವಾಗುತ್ತಿದೆ. ಅದು ಇಂದ್ರಾಯುಧದಲ್ಲಿ ನಿರವಕಾಶವಾಗಿದೆ. ಹೀಗಾಗಿ ಉದ್ಯತತ್ವ ಲಿಂಗವಿರೋಧ ಬರುತ್ತದೆ-ಯಲ್ಲವೇ? ಎಂದರೆ, ಅದೂ ಸರಿಯಲ್ಲ. ಉದ್ಯತತ್ವ ಲಿಂಗಕ್ಕೆ ಉದ್ಯಮಿತ್ವ ಎಂದು ಅರ್ಥ ಇರುವುದರಿಂದ ಸಾವಕಾಶವಾಗಿದೆ. ಹೀಗಾಗಿ ಉದ್ಯತತ್ವ ಲಿಂಗವಿರೋಧ ಬರುವುದಿಲ್ಲ.

**ಸೂ.ರ.:– न च वज्रश्रुतिविरोधः । वज्रश्रुतेरपि वर्जनाद्वज्र इति उच्यत इति वचनात्सावकाशत्वात् । ततश्च विष्णुरेव वज्र इति तस्यैवमोक्ष जनकज्ञानयोग्यतेति सिद्धम् ।**

**ಅನು.:–** ಹಾಗಾದರೆ ವಜ್ರಶ್ರುತಿವಿರೋಧ ಬರುವುದಿಲ್ಲವೇ? ಎಂದರೆ, ಅದೂ ಸರಿಯಲ್ಲ. ''ವರ್ಜನಾತ್ ವಜ್ರ ಉಚ್ಯತೇ'' ಎಂದು ಹೇಳಿದ ಪ್ರಕಾರ ವಜ್ರಶಬ್ದವೂ ವಿಷ್ಣುವಿನಲ್ಲಿಯೇ ಸಮನ್ವಯ ಹೊಂದುವುದರಿಂದ ಅರ್ಥಾತ್ ವಜ್ರಶ್ರುತಿಯೂ ಸಾವಕಾಶವಾಗಿದ್ದರಿಂದ ವಜ್ರಶ್ರುತಿಯ ವಿರೋಧವೂ ಬರುವುದಿಲ್ಲ.

ಆದ್ದರಿಂದ, ಸರ್ವಂ ಪ್ರಾಣ ಏಜತಿ ಎಂಬುದಾಗಿ ಸರ್ವಚೇಷ್ಟಕತ್ವ ಲಿಂಗವು ಶ್ರುತವಾಗುತ್ತಿರುವುದರಿಂದ ಹಾಗೂ ಅಮೃತಾಸ್ತೇ ಭವಂತಿ ಎಂಬುದಾಗಿ ಫಲೋಪಹಿತ ಮೋಕ್ಷಜನಕಜ್ಞಾನವಿಷಯತ್ವವೂ ಶ್ರುತವಾಗುತ್ತಿರುವರಿಂದ ''ಯದಿದಂ ಕಿಂಚ ..... ''ಮಹದ್ಭಯಂ ವಜ್ರಮುದ್ಯತಂ'' ಎಂದು ಶ್ರುತವಾಗುತ್ತಿರುವ ವಜ್ರವು ವಿಷ್ಣುವೇ, ವಿಷ್ಣುವಿನ ಜ್ಞಾನದಿಂದಲೇ ಮೋಕ್ಷ ಎಂದು ಸಿದ್ಧವಾಗುತ್ತದೆ.

ಕಂಪನಾಧಿಕರಣವು ಮುಗಿಯಿತು.

ಅಧಿಕರಣ-11

# ಜ್ಯೋತಿರಧಿಕರಣ

**ಸೂ.ರ.:– अत्रोभयत्र प्रसिद्ध ज्योतिर्नाम ब्रह्मणि समन्वीयते ।**

**ಅನು.:–** ಜೀವ ಪರಮಾತ್ಮ ಇಬ್ಬರೂ ಜ್ಞಾನರೂಪ-ಹೃದಯಸ್ಥರಾದ್ದರಿಂದ ಇಬ್ಬರಲ್ಲಿ ಪ್ರಸಿದ್ಧವಾದ ಜ್ಯೋತಿರ್ನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಹನ್ನೊಂದನೇ ಈ ಜ್ಯೋತಿರಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु जीव एवेदं ज्योतिः । स समान इति (बृ.६-३-७) जीवलिङ्गात् । इमं लोकमिति श्रुतेश्च । किञ्चास्यादित्यज्योतिरि-(बृ.६-३-२)त्यादिनाऽऽत्मज्योतिष्ट्वमुक्त्वा कतम आत्मेति (बृ.६-३-२) प्रश्ने ज्योतिराम्नायते । न च तद्विष्णोः सम्भवति । न तत्र सूर्यो भाती (कठ.२-५-९५)त्यादेः । न च यस्यादित्यादिज्योतिष्ट्वमुक्तं सजीव एवास्त्विति । तस्यैवेत्यत्र परमात्मज्योतिष्ट्वमुक्त्वा कतम आत्मेति प्रश्ने ज्योतिपाम्नानाज्ज्योतिर्विष्णुरिति । तथा सति परमात्मन उदयास्तमयादि-शून्यत्वेन सदा सद्भावात् । आदित्येनैवायामित्याद्यवधारणं न स्यात् । अत्रायं पुरुषः स्वयं ज्योतिर्भवतीत्यस्यैवार्थस्य प्रत्यभिज्ञानाच्च । तस्मादिदं ज्योतिर्जीव एवेति प्राचीनब्रह्मत्वोपादनमयुक्तम् इति प्राप्ते सूत्रमाह ।**

**ಅನು.:–** 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮ ಎಂದು ಹೇಳಲಾಗಿದೆ. ಈ ಜ್ಯೋತಿಯು 'ಯೋಽಯಂ ವಿಜ್ಞಾನಮಯಃ' ಇತ್ಯಾದಿಯಾಗಿ ಬೃಹದಾರಣ್ಯದಲ್ಲಿ ಶ್ರುತವಾಗುತ್ತಿದೆ. ಈ ಜ್ಯೋತಿ ಯಾರು? ಎಂದು ನಿರ್ಣಯಿಸಬೇಕಿದೆ.

ಈ ಜ್ಯೋತಿಯು ವಿಷಯ. ವಿಷ್ಣುವೋ? ಜೀವನೋ? ಎಂದು ಸಂಶಯ.

ಈ ಜ್ಯೋತಿಯು ಜೀವನೇ ಎಂದು ಪೂರ್ವಪಕ್ಷ. 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' (ನಿರ್ವಿಕಾರನಾಗಿ, ಸದಾ ಏಕಪ್ರಕಾರನಾಗಿ ಭೂಲೋಕ-ಸ್ವರ್ಗಲೋಕಗಳಲ್ಲಿ ಸಂಚರಿಸುತ್ತಾನೆ) ಎಂಬುದಾಗಿ ಉಭಯಲೋಕ ಸಂಚಾರ ರೂಪವಾದ ಜೀವಲಿಂಗವು ಶ್ರುತವಾಗುತ್ತಿರುವುದರಿಂದ ಮತ್ತು 'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ' (ಜೀವನು ಬಹುಪಾಪಗಳಿಗೆತ ಕಾರಣವಾದ, ಅಂತೆಯೇ, ಮೃತ್ಯುರೂಪವಾದ ಭೋಲೋಕವನ್ನು-ಜಾಗ್ರದವಸ್ಥೆಯನ್ನು ದಾಟುತ್ತಾನೆ) ಎಂಬುದಾಗಿ ಶ್ರುತಿಯೂ ಇರುವುದರಿಂದ.

ಮತ್ತು 'ಕಿಂ ಜ್ಯೋತಿರಯಂ ಪುರುಷ ಇತ್ಯಾದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ' ಇತ್ಯಾದಿಯಾಗಿ ಯಾವ ಸಂಸಾರಿ ಜೀವನಿಗೆ ಆದಿತ್ಯ ಮೊದಲಾದವರು ಜ್ಞಾನಸಾಧನ ಎಂದು ಹೇಳಲ್ಪಟ್ಟಿದೆಯೋ ಅದೇ ಸಂಸಾರಿ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ಶ್ರುತಿಯಲ್ಲಿ ಆತ್ಮನು ಜ್ಞಾನಸಾಧನ ಎಂದು ಹೇಳಿದಾಗ 'ಕತಮ ಆತ್ಮಾ' ಎಂಬುದಾಗಿ ಆ ಆತ್ಮನ ಬಗ್ಗೆ ಪ್ರಶ್ನಿಸಿದಾಗ 'ಜ್ಯೋತಿಃ' ಎಂದು ಶ್ರುತವಾಗುತ್ತಿದೆ. ವಿಷ್ಣುವಿಗೆ ಆದಿತ್ಯ ಮೊದಲಾದವರು ಜ್ಞಾನಸಾಧನರಾಗುವುದು ಯುಕ್ತವಲ್ಲ. 'ನ ತತ್ರ ಸೂರ್ಯೋ ಭಾತಿ' (ವಿಷ್ಣುವಿಗೆ ಸೂರ್ಯನು ಬೆಳಕಲ್ಲ) ಇತ್ಯಾದಿ ಶ್ರುತಿಯಿರುವುದರಿಂದ.

ಯಾರಿಗೆ ಆದಿತ್ಯ ಮೊದಲಾದವರು ಜ್ಞಾನಸಾಧನ ಎಂದು ಶ್ರುತಿಯು ಹೇಳಿದೆಯೋ ಅವನು ಜೀವನೇ ಆಗಿರಲಿ; (ಆದಿತ್ಯಾದಿಗಳು ಅಸ್ತಂಗತರಾದಾಗ) ಜೀವಾತ್ಮನಿಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬ ಶ್ರುತಿವಾಕ್ಯದಲ್ಲಿ ಆತ್ಮನು (ಪರಮಾತ್ಮನು) ಜ್ಞಾನಸಾಧನ ಎಂದು ಹೇಳಲಾಗುತ್ತದೆ; ಆಗ 'ಕತಮ ಆತ್ಮಾ' (ಆತ್ಮಾ=ಪರಮಾತ್ಮ ಯಾರು?) ಎಂಬ ಪ್ರಶ್ನೆಯು ಉಂಟಾದಾಗ 'ಜ್ಯೋತಿಃ' ಎಂದು ಹೇಳಿರುವುದರಿಂದ ಪರಮಾತ್ಮನೇ ಜ್ಯೋತಿಯು? ಹೀಗೆ ಹೇಳಲಾಗದು.

ಜೀವನಿಗೆ ಪರಮಾತ್ಮನು ಜ್ಯೋತಿ (ಜ್ಞಾನಸಾಧನ) ಎಂಬ ವಿಷಯವೇ ಅನುಪಪನ್ನವಾದ್ದರಿಂದ. ಹಾಗಾದರೆ (ಪರಮಾತ್ಮನು ಜ್ಯೋತಿಯಾದರೆ) ಪರಮಾತ್ಮನಿಗೆ ಅಸ್ತಮಯ-ಉದಯಗಳು ಇಲ್ಲವಾದ್ದರಿಂದ, ಅವನೇ ಎಚ್ಚರದ ಸ್ಥಿತಿಯಲ್ಲೂ 'ಜ್ಯೋತಿ'ಯಾಗಬಹುದಾದ್ದರಿಂದ 'ಆದಿತ್ಯೇನೈವಾಯಂ ಜ್ಯೋತಿಷಾ ಆಸ್ತೇ' 'ಚಂದ್ರಮಸೈವಾಯಂ ಜ್ಯೋತಿಷಾ ಆಸ್ತೇ' ಎಂಬ ಅವಧಾರಣವು ಅನುಪಪನ್ನ-ವಾಗುವುದರಿಂದ, ಸುಷುಪ್ತಿಯಲ್ಲಿ ಮಾತ್ರ 'ಆತ್ಮೈವಾಸ್ಯ ಜ್ಯೋತಿರ್ಭವತಿ' (ಜೀವನಿಗೆ ಪರಮಾತ್ಮನು ಜ್ಯೋತಿ) ಎಂಬ ಉಕ್ತಿಗೂ ಉಪಪತ್ತಿರಹಿತವಾಗುವುದರಿಂದ.

'ಆತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ' ಎಂಬ ಆತ್ಮ ಪ್ರಶ್ನೋತ್ತರಗಳ ಉಪಸಂಹಾರವಾಕ್ಯದಿಂದ 'ಆತ್ಮೈವ ಅಸ್ಯ ಜ್ಯೋತಿರ್ಭವತಿ' ಎಂಬ ವಾಕ್ಯದಲ್ಲಿ ಹೇಳಿದ ಅರ್ಥದ ಪ್ರತ್ಯಭಿಜ್ಞಾನವೇ (ಸ್ಮರಣಸಹಿತಜ್ಞಾನವೇ) ಆಗುವುದರಿಂದ ಈ ಜ್ಯೋತಿ ಜೀವಾತ್ಮನೇ. ಆದ್ದರಿಂದ ಹಿಂದೆ (1.1.24) ಹೇಳಲ್ಪಟ್ಟ ಜ್ಯೋತಿಯೂ ಅವನೇ ಎಂದು ಭಾವ. ಸಿದ್ಧಾಂತಿಸುವ ಸೂತ್ರವನ್ನು ಪ್ರಸ್ತಾವಿಸಿ ವ್ಯಾಖ್ಯಾನಿಸುತ್ತಾರೆ - ಅತ ಇತಿ।

## ಓಂ ಜ್ಯೋತಿರ್ದರ್ಶನಾತ್ ಓಂ (1.3.40)

**ಸೂತ್ರಾರ್ಥ** :– ಜ್ಯೋತಿಃ='ಯೋಽಯಮಂತರ್ಜ್ಯೋತಿಃ' (ಬೃ.6.3.7) ಎಂಬುದಾಗಿ ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ. ನ ಜೀವಃ=ಹೊರತು ಜೀವನಲ್ಲ. ಯಾಕೆ? ದರ್ಶನಾತ್='ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಬ್ರಹ್ಮ' ಎಂಬುದಾಗಿ ಚತುರ್ವೇದಶಿಖಾ ಶ್ರುತಿ ಇರುವುದರಿಂದ.

### ಸಿದ್ಧಾಂತ

**ಸೂ.ರ.**:– **एवं च विष्णुरेवेदं ज्योतिः । ज्योतिःश्रुतेर्विष्णवैकवाचित्वात् । मुख्यार्थासम्भव एवामुख्यार्थस्य ग्राह्यत्वात् । न च विष्णुपक्ष उभयलोकसञ्चरणानुपपत्तेरमुख्येऽपि जीवरूपोऽर्थो ग्राह्यः । तस्यापि प्राज्ञेनात्मनेति (बृ.६.३.३५) तस्मिन्प्रमाणसिद्धत्वेन मुख्यार्थग्रहणे बाधकाभावात् ।**

**ಅನು.**:– 'ಯೋಽಯಮಂತರ್ಜ್ಯೋತಿಃ' ಎಂಬುದಾಗಿ ಶ್ರುತವಾಗುತ್ತಿರುವ ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಕಾರಣ– ಜ್ಯೋತಿಃಶಬ್ದವು ಮುಖ್ಯವಾಗಿ ವಿಷ್ಣುವಾಚಕವಾಗಿಯೇ ಶ್ರುತವಾಗುತ್ತಿರುವುದರಿಂದ. ಜ್ಯೋತಿಃಶಬ್ದವು ಅಮುಖ್ಯವಾಗಿ ಜೀವವಾಚಕವಾಗಿಯೂ ಶ್ರುತವಾಗುತ್ತಿದೆಯಲ್ಲವೇ? ಎಂಬ ಶಂಕೆ ಬೇಡ. ಮುಖ್ಯಾರ್ಥವನ್ನು ಸ್ವೀಕರಿಸಲು ಸಾಧ್ಯವಾಗದೇ ಇದ್ದಾಗ ಮಾತ್ರವೇ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಪ್ರಕೃತ ಮುಖ್ಯಾರ್ಥನಾದ ವಿಷ್ಣುವನ್ನು ಸ್ವೀಕರಿಸಿದರೆ ಯಾವ ಬಾಧಕವೂ ಇಲ್ಲವಾದ್ದರಿಂದ ಜೀವನನ್ನು ಸ್ವೀಕರಿಸುವ ಅಗತ್ಯವಿಲ್ಲ.

ಜ್ಯೋತಿಃ ಶಬ್ದವಾಚ್ಯನಾಗಿ ವಿಷ್ಣುವನ್ನು ಸ್ವೀಕರಿಸಿದರೆ ಉಭಯಲೋಕ ಸಂಚರಣ ಎಂಬ ಅನುಪಪತ್ತಿ ಬರುವುದರಿಂದ ಜೀವನು ಅಮುಖ್ಯನಾದರೂ ಜೀವನನ್ನು

ಸ್ವೀಕರಿಸುವುದು ಉಚಿತ ಅಲ್ಲವೇ? ಎಂಬ ಶಂಕೆ ಸರಿಯಲ್ಲ. 'ಪ್ರಾಜ್ಞೇನಾತ್ಮನಾ' ಎಂಬುದಾಗಿ ಈಶ್ವರನೇ ಜೀವನನ್ನು ಕರೆದುಕೊಂಡು ಉಭಯಲೋಕಗಳಲ್ಲಿ ಸಂಚರಿಸುತ್ತಾನೆ ಎಂದು ಹೇಳಿರುವುದರಿಂದ ಅದರ ವಿರೋಧ ಬರುವುದಿಲ್ಲ. (ಮುಖ್ಯಾರ್ಥನಾದ ಭಗವಂತನನ್ನು ಸ್ವೀಕರಿಸಿದರೆ ಬಾಧಕವಿಲ್ಲ.)

**ಸೂ.ರ.:– न चेमं लोकमित्याद्युक्तलिङ्गविरोधः अन्तर्णी तणिचूत्वेन तेषामपि सावकाशत्वोपपत्तेः ।**

**ಅನು.:–** ಜ್ಯೋತಿಃ ಶಬ್ದವಾಚ್ಯನಾಗಿ ವಿಷ್ಣುವನ್ನು ಸ್ವೀಕರಿಸಿದರೆ, 'ಇಮಂ ಲೋಕಮತಿಕ್ರಾಮತಿ' ಎಂಬುದಾಗಿ (ಜೀವನು ಮೃತ್ಯುರೂಪವಾದ ಭೂಲೋಕವನ್ನು ದಾಟುತ್ತಾನೆ ಎಂಬುದಾಗಿ) ಹೇಳಿದ ಲಿಂಗದ ವಿರೋಧ ಬರುತ್ತದೆಯಲ್ಲವೇ? ಎಂಬ ಶಂಕೆ ಬೇಡ. ಕಾರಣ– ಅತಿಕ್ರಾಮತಿ ಎನ್ನುವುದು ಅಂತರ್ಣೀತಣಿಜಂತವಾಗಿದೆಯಾದ್ದರಿಂದ ಅವುಗಳೂ ಸಾವಕಾರವಾಗಿದೆ. ಅಂದರೆ– ಅತಿಕ್ರಾಮತಿ (ದಾಟುತ್ತಾನೆ) ಎಂದು ಅರ್ಥವಲ್ಲ, ಕಿಂತು ಅತಿಕ್ರಾಮಯತಿ=ದಾಟಿಸುತ್ತಾನೆ (ಈಶ್ವರನು ಜೀವನನ್ನು ದಾಟಿಸುತ್ತಾನೆ) ಎಂದು ಅರ್ಥ. ಆದ್ದರಿಂದ ಆ ಲಿಂಗದ ವಿರೋಧವೂ ಬರುವುದಿಲ್ಲ.

**ಸೂ.ರ.:– न चादित्यादिज्योतिष्टवविरोधः । तस्य जीवत्वाङ्गीकारात् न च तस्यैव स्वयं ज्योतिष्ट्वेनोक्तस्य ज्योतिष्ट्वमुच्यत इति वाच्यम् । आत्मैवास्य ज्योतिरित्युक्तस्यात्मनः कतम आत्मेति प्रश्ने ज्योतिष्ट्वाभिधानेन जीवस्य प्रसिद्धत्वेन प्रश्नायोग्यतया ज्योतिष्ट्वानभिधानात् । न चावधारणानुपपत्तिः । तस्य बाह्यज्योतिःषु तस्य प्राधान्यज्ञापनार्थत्वात् । अन्यव्यावर्तकत्वस्य वागादिसत्वेनायोगात् । विशिष्यभगवतो ज्योतिष्ट्ववचनं तु स्वापे ज्योतिरन्तराभावाभिप्रायेणेति द्रष्टव्यम् । तस्मादिदं ज्योतिर्विष्णुरिति ज्योतिश्चरणाभिधानादिति प्राग्व्युत्पादितविष्णुत्वं न वाधितमिति सिद्धम् ।**

**ಅನು.:–** ಈ ಜ್ಯೋತಿಸ್ ವಿಷ್ಣು ಆಗಿದ್ದರೆ, ಇದಕ್ಕೆ ಆದಿತ್ಯ ಮೊದಲಾದವರು ಜ್ಞಾನಸಾಧನವಾಗುವುದು ವಿರುದ್ಧವಾಗುತ್ತದೆ ಎಂದರೆ ಇಲ್ಲ. ಆದಿತ್ಯಾದಿಗಳನ್ನು

ಜ್ಞಾನಸಾಧನವಾಗಿ ಹೊಂದಿರುವ 'ಅಯಂ ಪುರುಷಃ' ಎಂದು ಹೇಳಲ್ಪಟ್ಟವನು ಜೀವಾತ್ಮ ಎಂದು ಅಂಗೀಕರಿಸುತ್ತೇವೆ.

'ಅಯಂ ಪುರುಷಃ'– ಈ ಪದಗಳಿಂದ ಹೇಳಲ್ಪಟ್ಟವನೇ 'ಸ್ವಯಂ ಜ್ಯೋತಿಃ' ಎಂದು ಹೇಳಲ್ಪಟ್ಟಿದ್ದಾನೆ ಮತ್ತು ಅವನನ್ನೇ 'ಜ್ಯೋತಿಃ' ಎಂದು ಹೇಳಲಾಗಿದೆ (ಇವುಗಳ ಸಮೀಕರಣದಿಂದ ಜೀವನೇ ಜ್ಯೋತಿಸ್ ಎಂದು ಸಿದ್ಧವಾಗುತ್ತದೆ.) ಎನ್ನುವಂತಿಲ್ಲ. 'ಆತ್ಮೈವಾಸ್ಯ ಜ್ಯೋತಿರ್ಭವತಿ'– ಈ ವಾಕ್ಯದಲ್ಲಿ ಮತ್ತು 'ಕತಮ ಆತ್ಮಾ' –ಈ ವಾಕ್ಯದಲ್ಲಿ 'ಆತ್ಮ ಶಬ್ದದಿಂದ ಹೇಳಲ್ಪಟ್ಟವನು ವಿಷ್ಣು ಆದ್ದರಿಂದ.

ಹೀಗಿದ್ದರೆ 'ಆದಿತ್ಯೇನೈವಾಯಂ ಜ್ಯೋತಿಷಾ,' 'ಚಂದ್ರಮಸೈವಾಯಂ ಜ್ಯೋತಿಷಾ' ಮೊದಲಾದ ಅವಧಾರಣಗಳ ವಿರೋಧವಿದೆ? (ಅವಧಾರಣವು ಇನ್ನೊಂದು ಜ್ಞಾನಸಾಧನವನ್ನು ನಿಷೇಧಿಸುವುದರಿಂದ) ಇಲ್ಲ. ಬಾಹ್ಯಜ್ಞಾನಸಾಧನಗಳ ಮಧ್ಯೆ ಸೂರ್ಯ ಮೊದಲಾದವರಿಗೆ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಅವಧಾರಣವು ಉಪಪನ್ನವಾಗಿದೆ. ಏವಕಾರಕ್ಕೆ ಇನ್ನೊಂದು ಜ್ಞಾನಕಾರಣವಿಲ್ಲ ಎಂದೇಕೆ ವ್ಯಾಖ್ಯಾನಿಸಬಾರದು? ಎಂದರೆ, ಎಚ್ಚರದ ಸ್ಥಿತಿಯಲ್ಲಿ ವಾಗಿಂದ್ರಿಯವೇ ಮೊದಲಾದವುಗಳು ಜಾಗೃತವಿರುವುದರಿಂದ ಇನ್ನೊಂದು ಜ್ಞಾನಕಾರಣವನ್ನು ನಿಷೇಧಿಸಲು ಸಾಧ್ಯವಿಲ್ಲ.

ಪರಮಾತ್ಮನು ಯಾವಾಗಲೂ ಜ್ಞಾನಸಾಧನವಾಗಿರುವಾಗ ಸುಷುಪ್ತಿಗೆ ಮಾತ್ರ ಅನ್ವಯಿಸುವಂತೆ 'ಆತ್ಮೈವಾಸ್ಯ ಜ್ಯೋತಿಃ ಎಂಬ ಉಕ್ತಿಯು ಎಷ್ಟು ಸಮಂಜಸ? ಇಲ್ಲ, ಆಗ ಬೇರೆ ಜ್ಯೋತಿಸ್=ಜ್ಞಾನಸಾಧನವು ಇಲ್ಲ ಎಂಬ ಅಭಿಪ್ರಾಯದಿಂದ ಈ ಉಕ್ತಿಯು ಉಪಪನ್ನವಾಗಿದೆ.

ಆದ್ದರಿಂದ 'ಯೋಽಯಂ ವಿಜ್ಞಾನಮಯಃ' ಎನ್ನುವಲ್ಲಿ ಶ್ರುತವಾಗುತ್ತಿರುವ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ವಿಷ್ಣು ಎಂದು ನಿರ್ಣಯವಾಗುತ್ತದೆ. ಅಂದಮೇಲೆ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ಎಂಬ ಹಿಂದಿನ ಸೂತ್ರದಲ್ಲಿ 'ವಿಷ್ಣು ಜ್ಯೋತಿಃಶಬ್ದವಾಚ್ಯ' ಎಂಬುದಾಗಿ ಹೇಳಿದ್ದು ಸಮಂಜಸವೇ ಆಗಿದೆ (ಬಾಧಿತವಲ್ಲ ಎಂದು ಸಿದ್ಧವಾಗುತ್ತದೆ).

**ಇಲ್ಲಿಗೆ ಜ್ಯೋತಿರಧಿಕರಣವು ಮುಗಿಯಿತು.**

ಅಧಿಕರಣ – 12

# ಆಕಾಶಾಧಿಕರಣ

## ಸಂಗತಿ

**ಸೂ.ರ.:– अत्रोभयत्र प्रसिद्धमाकाशनाम ब्रह्मणि समन्वीयते ।**

**ಅನು.:–** ಪ್ರಯೋಗವಶಾತ್ ಗಗನದಲ್ಲಿ ಹಾಗೂ ಭಗವಂತನಲ್ಲಿ ಸಾಧಾರಣವಾದ ಆಕಾಶನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಈ ಹನ್ನೆರಡನೇ ಆಕಾಶಾಧಿಕರಣದಲ್ಲಿ.

ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಎನ್ನುವಲ್ಲಿ ವಿಷ್ಣುವಿಗೆ ಸರ್ವಾಧಾರತ್ವವನ್ನು ಹೇಳಿದೆ. ಆ ಸರ್ವಾಧಾರತ್ವವು – "ಆಕಾಶೋ ವೈ ನಾಮ ನಾಮರೂಪ ಯೋರ್ನಿರ್ವಹಿತಾ ತೇ ಯದಂತರಾ ತದ್‌ಬ್ರಹ್ಮ ತದಮೃತಮ್" (ಛಾಂ. 8-14-1) ಎಂಬುದಾಗಿ ಛಂದೋಗ-ಶ್ರುತಿಯಲ್ಲಿ ಆಕಾಶಕ್ಕೆ ಶ್ರುತವಾಗುತ್ತಿದೆ. ಈ ಆಕಾಶವು ವಿಷ್ಣು ಅಲ್ಲ ಎಂದಾದರೆ ಸರ್ವಾಧಾರತ್ವವೂ ಮತ್ತೊಬ್ಬರಿಗೆ ಬರಬೇಕಾಗುತ್ತದೆ. ಹೀಗಾಗಿ ಈ ಆಕಾಶವು ವಿಷ್ಣುವೋ ಅಲ್ಲವೋ ಎಂದು ಚರ್ಚಿಸಿ, ಆಕಾಶವು ವಿಷ್ಣುವೇ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वयमाकाशो वै नामे(छां.८-१४-१)त्यत्राकाशः प्रसिद्धाकाश एव स्यात् । तच्छब्दस्याकाशे रूढत्वात् । विष्णौ च यौगिकत्वात् । योगात् रूढेर्बलवत्वात् ।**

**ಅನು.:–** "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ" (ಛಾಂ. 8-14-1) ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಶ್ರುತವಾಗುತ್ತಿರುವ ಆಕಾಶವು ಪ್ರಸಿದ್ಧವಾದ ಆಕಾಶವೇ ಆಗುತ್ತದೆ. ಯಾಕೆಂದರೆ - ಆಕಾಶಶಬ್ದವು ಪ್ರಸಿದ್ಧವಾದ ಆಕಾಶದಲ್ಲಿಯೇ ರೂಢವಾಗಿದೆ.

ಆಕಾಶಶಬ್ದವು ವಿಷ್ಣುವಿನಲ್ಲಿಯೂ ಪ್ರವೃತ್ತವಾಗಿದೆಯಲ್ಲವೇ? ಎಂದರೆ, ನಿಜವೇ.

ಜ್ಞಾನಸಾಧನವಾಗಿ ಹೊಂದಿರುವ 'ಅಯಂ ಪುರುಷಃ' ಎಂದು ಹೇಳಲ್ಪಟ್ಟವನು ಜೀವಾತ್ಮ ಎಂದು ಅಂಗೀಕರಿಸುತ್ತೇವೆ.

'ಅಯಂ ಪುರುಷಃ'– ಈ ಪದಗಳಿಂದ ಹೇಳಲ್ಪಟ್ಟವನೇ 'ಸ್ವಯಂ ಜ್ಯೋತಿಃ' ಎಂದು ಹೇಳಲ್ಪಟ್ಟಿದ್ದಾನೆ ಮತ್ತು ಅವನನ್ನೇ 'ಜ್ಯೋತಿಃ' ಎಂದು ಹೇಳಲಾಗಿದೆ (ಇವುಗಳ ಸಮೀಕರಣದಿಂದ ಜೀವನೇ ಜ್ಯೋತಿಸ್ ಎಂದು ಸಿದ್ಧವಾಗುತ್ತದೆ.) ಎನ್ನುವಂತಿಲ್ಲ, 'ಆತ್ಮೈವಾಸ್ಯ ಜ್ಯೋತಿರ್ಭವತಿ'– ಈ ವಾಕ್ಯದಲ್ಲಿ ಮತ್ತು 'ಕತಮ ಆತ್ಮಾ' –ಈ ವಾಕ್ಯದಲ್ಲಿ 'ಆತ್ಮ' ಶಬ್ದದಿಂದ ಹೇಳಲ್ಪಟ್ಟವನು ವಿಷ್ಣು ಆದ್ದರಿಂದ.

ಹೀಗಿದ್ದರೆ 'ಆದಿತ್ಯೇನೈವಾಯಂ ಜ್ಯೋತಿಷಾ,' 'ಚಂದ್ರಮಸೈವಾಯಂ ಜ್ಯೋತಿಷಾ' ಮೊದಲಾದ ಅವಧಾರಣಗಳ ವಿರೋಧವಿದೆ? (ಅವಧಾರಣವು ಇನ್ನೊಂದು ಜ್ಞಾನಸಾಧನವನ್ನು ನಿಷೇಧಿಸುವುದರಿಂದ) ಇಲ್ಲ. ಬಾಹ್ಯಜ್ಞಾನಸಾಧನಗಳ ಮಧ್ಯೆ ಸೂರ್ಯ ಮೊದಲಾದವರಿಗೆ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಅವಧಾರಣವು ಉಪಪನ್ನವಾಗಿದೆ. ಏವಕಾರಕ್ಕೆ ಇನ್ನೊಂದು ಜ್ಞಾನಕಾರಣವಿಲ್ಲ ಎಂದೇಕೆ ವ್ಯಾಖ್ಯಾನಿಸಬಾರದು? ಎಂದರೆ, ಎಚ್ಚರದ ಸ್ಥಿತಿಯಲ್ಲಿ ವಾಗಿಂದ್ರಿಯವೇ ಮೊದಲಾದವುಗಳು ಜಾಗ್ರತವಿರುವುದರಿಂದ ಇನ್ನೊಂದು ಜ್ಞಾನಕಾರಣವನ್ನು ನಿಷೇಧಿಸಲು ಸಾಧ್ಯವಿಲ್ಲ.

ಪರಮಾತ್ಮನು ಯಾವಾಗಲೂ ಜ್ಞಾನಸಾಧನವಾಗಿರುವಾಗ ಸುಷುಪ್ತಿಗೆ ಮಾತ್ರ ಅನ್ವಯಿಸುವಂತೆ 'ಆತ್ಮೈವಾಸ್ಯ ಜ್ಯೋತಿಃ ಎಂಬ ಉಕ್ತಿಯು ಎಷ್ಟು ಸಮಂಜಸ? ಇಲ್ಲ, ಆಗ ಬೇರೆ ಜ್ಯೋತಿಸ್=ಜ್ಞಾನಸಾಧನವು ಇಲ್ಲ ಎಂಬ ಅಭಿಪ್ರಾಯದಿಂದ ಈ ಉಕ್ತಿಯು ಉಪಪನ್ನವಾಗಿದೆ.

ಆದ್ದರಿಂದ 'ಯೋಽಯಂ ವಿಜ್ಞಾನಮಯಃ' ಎನ್ನುವಲ್ಲಿ ಶ್ರುತವಾಗುತ್ತಿರುವ ಜ್ಯೋತಿಃಶಬ್ದವಾಚ್ಯನಾದ ವ್ಯಕ್ತಿ ವಿಷ್ಣು ಎಂದು ನಿರ್ಣಯವಾಗುತ್ತದೆ. ಅಂದಮೇಲೆ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ಎಂಬ ಹಿಂದಿನ ಸೂತ್ರದಲ್ಲಿ 'ವಿಷ್ಣು ಜ್ಯೋತಿಃಶಬ್ದವಾಚ್ಯ' ಎಂಬುದಾಗಿ ಹೇಳಿದ್ದು ಸಮಂಜಸವೇ ಆಗಿದೆ (ಬಾಧಿತವಲ್ಲ ಎಂದು ಸಿದ್ಧವಾಗುತ್ತದೆ).

**ಇಲ್ಲಿಗೆ ಜ್ಯೋತಿರಧಿಕರಣವು ಮುಗಿಯಿತು.**

ಅಧಿಕರಣ - 12

# ಆಕಾಶಾಧಿಕರಣ

## ಸಂಗತಿ

**ಸೂ.ರ.:– अत्रोभयत्र प्रसिद्धमाकाशनाम ब्रह्मणि समन्वीयते ।**

**ಅನು.:–** ಪ್ರಯೋಗವಶಾತ್ ಗಗನದಲ್ಲಿ ಹಾಗೂ ಭಗವಂತನಲ್ಲಿ ಸಾಧಾರಣವಾದ ಆಕಾಶನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ ಈ ಹನ್ನೆರಡನೇ ಆಕಾಶಾಧಿಕರಣದಲ್ಲಿ.

ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಎನ್ನುವಲ್ಲಿ ವಿಷ್ಣುವಿಗೆ ಸರ್ವಾಧಾರತ್ವವನ್ನು ಹೇಳಿದೆ. ಆ ಸರ್ವಾಧಾರತ್ವವು – "ಆಕಾಶೋ ವೈ ನಾಮ ನಾಮರೂಪ ಯೋರ್ನಿರ್ವಹಿತಾ ತೇ ಯದಂತರಾ ತದ್ ಬ್ರಹ್ಮ ತದಮೃತಮ್" (ಛಾಂ. 8-14-1) ಎಂಬುದಾಗಿ ಛಂದೋಗ-ಶ್ರುತಿಯಲ್ಲಿ ಆಕಾಶಕ್ಕೆ ಶ್ರುತವಾಗುತ್ತಿದೆ. ಈ ಆಕಾಶವು ವಿಷ್ಣು ಅಲ್ಲ ಎಂದಾದರೆ ಸರ್ವಾಧಾರತ್ವವೂ ಮತ್ತೊಬ್ಬರಿಗೆ ಬರಬೇಕಾಗುತ್ತದೆ. ಹೀಗಾಗಿ ಈ ಆಕಾಶವು ವಿಷ್ಣುವೋ ಅಲ್ಲವೋ ಎಂದು ಚರ್ಚಿಸಿ, ಆಕಾಶವು ವಿಷ್ಣುವೇ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वयमाकाशो वै नामे(छां.८-१४-१)त्यत्राकाशः प्रसिद्धाकाश एव स्यात् । तच्छब्दस्याकाशे रूढत्वात् । विष्णौ च यौगिकत्वात् । योगात् रूढेर्बलवत्वात् ।**

**ಅನು.:–** "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ" (ಛಾಂ. 8-14-1) ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಶ್ರುತವಾಗುತ್ತಿರುವ ಆಕಾಶವು ಪ್ರಸಿದ್ಧವಾದ ಆಕಾಶವೇ ಆಗುತ್ತದೆ. ಯಾಕೆಂದರೆ - ಆಕಾಶಶಬ್ದವು ಪ್ರಸಿದ್ಧವಾದ ಆಕಾಶದಲ್ಲಿಯೇ ರೂಢವಾಗಿದೆ.

ಆಕಾಶಶಬ್ದವು ವಿಷ್ಣುವಿನಲ್ಲಿಯೂ ಪ್ರವೃತ್ತವಾಗಿದೆಯಲ್ಲವೇ? ಎಂದರೆ, ನಿಜವೇ.

ವಿಷ್ಣುವಿನಲ್ಲಿ ಪ್ರವೃತ್ತವಾಗಿದೆ. ಹೇಗೆ? ಯೋಗವೃತ್ತಿಯಿಂದ ಪ್ರವೃತ್ತವಾಗಿದೆ. ಆದರೆ ಪ್ರಸಿದ್ಧವಾದ ಆಕಾಶದಲ್ಲಿ ಪ್ರವೃತ್ತವಾಗಿರುವುದು ರೂಢಿವೃತ್ತಿಯಿಂದ. ಯೋಗಾದ್ರೂಢೇಃ ಬಲೀಯಸ್ತ್ವಾತ್ ಎಂಬ ನಿಯಮದಂತೆ ಯೋಗಕ್ಕಿಂತಲೂ ರೂಢಿಯು ಪ್ರಬಲವಾದ್ದರಿಂದ, ಪ್ರಕೃತ ರೂಢಿವೃತ್ತಿಯಿಂದ ಪ್ರಸಿದ್ಧವಾದ ಆಕಾಶವನ್ನು ತೆಗೆದುಕೊಳ್ಳುವುದೇ ಉಚಿತವಾಗುತ್ತದೆ.

**ಸೂ.ರ.:– प्रसिद्धाकाशपरित्यागेन सर्वाधारत्वलिङ्गेन विष्णुग्रहणे वै नामेत्युक्तनिपातद्वयविरोधसद्भावात् । नामरूपनिर्वाहकत्वमात्रस्याकाशपक्षे प्रसिद्धत्वान्निपातविरोधसाम्याभावात् । विष्णुपक्षे विष्णुस्तन्निर्वाहकत्वं चेति द्वयमप्यप्रसिद्धम् ॥ आकाशपक्षे तु तन्निर्वाहकत्वमात्रमप्रसिद्धमिति वैषम्यात् । नामरूपनिर्वाहकत्वलिङ्गं त्वाकाशस्योपादानत्वात्सम्भावितं न तु विष्णोरिति प्राप्ते सूत्रमाह ।**

**ಅನು.:–** ಆಕಾಶಶಬ್ದಕ್ಕೆ ಪ್ರಸಿದ್ಧಾಕಾಶದಲ್ಲಿ ರೂಢಿ ಇದ್ದರೂ ಸಹ ಸರ್ವಾಧಾರತ್ವ ಲಿಂಗದಿಂದಾಗಿ ಪ್ರಸಿದ್ಧ ಆಕಾಶವನ್ನು ಪರಿತ್ಯಾಗ ಮಾಡಿ ವಿಷ್ಣುವನ್ನೇ ಸ್ವೀಕರಿಸುತ್ತೇವೆ ಎಂದರೆ, ಹಾಗಾದರೆ ವೈ ನಾಮ ಎಂಬ ಎರಡು ನಿಪಾತಗಳ ವಿರೋಧ ಬರುತ್ತದೆ.

ಆದರ ಅಭಿಪ್ರಾಯ – ವೈ ನಾಮ ಎಂಬ ನಿಪಾತಗಳು ಯ ಆಕಾಶಃ ಪ್ರಸಿದ್ಧಃ, ಸ ನಾಮರೂಪನಿರ್ವಹಿತಾ ಎಂದು ಉದ್ದೇಶದಿಂದ ಅನ್ವಿತವಾಗಬೇಕು. ಅಥವಾ ಯ ಆಕಾಶಃ ಸ ನಾಮರೂಪನಿರ್ವಹಿತಾ ವೈ ನಾಮ (ತಸ್ಯ ನಾಮರೂಪನಿರ್ವೋಢೃತ್ವಂ ಪ್ರಸಿದ್ಧಮ್) ಎಂಬುದಾಗಿ ವಿಧೇಯದಿಂದಲಾದರೂ ಅನ್ವಿತವಾಗಬೇಕು. ಈ ಎರಡು ವಿಧವಾದ ಅನ್ವಯಗಳೂ ವಿಷ್ಣುವಿನಲ್ಲಿ ಕೂಡುವುದಿಲ್ಲ.

ಅಂದರೆ – ವಿಷ್ಣುವಿನ ಪಕ್ಷದಲ್ಲಿ ವಿಷ್ಣುವೂ ಅಪ್ರಸಿದ್ಧ, ವಿಷ್ಣುವಿಗೆ ನಾಮರೂಪನಿರ್ವಾಹಕತ್ವವೂ ಅಪ್ರಸಿದ್ಧ. ಆದರೆ ಆಕಾಶಪಕ್ಷದಲ್ಲಿ ಆಕಾಶವು ಪ್ರಸಿದ್ಧವೇ ಆಗಿದ್ದರಿಂದ, ಆ ಆಕಾಶಕ್ಕೆ ನಾಮರೂಪನಿರ್ವಾಹಕತ್ವ ಮಾತ್ರವು ಅಪ್ರಸಿದ್ಧವಾಗಿದೆ. ಹೀಗಾಗಿ ವೈಷಮ್ಯ ಇದೆ.

ಆಕಾಶವು ಉಪಾದಾನಕಾರಣವಾದ್ದರಿಂದ ಅದಕ್ಕೆ ನಾಮರೂಪನಿರ್ವಾಹಕತ್ವ ಲಿಂಗವು ಉಪಪನ್ನವಾಗುತ್ತದೆ. ವಿಷ್ಣುವು ಉಪಾದಾನಕಾರಣನಾಗಿಲ್ಲವಾದ್ದರಿಂದ ಅವನಿಗೆ

ನಾಮರೂಪನಿರ್ವಾಹಕತ್ವಲಿಂಗವು ಉಪಪನ್ನವಾಗುವುದಿಲ್ಲ. ಆದ್ದರಿಂದ ಆಕಾಶೋ ವೈ ನಾಮ ಎಂಬುದಾಗಿ ಶ್ರುತವಾಗುತ್ತಿರುವ ಆಕಾಶವು ಪ್ರಸಿದ್ಧವಾದ ಆಕಾಶವೇ ಆಗಿದೆ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ आकाशोऽर्थान्तरत्वादिव्यपदेशात् ॐ (१.३.४१)

ಆಕಾಶಃ = ಆಕಾಶೋ ವೈ ನಾಮ ಎಂಬುದಾಗಿ ಶ್ರುತವಾಗುತ್ತಿರುವ ಆಕಾಶವು ವಿಷ್ಣುವೇ ಆಗುತ್ತಾನೆ. ಹೊರತು ಪ್ರಸಿದ್ಧವಾದ ಅವ್ಯಾಕೃತ ಆಕಾಶವಾಗುವುದಿಲ್ಲ. ಕುತಃ = ಯಾಕೆ? ಅರ್ಥಾಂತರತ್ವಾದಿವ್ಯಪದೇಶಾತ್ = ತೇ ಯದಂತರಾ ಎಂಬ (ಬೃ. 8-14-1) ವಾಕ್ಯದಲ್ಲಿ ವಿಷ್ಣುವಿಗೆ ನಾಮ-ರೂಪರಾಹಿತ್ಯ ಎಂಬ ವಿಲಕ್ಷಣಾರ್ಥತ್ವವನ್ನು ಹಾಗೂ ಆದಿಶಬ್ದ-ಗೃಹೀತವಾದ ಬ್ರಹ್ಮತ್ವ-ಅಮೃತತ್ವಗಳನ್ನು ಹೇಳಿದ್ದರಿಂದ.

### ಸಿದ್ಧಾಂತ

ಸೂ.ರ.:- एवं चोक्तहेतुद्वयसद्भावात् । अनामरूपत्वस्य तल्लक्षणत्वेनावर्णमिति (आथर्वणी) श्रुतिसिद्धत्वात् ।

**ಅನು.:-** ಆಕಾಶೋ ವೈ ನಾಮ ಎಂಬುದಾಗಿ ಶ್ರುತವಾಗುತ್ತಿರುವ ಆಕಾಶವು ವಿಷ್ಣುವೇ ಆಗುತ್ತಾನೆ. ಯಾಕೆ? "ತೇ ಯದಂತರಾ" ಎಂಬುದಾಗಿ ಆ ಆಕಾಶಕ್ಕೆ ನಾಮ-ರೂಪರಾಹಿತ್ಯ ಎಂಬ ವಿಲಕ್ಷಣಾರ್ಥತ್ವವನ್ನು ಹೇಳಿದ್ದರಿಂದ. ಹೌದು, ನಾಮ-ರೂಪರಾಹಿತ್ಯವನ್ನು ಹೇಳಿದ ಮಾತ್ರಕ್ಕೆ ವಿಷ್ಣುವೇ ಎಂದು ಹೇಗೆ ನಿರ್ಣಯ ಮಾಡುತ್ತೀರಿ? ಎಂದರೆ, "ಅವರ್ಣಂ" (ಅವರ್ಣಮಚಕ್ಷುಃ ಶ್ರೋತ್ರಮ್) (ಆಥರ್ವಣೀ ಶ್ರುತಿಃ) ಎಂಬುದಾಗಿ ಶ್ರುತಿಯೇ ಹೇಳುವಂತೆ ನಾಮ-ರೂಪರಾಹಿತ್ಯ ಎನ್ನುವುದು ವಿಷ್ಣುವಿನ ಲಕ್ಷಣವೇ ಆಗಿದೆ. ಹೀಗಾಗಿ ನಾಮ-ರೂಪರಾಹಿತ್ಯ ಲಿಂಗದಿಂದಾಗಿ ವಿಷ್ಣುವೇ ಆಕಾಶ ಎಂದು ಸಿದ್ಧವಾಗುತ್ತದೆ.

ಸೂ.ರ.:- एको दाधारे(ऋ.१-१५४-४)त्यप्रसिद्धत्वाभावेन निपातद्वयाविरोधात् । लोकप्रसिद्ध्यपेक्षया श्रुतिप्रसिद्धेः प्राबल्येन तस्या एव ग्राह्यत्वात् । प्रत्युताकाशस्य नामरूपत्वेनाकाशग्रहण एव विरोधः । ततश्चाकाशो विष्णुरेवेति तस्यैव सर्वाधारत्वमिति सिद्धम् ।

ವಿಷ್ಣುವೇ ಆಕಾಶ ಎನ್ನುವುದಾದರೆ ವೈ ನಾಮ ಎಂಬ ಎರಡು ನಿಪಾತಗಳ ವಿರೋಧ ಬರುತ್ತದೆಯಲ್ಲವೇ? ಎಂದರೆ, ವಿರೋಧ ಬರುವುದಿಲ್ಲ. ವಿಷ್ಣುವಿಗೆ ನಾಮಾದಿ-ನಿರ್ವಾಹಕತ್ವವು ಲೋಕದಲ್ಲಿ ಪ್ರಸಿದ್ಧವಾಗದಿದ್ದರೂ ಸಹ 'ಏಕೋ ದಾಧಾರ ಭುವನಾನಿ ವಿಶ್ವಾ' ಇತ್ಯಾದಿ ವೇದಪ್ರಸಿದ್ಧವಾದ್ದರಿಂದ ವೈ ನಾಮ ಎಂಬ ನಿಪಾತಗಳಿಗೆ ತದರ್ಥತ್ವವು ಉಪಪನ್ನವಾಗುತ್ತದೆ.

ವಿಷ್ಣುವಿಗೆ ನಾಮಾದಿನಿರ್ವಾಹಕತ್ವವು ವೇದಪ್ರಸಿದ್ಧವಾಗಿದೆ. ಆಕಾಶಕ್ಕೆ ನಾಮಾದಿನಿರ್ವಾಹಕತ್ವವು ಲೋಕಪ್ರಸಿದ್ಧವಾಗಿದೆ. ಅಂದಮೇಲೆ ನಿಯಾಮಕ ಏನು? ಎಂದರೆ, ಲೋಕಪ್ರಸಿದ್ಧಿಗಿಂತಲೂ ಶ್ರುತಿಪ್ರಸಿದ್ಧಿಯೇ ಪ್ರಬಲವಾದ್ದರಿಂದ ಶ್ರುತಿಪ್ರಸಿದ್ಧಿಯೇ ಗ್ರಾಹ್ಯವಾಗಿದೆ. ಹೀಗಾಗಿ ನಿಪಾತದ್ವಯವಿರೋಧ ಬರುವುದಿಲ್ಲ.

ವಿಷ್ಣುವಿಗೆ ನಾಮಾದಿರಾಹಿತ್ಯವನ್ನು ಹೇಳಿದರೆ ನಿಪಾತದ್ವಯವಿರೋಧ ಬರುವುದಿಲ್ಲ ಎಂದಷ್ಟೇ ಅಲ್ಲ, ಪ್ರತ್ಯುತ ಪ್ರಸಿದ್ಧ ಆಕಾಶಕ್ಕೆ ನಾಮಾದಿರಾಹಿತ್ಯವನ್ನು ಹೇಳಿದರೇನೇ ನಿಪಾತದ್ವಯವಿರೋಧ ಬರುತ್ತದೆ. ಯಾಕೆ? ಪ್ರಸಿದ್ಧ ಆಕಾಶವೇ ನಾಮಾದಿಗಳುಳ್ಳ-ದ್ದಾದ್ದರಿಂದ ಅದಕ್ಕೆ ನಾಮಾದಿರಾಹಿತ್ಯವನ್ನು ಹೇಳಿದರೇನೇ ವಿರೋಧ ಬರುತ್ತದೆ.

ಆದ್ದರಿಂದ, "ತೇ ಯದಂತರಾ" ಎಂಬುದಾಗಿ ನಾಮ-ರೂಪರಾಹಿತ್ಯ ಎಂಬ ವಿಲಕ್ಷಣಾರ್ಥತ್ವವನ್ನು ಹೇಳಿದ್ದರಿಂದ ಮತ್ತು "ತದ್ ಬ್ರಹ್ಮ" ಎಂಬುದಾಗಿ ಆಕಾಶಕ್ಕೆ ಬ್ರಹ್ಮತ್ವವನ್ನು ಹಾಗೂ ಅಮೃತತ್ವವನ್ನು ಹೇಳಿದ್ದರಿಂದಾಗಿ ಆಕಾಶೋ ವೈ ನಾಮ ಎನ್ನುವಲ್ಲಿ ಪ್ರುತವಾಗುತ್ತಿರುವ ಆಕಾಶವು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಆಕಾಶಾಧಿಕರಣವು ಮುಗಿಯಿತು.

ಅಧಿಕರಣ – 13

# ಸುಷುಪ್ತ್ಯಧಿಕರಣ

## ಸಂಗತಿ

**ಸೂ.ರ.:– अत्र स्वप्नादिद्रष्टृत्वलिङ्गं ब्रह्मणि समन्वीयते ।**

**ಅನು.:**– ಅಸಂಗತ್ವಲಿಂಗದಿಂದಾಗಿ ಹಾಗೂ ಲೋಕಪ್ರಸಿದ್ಧಿಯಿಂದಾಗಿ ಜೀವ-ಬ್ರಹ್ಮರಲ್ಲಿ ಸಾಧಾರಣವಾದ ಸ್ವಪ್ನಾದಿದ್ರಷ್ಟೃತ್ವ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಹದಿಮೂರನೇ ಈ ಸುಷುಪ್ತ್ಯಧಿಕರಣದಲ್ಲಿ.

ಅಸಂಗಮರಸಮ್ ಎಂಬುದಾಗಿ ಪರಮಾತ್ಮನಿಗೆ ಅಸಂಗತ್ವವನ್ನು ಹೇಳಿದೆ. ಈ ಅಸಂಗತ್ವವು ''ಸ ವಾ ಏಷ ಏತಸ್ಮಿನ್ಸಂಪ್ರಸಾದೇ .... ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತಿ ಅಸಂಗೋ ಹ್ಯಯಂ ಪುರುಷಃ'' ಎಂಬುದಾಗಿ ವಾಜಸನೇಯಕದಲ್ಲಿ ಸ್ವಪ್ನಾದಿ-ದ್ರಷ್ಟೃವಾದ ವ್ಯಕ್ತಿಗೆ ಶ್ರುತವಾಗುತ್ತಿದೆ. ಈ ಸ್ವಪ್ನಾದಿದೃಷ್ಟೃವು ವಿಷ್ಣು ಅಲ್ಲ ಎಂದಾದರೆ, ಅಸಂಗತ್ವವೂ ಬೇರೆಯವರಿಗೆ ಹೇಳಬೇಕಾಗುತ್ತದೆ. ಹೀಗಾಗಿ ಸ್ವಪ್ನಾದಿದ್ರಷ್ಟೃವು ವಿಷ್ಣುವೋ? ಅಲ್ಲವೋ? ಎಂದು ಚರ್ಚೆ ಮಾಡಿ ವಿಷ್ಣುವೇ ಸ್ವಪ್ನಾದಿದ್ರಷ್ಟೃವಾಗಿದ್ದಾನೆ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वयं स्वप्नादिद्रष्टा जीवो भवेत् । तस्य तस्मिन्प्रसिद्ध-त्वात् । जीवेशयोरभेदेन जीवेऽप्यमुख्यासङ्गत्वलिङ्गस्यासम्भवात् । अशरीरस्य विष्णोः स्वप्नादिद्रष्टृत्वायोगात् । कारणगतस्य कार्ये सम्भवेऽपि कार्यगतस्य कारणेऽयोगात् ।**

**ಅನು.:**– ಸ್ವಪ್ನಾದಿದ್ರಷ್ಟೃವಾದ ವ್ಯಕ್ತಿ ಜೀವನೇ ಆಗುತ್ತಾನೆ. ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿಯೇ ಪ್ರಸಿದ್ಧವಾಗಿದೆ. ಆದ್ದರಿಂದ ಜೀವನೇ ಸ್ವಪ್ನಾದಿದ್ರಷ್ಟೃವಾಗಬೇಕು.

ಮುಖ್ಯವಾಗಿ ಅಸಂಗತ್ವವು ಪರಮಾತ್ಮನಲ್ಲಿ ಇರುವುದರಿಂದ ಅವನಿಗೇ ಸ್ವಪ್ನಾದಿದ್ರಷ್ಟೃತ್ವವನ್ನು ಹೇಳಬೇಕು. ಇನ್ನು ಜೀವನಲ್ಲಿ ಅಮುಖ್ಯವಾದ ಅಸಂಗತ್ವ

ಇರುವುದರಿಂದ ಜೀವನಿಗೆ ಸ್ವಪ್ನಾದಿದ್ರಷ್ಟೃತ್ವ ಹೇಳಲು ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಜೀವ-ಬ್ರಹ್ಮರಲ್ಲಿ ಐಕ್ಯ ಇರುವುದರಿಂದ ಅಮುಖ್ಯ ಅಸಂಗತ್ವ ಲಿಂಗವನ್ನು ಜೀವನಲ್ಲಿಯೂ ಹೇಳಲು ಬರುವುದಿಲ್ಲ. ಜೀವನಲ್ಲಿಯೂ ಮುಖ್ಯ ಅಸಂಗತ್ವವನ್ನೇ ಹೇಳಬೇಕು ಎಂದು ಭಾವ.

ಅಷ್ಟೇ ಅಲ್ಲದೇ ಪರಮಾತ್ಮನಿಗೆ ಶರೀರವೇ ಇಲ್ಲವಾದ್ದರಿಂದ ಸ್ವಪ್ನಾದಿದ್ರಷ್ಟೃತ್ವವನ್ನು ಹೇಳಲು ಬರುವುದಿಲ್ಲ. ಕಾರಣಗತವಾದದ್ದು ಕಾರ್ಯದಲ್ಲಿ ಇರಬಹುದಾದರೂ, ಕಾರ್ಯಗತವಾದದ್ದು ಕಾರಣದಲ್ಲಿ ಇರಲು ಸಾಧ್ಯವಿಲ್ಲ.

**ಸೂ.ರ.:– जीवेशाभेदस्य विशेषणद्वयसामानाधिकरण्यान्यथाऽनुपपत्त्यैव सिद्धेः । राजासाधारणधर्मस्यापि कोशस्यामात्यगतत्ववदीशासाधारण धर्मस्यासङ्गत्वस्य श्रुतिबलाज्जीवगतत्वसम्भवात् इति प्राप्ते सूत्रितम् ।**

**ಅನು.:–** ಜೀವ-ಬ್ರಹ್ಮರಲ್ಲಿ ಅಭೇದ ಇರುತ್ತಿದ್ದರೆ ಹೀಗೆ ಶಂಕೆ ಕೂಡುತ್ತಿತ್ತು. ಆದರೆ ಅಭೇದವೇ ಸಿದ್ಧವಾಗಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಜೀವ-ಬ್ರಹ್ಮರಲ್ಲಿ ಅಭೇದವೇ ಹೋದರೆ ಅಸಂಗೋ ಹ್ಯಯಂ ಪುರುಷಃ ಎನ್ನುವಲ್ಲಿ ವಿಶೇಷಣದ್ವಯಗಳಲ್ಲಿ ಸಾಮಾನಾಧಿಕರಣ್ಯವು ಕೂಡುವುದಿಲ್ಲ. ಈಗ ವಿಶೇಷಣದ್ವಯಸಾಮಾನಾಧಿಕರಣ್ಯ ಇರುವುದರಿಂದ ವಿಶೇಷಣದ್ವಯ ಸಾಮಾನಾಧಿಕರಣ್ಯಾನ್ಯಥಾನುಪಪತ್ತಿಯಿಂದ ಜೀವ-ಬ್ರಹ್ಮರಲ್ಲಿ ಅಭೇದವು ಸಿದ್ಧವಾಗುತ್ತದೆ.

ಕೋಶವು ರಾಜನ ಅಸಾಧಾರಣಧರ್ಮವಾಗಿದ್ದರೂ ಸಹ ಅಮಾತ್ಯಗತವಾಗುವಂತೆ, ಅಸಂಗತ್ವವು ಬ್ರಹ್ಮನ ಅಸಾಧಾರಣಧರ್ಮವಾಗಿದ್ದರೂ ಸಹ ಶ್ರುತಿಬಲದಿಂದಾಗಿ ಜೀವಗತವಾಗಬಹುದು. ಆದ್ದರಿಂದ ಸ್ವಪ್ನಾದಿದ್ರಷ್ಟೃ ಜೀವನೇ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ सुषुप्त्युत्क्रान्त्योर्भेदेन ॐ (१.३.४२)**

**ಸೂತ್ರಾರ್ಥ :–** ಸಃ = ಯತ್ತತ್ರ ಕಿಂಚಿತ್ಪಶ್ಯತಿ (ಬೃ. 6-3-15) ಎಂಬುದಾಗಿ ಪ್ರಸ್ತುತನಾದ ಸ್ವಪ್ನಾದಿದ್ರಷ್ಟೃವಾದ ವ್ಯಕ್ತಿ ಪರಮಾತ್ಮನೇ. ಜೀವ ಅಲ್ಲ. ಕುತಃ = ಯಾಕೆ? ಅಸಂಗೋ ಹ್ಯಯಂ ಪುರುಷಃ ಎಂದು ಹೇಳಿದ ಅಸಂಗತ್ವ ಲಿಂಗದಿಂದಾಗಿ ಎಂಬ ಹೇತುವನ್ನು ಹೊರಗೇ ಅಧ್ಯಾಹಾರ ಮಾಡಿಕೊಳ್ಳಬೇಕು.

ಜೀವ-ಬ್ರಹ್ಮರಲ್ಲಿ ಅಭೇದ ಇರುವುದರಿಂದ ಜೀವನಲ್ಲಿಯೂ ಅಸಂಗತ್ವವು ಸಂಭಾವಿತವಾಗಿದೆಯಲ್ಲವೇ? ಎಂದರೆ, ಅದಕ್ಕೆ ಹೇಳಿದರು – ಸುಷುಪ್ತ್ಯುತ್ಕ್ರಾಂತ್ಯೋಃ = ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ (ಬೃ. 6-3-21) ಎಂಬುದಾಗಿ, ಪ್ರಾಜ್ಞೇನಾತ್ಮನಾಽನ್ವಾರೂಢಃ (ಬೃ. 6-3-35) ಎಂಬುದಾಗಿಯೂ ಸುಷುಪ್ತಿಪ್ರಕರಣ – ಉತ್ಕ್ರಾಂತಿಪ್ರಕರಣಗಳಲ್ಲಿ ಭೇದೇನ = ಜೀವ-ಬ್ರಹ್ಮರನ್ನು ಭಿನ್ನವಾಗಿ ಹೇಳಿದ್ದರಿಂದ, ನ ತಯೋರೈಕ್ಯಂ=ಜೀವ-ಬ್ರಹ್ಮರಲ್ಲಿ ಐಕ್ಯ ಹೇಳಲು ಬರುವುದಿಲ್ಲ.

## ಸಿದ್ಧಾಂತ

**ಸೂ.ರ.:– एवं चासङ्गत्वलिङ्गात् तद्विष्णोरेवोपपद्यते । न तु जीवस्य । बद्धत्वात् ।**

**ಅನು.:–** ಅಸಂಗೋ ಹ್ಯಯಂ ಪುರುಷಃ ಎಂಬುದಾಗಿ ಅಸಂಗತ್ವ ಲಿಂಗವು ಶ್ರುತವಾಗುತ್ತಿರು- ವುದರಿಂದ ಸ್ವಪ್ನಾದಿದ್ರಷ್ಟೃತ್ವವು ವಿಷ್ಣುವಿಗೇ ಉಪಪನ್ನವಾಗುತ್ತದೆ. ಜೀವನು ಬದ್ಧನಾಗಿದ್ದರಿಂದ (ಅಸಂಗತ್ವ ಇಲ್ಲದ ಕಾರಣ) ಜೀವನಿಗೆ ಸ್ವಪ್ನಾದಿದ್ರಷ್ಟೃತ್ವವು ಉಪಪನ್ನವಾಗುವುದಿಲ್ಲ.

**ಸೂ.ರ.:– सुषुप्त्युत्क्रान्तप्रकरणयोर्भेदाभिधानेन जीवेशयोरभेदाभावात् । अतो गुणगुणिभावापन्नासङ्गत्वलिङ्गाद्विष्णुरेव स्वप्नादिद्रष्टा ।**

**ಅನು.:–** ಜೀವ-ಬ್ರಹ್ಮರಲ್ಲಿ ಅಭೇದ ಇರುವುದರಿಂದ ಅಸಂಗತ್ವವನ್ನು ಜೀವನಲ್ಲಿಯೂ ಹೇಳಬಹುದಲ್ಲವೇ? ಎಂದರೆ, ಅದೂ ಸರಿಯಲ್ಲ. "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ" (ಬೃ.6-3-21) "ಪ್ರಾಜ್ಞೇನಾತ್ಮನಾಽನ್ವಾರೂಢಃ" (ಬೃ. 6-3-35) ಎಂಬುದಾಗಿ ಸುಷುಪ್ತಿಪ್ರಕರಣ-ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವ-ಬ್ರಹ್ಮರಿಗೆ ಭೇದವನ್ನು ಹೇಳಿದ್ದರಿಂದ ಜೀವ-ಬ್ರಹ್ಮರಲ್ಲಿ ಅಭೇದ ಹೇಳುವುದು ಸರಿಯಲ್ಲ. ಆದ್ದರಿಂದ ಅಸಂಗತ್ವವು ವಿಷ್ಣುಮಾತ್ರನಿಷ್ಠವೇ. ಪ್ರಕೃತ ಅಸಂಗತ್ವ ಲಿಂಗವು ಶ್ರುತವಾಗುತ್ತಿರುವುದರಿಂದ ಸ್ವಪ್ನಾದಿದ್ರಷ್ಟೃವಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಸೂ.ರ.:– असङ्गत्वमपीशमात्रनिष्ठम् । ततश्चासङ्गो ह्ययं पुरुष इति वाक्यमपीशपरमेवेति प्रमाणाभावात् । राजधनवदसङ्गत्वं नान्यनिष्ठमिति सिद्धम् ।**

**ಅನು.:–** ಅಸಂಗತ್ವವೂ ಸಹ ಭಗವಂತನಲ್ಲಿ ಮಾತ್ರ ಇರುವುದರಿಂದ ಅಸಂಗೋ ಹ್ಯಯಂ ಪುರುಷಃ ಎಂಬ ಶ್ರುತಿಯು ಭಗವಂತನನ್ನು ಮಾತ್ರ ತಿಳಿಸಿಕೊಡುತ್ತದೆ. ಹೊರತು ಜೀವಪರ ಅಲ್ಲ. ಹೀಗಾಗಿ ರಾಜನ ಧನವು ಹೇಗೆ ರಾಜನಲ್ಲಿ ಮಾತ್ರ ಇರುವಂತಹದ್ದೋ ಅದರಂತೆ ಪ್ರಕೃತ ಅಸಂಗತ್ವವೂ ಭಗವಂತನಲ್ಲಿ ಮಾತ್ರ ಇರುವಂತಹದ್ದಾಗಿದೆ. ಹೊರತು ಜೀವನಲ್ಲಿ ಇಲ್ಲ.

ಸ್ವಪ್ನಾದಿದ್ರಷ್ಟ್ರವಾದ ವ್ಯಕ್ತಿಯ ವಿಷಯದಲ್ಲಿ ಅಸಂಗತ್ವಲಿಂಗವು ಶ್ರುತವಾಗುತ್ತಿರು-ವುದರಿಂದ ಸ್ವಪ್ನಾದಿದ್ರಷ್ಟ್ರವಾದ ವ್ಯಕ್ತಿ ಪರಮಾತ್ಮನೇ ಎಂದು ಸಿದ್ಧವಾಗುತ್ತದೆ.

**ಸುಷುಪ್ತ್ಯಧಿಕರಣವು ಮುಗಿಯಿತು.**

*ಅಧಿಕರಣ – 14*

# ಬ್ರಾಹ್ಮಣಾಧಿಕರಣ (ಪತ್ಯಧಿಕರಣ)

## ಸಂಗತಿ

**ಸೂ.ರ.:– अत्र ब्राह्मणनाम ब्रह्मणि समन्वीयते ।**

**ಅನು.:–** ನಿತ್ಯಮಹಿಮತ್ವ ಲಿಂಗದಿಂದ ಮತ್ತು ಅಜಶ್ರುತಿಯಿಂದ ವಿಷ್ಣು–ವಿರಿಂಚರಲ್ಲಿ ಸಾಧಾರಣವಾದ ಬ್ರಾಹ್ಮಣನಾಮವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಹದಿನಾಲ್ಕನೇ ಈ ಬ್ರಾಹ್ಮಣಾಧಿಕರಣದಲ್ಲಿ.

ಹಿಂದಿನ ಅಧಿಕರಣಗಳಲ್ಲಿ ವಿಷ್ಣುವಿಗೆ ನಿತ್ಯಮಹಿಮತ್ವವು ಹೇಳಲ್ಪಟ್ಟಿದೆ. (ಅನ್ಯಾಪೇಕ್ಷೆ ಇಲ್ಲದೇ ಜಗತ್ಸೃಷ್ಟ್ಯಾದಿಗಳನ್ನು ಉಪಪಾದಿಸಿದ್ದರಿಂದ.) ಈ ನಿತ್ಯಮಹಿಮತ್ವವು ''ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ಕರ್ಮಣಾ ವರ್ಧತೇ ನೋ ಕನೀಯಾನ್'' ಎಂಬುದಾಗಿ ವಾಜಸನೇಯಕದಲ್ಲಿ ಬ್ರಾಹ್ಮಣನಿಗೆ ಶ್ರುತವಾಗುತ್ತಿದೆ. ಈ ಬ್ರಾಹ್ಮಣನು ವಿಷ್ಣುವಿನಿಂದ ಭಿನ್ನನಾದವನು ಎಂದಾದರೆ ನಿತ್ಯಮಹಿಮತ್ವವೂ ಬೇರೆಯವರಿಗೆ ಕೂಡಬೇಕಾಗುತ್ತದೆ. ಆದ್ದರಿಂದ ಈ ಬ್ರಾಹ್ಮಣನು ಯಾರು? ವಿಷ್ಣುವೋ ಅಲ್ಲವೋ ಎಂದು ಚರ್ಚಿಸಿ, ಬ್ರಾಹ್ಮಣನು ವಿಷ್ಣುವೇ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वयं ब्राह्मणो विरिञ्चो भवेत् । अस्मिन्बहुशोऽज-शब्दश्रवणात् ।**

**ಅನು.:–** "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ...." (ಬೃ.ಉ. 6-4-22) ಎಂಬುದಾಗಿ ಶ್ರುತನಾಗುತ್ತಿರುವ ಬ್ರಾಹ್ಮಣನು ವಿರಿಂಚನೇ ಆಗುತ್ತಾನೆ. ಯಾಕೆ? "ಸ ವಾ ಏಷ ಮಹಾನ್ ಅಜ ಆತ್ಮಾ" (ಬೃ.ಉ. 6-4-24) ಎಂಬುದಾಗಿ ಈ ಬ್ರಾಹ್ಮಣನ ವಿಷಯದಲ್ಲಿ ಬಹುಬಾರಿ ಅಜಶಬ್ದವು ಶ್ರುತವಾಗುತ್ತಿರುವುದರಿಂದ. ಈ ಅಜಶಬ್ದವು ವಿರಿಂಚನಲ್ಲಿಯೇ ಪ್ರಸಿದ್ಧವಾಗಿದೆ.

**ಸೂ.ರ.:– न चाजत्वयोगेनाजशब्दो विष्णौ सावकाश इति वाच्यम् । ब्राह्मणशब्दसहपठितस्याजशब्दस्य विष्णावनवकाशात् । न चात्मजशब्देन सहपाठादजशब्दो विष्णौ सावकाश इति वाच्यम् । आत्मशब्दस्यात्मा विरिंच इत्यादिना विरिंचेऽपि प्रवृत्तेः ।**

**ಅನು.:–** ಅಜಶಬ್ದ ಇದ್ದಮಾತ್ರಕ್ಕೆ ವಿರಿಂಚನೇ ಎಂದು ಹೇಗೆ ನಿರ್ಣಯ ಮಾಡಲು ಸಾಧ್ಯ? ಏಕೆಂದರೆ, "ನ ಜಾಯತೇ ಇತಿ ಅಜಃ" ಎಂಬುದಾಗಿ ಯೋಗದಿಂದ ಅಜಶಬ್ದವು ವಿಷ್ಣುವಿನಲ್ಲಿಯೂ ಸಾವಕಾಶವಾಗಬಹುದಲ್ಲವೇ? ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ, ಕೇವಲ ಅಜಶಬ್ದವು ವಿಷ್ಣುವಿನಲ್ಲಿ ಪ್ರವೃತ್ತವಾದರೂ ಸಹ, ಪ್ರಕೃತ ಬ್ರಾಹ್ಮಣಶಬ್ದದಿಂದ ಸಹಪಠಿತವಾಗಿದೆ ಅಜಶಬ್ದ. ಅಂತಹ ಬ್ರಾಹ್ಮಣಶಬ್ದಸಹಪಠಿತವಾದ ಅಜಶಬ್ದವು ವಿಷ್ಣುವಿನಲ್ಲಿ ಪ್ರವೃತ್ತವಾಗುವುದಿಲ್ಲ.

ಅಜಶಬ್ದದ ಜೊತೆಗೆ ಬ್ರಾಹ್ಮಣಶಬ್ದದಂತೆ ಆತ್ಮಶಬ್ದವೂ ಪಠಿತವಾಗಿದೆ. ಆ ಆತ್ಮಶಬ್ದ-ವಾದರೂ ವಿಷ್ಣುವಿಗೆ ಮಾತ್ರವಾಚಕವಾಗಿದೆ. ಅಂದಮೇಲೆ ಆತ್ಮಶಬ್ದದಿಂದ ಸಹಪಾಠ ಇರುವುದರಿಂದ ಅಜಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗಬಹುದಲ್ಲವೇ? ಎಂದರೆ, ಅದೂ ಸರಿಯಲ್ಲ. ಆತ್ಮಶಬ್ದವು ವಿಷ್ಣುಮಾತ್ರ ವಾಚಕವಾಗಿದ್ದರೆ ಈ ರೀತಿ ಹೇಳಬಹುದಿತ್ತು. ಆದರೆ "ಆತ್ಮಾ ವಿರಿಂಚಃ ಸುಮನಾಃ ಸುಧೌತಶ್ಚೇತಿ ಕಥ್ಯತೇ" ಇತ್ಯಾದಿ ಪ್ರಮಾಣದಂತೆ ಆತ್ಮಶಬ್ದವು (ವಿರಿಂಚನಲ್ಲಿಯೂ ಪ್ರವೃತ್ತವಾಗಿದೆ) ವಿರಿಂಚವಾಚಕವೂ ಆಗಿದೆ. ಆದ್ದರಿಂದ ಆತ್ಮಶಬ್ದ ಸಹಪಾಠ ಇದ್ದಮಾತ್ರಕ್ಕೆ ಅಜಶಬ್ದವು ವಿಷ್ಣುವಿನಲ್ಲಿ ಪ್ರವೃತ್ತವಾಗಬೇಕಿಲ್ಲ.

**ಸೂ.ರ.:– न चासङ्गत्वलिङ्गानवकाशान्न विरिञ्चो ब्राह्मण इति वाच्यम् । विष्णुविरिञ्चयोरभेदेनासङ्गत्वलिङ्गस्य तस्मिन् सम्भवात् । तथा च ब्राह्मणो विरिंच इति प्रागुक्तनित्यमहिमत्वं विष्णोरनुपपन्नमिति प्राप्ते सूत्रमाह ।**

**ಅನು.:–** ಈ ಬ್ರಾಹ್ಮಣನ ವಿಷಯದಲ್ಲಿ ಅಸಂಗತ್ವಲಿಂಗವು ಶ್ರುತವಾಗುತ್ತಿದೆ. ಅಸಂಗತ್ವ ಲಿಂಗವಾದರೂ ವಿಷ್ಣುಮಾತ್ರಸಾಧಕವಾದ್ದರಿಂದ ನಿರವಕಾಶವಾಗಿದೆ. ಅಂತಹ ನಿರವಕಾಶವಾದ ಅಸಂಗತ್ವಲಿಂಗದಿಂದಾಗಿ ವಿರಿಂಚನು ಬ್ರಾಹ್ಮಣನಾಗಲು ಸಾಧ್ಯವಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ವಿಷ್ಣು–ವಿರಿಂಚರಲ್ಲಿ ಅಭೇದ ಇರುವುದರಿಂದ ವಿರಿಂಚನಲ್ಲಿಯೂ ಅಸಂಗತ್ವಲಿಂಗವು (ಸಂಭಾವಿತವಾಗಿದೆ) ಉಪಪನ್ನವಾಗುತ್ತದೆ. ಅರ್ಥಾತ್ ಸಾವಕಾಶವಾಗಿದೆ. ಹೀಗಾಗಿ ಅಸಂಗತ್ವಲಿಂಗವು ವಿಷ್ಣುಸಾಧಕವಾಗುವುದಿಲ್ಲ. ಆದ್ದರಿಂದ ಬಹುಬಾರಿ ಅಜಶಬ್ದವು ಶ್ರುತವಾಗುತ್ತಿರುವುದರಿಂದ ವಿರಿಂಚನೇ ಬ್ರಾಹ್ಮಣನಾಗುತ್ತಾನೆ, ಅವನಿಗೇ ಹಿಂದೆ ಹೇಳಿದ ನಿತ್ಯಮಹಿಮತ್ವಾದಿಗಳು ಕೂಡುತ್ತವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ಖಂಡಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

### ॐ पत्यादिशब्देभ्यः ॐ (१.३.४३)

**ಸೂತ್ರಾರ್ಥ :–** ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ (ಬೃ.ಉ.6-4-23) ಎಂಬುದಾಗಿ ಶ್ರುತ್ಯುಕ್ತನಾದ ಬ್ರಾಹ್ಮಣನು ವಿಷ್ಣುವೇ ಆಗುತ್ತಾನೆ. ನ ವಿರಿಂಚಃ = ಹೊರತು ವಿರಿಂಚನು ಬ್ರಾಹ್ಮಣನಾಗಲು ಸಾಧ್ಯವಿಲ್ಲ. ಕುತಃ = ಯಾಕೆ? ಪತ್ಯಾದಿಶಬ್ದೇಭ್ಯಃ = ಸರ್ವಸ್ಯಾಧಿಪತಿಃ ಇತ್ಯಾದಿಯಾಗಿ ಸರ್ವಾಧಿಪತ್ಯಾದಿವಾಚಿಯಾದ ಶಬ್ದಗಳು ಶ್ರುತವಾಗುತ್ತಿರುವುದರಿಂದ.

### ಸಿದ್ಧಾಂತ

**ಸೂ.ರ.:– एवं च निर्दिष्टश्रुतिषु पत्यादिशब्दसद्भावात् ।**

**ಅನು.:–** "ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಏಷ ಸರ್ವೇಶ್ವರಃ ..." (ಬೃ.ಉ. 6-4-21) ಎಂಬುದಾಗಿ ಬ್ರಾಹ್ಮಣನ ವಿಷಯದಲ್ಲಿ ಸರ್ವಾಧಿಪತಿ ಮೊದಲಾದ

ಶಬ್ದಗಳು ಶ್ರುತವಾಗುತ್ತಿರುವುದರಿಂದ (ಸರ್ವಾಧಿಪತಿ ಮೊದಲಾದ ಶಬ್ದಗಳು ವಿಷ್ಣುಮಾತ್ರ-ವಾಚಕವಾದ್ದರಿಂದ) ವಿಷ್ಣುವೇ ಬ್ರಾಹ್ಮಣನಾಗುತ್ತಾನೆ.

**ಸೂ.ರ.:– न च विष्णोर्ब्राह्मणत्वेऽजशब्दविरोधः । अजशब्दस्य न जायत इति योगेनोपपत्तेः । ब्राह्मणशब्दस्य ब्रह्मणा वेदेन भण्यत इति योगेनोपपत्त्याऽजशब्दापहाराभावात् ।**

**ಅನು.:–** ಬ್ರಾಹ್ಮಣನ ವಿಷಯದಲ್ಲಿ ವಿರಿಂಚವಾಚಕವಾದ ಅಜಶಬ್ದವು ಬಹುಬಾರಿ ಶ್ರುತ- ವಾಗುತ್ತಿದೆ. ಪ್ರಕೃತ ವಿಷ್ಣುವೇ ಬ್ರಾಹ್ಮಣ ಎಂದು ಹೇಳಿದರೆ, ಅಜಶಬ್ದವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ನ ಜಾಯತೇ ಇತಿ ಅಜಃ ಎಂಬುದಾಗಿ ಯೋಗದಿಂದ ವಿಷ್ಣುವಿನಲ್ಲಿಯೂ ಅಜಶಬ್ದವು ಪ್ರವೃತ್ತವಾಗುವುದರಿಂದ ಅಜಶಬ್ದದ ವಿರೋಧ ಬರುವುದಿಲ್ಲ.

ವಿಷ್ಣುವಿನಲ್ಲಿ ಬ್ರಾಹ್ಮಣಶಬ್ದವು ಉಪಪನ್ನವಾಗುವುದಿಲ್ಲವಾದ್ದರಿಂದ ಅಜಶಬ್ದದ ಅಪಹಾರವಾಗುತ್ತದೆಯಲ್ಲವೇ? ಎಂದರೆ, ಅದೂ ಸರಿಯಲ್ಲ. ಬ್ರಹ್ಮಣಾ ವೇದೇನ ಗಮ್ಯತ ಇತಿ ಬ್ರಾಹ್ಮಣಃ ಎಂಬುದಾಗಿ ಬ್ರಾಹ್ಮಣಶಬ್ದವು ವಿಷ್ಣುವಿನಲ್ಲಿಯೂ ಯೋಗದಿಂದ ಉಪಪನ್ನವಾಗುತ್ತದೆ. ಆದ್ದರಿಂದ ಅಜಶಬ್ದಾಪಹಾರ ಇಲ್ಲ.

**ಸೂ.ರ.:– न चाभेदात्पतित्वादेर्विरिञ्चेऽपि सम्भवः । तदभेदे मानाभावात् । ब्राह्मणाजशब्दयोरुक्तरीत्याऽन्यथोपपत्तेः । तत एते व्यजायन्तेति भेदश्रुति बाहुल्येन तयोरभेदे मानाभावात् । ततश्च विष्णुरेवायं ब्राह्मणो नित्यमहिमादिरिति सिद्धम् ।**

**ಅನು.:–** ವಿಷ್ಣು-ವಿರಿಂಚರಲ್ಲಿ ಅಭೇದ ಇರುವುದರಿಂದ ಸರ್ವಾಧಿಪತಿ ಮೊದಲಾದ ಶಬ್ದಗಳು ವಿರಿಂಚನಲ್ಲಿಯೂ ಸಂಭಾವಿತವಾಗಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ವಿಷ್ಣು-ವಿರಿಂಚರಲ್ಲಿ ಅಭೇದ ಇರುತ್ತಿದ್ದರೆ ಈ ರೀತಿ ಶಂಕಿಸಬಹುದಿತ್ತು. ಆದರೆ ಅವರಲ್ಲಿ ಅಭೇದವೇ ಇಲ್ಲ. ಯಾಕೆ? ಅಭೇದವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ.

ಬ್ರಾಹ್ಮಣ-ಅಜಶಬ್ದಗಳೇ ಪ್ರಮಾಣವಾಗಬಹುದಲ್ಲ? ಎಂದರೆ, ಹಿಂದೆ ಹೇಳಿದ ಪ್ರಕಾರ ಬ್ರಾಹ್ಮಣ-ಅಜಶಬ್ದಗಳು ಯೋಗವೃತ್ತಿಯಿಂದ ಭಗವಂತನಲ್ಲಿ ಪ್ರವೃತ್ತವಾಗ-ಬಹುದಾದ್ದರಿಂದ ಈ ಶಬ್ದಗಳು ಅಭೇದವಿಷಯದಲ್ಲಿ ಪ್ರಮಾಣವಾಗುವುದಿಲ್ಲ.

ಅಲ್ಲದೇ - ''ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭಃ'' ಇತ್ಯಾದಿ ಬಹಳ ಭೇದಶ್ರುತಿಗಳು ಇರುವುದರಿಂದ ವಿಷ್ಣು-ವಿರಿಂಚರಲ್ಲಿ ಅಭೇದ ಹೇಳುವುದು ಅಸಮಂಜಸವಾಗುತ್ತದೆ.

ಆದ್ದರಿಂದ ಸರ್ವಾಧಿಪತಿ ಮೊದಲಾದ ಅಸಾಧಾರಣ ಶಬ್ದಗಳು ಶ್ರುತವಾಗುತ್ತಿರು-ವುದರಿಂದ ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ಎಂಬುದಾಗಿ ಶ್ರುತನಾಗುತ್ತಿರುವ ಬ್ರಾಹ್ಮಣನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹಾಗಾಗಿ ಹಿಂದೆ ಹೇಳಿದ ನಿತ್ಯಮಹಿಮಾದಿ-ಗಳೂ ವಿಷ್ಣುವಿಗೇ ಉಪಪನ್ನವಾಗುತ್ತದೆ ಎಂದೂ ಸಿದ್ಧವಾಗುತ್ತದೆ.

ಬ್ರಾಹ್ಮಣಾಧಿಕರಣವು ಮುಗಿಯಿತು.

# प्रथमाध्यायस्य चतुर्थः पादः

*ಅಧಿಕರಣ – 1*

## ಆನುಮಾನಿಕಾಧಿಕರಣ

### ಪಾದಸಂಗತಿ

**ಸೂ.ರ.:– श्रुतिलिङ्गादिभिरन्यत्रैव प्रसिद्धानामपि शब्दानां सामस्त्येन विशेषहेतुभिर्विष्णावेव प्रवृत्तिः प्रदर्श्यतेऽस्मिन्पादे ।**

**ಅನು.:–** ಶ್ರುತಿ–ಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಸಾಮಸ್ತ್ಯೇನ (ಎಲ್ಲ ಶಬ್ದಗಳ ಸಮನ್ವಯವನ್ನು) ವಿಶೇಷಹೇತುಗಳಿಂದಾಗಿ ವಿಷ್ಣುವಿನಲ್ಲಿಯೇ ಮಾಡಿತೋರಿಸುತ್ತಾರೆ ಈ ನಾಲ್ಕನೇ ಪಾದದಲ್ಲಿ.

### ಅಧಿಕರಣ ಸಂಗತಿ

**ಸೂ.ರ.:– अत्रान्यत्रैव प्रसिद्धावरत्वदुःखित्वाद्यर्थकशब्दा ब्रह्मणि समन्वीयन्ते ।**

**ಅನು.:–** ಅನ್ಯತ್ರೈವ ಪ್ರಸಿದ್ಧವಾದ, ಅವರತ್ವ–ದುಃಖಿತ್ವಾದ್ಯರ್ಥಕವಾದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಮೊದಲನೇ ಈ ಆನುಮಾನಿಕಾಧಿಕರಣದಲ್ಲಿ. "ತತ್ತು ಸಮನ್ವಯಾತ್" ಎಂಬ ಸೂತ್ರದಲ್ಲಿ ಎಲ್ಲ ಶಬ್ದಗಳೂ ಪರಮಾತ್ಮಪರವಾಗಿವೆ ಎಂದು ಹೇಳಿದೆ. ಆ ಎಲ್ಲ ಶಬ್ದಗಳಲ್ಲಿ ಸೇರಿದ ಅವ್ಯಕ್ತಾದಿ ಶಬ್ದಗಳು 'ಮಹತಃ ಪರಮವ್ಯಕ್ತ–ಮವ್ಯಕ್ತಾತ್ಪುರುಷಃ ಪರಃ ।' 'ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ । ಸ್ಥಾಣುಮನ್ಯೇ ತು ಸಂಯಾಂತಿ ಯಥಾ ಕರ್ಮ ಯಥಾ ಶ್ರುತಮ್ ॥' 'ಜೀವಾ ಏವ ತು ದುಃಖಿನಃ ।' ಎಂಬುದಾಗಿ ಕಾಠಕಾದಿಗಳಲ್ಲಿ ಒಬ್ಬ ವ್ಯಕ್ತಿಗೆ ಶ್ರುತವಾಗುತ್ತಿವೆ. ಈ ಅವ್ಯಕ್ತಾದಿಗಳು ವಿಷ್ಣು ಅಲ್ಲ ಎನ್ನುವುದಾದರೆ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವು ಸಿದ್ಧಿಸುವು–ದಿಲ್ಲ. ಆದ್ದರಿಂದ ಕಾಠಕಾದಿಗಳಲ್ಲಿ ಶ್ರುತವಾಗುತ್ತಿರುವ ಈ ಅವ್ಯಕ್ತಾದಿಗಳು ವಿಷ್ಣುವೋ? ಅಲ್ಲವೋ? ಎಂದು ಚರ್ಚಿಸಿ, ವಿಷ್ಣುವೇ ಎಂದು ನಿರ್ಣಯಿಸುತ್ತಾರೆ ಈ ಮೊದಲನೇ ಆನುಮಾನಿಕಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु प्रधानाद्येवाव्यक्तादिशब्दवाच्यम् । तच्छब्दानां प्रधानादावेव प्रसिद्धत्वात् । न च तेषां विष्णावपि सावकाशत्वम् । तत्राव्यक्तस्य पुरुषावरत्वश्रवणात् । विष्णोश्च न तत्समाभ्यधिकश्च दृश्यत इति प्रमाणविरोधेन तदयोगात् । महदादिकं स्वसदृशकारणजन्यं कार्यत्वात् घटवदित्यादिसाङ्ख्योपन्यस्तानुमानसिद्धत्वात् ।**

**ಅನು.:–** "ಮಹತಃ ಪರಮವ್ಯಕ್ತಂ ಅವ್ಯಕ್ತಾತ್ಪುರುಷಃ ಪರಃ" ಇತ್ಯಾದಿಯಾಗಿ ಶ್ರುತವಾಗುತ್ತಿರುವ ಅವ್ಯಕ್ತಾದಿಶಬ್ದವಾಚ್ಯವಾದದ್ದು ಪ್ರಧಾನಾದಿಗಳೇ ಆಗುತ್ತವೆ. ಯಾಕೆ? ಅವ್ಯಕ್ತಾದಿಶಬ್ದಗಳು ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧವಾಗಿದ್ದರಿಂದ.

ಅವ್ಯಕ್ತಾದಿಶಬ್ದಗಳು ವಿಷ್ಣುವಿನಲ್ಲಿಯೂ ಪ್ರವೃತ್ತವಾಗಿರುವುದರಿಂದ ಸಾವಕಾಶ-ವಾಗಿವೆಯಲ್ಲ? ಎಂದರೆ, ಅದು ಸರಿಯಲ್ಲ. ಅಲ್ಲಿ ಅವ್ಯಕ್ತವಾದ ವಸ್ತುವಿಗೆ "ಅವ್ಯಕ್ತಾತ್ ಪುರುಷಃ ಪರಃ" ಎಂಬುದಾಗಿ ಪುರುಷಾವರತ್ವವು ಶ್ರುತವಾಗುತ್ತಿದೆ. ವಿಷ್ಣುವೇ ಅವ್ಯಕ್ತ-ನಾಗುವುದಾದರೆ ಪುರುಷಾವರತ್ವವು ವಿಷ್ಣುವಿಗೆ ಹೇಳಬೇಕಾಗುತ್ತದೆ. ಆದರೆ – "ನ ತತ್ಸಮಾಭ್ಯಧಿಕಶ್ಚ ದೃಶ್ಯತೇ" ಎಂಬುದಾಗಿ ವಿಷ್ಣುವಿಗೆ ಸರ್ವೋತ್ತಮತ್ವವು ಶ್ರುತವಾಗುತ್ತಿದೆ. ಆದ್ದರಿಂದ ಪ್ರಕೃತದಲ್ಲಿ ವಿಷ್ಣುವಿಗೆ ಅವ್ಯಕ್ತತ್ವವನ್ನು ಹೇಳಿದರೆ ಪುರುಷಾವರತ್ವವು ಹೇಳಬೇಕಾಗುವುದರಿಂದ, ಹಾಗೆ ವಿಷ್ಣುವಿಗೆ ಪುರುಷಾವರತ್ವವನ್ನು ಹೇಳಿದರೆ ಸರ್ವೋತ್ತಮತ್ವಪ್ರತಿಪಾದಕವಾದ ಈ ಪ್ರಮಾಣದ ವಿರೋಧ ಬರುವುದರಿಂದ ವಿಷ್ಣುವಿಗೆ ಅವ್ಯಕ್ತತ್ವವನ್ನು ಹೇಳುವುದು ಸರಿಯಾಗುವುದಿಲ್ಲ.

ಮಹದಾದಿಕಂ ಸ್ವಸದೃಶಕಾರಣಜನ್ಯಂ ಕಾರ್ಯತ್ವಾತ್ ಘಟವತ್ ಇತ್ಯಾದಿಯಾಗಿ ಸಾಂಖ್ಯರಿಂದ ಉಪನ್ಯಸ್ತವಾದ ಅನುಮಾನದಿಂದಲೂ ಸಿದ್ಧವಾಗಿದ್ದರಿಂದ ಪ್ರಧಾನಾದಿಗಳೇ ಅವ್ಯಕ್ತಾದಿಶಬ್ದವಾಚ್ಯ ಎಂದು ಸಿದ್ಧವಾಗುತ್ತದೆ.

**ಸೂ.ರ.:– किं चाव्यक्तस्य परममहत्त्वश्रवणात्प्रधानमेवाव्यक्तशब्द-वाच्यम् ।**

**ಅನು.:–** ಮತ್ತು "ಮಹತಃ ಪರಮವ್ಯಕ್ತಮ್" ಎಂಬುದಾಗಿ ಅವ್ಯಕ್ತಕ್ಕೆ ಮಹತ್ಪರತ್ವವು ಶ್ರುತವಾಗುತ್ತಿದೆ. ಈ ಮಹತ್ಪರತ್ವ ಎನ್ನುವುದು ಪ್ರಧಾನಕ್ಕೇನೇ ಉಪಪನ್ನವಾಗುತ್ತದೆ. ಹೊರತು

ವಿಷ್ಣುವಿಗೆ ಉಪಪನ್ನವಾಗುವುದಿಲ್ಲ. ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಮ್ । ಇತ್ಯಾದಿ ಪ್ರಮಾಣಗಳು ಹೇಳುವಂತೆ ವಿಷ್ಣುವು ಅವ್ಯಕ್ತಕ್ಕಿಂತಲೂ ಪರನಾಗಿದ್ದಾನೆ. ಆದ್ದರಿಂದ ಮಹತ್ಪರತ್ವ ಯುಕ್ತಿಯಿಂದಲೂ ಪ್ರಧಾನಾದಿಗಳೇ ಅವ್ಯಕ್ತವಾಗುತ್ತವೆಂದು ಸಿದ್ಧವಾಗುತ್ತದೆ.

**ಸೂ.ರ.:– दुःखिबद्धत्वादिप्रतीतेः । क्षेत्रज्ञा एव जीवशब्दवाच्या न विष्णुः ।**

**ಅನು.:–** ಮತ್ತು "ಜೀವಾ ಏವ ತು ದುಃಖಿನಃ" ಎಂಬುದಾಗಿ ದುಃಖಿತ್ವ-ಬದ್ಧತ್ವಾದಿಗಳು ಪ್ರತೀತವಾಗುತ್ತಿರುವುದರಿಂದ ಕ್ಷೇತ್ರಜ್ಞರೇ (ಜೀವರೇ) ಜೀವಶಬ್ದವಾಚ್ಯ-ರಾಗುತ್ತಾರೆ. ಹೊರತು ವಿಷ್ಣುವು ಜೀವಶಬ್ದವಾಚ್ಯನಾಗುವುದಿಲ್ಲ.

**ಸೂ.ರ.:– यत एवं केषाञ्चिच्छाखासु प्रधानादिकस्याव्यक्तादिशब्द-वाच्यत्वेनोक्तत्वात्तत्त्विति सर्वशब्दानां परमेश्वराभिधायकत्वं यदुक्तं तदयुक्तमिति प्राप्ते सूत्रितम् ।**

**ಅನು.:–** ಯಾವ ಕಾರಣ ಈ ರೀತಿಯಾಗಿ ಕೆಲವು ಶಾಖೆಗಳಲ್ಲಿ ಪ್ರಧಾನಾದಿಗಳು ಅವ್ಯಕ್ತಾದಿ- ಶಬ್ದವಾಚ್ಯಗಳಾಗಿ ಪ್ರತಿಪಾದ್ಯವಾಗಿದ್ದರಿಂದ ತತ್ತು ಸಮನ್ವಯಾತ್ ಎಂಬುದಾಗಿ ಎಲ್ಲ ಶಬ್ದಗಳೂ ಪರಮೇಶ್ವರ ಪ್ರತಿಪಾದಕವಾಗಿವೆ ಎಂದು ಹೇಳಿದ್ದು ಸರಿಯಲ್ಲ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದ-ಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

**ॐ आनुमानिकमप्येकेषामिति चेन्न**
**शरीररूपकविन्यस्तगृहीतेर्दर्शयति च ॐ (१.४.१)**

**ಸೂತ್ರಾರ್ಥ :–** (ಅಪಿಶಬ್ದವು ಏವ ಎಂಬ ಅರ್ಥದಲ್ಲಿದೆ.) ಯತಃ = ಯಾವ ಕಾರಣ ಆನುಮಾನಿಕಂ (ಅಪಿ) ಏವ = ಸಾಂಖ್ಯಾನುಮಾನಕಲ್ಪಿತವಾದ ಪ್ರಧಾನಾದಿಗಳೇ ಏಕೇಷಾಂ ಶಾಖಿನಾಂ (ಶಾಖಾಸು) ಕೆಲವು ಶಾಖೆಗಳಲ್ಲಿರುವ, ಅವ್ಯಕ್ತಾತ್ ಪುರುಷಃ ಪರಃ ಇತ್ಯಾದಿ ವಾಕ್ಯಗತವಾದ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆಯೋ ಅತಃ = ಆ ಕಾರಣ ನ ವಿಷ್ಣೋಃ ಸರ್ವಶಬ್ದವಾಚ್ಯತ್ವಂ ಯುಜ್ಯತೇ = ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವು ಹೊಂದುವುದಿಲ್ಲ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಯತಃ ವಿಷ್ಣುರೇವ ಅವ್ಯಕ್ತಾದಿಶಬ್ದವಾಚ್ಯಃ = ಯಾವ ಕಾರಣ ವಿಷ್ಣುವೇ ಅವ್ಯಕ್ತಾದಿ-ಶಬ್ದವಾಚ್ಯನಾಗಿದ್ದಾನೆ, ಪ್ರಧಾನಾದಿಗಳು ವಾಚ್ಯವಾಗಿಲ್ಲವೋ ಆ ಕಾರಣ ಆ ಆಕ್ಷೇಪ ಸರಿಯಲ್ಲ.

ಕುತಃ = ಯಾಕೆ? ಎಂದರೆ, ಯತಃ = ಯಾವ ಕಾರಣ "ಅವ್ಯಕ್ತಮಚಲಂ ಶಾಂತಂ" (ಪಿಪ್ಪಲಾದಶಾಖಾ) ಎಂಬ ಶ್ರುತಿಯು ಮತ್ತು "ಅವ್ಯಕ್ತೋಽಕ್ಷರಃ" (ಭ.ಗೀ. 8-21) ಎಂಬ ಸ್ಮೃತಿಯೂ ಸಹ ದರ್ಶಯತಿ = ವಿಷ್ಣುವಿಗೇ ಅವ್ಯಕ್ತಾದಿಶಬ್ದವಾಚ್ಯತ್ವವನ್ನು ಪ್ರತಿಪಾದಿಸು-ತ್ತದೆಯೋ ಆ ಕಾರಣ ಎಂದು ಅರ್ಥ.

ಹಾಗಾದರೆ ವಿಷ್ಣು ಬಿಟ್ಟು ಉಳಿದವರ ವಿಷಯದಲ್ಲಿ ಅವ್ಯಕ್ತಾದಿಶಬ್ದಗಳ ವ್ಯವಹಾರ ಹೇಗೆ? ಎಂದರೆ, ಅದಕ್ಕೆ ಸೂತ್ರದ ಉಳಿದ ಭಾಗ ಹೊರಟಿತು- ಶರೀರರೂಪಕವಿನ್ಯಸ್ತ-ಗೃಹೀತೇಃ=(ರೂಪಕ ಎನ್ನುವಲ್ಲಿ ಕಪ್ರತ್ಯಯವು ಕುತ್ಸನ ಎಂಬ ಅರ್ಥದಲ್ಲಿ ಇದೆ) (ಶರೀರರೂಪಕೇ) ಹೇಗೆ ಶರೀರವು ಪುರುಷನ ಅಧೀನವಾಗಿರುವುದೋ ಅದರಂತೆ ಪರಮಾತ್ಮನ ಅಧೀನರಾದ ನಿಮಿತ್ತದಿಂದ (ಕುತ್ಸಿತವಾಗಿದ್ದರಿಂದ) ಶರೀರಸಮರಾದ, ವಸ್ತುತಃ ಶರೀರರಹಿತರಾದ ಪ್ರಧಾನಾದಿಗಳಲ್ಲಿ (ವಿನ್ಯಸ್ತಸ್ಯ) ಸ್ಥಿತನಾಗಿರುವ ಪರಮಾತ್ಮನನ್ನೇ (ಗೃಹೀತೇಃ) ಅವ್ಯಕ್ತಾದಿಶಬ್ದಗಳಿಂದ ಗ್ರಹಣ ಮಾಡಿದ್ದರಿಂದ.

ಅರ್ಥಾತ್ ಪ್ರಧಾನಾದಿಗಳಲ್ಲಿ ಸ್ಥಿತನಾದ ಪರಮಾತ್ಮನು ಅವ್ಯಕ್ತಾದಿಶಬ್ದವಾಚ್ಯ-ನಾಗಿದ್ದಾನೆ. ಹೀಗೆ ಪರಮಾತ್ಮನ ಸಂಬಂಧ ಇರುವ ಕಾರಣದಿಂದಲೇ ಉಳಿದ ಪ್ರಕೃತ್ಯಾದಿ-ಗಳಲ್ಲಿ ಅವ್ಯಕ್ತಾದಿಶಬ್ದವಾಚ್ಯತ್ವ ವ್ಯವಹಾರ ಪ್ರವೃತ್ತವಾಗಿದೆ ಎಂದು ಭಾವ.

## ಸಿದ್ಧಾಂತ

**ಸೂ.ರ.:- एवं चाव्यक्तादिशब्दवाच्यः परमात्मैव । अव्यक्तादि-शब्दप्रवृत्तिनिमित्तस्वामित्वात् । अतिशयेन प्रवृत्तिनिमित्ताधिकरणत्वाच्च । ईश्वराधीनस्य तत्प्रवृत्तिनिमित्तस्याधिकरणत्वेन तस्यापि तत्परममुख्यत्वाङ्गी-कारात् । तथा चाव्यक्तादिशब्दवाच्यो विष्णुरेवेति सिद्धम् ।**

ಅನು.:- ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವ-ದುಃಖಾದಿಗಳಿಗೆ ಪರಮಾತ್ಮನೇ ಸ್ವಾಮಿಯಾದ್ದರಿಂದ, ಮತ್ತು ಆ ಪ್ರವೃತ್ತಿನಿಮಿತ್ತಗಳಿಗೆ ಅತಿಶಯೇನ ಅಧಿ ಕರಣನಾದ್ದರಿಂದ, ಈಶ್ವರಾಧೀನವಾದ ಆ ಪ್ರವೃತ್ತಿನಿಮಿತ್ತಗಳಿಗೆ ಪ್ರಧಾನಾದಿಗಳು ಅಧಿ

ಕರಣವಾಗುವುದರಿಂದ ಪ್ರಧಾನಾದಿಗಳೂ ಅವ್ಯಕ್ತಾದಿಶಬ್ದಗಳಿಗೆ ಮುಖ್ಯಾರ್ಥರೆಂದು ಅಂಗೀಕರಿಸಲಾಗಿದೆ. ಹೀಗಾಗಿ ಅವ್ಯಕ್ತಾದಿಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವಾದವುಗಳಿಗೆ ಪರಮಾತ್ಮನೇ ಸ್ವಾಮಿಯಾದ್ದರಿಂದ, ಪರಮಾತ್ಮನೇ ಅತಿಶಯೇನ ಅಧಿಕರಣನಾದ್ದರಿಂದ ಮತ್ತು ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಮ್ । ಯೋ ವೇದ ಹರಿಮಾತ್ಮಾನಂ ಸ ಭಯಾದನುಮುಚ್ಯತೇ ॥ ಎಂಬುದಾಗಿ ಶ್ರುತಿ (ಪಿಪ್ಪಲಾದ ಶಾಖೆ) ಹೇಳುವಂತೆ, 'ಅವ್ಯಕ್ತೋಽಕ್ಷರ ಇತ್ಯುಕ್ತಃ'' ಎಂಬುದಾಗಿ (ಭಗವದ್ಗೀತೆ) ಸ್ಮೃತಿಯೂ ಹೇಳುವಂತೆ ಪರಮಾತ್ಮನೇ ಅವ್ಯಕ್ತಾದಿಶಬ್ದವಾಚ್ಯ-ನಾಗುತ್ತಾನೆ.

ಹಾಗಾದರೆ ಪ್ರಧಾನಾದಿಗಳನ್ನು ಅವ್ಯಕ್ತಾದಿಶಬ್ದಗಳಿಂದ ವ್ಯವಹರಿಸುವುದೂ ಕಂಡಿದೆ. ಅದು ಹೇಗೆ? ಎಂದರೆ, ಅಲ್ಲಿ ನಿಜವಾಗಿ ಅವ್ಯಕ್ತಾದಿಶಬ್ದವಾಚ್ಯರಾದವರು ಪ್ರಧಾನಾದಿಗಳು ಅಲ್ಲ, ಕಿಂತು ಆ ಪ್ರಧಾನಾದಿಗಳಲ್ಲಿ ಅಂತರ್ಯಾಮಿಯಾಗಿ ಇರುವ ಪರಮಾತ್ಮನೇ ಅಲ್ಲಿಯೂ ಅವ್ಯಕ್ತಾದಿಶಬ್ದವಾಚ್ಯನಾಗಿದ್ದಾನೆ. ಆದ್ದರಿಂದ ಪರಮಾತ್ಮನೇ ಅವ್ಯಕ್ತಾದಿಶಬ್ದವಾಚ್ಯ ಎಂದು ಅಭಿಪ್ರಾಯ.

## ಸೂತ್ರ - 2

## ಆಕ್ಷೇಪ

**ಸೂ.ರ.:– नन्वस्त्वेवं श्रौतस्मार्तप्रयोगबलेनाव्यक्तादिशब्दानां भगवद्वाचित्वम् । तथाऽपि तत्र तेषां न परममुख्यत्वं स्यात् । श्रुतिस्मृतिषु तत्र तत्प्रयोगस्यामुख्यवाच्येऽपि केवलमुख्येऽपि सम्भवादिति प्राप्ते सूत्रमाह ।**

ಅನು.:– ಶ್ರೌತ-ಸ್ಮಾರ್ತಪ್ರಯೋಗಬಲದಿಂದಾಗಿ ಅವ್ಯಕ್ತಾದಿಶಬ್ದಗಳು ಪರಮಾತ್ಮ-ವಾಚಕವಾಗಲಿ. ಆದರೂ ಸಹ ಅವ್ಯಕ್ತಾದಿಶಬ್ದಗಳು ಪರಮಾತ್ಮನ ವಿಷಯದಲ್ಲಿ ಪರಮ-ಮುಖ್ಯವಾಗುವುದಿಲ್ಲ. (ಅವ್ಯಕ್ತಾದಿಶಬ್ದಗಳಿಂದ ಪರಮಾತ್ಮನು ಪರಮಮುಖ್ಯವಾಗಿ ಪ್ರತಿಪಾದ್ಯನಾಗುವುದಿಲ್ಲ). ಅವ್ಯಕ್ತಾದಿಶಬ್ದಗಳಿಂದ ಪರಮಾತ್ಮನು ಮುಖ್ಯವಾಚ್ಯ-ನಾಗದಿದ್ದರೂ ಸಹ, ಅಮುಖ್ಯವಾಚ್ಯನಾದ ಪರಮಾತ್ಮನ ವಿಷಯದಲ್ಲಿಯೂ ಸಹ ಶ್ರುತಿ-ಸ್ಮೃತಿಗಳಲ್ಲಿ ಅವ್ಯಕ್ತಾದಿಶಬ್ದಪ್ರಯೋಗವು ಸಂಭವಿಸುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ–

## ॐ सूक्ष्मं तु तदर्हत्वात् ॐ (१.४.२)

**ಸೂತ್ರಾರ್ಥ :–** ಯತಃ = ಯಾವ ಕಾರಣ ಸೂಕ್ಷ್ಮಂ (ತು) ಏವ = ಸೂಕ್ಷ್ಮವೇ ಅವ್ಯಕ್ತಾದಿಶಬ್ದವಾಚ್ಯವಾಗುತ್ತದೆ. ಕುತಃ = ಯಾಕೆ? ತದರ್ಹತ್ವಾತ್ = ಆ ಸೂಕ್ಷ್ಮವೇ ಅವ್ಯಕ್ತಶಬ್ದಪ್ರವೃತ್ತಿನಿಮಿತ್ತಕ್ಕೆ ಯೋಗ್ಯವಾಗಿದೆಯಾದ್ದರಿಂದ. ತತ್ರ ಚ ಸೂಕ್ಷ್ಮತ್ವಂ ವಿಷ್ಣೋರೇವ = ಆ ಸೂಕ್ಷ್ಮವಾದ ವಸ್ತು ವಿಷ್ಣುವೇ ಆಗುತ್ತಾನೆ. ಆದ್ದರಿಂದ ವಿಷ್ಣುವೇ ಅವ್ಯಕ್ತಾದಿಶಬ್ದ-ವಾಚ್ಯನಾಗುತ್ತಾನೆ.

### ಸಮಾಧಾನ

**ಸೂ.ರ.:–** एवं चाव्यक्तशब्दप्रवृत्तिनिमित्ताव्यक्तत्वोपयोगिसूक्ष्मत्वे विष्णोरेवातिशयत्वात् । मुख्ये च विद्यमानेऽमुख्यस्यायुक्तत्वात् । यत्तत्सूक्ष्ममिति (पिप्पलाद) श्रुतेश्च । अतो विष्णुरेवाव्यक्तादिशब्दवाच्य इति सिद्धम् ।

**ಅನು.:–** ಅವ್ಯಕ್ತಶಬ್ದಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವಕ್ಕೆ ಉಪಯೋಗಿಯಾದ ಸೂಕ್ಷ್ಮತ್ವವು ಅತಿಶಯಿತವಾಗಿ ವಿಷ್ಣುವಿನಲ್ಲಿಯೇ ಇರುವುದರಿಂದ ಸೂಕ್ಷ್ಮವಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ.

**ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ ನಿತ್ಯಂ ಪದಂ ವೈಷ್ಣವಂ ಹ್ಯಾಮನಂತಿ ।**
**ಯತ್ತಲ್ಲೋಕಾ ನ ವಿದುರ್ಲೋಕಸಾರಂ ವಿಂದಂತ್ಯೇತತ್ಕವಯೋ ಯೋಗನಿಷ್ಠಾಃ ॥**

ಎಂಬುದಾಗಿ ಶ್ರುತಿಯೂ (ಪಿಪ್ಪಲಾದಶಾಖಾ) ಹೇಳುವಂತೆ ಮುಖ್ಯವಾದ ಸೂಕ್ಷ್ಮತ್ವ ವಿಷ್ಣುವಿಗೇ ಇರುವುದು.

ಅವ್ಯಕ್ತಶಬ್ದಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವಕ್ಕೆ ಉಪಯೋಗಿಯಾದ ಸೂಕ್ಷ್ಮತ್ವವು ಮುಖ್ಯವಾಗಿ ವಿಷ್ಣುವಿನಲ್ಲಿಯೇ ಇರುವುದರಿಂದ ವಿಷ್ಣುವೇ ಅವ್ಯಕ್ತಾದಿಶಬ್ದದ ಮುಖ್ಯವಾಚ್ಯನಾಗುತ್ತಾನೆ. ಮುಖ್ಯವಾಚ್ಯನಾದ ವಿಷ್ಣುವೇ ಇರುವಾಗ ಅಮುಖ್ಯವಾಚ್ಯರಾದ ಪ್ರಧಾನಾದಿಗಳನ್ನು ತೆಗೆದುಕೊಳ್ಳಲು ಬರುವುದಿಲ್ಲ.

ಆದ್ದರಿಂದ ವಿಷ್ಣುವೇ ಅವ್ಯಕ್ತಾದಿಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

## ಆಕ್ಷೇಪ

**ಸೂ.ರ.:– नन्वस्त्वेवं विष्णावेवाव्यक्तादिप्रातिपदिकानां मुख्यता । तथाऽप्यव्यक्तात्पुरुषः पर (कठ.३-११) इत्यादावव्यक्तादिशब्दैर्विष्णोर्वाच्यत्वेन गृहीतिर्न युक्ता ।**

**ಅನು.:–** ಅವ್ಯಕ್ತಾದಿಶಬ್ದಗಳು ಪರಮಾತ್ಮನಲ್ಲಿಯೇ ಮುಖ್ಯವಾಗಿವೆ ಎನ್ನುವುದು ಇರಲಿ. ಆದರೂ ಸಹ ಅವ್ಯಕ್ತಾತ್ಪುರುಷಃ ಪರಃ ಇತ್ಯಾದಿಗಳಲ್ಲಿ ಅವ್ಯಕ್ತಾದಿಶಬ್ದಗಳಿಂದ ವಾಚ್ಯತಯಾ ವಿಷ್ಣುವನ್ನು ಗ್ರಹಣ ಮಾಡಲು ಬರುವುದಿಲ್ಲ. ಅಲ್ಲಿ ಪ್ರಧಾನಾದಿಗಳನ್ನೇ ಸ್ವೀಕರಿಸಬೇಕು.

**ಸೂ.ರ.:– तथा सति महतः परमिति (कठ. ३-११) श्रुतेस्तथाऽव्यक्तादित्यवरत्वापेक्षकावधित्ववाचिपञ्चमीश्रुतेस्तथा सोऽवर इति साक्षादवरश्रुतेस्तथा च जीवा इति दुःखिबद्धत्वादिश्रुतीनां च निरनिष्ट इत्यादिप्रमाणविरोधेन भगवदसम्भवदर्थकत्वात्तासां नैरर्थ्यापातात् ।**

**ಅನು.:–** ಏಕೆಂದರೆ –

★ "ಮಹತಃ ಪರಮವ್ಯಕ್ತಮ್" (ಕಠ. 3–11) ಎಂಬುದಾಗಿ ಶ್ರುತಿಯು ಅವ್ಯಕ್ತವಾದದ್ದಕ್ಕೆ ಮಹತ್ಪರತ್ವವನ್ನು ಹೇಳುತ್ತಿದೆ.

★ ಮತ್ತು "ಅವ್ಯಕ್ತಾತ್ಪುರುಷಃ ಪರಃ" ಎನ್ನುವಲ್ಲಿ ಅವ್ಯಕ್ತಾತ್ ಎಂಬುದಾಗಿ ಅವರತ್ವಾಪೇಕ್ಷಕ ಅವಧಿತ್ವ ವಾಚಿಯಾದ ಪಂಚಮೀಶ್ರುತಿಯು ಅವ್ಯಕ್ತವಾದದ್ದಕ್ಕೆ ಪುರುಷಾವರತ್ವವನ್ನು ಹೇಳುತ್ತಿದೆ.

★ "ಸೋಽವರಃ" ಎಂಬುದಾಗಿ ಸಾಕ್ಷಾತ್ತಾಗಿಯೇ ಅವರತ್ವವನ್ನೂ ಶ್ರುತಿ ಹೇಳುತ್ತಿದೆ.

★ "ಜೀವಾಃ" ಎಂಬುದಾಗಿ ದುಃಖಿತ್ವ–ಬದ್ಧತ್ವಾದಿಗಳನ್ನು ಹೇಳುತ್ತಿದೆ ಶ್ರುತಿ. ಆದರೆ ಅವ್ಯಕ್ತಾದಿಶಬ್ದಗಳಿಂದ ಇಲ್ಲಿ ಪರಮಾತ್ಮನನ್ನೇ ತೆಗೆದುಕೊಂಡರೆ ಪರಮಾತ್ಮನಿಗೆ ಮಹತ್ಪರತ್ವ–ಪುರುಷಾವರತ್ವ–ದುಃಖಿತ್ವ–ಬದ್ಧತ್ವಗಳನ್ನು ಹೇಳಿದಂತಾಗುತ್ತದೆ. ಪರಮಾತ್ಮನಿಗೆ ಮಹತ್ಪರತ್ವಾದಿಗಳನ್ನು ಹೇಳಿದರೆ ನಿರನಿಷ್ಟ ಇತ್ಯಾದಿ ಪ್ರಮಾಣಗಳ ವಿರೋಧ ಬರಬೇಕಾಗುತ್ತದೆ.

ಹೀಗೆ ಅವ್ಯಕ್ತಾದಿಶಬ್ದಗಳಿಂದ ಪರಮಾತ್ಮನನ್ನು ಸ್ವೀಕಾರ ಮಾಡಿದರೆ ಹಿಂದಿನ ಈ ಎಲ್ಲ

ಶ್ರುತಿಗಳಿಗೆ ಭಗವಂತನಲ್ಲಿ ಅಸಂಭಾವಿತ ಅರ್ಥವತ್ತ್ವವನ್ನು ಹೇಳಬೇಕಾಗುವುದರಿಂದ ನಿರರ್ಥಕತ್ವ ಬರಬೇಕಾದ ಅತಿಪ್ರಸಂಗ ಬರುತ್ತದೆ.

**ಸೂ.ರ.:– अतो बाधकादव्यक्तादिशब्दैरमुख्यमपि प्रधानाद्येवावश्यं वाच्यतया ग्राह्यमिति प्राप्ते सूत्रितम् ।**

**ಅನು.:–** ಆದ್ದರಿಂದ ಅವ್ಯಕ್ತಾದಿಶಬ್ದಗಳಿಂದ ಪರಮಾತ್ಮನನ್ನು ಸ್ವೀಕಾರ ಮಾಡಿದರೆ ಶ್ರುತಿಗಳಿಗೆ ನಿರರ್ಥಕತ್ವ ರೂಪವಾದ ಬಾಧಕ ಇರುವುದರಿಂದ, ಪ್ರಧಾನಾದಿಗಳು ಅಮುಖ್ಯವಾಚ್ಯ- ವಾಗಿದ್ದರೂ ಸಹ ಅವ್ಯಕ್ತಾದಿಶಬ್ದಗಳಿಂದ ಪ್ರಧಾನಾದಿಗಳನ್ನೇ ವಾಚ್ಯತಯಾ ಸ್ವೀಕಾರ ಮಾಡಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ तदधीनत्वादर्थवत् ॐ (१.४.३)**

(ದರ್ಶಯತಿ ಚ ಎಂಬ ಹಿಂದಿನ ಸೂತ್ರದಲ್ಲಿರುವ "ಚ" ಶಬ್ದವು ಅನುವರ್ತನೆ ಆಗುತ್ತದೆ.)

**ಸೂತ್ರಾರ್ಥ :–** ಪರಾವರದುಃಖಿಬದ್ಧತ್ವಾದಿವಾಚಿಶಬ್ದಜಾತಂ = ಪರ-ಅವರ-ದುಃಖಿ-ಬದ್ಧ ಮೊದಲಾದ ಶಬ್ದಗಳ ಸಮೂಹವು ಪರಮಾತ್ಮನ್ಯೇವ = ಪರಮಾತ್ಮನಲ್ಲಿಯೇ ಅರ್ಥವತ್ = ಪ್ರವೃತ್ತಿನಿಮಿತ್ತರೂಪವಾದ ಅರ್ಥಉಳ್ಳದ್ದಾಗಿದೆ. ನ ವ್ಯರ್ಥಂ = ಹೊರತು ನಿರರ್ಥಕ ಅಲ್ಲ. ಕುತಃ = ಯಾಕೆ? ತದಧೀನತ್ವಾತ್ = ಪ್ರಧಾನಾದಿಗಳಲ್ಲಿ ಇರುವ ಆ ಪರಾವರತ್ವಾದಿಧರ್ಮಗಳು ಭಗವಂತನ ಅಧೀನವಾದ್ದರಿಂದ.

ಪ್ರಧಾನಾದಿಗಳಲ್ಲಿರುವ ಪರಾವರತ್ವಾದಿ ಪ್ರವೃತ್ತಿನಿಮಿತ್ತಗಳಿಗೆ ಸ್ವಾಮಿಯಾಗಿರುವ ನಿಮಿತ್ತದಿಂದಲೂ ಸಹ ಭಗವಂತನಲ್ಲಿ ಪರಾವರಾದಿಶಬ್ದಪ್ರಯೋಗವು ಯುಕ್ತವಾಗಿದೆ ಎಂದು ಭಾವ.

## ಸಮಾಧಾನ

**ಸೂ.ರ.:– एवं च यदधीनो गुणो यस्य तद्गुणी सोऽभिधीयत (स्कान्दे) इतीश्वराधीनस्य प्रवृत्तिनिमित्तस्याधिकरणत्वेन तस्यापि तद्वाचित्वाङ्गी कारात् । तस्मिन्नेव तदव्यक्तत्वादिगुणदोषोभयवाचि-**

**शब्दजातस्य प्रवृत्ति निमित्ताख्यार्थयुक्तत्वेन नैरर्थक्याभावात् । अतः परावरत्वादिशब्दजातं विष्णौ युक्तमिति सिद्धम् ॥**

**ಅನು.:–** ಪರಾವರತ್ವಾದಿ ಪ್ರವೃತ್ತಿನಿಮಿತ್ತಗಳಿಗೆ ಸ್ವಾಮಿಯಾಗಿರುವುದರಿಂದ ಭಗವಂತನೇ ಪರಾವರದುಃಖಿಬದ್ಧಾದಿಶಬ್ದಗಳಿಂದ ಮುಖ್ಯವಾಗಿ ವಾಚ್ಯನಾಗಿರುತ್ತಾನೆ. ಜೊತೆಗೆ

**ಯದಧೀನೋ ಗುಣೋ ಯಸ್ಯ ತದ್ಗುಣೇ ಸೋಽಭಿಧೀಯತೇ ।**
**ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ ॥**

ಎಂಬುದಾಗಿ ಸ್ಕಾಂದಪುರಾಣದಲ್ಲಿ ಹೇಳಿದಂತೆ ಈಶ್ವರಾಧೀನವಾದ ಪ್ರವೃತ್ತಿನಿಮಿತ್ತಕ್ಕೆ ಪ್ರಧಾನಾದಿಗಳು ಅಧಿಕರಣರಾದ್ದರಿಂದ ಅವ್ಯಕ್ತಾದಿಶಬ್ದಗಳು ಪ್ರಧಾನಾದಿವಾಚಿಗಳೂ ಆಗಿವೆ ಎಂದೂ ಅಂಗೀಕರಿಸಲಾಗಿದೆ.

ಆ ಅವ್ಯಕ್ತತ್ವಾದಿ ಗುಣಗಳನ್ನು ತಿಳಿಸುವ, ದುಃಖ-ಬಂಧಾದಿ ದೋಷಗಳನ್ನೂ ತಿಳಿಸುವ ಅವ್ಯಕ್ತಾದಿಶಬ್ದಗಳು ಆ ಪ್ರಧಾನಾದಿಗಳಲ್ಲಿಯೇ ಪ್ರವೃತ್ತಿನಿಮಿತ್ತರೂಪ ಅರ್ಥ ಉಳ್ಳದ್ದಾಗಿದ್ದರಿಂದ ನಿರರ್ಥಕತ್ವದೋಷವೂ ಬರುವುದಿಲ್ಲ.

ಆದ್ದರಿಂದ ಪರಾವರತ್ವಾದಿಶಬ್ದಗಳು ವಿಷ್ಣುವಾಚಕವೇ ಆಗಿವೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 4

### ಸಂಗತಿ

**ಸೂ.ರ.:– एवं श्रौतस्मार्तप्रयोगनिमित्तातिशयाभ्यां प्रथम-द्वितीयोक्ताभ्यां भगवत्येवाव्यक्तादिशब्दानां मुख्यत्वात् । बाधकाभावे च मुख्यार्थस्यैव ग्राह्यत्वात् । अवरत्वादिश्रुतिनैरर्थ्यबाधकस्य च तृतीय उद्धृतत्वान्मुख्यार्थो भगवानेवाव्यक्तादिशब्दैर्वाच्य इति यदुक्तं तदेव युक्त्यन्तरेण प्रतिपादयत्सूत्रमाह ।**

**ಅನು.:–** ಈ ರೀತಿಯಾಗಿ "ಅವ್ಯಕ್ತಮಚಲಂ ಶಾಂತಂ" (ಪಿಪ್ಪಲಾದಶಾಖಾ) "ಅವ್ಯಕ್ತೋಽಕ್ಷರ ಉಚ್ಯತೇ" (ಭ.ಗೀ. 8-21) ಮೊದಲಾದ ಶ್ರೌತ-ಸ್ಮಾರ್ತ ಪ್ರಯೋಗ-ಗಳಿಂದ ಹಾಗೂ ಪ್ರವೃತ್ತಿನಿಮಿತ್ತಗಳಿಗೆ ಸ್ವಾಮಿಯಾಗಿರುವುದರಿಂದ ಅವ್ಯಕ್ತಾದಿ ಶಬ್ದಗಳು

ಭಗವಂತನಲ್ಲಿಯೇ ಮುಖ್ಯವಾಗಿವೆ. ಬಾಧಕ ಇಲ್ಲದಿದ್ದಾಗ ಮುಖ್ಯಾರ್ಥವನ್ನು ಸ್ವೀಕಾರ ಮಾಡುವುದೇ ಯೋಗ್ಯವಾದ್ದರಿಂದ ಅವ್ಯಕ್ತಾದಿಶಬ್ದಗಳಿಂದ ಭಗವಂತನನ್ನೇ ತೆಗೆದು-ಕೊಳ್ಳಬೇಕು ಎಂಬುದಾಗಿ ಮೊದಲನೇ ಮತ್ತು ಎರಡನೇ ಸೂತ್ರಗಳಲ್ಲಿ ಉಪಪಾದನೆ ಮಾಡಲಾಗಿದೆ.

ಮತ್ತು ಅವ್ಯಕ್ತಾದಿಶಬ್ದಗಳಿಂದ ಭಗವಂತನನ್ನೇ ವಾಚ್ಯತಯಾ ಸ್ವೀಕಾರ ಮಾಡಿದರೆ ಅವರತ್ವಾದಿಶ್ರುತಿಗಳಿಗೆ ನಿರರ್ಥಕತೆ ಬರುತ್ತದೆ ಎಂಬ ಬಾಧಕವನ್ನು ಮೂರನೇ ಸೂತ್ರದಲ್ಲಿ ಪರಿಹರಿಸಿದ್ದರಿಂದ ಅವ್ಯಕ್ತಾದಿಶಬ್ದಗಳಿಂದ ಭಗವಂತನೇ ಮುಖ್ಯವಾಗಿ ವಾಚ್ಯನಾಗುತ್ತಾನೆ ಎಂಬುದಾಗಿ ಈವರೆಗೆ ಏನು ಉಪಪಾದನೆ ಮಾಡಿದ್ದಾರೆಯೋ ಅದನ್ನೇ ಮತ್ತೊಂದು ಯುಕ್ತಿಯಿಂದಲೂ ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ ज्ञेयत्वावचनाच्च ॐ (१.४.४)

**ಸೂತ್ರಾರ್ಥ** :– ಜ್ಞೇಯತ್ವಾವಚನಾಚ್ಚ = "ತಮೇವೈಕಂ ಜಾನಥ" (ಮುಂ. 2-2-5) ಎಂಬುದಾಗಿ ವಿಷ್ಣುವಿಗೆ ಮಾತ್ರ ಮೋಕ್ಷಾರ್ಥಂ ಜ್ಞೇಯತ್ವವನ್ನು (ಮುಮುಕ್ಷು ಜ್ಞೇಯತ್ವವನ್ನು) ಹೇಳಿದ್ದರಿಂದ, ಅನ್ಯೇಷಾಂ ತದವಚನಾತ್ = ವಿಷ್ಣು ಬಿಟ್ಟು ಉಳಿದವರಿಗೆ ಮುಮುಕ್ಷುಜ್ಞೇಯತ್ವವನ್ನು ಹೇಳಿಲ್ಲವಾದ್ದರಿಂದ, ಪ್ರತ್ಯುತ ವಿಮುಂಚಥೇತಿ ಹೇಯತ್ವವಚನಾತ್ = ಪ್ರತ್ಯುತ "ಅನ್ಯಾ ವಾಚೋ ವಿಮುಂಚಥ" ಎಂಬುದಾಗಿ ಉಳಿದವರಿಗೆ ಹೇಯತ್ವವನ್ನು ಹೇಳಿದ್ದರಿಂದಲೂ ಸಹ ಅತ್ರತ್ಯಾವ್ಯಕ್ತಾದಿಶಬ್ದೈಃ ವಿಷ್ಣುರೇವ ವಾಚ್ಯಃ = ಇಲ್ಲಿ ಶ್ರುತವಾಗುತ್ತಿರುವ ಅವ್ಯಕ್ತಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ ಎಂದು ಅರ್ಥ.

**ಸೂ.ರ.:– एवं च विष्णोरेव मुमुक्षुज्ञेयत्व उक्तवचनात्प्रधानादेस्तद-भावात् । मोक्षफलकवेदानां तद्धेतुज्ञानविषयब्रह्मज्ञापन एव प्रवृत्तत्वात् । प्रतिवाक्यं तत्परत्वस्य चादावंत (हरिवंशे) इत्यादिवचनसिद्धत्वात् । यज्ज्ञाना न्मोक्षः स एव प्रतिपाद्य इत्यभ्युपगन्तव्यः । स्वतः प्राप्तमुख्य-वृत्तित्यागे कारणाभावाद्विष्णुरेवाव्यक्तादिशब्दवाच्यो न प्रधानादिरिति सिद्धम् ।**

ಅನು.:– ಇಲ್ಲಿ ಶ್ರುತವಾಗುತ್ತಿರುವ ಅವ್ಯಕ್ತಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗುತ್ತಾನೆ.

ಯಾಕೆಂದರೆ – "ತಮೇವೈಕಂ ಜಾನಥಾತ್ಮಾನಮನ್ಯಾ ವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ" ಎಂಬುದಾಗಿ ಮೋಕ್ಷಾರ್ಥಂ ಜ್ಞೇಯತ್ವವು (ಮುಮುಕ್ಷುಜ್ಞೇಯತ್ವವು) ವಿಷ್ಣುವಿಗೇ ಶ್ರುತವಾಗುತ್ತಿರುವುದರಿಂದ. ಇಂತಹ ಮುಮುಕ್ಷುಜ್ಞೇಯತ್ವವು ಪ್ರಧಾನಾದಿಗಳಿಗೆ ಶ್ರುತವಾಗುತ್ತಿಲ್ಲವಾದ್ದರಿಂದ ಪ್ರಧಾನಾದಿಗಳು ಅವ್ಯಕ್ತಾದಿಶಬ್ದವಾಚ್ಯರಾಗುವುದಿಲ್ಲ.

ವಿಷ್ಣುವಿಗೆ ಮುಮುಕ್ಷುಜ್ಞೇಯತ್ವ ಹೇಗೆ? ಎಂದರೆ, ಮೋಕ್ಷವನ್ನೇ ಫಲವಾಗಿ ಕೊಡಲು ಹೊರಟಿರುವ ವೇದಗಳು ಮೋಕ್ಷಕ್ಕೆ ಕಾರಣವಾದ ಜ್ಞಾನದಲ್ಲಿ ವಿಷಯನಾದ ಬ್ರಹ್ಮನನ್ನು ತಿಳಿಸಲೆಂದೇ ಹೊರಟಿವೆ. (ಯಾವ ಭಗವಂತನ ಜ್ಞಾನದಿಂದ ಮೋಕ್ಷವಾಗುವುದೋ ಆ ಭಗವಂತನನ್ನು ತಿಳಿಸಲಿಕ್ಕಾಗಿಯೇ ಪ್ರವೃತ್ತವಾಗಿವೆ.)

ವೇದಗಳು ವಿಷ್ಣುವನ್ನು ಬಿಟ್ಟು ಉಳಿದವರನ್ನು ತಿಳಿಸುತ್ತಿವೆಯಲ್ಲ? ಎಂದರೆ, ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ।" ಎಂಬುದಾಗಿ ಪ್ರತಿವಾಕ್ಯವೂ ವಿಷ್ಣುಪ್ರತಿಪಾದಕ ಎನ್ನುವುದನ್ನು ಹರಿವಂಶಾದಿಗಳಲ್ಲಿ ಸಿದ್ಧಪಡಿಸಲಾಗಿದೆ.

ವಿಷ್ಣುವು ಜ್ಞೇಯ (ಜ್ಞಾನವಿಷಯ) ಆಗಲಿ. ಆದರೆ ವೇದಪ್ರತಿಪಾದ್ಯ ಹೇಗೆ? ಎಂದರೆ, ಅದು ಸರಿಯಲ್ಲ. ಯಾವನ ಜ್ಞಾನದಿಂದ ಮೋಕ್ಷ ಆಗುವುದೋ ಅವನೇ ವೇದಪ್ರತಿಪಾದ್ಯ ಎಂದು ಅವಶ್ಯ ಅಂಗೀಕರಿಸಬೇಕು.

ಹೀಗೆ ಸ್ವತಃ ಪ್ರಾಪ್ತವಾದ ಮುಖ್ಯವೃತ್ತಿಯನ್ನು ತ್ಯಾಗ ಮಾಡುವುದರಲ್ಲಿ ಕಾರಣ ಇಲ್ಲವಾದ್ದರಿಂದ ವಿಷ್ಣುವೇ ಅವ್ಯಕ್ತಾದಿಶಬ್ದವಾಚ್ಯನಾಗುತ್ತಾನೆ. ಹೊರತು ಪ್ರಧಾನಾದಿಗಳು ಆಗುವುದಿಲ್ಲ ಎಂದು ಸಿದ್ಧವಾಗುತ್ತದೆ.

## ಸೂತ್ರ – 5

## ಆಕ್ಷೇಪ

**ಸೂ.ರ.:– ननु न प्रधानस्य मोक्षार्थं ज्ञेयत्वे वचनाभावः । अनाद्यनन्तमिति (कठ.३-१५) वचनसद्भावादित्याक्षिप्य समादधत्सूत्रमाह ।**

**ಅನು.:–** ವಿಷ್ಣುವಿಗೆ ಮೋಕ್ಷಾರ್ಥಂ ಜ್ಞೇಯತ್ವ (ಮುಮುಕ್ಷುಜ್ಞೇಯತ್ವ) ಇದೆ ಎಂಬ ವಿಷಯದಲ್ಲಿ ಪ್ರಮಾಣವಿದೆಯೇ ಹೊರತು ಪ್ರಧಾನಕ್ಕೆ ಮೋಕ್ಷಾರ್ಥಂ ಜ್ಞೇಯತ್ವ ಇದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ – "ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ"

ಎಂಬುದಾಗಿ ಪ್ರಧಾನಕ್ಕೆ ಮೋಕ್ಷಾರ್ಥಂ ಜ್ಞೇಯತ್ವವನ್ನು ಹೇಳುವ ಪ್ರಮಾಣ ಇದೆಯಲ್ಲ? ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೇಳುವ ಸೂತ್ರವನ್ನು ಹೇಳುತ್ತಾರೆ–

**ॐ वदतीति चेन्न प्राज्ञो हि ॐ (१.४.५)**

**ಸೂತ್ರಾರ್ಥ** :– ಅನಾದ್ಯನಂತಂ ಎಂಬ ಕಾಠಕವಾಕ್ಯವು ವದತಿ = ಪ್ರಧಾನವನ್ನು ಪ್ರತಿಪಾದಿಸುತ್ತದೆ, ಆದ್ದರಿಂದ ಪ್ರಧಾನಕ್ಕೂ ಮೋಕ್ಷಾರ್ಥಂ ಜ್ಞೇಯತ್ವ ಇದೆ ಇತಿ ಚೇತ್ = ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ. ಕುತಃ = ಯಾಕೆ? ಹಿ = ಯಾವ ಕಾರಣ ಪ್ರಾಜ್ಞಃ = ಪ್ರಾಜ್ಞಶಬ್ದವಾಚ್ಯನಾದ ಪರಮಾತ್ಮನೇ ಅಲ್ಲಿ ಪ್ರತಿಪಾದಿತನಾಗಿದ್ದಾನೆ ಹೊರತು ಪ್ರಧಾನವು ಪ್ರತಿಪಾದ್ಯವಾಗಿಲ್ಲವೋ ಅತಃ = ಆ ಕಾರಣ ನ ತಸ್ಯ ಜ್ಞೇಯತ್ವಂ ಮಂತವ್ಯಂ = ಪ್ರಧಾನಕ್ಕೆ ಮೋಕ್ಷಾರ್ಥಂ ಜ್ಞೇಯತ್ವವನ್ನು ತಿಳಿಯಲಾಗುವುದಿಲ್ಲ.

## ಸಮಾಧಾನ

**ಸೂ.ರ.:– एवं च विष्णोः सर्वस्मात्परत्वोक्तावपि महतो महीयानिति (कठ.२-२०) श्रुत्या सर्वस्मात्स्थूलात्परस्य महतः परत्वस्य कैमुत्येन सिद्धत्वात् । तथा च नैतद्वाक्यबलेनान्यस्य किंतु भगवत एव मोक्षार्थं ज्ञेयत्वमिति सिद्धम् ।**

**ಅನು.**:– ಈ ವಾಕ್ಯಬಲದಿಂದಾಗಿ ಪ್ರಧಾನಕ್ಕೆ ಮೋಕ್ಷಾರ್ಥಂ ಜ್ಞೇಯತ್ವವನ್ನು ತಿಳಿಯಲು ಸಾಧ್ಯವಿಲ್ಲ. ಏಕೆಂದರೆ – ಅನಾದ್ಯನಂತಂ ಎಂಬ ಆ ವಾಕ್ಯದಲ್ಲಿ ಪ್ರಾಜ್ಞಶಬ್ದ-ವಾಚ್ಯನಾದ ಪರಮಾತ್ಮನೇ ಅಲ್ಲಿ ಪ್ರತಿಪಾದ್ಯನಾಗಿದ್ದಾನೆ. ಹೊರತು ಪ್ರಧಾನವು ಪ್ರತಿಪಾದ್ಯವಾಗಿಲ್ಲ.

ಮಹತ್ಪರತ್ವಲಿಂಗ ಇರುವುದರಿಂದ ಪ್ರಧಾನವೇ ವಾಚ್ಯಬೇಕಲ್ಲ? ಎಂದರೆ, ಅದು ಸರಿಯಲ್ಲ. ಅಣೋರಣೀಯಾನ್ ಮಹತೋ ಮಹೀಯಾನ್ ಎಂಬುದಾಗಿ ಶ್ರುತಿ ಹೇಳುವಂತೆ ಮಹತ್ಪರತ್ವಲಿಂಗವು ವಿಷ್ಣುಸಂಬಂಧಿಯೇ ಆಗಿದೆ. ಆದ್ದರಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಹೌದು, ಮಹತೋ ಮಹೀಯಾನ್ ಎಂಬುದಾಗಿ ಶ್ರುತಿಯು ಸ್ಥೂಲವಾದ ಎಲ್ಲ ವಸ್ತುಗಳಿಗಿಂತಲೂ ಸ್ಥೂಲತ್ವವನ್ನು ಹೇಳುತ್ತಿದೆಯೇ ಹೊರತು ಮಹತ್ಪರತ್ವವನ್ನು ಹೇಳುತ್ತಿಲ್ಲ. ಆದ್ದರಿಂದ ಮಹತ್ಪರತ್ವಲಿಂಗವು ವಿಷ್ಣುಸಾಧಕ ಹೇಗೆ ಆಗುತ್ತದೆ? ಎಂದರೆ, ಅದೂ

ಸರಿಯಲ್ಲ. ಏಕೆಂದರೆ - ಸ್ಥೂಲವಾದ ಎಲ್ಲ ವಸ್ತುಗಳಿಗಿಂತಲೂ ಪರತ್ವವನ್ನು ಹೇಳಿದರೆ ಮಹತ್ಪರತ್ವವೂ ಕೈಮುತ್ಯದಿಂದಲೇ ಸಿದ್ಧವಾಗುತ್ತದೆ.

ಆದ್ದರಿಂದ ಈ ವಾಕ್ಯಬಲದಿಂದಾಗಿ ಪ್ರಧಾನಕ್ಕೆ ಮೋಕ್ಷಾರ್ಥಂ ಜ್ಞೇಯತ್ವವು ಸಿದ್ಧಿಸುವುದಿಲ್ಲ. ಕಿಂತು ಪ್ರಾಜ್ಞಶಬ್ದಯೋಗದಿಂದಾಗಿ ಮತ್ತು ಮಹತ್ಪರತ್ವಲಿಂಗದಿಂದಾಗಿ ವಿಷ್ಣುವಿಗೇ ಮೋಕ್ಷಾರ್ಥಂ ಜ್ಞೇಯತ್ವವು ಸಿದ್ಧಿಸುತ್ತದೆ.

ಸೂತ್ರ - 6

## ಆಕ್ಷೇಪ

**ಸೂ.ರ.:–** **ननु विशेषतो महत्परत्वस्य प्रधानलिङ्गस्यामुख्यार्थतामङ्गीकृत्यानाद्यनन्तादिवाक्यस्य विष्णुपरत्वग्रहणे कारणाभावात् । प्रधानमेवात्रोच्यत इति प्राप्ते सूत्रमाह ।**

**ಅನು.:–** ಮಹತ್ಪರತ್ವ ಎಂಬ ಲಿಂಗವು ವಿಶೇಷವಾಗಿ ಪ್ರಧಾನಸಂಬಂಧಿಯಾಗಿದೆ. ಅಂತಹ ವಿಶೇಷವಾಗಿ ಪ್ರಧಾನಸಂಬಂಧಿಯಾದ ಮಹತ್ಪರತ್ವಲಿಂಗಕ್ಕೆ ಅಮುಖ್ಯಾರ್ಥತ್ವವನ್ನು ಅಂಗೀಕರಿಸಿ, ಅನಾದ್ಯನಂತಂ ಎಂಬ ವಾಕ್ಯವು ವಿಷ್ಣುಪರವೇ ಆಗಿದೆ ಎಂದು ಹೇಳಲು ಯಾವ ಕಾರಣವೂ ಇಲ್ಲವಾದ್ದರಿಂದ ಇಲ್ಲಿ ಪ್ರಧಾನವೇ ಪ್ರತಿಪಾದ್ಯವಾಗುತ್ತದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರ ಹೇಳುತ್ತಾರೆ–

**ॐ प्रकरणात् ॐ (१.४.६)**

**ಸೂತ್ರಾರ್ಥ :–** ಪ್ರಕರಣಾತ್ = (ವೈಷ್ಣವರೂಪಾಣಾಂ ತ್ರಯಾಣಾಂ ಪ್ರಕರಣಬಲಾಚ್ಚ) ಈ ಪ್ರಕರಣವು ವಿಷ್ಣುಸಂಬಂಧಿಯಾದ ಪ್ರಕರಣವಾದದ್ದರಿಂದ, ಪ್ರಕರಣಬಲದಿಂದಲೂ ಸಹ ಪ್ರಾಜ್ಞನಾಮಕನಾದ ಭಗವಂತನೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ.

## ಸಮಾಧಾನ

**ಸೂ.ರ.:–** **एवं चैतत्प्रकरणार्थोपासकस्य विष्णुपदप्राप्त्युक्त्यैतत्प्रकरणस्य वैष्णवत्वात् । सोऽध्वन इति (कठ.३-९) श्रुतेः । अतो विष्णोरेवैतत्प्रकरणप्रतिपाद्यत्वमिति सिद्धम् ।**

**ಅನು.:–** ವಿಷ್ಣುವನ್ನು ಗ್ರಹಣ ಮಾಡುವುದಕ್ಕೆ ಕಾರಣ ಇಲ್ಲ ಎನ್ನುವುದು ಸರಿಯಲ್ಲ, ಕಾರಣ ಇದೆ. ಏನು ಕಾರಣ? ಇದು ವಿಷ್ಣುಪ್ರಕರಣ ಆಗಿರುವುದೇ ಅದಕ್ಕೆ ಕಾರಣ. ಇದು ವಿಷ್ಣುಪ್ರಕರಣ ಎನ್ನುವುದಕ್ಕೆ ಹಿನ್ನೆಲೆ ಏನು? ಎಂದರೆ, "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್" (ಕ.ಉ. 1-3-9) ಎಂಬುದಾಗಿ ಶ್ರುತಿ ಹೇಳುವಂತೆ ಈ ಪ್ರಕರಣದಲ್ಲಿ ಹೇಳಿದ ಅರ್ಥವನ್ನು ಉಪಾಸನೆ ಮಾಡಿದವನಿಗೆ ವಿಷ್ಣುಪದಪ್ರಾಪ್ತಿಯು ಫಲವಾಗಿ ಶ್ರುತವಾಗುತ್ತಿದೆ. ಈ ಪ್ರಕರಣವು ವಿಷ್ಣುಪ್ರಕರಣ ಆಗದೇ ಇತರರ ಪ್ರಕರಣವಾಗಿದ್ದರೆ ಉಪಾಸಕನಿಗೆ ವಿಷ್ಣುಪದಪ್ರಾಪ್ತಿಯು ಕೂಡುವುದಿಲ್ಲ.

ಈಗ ಉಪಾಸಕನಿಗೆ ವಿಷ್ಣುಪದಪ್ರಾಪ್ತಿಯು ಶ್ರುತವಾಗುತ್ತಿರುವುದರಿಂದ ಈ ಪ್ರಕರಣವು ವಿಷ್ಣುಪ್ರಕರಣ ಎಂದು ತಿಳಿಯುತ್ತದೆ. ಆದ್ದರಿಂದ ಇದು ವಿಷ್ಣುಪ್ರಕರಣವಾದ್ದರಿಂದ ಇಲ್ಲಿ ಪ್ರಾಜ್ಞನಾಮಕನಾದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಯೇ ಹೊರತು ಪ್ರಧಾನಾದಿಗಳು ಪ್ರತಿಪಾದ್ಯವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

### ಸೂತ್ರ – 7

**ಸೂ.ರ.:–** हेत्वन्तरेणानाद्यनन्तादिवाक्येऽन्यस्यापि प्रतिपाद्यतां पराकुर्वत्सूत्रमुपन्यस्यति ।

**ಅನು.:–** ಅನಾದ್ಯನಂತಂ ಇತ್ಯಾದಿವಾಕ್ಯಗಳಲ್ಲಿ ವಿಷ್ಣು ಬಿಟ್ಟು ಉಳಿದವರಿಗೆ ಪ್ರತಿಪಾದ್ಯತ್ವವನ್ನು ಮತ್ತೊಂದು ಹೇತುವಿನಿಂದಲೂ ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ.

**ॐ त्रयाणामेव चैवमुपन्यासः प्रश्नश्च ॐ (१.४.७)**

**ಸೂತ್ರಾರ್ಥ :–** (ಚಶಬ್ದವು ಯುಕ್ತಿಸಮುಚ್ಚಾಯಕವಾಗಿದೆ ಅಥವಾ ಯತಃ ಎಂಬ ಅರ್ಥದಲ್ಲಿ ಇದೆ. ಏವಶಬ್ದವು ಪ್ರಕಾರತ್ವೈವಿಧ್ಯಪರಾಮರ್ಶಕವಾಗಿದೆ.)

ಚ (ಯತಃ) = ಯಾವ ಕಾರಣ ಏವಂ ತ್ರಯಾಣಾಮೇವ = ಪಿತೃಸೌಮನಸ್ಯ-ಸ್ವರ್ಗ್ಯಾಗ್ನಿ-ಪರಮಾತ್ಮ ಈ ಮೂರರ ವಿಷಯಕವೇ ಆದ ಪ್ರಶ್ನಃ = ಪ್ರಶ್ನೆಯು ನಚಿಕೇತರ್ಷಿಣಾ ಯಮಂ ಪ್ರತಿ ಕೃತಃ = ನಚಿಕೇತ ಋಷಿಯಿಂದ ಯಮನನ್ನು ಕುರಿತು ಮಾಡಲ್ಪಟ್ಟಿದೆ. ತೇಷಾಮೇವ ಉಪನ್ಯಾಸಃ ಚ = ಆ ಮೂರು ಪ್ರಶ್ನೆಗಳಿಗೇನೇ ಉತ್ತರವೂ ಅತ್ರ ಪ್ರಕರಣೇ ದೃಶ್ಯತೇ = ಈ ಪ್ರಕರಣದಲ್ಲಿ ಕಾಣುತ್ತಿದೆ. (ಶ್ರುತವಾಗುತ್ತಿದೆ) ಅತೋ ನಾತ್ರ ಪ್ರಧಾನಂ ಪ್ರತಿಪಾದ್ಯಮಿತ್ಯರ್ಥಃ = ಆದ್ದರಿಂದ ಇಲ್ಲಿ ಪ್ರಧಾನವು ಪ್ರತಿಪಾದ್ಯವಾಗಿಲ್ಲ ಎಂದು ಅರ್ಥ.

**ಸೂ.ರ.:– एवं चोक्तत्रयाणामेव प्रश्नप्रतिवचनयोस्तस्मिन्प्रकरणे दृश्यमानत्वात् । अविज्ञातप्रार्थनमिति वचनाद्विरोधाभावात् । ततश्चोक्त-हेतुत्वेनानाद्यनन्तादि वाक्यस्य भवगत्प्रतिपाद्यत्वं सिद्धम् ।**

**ಅನು.:–** ನಚಿಕೇತ-ಯಮರ ಸಂವಾದರೂಪವಾದ ಈ ಪ್ರಕರಣದಲ್ಲಿ ಪಿತೃಸೌಮನಸ್ಯ-ಸ್ವರ್ಗ್ಯಾಗ್ನಿ-ಪರಮಾತ್ಮ ಈ ಮೂರರ ವಿಷಯದಲ್ಲಿಯೇ ನಚಿಕೇತರು ಯಮನನ್ನು ಕುರಿತು ಪ್ರಶ್ನೆ ಮಾಡಿದ್ದಾರೆ. ಆ ಮೂರರ ಬಗ್ಗೆಯೇ ಯಮದೇವರು ಉತ್ತರವನ್ನು ನೀಡಿದ್ದನ್ನೂ ಕಾಣುತ್ತೇವೆ. ಆದ್ದರಿಂದ ಇಲ್ಲಿ ವಿಷ್ಣು ಪ್ರತಿಪಾದ್ಯನಾಗುತ್ತಾನೆಯೇ ಹೊರತು ಪ್ರಧಾನವು ಪ್ರತಿಪಾದ್ಯವಾಗುವುದಿಲ್ಲ.

ನಚಿಕೇತರು ಯಮನನ್ನು ಕುರಿತು ಪಿತೃಸೌಮನಸ್ಯವನ್ನು ವರವಾಗಿ ಪ್ರಾರ್ಥಿಸಿ-ಕೊಂಡಿದ್ದಾರೆ. ಅಂದಮೇಲೆ ಪಿತೃಸೌಮನಸ್ಯ ಎಂಬ ವರದ ಪ್ರಾರ್ಥನೆಯು ಪ್ರಶ್ನೆ ಹೇಗೆ ಆಗುತ್ತದೆ? ಎಂದು ಶಂಕಿಸುವುದು ಸರಿಯಲ್ಲ. ''ಅವಿಜ್ಞಾತಪ್ರಾರ್ಥನಂ ಚ ಪ್ರಶ್ನ ಇತ್ಯಭಿಧೀಯತೇ ।'' ಎಂಬುದಾಗಿ ಪ್ರಮಾಣವಚನ ಇರುವುದರಿಂದ ಅವಿಜ್ಞಾತ-ಪ್ರಾರ್ಥನೆಯೂ ಪ್ರಶ್ನೆ ಎನಿಸಿಕೊಳ್ಳುತ್ತದೆ. ಆದ್ದರಿಂದ ಅದರ ವಿರೋಧವೂ ಬರುವುದಿಲ್ಲ.

ಹೀಗೆ ಪಿತೃಸೌಮನಸ್ಯ-ಸ್ವರ್ಗ್ಯಾಗ್ನಿ-ಪರಮಾತ್ಮ ವಿಷಯಕವಾದ ಪ್ರಶ್ನೆ-ಪ್ರತಿವಚನಗಳೇ ಶ್ರುತ್ರವಾಗುತ್ತಿರುವ ಕಾರಣ ಈ ಕಾರಣದಿಂದಲೂ ವಿಷ್ಣುವಿಗೇ ಪ್ರತಿಪಾದ್ಯತ್ವವು ಸಿದ್ಧವಾಗುತ್ತದೆ.

### ಸೂತ್ರ – 8

### ಆಕ್ಷೇಪ

**ಸೂ.ರ.:– नन्वव्यक्तादिशब्दानां विष्णुरेव मुख्यवाच्य इत्ययुक्तम् । तेषां प्रधानादावेव प्रसिद्धत्वात् ।**

ಅವ್ಯಕ್ತಾದಿಶಬ್ದಗಳಿಗೆ ಮುಖ್ಯವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗಿದ್ದಾನೆ ಎಂದು ಹೇಳುವುದು ಸರಿಯಾಗುವುದಿಲ್ಲ. ಯಾಕೆ? ಅವ್ಯಕ್ತಾದಿಶಬ್ದಗಳು ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧವಾಗಿದ್ದರಿಂದ.

**ಸೂ.ರ.:– न चाव्यक्तादिशब्दप्रवृत्तिनिमित्तस्य भगवति मुख्यत्वेन तच्छब्दानां तत्रैव मुख्यत्वमुक्तमिति वाच्यम् । यत्र शब्दस्य प्रसिद्धिस्तत्र**

**तस्य मुख्यवाच्यता । यत्र च यस्य मुख्यं प्रवृत्तिनिमित्तमस्ति तस्य मुख्यत्वमित्यस्यादृष्टचरत्वात् । दृष्टान्ताभावेन निमित्तातिशयत्वस्य तस्मिंस्तत्साधनायोगादिति प्राप्ते सूत्रमाह ।**

**ಅನು.:–** ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವಾದದ್ದು ಭಗವಂತನಲ್ಲಿಯೇ ಮುಖ್ಯವಾದ್ದರಿಂದ ಅವ್ಯಕ್ತಾದಿಶಬ್ದಗಳು ಭಗವಂತನಲ್ಲಿಯೇ ಮುಖ್ಯವಾಗುತ್ತವೆ. ಆದ್ದರಿಂದ ಹಿಂದೆ ಹೇಳಿದ್ದು ಸಮಂಜಸವೇ ಆಗಿದೆ ಎಂದು ಶಂಕಿಸುವುದು ಸರಿಯಲ್ಲ.

"ಶಬ್ದವು ಯಾರಲ್ಲಿ ಪ್ರಸಿದ್ಧವಾಗಿದೆಯೋ ಅವರಲ್ಲಿ ಅದು ಅಮುಖ್ಯ, ಆ ಶಬ್ದದ ಪ್ರವೃತ್ತಿನಿಮಿತ್ತವು ಯಾರಲ್ಲಿ ಮುಖ್ಯವಾಗಿದೆಯೋ ಅವರಲ್ಲಿ ಆ ಶಬ್ದವು ಮುಖ್ಯ" ಎನ್ನುವುದು ಅದೃಷ್ಟಚರವಾಗಿದೆ. (ಎಲ್ಲಿಯೂ ಹಾಗೆ ಕಂಡಿಲ್ಲ) ಹಾಗೆ ಹೇಳಲು ಯಾವ ದೃಷ್ಟಾಂತವೂ ಇಲ್ಲವಾದ್ದರಿಂದ, ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತಾತಿಶಯತ್ವವನ್ನು ವಿಷ್ಣುವಿನಲ್ಲಿ ಸಾಧನ ಮಾಡಲು ಬರುವುದಿಲ್ಲ.

ಆದ್ದರಿಂದ ಅವ್ಯಕ್ತಾದಿಶಬ್ದಗಳು ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧವಾದ್ದರಿಂದ ಪ್ರಧಾನಾದಿಗಳೇ ವಾಚ್ಯವಾಗುತ್ತವೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

### ॐ महद्वच ॐ (१.४.८)

**ಸೂತ್ರಾರ್ಥ :–** ಮಹದ್ವತ್ ಚ = "ಮಹಾಂತಂ ವಿಭುಮಾತ್ಮಾನಂ" ಇತ್ಯಾದಿ ವಾಕ್ಯಗತವಾದ ಮಹತ್ ಶಬ್ದವು ವಿಷ್ಣುಪರವೇ ಆಗಿದೆಯೇ ಹೊರತು ಮಹತ್ತತ್ವಪರವಾಗಿಲ್ಲ, ಹೇಗೋ ಅದರಂತೆ ಅವ್ಯಕ್ತಾದಿಶಬ್ದಗಳೂ ಸಹ ವಿಷ್ಣುಪರವೇ ಆಗಿವೆ ಹೊರತು ಪ್ರಧಾನಾದಿಪರವಾಗಿಲ್ಲ.

### ಸಮಾಧಾನ

**ಸೂ.ರ.:–** **एवं च महच्छब्दस्यैव दृष्टान्तत्वात् ।**

**ಅನು.:–** "ಶಬ್ದವು ಯಾರಲ್ಲಿ ಪ್ರಸಿದ್ಧವಾಗಿದೆ, ಪ್ರಸಿದ್ಧವಾದ ಮಾತ್ರಕ್ಕೆ ಅದು ಮುಖ್ಯವಾಚ್ಯ- ವಾಗುವುದಿಲ್ಲ, ಅದು ಅಲ್ಲಿ ಅಮುಖ್ಯ. ಇನ್ನು ಆ ಶಬ್ದದ ಪ್ರವೃತ್ತಿನಿಮಿತ್ತವು ಯಾರಲ್ಲಿ ಮುಖ್ಯವಾಗಿದೆಯೋ ಅವರಲ್ಲಿ ಆ ಶಬ್ದವು ಮುಖ್ಯವಾಗುತ್ತದೆ' ಎನ್ನುವುದಕ್ಕೆ

ದೃಷ್ಟಾಂತವೇ ಇಲ್ಲ ಎಂಬ ಶಂಕೆ ಸೂಕ್ತವಲ್ಲ. ಏಕೆಂದರೆ ಈ ನಿಯಮಕ್ಕೆ ಮಹತ್ ಶಬ್ದವೇ ದೃಷ್ಟಾಂತವಾಗಿದೆ.

ಮಹತ್ ಶಬ್ದಕ್ಕೆ ಮಹತ್ತತ್ವದಲ್ಲಿ ಪ್ರಸಿದ್ಧಿ ಇದ್ದರೂ ಅದರಲ್ಲಿ ಅದು ಅಮುಖ್ಯ. ಮಹತ್‌ಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಮುಖ್ಯವಾಗಿದ್ದರಿಂದ ಮಹತ್‌ಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿದ್ದು ಕಂಡಿದೆ.

**ಸೂ.ರ.:– न च प्रसिद्धिविरोधः । महान्तं विभुमिति श्रुतौ महच्छब्दो महतत्त्वे प्रसिद्धोऽपि परममहत्त्वाख्यप्रवृत्तिनिमित्तवत्त्वात्तस्य भगवति मुख्यवाच्यत्वेनाङ्गीकारात् । तथाऽव्यक्तादिशब्दानामन्यत्र प्रसिद्धत्वेऽपि परमाव्यक्तत्वादिप्रवृत्तिनिमित्तवत्त्वात्तस्मिन्नेव परममुख्यवृत्तित्वाङ्गीकारात् । तथा चाव्यक्तादिशब्दवाच्यो विष्णुरेवेति सिद्धम् ।**

**ಅನು.:–** ಮಹತ್ ಶಬ್ದವು ಮಹತ್ತತ್ವದಲ್ಲಿ ಅಮುಖ್ಯ ಎಂದು ಹೇಳಿದರೆ (ಮಹತ್ ಶಬ್ದಕ್ಕೆ ಮಹತ್ತತ್ವದಲ್ಲಿಯೇ ಪ್ರಸಿದ್ಧಿ ಇರುವುದರಿಂದ) ಪ್ರಸಿದ್ಧಿವಿರೋಧ ಬರುತ್ತದೆ ಎಂದು ಶಂಕಿಸುವುದು ಸರಿಯಲ್ಲ.

ಮಹಾಂತಂ ವಿಭುಮಾತ್ಮಾನಂ ಎಂಬ ಶ್ರುತಿಯಲ್ಲಿ ಮಹತ್‌ಶಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾಗಿದ್ದರೂ ಸಹ ಪರಮಮಹತ್ವ ಎಂಬ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಇರುವುದ-ರಿಂದ ಆ ಭಗವಂತನೇ ಮಹತ್‌ಶಬ್ದಕ್ಕೆ ಮುಖ್ಯವಾಚ್ಯ ಎಂದು ಅಂಗೀಕರಿಸಲಾಗಿದೆ.

ಅದೇ ರೀತಿಯಾಗಿ ಅವ್ಯಕ್ತಾದಿಶಬ್ದಗಳು ಪ್ರಧಾನಾದಿಗಳಲ್ಲಿ ಪ್ರಸಿದ್ಧವಾದರೂ ಸಹ ಪರಮಾವ್ಯಕ್ತತ್ವ ಎಂಬ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿಯೇ ಇರುವುದರಿಂದ ಅವ್ಯಕ್ತಾದಿ-ಶಬ್ದಗಳಿಗೆ ವಿಷ್ಣುವೇ ಮುಖ್ಯವಾಚ್ಯನಾಗಿದ್ದಾನೆ (ಪರಮಮುಖ್ಯವೃತ್ತಿಯಿಂದ ವಾಚ್ಯನಾಗಿದ್ದಾನೆ) ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ಅವ್ಯಕ್ತಾದಿಶಬ್ದವಾಚ್ಯ-ನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ – 9

### ಆಕ್ಷೇಪ

ಸೂ.ರ.:– ननु परमात्मनि प्रवृत्तिनिमित्तस्यातिशयत्वेऽपि

**नाव्यक्तादिशब्दानां तत्र परममुख्यता । तत्र प्रसिद्धिवैधुर्येण वाच्यताया एवाभावात् । किं नामातिसहनवति पुरुषे सिंहशब्दस्यैव गौणता ।**

**ಅನು.:–** ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವು ಅತಿಶಯಿತವಾಗಿ ವಿಷ್ಣುವಿನಲ್ಲಿ ಇದ್ದರೂ ಸಹ ಅವ್ಯಕ್ತಾದಿಶಬ್ದಗಳು ವಿಷ್ಣುವಿನಲ್ಲಿ ಪರಮಮುಖ್ಯವಾಗಲು ಸಾಧ್ಯವಿಲ್ಲ. ಏಕೆಂದರೆ - ವಾಚಕತ್ವ ಇದೆ ಎಂದು ನಿರ್ಣಯಿಸಲು ಪ್ರಸಿದ್ಧಿಯೇ ಕಾರಣವಾಗಿರುವುದು. ಪ್ರಕೃತದಲ್ಲಿ ಅವ್ಯಕ್ತಾದಿಗಳು ವಿಷ್ಣುವಾಚಕವಾಗಬೇಕಾದರೆ ವಿಷ್ಣುವಿನಲ್ಲಿ ಪ್ರಸಿದ್ಧಿ ಇರಬೇಕು. ಆದರೆ ವಿಷ್ಣುವಿನಲ್ಲಿ ಪ್ರಸಿದ್ಧಿಯೇ ಇಲ್ಲವಾದ್ದರಿಂದ, ವಾಚಕತ್ವ ಬರಲು ಹೇಗೆ ಸಾಧ್ಯ?

ಯೋಗಯುಕ್ತಪ್ರಯೋಗದಿಂದಾಗಿ ವಾಚಕತ್ವ ಇದೆ ಎಂದು ನಿಶ್ಚಯ ಮಾಡಬಹುದಲ್ಲವೇ? ಎಂದರೆ, ಅದೂ ಸರಿಯಲ್ಲ. ಅತ್ಯಂತ ಸಹನಶೀಲನಾದ ವ್ಯಕ್ತಿಯಲ್ಲಿ ಯೋಗವೃತ್ತಿಯಿಂದ ಸಿಂಹ ಎಂಬ ಶಬ್ದವನ್ನು ಪ್ರಯೋಗ ಮಾಡಿದರೂ ಸಹ ಸಿಂಹಶಬ್ದವು ಆ ವ್ಯಕ್ತಿಗೆ ವಾಚಕವಾಗಿದ್ದು ಕಂಡಿಲ್ಲ.

**ಸೂ.ರ.:– तथा च महद्वच्चेत्ययुक्तम् । महच्छब्दस्य स्वतो भगवद्वाचित्वेन प्रवृत्तिनिमित्ताधिक्यात्परममुख्यत्वसम्भवेऽप्यव्यक्तादिशब्दानां भगवद्वाचित्वस्यैवाभावेन वैषम्यादिति प्राप्ते समादधत्सूत्रमाह ।**

**ಅನು.:–** ಆದ್ದರಿಂದ ಮಹದ್ವಚ್ಚ ಎಂದು ಹೇಳಿದ್ದು (ಮಹತ್‌ಶಬ್ದದಂತೆ ಎಂಬುದಾಗಿ ದೃಷ್ಟಾಂತ ಕೊಟ್ಟಿದ್ದು) ಸರಿಯಲ್ಲ. ಅಲ್ಲಿ ಮಹತ್‌ಶಬ್ದವು ಭಗವಂತನಿಗೆ ಸ್ವಾಭಾವಿಕವಾಗಿಯೇ ವಾಚಕವಾಗಿದ್ದರಿಂದ, ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಅಧಿಕವಾಗಿ ಇರುವ ಕಾರಣ ವಿಷ್ಣುವು ಪರಮಮುಖ್ಯವಾಚ್ಯ ಎಂದು ಹೇಳಬಹುದು.

ಆದರೆ ಇಲ್ಲಿ ಅವ್ಯಕ್ತಾದಿಶಬ್ದಗಳಿಗೆ ವಿಷ್ಣುವಾಚಕತ್ವವೇ ಇಲ್ಲವಾದ್ದರಿಂದ ಮಹತ್‌-ಶಬ್ದಕ್ಕೂ ಅವ್ಯಕ್ತಾದಿಶಬ್ದಗಳಿಗೂ ವೈಷಮ್ಯ ಇದೆಯಲ್ಲವೇ? ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ चमसवदविशेषात् ॐ (१.४.९)**

**ಸೂತ್ರಾರ್ಥ :–**ಚಮಸವತ್ = ಚಮಸ್‌ಶಬ್ದವು ಯಜ್ಞಪಾತ್ರೆಯಲ್ಲಿ ಪ್ರಸಿದ್ಧವಾಗಿದ್ದರೂ ಸಹ ಇದಂ ತಚ್ಛಿರಃ (ಬೃ. 4-2-3) ಎಂಬ ಶ್ರುತಿಬಲದಿಂದಾಗಿ ಶಿರೋವಾಚಕವಾಗಿದೆ ಎಂದು ಹೇಗೆ ಅಂಗೀಕರಿಸಲಾಗುವುದೋ ಅದರಂತೆಯೇ

ಅವ್ಯಕ್ತಾದಿಶಬ್ದಗಳು ಪ್ರಧಾನಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಸಹ ನಾಮಾನಿ ಸರ್ವಾಣಿ ಯಮಾವಿಶಾಂತಿ (ಭಾಲ್ಲವೇಯಶ್ರುತಿ) ಎಂಬ ಶ್ರುತಿಬಲದಿಂದಾಗಿ ವಿಷ್ಣುವಾಚಕವಾಗಿದೆ.

ಆದರೂ ಸಹ ಅವ್ಯಕ್ತಾದಿಶಬ್ದಗಳಿಗೆ ವಿಷ್ಣುವಾಚಕತ್ವವನ್ನು ಏಕೆ ಒಪ್ಪಬೇಕು? ಎಂದರೆ ಅದಕ್ಕೆ ಹೇಳಿದರು ಅವಿಶೇಷಾತ್ = ನಾಮಾನಿ ಸರ್ವಾಣಿ ಎಂಬ ಶ್ರುತಿಗೆ ಇದಂ ತಚ್ಛಿರಃ ಎಂಬ ಶ್ರುತಿಯಿಂದ ಯಾವ ವಿಶೇಷವೂ ಇಲ್ಲವಾದ್ದರಿಂದ.

## ಸಮಾಧಾನ

**ಸೂ.ರ.:–** **एवं च चमसशब्दस्य यज्ञपात्रविशेषे प्रसिद्धत्वेन शिरोवाचकत्वेनाप्रसिद्धत्वेऽपीदं तच्छिर इति श्रुतिबलेन यथा शिरोवाचकत्वम् । तथा तद्दृष्टान्तेनाव्यक्तादिशब्दानां भगवत्यप्रसिद्धत्वेऽपि नामानीत्यनु शासनरूपश्रुतिबलात्तेषां भगवद्वाचकत्वस्य निश्चयसम्भवेन तच्छिर इति नामानीति च श्रुत्योरनुशासनत्वेऽविशेषात् । ततश्चाव्यक्तादिशब्दवाच्यो हरिर्भवत्येवेति सर्वशब्दवाच्यत्वं तस्योपपन्नमिति सिद्धम् ।**

**ಅನು.:–** ಚಮಸಶಬ್ದವು ಯಜ್ಞಪಾತ್ರವಿಶೇಷದಲ್ಲಿ ಪ್ರಸಿದ್ಧವಾದ್ದರಿಂದ ಶಿರೋವಾಚಕವಾಗಿ ಅಪ್ರಸಿದ್ಧವಾಗಿದ್ದರೂ ಸಹ ಇದಂ ತಚ್ಛಿರಃ ಎಂಬ ಶ್ರುತಿಬಲದಿಂದಾಗಿ ಶಿರೋವಾಚಕವೆಂದು ಹೇಗೆ ಅಂಗೀಕರಿಸಲಾಗಿದೆಯೋ ಅದೇ ರೀತಿಯಾಗಿ ಆ ದೃಷ್ಟಾಂತದಿಂದ ಅವ್ಯಕ್ತಾದಿಶಬ್ದಗಳು ಭಗವಂತನಲ್ಲಿ ಅಪ್ರಸಿದ್ಧವಾಗಿದ್ದರೂ ಸಹ ನಾಮಾನಿ ಸರ್ವಾಣಿ ಯಮಾವಿಶಂತಿ (ಭಾಲ್ಲವೇಯಶ್ರುತಿ) ಎಂಬ ಶ್ರುತಿಬಲದಿಂದಾಗಿ (ಇದಂ ತಚ್ಛಿರಃ ಎಂಬ ಶ್ರುತಿಯು ಹೇಗೆ ಅನುಶಾಸನರೂಪವಾಗಿದೆಯೋ ಅದರಂತೆ ನಾಮಾನಿ ಸರ್ವಾಣಿ ಎಂಬ ಶ್ರುತಿಯೂ ಅನುಶಾಸನರೂಪವೇ ಆಗಿದ್ದರಿಂದ, ಎರಡು ಶ್ರುತಿಗಳಲ್ಲಿ ವೈಷಮ್ಯ ಇಲ್ಲವಾದ್ದರಿಂದ) ಅವ್ಯಕ್ತಾದಿಶಬ್ದಗಳು ವಿಷ್ಣುವಾಚಕ ಎಂದು ನಿಶ್ಚಯಿಸಲು ಬರುತ್ತದೆ.

ಹೀಗೆ ಅವ್ಯಕ್ತಾದಿಶಬ್ದಗಳಿಗೆ ವಿಷ್ಣುವಾಚಕತ್ವವು ಇರುವುದರಿಂದ, ಮತ್ತು ಪ್ರವೃತ್ತಿನಿಮಿತ್ತವೂ ಅಧಿಕವಾಗಿ ವಿಷ್ಣುವಿನಲ್ಲಿಯೇ ಇರುವುದರಿಂದ, ಅವ್ಯಕ್ತಾದಿಶಬ್ದವಾಚ್ಯ-ನಾದವನು ಹರಿಯೇ ಆಗುತ್ತಾನೆ, ಅಂತೆಯೇ ಅವನಿಗೆ ಸರ್ವಶಬ್ದವಾಚ್ಯತ್ವವೂ ಉಪಪನ್ನವಾಗುತ್ತದೆ ಎಂದು ಸಿದ್ಧವಾಗುತ್ತದೆ.

ಆನುಮಾನಿಕಾಧಿಕರಣವು ಮುಗಿಯಿತು.

ಅಧಿಕರಣ – 2

# ಜ್ಯೋತಿರುಪಕ್ರಮಾಧಿಕರಣ

## ಸಂಗತಿ

**ಸೂ.ರ.:– अत्र कर्मतदङ्गेष्वेव प्रसिद्धानां ज्योतिष्टोमादिशब्दानां भगवति समन्वयः प्रतिपाद्यते ।**

**ಅನು.:–** ಕರ್ಮ-ತದಂಗಗಳಲ್ಲಿಯೇ ಪ್ರಸಿದ್ಧವಾದ ಜ್ಯೋತಿಷ್ಟೋಮಾದಿ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ ಈ ಜ್ಯೋತಿರುಪಕ್ರಮಾಧಿಕರಣದಲ್ಲಿ.

ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿ ಎಲ್ಲ ಶಬ್ದಗಳೂ ಭಗವದ್ವಾಚಕ ಎಂದು ಹೇಳಿದೆ. ಆ ಸರ್ವಶಬ್ದಗಳಲ್ಲಿ ಜ್ಯೋತಿರಾದಿಶಬ್ದಗಳೂ ಶ್ರುತಿಗಳಲ್ಲಿ ಪಠಿತವಾಗಿವೆ. ಆ ಜ್ಯೋತಿರಾದಿಶಬ್ದಗಳು ವಿಷ್ಣುವಾಚಕ ಅಲ್ಲ ಎಂದಾದರೆ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವ ಸಿದ್ಧಿಸದೇ ಹೋಗಬೇಕಾಗುತ್ತದೆ. ಆದ್ದರಿಂದ ಜ್ಯೋತಿರಾದಿಶಬ್ದಗಳು ವಿಷ್ಣುವಾಚಕವೋ ಅಲ್ಲವೋ ಎಂದು ನಿರ್ಣಯಿಸಬೇಕಿದೆ. ಅದಕ್ಕಾಗಿ ಈ ಅಧಿಕರಣ ಪ್ರವೃತ್ತವಾಗಿದೆ.

## ಪೂರ್ವಪಕ್ಷ

**ಸೂ.ರ.:– ननु ज्योतिरादिशब्दा न विष्णुवाचकाः किन्तु ज्योतिष्टोमादिकर्मतदङ्गवाचकाः । तत्रैव प्रसिद्धत्वात् । तेषां विष्णुवाचित्वे कालकर्मक्रमाद्यभिधायकाभावेन तदभावाख्यविरोधापातात् । ततस्तदभिधायकप्रमाणान्तराभावेन विहितानुष्ठानलोपप्रसङ्गादिति प्राप्ते सूत्रमाह ।**

**ಅನು.:–** ''ವಸಂತೇ ವಸಂತೇ ಜ್ಯೋತಿಷಾ ಯಜೇತ'' ಇತ್ಯಾದಿಯಾಗಿ ಶ್ರುತ-ವಾಗುತ್ತಿರುವ ಜ್ಯೋತಿರಾದಿ ಶಬ್ದಗಳು ವಿಷ್ಣುವಾಚಕವಾಗಿಲ್ಲ. ಕಿಂತು ಜ್ಯೋತಿಷ್ಟೋಮಾದಿ ತದಂಗವಾಚಕವಾಗಿವೆ. ಏಕೆಂದರೆ – ಜ್ಯೋತಿರಾದಿಶಬ್ದಗಳು ಜ್ಯೋತಿಷ್ಟೋಮಾದಿ ತದಂಗ-ಗಳಲ್ಲಿಯೇ ಪ್ರಸಿದ್ಧವಾದ್ದರಿಂದ.

ಒಂದುವೇಳೆ ಆ ಜ್ಯೋತಿರಾದಿಶಬ್ದಗಳೂ ವಿಷ್ಣುವಾಚಕವೇ ಆಗಿವೆ ಎನ್ನುವುದಾದರೆ, ಕಾಲಕರ್ಮಕ್ರಮಾದಿಗಳನ್ನು ತಿಳಿಸುವ ಶಬ್ದಗಳೇ ಇಲ್ಲದಂತಾಗುವುದರಿಂದ ಮತ್ತು ಅದನ್ನು

ತಿಳಿಸುವ ಬೇರೆ ಪ್ರಮಾಣವೂ ಯಾವುದೂ ಇಲ್ಲವಾದ್ದರಿಂದ ಕಾಲ ಕರ್ಮ ಕ್ರಮ ಅಧಿಕಾರಿ ನಿಯೋಜ್ಯ ಯಜಮಾನ ಫಲ ಋತ್ವಿಗಾದಿಗಳೇ ಇಲ್ಲದೇ ಹೋಗಬೇಕಾಗುತ್ತದೆ. ಅದರ ವಿರೋಧ ಬರುತ್ತದೆ. ತಥಾ ಚ ವಿಹಿತ ಅನುಷ್ಠಾನಲೋಪವಾಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಜ್ಯೋತಿರಾದಿಶಬ್ದಗಳಿಂದ ಜ್ಯೋತಿಷ್ಟೋಮಾದಿ ತದಂಗಗಳೇ ವಾಚ್ಯವಾಗುತ್ತವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ ज्योतिरुपक्रमात्तु तथा ह्यधीयत एके ॐ (१.४.१०)

**ಸೂತ್ರಾರ್ಥ :–** (ತು ಶಬ್ದವು ಏವ ಎಂಬ ಅರ್ಥದಲ್ಲಿದೆ) ಜ್ಯೋತಿಃ = ಜ್ಯೋತಿಷಾ ಯಜೇತ ಇತ್ಯಾದಿವಾಕ್ಯೋಕ್ತವಾದ ಜ್ಯೋತಿರಾದಿಶಬ್ದಗಳಿಂದ ವಾಚ್ಯನಾದ ವ್ಯಕ್ತಿ ತು ಏವ ಬ್ರಹ್ಮೈವ = ಬ್ರಹ್ಮನೇ ಆಗುತ್ತಾನೆ. ನ ಜ್ಯೋತಿಷ್ಟೋಮಾದಿ = ಹೊರತು ಜ್ಯೋತಿಷ್ಟೋಮಾದಿ–ಗಳು ವಾಚ್ಯವಾಗುವುದಿಲ್ಲ. ಕುತಃ = ಯಾಕೆ? ಹಿ = ಯಾವ ಕಾರಣ ಏಕೇ = ಕೆಲವು ಶಾಖೆಗಳು ಉಪಕ್ರಮಾತ್ = "ಏಷ ಇಮಂ ಲೋಕಮಭ್ಯಾರ್ಚತ್" ಎಂಬುದಾಗಿ ಉಪಕ್ರಮ ಮಾಡಿ ತಥಾ = ಸರ್ವಶಬ್ದವಾಚ್ಯತ್ವೇನ ಹರಿಯನ್ನೇ ಅಧೀಯಂತೇ = "ತಾ ವಾ ಏತಾಃ ಸರ್ವಾ ಋಚಃ" ಎನ್ನುವಲ್ಲಿ ಪಠಿಸುತ್ತಾರೆಯೋ ತಸ್ಮಾತ್ = ಆದ್ದರಿಂದ.

### ಸಿದ್ಧಾಂತ

**ಸೂ.ರ.:– एवं च हरिरेव ज्योतिरादिशब्दवाच्यः । एष इमं लोकमित्युपक्रम्य ता वा एता इति सर्वशब्दवाच्यत्वाभिधानात् ।**

**ಅನು.:–** ಏಷ ಇಮಂ ಲೋಕಮಭ್ಯಾರ್ಚತ್ ಎಂಬುದಾಗಿ ಉಪಕ್ರಮ ಮಾಡಿದ "ತಾ ವಾ ಏತಾಃ ಸರ್ವಾ ಋಚಃ" ಎಂಬುದಾಗಿ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಹೇಳಿದ್ದರಿಂದ ವಿಷ್ಣುವೇ ಜ್ಯೋತಿರಾದಿಶಬ್ದವಾಚ್ಯನಾಗುತ್ತಾನೆ.

**ಸೂ.ರ.:– न च श्रुतौ लक्षणाऽभिप्रेता । उपलक्षणतया शतर्च्यादि-शब्दानां योगस्योक्तत्वात् ।**

**ಅನು.:–** ಆ ಶಬ್ದಗಳು ವಿಷ್ಣುವಾಚಕವಾಗಲು ಯಾವ ವೃತ್ತಿ ಇದೆ? ಅರ್ಥಾತ್ ಯಾವ ವೃತ್ತಿಯಿಂದ ವಿಷ್ಣುವನ್ನು ತಿಳಿಸುತ್ತವೆ? ಲಕ್ಷಣಾ ಇಲ್ಲಿ ಅಭಿಪ್ರೇತವಾಗಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಏಷ ಇಮಂ ಲೋಕಮಭ್ಯಾರ್ಚತ್ ಇತ್ಯಾದಿಯಾಗಿ ಉಪಲಕ್ಷಣತಯಾ

ಶತರ್ಚ್ಯಾದಿಶಬ್ದಗಳಿಗೆ ಪರಮಾತ್ಮನಲ್ಲಿ ಯೋಗವನ್ನು ಹೇಳಿದ್ದರಿಂದ, ಯೋಗವೃತ್ತಿಯಿಂದ ವಿಷ್ಣುವಾಚಕವಾಗುತ್ತವೆ.

**ಸೂ.ರ.:– न च शव्दानामन्यत्र रूढत्वेन महातात्पर्यविषयत्वं रूढार्थस्यैव विष्णोस्त्ववान्तरतात्पर्यविषयत्वममुख्यविषयत्वादिति वाच्यम् । तस्माच्छतर्चिन इत्यनेन योगेन रूढ्यार्थापहारोक्तेः । तत्कुत इति चेत् । एवमेष परमात्मानं मुख्यतो यौगिकार्थं सन्तं शतर्च्यादि नामभिराचक्षते न तु रूढत्वेऽपि मुनीन्महातात्पर्यविपयतयाऽऽचक्षत इति प्रतीतेः । अतो ज्योतिरादिशव्दवाच्यो विष्णुरेवेति सिद्धम् ।**

**ಅನು.:–** ಜ್ಯೋತಿರಾದಿಶಬ್ದಗಳು ಅನ್ಯತ್ರ ಜ್ಯೋತಿಷ್ಟೋಮಾದಿಗಳಲ್ಲಿ ರೂಢವಾಗಿದ್ದರಿಂದ ರೂಢಾರ್ಥವಾದ ಜ್ಯೋತಿಷ್ಟೋಮಾದಿಗಳೇ ಮಹಾತಾತ್ಪರ್ಯವಿಷಯವಾಗುತ್ತವೆ. ವಿಷ್ಣುವು ಜ್ಯೋತಿರಾದಿಶಬ್ದಗಳಿಗೆ ಅಮುಖ್ಯವಿಷಯನಾಗಿದ್ದರಿಂದ ಅವಾಂತರತಾತ್ಪರ್ಯವಿಷಯನಾಗುತ್ತಾನೆ ಎಂದು ಶಂಕಿಸುವುದು ಸರಿಯಲ್ಲ.

"ತಸ್ಮಾಚ್ಛತರ್ಚಿನ ಇತ್ಯಾಚಕ್ಷತ ಏತಮೇವ ಸಂತಂ"

ಎಂಬುದಾಗಿ ಯೋಗದಿಂದ ರೂಢಿಗೆ ಅಪಹಾರವನ್ನು ಹೇಳಿದ್ದರಿಂದ.

ಏತಮೇವ ಸಂತಂ=ಶತರ್ಚಿ ಮೊದಲಾದ ಶಬ್ದಗಳಿಗೆ ಮುಖ್ಯವಾಗಿ ಯೌಗಿಕಾರ್ಥನಾಗಿರುವ ಈ ಪರಮಾತ್ಮನನ್ನೇ ಶತರ್ಚಿನ ಇತ್ಯಾಚಕ್ಷತ=ಶತರ್ಚಿ ಮೊದಲಾದ ನಾಮಗಳಿಂದ ಕರೆಯುತ್ತಾರೆ. ನ ತು ರೂಢತ್ವೇಽಪಿ ಮುನೀನ್ ಮಹಾತಾತ್ಪರ್ಯವಿಷಯತಯಾಽಚಕ್ಷತ =ಹೊರತು ಶತರ್ಚ್ಯಾದಿ ಶಬ್ದಗಳು ಮುನಿಗಳಲ್ಲಿ ರೂಢವಾಗಿದ್ದರೂ ಸಹ ಶತರ್ಚ್ಯಾದಿಶಬ್ದಗಳಿಗೆ ಮಹಾತಾತ್ಪರ್ಯ ವಿಷಯವಾಗಿ ಮುನಿಗಳನ್ನು ಕರೆಯುವುದಿಲ್ಲ ಎಂಬುದಾಗಿ ಸ್ಪಷ್ಟವಾಗಿ ತೋರುವುದರಿಂದ, ಶತರ್ಚ್ಯಾದಿ ಶಬ್ದಗಳಿಗೆ ಮುನಿಗಳಲ್ಲಿ ರೂಢಿ ಇದ್ದರೂ ಸಹ ಅದನ್ನು ಪರಿತ್ಯಾಗ ಮಾಡಿ ಯೋಗವೃತ್ತಿಯಿಂದ ಪರಮಾತ್ಮನನ್ನೇ ತೆಗೆದುಕೊಳ್ಳಬೇಕು.

ಆದ್ದರಿಂದ ಜ್ಯೋತಿರಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– किं ज्योतिरादिशव्दा रूढ्या परमात्मवाचकाः उत योगेन । नाद्यः । तदभावात् । गुणपूर्त्यसिद्धेश्च । न द्वितीयः । तेन रूढ्यार्थापहारा-**

योगात् । नापि योगः सम्भवति । ज्योतिषां स्तोम इत्यादिरूपेण ज्योतिष्टोमादिशब्दानां योगो वाच्यः । न हि स्तोमादिशब्दानामन्यपरत्वानभ्युपगमे योगः सम्भवति । भगवन्नामावृत्तित्वप्राप्तेः । तच्छब्दानामन्यपरत्वाङ्गीकारे किं ज्योतिष्टोमादिशब्दैरेव विशेषतोऽपराद्धम् । ततश्च ज्योतिरादिशब्दानां भगवद्वाचित्वाभावेन न समन्वयसूत्रं युक्तमिति प्राप्ते सूत्रितम् ।

ಅನು.:- ಜ್ಯೋತಿರಾದಿಶಬ್ದಗಳು ರೂಢಿವೃತ್ತಿಯಿಂದ ಪರಮಾತ್ಮವಾಚಕವಾಗುತ್ತವೆಯೋ? ಅಥವಾ ಯೋಗವೃತ್ತಿಯಿಂದ ಪರಮಾತ್ಮವಾಚಕವಾಗುತ್ತವೆಯೋ?

ರೂಢಿಯಿಂದ ವಾಚಕ ಎನ್ನಲು ಬರುವುದಿಲ್ಲ. ಜ್ಯೋತಿರಾದಿಶಬ್ದಗಳಿಗೆ ವಿಷ್ಣುವಿನಲ್ಲಿ ರೂಢಿಯು ಇಲ್ಲವೂ ಇಲ್ಲ. ಮತ್ತು ವಿಷ್ಣುವಿನಲ್ಲಿ ರೂಢಿಯನ್ನು ಅಂಗೀಕಾರ ಮಾಡಿದರೆ ಗುಣಪೂರ್ಣತ್ವವು ಸಿದ್ಧಿಸದೇ ಹೋಗಬೇಕಾಗುತ್ತದೆ. (ಯೋಗವನ್ನು ಅಂಗೀಕಾರ ಮಾಡಿದರೆ ಮಾತ್ರ ಗುಣಪೂರ್ಣತ್ವವು ಸಿದ್ಧಿಸುತ್ತದೆ.)

ಇನ್ನು ಯೋಗವೃತ್ತಿಯಿಂದ ವಾಚಕ ಎನ್ನುವುದೂ ಸರಿಯಲ್ಲ. ರೂಢ್ಯಾರ್ಥಾಪಹಾರವು ಕೂಡದಿರಬೇಕಾಗುತ್ತದೆ. ಮತ್ತು ಯೋಗವನ್ನು ಹೇಳಲು ಬರುವುದೂ ಇಲ್ಲ. "ಜ್ಯೋತಿಷಾಂ ಸ್ತೋಮಃ" ಇತ್ಯಾದಿರೂಪದಿಂದ ಜ್ಯೋತಿಷ್ಟೋಮಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಯೋಗವನ್ನು ಹೇಳಬೇಕು. ಆದರೆ ಸ್ತೋಮಾದಿಶಬ್ದಗಳಿಗೆ ಅನ್ಯಪರತ್ವವನ್ನು ಅಂಗೀಕರಿಸದೇ ಹೋದರೆ ಇಲ್ಲಿ ಯೋಗವನ್ನು ಹೇಳಲು ಬರುವುದಿಲ್ಲ. ಹಾಗಾಗಿ ಅನ್ಯಪರತ್ವವನ್ನು ಒಪ್ಪಲೇಬೇಕು. ಸ್ತೋಮಾದಿಶಬ್ದಗಳಿಗೆ ಅನ್ಯಪರತ್ವವನ್ನು ಅಂಗಿಕಾರ ಮಾಡಿಬಿಟ್ಟರೆ ಹಾಗಾದರೆ ಜ್ಯೋತಿಷ್ಟೋಮಾದಿಶಬ್ದಗಳು ವಿಶೇಷವಾಗಿ ಏನು ಅಪರಾಧ ಮಾಡಿವೆ? ಅರ್ಥಾತ್ ಜ್ಯೋತಿಷ್ಟೋಮಾದಿ ಶಬ್ದಗಳಿಗೂ ಅನ್ಯಪರತ್ವವನ್ನು ಒಪ್ಪಲೇಬೇಕು.

ಆದ್ದರಿಂದ ಜ್ಯೋತಿರಾದಿಶಬ್ದಗಳು ವಿಷ್ಣುವಾಚಕವಾಗದ ಕಾರಣ ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವದ ಸಮನ್ವಯ ಮಾಡಿದ್ದು ಸರಿಯಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ कल्पनोपदेशाच्च मध्वादिवदविरोधः ॐ (१.४.११)**

**ಸೂತ್ರಾರ್ಥ :-** (ಚಶಬ್ದವು ಏವ ಎಂಬ ಅರ್ಥದಲ್ಲಿದೆ. ಅಥವಾ ಸಮುಚ್ಚಯ ಅರ್ಥದಲ್ಲಿದೆ) ಮಧ್ವಾದಿವತ್ = ಮಧುವಿದ್ಯಾದಿಗಳಲ್ಲಿ ಇರುವ ಮಧು ಮೊದಲಾದ ಶಬ್ದಗಳಿಗೆ ವಿಷ್ಣುವಾಚಿತ್ವವನ್ನು ಅಂಗೀಕಾರ ಮಾಡಿದರೂ ಸಹ ಹೇಗೆ ವಿರೋಧ ಬರುವುದಿಲ್ಲವೋ ಅದೇ ರೀತಿಯಾಗಿ ಅವಿರೋಧಃ=ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಅಂಗೀಕಾರ ಮಾಡಿದರೂ ಸಹ ಕರ್ಮಾದ್ಯಭಾವವಿರೋಧ ಬರುವುದಿಲ್ಲ.

ಯಾಕೆ? ಶಬ್ದಾನಾಮನ್ಯತ್ರ ಯೋಗರೂಢಿವೃತ್ತೀ ಅಭ್ಯುಪಗಮ್ಯೇವ ಈಶ್ವರೇ ಮಹಾಯೋಗವೃತ್ತ್ಯಂಗೀಕಾರಾತ್=ಜ್ಯೋತಿರಾದಿಶಬ್ದಗಳಿಗೆ ಅನ್ಯತ್ರ ಜ್ಯೋತಿಷ್ಟೋಮಾದಿ-ಗಳಲ್ಲಿ ಯೋಗವೃತ್ತಿ-ರೂಢಿವೃತ್ತಿಗಳನ್ನು ಅಂಗೀಕಾರ ಮಾಡಿಯೇ ವಿಷ್ಣುವಿನಲ್ಲಿ ಮಹಾಯೋಗವೃತ್ತಿಯನ್ನು ಅಂಗೀಕರಿಸಿದ್ದರಿಂದ.

ವಿಷ್ಣುವಿನಲ್ಲಿ ಮಹಾಯೋಗವೃತ್ತಿಯನ್ನಾದರೂ ಏಕೆ ಒಪ್ಪಬೇಕು? ಎಂದರೆ, ಕಲ್ಪನೋಪದೇಶಾತ್ = ಪ್ರಾಣ ಋಚಃ ಎಂಬುದಾಗಿ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಉಪಾಸನೆಗಾಗಿ ಹೇಳಿದ್ದರಿಂದ. ಅಂತಹ ಉಪಾಸನೆಯಾದರೂ ಸರ್ವಶಬ್ದಾರ್ಥವಾದ ಮುಖ್ಯಗುಣವತ್ವ ಎಂಬ ಮಹಾಯೋಗವೃತ್ತಿಯನ್ನು ಒಪ್ಪದಿದ್ದರೆ ಕೂಡುವುದಿಲ್ಲ.

## ಸಮಾಧಾನ

**ಸೂ.ರ.:-** एवं च यथा खलु मधुविद्यायामसौ वाऽऽदित्य (छां. ३-१-१) इत्यादिना मध्वादिपदार्थतया परमात्मोपासनोपदेशोऽपि न लौकिकमध्वादिवाचकाभावेन तदभावे विरोधः । अन्यत्र रूढिमनिवार्यैव महायोगवृत्त्या मध्वादिशब्दानामीश्वरादौ वृत्त्यभ्युपगमात् । तथा च सर्वशब्दवाच्यत्वे परमात्मनोऽभ्युपगतेऽप्यन्यस्यापि वाक्यप्रतिपाद्य-त्वाङ्गीकारात् । तदर्थं विभक्त्यन्तराङ्गीकाराच्च । न च कर्माद्यभावापातः । नाप्युत्पत्त्यसम्भवो नापि सर्वेषां विघातत्वप्रसङ्गः । अतः कर्मतदङ्ग-वाचिशब्दवाच्यो हरिरिति सिद्धम् ।

**ಅನು.:-** ಯಾವ ರೀತಿಯಾಗಿ ಮಧುವಿದ್ಯೆಯಲ್ಲಿ ಅಸೌ ವಾಽದಿತ್ಯಃ (ಛಾಂ. 3-1-1) ಇತ್ಯಾದಿಯಾಗಿ ಮಧು ಮೊದಲಾದ ಪದಗಳಿಗೆ ವಾಚ್ಯಾರ್ಥವಾಗಿ ಪರಮಾತ್ಮನ

ಉಪಾಸನಾವನ್ನು ಉಪದೇಶ ಮಾಡಿದರೂ ಸಹ, ಲೌಕಿಕಮಧು ಮೊದಲಾದವುಗಳನ್ನು ತಿಳಿಸುವ ಶಬ್ದಗಳಿಲ್ಲದ ಕಾರಣ ತದಭಾವವಿರೋಧ ಬರುವುದಿಲ್ಲ. ಯಾಕೆಂದರೆ – ಮಧು ಮೊದಲಾದ ಶಬ್ದಗಳಿಗೆ ಲೌಕಿಕಮಧ್ವಾದಿಗಳಲ್ಲಿ ರೂಢಿಯನ್ನು ಅಂಗೀಕಾರ ಮಾಡಿಯೇ ವಿಷ್ಣುವಿನಲ್ಲಿ ಮಹಾಯೋಗವೃತ್ತಿಯನ್ನು ಅಂಗೀಕಾರ ಮಾಡಲಾಗಿದ್ದರಿಂದ ತದಭಾವವಿರೋಧ ಬರುವುದಿಲ್ಲವೋ,

ಅದೇ ರೀತಿಯಾಗಿ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಅಂಗೀಕಾರ ಮಾಡಿದರೂ ಸಹ, ಅನ್ಯತ್ರ (ವಿಷ್ಣುಭಿನ್ನರಾದವರಲ್ಲಿ) ಶಬ್ದಗಳಿಗೆ ಯೋಗ-ರೂಢಿವೃತ್ತಿಗಳನ್ನು ಅಂಗೀಕಾರ ಮಾಡಿಯೇ ವಿಷ್ಣುವಿನಲ್ಲಿ ಮಹಾಯೋಗವೃತ್ತಿಯನ್ನು ಅಂಗೀಕರಿಸಿದ್ದರಿಂದ ಕರ್ಮಾದ್ಯ-ಭಾವಾಪಾತವೂ ಇಲ್ಲ. ಉತ್ಪತ್ಯಸಂಭವವೂ ಇಲ್ಲ. ಸರ್ವೇಷಾಂ ವಿಘಾತತ್ವಪ್ರಸಂಗವೂ ಇಲ್ಲ.

ಆದ್ದರಿಂದ ಕರ್ಮ-ತದಂಗಗಳನ್ನು (ಯೋಗ -ರೂಢಿಗಳಿಂದ) ತಿಳಿಸುವ ಜ್ಯೋತಿರಾದಿಶಬ್ದಗಳಿಂದ ಮಹಾಯೋಗವೃತ್ತಿಯಿಂದ ವಿಷ್ಣುವೇ ವಾಚ್ಯನಾಗಿದ್ದಾನೆ ಎಂದು ಸಿದ್ಧವಾಯಿತು.

ಜ್ಯೋತಿರುಪಕ್ರಮಾಧಿಕರಣವು ಮುಗಿಯಿತು.

ಅಧಿಕರಣ - 3

# ನ ಸಂಖ್ಯೋಪಸಂಗ್ರಹಾಧಿಕರಣ

## ಸಂಗತಿ

**ಸೂ.ರ.:-** अत्र प्रातिपदिकेन प्रत्ययमुखेन बहुत्वसङ्ख्याविशिष्ट-वस्तुवाचिनामाधाराधेयवाचिनां च शब्दानां समन्वयः क्रियते ।

**ಅನು.:-** ಬಹುತ್ವಸಂಖ್ಯಾವಿಶಿಷ್ಟ ವಸ್ತುವಾಚಕವಾದ ಆಧಾರ-ಆಧೇಯ-ವಾಚಿಯಾದ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಾರೆ ಮೂರನೇ ಈ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ.

ಆಧಾರ-ಆಧೇಯತ್ವಾದಿಲಿಂಗದಿಂದ ಅನ್ಯತ್ರೈವ ಪ್ರಸಿದ್ಧವಾದ ಪಂಚಜನಾದಿಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಾರೆ ಈ ಅಧಿಕರಣದಲ್ಲಿ.

ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿ ಸರ್ವಶಬ್ದಗಳು ಪರಮಾತ್ಮವಾಚಕ ಎಂದು ಹೇಳಲಾಗಿದೆ. ಆ ಸರ್ವಶಬ್ದಗಳಲ್ಲಿ ಅಂತರ್ಗತವಾದ ಪಂಚಜನಾದಿಶಬ್ದಗಳು

**ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ ।**
**ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥**

ಎಂಬುದಾಗಿ ವಾಜಸನೇಯಕದಲ್ಲಿ ಶ್ರುತವಾಗುತ್ತಿವೆ. ಈ ಪಂಚಜನಾದಿ ಶಬ್ದಗಳಿಂದ ವಾಚ್ಯನಾದವನು ಶ್ರೀಹರಿ ಅಲ್ಲ ಎಂದಾಗಿಬಿಟ್ಟರೆ ಪರಮಾತ್ಮನಿಗೆ ಹೇಳಿದ ಸರ್ವಶಬ್ದ-ವಾಚ್ಯತ್ವವು ಅಯುಕ್ತವಾಗಬೇಕಾಗುತ್ತದೆ. ಆದ್ದರಿಂದ ಈ ಪಂಚಜನಾದಿಶಬ್ದಗಳಿಂದ ವಾಚ್ಯನಾದವನೂ ವಿಷ್ಣುವೇ ಎಂದು ಈ ಅಧಿಕರಣದಲ್ಲಿ ನಿರ್ಣಯ ಮಾಡುತ್ತಾರೆ.

## ಪೂರ್ವಪಕ್ಷ

**ಸೂ.ರ.:-** ननु पञ्चजनादिशब्दवाच्यो न विष्णुः । किन्त्वन्ये । तस्य बहुत्वसङ्ख्याविशिष्टवस्तुवाचित्वात् । ईश्वरे चासाधारणधर्मतया बहुत्वायोगात् ।

**ಅನು.:-** ಯಸ್ಮಿನ್ ಪಂಚ ಪಂಚಜನಾ ಎಂಬುದಾಗಿ ಶ್ರುತವಾಗುತ್ತಿರುವ ಪಂಚಜನಾದಿಶಬ್ದಗಳಿಂದ ವಾಚ್ಯನಾದವನು ವಿಷ್ಣು ಅಲ್ಲ. ಕಿಂತು ಉಳಿದವರೇ ವಾಚ್ಯರಾಗುತ್ತಾರೆ.

ವಿಷ್ಣು ಏಕೆ ವಾಚ್ಯನಲ್ಲ? ಎಂದರೆ, ಈ ಪಂಚಜನಾದಿಶಬ್ದಗಳು ಬಹುತ್ವಸಂಖ್ಯಾ-ವಿಶಿಷ್ಟವಸ್ತುವಾಚಕಗಳಾಗಿವೆ. ಈಶ್ವರನಲ್ಲಿಯಾದರೋ ಅಸಾಧಾರಣಧರ್ಮವಾಗಿ ಬಹುತ್ವ ಇಲ್ಲದಾಗಿದೆ. ಈಶ್ವರನು ಬಹುತ್ವಸಂಖ್ಯಾವಿಶಿಷ್ಟವಸ್ತು ಆಗಿಲ್ಲವಾದ್ದರಿಂದ ಪಂಚಜನಾದಿ ಶಬ್ದವಾಚ್ಯನಾಗಲು ಸಾಧ್ಯವಿಲ್ಲ ಎಂದು ಭಾವ.

**ಸೂ.ರ.:-** **न च स्वस्य बहुत्वाभावेऽप्यन्यगतबहुत्वनियामकत्वाद्बहुत्ववाचकशब्दवृत्तिस्तेन चेश्वरस्य बहुत्वनियामकत्वरूपासाधारणधर्मलाभ इति वाच्यम् । वशीकृतबहुजनेऽपि राजनि बहुत्ववाचिशब्दादर्शनात् ।**

**ಅನು.:-** ನಿಜ. ಪರಮಾತ್ಮನಲ್ಲಿ ಬಹುತ್ವವು ಅಸಾಧಾರಣಧರ್ಮವಾಗಿ ಇಲ್ಲ ಎನ್ನುವುದು ಸತ್ಯವೇ. ಆದರೆ ಪರಮಾತ್ಮ ತಾನು ಬಹು ಆಗದೇ ಇದ್ದರೂ ಸಹ ಮತ್ತೊಬ್ಬರಲ್ಲಿ ಇರುವ ಬಹುತ್ವಕ್ಕೆ ನಿಯಾಮಕನಾಗಿದ್ದಾನೆ. ಆದ್ದರಿಂದ ಬಹುತ್ವನಿಯಾಮಕತ್ವವಿರುವ ಕಾರಣ ಪರಮಾತ್ಮನಲ್ಲಿ ಬಹುತ್ವವಾಚಕಶಬ್ದವು ಪ್ರವೃತ್ತವಾಗುತ್ತದೆ.

ಹಾಗಾಗಿ ಪರಮಾತ್ಮನಲ್ಲಿ ಬಹುತ್ವ ಇಲ್ಲದಿದ್ದರೂ ಸಹ ಬಹುತ್ವನಿಯಾಮಕತ್ವ ಎಂಬ ಅಸಾಧಾರಣಧರ್ಮವು ಲಭ್ಯವಾಗುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

ಬಹುತ್ವನಿಯಾಮಕತ್ವ ಇದ್ದಮಾತ್ರಕ್ಕೆ ಬಹುತ್ವವಾಚಿಶಬ್ದವು ಅಲ್ಲಿ ಪ್ರವೃತ್ತವಾಗಬೇಕು ಎಂದೇನಿಲ್ಲ. ಬಹುಜನರನ್ನು ವಶ ಮಾಡಿಕೊಂಡಿರುವ ರಾಜನಲ್ಲಿ ಬಹುತ್ವನಿಯಾಮಕತ್ವ ಇದ್ದರೂ ಬಹುತ್ವವಾಚಿಶಬ್ದವು ಪ್ರವೃತ್ತವಾಗಿದ್ದು ಕಂಡಿಲ್ಲ.

**ಸೂ.ರ.:-** **न चादर्शनेऽप्यवरादिशब्दवद्वृत्तिसम्भवः । सोऽवर इत्यादिश्रुतिबलेनावरशब्दवाच्यत्वे सिद्धेऽवरत्वनियामकत्वस्य निमित्तमात्रत्वाभ्युपगमात् । न च प्रकृते तथाविधं नियामकमस्ति । सर्वे वेदा यत्पदमि(कठ.२-१५)तीत्यस्य सङ्कोचसम्भवेनानियामकत्वात् ।**

ಎಲ್ಲೂ ಕಂಡಿಲ್ಲವಾದರೂ ಸಹ ಅವರಾದಿಶಬ್ದಗಳಂತೆ (ಪರಮಾತ್ಮನಲ್ಲಿ ಅವರತ್ವ ಇಲ್ಲದಿದ್ದರೂ ಅವರತ್ವನಿಯಾಮಕತ್ವ ಇರುವುದರಿಂದ ಅವರಾದಿಶಬ್ದಗಳು ಪರಮಾತ್ಮನಲ್ಲಿ

ಪ್ರವೃತ್ತವಾಗುವಂತೆ) ಬಹುತ್ವವಾಚಿಶಬ್ದವು ಪರಮಾತ್ಮನಲ್ಲಿ ಪ್ರವೃತ್ತವಾಗಬಹುದಲ್ಲವೇ? ಎಂದರೆ, ಅದೂ ಸರಿಯಲ್ಲ.

ಅಲ್ಲಿ ''ಸೋಽವರಃ'' ಇತ್ಯಾದಿಶ್ರುತಿಬಲದಿಂದ ಪರಮಾತ್ಮನಿಗೆ ಅವರಶಬ್ದವಾಚ್ಯತ್ವವು ಸಿದ್ಧವಾಗಿದ್ದರಿಂದ, ಅವರತ್ವನಿಯಾಮಕತ್ವವನ್ನು ನಿಮಿತ್ತಮಾತ್ರವಾಗಿ ಅಂಗೀಕರಿಸಲಾಗಿದೆ. ಅದರಂತೆ ಇಲ್ಲಿಯೂ ಹೇಳಲು ಆಗುವುದಿಲ್ಲ. ಅಲ್ಲಿ ಶ್ರುತಿಬಲದಿಂದ ಅವರಶಬ್ದವಾಚ್ಯತ್ವ ಸಿದ್ಧವಾಗಿರುವಂತೆ ಇಲ್ಲಿ ಆ ವಿಧವಾದ ನಿಯಾಮಕವಾದದ್ದು ಯಾವುದೂ ಇಲ್ಲ.

ನಿಯಾಮಕ ಯಾವುದಿಲ್ಲ ಎಂದೇಕೆ ಹೇಳುತ್ತೀರಿ? ''ಸರ್ವೇ ವೇದಾ ಯತ್ಪದ-ಮಾಮನಂತಿ'' (ಕಠ.2-15) ಎಂಬುದಾಗಿ ಶ್ರುತಿಯು ಪರಮಾತ್ಮನಿಗೆ ಸರ್ವಶಬ್ದ-ವಾಚ್ಯತ್ವವನ್ನು ಹೇಳುತ್ತಿದೆ. ಪ್ರಕೃತ ಪರಮಾತ್ಮನಿಗೆ ಬಹುತ್ವವಾಚಿಶಬ್ದವಾಚ್ಯತ್ವವನ್ನು ಹೇಳದಿದ್ದರೆ ಸರ್ವಶಬ್ದವಾಚ್ಯತ್ವಕ್ಕೆ ಧಕ್ಕೆ ಬರುತ್ತದೆ. ಆದ್ದರಿಂದ ಬಹುತ್ವವಾಚಿ-ಶಬ್ದವಾಚ್ಯತ್ವವನ್ನು ಹೇಳಬೇಕು. ಹೀಗೆ ಸರ್ವಶಬ್ದವಾಚ್ಯತ್ವವೇ ನಿಯಾಮಕವಾಗಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ.

''ಸರ್ವೇ ವೇದಾ ಯತ್ಪದಮಾನಂತಿ'' ಎಂಬ ಶ್ರುತಿಗೆ (ಬಹುತ್ವವಾಚಿಶಬ್ದಗಳನ್ನು ಬಿಟ್ಟು ಉಳಿದ ಎಲ್ಲ ಶಬ್ದಗಳಿಂದಲೂ ಪರಮಾತ್ಮನು ವಾಚ್ಯನಾಗಿದ್ದಾನೆ ಎಂಬುದಾಗಿ) ಸಂಕೋಚ ಮಾಡಲು ಬರುತ್ತದೆಯಾದ್ದರಿಂದ ಸರ್ವಶಬ್ದವಾಚ್ಯತ್ವವು ನಿಯಾಮಕ-ವಾಗುವುದಿಲ್ಲ.

**ಸೂ.ರ.:- प्रतिशरीरमात्माऽन्तरात्मरूपद्वयस्य प्रामाणिकत्वेन ऋतं पिबन्ता (कठ.१-३-१) वित्यादिद्वित्वसम्भवेऽपि प्रतिशरीरं रूपबहुत्वे मानाभावेन बहुत्वायोगात् । अतः पञ्चजनादिशब्दवाच्यताऽसम्भवादिति प्राप्ते सूत्रितम् ।**

**ಅನು.:-** ಪ್ರತಿಯೊಂದು ಶರೀರದಲ್ಲಿಯೂ ಪರಮಾತ್ಮ ಆತ್ಮ-ಅಂತರಾತ್ಮ ಎಂಬ ಎರಡು ರೂಪಗಳಿಂದ ಇರುತ್ತಾನೆ ಎಂಬುದಾಗಿ ಋತಂ ಪಿಬಂತೌ ಸುಕೃತಸ್ಯ ಲೋಕೇ .... (ಕಠ. 1-3-1) ಮೊದಲಾದ ಶ್ರುತಿಗಳು ಹೇಳುತ್ತಿರುವುದರಿಂದ ರೂಪದ್ವಯವು ಪ್ರಾಮಾಣಿಕವಾದ್ದರಿಂದ ಪರಮಾತ್ಮನಿಗೆ ರೂಪದ್ವಯವನ್ನು ಅಂಗೀಕರಿಸಬಹುದಾದರೂ ಸಹ, ಪ್ರತಿಯೊಂದು ಶರೀರದಲ್ಲಿಯೂ ಪರಮಾತ್ಮ ಅನೇಕರೂಪಗಳಿಂದ ಇರುತ್ತಾನೆ ಎಂಬುದಾಗಿ ಯಾವ ಪ್ರಮಾಣವೂ ತಿಳಿಸುತ್ತಿಲ್ಲವಾದ್ದರಿಂದ (ಬಹುರೂಪಗಳು ಪ್ರಾಮಾಣಿಕವಾಗದ ಕಾರಣ) ಪರಮಾತ್ಮನಿಗೆ ಬಹುತ್ವವು ಉಪಪನ್ನವಾಗುವುದಿಲ್ಲ.

ಆದ್ದರಿಂದ ಬಹುತ್ವ ಇಲ್ಲದ ಕಾರಣ ಪರಮಾತ್ಮನಿಗೆ ಪಂಚಜನಾದಿಶಬ್ದವಾಚ್ಯತ್ವವನ್ನು ಹೇಳಲು ಬಾರದ ಕಾರಣ, ಪಂಚಜನಾದಿಶಬ್ದಗಳಿಗೆ ಇತರರೇ ವಾಚ್ಯರಾಗುತ್ತಾರೆ. ವಿಷ್ಣು ವಾಚ್ಯನಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ न सङ्ख्योपसङ्ग्रहादपि नानाभावादतिरेकाच्च ॐ (१.४.१२)**

**ಸೂತ್ರಾರ್ಥ** :– ಸಂಖ್ಯೋಪಸಂಗ್ರಹಾತ್ = ಯಸ್ಮಿನ್ ಪಂಚ ಪಂಚಜನಾಃ (ಬೃ. 6-4-17) ಎಂಬುದಾಗಿ ಬಹುತ್ವಸಂಖ್ಯಾವಚನ ಇದ್ದದ್ದರಿಂದ ಅಪಿ = ಯಸ್ಮಿನ್ ಎಂಬುದಾಗಿ ಆಧಾರ-ಆಧೇಯಭಾವ ನಿರ್ದೇಶ ಮಾಡಿದ್ದರಿಂದಲೂ ಸಹ, ವಿಷ್ಣುವಿಗೆ ಪಂಚಜನಾದಿಶಬ್ದವಾಚ್ಯತ್ವವನ್ನು ಅಂಗೀಕಾರ ಮಾಡಿದರೆ ಯಾವ ವಿರೋಧವೂ ಇಲ್ಲ.

ಕುತಃ = ಯಾಕೆ? ನಾನಾಭಾವಾತ್ = ಭಗವಂತನಿಗೆ ಅನೇಕ ರೂಪಗಳು ಇರುವುದರಿಂದ ಅತಿರೇಕಾಚ್ಚ = ಯಸ್ಮಿನ್ ಎಂದು ಹೇಳಿದ ಆಧಾರರೂಪಕ್ಕೂ ಪಂಚಜನಾಃ ಎಂದು ಹೇಳಿದ ಆಧೇಯರೂಪಕ್ಕೂ ಸವಿಶೇಷಾಭೇದ ಇರುವುದರಿಂದಲೂ ಸಹ.

## ಸಿದ್ಧಾಂತ

**ಸೂ.ರ.:– एवं च पञ्चजनादिशब्दवाच्यो भगवानेव । बाधका-भावात् ।**

**ಅನು.**:– ವಾಜಸನೇಯಕದಲ್ಲಿ ಶ್ರುತವಾಗುತ್ತಿರುವ "ಯಸ್ಮಿನ್ ಪಂಚ ಪಂಚಜನಾಃ" ಎಂಬ ಪಂಚಜನಾದಿಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನೆ. 'ಪಂಚಜನಾದಿ - ಶಬ್ದವಾಚ್ಯನಾದವನು ವಿಷ್ಣು' ಎಂದು ಅಂಗೀಕಾರ ಮಾಡಿದರೆ ಯಾವ ಬಾಧಕವೂ ಇಲ್ಲವಾದ್ದರಿಂದ.

**ಸೂ.ರ.:– न च बहुत्वानुपपत्तिः । बाधकाभावात् । प्राणादि-पञ्चजननियमनाय बहुरूपत्वेन बहुत्वोपपत्तेः ।**

**ಅನು.**:– ಬಾಧಕ ಇಲ್ಲ ಎಂದೇಕೆ ಹೇಳುತ್ತೀರಿ? ಬಹುತ್ವವೇ ಬಾಧಕವಾಗುತ್ತದೆ. ಪರಮಾತ್ಮನಿಗೆ ಬಹುರೂಪಗಳಿಲ್ಲವಾದ್ದರಿಂದ ಬಹುತ್ವವು ಕೂಡುವುದಿಲ್ಲ. ಆದ್ದರಿಂದ ಬಹುತ್ವವೇ ಬಾಧಕವಾಗುತ್ತದೆಯಲ್ಲವೇ? ಎಂದರೆ, ಅದೂ ಸರಿಯಲ್ಲ. ವಿಷ್ಣುವಿಗೆ

ಬಹುತ್ವವನ್ನು ಅಂಗೀಕರಿಸಿದರೂ ಯಾವ ತೊಂದರೆ ಇಲ್ಲ. ಪ್ರಾಣಾದಿಪಂಚಜನರನ್ನು ನಿಯಮನ ಮಾಡುವುದಕ್ಕಾಗಿ ಪರಮಾತ್ಮನು ಬಹುರೂಪಗಳನ್ನು ತೆಗೆದುಕೊಳ್ಳುವುದರಿಂದ ಬಹುತ್ವವು ಉಪಪನ್ನವಾಗುತ್ತದೆ.

**ಸೂ.ರ.:– न चाधाराधेयभावानुपपत्तिः । सभगव इति स्वे महिम्नीति (छां.७-२४-१) स्वाधारत्वस्य प्रमाणसिद्धत्वात् । पञ्चजनादिशब्दवाच्यो विष्णुरेवेति सिद्धम् ।**

**ಅನು.:–** ಆದರೂ ಯಸ್ಮಿನ್ ಪಂಚ ಪಂಚಜನಾಃ ಎಂಬುದಾಗಿ ವಿಷ್ಣುವಿಗೆ ಆಧಾರತ್ವವನ್ನು, ಪಂಚಜನರಿಗೆ ಆಧೇಯತ್ವವನ್ನು ಹೇಳಿದ್ದಾರೆ. ವಿಷ್ಣುವೇ ಪಂಚಜನಾದಿಶಬ್ದವಾಚ್ಯ ಎಂದಾದರೆ ವಿಷ್ಣುವೇ ಆಧಾರ, ಅವನೇ ಆಧೇಯ ಎಂದಾಗುತ್ತದೆ. ಅರ್ಥಾತ್ ಆಧಾರ-ಆಧೇಯಭಾವ ಅನುಪಪನ್ನವಾಗಬೇಕಾಗುತ್ತದೆ ಎಂದು ಶಂಕಿಸುವುದೂ ಸರಿಯಲ್ಲ. ಸ ಭಗವಃ ಸ್ವೇ ಮಹಿಮ್ನಿ (ಛಾಂ. 7-24-1) ಎಂಬುದಾಗಿ ವಿಷ್ಣುವು ತನಗೆ ತಾನೇ ಆಧಾರ ಎಂಬುದಾಗಿ ಪ್ರಮಾಣಸಿದ್ಧವಾಗಿದೆ. ಆದ್ದರಿಂದ ವಿಷ್ಣುವು ತಾನೇ ಆಧಾರ, ತಾನೇ ಆಧೇಯ ಎಂದು ಆಗಬಹುದು.

ಹೀಗೆ ಆಧಾರ – ಆಧೇಯಭಾವವು ಉಪಪನ್ನವಾಗುವುದರಿಂದ ವಾಜಸನೇಯಕದಲ್ಲಿ ಶ್ರುತವಾಗುತ್ತಿರುವ ಪಂಚಜನ ಮೊದಲಾದ ಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

### ಸೂತ್ರ – 13

### ಆಕ್ಷೇಪ

**ಸೂ.ರ.:– नन्वस्तु बहुत्वादिकमुपपन्नम् । तथाऽपि पञ्चजनस्य विष्णुत्वे विशेषहेतोरभावात् । सर्वे वेदा इत्यस्य साधारणत्वेन सङ्कोचसम्भवेनानियामकत्वाद्बहुत्वसम्भवेऽपि न पञ्चजनादिशब्दवाच्यो हरिरिति प्राप्ते सूत्रमाह ।**

**ಅನು.:–** ಪ್ರಾಣಾದಿ ಪಂಚಜನನಿಯಮನ ಮಾಡುವುದಕ್ಕಾಗಿ ಬಹುರೂಪಗಳನ್ನು ತೆಗೆದುಕೊಳ್ಳುವುದರಿಂದ ಪರಮಾತ್ಮನಿಗೆ ಬಹುತ್ವವು ಉಪಪನ್ನವಾಗುತ್ತದೆ ಎಂದು ಹೇಳಿದಿರಿ. ಆದರಂತೆಯೇ ಪರಮಾತ್ಮನಿಗೆ ಬಹುತ್ವಾದಿಗಳು ಉಪಪನ್ನವಾಗಲಿ. ಆದರೂ ಸಹ ವಿಷ್ಣುವೇ ಪಂಚಜನನಾಗಿದ್ದಾನೆ ಎಂಬ ವಿಷಯದಲ್ಲಿ ವಿಶೇಷವಾದ ಹೇತು ಯಾವುದೂ ಇಲ್ಲ.

ಸರ್ವೇ ವೇದಾ ಯತ್ಪದಮಾಮನಂತಿ ಎಂಬ ಶ್ರುತಿಯು ಸರ್ವಶಬ್ದವಾಚ್ಯತ್ವವನ್ನು ಹೇಳುತ್ತಿರುವುದರಿಂದ ಇದೇ ವಿಶೇಷ ಹೇತುವಾಗುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಸರ್ವೇ ವೇದಾಃ ಎನ್ನುವುದು ಸಾಧಾರಣವಾಗುವುದರಿಂದ ಅದಕ್ಕೆ ಸಂಕೋಚ ಮಾಡಲು ಬರುವ ಕಾರಣ ಅದು ನಿಯಾಮಕವಾಗುವುದಿಲ್ಲ. ಆದ್ದರಿಂದ ಪರಮಾತ್ಮನಿಗೆ ಬಹುತ್ವವು ಸಂಭಾವಿತವಾದರೂ ಸಹ, ವಿಷ್ಣುವು ಪಂಚಜನಾದಿಶಬ್ದವಾಚ್ಯನಾಗಲು ಸಾಧ್ಯವಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ प्राणादयो वाक्यशेषात् ॐ (१.४.१३)

**ಸೂತ್ರಾರ್ಥ** :– ಭಗವದ್ರೂಪತ್ವೇನ ಹೇಳಲ್ಪಟ್ಟ ಪಂಚಜನರು ಪ್ರಾಣಾದಯಃ = ಪ್ರಾಣಸ್ಯ ಪ್ರಾಣಂ ಚಕ್ಷುಷಃ ಚಕ್ಷುಃ ಇತ್ಯಾದಿಯಾಗಿ ದ್ವಿತೀಯಾನಿರ್ದಿಷ್ಟವಾದ ಪ್ರಾಣ–ಚಕ್ಷು–ಶ್ರೋತ್ರ– ಅನ್ನ–ಮನಸ್ಸು ಎಂಬ ಹೆಸರುಳ್ಳ ಭಗವದ್ರೂಪವಿಶೇಷಗಳೇ ಆಗಿವೆ.

ಕುತಃ=ಯಾಕೆ? ವಾಕ್ಯಶೇಷಾತ್=ವಿಷ್ಣುವನ್ನು ಬಿಟ್ಟು ಉಳಿದವರಲ್ಲಿ ಅಸಂಭಾವಿತವಾದ ಪ್ರಾಣಪ್ರಾಣಪದತ್ವಾದಿ ಪ್ರತಿಪಾದಕವಾದ "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ" (ಛಾಂ. 6-4-18) ಇತ್ಯಾದಿ ವಾಕ್ಯಶೇಷ ಇರುವುದರಿಂದ.

### ಸಮಾಧಾನ

**ಸೂ.ರ.**:– **एवं च स उ प्राणस्येति (केन. २) वाक्यशेषे प्राणादीनां प्राणपदत्वोक्तेः । तस्य च विष्णुलिङ्गत्वात् । तस्मात्पञ्चजनादिशब्दवाच्यो विष्णुरेवेति सिद्धम् ।**

**ಅನು.**:– "ಯಚ್ಛ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚಕ್ಷುಃ" ಎಂಬುದಾಗಿ ವಾಕ್ಯಶೇಷದಲ್ಲಿ ಪ್ರಾಣಾದಿಗಳಿಗೂ ಪ್ರಾಣಪದತ್ವವನ್ನು ಹೇಳಿದ್ದರಿಂದ ಈ ಪ್ರಾಣಪ್ರಾಣಪದತ್ವವು ವಿಷ್ಣುವಿನ ಅಸಾಧಾರಣ-ಲಿಂಗವಾದ್ದರಿಂದ, ವಿಶೇಷಹೇತು ಇರುವುದರಿಂದ ಪಂಚಜನಾದಿ ಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಸೂತ್ರ - 14

## ಆಕ್ಷೇಪ

**ಸೂ.ರ.:– ननु न पञ्चजनादिशब्दवाच्यो विष्णुः । माध्यन्दिनवाक्यशेपोक्तानां प्राणादिप्राणत्वादिप्रदानां विष्णुत्वेऽपि काण्वानां वाक्यशेपे चतुर्णामेवोक्तत्वेन तस्य तद्गतयस्मिन्निति पूर्ववाक्यतो भिन्नार्थत्वात् । अत्रापि वाक्यशेषस्य यस्मिन्नित्यतो भिन्नार्थत्वावश्यम्भावात् । एकस्यैवाधाराधेयभावाभावात् । अतः पञ्चजनानां विष्णुत्वाभावादिति प्राप्ते सूत्रं पठति ।**

**ಅನು.:–** ಆದರೂ ಸಹ ಪಂಚಜನಾದಿಶಬ್ದವಾಚ್ಯನಾದವನು ವಿಷ್ಣು ಅಲ್ಲ. ಏಕೆಂದರೆ ಮಾಧ್ಯಂದಿನವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳು (ಪ್ರಾಣಾದಿಪ್ರಾಣತ್ವಾದಿಪ್ರದವಾದ ರೂಪಗಳು) ವಿಷ್ಣುವೇ ಆದರೂ ಸಹ ಕಾಣ್ವರ ವಾಕ್ಯಶೇಷದಲ್ಲಿ (ಐದುರೂಪಗಳನ್ನು ಹೇಳಿಲ್ಲವಾದ್ದರಿಂದ) ನಾಲ್ಕು ರೂಪಗಳನ್ನು ಮಾತ್ರ (ಅನ್ನನಿಗೆ ಅನ್ನತ್ವಪ್ರದಾತೃರೂಪವನ್ನು ಬಿಟ್ಟು ಉಳಿದ ನಾಲ್ಕು ರೂಪಗಳನ್ನು ಮಾತ್ರ) ಹೇಳಿದ್ದರಿಂದ ಅದು ಪೂರ್ವವಾಕ್ಯದಿಂದ ಭಿನ್ನವಾದ ಅರ್ಥ ಉಳ್ಳದ್ದಾಗಿದೆ (ಕಾಣ್ವಶಾಖೆಯಲ್ಲಿ ಇರುವ ವಾಕ್ಯಶೇಷವು ಮಾಧ್ಯಂದಿನ-ವಾಕ್ಯಶೇಷದಲ್ಲಿ ಇರುವ ವಾಕ್ಯಶೇಷಕ್ಕಿಂತಲೂ ಭಿನ್ನಾರ್ಥಕವಾಗಿದೆ) ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ ज्योतिषैकेषामसत्यन्ने ॐ (१.४.१४)**

**ಸೂತ್ರಾರ್ಥ :–** ಏಕೇಷಾಂ = ಕಾಣ್ವಾದಿಗಳ ಶಾಖೆಯಲ್ಲಿ ಅನ್ನೇ = ಅನ್ನನಾಮಕ ಭಗವದ್ರೂಪವು ಅಸತಿ = ಹೇಳದಿದ್ದರೂ ಸಹ ಜ್ಯೋತಿಷಾ = ಜ್ಯೋತಿರ್ನಾಮಕ ಭಗವದ್ರೂಪವನ್ನು ತೆಗೆದುಕೊಂಡು ಪಂಚತ್ವಸಂಖ್ಯಾ ಪೂರ್ತಿಯನ್ನು ತಿಳಿಯಬೇಕು.

## ಸಮಾಧಾನ

**ಸೂ.ರ.:– एवं चास्मिन्वाक्यशेपे अन्नस्यान्नमितिरूपे कथिते सत्यपि तद्देवा ज्योतिपां ज्योतिरिति (बृ.६-४-१६) किञ्चिद्दूरोक्तेन पञ्चत्वसम्भवेन भिन्नविपयत्वाभावात् । अतो बहुत्वसङ्ख्या विशिष्टवाचिशब्दवाच्योऽपि हरिरेवेति सिद्धम् ।**

**ಅನು.**:- ಕಾಣ್ವರ ವಾಕ್ಯಶೇಷದಲ್ಲಿ ಅನ್ನಸ್ಯ ಅನ್ನಂ ಎಂಬುದಾಗಿ ಅನ್ನಕ್ಕೂ ಅನ್ನತ್ವ-ಪ್ರದಾತೃವಾದ ರೂಪವು ಹೇಳದಿದ್ದರೂ ಸಹ, ''ಯಸ್ಮಾದರ್ವಾಕ್ ಸಂವತ್ಸರೋऽಹೋಭಿಃ ಪರಿವರ್ತತೇ ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇऽಮೃತಮ್'' (ಬೃ. 6-4-16) ಎಂಬುದಾಗಿ ಮುಂದೆ ಸ್ವಲ್ಪ ದೂರದಲ್ಲಿ ಹೇಳಿರುವ ಜ್ಯೋತಿರ್ನಾಮಕ ಭಗವದ್ರೂಪವನ್ನು ತೆಗೆದುಕೊಂಡು (ಅನ್ನನಾಮಕ ರೂಪದ ಸ್ಥಳದಲ್ಲಿ ಜ್ಯೋತಿರ್ನಾಮಕ ಭಗವದ್ರೂಪವನ್ನು ಸೇರಿಸಿಕೊಂಡು) ಪಂಚತ್ವಸಂಖ್ಯಾ ಪೂರ್ತಿಯನ್ನು ತಿಳಿದುಕೊಳ್ಳಬೇಕು.

ಈ ರೀತಿಯಾಗಿ ಭಗವದ್ರೂಪಗಳಲ್ಲಿ ಪಂಚತ್ವವು ಉಪಪನ್ನವಾಗುವುದರಿಂದ ಮಾಧ್ಯಂದಿನವಾಕ್ಯಶೇಷಕ್ಕೂ ಕಾಣ್ವವಾಕ್ಯಶೇಷಕ್ಕೂ ಭಿನ್ನವಿಷಯತ್ವ ಇಲ್ಲ.

ಆದ್ದರಿಂದ ''ಯಸ್ಮಿನ್ ಪಂಚ ಪಂಚಜನಾಃ ... '' ಇತ್ಯಾದಿಯಾಗಿ ಶ್ರುತವಾಗುತ್ತಿರುವ, ಬಹುತ್ವಸಂಖ್ಯಾ ವಿಶಿಷ್ಟವಾಚಿಯಾದ ಪಂಚಜನಾದಿಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ನ ಸಂಖ್ಯೋಪಸಂಗ್ರಹಾಧಿಕರಣವು ಮುಗಿಯಿತು.**

ಅಧಿಕರಣ - 4

# ಆಕಾಶಾಧಿಕರಣ

## ಸಂಗತಿ

**ಸೂ.ರ.:- अत्रावान्तरकारणवाच्याकाशादिशब्दसमन्वयः ब्रह्मणि क्रियते ।**

**ಅನು.:-** ಅವಾಂತರಕಾರಣವಾಚ್ಯ ಆಕಾಶಾದಿಶಬ್ದಗಳ ಸಮನ್ವಯವನ್ನು ಮಾಡುತ್ತಾರೆ ಈ ನಾಲ್ಕನೇ ಆಕಾಶಾಧಿಕರಣದಲ್ಲಿ. ಉತ್ಪತ್ತಿಮತ್ವಲಿಂಗದಿಂದ ಅನ್ಯತ್ರೈವ ಪ್ರಸಿದ್ಧವಾದ ಆಕಾಶಾದಿಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಾರೆ ಈ ಅಧಿಕರಣದಲ್ಲಿ ಎಂದು ಭಾವ.

ತತ್ತು ಸಮನ್ವಯಾತ್ ಎಂಬ ಸಮನ್ವಯಸೂತ್ರದಲ್ಲಿ ಸರ್ವಶಬ್ದವಾಚ್ಯತ್ವವನ್ನು ಪರಮಾತ್ಮನಿಗೆ ಹೇಳಲಾಗಿದೆ. ಸರ್ವಶಬ್ದಗಳ ಮಧ್ಯದಲ್ಲಿ ಇರುವ ಆಕಾಶಾದಿಶಬ್ದಗಳು "ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ" ಎಂಬುದಾಗಿ ತೈತ್ತಿರೀಯಾದಿ ಶ್ರುತಿಗಳಲ್ಲಿ ಶ್ರುತವಾಗುತ್ತಿವೆ. ಈ ಆಕಾಶಾದಿಶಬ್ದಗಳಿಂದ ವಿಷ್ಣು ವಾಚ್ಯನಲ್ಲ ಎಂದಾದರೆ, ಅವನಿಗೆ ಸರ್ವಶಬ್ದವಾಚ್ಯತ್ವಭಂಗವಾಗುತ್ತದೆಯಾದ್ದರಿಂದ ವಿಷ್ಣುವಿಗೆ ಆಕಾಶಾದಿಶಬ್ದವಾಚ್ಯತ್ವವನ್ನು ನಿರ್ಣಯ ಮಾಡುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:- नन्वाकाशादिशब्दवाच्यो न विष्णुः । तेषामात्मादि-कार्यत्वश्रवणात् । न च परमात्मनस्तत्सम्भवति । न जायत इति श्रुतेः।**

**ಅನು.:-** "ಆತ್ಮನ ಆಕಾಶಃ ಸಂಭೂತಃ" ಎನ್ನುವಲ್ಲಿ ಆಕಾಶಾದಿಶಬ್ದ ವಾಚ್ಯನಾದವನು ವಿಷ್ಣು ಆಗಲು ಸಾಧ್ಯವಿಲ್ಲ. ಏಕೆಂದರೆ - ಈ ಆಕಾಶಾದಿಗಳು ಆತ್ಮಾದಿಗಳ ಕಾರ್ಯವಾಗಿ ಶ್ರುತ- ವಾಗುತ್ತಿವೆ. ಆದರೆ "ನ ಜಾಯತೇ ಮ್ರಿಯತೇ" ಎಂಬುದಾಗಿ (ಪರಮಾತ್ಮನಿಗೆ ಹುಟ್ಟು- ಸಾವುಗಳು ಇಲ್ಲ ಎಂದು ತಿಳಿಸುವ) ಶ್ರುತಿ ಇರುವುದರಿಂದಾಗಿ ಪರಮಾತ್ಮನಿಗೆ ಆತ್ಮಾದಿ- ಕಾರ್ಯತ್ವವು ಉಪಪನ್ನವಾಗುವುದಿಲ್ಲವಾದ್ದರಿಂದ, ವಿಷ್ಣುವು ಆಕಾಶಾದಿ- ಶಬ್ದವಾಚ್ಯನಾಗಲು ಸಾಧ್ಯವಿಲ್ಲ.

**ಸೂ.ರ.:– किं च लोके तावद्भिन्नयोरेव कार्यकारणभाव उपलब्धो न त्वभिन्नयोरित्यात्माकाशयोरभिन्नत्वेन तथाभावो विरुद्धः ।**

**ಅನು.:–** ಜಗತ್ತಿನಲ್ಲಿ ಭಿನ್ನವಾದ ವಸ್ತುಗಳಲ್ಲಿಯೇ ಕಾರ್ಯ-ಕಾರಣಭಾವವು ಕಂಡಿದೆ. ಹೊರತು ಅಭಿನ್ನವಾದ ವಸ್ತುಗಳಲ್ಲಿ ಕಾರ್ಯ-ಕಾರಣಭಾವವು ಕಂಡಿಲ್ಲ. ಪ್ರಕೃತ ಒಂದುವೇಳೆ ಆಕಾಶಾದಿಶಬ್ದವಾಚ್ಯನಾದವನು ವಿಷ್ಣು ಎಂದೇ ಆದರೆ, ಆತ್ಮಶಬ್ದವಾಚ್ಯ-ನಾದವನು ಆಕಾಶಾದಿಶಬ್ದವಾಚ್ಯನಾದವನು ಒಬ್ಬನೇ ಆಗುವುದರಿಂದ (ಅಭಿನ್ನರಾಗು-ವುದರಿಂದ) ಅವನಲ್ಲಿ ಕಾರ್ಯ-ಕಾರಣಭಾವವು (ಕೂಡುವುದಿಲ್ಲ) ವಿರುದ್ಧವಾಗುತ್ತದೆ.

**ಸೂ.ರ.:– न चाकाशादिसम्भवस्य तदधीनत्वेन सम्भूतशब्दो-पपत्तिरिति वाच्यम् । सुतोत्पत्तौ जनके जातशब्दप्रयोगादर्शनात् । आकाशगत रूपस्यान्यगतसम्भवनियामकत्वे आत्मशब्दस्यानुपयोगात् । आत्मन इत्यस्यानन्वयं स्यात् ।**

**ಅನು.:–** ಆಕಾಶಾದಿಗಳ ಉತ್ಪತ್ತಿಯು ಭಗವದಧೀನವಾದ್ದರಿಂದ ವಿಷ್ಣುವಿನ ವಿಷಯ-ದಲ್ಲಿ ಸಂಭೂತಶಬ್ದವು ಉಪಪನ್ನವಾಗಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಸುತನ ಉತ್ಪತ್ತಿಯು ತಂದೆಯ ಅಧೀನವಾದ್ದರಿಂದ, ಅಂದಮಾತ್ರಕ್ಕೆ ಸುತನ ಉತ್ಪತ್ತಿಯಾದರೆ (ತಂದೆಯು ಹುಟ್ಟಿದ) ಜನಕೋ ಜಾತಃ ಎಂಬುದಾಗಿ ಜನಕನ ವಿಷಯದಲ್ಲಿ ಜಾತಶಬ್ದವನ್ನು ಪ್ರಯೋಗಿಸುವುದು ಕಂಡಿಲ್ಲ.

**ಸೂ.ರ.:– तस्मादात्मशब्दोदितस्यैव मुख्यकारणस्य विष्णुत्वं न त्ववान्तरकारणानामाकाशादीनामिति प्राप्ते सूत्रितम् ॥**

**ಅನು.:–** ಆದ್ದರಿಂದ ಆತ್ಮನಃ ಎಂಬುದಾಗಿ ಆತ್ಮಶಬ್ದೋದಿತನಾದ ಮುಖ್ಯಕಾರಣ-ನಾಗಿರುವ ವ್ಯಕ್ತಿ ವಿಷ್ಣು ಆಗುತ್ತಾನೆ, ಹೊರತು ಅವಾಂತರಕಾರಣವಾದ ಆಕಾಶಾದಿಗಳು ವಿಷ್ಣು ಆಗಲು ಸಾಧ್ಯವಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ कारणत्वेन चाकाशादिषु यथाव्यपदिष्टोक्तेः ॐ (१.४.१९)**

ಸೂತ್ರಾರ್ಥ :– 'ಆತ್ಮನ ಆಕಾಶಃ ಸಂಭೂತಃ' 'ಆಕಾಶಾದ್ವಾಯುಃ' (ತೈ.2-1)

ಇತ್ಯಾದಿಗಳಲ್ಲಿ ಕಾರ್ಯತ್ವೇ ಸತಿ ಕಾರಣತ್ವರೂಪ ಅವಾಂತರಕಾರಣವಾಚಕವಾದ ಆಕಾಶಾದಿಶಬ್ದಗಳಿಂದ ಆಕಾಶಾದಿಷು ಸ್ಥಿತೋ ವಿಷ್ಣುರೇವ = ಆಕಾಶಾದಿಗಳಲ್ಲಿ ನಿಯಾಮಕನಾಗಿ ಇರುವ ವಿಷ್ಣುವೇ ಕಾರಣತ್ವೇನ ಚ = ಕಾರ್ಯವಾಗಿ ಹಾಗೂ ಕಾರಣವಾಗಿ ಪ್ರತಿಪಾದ್ಯನಾಗುತ್ತಿದ್ದಾನೆ. ನ ಭೂತಂ = ಹೊರತು ಆಕಾಶ ಎಂಬ ಭೂತಪದಾರ್ಥವು ಪ್ರತಿಪಾದ್ಯವಾಗುತ್ತಿಲ್ಲ.

ಕುತಃ = ಯಾಕೆ? ಯಥಾ ವ್ಯಪದಿಷ್ಟೋಕ್ತೇಃ= स योऽतोऽश्रुत: (ಐ.ಆ. 3-2-4) ಇತ್ಯಾದಿಗಳಲ್ಲಿ ವಿಷ್ಣುವು ಎಂತಹ ಅವಿದಿತತ್ವಾದಿರೂಪದಿಂದ ವ್ಯಪದಿಷ್ಟನಾಗಿದ್ದಾನೆಯೋ (ಉಕ್ತನಾಗಿದ್ದಾನೆಯೋ) ತದ್ರೂಪಯುಕ್ತನಾಗಿಯೇ ಆಕಾಶಾದಿಗಳಲ್ಲಿ ''ಯಮಾಕಾಶೋ ನ ವೇದ' (ಬೃ.5-7-12) ಇತ್ಯಾದಿವಾಕ್ಯದಿಂದ ಉಕ್ತನಾಗಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं च कार्यत्वे सति कारणत्वाभिधायकाकाशः सम्भूत इत्यादि-श्रुतिभागगताकाशादिशब्दवाच्यो विष्णुरेव । नामानि सर्वाणीति श्रुतेः । आकाशाद्युत्पत्तावाकाशान्तर्गतत्वेन भगवतोऽभिव्यक्त्या कार्यत्वस्य वाय्वादिरूपाभिव्यक्तिहेतुत्वेनकारणत्वोपपत्त्या कार्यकारण भावाविरोधात् । तथा चावान्तरकारणाकाशादिशब्दवाच्यो विष्णुरेवेति सिद्धम् ॥**

**ಅನು.:–** ಕಾರ್ಯತ್ವೇ ಸತಿ ಕಾರಣತ್ವವಾಚಕವಾದ, ಆಕಾಶಃ ಸಂಭೂತಃ ಇತ್ಯಾದಿ ಶ್ರುತಿಭಾಗದಲ್ಲಿರುವ ಆಕಾಶಾದಿಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

''ನಾಮಾನಿ ಸರ್ವಾಣಿ'' ಎಂದು ಶ್ರುತಿ ಇರುವುದರಿಂದ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ತಿಳಿಸುತ್ತಿದೆ ಶ್ರುತಿ ಎಂದಮೇಲೆ ಆಕಾಶಾದಿಶಬ್ದವಾಚ್ಯನೂ ಆಗಲೇಬೇಕು.

ಹಾಗಾದರೆ ಕಾರ್ಯ-ಕಾರಣಭಾವವು ಹೇಗೆ ಕೂಡುತ್ತದೆ? ಎಂದರೆ, ಆಕಾಶಾದಿಗಳ ಉತ್ಪತ್ತಿಗೆ ಆಕಾಶಾಂತರ್ಗತತ್ವೇನ ಭಗವಂತನ ಅಭಿವ್ಯಕ್ತಿಯು ಕಾರಣವಾದ್ದರಿಂದ ಕಾರ್ಯತ್ವವು ಕೂಡುತ್ತದೆ. ಇನ್ನು ವಾಯ್ವಾದಿರೂಪಗಳ ಅಭಿವ್ಯಕ್ತಿಗೆ ಕಾರಣವಾದ್ದರಿಂದ ಕಾರಣತ್ವವೂ ಕೂಡುತ್ತದೆ. ಹೀಗೆ ಒಬ್ಬನೇ ವಿಷ್ಣುವಿಗೆ ಕಾರ್ಯ-ಕಾರಣಭಾವವನ್ನು ಹೇಳಿದರೆ ಯಾವ ವಿರೋಧವೂ ಬರುವುದಿಲ್ಲವಾದ್ದರಿಂದ ಕಾರ್ಯ-ಕಾರಣಭಾವವೂ ಉಪಪನ್ನವಾಗುತ್ತದೆ.

ಆದ್ದರಿಂದ ತೈತ್ತಿರೀಯಾದಿಗಳಲ್ಲಿ ಶ್ರುತವಾಗುತ್ತಿರುವ, "ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ" ಇತ್ಯಾದಿ ಶ್ರುತಿಭಾಗದಲ್ಲಿರುವ, ಅವಾಂತರಕಾರಣವಾಚಕವಾದ ಆಕಾಶಾದಿಶಬ್ದವಾಚ್ಯನಾದ ವ್ಯಕ್ತಿ ವಿಷ್ಣುವೇ ಆಗುತ್ತಾನೆ ಎಂದು ಸಿದ್ಧವಾಗುತ್ತದೆ.

**ಇಲ್ಲಿಗೆ ಆಕಾಶಾಧಿಕರಣವು ಮುಗಿಯಿತು.**

*ಅಧಿಕರಣ – 5*

# ಸಮಾಕರ್ಷಾಧಿಕರಣ

## ಸಂಗತಿ

**ಸೂ.ರ.:– अत्र विष्णौ प्रकारान्तरेण पूर्वोक्तसर्वशब्दसमन्वया-सम्भवमाशंक्य परिह्रियते ।**

**ಅನು.:–** ವಿಷ್ಣುವಿನಲ್ಲಿ ಹಿಂದೆ ಮಾಡಿದ ಸರ್ವಶಬ್ದಸಮನ್ವಯದ ಮೇಲೆ ಮತ್ತೊಂದು ರೀತಿಯಿಂದ ಅಸಂಭವವನ್ನು ಶಂಕಿಸಿಕೊಂಡು ಪರಿಹರಿಸುತ್ತಾರೆ ಈ ಐದನೇ ಸಮಾಕರ್ಷಾಧಿಕರಣದಲ್ಲಿ.

ಹಿಂದೆ ಸಮನ್ವಯಸೂತ್ರದಲ್ಲಿ ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವನ್ನು ಹೇಳಲಾಗಿದೆ. ಇದಕ್ಕೆ ಏನಾದರೂ ಅನುಪಪತ್ತಿ ಬಂದರೆ ಸರ್ವಶಬ್ದವಾಚ್ಯತ್ವವು ಉಪಪನ್ನವಾಗುವುದಿಲ್ಲ-ವಾದ್ದರಿಂದ, ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಮತ್ತೊಮ್ಮೆ ಸಮರ್ಥಿಸುತ್ತಾರೆ ಈ ಅಧಿಕರಣದಲ್ಲಿ.

ಲೌಕಿಕ-ವೈದಿಕವಾದ ಎಲ್ಲ ಶಬ್ದಗಳೂ ಭಗವದೇಕವಾಚಿಯಾಗಿವೆಯೋ? ಇಲ್ಲವೋ? ಎಂದು ಸಂದೇಹ ತೆಗೆದುಕೊಂಡು ಭಗವದೇಕವಾಚಿಯಾಗಿವೆ ಎಂದು ನಿರ್ಣಯಿಸುತ್ತಾರೆ ಈ ಅಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वथाऽपि भगवतः सर्वशब्दवाच्यत्वं न सम्भवति ।**

**सर्वशब्दानां मुख्यतस्तस्यैकवाचित्वे ततोऽन्यत्र जगति शब्दप्रयोगरूपो वा हानादिरूपो वा व्यवहाराभावापातेन तल्लोपप्रसङ्गात् । तस्य चानिष्टत्वात् । परमात्मैव मुख्यतः सर्वशब्दवाच्य इत्यवधारणानुपपत्तेरिति प्राप्ते सूत्रमाह ॥**

**ಅನು.:–** ಆದರೂ ಸಹ ಭಗವಂತನಿಗೆ ಸರ್ವಶಬ್ದವಾಚ್ಯತ್ವವು ಸಂಭಾವಿತ-ವಾಗುವುದಿಲ್ಲ. ಏಕೆಂದರೆ – ಎಲ್ಲ ಶಬ್ದಗಳೂ ಮುಖ್ಯವಾಗಿ ಭಗವದೇಕವಾಚಿಗಳಾಗುವು-ದಾದರೆ, ಆ ಭಗವಂತನನ್ನು ಬಿಟ್ಟು ಉಳಿದ ಜಗತ್ತಿನ ವಿಷಯದಲ್ಲಿ ಶಬ್ದಪ್ರಯೋಗ-ರೂಪವಾದ ವ್ಯವಹಾರ ಇಲ್ಲದೇ ಹೋಗಬೇಕಾಗುವುದರಿಂದ ಅಥವಾ ಹಾನಾದಿ-ವ್ಯವಹಾರಗಳು ಇಲ್ಲದೇ ಹೋಗಬೇಕಾಗುವುದರಿಂದ ಅದು ಲೋಪವಾಗಬೇಕಾದ ಪ್ರಸಂಗ ಬರುತ್ತದೆ.

ಉಳಿದ ಜಗತ್ತಿನ ವಿಷಯದಲ್ಲಿ ಶಬ್ದಪ್ರಯೋಗಾಭಾವವಾಗಲೀ ಹಾನಾದಿ-ವ್ಯವಹಾರಾಭಾವವಾಗಲೀ ಅನಿಷ್ಟಪ್ರಸಂಗವಾಗುವುದರಿಂದ "ಪರಮಾತ್ಮನೇ ಮುಖ್ಯವಾಗಿ ಸರ್ವಶಬ್ದವಾಚ್ಯನು" ಎಂಬುದಾಗಿ ನಿರ್ಧಾರ ಮಾಡಲು ಬರುವುದಿಲ್ಲ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ समाकर्षात् ॐ (१.४.१६)**

**ಸೂತ್ರಾರ್ಥ :–** ಸಮಾಕರ್ಷಾತ್ = ಸ್ವತೋ ಮುಖ್ಯವೃತ್ತ್ಯಾ ಪರಮಾತ್ಮವಾಚಿನಃ ಶಬ್ದಾನ್ = ಮುಖ್ಯವಾಗಿ ಪರಮಾತ್ಮವಾಚಿಯಾಗಿರುವ ಶಬ್ದಗಳನ್ನು ತತಃ ಸಮಾಕೃಷ್ಯ ಅನ್ಯತ್ರ ವಾಚಕತ್ವಶಕ್ತ್ಯಂಗೀಕಾರಾತ್ = ಅನ್ಯತ್ರ ಸಮಾಕರ್ಷ ಮಾಡಿ (ಅನ್ಯತ್ರ ರೂಢ್ಯಾದಿಗಳನ್ನು ಅಂಗೀಕರಿಸಿ) ವಾಚಕತ್ವಶಕ್ತಿಯನ್ನು ಅಂಗೀಕಾರ ಮಾಡಿದ್ದರಿಂದ, ಅನ್ಯತ್ರ ವ್ಯವಹಾರ-ಲೋಪಪ್ರಸಂಗ ಬರುವುದಿಲ್ಲ.

## ಸಿದ್ಧಾಂತ

**ಸೂ.ರ.:–** एवं च मुख्यतः परमात्मवाचकानां शब्दानामन्यत्र व्यवहारार्थं समाकृष्य परमेश्वरेण सङ्केतितत्वेन सर्वव्यवहारोपपत्तेः । परस्य

वाचका इति (पाद्म.) स्मृतेः । तथा च सकलशब्दपरममुख्यार्थत्वं हरेरिति सिद्धम् ॥

ಅನು.:– ಪರಸ್ಯ ವಾಚಕಾಶ್ಶಬ್ದಾ ಸಮಾಕೃಷ್ಯೇತರೇಷ್ವಪಿ ।
ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ॥

ಎಂಬುದಾಗಿ ಪಾದ್ಮಪುರಾಣದಲ್ಲಿ ತಿಳಿಸಿದಂತೆ ಮುಖ್ಯವಾಗಿ ಪರಮಾತ್ಮವಾಚಕವಾದ ಶಬ್ದಗಳಿಗೆ ಅನ್ಯತ್ರ (ವಿಷ್ಣು ಬಿಟ್ಟು ಉಳಿದ ಜಗತ್ತಿನ ವಿಷಯದಲ್ಲಿ) ವ್ಯವಹಾರಕ್ಕಾಗಿ ಸಮಾಕರ್ಷವನ್ನು ಮಾಡಿಕೊಂಡು (ರೂಢ್ಯಾದಿಗಳನ್ನು ಅಂಗೀಕಾರ ಮಾಡಿ) ಅವು ಪರಮಾತ್ಮನಿಂದ ಸಂಕೇತಿತವಾಗಿದ್ದರಿಂದ ಜಗತ್ತಿನ ವಿಷಯದಲ್ಲಿ ಎಲ್ಲ ವ್ಯವಹಾರಗಳೂ ಉಪಪನ್ನವಾಗುತ್ತವೆ.

(ವಿಷ್ಣುವೇ ಸರ್ವಶಬ್ದವಾಚ್ಯ ಎಂಬುದಕ್ಕೆ ಯಾವ ಅನುಪಪತ್ತಿ ಇಲ್ಲದ ಕಾರಣ) ಆದ್ದರಿಂದ ಸಕಲಶಬ್ದಗಳಿಗೂ ಹರಿಯೇ ಪರಮಮುಖ್ಯಾರ್ಥನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 17

## ಆಕ್ಷೇಪ

**ಸೂ.ರ.:–** ननु यदि परमात्मनि शब्दा मुख्या अन्यत्रामुख्यास्तर्हि तस्मिन्नेव प्रसिद्ध्या भाव्यम् । कथमन्यत्र प्रसिद्धिः । तथा च प्रसिद्ध्य-न्यथाऽनुपपत्त्याऽन्यस्यैव मुख्यवाच्यत्वं कल्प्यमिति प्राप्ते सूत्रं पठति ।

**ಅನು.:–** ಒಂದುವೇಳೆ ''ಶಬ್ದಗಳೆಲ್ಲ ಪರಮಾತ್ಮನಲ್ಲಿಯೇ ಮುಖ್ಯವಾಗಿವೆ. ಅನ್ಯತ್ರ ಸಮಾಕರ್ಷ ಮಾಡಿಕೊಂಡು ಸಾಂಕೇತಿಕವಾಗಿ ಅಮುಖ್ಯವಾಗಿವೆ'' ಎನ್ನುವುದೇ ಆದರೆ ಹಾಗಾದರೆ ಮುಖ್ಯಾರ್ಥನಾದ ಪರಮಾತ್ಮನಲ್ಲಿಯೇ ಶಬ್ದಗಳಿಗೆ ಪ್ರಸಿದ್ಧಿ ಇರಬೇಕಿತ್ತು. ಹೊರತು ಅಮುಖ್ಯಾರ್ಥವಾದ ಜಗತ್ತಿನ ವಿಷಯದಲ್ಲಿ ಪ್ರಸಿದ್ಧಿ ಇರಬಾರದಿತ್ತು.

ಈಗಲಾದರೂ ಮುಖ್ಯಾರ್ಥನಾದ ಪರಮಾತ್ಮನಲ್ಲಿ ಪ್ರಸಿದ್ಧಿ ಇಲ್ಲದೇ ಅಮುಖ್ಯಾರ್ಥ-ವಾದ ಜಗತ್ತಿನ ವಿಷಯದಲ್ಲಿಯೇ ಶಬ್ದಗಳಿಗೆ ಪ್ರಸಿದ್ಧಿ ಇದೆ ಎಂದಮೇಲೆ, ಆ ಪ್ರಸಿದ್ಧ-ನ್ಯಥಾನುಪಪತ್ತಿಯಿಂದ ಜಗತ್ತೇ ಎಲ್ಲ ಶಬ್ದಗಳಿಗೂ ಮುಖ್ಯಾರ್ಥವಾಗಿದೆ ಎಂದೇ ಸಿದ್ಧವಾಗುತ್ತದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ जगद्वाचित्वात् ॐ (१.४.१७)

**ಸೂತ್ರಾರ್ಥ** :– ಜಗದ್ವಾಚಿತ್ವಾತ್ = ಲೋಕವ್ಯವಹಾರದಿಂದಾಗಿ (ಜನರು ಮಾಡುವ ವ್ಯವಹಾರದಿಂದಾಗಿ) ಶಬ್ದಗಳಿಗೆ ಜಗದ್ವಾಚಿತ್ವವು ತಿಳಿಯುವುದರಿಂದ, ಶಬ್ದಗಳಿಗೆ ಜಗತ್ತಿನ ವಿಷಯದಲ್ಲಿ ಪ್ರಸಿದ್ಧಿಯು ಉಪಪನ್ನವಾಗುತ್ತದೆ.

### ಸಮಾಧಾನ

**ಸೂ.ರ.:– एवं च लोकस्य बहिर्मुखत्वेन जगत्येव व्यवहाराच्छब्दानां तत्र व्युत्पत्त्या प्रसिद्धिः । परमात्मनि तु व्युत्पत्त्यभावेन प्रसिद्ध्यभावो-पपत्तेः । तस्मात्सर्वशब्दमुख्यवाच्यत्वं विष्णोरिति सिद्धम् ॥**

**ಅನು.**:– ಲೋಕವು (ಜನರು) ಪರಮಾತ್ಮನನ್ನು ಬಿಟ್ಟು ಉಳಿದ ಜಗತ್ತಿನಲ್ಲಿಯೇ ಶಬ್ದ-ವ್ಯವಹಾರವನ್ನು ಮಾಡುವುದರಿಂದ ಶಬ್ದಗಳಿಗೆ ಜಗತ್ತಿನಲ್ಲಿ ವ್ಯುತ್ಪತ್ತಿಯು ಕೂಡುವುದರಿಂದ ಜಗತ್ತಿನ ವಿಷಯದಲ್ಲಿ ಶಬ್ದಗಳಿಗೆ ಪ್ರಸಿದ್ಧಿಯು ಉಪಪನ್ನವಾಗುತ್ತದೆ.

ಪರಮಾತ್ಮನ ವಿಷಯದಲ್ಲಿ ಶಬ್ದಗಳ ವ್ಯವಹಾರ ಮಾಡುವುದಿಲ್ಲವಾದ್ದರಿಂದ ವ್ಯುತ್ಪತ್ತಿಯು ಇಲ್ಲವಾದ್ದರಿಂದ ಪ್ರಸಿದ್ಧ್ಯಭಾವವು ಉಪಪನ್ನವಾಗುತ್ತದೆ.

ಆದ್ದರಿಂದ ಭಗವಂತನಿಗೆ ಸರ್ವಶಬ್ದವಾಚ್ಯತ್ವವನ್ನು ಹೇಳಿದರೆ ಯಾವ ಅನುಪಪತ್ತಿಯೂ ಇಲ್ಲವಾದ್ದರಿಂದ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವು ಕೂಡುತ್ತದೆ.

### ಸೂತ್ರ – 18

### ಆಕ್ಷೇಪ

**ಸೂ.ರ.:– नन्वस्तु प्रवृत्तिनिमित्तस्वामित्वात्परमात्मनो मुख्यतः शब्दवाच्यत्वम् । तथाऽपि न तस्यैव किं तु जीवमुख्यप्राणयोरपि । तयोः सर्वस्वामित्वस्यास्य यदैकां शाखामिति (छां.६-११-२) वायुना हि सर्वे लोका इत्यादिश्रुतिसिद्धत्वादित्याक्षिप्य समादधत्सूत्रमुपन्यस्यति ॥**

**ಅನು.**:– ಎಲ್ಲ ಪದಾರ್ಥಗಳೂ ಭಗವಂತನ ಅಧೀನವಾದ್ದರಿಂದ (ಪರಮಾತ್ಮನು ಪ್ರವೃತ್ತಿ- ನಿಮಿತ್ತಗಳಿಗೆ ಸ್ವಾಮಿಯಾದ್ದರಿಂದ) ಪರಮಾತ್ಮನಿಗೆ ಮುಖ್ಯವಾಗಿ

ಸರ್ವಶಬ್ದವಾಚ್ಯತ್ವವನ್ನು ಹೇಳುತ್ತಿದ್ದೀರಿ. ಆದರೆ ಈ ಕಾರಣಕ್ಕಾಗಿ ಸರ್ವಶಬ್ದವಾಚ್ಯತ್ವವನ್ನು ಹೇಳುವುದಾದರೆ, ಪರಮಾತ್ಮನಿಗೆ ಮಾತ್ರ ಸರ್ವಶಬ್ದವಾಚ್ಯತ್ವವು ಸಿದ್ಧಿಸುವುದಿಲ್ಲ. ಕಿಂತು ಜೀವ- ಮುಖ್ಯಪ್ರಾಣರಿಗೂ ಸರ್ವಶಬ್ದವಾಚ್ಯತ್ವವು ಸಿದ್ಧಿಸಬೇಕಾಗುತ್ತದೆ. ಏಕೆಂದರೆ "ಅಥ ಯದ್ಯೈಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ" (ಛಾಂ.ಉ. 6-11-2) ಎಂಬ ಶ್ರುತಿಯಿಂದ ಜೀವನಿಗೆ ಸರ್ವಸ್ವಾಮಿತ್ವವು ಸಿದ್ಧವಾಗುತ್ತಿರುವುದರಿಂದ (ಈ ಶ್ರುತಿಯಲ್ಲಿ ವೃಕ್ಷಾದಿಗಳಿಗೆ ಜೀವಾಧೀನತ್ವವು ಸಿದ್ಧಿಸುತ್ತಿರುವುದರಿಂದ) ಜೀವನಿಗೆ ಸರ್ವಶಬ್ದ- ವಾಚ್ಯತ್ವವನ್ನು ಹೇಳಬೇಕಾಗುತ್ತದೆ.

ಮತ್ತು "वायुना हि लोका नेनीयन्त" ಎಂಬ ಶ್ರುತಿಯಿಂದ ಮುಖ್ಯಪ್ರಾಣನಿಗೆ ಸರ್ವಸ್ವಾಮಿತ್ವವು ಸಿದ್ಧವಾಗುತ್ತಿರುವುದರಿಂದ ಎಲ್ಲಕ್ಕೂ ಮುಖ್ಯಪ್ರಾಣಾಧೀನತ್ವವು ಸಿದ್ಧಿಸುತ್ತಿರುವುದರಿಂದ) ಮುಖ್ಯಪ್ರಾಣನಿಗೂ ಸರ್ವಶಬ್ದವಾಚ್ಯತ್ವವನ್ನು ಹೇಳಬೇಕಾಗುತ್ತದೆ.

ಆದ್ದರಿಂದ ಪರಮಾತ್ಮನಿಗೆ ಸರ್ವಶಬ್ದವಾಚ್ಯತ್ವವನ್ನು ಹೇಳುವಂತೆ ಜೀವ- ಮುಖ್ಯಪ್ರಾಣರಿಗೂ ಸರ್ವಶಬ್ದವಾಚ್ಯತ್ವವನ್ನು ಹೇಳಿರಿ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ जीवमुख्यप्राणलिङ्गादिति चेव्याख्यातम् ॐ (१.४.१८)

**ಸೂತ್ರಾರ್ಥ :–** 'ಅಸ್ಯ ಯದ್ಯೈಕಾಂ ಶಾಖಾಂ ಜೀವೋ ಜಹಾತಿ' ಎಂಬ ವಾಕ್ಯದಲ್ಲಿ ಹಾಗೂ 'ವಾಯುನಾ ಹಿ ಲೋಕಾ ನೇನೀಯಂತ' ಎಂಬ ವಾಕ್ಯದಲ್ಲಿಯೂ ಸಹ ಜೀವಮುಖ್ಯಪ್ರಾಣಲಿಂಗಾತ್ = ಜೀವ-ಮುಖ್ಯಪ್ರಾಣರ ಲಿಂಗಗಳು ಶ್ರುತವಾಗು- ತ್ತಿರುವುದರಿಂದ (ಸರ್ವಸ್ವಾಮಿತ್ವವು ಜೀವ-ಮುಖ್ಯಪ್ರಾಣರಿಗೂ ಶ್ರುತವಾಗುತ್ತಿರು- ವುದರಿಂದ) ತಯೋರಪಿ ತತ್ತಚ್ಛಬ್ದಮುಖ್ಯವಾಚ್ಯತಾ ಸ್ಯಾತ್ = ಜೀವ-ಮುಖ್ಯಪ್ರಾಣರಿಗೂ ಸರ್ವಶಬ್ದಗಳ ಮುಖ್ಯವಾಚ್ಯತ್ವವು ಬರಲಿ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಕುತಃ ? = ಯಾಕೆ ಎಂದರೆ, ಯಸ್ಮಾತ್ = ಯಾವ ಕಾರಣ ತದ್ವಾಕ್ಯಜಾತಂ = ಆ ವಾಕ್ಯಸಮೂಹವು ತತ್ತದಂತರ್ಯಾಮಿಪರತಯಾ = ಜೀವಮುಖ್ಯಪ್ರಾಣರ ಅಂತರ್ಯಾಮಿಯಾದ ಭಗವಂತನ ಪರವಾಗಿ ವ್ಯಾಖ್ಯಾತಮ್ = ವ್ಯಾಖ್ಯಾನಿಸಲ್ಪಟ್ಟಿದೆಯೋ ಆ ಕಾರಣ ಎಂದರ್ಥ.

## ಸಮಾಧಾನ

**ಸೂ.ರ.:– एवं च श्रुतीनां तदन्तर्गतभगवद्विषयतयोपासात्रैविध्यादिति व्याख्यानाद्विष्णोरेव मुख्यतः शब्दार्थत्वमिति सिद्धम् ।**

**ಅನು.:–** ಆದ್ದರಿಂದ ಅಸ್ಯ ಯದ್ಯೈಕಾಂ ಎಂಬ ಶ್ರುತಿ ಹಾಗೂ ವಾಯುನಾ ಹಿ ಎಂಬ ಶ್ರುತಿಯು ಜೀವ-ಮುಖ್ಯಪ್ರಾಣರಿಗೆ ಸರ್ವಸ್ವಾಮಿತ್ವವನ್ನು ಹೇಳುತ್ತಿಲ್ಲ. ಕಿಂತು ಅವರಲ್ಲಿ ಅಂತರ್ಯಾಮಿಯಾದ ಭಗವಂತನಿಗೆ ಸರ್ವಸ್ವಾಮಿತ್ವವನ್ನು ಹೇಳುತ್ತಿದೆ ಎಂಬುದಾಗಿ ಅಂತರ್ಯಾಮಿಪರವಾಗಿ ಆ ಶ್ರುತಿಗಳನ್ನು ವ್ಯಾಖ್ಯಾನಿಸಿದ್ದರಿಂದ, ಸರ್ವಶಬ್ದವಾಚ್ಯತ್ವವು ಮುಖ್ಯವಾಗಿ ವಿಷ್ಣುವಿಗೇ ಇದೆ ಎಂಬುದಾಗಿ ಸಿದ್ಧವಾಗುತ್ತದೆ.

ಸೂತ್ರ – 19

## ಆಕ್ಷೇಪ

**ಸೂ.ರ.:– ननु यत्तावदुक्तं समाकर्षेण वाच्यत्वादेकस्य मुख्यवाच्यत्वमन्यस्य स्वतो वाच्यत्वात्परममुख्यवाच्यत्वमिति तदयुक्तम् । वेदस्य काम्यफलार्थमप्रवृत्तत्वेन समाकर्षे प्रयोजनाभावात् । एकस्य वाच्यत्वमेव नेत्यन्यस्य विष्णोर्मुख्यत एव वाच्यत्वं भवेन्न तु परममुख्यतो वाच्यत्वमिति प्राप्ते सूत्रं पठति ॥**

**ಅನು.:–** ''ಅನ್ಯತ್ರ ಸಮಾಕರ್ಷ ಮಾಡಿಕೊಂಡು ವಾಚ್ಯವಾದ್ದರಿಂದ ಜಗತ್ತಿಗೆ ಮುಖ್ಯವಾಚ್ಯತ್ವ ಇದೆ. ಪರಮಾತ್ಮನಿಗೆ (ಸಮಾಕರ್ಷೇಣ ವಾಚ್ಯತ್ವ ಇಲ್ಲದೇ) ಸ್ವತೋ ವಾಚ್ಯತ್ವ ಇರುವುದರಿಂದ ಪರಮಮುಖ್ಯವಾಚ್ಯತ್ವ ಇದೆ'' ಎಂಬುದಾಗಿ ಹೇಳಿದ್ದು ಸರಿಯಲ್ಲ.

ವೇದವು ಕಾಮ್ಯಫಲಕ್ಕಾಗಿ ಪ್ರವೃತ್ತವಾಗಿಲ್ಲವಾದ್ದರಿಂದ ಅನ್ಯತ್ರ ಸಮಾಕರ್ಷ ಮಾಡುವುದಕ್ಕೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಭಗವಂತನನ್ನು ಬಿಟ್ಟು ಉಳಿದವರಿಗೆ ವಾಚ್ಯತ್ವವೇ ಇಲ್ಲವಾದ್ದರಿಂದ, ವಿಷ್ಣುವಿಗೆ ಮುಖ್ಯವಾಚ್ಯತ್ವವನ್ನೇ ಹೇಳಬೇಕೇ ಹೊರತು ಪರಮಮುಖ್ಯವಾಚ್ಯತ್ವವನ್ನು ಹೇಳುವುದು ಸರಿಯಾಗುವುದಿಲ್ಲ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ अन्यार्थं तु जैमिनिः प्रश्नव्याख्यानाभ्यामपि चैवमेके ॐ (१.४.१९)

**ಸೂತ್ರಾರ್ಥ :–** ತುಶಬ್ದವು ಏವ ಎಂಬ ಅರ್ಥದಲ್ಲಿದೆ. ವಿಷ್ಣೋರನ್ಯತ್ರ ಶಬ್ದಾನ್ ಸಮಾಕೃಷ್ಯ ಕರ್ಮಾದಿಪ್ರತಿಪಾದನಮಪಿ ಯುಕ್ತಮೇವ = ವಿಷ್ಣು ಬಿಟ್ಟು ಉಳಿದವರಲ್ಲಿ ಶಬ್ದಗಳನ್ನು ಸಮಾಕರ್ಷ ಮಾಡಿ ಕರ್ಮಾದಿಪ್ರತಿಪಾದನ ಮಾಡುವುದೂ ಯುಕ್ತವೇ ಆಗಿದೆ. ಕುತಃ = ಯಾಕೆ? ಯಸ್ಮಾತ್ = ಯಾವ ಕಾರಣ ಅನ್ಯಾರ್ಥಂ ತು (ಏವ) = ಪರಮಾತ್ಮನ ಜ್ಞಾನಕ್ಕಾಗಿಯೇ (ಕರ್ಮಾದಿಪ್ರತಿಪಾದನ ಮಾಡಿದ್ದು).

ತತ್ ಕುತಃ ? = ಅದು ಹೇಗೆ ತಿಳಿಯುತ್ತದೆ? ಎಂದರೆ, ಪ್ರಶ್ನವ್ಯಾಖ್ಯಾನಾಭ್ಯಾಂ = ಕಸ್ಮಿನ್ .... ಎಂದು ಶೌನಕರು ಪ್ರಶ್ನೆ ಕೇಳಿದ್ದರಿಂದ ಹಾಗೂ ಅದಕ್ಕೆ ದ್ವೇ ವಿದ್ಯೇ (ಮುಂ.1-1) ಎಂದು ಆಂಗಿರಸರು ಉತ್ತರಿಸಿದ್ದರಿಂದ ತಿಳಿಯುತ್ತದೆ.

ಅದೇ ರೀತಿಯಾಗಿ ಕಥಂ ನು ಎಂಬುದಾಗಿ ಶ್ವೇತಕೇತು ಪ್ರಶ್ನೆ ಕೇಳಿದ್ದರಿಂದ ಹಾಗೂ ಯಥಾ ಸೌಮ್ಯ ಎಂಬುದಾಗಿ ಅದಕ್ಕೆ ಉದ್ದಾಲಕರು ಉತ್ತರ ನೀಡಿದ್ದರಿಂದಲೂ ತಿಳಿಯುತ್ತದೆ ಎಂದು ಜೈಮಿನಿಃ ಆಚಾರ್ಯಃ ಮನ್ಯತೇ = ಜೈಮಿನಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ.

ಚ = ಮತ್ತು ಏಕೇ ಶಾಖಿನಃ = ಕೆಲವು ಶಾಖಿಗಳು 'ಯಸ್ತಂ ನ ವೇದ' (ಋ. 1-164-39) ಎಂಬುದಾಗಿ ಸ್ಪಷ್ಟವಾಗಿ ಏವಂ = ಪರಮಾತ್ಮನ ಜ್ಞಾನಕ್ಕಾಗಿ ಅನ್ಯಜ್ಞಾನ ಎಂದು ಪಠಂತಿ = ಹೇಳುತ್ತಾರೆ. ತಸ್ಮಾತ್ ಅಪಿ = ಆದ್ದರಿಂದಲೂ ಸಹ.

### ಸಮಾಧಾನ

**ಸೂ.ರ.:–** एवं च युक्तमेव वेदः समाकर्षेण कर्मादिकं वदतीति ।

**ಅನು.:–** ಭಗವಂತನ ಜ್ಞಾನಕ್ಕಾಗಿ ಕರ್ಮಾದಿಜ್ಞಾನವು ಬೇಕಾಗುವುದರಿಂದ, ವೇದವು ಉಳಿದವರಲ್ಲಿ ಸಮಾಕರ್ಷ ಮಾಡಿ ಕರ್ಮಾದಿಗಳನ್ನು ಪ್ರತಿಪಾದಿಸುತ್ತದೆ ಎಂದು ಹೇಳಿದ್ದು ಸಮಂಜಸವೇ ಆಗಿದೆ.

**ಸೂ.ರ.:–** कर्मादिज्ञानस्य भगवज्ज्ञानार्थत्वं कुत इति चेत् सर्वमिदमिति विज्ञातस्याप्यस्य फलं कस्मिन्विज्ञाते भवति । एतज्ज्ञान-

**मात्रस्याफलत्वादिति शौनकप्रश्ने सर्वमपरविद्यया विज्ञातं भवति । विज्ञातं च परविद्याविषयपरमात्मज्ञानेन सफलं भवतीत्यङ्गीरसो व्याख्यानात् ।**

**ಅನು.:–** 'ಭಗವಂತನ ಜ್ಞಾನಕ್ಕಾಗಿ ಕರ್ಮಾದಿಜ್ಞಾನ ' ಎನ್ನುವುದು ಹೇಗೆ ತಿಳಿಯುತ್ತದೆ? ಎಂದರೆ, ಶೌನಕ-ಆಂಗೀರಸರ ಪ್ರಶ್ನೋತ್ತರದಿಂದ ತಿಳಿಯುತ್ತದೆ. 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಯಾವುದು ಜ್ಞಾತವಾದಾಗ ಮಾತ್ರ ಈ ಕರ್ಮಾದಿಗಳು ಜ್ಞಾತವಾಗುತ್ತವೆ ? (ಈ ಎಲ್ಲ ಕರ್ಮಾದಿಗಳು ಯಾವುದು ತಿಳಿಯಲ್ಪಡು-ವುದರಿಂದ ತಿಳಿಯಲ್ಪಡುತ್ತವೆ?) ಕರ್ಮಾದಿಗಳು ಜ್ಞಾತವಾದರೂ ಸಹ ಯಾವುದು ಜ್ಞಾತವಾದಾಗ ಮಾತ್ರ ಅದರ ಫಲ ಸಿಗುವುದು? ಏಕೆಂದರೆ ಕೇವಲ ಈ ಕರ್ಮಾದಿಗಳ ಜ್ಞಾನವು ಫಲರೂಪವಾಗಿಲ್ಲ ಎಂಬುದಾಗಿ ಶೌನಕರು ಪ್ರಶ್ನೆ ಮಾಡಿದಾಗ, 'ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ (ಮು.ಉ.1-13-4) ಈ ಎಲ್ಲ ಕರ್ಮಾದಿಗಳೂ ಅಪರವಿದ್ಯೆಯಿಂದ ವಿಜ್ಞಾತವಾಗುತ್ತವೆ. ಅದೇ ಪರವಿದ್ಯಾವಿಷಯಪರಮಾತ್ಮ- ಜ್ಞಾನದಿಂದ ವಿಜ್ಞಾತವಾದರೆ ಸಫಲವಾಗುತ್ತದೆ ಎಂಬುದಾಗಿ ಅಂಗಿರಸರು ಉತ್ತರ ನೀಡಿದ್ದರಿಂದ 'ಭಗವಂತನ ಜ್ಞಾನಕ್ಕಾಗಿ ಕರ್ಮಾದಿಜ್ಞಾನ' ಎನ್ನುವುದು ತಿಳಿಯಲ್ಪಡುತ್ತದೆ.

**ಸೂ.ರ.:– अपि चैवमेके शाखिनो यस्तन्न वेदेत्यादिना पठन्ति । अतो कर्मादिज्ञानस्य भगवज्ज्ञानार्थत्वमिति जैमिनिराचार्यो मन्यते । ततश्च विष्णोः परममुख्यवाच्यत्वमिति सिद्धम् ॥**

**ಅನು.:–** ಮತ್ತು ಕೆಲವು ಶಾಖಿಗಳೂ ಯಸ್ತಂ ನ ವೇದ ಎಂಬುದಾಗಿ ಸ್ಪಷ್ಟವಾಗಿ ಪಠಿಸುವುದೂ ಉಂಟು.

ಆದ್ದರಿಂದ ಭಗವಂತನ ಜ್ಞಾನಕ್ಕಾಗಿ ಕರ್ಮಾದಿಗಳ ಜ್ಞಾನ ಎಂಬುದಾಗಿ ಜೈಮಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಹೀಗಾಗಿ ವಿಷ್ಣುವಿಗೇ ಸರ್ವಶಬ್ದಮುಖ್ಯಾರ್ಥತ್ವವು ಇದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 20

### ಆಕ್ಷೇಪ

**ಸೂ.ರ.:– ननु न परमात्मज्ञानार्थे कर्मादिकं वेदेन वक्तव्यम् । अन्यदनुक्त्वा वेदेन परमात्ममात्रकथनेऽपि तज्ज्ञानसम्भवात् ।**

**ಅನು.:**– ಆದರೂ ವೇದವು ಪರಮಾತ್ಮಜ್ಞಾನಕ್ಕಾಗಿ ಕರ್ಮಾದಿಗಳನ್ನು ಹೇಳುತ್ತದೆ ಎನ್ನುವುದು ಸರಿಯಾಗುವುದಿಲ್ಲ. ಏಕೆಂದರೆ ಪರಮಾತ್ಮನನ್ನು ಬಿಟ್ಟು ಉಳಿದ ಪದಾರ್ಥಗಳನ್ನು ತಿಳಿಸದೇ (ಕರ್ಮಾದಿಗಳನ್ನು ತಿಳಿಸದೇ) ಪರಮಾತ್ಮನನ್ನು ಮಾತ್ರ ತಿಳಿಸಿದರೂ ಸಹ ಪರಮಾತ್ಮಜ್ಞಾನ ಆಗುತ್ತದೆ.

**ಸೂ.ರ.:– न च व्युत्पत्त्यनुपपत्तिः । ज्योतिष्टोमादिशब्दानां विष्णौ रूढेरभावात् । योगस्य च ज्योतिष्टोमेनेति पदावयवानामप्यन्यपरत्वानभ्युपगमेऽयोगादिति वाच्यम् । खण्डपदमात्रस्यान्यवाचकत्वाभ्युपगमात् । तथा चान्यकथने प्रयोजनाभावान्न तत्र समाकर्षो युक्त इति प्राप्ते सूत्रं पठति ।**

**ಅನು.:**– ವೇದವು ಕರ್ಮಾದಿಗಳನ್ನು ಹೇಳುವುದೇ ಇಲ್ಲ ಎನ್ನುವುದಾದರೆ ಶಬ್ದಗಳಿಗೆ ವ್ಯುತ್ಪತ್ತಿ ಕೂಡುವುದಿಲ್ಲ. ಏಕೆಂದರೆ – ಜ್ಯೋತಿಷ್ಟೋಮಾದಿಶಬ್ದಗಳಿಗೆ ವಿಷ್ಣುವಿನಲ್ಲಿ ರೂಢಿಯು ಇಲ್ಲ. ಹಾಗಾಗಿ ಯೋಗವನ್ನೇ ಹೇಳಬೇಕು. ಯೋಗವೂ ಸಹ ಜ್ಯೋತಿಷ್ಟೋಮೇನ ಎಂದು ಪದಾವಯವಗಳಿಗೂ ಅನ್ಯಪರತ್ವವನ್ನು ಅಂಗೀಕರಿಸದೇ ಹೋದರೆ ಕೂಡುವುದಿಲ್ಲ. ಆದ್ದರಿಂದ ವ್ಯುತ್ಪತ್ತ್ಯನುಪಪತ್ತಿ ಬರುವುದಲ್ಲ? ಎಂದು ಶಂಕೆ ಬಂದರೆ ಅದು ಸರಿಯಲ್ಲ.

ಖಂಡಪದಗಳಿಗೆ ಮಾತ್ರ ಅನ್ಯವಾಚಕತ್ವವನ್ನು ಅಂಗೀಕರಿಸಿದ್ದರಿಂದ ಯಾವ ಅನುಪಪತ್ತಿ ಬರುವುದಿಲ್ಲ. ಆದ್ದರಿಂದ ಜ್ಯೋತಿಷ್ಟೋಮಾದಿಶಬ್ದಗಳು ಕರ್ಮಾದಿಗಳನ್ನು ತಿಳಿಸುವುದಕ್ಕೆ ಯಾವ ಪ್ರಯೋಜನವೂ ಇಲ್ಲವಾದ್ದರಿಂದ, ಜ್ಯೋತಿಷ್ಟೋಮಾದಿ ಕರ್ಮಗಳಲ್ಲಿ ಶಬ್ದಗಳಿಗೆ ಸಮಾಕರ್ಷ ಮಾಡುವುದು ಉಚಿತವಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ वाक्यान्वयात् ॐ (१.४.२०)

**ಸೂತ್ರಾರ್ಥ :**– ವಾಕ್ಯಾನ್ವಯಾತ್ = ಬ್ರಹ್ಮಣಿ ವಾಕ್ಯಸಮನ್ವಯಮವೇಕ್ಷ್ಯ ವೇದೇನ ಕರ್ಮಾದಿಕಮಪಿ ಪ್ರತಿಪಾದನೀಯಮಿತ್ಯರ್ಥಃ । ಬ್ರಹ್ಮನಲ್ಲಿ ವಾಕ್ಯಸಮನ್ವಯವನ್ನು ನೋಡಿ ವೇದಗಳಿಂದ ಕರ್ಮಾದಿಗಳೂ ಪ್ರತಿಪಾದನೀಯವಾಗಿದೆ ಎಂದು ಅರ್ಥ.

### ಸಮಾಧಾನ

**ಸೂ.ರ.:– एवं च न केवलं परमात्मनि श्रुतेः पदसमन्वयो विवक्षितः**

**किं तर्हि वाक्यसमन्वयोऽपि । न चासावन्यत्र समाकर्षाभावे सिद्ध्यतीति समाकर्षो वक्तव्य इति सिद्धम् ।**

ಅನು.:– ಶ್ರುತಿಗೆ ಪರಮಾತ್ಮನಲ್ಲಿ ಕೇವಲ ಪದಸಮನ್ವಯವನ್ನಷ್ಟೇ ವಿವಕ್ಷಿಸಿಲ್ಲ, ಕಿಂತು ವಾಕ್ಯಸಮನ್ವಯವನ್ನೂ ವಿವಕ್ಷಿಸಲಾಗಿದೆ. ಈ ವಾಕ್ಯಸಮನ್ವಯವಾದರೂ ಅನ್ಯತ್ರ ಸಮಾಕರ್ಷವನ್ನು ಒಪ್ಪದಿದ್ದರೆ ಕೂಡುವುದಿಲ್ಲ.

ಏಕೆಂದರೆ - ಪರಮಾತ್ಮನು ವಾಚ್ಯನಾದಂತೆ (ಕರ್ಮಾದಿಗಳೂ) ಇತರವಸ್ತುಗಳೂ ವಾಚ್ಯ ಎಂದು ಅಂಗೀಕರಿಸದೇ ಹೋದರೆ ಪರಮಾತ್ಮನಲ್ಲಿ ಪದಸಮನ್ವಯವು ಕೂಡಬಹುದೇ ಹೊರತು ವಾಕ್ಯಸಮನ್ವಯವು ಕೂಡುವುದಿಲ್ಲ. ಯಾಕೆಂದರೆ - "ವಾಕ್ಯಾನ್ವಯೋ ನಾಮ ಪೃಥಕ್ ಪೃಥಗರ್ಥೇಷು ವಾಚಕತಯಾ ಸ್ಥಿತವಾಕ್ಯಸ್ಯ ಅಂತತೋ ಭಗವತ್ಪರತ್ವಮ್ ।" ಪರಮಾತ್ಮ ಬಿಟ್ಟು ಉಳಿದ ಪದಾರ್ಥಗಳಲ್ಲಿ ವಾಚಕತ್ವೇನ ಸ್ಥಿತವಾದ ವಾಕ್ಯಕ್ಕೆ ಅಂತತೋ ಗತ್ವಾ ಭಗವತ್ಪರತ್ವವನ್ನು ಹೇಳುವುದೇ ವಾಕ್ಯಸಮನ್ವಯ.

ಹಾಗಾಗಿ ಶಬ್ದಗಳಿಗೆ ಅನ್ಯಪರತ್ವವನ್ನು ಅಂಗೀಕರಿಸದೇ ಹೋದರೆ ವಾಕ್ಯಸಮನ್ವಯವೇ ಕೂಡುವುದಿಲ್ಲ. ಆದ್ದರಿಂದ ವಾಕ್ಯಸಮನ್ವಯಸಿದ್ಧಿಗಾಗಿ ಶಬ್ದಗಳಿಗೆ ಅನ್ಯಪರತ್ವವನ್ನು ಅಂಗೀಕರಿಸುವುದು ಯುಕ್ತವೇ ಆಗಿದೆಯಾದ್ದರಿಂದ ಶಬ್ದಗಳಿಗೆ ಅನ್ಯತ್ರ ಸಮಾಕರ್ಷವನ್ನು ಹೇಳುವುದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 21

**ಸೂ.ರ.:– ननु परमात्मज्ञानार्थं कर्मादिकमुच्यत इत्युक्तम् । तत्केन प्रकारेणेत्याकाङ्क्षायां सूत्रमुपन्यस्यति ॥**

ಅನು.:– ಪರಮಾತ್ಮಜ್ಞಾನಕ್ಕಾಗಿ ಕರ್ಮಾದಿಗಳನ್ನು ತಿಳಿಸುತ್ತದೆ ವೇದ ಎಂದು ಹೇಳಿದಿರಿ. ಆ ಕರ್ಮಾದಿಗಳನ್ನು ಯಾವ ಪ್ರಕಾರದಿಂದ ತಿಳಿಸುತ್ತದೆ? ಎಂದು ಆಕಾಂಕ್ಷೆ ಬಂದರೆ ಅದಕ್ಕೆ ಕರ್ಮಾದಿಗಳನ್ನು ತಿಳಿಸುವ ಪ್ರಕಾರವನ್ನು ಸೂತ್ರದಿಂದ ಹೇಳುತ್ತಾರೆ.

**ॐ प्रतिज्ञासिद्धेर्लिङ्गमाश्मरथ्यः ॐ (१.४.२१)**

ಅನು.:– ವೇದೇನ ಕರ್ಮಾದಿಪ್ರತಿಪಾದನಂ = ವೇದದಿಂದ ಕರ್ಮಾದಿಪ್ರತಿಪಾದನೆಯು ಯತಃ = ಯಾವ ಕಾರಣ ಪ್ರತಿಜ್ಞಾಸಿದ್ಧೇಃ ಲಿಂಗಂ = 'ನಾನ್ಯಃ ಪಂಥಾ ಅಯನಾಯ ವಿದ್ಯತೇ' (ತೈ.ಆ. 12-73) ಎಂದು ಶ್ರುತಿ ಹೇಳುವಂತೆ "ಜ್ಞಾನಮೇವ

ಮೋಕ್ಷಹೇತುಃ ನಾನ್ಯತ್'' ಎಂಬ ಪ್ರತಿಜ್ಞಾತಾರ್ಥಸಿದ್ಧಿಗೆ ಸಾಧಕವಾಗಿದೆಯೋ ಅತಃ = ಆ ಕಾರಣ ತದುಪಯೋಗಿತ್ವೇನ ತತ್ಪ್ರತಿಪಾದನಂ ಯುಕ್ತಂ ಇತಿ ಆಶ್ಮರಥ್ಯಃ = ಆ ಪ್ರತಿಜ್ಞಾತಾರ್ಥಸಿದ್ಧಿಗೆ ಉಪಯೋಗಿಯಾಗಿ ಕರ್ಮಾದಿಪ್ರತಿಪಾದನ ಮಾಡಿದ್ದು ಯುಕ್ತವೇ ಆಗಿದೆ ಎಂಬುದಾಗಿ ಆಶ್ಮರಥ್ಯಾಚಾರ್ಯರು ಅಭಿಪ್ರಾಯಪಡುತ್ತಾರೆ.

**ಸೂ.ರ.:– एवं च नान्यः पन्था इति ब्रह्मज्ञानेन मोक्षः प्रतिज्ञातः । तत्सिद्ध्यर्थं कर्मादिकं सपरिकरं निरूप्य तस्यानित्यदुःखशिरस्कफलकत्व-मुच्यते । एवं कर्मादिकमनित्यफलकत्वेन नान्य इति सिद्धमित्येवंरूपेण कर्मवचनस्योपयोग इत्याश्मरथ्याचार्यो मन्यते । तथा च भगवज्ज्ञानार्थं कर्मादिकमुच्यत इति सिद्धम् ।**

**ಅನು.:–** ನಾನ್ಯಃ ಪಂಥಾ ಅಯನಾಯ ವಿದ್ಯತೇ ಎಂಬುದಾಗಿ ಬ್ರಹ್ಮಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ಪ್ರತಿಜ್ಞೆ ಮಾಡಲಾಗಿದೆ. ಆ ಪ್ರತಿಜ್ಞಾತಾರ್ಥವು ಸಿದ್ಧಿಸುವುದಕ್ಕಾಗಿ ಕರ್ಮಾದಿಗಳನ್ನು ಪರಿಕರಸಹಿತವಾಗಿ ನಿರೂಪಣೆ ಮಾಡಿ ಆ ಕರ್ಮಾದಿಗಳಿಗೆ ಅನಿತ್ಯಫಲಕತ್ವವನ್ನು ಹಾಗೂ ದುಃಖಸಂಭಿನ್ನಫಲಕತ್ವವನ್ನು ಹೇಳಲಾಗುತ್ತದೆ. ಹೀಗೆ ಕರ್ಮಾದಿಗಳು ಅನಿತ್ಯಫಲಕವಾದ್ದರಿಂದ ನಾನ್ಯಃ ಪಂಥಾ ಆಯನಾಯ ವಿದ್ಯತೇ ಎಂಬುದಾಗಿ ಪ್ರತಿಜ್ಞೆ ಮಾಡಿದ್ದು ಸಿದ್ಧವಾಗುತ್ತದೆ.

ಈ ರೀತಿಯಾಗಿ ನಾನ್ಯಃ ಪಂಥಾಃ ಎಂಬ ಪ್ರತಿಜ್ಞಾತಾರ್ಥಸಿದ್ಧಿಗಾಗಿ ಕರ್ಮಾದಿಗಳಿಗೆ ಅನಿತ್ಯಫಲಕತ್ವವನ್ನು ತೋರಿಸುವುದಕ್ಕಾಗಿ ಶ್ರುತಿಯು ಕರ್ಮಾದಿಗಳನ್ನು ಹೇಳುತ್ತದೆ ಎಂಬುದಾಗಿ ಆಶ್ಮರಥ್ಯಾಚಾರ್ಯರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಭಗವಂತನ ಜ್ಞಾನಕ್ಕಾಗಿ ಕರ್ಮಾದಿಗಳನ್ನು ಹೇಳಲಾಗುತ್ತದೆ ಎಂದು ಹೇಳಿದ್ದು ಯುಕ್ತವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 22

**ಸೂ.ರ.:– प्रकारान्तरेण कर्मादिवचनस्य ब्रह्मज्ञानोपयोगं प्रदर्शयत्सूत्रमुपन्यस्यति ॥**

**ಅನು.:–** ಕರ್ಮಾದಿವಚನಗಳಿಗೆ ಮತ್ತೊಂದು ರೀತಿಯಿಂದಲೂ ಸಹ ಭಗವದ್-ಜ್ಞಾನಕ್ಕೆ ಉಪಯೋಗವನ್ನು ತಿಳಿಸುವ ಸೂತ್ರವನ್ನು ಹೇಳುತ್ತಾರೆ –

ಕರ್ಮಾದಿಗಳನ್ನು ತಿಳಿಸುವ ವಚನಗಳು ಭಗವಂತನ ಜ್ಞಾನಕ್ಕೆ ಉಪಯೋಗಿಯಾಗಿವೆ ಎಂಬುದಾಗಿ ಮತ್ತೊಂದು ಪ್ರಕಾರದಿಂದಲೂ ಸಹ ಹೇಳುವ ಸೂತ್ರವನ್ನು ಹೇಳುತ್ತಾರೆ–

**ॐ उत्क्रमिष्यत एवं भावादित्यौडुलोमिः ॐ (१.४.२२)**

**ಸೂತ್ರಾರ್ಥ :–** ಉತ್ಕ್ರಮಿಷ್ಯತಃ = ಜ್ಞಾನದಿಂದ ಮೋಕ್ಷವನ್ನು ಇಚ್ಛಿಸುವ ಅಧಿಕಾರಿಗೆ ಏವಂ = ಜ್ಞಾನಸಾಧನವಾಗಿ ಭಾವಾತ್ = ಕರ್ಮಾದಿಗಳೂ ಅನುಷ್ಠೇಯವಾಗಿದ್ದರಿಂದ, ಮೋಕ್ಷಸಾಧನವಾದ ಜ್ಞಾನಕ್ಕೆ ಸಾಧನವಾದ್ದರಿಂದ ವೇದವು ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವುದು ಯುಕ್ತವೇ ಆಗಿದೆ ಇತಿ ಔಡುಲೋಮಿಃ = ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಸೂ.ರ.:– एवं च संसारादुत्क्रमणेच्छोर्मुमुक्षोर्ज्ञानस्येव कर्मादेरप्यन्तः करणशुद्धिद्वारा मोक्षसाधनभगवज्ज्ञानसाधनत्वेन निमित्तेन संपाद्यत्वा-द्वेदानां कर्मादिवाचित्वमावश्यकमित्यौडुलोमिराचार्यो मन्यते ।**

**ಅನು.:–** ಸಂಸಾರದಿಂದ ಉತ್ಕ್ರಮಣವನ್ನು ಇಚ್ಛಿಸುವ ಅಧಿಕಾರಿಗೆ ಜ್ಞಾನವು ಹೇಗೆ ಸಂಪಾದ್ಯ- ವಾಗಿದೆಯೋ ಹಾಗೆ ಕರ್ಮಾದಿಗಳು ಅಂತಃಕರಣಶುದ್ಧಿ ಮೂಲಕವಾಗಿ ಮೋಕ್ಷಸಾಧನವಾದ ಜ್ಞಾನಕ್ಕೆ ಸಾಧನವಾಗಿರುವ ಕಾರಣ (ನಿಮಿತ್ತವಾಗಿ) ಕರ್ಮಾದಿಗಳೂ ಸಹ ಸಂಪಾದ್ಯವೇ ಆಗಿರುವುದರಿಂದ ವೇದಗಳು ಕರ್ಮಾದಿಗಳನ್ನು ತಿಳಿಸುವುದು ಆವಶ್ಯಕವೇ ಆಗಿದೆ ಎಂಬುದಾಗಿ ಔಡುಲೋಮಿ ಆಚಾರ್ಯರು ತಿಳಿಯುತ್ತಾರೆ.

**ಸೂ.ರ.:– न च कर्मादेः फलश्रुतिविरोधः । तस्याः कर्मणि रुचिजन नार्थत्वात् । तथा चोक्तं युक्तमिति सिद्धम् ।।**

**ಅನು.:–** ಹಾಗಾದರೆ ಕರ್ಮಾದಿಗಳಿಗೆ ಫಲಶ್ರುತಿಯನ್ನು ಹೇಳುತ್ತಾರೆ. ಈ ಕರ್ಮ ಮಾಡಿದರೆ ಇಂತಹ ಫಲ ಬರುತ್ತದೆ ಎಂದು ಹೇಳುವುದುಂಟು. ಪ್ರಕೃತ ಕರ್ಮಗಳಿಗೆ ಜ್ಞಾನವೇ ಫಲ ಎಂದು ಹೇಳಿದರೆ ವಿರೋಧ ಬರುವುದಲ್ಲವೇ? ಎಂದು ಆಕ್ಷೇಪಿಸುವುದು ಸರಿಯಲ್ಲ.

ಏಕೆಂದರೆ – ನಿಜವಾಗಿ ಕರ್ಮಗಳಿಗೆ ಜ್ಞಾನವೇ ಫಲವಾಗಿ ಇರುವುದು. ಹಾಗಾದರೆ ಇತರ ಫಲಗಳನ್ನು ಹೇಳುವುದಕ್ಕೆ ಗತಿ ಏನು? ಎಂದರೆ, ರೋಚನಾರ್ಥಂ ಫಲಶ್ರುತಿಃ ಎಂದು ಹೇಳಿದಂತೆ ಕರ್ಮಗಳಿಗೆ ಇತರ ಲೌಕಿಕ ಫಲಗಳನ್ನು ಹೇಳಿದರೆ ಕರ್ಮಗಳಲ್ಲಿ ಅಭಿರುಚಿ

ಹುಟ್ಟುತ್ತದೆ. ಹಾಗೆ ಅಭಿರುಚಿ ಹುಟ್ಟಿ ಕರ್ಮಗಳನ್ನು ಮಾಡಲು ಪ್ರವೃತ್ತರಾದರೆ ಕೊನೆಗೆ ಜ್ಞಾನವೆಂಬ ಫಲವನ್ನು ಪಡೆಯಬಹುದು. ಈ ರೀತಿಯಾಗಿ ಕರ್ಮಗಳಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿ ಇತರ ಫಲಗಳನ್ನು ಹೇಳಿರುತ್ತಾರೆ. ಆದರೆ ಕರ್ಮಗಳಿಗೆ ಜ್ಞಾನವೇ ಮುಖ್ಯಫಲವಾದದ್ದು.

ಆದ್ದರಿಂದ ಮೋಕ್ಷಸಾಧನವಾದ ಜ್ಞಾನಕ್ಕೆ ಉಪಯೋಗಿಯಾದ್ದರಿಂದ ವೇದಗಳು ಕರ್ಮಗಳನ್ನು ಹೇಳುತ್ತಿರುವುದು ಯುಕ್ತವೇ ಆಗಿದೆ ಎಂಬುದಾಗಿ ಔಡುಲೋಮಿ ಆಚಾರ್ಯರು ಅಭಿಪ್ರಾಯಪಡುತ್ತಾರೆ.

ಸೂತ್ರ – 23

**ಸೂ.ರ.:– प्रकारान्तरेण कर्मादिवचनस्य ब्रह्मज्ञानोपयोगित्वं प्रदर्शयत्सूत्रं पठति ॥**

**ಅನು.:–** ಕರ್ಮಾದಿವಚನಗಳಿಗೆ ಮತ್ತೊಂದು ರೀತಿಯಿಂದಲೂ ಭಗವದ್‌ಜ್ಞಾನಕ್ಕೆ ಉಪಯೋಗವನ್ನು ತಿಳಿಸುವ ಸೂತ್ರವನ್ನು ಹೇಳುತ್ತಾರೆ.

**ॐ अवस्थितेरिति काशकृत्स्नः ॐ (१.४.२२)**

ಅವಸ್ಥಿತೇಃ = ಸರ್ವಾಧಾರನಾದ ಭಗವಂತನಲ್ಲಿ ಕರ್ಮಾದಿಗಳೂ ಆಧೇಯವಾಗಿ ಇರುವುದರಿಂದ, ಭಗವತಃ ಕರ್ಮಾಧಾರತ್ವಜ್ಞಾನಾಯ ಆಧೇಯಭೂತಕರ್ಮಾದಿ ಸ್ವರೂಪಂ ವೇದೇನ ಪ್ರತಿಪಾದ್ಯತ ಇತಿ ಕಾಶಕೃತ್ಸ್ನಃ ಆಚಾರ್ಯೋ ಮನ್ಯತೇ='ಭಗವಂತನು ಕರ್ಮಗಳಿಗೂ ಆಧಾರನಾಗಿದ್ದಾನೆ' ಎಂಬ ಜ್ಞಾನಕ್ಕಾಗಿ ಆಧೇಯವಾದ ಕರ್ಮಾದಿಗಳ ಸ್ವರೂಪವನ್ನು ವೇದವು ತಿಳಿಸುತ್ತದೆ ಎಂಬುದಾಗಿ ಕಾಶಕೃತ್ಸ್ನ ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಸೂ.ರ.:– एवं चैष सेतुर्विधारणः (बृ.६-४-२२) इत्यादौ परमात्मन्यवस्थित्युक्तेः । तस्याश्च सर्वाधारत्वेन ज्ञातव्यमिति ज्ञानार्थत्वात् । अस्य चाधेयज्ञानं विनाऽयोगात्तदर्थं वेदेन कर्मादिकमुच्यत इति साक्षादेव कथं ब्रह्म ज्ञातव्यमिति ज्ञान्यपेक्षितस्वेतरसर्वाधारत्वरूपप्रकारसमर्पकत्वेन वेदानां कर्मादिजगद्वाचित्वमन्यार्थं परमात्मज्ञानार्थमिति काशकृत्स्नाचार्यो मन्यते । तथा च भगवज्ज्ञानार्थं वैदिकशब्दानामन्यत्र समाकर्षेण व्यवहारोपपत्तेर्युक्तं हरेः सकलशब्दपरममुख्यार्थत्वमिति सिद्धम् ॥**

**ಅನು.:–** ಮೋಕ್ಷಕ್ಕಾಗಿ ಜ್ಞಾನವು ಸರ್ವಥಾ ಅಪೇಕ್ಷಿತವಾಗಿದೆ. ಆ ಜ್ಞಾನವಾದರೂ ಕರ್ಮಾದಿಗಳನ್ನು ಆಚರಿಸುವುದರಿಂದ ಅಂತಃಕರಣಶುದ್ಧಿ ಮೂಲಕವಾಗಿ ಆಗುತ್ತದೆ ಎಂಬುದಾಗಿ ಸಿದ್ಧವಾದ ಮೇಲೆ, ಭಗವಂತನು ಹೇಗೆ ತಿಳಿಯಲ್ಪಡಬೇಕು? (ಹೇಗೆ ಭಗವಂತನ ಜ್ಞಾನ ಮಾಡಿಕೊಳ್ಳಬೇಕು) ಎಂದು ಆಕಾಂಕ್ಷೆ ಬಂದಾಗ .... ಎಲ್ಲ ಕರ್ಮಾದಿಗಳೂ ಆ ಭಗವಂತನಲ್ಲಿ ಆಧೇಯವಾಗಿ ಇವೆ. ಅಂತಹ ಪರಮಾತ್ಮನು ಸರ್ವಾಧಾರತ್ವೇನ ಜ್ಞಾತವ್ಯನಾಗಿದ್ದಾನೆ (ಸರ್ವಾಧಾರತ್ವೇನ ಪರಮಾತ್ಮನ ಜ್ಞಾನ ಮಾಡಿಕೊಳ್ಳಬೇಕು) ಎಂಬುದನ್ನು ಏಷ ಸೇತುರ್ವಿಧಾರಣಃ ಇತ್ಯಾದಿಗಳಲ್ಲಿ ಹೇಳುವುದಕ್ಕಾಗಿ, ಸರ್ವಾಧಾರತ್ವೇನ ಪರಮಾತ್ಮನ ಜ್ಞಾನವಾದರೋ ಆಧೇಯವಾದ ಕರ್ಮಾದಿಗಳ ಜ್ಞಾನವಿಲ್ಲದೇ ಆಗಲು ಸಾಧ್ಯವಿಲ್ಲವಾದ್ದರಿಂದ ಅಂತಹ ಆಧೇಯವಾದ ಕರ್ಮಾದಿಸ್ವರೂಪವನ್ನು ವೇದವು ಹೇಳುತ್ತದೆ ಎಂಬುದಾಗಿ ಕಾಶಕೃತ್ಸ್ನಾಚಾರ್ಯರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಭಗವಂತನ ಜ್ಞಾನಕ್ಕಾಗಿಯೇ ವೈದಿಕಶಬ್ದಗಳಿಗೆ ಅನ್ಯತ್ರ ಸಮಾಕರ್ಷ ಮಾಡಿಕೊಂಡು ವ್ಯವಹಾರವು ಉಪಪನ್ನವಾಗುವುದರಿಂದ ಓಂ ತತ್ತು ಸಮನ್ವಯಾತ್ ಓಂ ಎಂಬ ಸಮನ್ವಯಸೂತ್ರದಲ್ಲಿ ಭಗವಂತನಿಗೆ ಸಕಲಶಬ್ದಗಳ ಪರಮ ಮುಖ್ಯಾರ್ಥತ್ವವನ್ನು ಹೇಳಿದ್ದು ಅತ್ಯಂತ ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸಮಾಕರ್ಷಾಧಿಕರಣವು ಮುಗಿಯಿತು

ಅಧಿಕರಣ – 6

# ಪ್ರಕೃತ್ಯಧಿಕರಣ

## ಸಂಗತಿ

**ಸೂ.ರ.:– अत्र स्त्रीशब्दानां ब्रह्मणि समन्वयः क्रियते ।**

**ಅನು.:–** ಸ್ತ್ರೀಲಿಂಗತ್ವ ಲಿಂಗದಿಂದಾಗಿ ಅನ್ಯತ್ರೈವ ಪ್ರಸಿದ್ಧವಾದ ಸ್ತ್ರೀಶಬ್ದಗಳನ್ನು (ಸ್ತ್ರೀಲಿಂಗ ಶಬ್ದಗಳನ್ನು) ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ ಆರನೇ ಈ ಪ್ರಕೃತ್ಯಧಿಕರಣದಲ್ಲಿ.

ಓಂ ತತ್ತು ಸಮನ್ವಯಾತ್ ಓಂ ಎಂಬ ಸಮನ್ವಯಸೂತ್ರದಲ್ಲಿ ಭಗವಂತನಿಗೆ ಸಕಲಶಬ್ದವಾಚ್ಯತ್ವವನ್ನು ಹೇಳಿದೆ. ಆ ಸಕಲಶಬ್ದಗಳಲ್ಲಿ ಸೇರಿದ ಪ್ರಕೃತ್ಯಾದಿಶಬ್ದಗಳು "ಏಷಾ ಹ್ಯೇವ ಪ್ರಕೃತಿರವಿಕೃತಿರ್ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ" ಇತ್ಯಾದಿಯಾಗಿ ಶ್ರುತವಾಗುತ್ತಿವೆ. ಈ ಪ್ರಕೃತ್ಯಾದಿಶಬ್ದಗಳು ವಿಷ್ಣುವಾಚಕವಲ್ಲ ಎಂದಾದರೆ ಪರಮಾತ್ಮನಿಗೆ ಸಕಲಶಬ್ದವಾಚ್ಯತ್ವವು ಭಗ್ನವಾಗುತ್ತದೆ. ಆದ್ದರಿಂದ ಪರಮಾತ್ಮನಿಗೆ ಸಕಲಶಬ್ದವಾಚ್ಯತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಪ್ರಕೃತ್ಯಾದಿಶಬ್ದಗಳನ್ನೂ ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾರೆ ಈ ಅಧಿಕರಣದಲ್ಲಿ ಎಂದು ಭಾವ.

## ಪೂರ್ವಪಕ್ಷ

**ಸೂ.ರ.:– ननु न प्रकृत्यादिशब्दवाच्यो हरिः । स्त्रीलिङ्गशब्द-वाच्यताव्यापकस्त्रीत्वाभावात् । नैनमिति स्त्रीत्वनिषेधात् ।**

**ಅನು.:–** ಏಷಾ ಹ್ಯೇವ ಪ್ರಕೃತಿರವಿಕೃತಿರ್ಯಾ ... ಇತ್ಯಾದಿಯಾಗಿ ಶ್ರುತವಾಗುತ್ತಿರುವ ಪ್ರಕೃತ್ಯಾದಿಶಬ್ದಗಳಿಂದ ಹರಿಯು ವಾಚ್ಯನಾಗುವುದಿಲ್ಲ. ಏಕೆಂದರೆ – ಪ್ರಕೃತ್ಯಾದಿಶಬ್ದಗಳು ಸ್ತ್ರೀಲಿಂಗಶಬ್ದಗಳಾಗಿವೆ. ಆ ಸ್ತ್ರೀಲಿಂಗಶಬ್ದಗಳಿಂದ ಹರಿಯು ವಾಚ್ಯನಾಗಬೇಕಾದರೆ ಅವನಲ್ಲಿ ಸ್ತ್ರೀತ್ವವು ಇರಬೇಕು. ಆದರೆ ಹರಿಯಲ್ಲಿ ಪುರುಷತ್ವವು ಇದೆಯೇ ಹೊರತು ಸ್ತ್ರೀತ್ವವು ಇಲ್ಲ. ಆದ್ದರಿಂದ ವ್ಯಾಪಕವಾದ ಸ್ತ್ರೀತ್ವವು ಇಲ್ಲವಾದ್ದರಿಂದ ವ್ಯಾಪ್ಯವಾದ ಸ್ತ್ರೀಶಬ್ದವಾಚ್ಯತ್ವವೂ ಇಲ್ಲ ಎಂದು ಅರ್ಥ.

ಅಲ್ಲದೇ "ನೈನಂ ವಾಚಾ ಸ್ತ್ರಿಯಂ ಬ್ರುವನ್" ಇತ್ಯಾದಿಯಾಗಿ ಹರಿಗೆ ಸ್ತ್ರೀತ್ವವನ್ನು

ನಿಷೇಧಿಸಿಯೂ ಇದ್ದಾರೆ. ಆದ್ದರಿಂದಲೂ ಹರಿಯು ಪ್ರಕೃತ್ಯಾದಿಶಬ್ದವಾಚ್ಯನಾಗಲು ಸಾಧ್ಯವಿಲ್ಲ.

**ಸೂ.ರ.:– न च नपुंसकशब्दवृत्तिवत्स्त्रीशब्दवृत्तिः किं न स्यादिति वाच्यम् । तत्कल्पनाऽयोगात् ।**

**ಅನು.:–** ಬ್ರಹ್ಮಶಬ್ದವೇ ಮೊದಲಾದ ನಪುಂಸಕಶಬ್ದಗಳು ಹೇಗೆ ಪರಮಾತ್ಮನಲ್ಲಿ ಪ್ರವೃತ್ತವಾಗಿವೆಯೋ ಅದರಂತೆ ಸ್ತ್ರೀಲಿಂಗಶಬ್ದಗಳೂ ಪರಮಾತ್ಮನಲ್ಲಿ ಪ್ರವೃತ್ತವಾಗುತ್ತವೆ ಎಂದು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ.

ಏಕೆಂದರೆ - ಗುಣಪೂರ್ಣತ್ವ ಮೊದಲಾದ ನಿಯಾಮಕಗಳು ಇರುವ ಕಾರಣ ಹರಿಯಲ್ಲಿ ನಪುಂಸಕಶಬ್ದಪ್ರವೃತ್ತಿಯನ್ನು ಒಪ್ಪಬಹುದಾಗಿದೆ. ಆದರೆ ಆ ರೀತಿಯಾಗಿ ಸ್ತ್ರೀಲಿಂಗಶಬ್ದಗಳ ಪ್ರವೃತ್ತಿಯನ್ನು ಒಪ್ಪಲು ಏನಾದರೂ ನಿಯಾಮಕವಿಶೇಷ ಇರುತ್ತಿದ್ದರೆ ಒಪ್ಪಬಹುದಾಗಿತ್ತು. ಅಂತಹ ನಿಯಾಮಕವಿಶೇಷ ಯಾವುದೂ ಇಲ್ಲವಾದ್ದರಿಂದ ಹರಿಯಲ್ಲಿ ಸ್ತ್ರೀಲಿಂಗಶಬ್ದಪ್ರವೃತ್ತಿಯನ್ನು ಒಪ್ಪಲು ಬರುವುದಿಲ್ಲ.

**ಸೂ.ರ.:– अथ अस्त्रीभूतस्यापि स्त्रीनियामकत्वात्तच्छब्दवाच्यतेति चेन्न । वशीकृतभार्ये भर्तरि तच्छब्दवाच्यत्वप्रसङ्गात् । अतः प्रकृत्यादिशब्दानां परमात्मवाचित्वाभावेन समन्वयसूत्रमनुपपन्नमिति प्राप्ते सूत्रमाह ॥**

**ಅನು.:–** ಪರಮಾತ್ಮನಲ್ಲಿ ಸ್ತ್ರೀತ್ವವು ಇಲ್ಲದಿದ್ದರೂ ಸಹ ಸ್ತ್ರೀನಿಯಾಮಕತ್ವ ಇರುವುದರಿಂದ ಸ್ತ್ರೀಶಬ್ದವಾಚ್ಯನಾಗಬಹುದಲ್ಲವೇ? ಎಂದರೆ, ಅದು ಸರಿಯಲ್ಲ. ಸ್ತ್ರೀನಿಯಾಮಕತ್ವ ಇರುವ ಕಾರಣದಿಂದ ಸ್ತ್ರೀಶಬ್ದಪ್ರವೃತ್ತಿ ಆಗುವುದಾದರೆ, ಹೆಂಡತಿಯನ್ನು (ಸ್ತ್ರೀಯನ್ನು) ವಶಮಾಡಿಕೊಂಡ ಗಂಡನಲ್ಲಿಯೂ ಸ್ತ್ರೀನಿಯಾಮಕತ್ವವು ಇರುವುದರಿಂದ ಅವನಲ್ಲಿಯೂ ಸ್ತ್ರೀಶಬ್ದಪ್ರವೃತ್ತಿ ಆಗಬೇಕಿತ್ತು. ಆದರೆ ಅಂತಹ ಸ್ತ್ರೀನಿಯಾಮಕನಾದ ಗಂಡನಲ್ಲಿ ಸ್ತ್ರೀಶಬ್ದಪ್ರವೃತ್ತಿ ಕಂಡಿಲ್ಲವಾದ್ದರಿಂದ ಹಾಗೆ ಹೇಳಲು ಬರುವುದಿಲ್ಲ.

ಆದ್ದರಿಂದ ಉಳಿದ ಶಬ್ದಗಳಿಂದ ಪರಮಾತ್ಮನು ವಾಚ್ಯನಾದರೂ ಸಹ ಪ್ರಕೃತ್ಯಾದಿಶಬ್ದಗಳಿಂದ ವಾಚ್ಯನಾಗಲು ಸಾಧ್ಯವಿಲ್ಲವಾದ್ದರಿಂದ ಸಮನ್ವಯಸೂತ್ರದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಹೇಳಿದ್ದು ಸರಿಯಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳಲು ಸೂತ್ರವನ್ನು ಹೇಳುತ್ತಾರೆ :–

## ॐ प्रकृतिश्च प्रतिज्ञादृष्टान्तानुपरोधात् ॐ (१.४.२४)

**ಸೂತ್ರಾರ್ಥ** :– ಈಶ್ವರಃ ನ ಕೇವಲಂ ಪುಲ್ಲಿಂಗಾಭಿಧೇಯಃ = ಪರಮಾತ್ಮನು ಕೇವಲ ಪುಲ್ಲಿಂಗಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದಷ್ಟೇ ಅಲ್ಲ, ಕಿಂತು ಪ್ರಕೃತಿಃ ಚ = ಏಷಾ ಹ್ಯೇವ ಪ್ರಕೃತಿಃ ಇತ್ಯಾದಿಯಾಗಿ ಶ್ರುತವಾಗುತ್ತಿರುವ ಪ್ರಕೃತ್ಯಾದಿ ಸ್ತ್ರೀಲಿಂಗಶಬ್ದಗಳಿಂದಲೂ ವಾಚ್ಯನೇ ಆಗಿದ್ದಾನೆ.

ಕುತಃ = ಯಾಕೆ? ಏವಂ ಸತ್ಯೇವ = ಈ ರೀತಿಯಾಗಿ ಸ್ತ್ರೀಶಬ್ದವಾಚ್ಯತ್ವವನ್ನು ಅಂಗೀಕರಿಸಿದರೆ ಮಾತ್ರ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ = ಹಂತೈತಮೇವ ಪುರುಷಂ ಎಂಬ ಪ್ರತಿಜ್ಞೆಯ ವಿರೋಧ ಬರುವುದಿಲ್ಲ, ಮತ್ತು ಯಥಾ ನದ್ಯಸ್ಸ್ಯಂದಮಾನಾಃ ಎಂಬುದಾಗಿ ನದೀಸಮುದ್ರ ದೃಷ್ಟಾಂತದ ವಿರೋಧವೂ ಬರುವುದಿಲ್ಲ. ಅನ್ಯಥಾ = ಒಂದುವೇಳೆ ಪರಮಾತ್ಮನಿಗೆ ಸ್ತ್ರೀಶಬ್ದವಾಚ್ಯತ್ವವನ್ನು ಒಪ್ಪದಿದ್ದರೆ ಆ ಪ್ರತಿಜ್ಞಾ-ದೃಷ್ಟಾಂತಗಳ ವಿರೋಧ ಬರುತ್ತದೆ ಎಂದು ಅರ್ಥ.

### ಸಿದ್ಧಾಂತ

**ಸೂ.ರ.:– एवं च हरिरेव प्रकृत्यादिशब्दवाच्यः । हन्तैतमेव पुरुषमिति श्रुतौ विष्णौ सर्वशब्दवाच्यत्वं प्रतिज्ञाय तत्रैव नदीसमुद्रदृष्टान्ताभिधानात् । अन्यथा प्रतिज्ञादृष्टान्तोपरोधः स्यात् । अतः प्रकृत्यादिशब्दवाच्यो हरिरेवेति सिद्धम् ॥**

**ಅನು.**:– ಏಷಾ ಹ್ಯೇವ ಪ್ರಕೃತಿಃ ... ಎಂದು ಶ್ರುತವಾಗುತ್ತಿರುವ ಪ್ರಕೃತ್ಯಾದಿಶಬ್ದಗಳಿಂದ ಹರಿಯೇ ವಾಚ್ಯನಾಗುತ್ತಾನೆ. ಏಕೆಂದರೆ :- "ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ ಯಥಾ ನದ್ಯಸ್ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತ್ಯೇವಮೇವೈತಾನಿ ನಾಮಾನಿ ಸರ್ವಾಣಿ ಪುರುಷಮಭಿವಿಶಂತಿ" ಎಂಬ ಶ್ರುತಿಯಲ್ಲಿ ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವನ್ನು ಪ್ರತಿಜ್ಞೆ ಮಾಡಿ, ಅದೇ ವಿಷಯದಲ್ಲಿಯೇ ನದೀ-ಸಮುದ್ರ ದೃಷ್ಟಾಂತಗಳನ್ನು ಹೇಳಿದ್ದರಿಂದ, ಪರಮಾತ್ಮನಿಗೆ ಸಕಲಶಬ್ದವಾಚ್ಯತ್ವವನ್ನು ಅಂಗೀಕರಿಸಲೇಬೇಕು. ಒಂದುವೇಳೆ ಪರಮಾತ್ಮನಿಗೆ ಸ್ತ್ರೀಶಬ್ದವಾಚ್ಯತ್ವವನ್ನು ಅಂಗೀಕರಿಸದೇ ಹೋದರೆ ಆ ಪ್ರತಿಜ್ಞಾ-ದೃಷ್ಟಾಂತಗಳ ವಿರೋಧ ಬರಬೇಕಾಗುತ್ತದೆ.

ಆದ್ದರಿಂದ ಪ್ರಕೃತ್ಯಾದಿಶಬ್ದಗಳಿಂದ ಪರಮಾತ್ಮನು ವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ - 25

**ಸೂ.ರ.:– एवं सामान्यप्रमाणेन प्रकृत्यादिशब्दवाच्यतां हरेः प्रतिपाद्येदानीमशेषस्त्रीशब्दोपलक्षकप्रकृतिशब्दवाच्यत्व एव विशिष्य प्रमाणं प्रतिपादयत्सूत्रं पठति ॥**

**ಅನು.:–** ಈ ರೀತಿಯಾಗಿ ಸಾಮಾನ್ಯಪ್ರಮಾಣದಿಂದ ಪರಮಾತ್ಮನಿಗೆ ಪ್ರಕೃತ್ಯಾದಿಶಬ್ದವಾಚ್ಯತ್ವ- ವನ್ನು ಪ್ರತಿಪಾದಿಸಿ, ಈಗ ಎಲ್ಲ ಸ್ತ್ರೀಶಬ್ದಗಳಿಗೂ ಉಪಲಕ್ಷಕವಾದ ಪ್ರಕೃತಿಶಬ್ದವಾಚ್ಯತ್ವದ ವಿಷಯದಲ್ಲಿಯೇ ವಿಶೇಷ ಪ್ರಮಾಣವನ್ನು ಹೇಳುವ ಸೂತ್ರವನ್ನು ಹೇಳುತ್ತಾರೆ–

**ॐ अभिध्योपदेशाच्च ॐ (१.४.२५)**

ಅಭಿಧ್ಯಾಯಾಃ = ಈಶ್ವರೇಚ್ಛೆಗೆ ಉಪದೇಶಾಚ್ಚ = ಮಾಯಾಂ ತು ಪ್ರಕೃತಿಂ ವಿದ್ಯಾತ್ ಎಂಬ (ಶ್ವೇ. 4-10) ಶ್ರುತಿಯಲ್ಲಿ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಿದ್ದರಿಂದಲೂ ಸಹ, ಇಚ್ಛಾದಿಂದ ಅಭಿನ್ನನಾದ ಈಶ್ವರನಿಗೂ ಸಹ ಪ್ರಕೃತಿಶಬ್ದವಾಚ್ಯತ್ವ ಇರುವುದರಿಂದ.

**ಸೂ.ರ.:– एवं च भगवदभिन्नेच्छाया मायान्तु प्रकृतिमिति श्रुतौ प्रकृतिर्वासनेत्येवमिति स्मृतौ च प्रकृतिशब्दवाच्यत्वाभिधानात् । सोऽभिध्या स इति स्मृतेश्च । अतो न केवलं पूर्वोक्तसामान्यहेतोः किं तु प्रकृतिशब्द- वाच्येच्छात्मकत्वोक्तेश्च प्रकृतिर्ब्रह्मैवेति सिद्धम् ।**

**ಅನು.:–** "ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್" (ಶ್ವೇ.ಉ.4-10) ಎಂಬ ಶ್ರುತಿಯಲ್ಲಿ ಹಾಗೂ

**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾಽನಂತ ಕಥ್ಯತೇ ॥**

ಎಂಬ ಸ್ಮೃತಿಯಲ್ಲಿಯೂ ಸಹ ಭಗವಂತನ ಇಚ್ಛೆಗೆ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಿದ್ದಾರೆ. "ಸೋಽಭಿಧ್ಯಾ ಸ ಜ್ಯೋತಿಃ ಸ ಪ್ರಜ್ಞಾ ಸ ಆನಂದಃ" ಎಂಬುದಾಗಿ ಇಚ್ಛೆಯು ಭಗವತ್ಸ್ವರೂಪವೆಂದೇ ಹೇಳಲಾಗಿದೆ. ಆದ್ದರಿಂದ ಇಚ್ಛೆಗೆ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳುವ ಮೂಲಕ ಭಗವಂತನಿಗೂ ಪ್ರಕೃತಿಶಬ್ದವಾಚ್ಯತ್ವವನ್ನು ಶ್ರುತಿ-ಸ್ಮೃತಿಗಳಲ್ಲಿ ಪ್ರತಿಪಾದಿಸಲಾಗಿದೆ.

ಆದ್ದರಿಂದ ಹಿಂದೆ ಹೇಳಿದ ಸಾಮಾನ್ಯ ಪ್ರಮಾಣದಿಂದಷ್ಟೇ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವ ಸಿದ್ಧಿಸುತ್ತದೆ ಎಂದಲ್ಲ, ಕಿಂತು ಪ್ರಕೃತಿಶಬ್ದವಾಚ್ಯವಾದ ಇಚ್ಛೆಯ ಸ್ವರೂಪತ್ವವನ್ನು ಹೇಳಿದ್ದರಿಂದಲೂ ಸಹ ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 26

## ಆಕ್ಷೇಪ

**ಸೂ.ರ.:– नन्वथाऽपि विष्णोरिच्छाद्वारा प्रकृतिशब्दवाच्यत्वेऽपि न साक्षात्तच्छब्दवाच्यत्वम् । प्रमाणाभावात् । नामानीति श्रुतेः सङ्कोचसम्भवादिति प्राप्ते सूत्रमाह ॥**

**ಅನು.:–** ಆದರೂ ವಿಷ್ಣುವಿಗೆ ಇಚ್ಛಾದ್ವಾರಾ ಪ್ರಕೃತಿಶಬ್ದ ವಾಚ್ಯತ್ವ ಇದ್ದರೂ ಸಹ ಸಾಕ್ಷಾತ್ತಾಗಿ (ಇಚ್ಛಾಮೂಲಕವಾಗಿ ಅಲ್ಲದೇ) ಪ್ರಕೃತಿಶಬ್ದವಾಚ್ಯತ್ವ ಇಲ್ಲ. ಏಕೆಂದರೆ ವಿಷ್ಣುವು ಸಾಕ್ಷಾತ್ತಾಗಿಯೇ ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂದು ಹೇಳುವ ಪ್ರಮಾಣ ಯಾವುದೂ ಇಲ್ಲವಾದ್ದರಿಂದ.

ನಾಮಾನಿ ಸರ್ವಾಣಿ ... ಎಂಬ ಶ್ರುತಿಯು ಸರ್ವಶಬ್ದವಾಚ್ಯತ್ವವನ್ನು ಹೇಳುತ್ತಿದೆ-ಯಾದ್ದರಿಂದ ಪ್ರಕೃತಿಶಬ್ದವಾಚ್ಯತ್ವದ ವಿಷಯದಲ್ಲಿಯೂ ಅದೇ ಪ್ರಮಾಣ-ವಾಗುತ್ತದೆಯಲ್ಲವೇ? ಎಂದರೆ, ನಾಮಾನಿ ಸರ್ವಾಣಿ ಎಂಬ ಶ್ರುತಿಗೆ ಸ್ತ್ರೀಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳಿಂದ ವಾಚ್ಯತ್ವವನ್ನು ಹೇಳುತ್ತಿದೆ ಎಂಬುದಾಗಿ ಸಂಕೋಚ ಮಾಡಬಹು-ದಾದ್ದರಿಂದ ಈ ಶ್ರುತಿಯು ಪ್ರಕೃತಿಶಬ್ದವಾಚ್ಯತ್ವದ ವಿಷಯದಲ್ಲಿ ನಿರವಕಾಶಪ್ರಮಾಣ-ವಾಗುವುದಿಲ್ಲ. ಆದ್ದರಿಂದ ವಿಶೇಷಪ್ರಮಾಣ ಯಾವುದೂ ಇಲ್ಲದ ಕಾರಣ ವಿಷ್ಣುವಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಒಪ್ಪುವುದು ಸರಿಯಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ –

## ॐ साक्षाच्चोभयाम्नानात् ॐ (१.४.२६)

**ಸೂತ್ರಾರ್ಥ :–** ಸಾಕ್ಷಾತ್ ಚ(ಏವ) = ಇಚ್ಛಾದ್ವಾರ ಇಲ್ಲದೇನೇ (ಸಾಕ್ಷಾತ್ತಾಗಿಯೇ) ಉಭಯಾಮ್ನಾನಾತ್ = ಏಷ ಸ್ತ್ರೀಷ ಪುರುಷಃ ಎಂಬ (ಪೈಂಗಿಶ್ರುತಿ) ವಾಕ್ಯದಿಂದ ಪ್ರಕೃತಿ-ಪುರುಷ ಉಭಯಶಬ್ದವಾಚ್ಯತ್ವವನ್ನು ಹೇಳಿದ್ದರಿಂದ, ಈಶ್ವರನಿಗೆ ಪ್ರಕೃತ್ಯಾದಿ-ಶಬ್ದವಾಚ್ಯತ್ವವನ್ನು ಅವಶ್ಯವಾಗಿ ಅಂಗೀಕರಿಸಬೇಕಿದೆ.

## ಸಮಾಧಾನ

**ಸೂ.ರ.:– एवं च निर्दिष्टश्रुतौ भगवतः प्रकृतिपुरुषत्वाभिधाने-नैतच्छ्रुत्यैवार्थादिच्छाद्वारमन्तरापि प्रकृतिशब्दवाच्यत्वलाभात् । अन्यथा पुरुषशब्दवाच्यत्वमपि न स्यादविशेषात् । ततश्च प्रकृत्यादिशब्दवाच्यो विष्णुरेवेति सिद्धम् ॥**

**ಅನು.:–** ವಿಷ್ಣುವಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳುವ ವಿಶೇಷಪ್ರಮಾಣ ಯಾವುದೂ ಇಲ್ಲ ಎಂಬ ಆಕ್ಷೇಪ ಸರಿಯಲ್ಲ.

"ಏಷ ಸ್ತ್ರ್ಯೇಷ ಪುರುಷ ಏಷ ಪ್ರಕೃತಿರೇಷ ಆತ್ಮೈಷ ಬ್ರಹ್ಮೈಷ ಲೋಕ ಏಷ ಆಲೋಕೋ ಯೋಽಸೌ ಹರಿರಾದಿರನಂತೋಽಂತಃ ಪರಮಃ ಪರಾದ್ವಿಶ್ವರೂಪಃ" ಎಂಬುದಾಗಿ ಪೈಂಗಿಶ್ರುತಿಯಲ್ಲಿ ಭಗವಂತನಿಗೆ ಪ್ರಕೃತಿಶಬ್ದವಾಚ್ಯತ್ವ-ಪುರುಷ ಶಬ್ದವಾಚ್ಯತ್ವವನ್ನು ಹೇಳಿದ್ದರಿಂದ, ಈ ಶ್ರುತಿಯಿಂದಲೇ ಭಗವಂತನಿಗೆ ಸಾಕ್ಷಾತ್ ಪ್ರಕೃತಿಶಬ್ದವಾಚ್ಯತ್ವವು ಸಿದ್ಧಿಸುತ್ತದೆ.

ಈ ಶ್ರುತಿಯಿಂದ ಪ್ರಕೃತಿಶಬ್ದವಾಚ್ಯತ್ವವನ್ನು ಅಂಗೀಕರಿಸದೇ ಹೋದರೆ ಪುರುಷಶಬ್ದವಾಚ್ಯತ್ವವನ್ನೂ ಅಂಗೀಕರಿಸದೇ ಹೋಗಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಈ ವಿಧವಾದ ಪ್ರಕೃತಿಶಬ್ದವಾಚ್ಯತ್ವವನ್ನು ನೇರವಾಗಿಯೇ ತಿಳಿಸುವ ವಿಶೇಷಪ್ರಮಾಣ (ಪೈಂಗಿಶ್ರುತಿ) ಇರುವುದರಿಂದ ಭಗವಂತನಿಗೆ ಸಾಕ್ಷಾತ್ತಾಗಿಯೇ (ಇಚ್ಛಾಮೂಲಕವಾಗಿ ಅಲ್ಲದೇ) ಪ್ರಕೃತಿಶಬ್ದವಾಚ್ಯತ್ವವು ಸಿದ್ಧವಾಗುತ್ತದೆ.

## ಸೂತ್ರ – 27

## ಆಕ್ಷೇಪ

**ಸೂ.ರ.:– ननु यद्यपि भगवतः प्रकृतिशब्दवाच्यत्वं श्रुत्योक्तम् । तथाऽपि न तद्युक्तम् । तत्र तस्य प्रवृत्तौ निमित्ताभावात् । सिद्धान्तिभिः सङ्केतमात्रत्वस्यानभ्युपगतत्वादिति प्राप्ते परिहरत्सूत्रमाह ॥**

**ಅನು.:–** ಯದ್ಯಪಿ ಭಗವಂತನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಶ್ರುತಿಯೇ ಹೇಳಿದೆ. ಆದರೂ ಅದು ಯುಕ್ತವಾಗುವುದಿಲ್ಲ. ಏಕೆಂದರೆ – ಪ್ರಕೃತಿಶಬ್ದವು ಭಗವಂತನಲ್ಲಿ ಪ್ರವೃತ್ತವಾಗುವುದಕ್ಕೆ ಯಾವ ನಿಮಿತ್ತವೂ ಇಲ್ಲವಾದ್ದರಿಂದ.

ಭಗವಂತನನ್ನು ಪ್ರಕೃತಿಶಬ್ದದಿಂದ ಏಕೆ ಕರೆಯುತ್ತಾರೆ? ಎಂದರೆ ಅದು ಸಂಕೇತ ಅಷ್ಟೇ. ಅರ್ಥಾತ್ ಸಂಕೇತಮಾತ್ರತ್ವವೇ ಅದಕ್ಕೆ ನಿಮಿತ್ತವಾಗಿದೆ ಎಂದು ಶಂಕಿಸುವುದು ಸರಿಯಲ್ಲ. ಕಾರಣ - ಸಿದ್ಧಾಂತಿಗಳಾದ ನೀವು ಭಗವಂತನ ವಿಷಯದಲ್ಲಿ ಯಾವ ಶಬ್ದಕ್ಕೂ ಸಂಕೇತ-ಮಾತ್ರತ್ವವನ್ನು ಅಂಗೀಕಾರ ಮಾಡಿಲ್ಲ. ಆದ್ದರಿಂದ ಯಾವ ನಿಮಿತ್ತವೂ ಇಲ್ಲದ ಕಾರಣ ಭಗವಂತನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಒಪ್ಪಲು ಬರುವುದಿಲ್ಲ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ–

**ॐ आत्मकृतेः परिणामात् ॐ (१.४.२७)**

**ಸೂತ್ರಾರ್ಥ :–** ಪರಿಣಾಮಾತ್ = ಪ್ರಕೃತಿಪರಿಣಾಮಂ ವಿಧಾಯ ಪ್ರಕೃತಿ-ಪರಿಣಾಮವನ್ನು ಹೇಳಿ ಆತ್ಮಕೃತೇಃ = ತತ್ಪ್ರೇರಣಾಯ ಸ್ವಸ್ಯ ಬಹುಧಾಕರಣಾತ್ ಆ ಪ್ರಕೃತಿಪರಿಣಾಮಗಳಾದ ಮಹದಾದಿಗಳನ್ನು ನಿಯಮನ ಮಾಡುವುದಕ್ಕಾಗಿ ತಾನು ಅನೇಕ ರೂಪಗಳನ್ನು ತೆಗೆದುಕೊಳ್ಳುವುದರಿಂದ ವಿಷ್ಣುವೇ ಪ್ರಕೃತಿಶಬ್ದವಾಚ್ಯನಾಗುತ್ತಾನೆ.

## ಸಮಾಧಾನ

**ಸೂ.ರ.:–** **एवं च प्रकृष्टा कृतिरिति योगसम्भवेन निमित्ताभावा-सिद्धेः । प्रकृतेः स्वतः परिणामसामर्थ्याभावात्तत्र स्थित्वा तां परिणम्य महदादि नियामकत्वेनात्मनो बहुधाकरणात् । अथ हैष आत्मेति (भाल्लवेय) श्रुतेः । अविकारोऽपि परम इति (नारदीय) स्मृतेश्च । ततः प्रकृत्यादिशब्दवाच्यो विष्णुरेवेति सिद्धम् ॥**

**ಅನು.:–** ಭಗವಂತನಲ್ಲಿ ಪ್ರಕೃತಿಶಬ್ದವು ಪ್ರವೃತ್ತವಾಗುವುದಕ್ಕೆ ನಿಮಿತ್ತ ಇಲ್ಲ ಎನ್ನುವುದು ಸರಿಯಲ್ಲ. ''ಪ್ರಕೃಷ್ಟಾ ಕೃತಿಃ ಯಸ್ಯ ಸಃ ಪ್ರಕೃತಿಃ'' ಎಂಬುದಾಗಿ ಯೋಗವೇ ಸಂಭಾವಿತವಾಗಿದೆ. ಅರ್ಥಾತ್ ಪ್ರಕೃಷ್ಟವಾದ ಕೃತಿ ಉಳ್ಳವನಾದ್ದರಿಂದಲೇ ಭಗವಂತನು ಪ್ರಕೃತಿಶಬ್ದದಿಂದ ವಾಚ್ಯನಾಗಿದ್ದಾನೆ.

ಭಗವಂತನ ಆ ಪ್ರಕೃಷ್ಟವಾದ ಕೃತಿ ಏನು? ಎಂದರೆ - ''ಅಥ ಹೈಷ ಆತ್ಮಾ ಪ್ರಕೃತಿಮನುಪ್ರವಿಶ್ಯಾಽತ್ಮಾನಂ ಬಹುಧಾ ಚಕಾರ । ತಸ್ಮಾತ್ಪ್ರಕೃತಿಸ್ತಸ್ಮಾತ್ಪ್ರಕೃತಿರಿತ್ಯಾಚಕ್ಷತೆ'' ಎಂಬುದಾಗಿ ಭಾಲ್ಲವೇಯಶ್ರುತಿ ಹೇಳುವಂತೆ ಮತ್ತು

**ಅವಿಕಾರೋಽಪಿ ಪರಮಃ ಪ್ರಕೃತಿಂ ತು ವಿಕಾರಿಣೀಮ್ ।**
**ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತೇ ॥**

ಎಂಬುದಾಗಿ ಸ್ಮೃತಿಯೂ (ನಾರದೀಯ ಪುರಾಣವೂ) ಹೇಳುವಂತೆ, ಪ್ರಕೃತಿಗೆ ಸ್ವತಃ ಪರಿಣಾಮವಾಗುವ ಸಾಮರ್ಥ್ಯ ಇಲ್ಲದ ಕಾರಣ ಆ ಪ್ರಕೃತಿಯಲ್ಲಿ ನಿಂತು ಪ್ರಕೃತಿಯನ್ನು ಮಹದಾದಿರೂಪದಿಂದ ಪರಿಣಾಮಗೊಳಿಸಿ, ಪ್ರಕೃತಿಪರಿಣಾಮಾನಂತರದಲ್ಲಿ ಆ ಮಹದಾದಿಗಳ ಪ್ರೇರಣೆಗಾಗಿ (ನಿಯಮನಕ್ಕಾಗಿ) ತಾನು ಅನೇಕರೂಪಗಳನ್ನು ತಾಳುತ್ತಾನೆ ಭಗವಂತ.

ಹೀಗೆ ಪ್ರಕೃಷ್ಟವಾದ ಕೃತಿ ಉಳ್ಳವನಾದ್ದರಿಂದ (ಪ್ರಕೃಷ್ಟ ಕೃತಿಮತ್ತ್ವ ಎಂಬ ನಿಮಿತ್ತ ಇರುವುದರಿಂದ) ವಿಷ್ಣುವೇ ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 28

## ಆಕ್ಷೇಪ

**ಸೂ.ರ.:– ननु परमात्मनः स्त्रीत्वेऽपि प्रकृतिशब्दवाच्यत्वाभिधायकप्रमाणसद्भावेऽपि स्त्रीशब्दवाच्यत्वं न युक्तम् । तस्याव्यवधानेन सूतिकर्तृत्ववाचित्वनियमात् । न च परमात्मनस्तदस्ति । व्यापकाभावे च व्याप्यायोगात् । प्रकृतिशब्दवाच्यताभिधायकवाक्यस्य मृदब्रवीदित्यादि (शतपथब्राह्मणं ६-१-३-२) वाक्यवत्कथञ्चिन्नेयत्वादिति प्राप्ते परिहरत्सूत्रं पठति ॥**

**ಅನು.:–** ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣ ಇದ್ದರೂ ಸಹ ಪ್ರಕೃತಿಶಬ್ದವಾಚ್ಯತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ - ಪ್ರಕೃತಿಶಬ್ದವು ಸ್ತ್ರೀಲಿಂಗಶಬ್ದವಾಗಿದೆ. ಯತ್ರ ಸ್ತ್ರೀಲಿಂಗಶಬ್ದವಾಚ್ಯತ್ವಂ ತತ್ರ ಅವ್ಯವಧಾನೇನ ಸೂತಿಕರ್ತೃತ್ವಂ ಎಂದು ವ್ಯಾಪ್ತಿ ಇರುವುದರಿಂದ ಅಂತಹ ಸ್ತ್ರೀಲಿಂಗಶಬ್ದವಾಚ್ಯತ್ವವನ್ನು ಹೇಳಬೇಕಾದರೆ ಅವ್ಯವಧಾನೇನ ಸೂತಿಕರ್ತೃತ್ವವನ್ನೂ ಪರಮಾತ್ಮನಿಗೆ ಒಪ್ಪಬೇಕಾಗುತ್ತದೆ.

ಆದರೆ ಪರಮಾತ್ಮನಿಗೆ ಅವ್ಯವಧಾನೇನ ಸೂತಿಕರ್ತೃತ್ವವನ್ನು ಒಪ್ಪಲು ಬರುವುದಿಲ್ಲ. ವ್ಯಾಪಕವಾದ ಸೂತಿಕರ್ತೃತ್ವವು ಇಲ್ಲ ಎಂದರೆ ವ್ಯಾಪ್ತವಾದ ಸ್ತ್ರೀಲಿಂಗಶಬ್ದವಾಚ್ಯತ್ವವೂ ಇಲ್ಲ ಎಂದೇ ಅರ್ಥ. ಹೀಗಾಗಿ ಪರಮಾತ್ಮನಿಗೆ ಸ್ತ್ರೀಲಿಂಗಶಬ್ದವಾಚ್ಯತ್ವವನ್ನು ಒಪ್ಪಲು ಬರುವುದಿಲ್ಲ.

ಹಾಗಾದರೆ (ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವೇ ಇಲ್ಲ ಎಂದಾದರೆ)

''ಅಥ ಹ್ಯೆಷ ಆತ್ಮಾ... ತಸ್ಮಾತ್ ಪ್ರಕೃತಿಃ''

ಎಂಬುದಾಗಿ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ತಿಳಿಸುವ ಶ್ರುತಿಗೆ ಗತಿ ಏನು? ಎಂದರೆ, ಮೃದಬ್ರವೀತ್ ಇತ್ಯಾದಿವಾಕ್ಯಗಳನ್ನು ಕಥಂಚಿತ್ ಹೊಂದಿಸುವಂತೆ ಈ ಪ್ರಕೃತಿಶಬ್ದವಾಚ್ಯತ್ವಾಭಿಧಾಯಕವಾಕ್ಯವನ್ನೂ ಹೊಂದಿಸಬೇಕು. ಆದ್ದರಿಂದ ಅವ್ಯವಧಾನೇನ ಸೂತಿಕರ್ತೃತ್ವವು ಇಲ್ಲದ ಕಾರಣ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಅಂಗೀಕರಿಸಲು ಬರುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ योनिश्च हि गीयते ॐ (१.४.२८)

**ಸೂತ್ರಾರ್ಥ :–** ಹಿ=ಯಾವ ಕಾರಣ ''ಯದ್ ಭೂತಯೋನಿಮ್'' (ಮುಂ. 1-1-6) ಎಂಬ ಶ್ರುತಿಯಿಂದ ಯೋನಿಃ ಚ = ತನ್ನ ದೇಹದಿಂದಲೇ ಅಪತ್ಯೋತ್ಪಾದಕನೂ ಆಗಿದ್ದಾನೆ (ಮಕ್ಕಳನ್ನು ಹುಟ್ಟಿಸುವವನೂ ಆಗಿದ್ದಾನೆ) ಎಂಬುದಾಗಿ ಗೀಯತೇ= ಪ್ರತಿಪಾದ್ಯನಾಗಿದ್ದಾನೆಯೋ ತಸ್ಮಾತ್=ಆ ಕಾರಣ ಪ್ರಕೃತ್ಯಾದಿಸ್ತ್ರೀಲಿಂಗಶಬ್ದವಾಚ್ಯನೂ ಆಗಿದ್ದಾನೆ ಪರಮಾತ್ಮ.

**ಸೂ.ರ.:– एवं च व्यवधानेनेति (ब्रह्माण्ड) स्मृतेः । योनित्वस्यापि श्रुतिसिद्धत्वेन व्यापकाभावासिद्धेः । ततश्च विष्णुरेवाशेषस्त्रीशब्दवाच्य इत्युपपन्नं समन्वयसूत्रमिति सिद्धम् ।**

**ಅನು.:–** ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ ।
ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ ॥
ಉಭಯಾತ್ಮಕಸೂತಿತ್ವಾತ್ ವಾಸುದೇವಃ ಪರಃ ಪುಮಾನ್ ।
ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ ॥

ಎಂಬುದಾಗಿ ಬ್ರಹ್ಮಾಂಡ ಪುರಾಣರೂಪವಾದ ಸ್ಮೃತಿಯು ತಿಳಿಸುವಂತೆ, ವ್ಯವಧಾನೇನ ಸೂತಿ ಅವ್ಯವಧಾನೇನ ಸೂತಿ, ಎರಡೂವಿಧವಾದ ಸೂತಿ ಉಳ್ಳವನಾದ್ದರಿಂದ ಒಬ್ಬನೇ ಪರಮಾತ್ಮನು ಪ್ರಕೃತಿಶಬ್ದವಾಚ್ಯನೂ ಆಗಿದ್ದಾನೆ, ಪುರುಷಶಬ್ದವಾಚ್ಯನೂ ಆಗಿದ್ದಾನೆ. ಹೀಗೆ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವು ಸ್ಮೃತಿಸಿದ್ಧವಾಗಿದೆ. ಮತ್ತು ''ಯದ್ಭೂತಯೋನಿಂ

**ಅವಿಕಾರೋಽಪಿ ಪರಮಃ ಪ್ರಕೃತಿಂ ತು ವಿಕಾರಿಣೀಮ್ ।**
**ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತೇ ॥**

ಎಂಬುದಾಗಿ ಸ್ಮೃತಿಯೂ (ನಾರದೀಯ ಪುರಾಣವೂ) ಹೇಳುವಂತೆ, ಪ್ರಕೃತಿಗೆ ಸ್ವತಃ ಪರಿಣಾಮವಾಗುವ ಸಾಮರ್ಥ್ಯ ಇಲ್ಲದ ಕಾರಣ ಆ ಪ್ರಕೃತಿಯಲ್ಲಿ ನಿಂತು ಪ್ರಕೃತಿಯನ್ನು ಮಹದಾದಿರೂಪದಿಂದ ಪರಿಣಾಮಗೊಳಿಸಿ, ಪ್ರಕೃತಿಪರಿಣಾಮಾನಂತರದಲ್ಲಿ ಆ ಮಹದಾದಿಗಳ ಪ್ರೇರಣೆಗಾಗಿ (ನಿಯಮನಕ್ಕಾಗಿ) ತಾನು ಅನೇಕರೂಪಗಳನ್ನು ತಾಳುತ್ತಾನೆ ಭಗವಂತ.

ಹೀಗೆ ಪ್ರಕೃಷ್ಟವಾದ ಕೃತಿ ಉಳ್ಳವನಾದ್ದರಿಂದ (ಪ್ರಕೃಷ್ಟ ಕೃತಿಮತ್ವ ಎಂಬ ನಿಮಿತ್ತ ಇರುವುದರಿಂದ) ವಿಷ್ಣುವೇ ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

ಸೂತ್ರ – 28

## ಆಕ್ಷೇಪ

**ಸೂ.ರ.:– ननु परमात्मनः स्त्रीत्वेऽपि प्रकृतिशब्दवाच्यत्वाभिधायकप्रमाणसद्भावेऽपि स्त्रीशब्दवाच्यत्वं न युक्तम् । तस्याव्यवधानेन सूतिकर्तृत्ववाचित्वनियमात् । न च परमात्मनस्तदस्ति । व्यापकाभावे च व्याप्यायोगात् । प्रकृतिशब्दवाच्यताभिधायकवाक्यस्य मृदब्रवीदित्यादि (शतपथब्राह्मणं ६-१-३-२) वाक्यवत्कथञ्चिन्नेयत्वादिति प्राप्ते परिहरत्सूत्रं पठति ॥**

**ಅನು.:–** ಪರಮಾತ್ಮನು ಪ್ರಕೃತಿಶಬ್ದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣ ಇದ್ದರೂ ಸಹ ಪ್ರಕೃತಿಶಬ್ದವಾಚ್ಯತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ - ಪ್ರಕೃತಿಶಬ್ದವು ಸ್ತ್ರೀಲಿಂಗಶಬ್ದವಾಗಿದೆ. ಯತ್ರ ಸ್ತ್ರೀಲಿಂಗಶಬ್ದವಾಚ್ಯತ್ವಂ ತತ್ರ ಅವ್ಯವಧಾನೇನ ಸೂತಿಕರ್ತೃತ್ವಂ ಎಂದು ವ್ಯಾಪ್ತಿ ಇರುವುದರಿಂದ ಅಂತಹ ಸ್ತ್ರೀಲಿಂಗಶಬ್ದವಾಚ್ಯತ್ವವನ್ನು ಹೇಳಬೇಕಾದರೆ ಅವ್ಯವಧಾನೇನ ಸೂತಿಕರ್ತೃತ್ವವನ್ನೂ ಪರಮಾತ್ಮನಿಗೆ ಒಪ್ಪಬೇಕಾಗುತ್ತದೆ.

ಆದರೆ ಪರಮಾತ್ಮನಿಗೆ ಅವ್ಯವಧಾನೇನ ಸೂತಿಕರ್ತೃತ್ವವನ್ನು ಒಪ್ಪಲು ಬರುವುದಿಲ್ಲ. ವ್ಯಾಪಕವಾದ ಸೂತಿಕರ್ತೃತ್ವವು ಇಲ್ಲ ಎಂದರೆ ವ್ಯಾಪ್ತವಾದ ಸ್ತ್ರೀಲಿಂಗಶಬ್ದವಾಚ್ಯತ್ವವೂ ಇಲ್ಲ ಎಂದೇ ಅರ್ಥ. ಹೀಗಾಗಿ ಪರಮಾತ್ಮನಿಗೆ ಸ್ತ್ರೀಲಿಂಗಶಬ್ದವಾಚ್ಯತ್ವವನ್ನು ಒಪ್ಪಲು ಬರುವುದಿಲ್ಲ.

ಹಾಗಾದರೆ (ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವೇ ಇಲ್ಲ ಎಂದಾದರೆ)

"ಅಥ ಹ್ಯೇಷ ಆತ್ಮಾ... ತಸ್ಮಾತ್ ಪ್ರಕೃತಿಃ"

ಎಂಬುದಾಗಿ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ತಿಳಿಸುವ ಶ್ರುತಿಗೆ ಗತಿ ಏನು? ಎಂದರೆ, ಮೃದಬ್ರವೀತ್ ಇತ್ಯಾದಿವಾಕ್ಯಗಳನ್ನು ಕಥಂಚಿತ್ ಹೊಂದಿಸುವಂತೆ ಈ ಪ್ರಕೃತಿಶಬ್ದವಾಚ್ಯತ್ವಾಭಿಧಾಯಕವಾಕ್ಯವನ್ನೂ ಹೊಂದಿಸಬೇಕು. ಆದ್ದರಿಂದ ಅವ್ಯವಧಾನೇನ ಸೂತಿಕರ್ತೃತ್ವವು ಇಲ್ಲದ ಕಾರಣ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವನ್ನು ಅಂಗೀಕರಿಸಲು ಬರುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ योनिश्च हि गीयते ॐ (१.४.२८)

**ಸೂತ್ರಾರ್ಥ** :– ಹಿ=ಯಾವ ಕಾರಣ "ಯದ್ ಭೂತಯೋನಿಮ್" (ಮುಂ. 1-1-6) ಎಂಬ ಶ್ರುತಿಯಿಂದ ಯೋನಿಃ ಚ = ತನ್ನ ದೇಹದಿಂದಲೇ ಅಪತ್ಯೋತ್ಪಾದಕನೂ ಆಗಿದ್ದಾನೆ (ಮಕ್ಕಳನ್ನು ಹುಟ್ಟಿಸುವವನೂ ಆಗಿದ್ದಾನೆ) ಎಂಬುದಾಗಿ ಗೀಯತೇ= ಪ್ರತಿಪಾದ್ಯನಾಗಿದ್ದಾನೆಯೋ ತಸ್ಮಾತ್=ಆ ಕಾರಣ ಪ್ರಕೃತ್ಯಾದಿಸ್ತ್ರೀಲಿಂಗಶಬ್ದವಾಚ್ಯನೂ ಆಗಿದ್ದಾನೆ ಪರಮಾತ್ಮ.

**ಸೂ.ರ.:– एवं च व्यवधानेनेति (ब्रह्माण्ड) स्मृतेः । योनित्वस्यापि श्रुतिसिद्धत्वेन व्यापकाभावासिद्धेः । ततश्च विष्णुरेवाशेषस्त्रीशब्दवाच्य इत्युपपन्नं समन्वयसूत्रमिति सिद्धम् ।**

**ಅನು.:–** ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ ।
ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ ॥

ಉಭಯಾತ್ಮಕಸೂತಿತ್ವಾತ್ ವಾಸುದೇವಃ ಪರಃ ಪುಮಾನ್ ।
ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ ॥

ಎಂಬುದಾಗಿ ಬ್ರಹ್ಮಾಂಡ ಪುರಾಣರೂಪವಾದ ಸ್ಮೃತಿಯು ತಿಳಿಸುವಂತೆ, ವ್ಯವಧಾನೇನ ಸೂತಿ ಅವ್ಯವಧಾನೇನ ಸೂತಿ, ಎರಡೂವಿಧವಾದ ಸೂತಿ ಉಳ್ಳವನಾದ್ದರಿಂದ ಒಬ್ಬನೇ ಪರಮಾತ್ಮನು ಪ್ರಕೃತಿಶಬ್ದವಾಚ್ಯನೂ ಆಗಿದ್ದಾನೆ, ಪುರುಷಶಬ್ದವಾಚ್ಯನೂ ಆಗಿದ್ದಾನೆ. ಹೀಗೆ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವು ಸ್ಮೃತಿಸಿದ್ಧವಾಗಿದೆ. ಮತ್ತು "ಯದ್ಭೂತಯೋನಿಂ

ಪರಿಪಶ್ಯಂತಿ ಧೀರಾಃ'' (ಮುಂ.ಉ. 1-1-6) ಎಂಬುದಾಗಿ ಶ್ರುತಿಯಿಂದಲೂ ಯೋನಿತ್ವವು (ಸೂತಿಕರ್ತೃತ್ವವು) ಪರಮಾತ್ಮನಿಗೆ ಶ್ರುತವಾಗುತ್ತಿರುವುದರಿಂದ ಪರಮಾತ್ಮನಿಗೆ ಪ್ರಕೃತಿಶಬ್ದವಾಚ್ಯತ್ವವು ಶ್ರುತಿಸಿದ್ಧವೂ ಆಗಿದೆ.

ಆದ್ದರಿಂದ 'ವ್ಯಾಪಕವಾದ ಸೂತಿಕರ್ತೃತ್ವ ಇಲ್ಲವಾದ್ದರಿಂದ ವ್ಯಾಪ್ಯವಾದ ಪ್ರಕೃತಿಶಬ್ದ-ವಾಚ್ಯತ್ವ ಇಲ್ಲ' ಎಂಬ ಆಕ್ಷೇಪ ಸರಿಯಲ್ಲ. ಸೂತಿಕರ್ತೃತ್ವವು ಶ್ರುತಿ-ಸ್ಮೃತಿ ಸಿದ್ಧವಾದ್ದರಿಂದ ಪರಮಾತ್ಮನಿಗೆ ಪ್ರಕೃತ್ಯಾದಿಸ್ತ್ರೀಲಿಂಗಶಬ್ದವಾಚ್ಯತ್ವ ಇದ್ದೇ ಇದೆ. ಹೀಗೆ ವಿಷ್ಣುವೇ ಎಲ್ಲ ಸ್ತ್ರೀಶಬ್ದವಾಚ್ಯನಾಗಿದ್ದರಿಂದ ತತ್ತು ಸಮನ್ವಯಾತ್ ಎಂಬ ಸಮನ್ವಯಸೂತ್ರದಲ್ಲಿ ಪರಮಾತ್ಮನಲ್ಲಿ ಸರ್ವಶಬ್ದಸಮನ್ವಯವನ್ನು ಹೇಳಿದ್ದು ಸಮಂಜಸವೇ ಎಂದು ಸಿದ್ಧವಾಯಿತು.

ಪ್ರಕೃತ್ಯಧಿಕರಣವು ಮುಗಿಯಿತು.

*ಅಧಿಕರಣ – 7*

# ಏತೇನ ಸರ್ವೇ ವ್ಯಾಖ್ಯಾತಾಧಿಕರಣ

## ಸಂಗತಿ

**ಸೂ.ರ.:– अत्र निषेध्यनिषेधार्थाः शब्दाः ब्रह्मणि समन्वीयन्ते ।**

**ಅನು.:–** ನಿಷೇಧ್ಯ ನಿಷೇಧಾರ್ಥಗಳಾದ ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡುತ್ತಾರೆ ಎಳನೇ ಈ ಏತೇನ ಸರ್ವೇ ವ್ಯಾಖ್ಯಾತಾಧಿಕರಣದಲ್ಲಿ.

ನಿಷೇಧಮುಖವೇದ್ಯತ್ವಾದಿಗಳಿಂದ ಅನ್ಯತ್ರೈವ ಪ್ರಸಿದ್ಧವಾದ ಅಸತ್ ಮೊದಲಾದ ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ ಈ ಅಧಿಕರಣದಲ್ಲಿ.

ಸಮನ್ವಯಸೂತ್ರದಲ್ಲಿ ಸರ್ವಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲಾಗಿದೆ. ಆ ಸರ್ವಶಬ್ದಗಳ ಮಧ್ಯದಲ್ಲಿ ಸೇರಿದ ಅಸದಾದಿ ಶಬ್ದಗಳು ಅಸದ್ವಾ ಇದಮಗ್ರ ಆಸೀತ್ ಇತ್ಯಾದಿಗಳಲ್ಲಿ ಶ್ರುತವಾಗುತ್ತಿವೆ. ಆ ಅಸದಾದಿಶಬ್ದಗಳು ಬ್ರಹ್ಮನಲ್ಲಿ ಸಮನ್ವಯವಾಗದಿದ್ದರೆ ಸರ್ವಶಬ್ದಸಮನ್ವಯಕ್ಕೆ ಭಂಗ ಬರುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಅಸದಾದಿಶಬ್ದಗಳ ಸಮನ್ವಯವನ್ನು ಸಮರ್ಥಿಸುತ್ತಾರೆ ಈ ಅಧಿಕರಣದಲ್ಲಿ ಎಂದು ಭಾವ.

## ಪೂರ್ವಪಕ್ಷ

**ಸೂ.ರ.:–** ननु न विष्णुरेवासदादिशब्दवाच्यः । केषाञ्चिद-भाववाचित्वात् । केषाञ्चिन्निःस्वरूपवाचित्वात् । परमात्मनो भावरूपत्वे-नाभावत्वादिकं न युज्यते । न च स्वस्य निःस्वरूपत्वाभावेऽप्य-सतस्तधीनत्वेन तच्छब्दवृत्तिरिति वाच्यम् । नियम्यस्वरूपशून्यस्य नियम्यत्वायोगादिति प्राप्ते सूत्रं पठति ॥

**ಅನು.:–** ಅಸದ್ವಾ ಇದಮಗ್ರ ಆಸೀತ್ ಇತ್ಯಾದಿಯಾಗಿ ಶ್ರುತವಾಗುತ್ತಿರುವ ಅಸದಾದಿ ಶಬ್ದಗಳಿಂದ ವಿಷ್ಣು ವಾಚ್ಯನಾಗಲು ಸಾಧ್ಯವಿಲ್ಲ. ಏಕೆಂದರೆ – ಅಂತಹ ಅಸದಾದಿಶಬ್ದಗಳಲ್ಲಿ ಕೆಲವು ಅಭಾವವಾಚಿಯಾದ ಶಬ್ದಗಳಾಗಿವೆ. ಕೆಲವು ನಿಃಸ್ವರೂಪ ವಾಚಿಯಾದ ಶಬ್ದಗಳಾಗಿವೆ.

ಅವುಗಳಲ್ಲಿ ಅಭಾವವಾಚಿಯಾದ ಶಬ್ದಗಳಿಂದ ವಿಷ್ಣು ವಾಚ್ಯನಾಗಬೇಕಾದರೆ ಆ ವಿಷ್ಣುವಿನಲ್ಲಿ ಅಭಾವತ್ವಾದಿಧರ್ಮಗಳು ಬರಬೇಕಾಗುತ್ತವೆ. ಆದರೆ ವಿಷ್ಣುವು ಭಾವರೂಪನಾದ್ದರಿಂದ ಅವನಲ್ಲಿ ಅಭಾವತ್ವಾದಿಧರ್ಮಗಳು ಕೂಡುವುದಿಲ್ಲ. ಹೀಗಾಗಿ ವಿಷ್ಣುವು ಅಭಾವವಾಚಿಯಾದ ಶಬ್ದಗಳಿಂದ ವಾಚ್ಯನಾಗಲು ಸಾಧ್ಯವಿಲ್ಲ.

ಇನ್ನು ನಿಃಸ್ವರೂಪಶಬ್ದವಾಚ್ಯನಾಗಬೇಕಾದರೂ ಅವನಲ್ಲಿ ನಿಃಸ್ವರೂಪತ್ವ ಇರಬೇಕು. ಆದರೆ ವಿಷ್ಣುವಿನಲ್ಲಿ ನಿಃಸ್ವರೂಪತ್ವ ಇಲ್ಲವಾದ್ದರಿಂದ ಅವನು ನಿಃಸ್ವರೂಪಶಬ್ದವಾಚ್ಯನಾಗಲೂ ಸಾಧ್ಯವಾಗಿಲ್ಲ.

ಆದ್ದರಿಂದ ವಿಷ್ಣುವು ಅಸದಾದಿಶಬ್ದಗಳಿಂದ ವಾಚ್ಯನು ಆಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

### ॐ एतेन सर्वे व्याख्याता व्याख्याताः ॐ (१.४.२९)

**ಸೂತ್ರಾರ್ಥ :–** ಏತೇನ = ಪೂರ್ವೋಕ್ತವಾದ ಹೇತುವಿನಿಂದಲೇ ಸರ್ವೇ = ಶೂನ್ಯಾದಿಶಬ್ದಗಳು ಮುಖ್ಯತೋ ಭಗವದ್ವಾಚಿನ ಏವ ವ್ಯಾಖ್ಯಾತಾಃ = ಮುಖ್ಯವಾಗಿ ಭಗವದ್ವಾಚಿಗಳೇ ಆಗಿವೆ ಎಂದು ವ್ಯಾಖ್ಯಾನಿಸಲ್ಪಟ್ಟಿವೆ.

ಈ ಅಧ್ಯಾಯದ ಪ್ರಾರಂಭದಿಂದ ಮುಕ್ತಾಯದವರೆಗೆ ಹೇಳಿದ ಅರ್ಥ "ಇತ್ಥಮೇವ = ಹೀಗೆಯೇ ಇರುವುದು" ಎಂಬುದಾಗಿ ಅವಧಾರಣಾರ್ಥಕ್ಕಾಗಿ ವ್ಯಾಖ್ಯಾತಾಃ ವ್ಯಾಖ್ಯಾತಾಃ ಎಂದು ದ್ವಿರುಕ್ತಿ (ಎರಡು ಬಾರಿ ಹೇಳಿದ್ದಾರೆ.).

## ಸಿದ್ಧಾಂತ

**ಸೂ.ರ.:– एवं च परमात्माधीनत्वादियुक्तिसमुदायात् । न च निषेधमुखवेद्यत्वाद्यभावात्तदभावः । निषेधमुखवेद्यत्वाभावेऽपि दुर्जनाव्यक्तत्वादिना शमूनं कुरुत इत्यादियोगेन च शून्यादि-शब्दवाच्यात्वोपपत्तेः । एष ह्येव शून्य इति (महोपनिषत्) श्रुतेः ।**

**ಅನು.:–** ಹೀಗೆ ವಿಷ್ಣುವು ಅಭಾವರೂಪನಾಗದೇ ಹೋದರೂ, ನಿಷ್ಸ್ವರೂಪನಾಗದೇ ಹೋದರೂ ಅಭಾವವಾಚಿಶಬ್ದವಾಚ್ಯನಾಗುತ್ತಾನೆ, ನಿಸ್ಸ್ವರೂಪವಾಚಿಶಬ್ದವಾಚ್ಯನಾಗುತ್ತಾನೆ. ಏಕೆಂದರೆ – ಆ ಅಭಾವಪದಾರ್ಥಗಳು, ನಿಃಸ್ವರೂಪಪದಾರ್ಥಗಳು ವಿಷ್ಣುವಿನ ಅಧೀನವಾಗಿದ್ದರಿಂದ ವಿಷ್ಣುವು ಅಸದಾದಿಶಬ್ದವಾಚ್ಯನಾಗುತ್ತಾನೆ.

ವಿಷ್ಣುವಿನಲ್ಲಿ ನಿಷೇಧಮುಖವೇದ್ಯತ್ವವು ಇಲ್ಲವಾದ್ದರಿಂದ ಶೂನ್ಯಾದಿಶಬ್ದಗಳಿಂದ ಹೇಗೆ ವಾಚ್ಯನಾಗುತ್ತಾನೆ? ಎಂದರೆ, ವಿಷ್ಣುವು ದುರ್ಜನರಿಗೆ ಅವ್ಯಕ್ತನಾದ್ದರಿಂದ ಶೂನ್ಯಶಬ್ದ-ವಾಚ್ಯನಾಗಬಹುದು. ಅಥವಾ ಶಂ ಊನಂ ಕುರುತೇ (ಸ್ವಸುಖಾತ್ ಅನ್ಯಸುಖಮಲ್ಪಂ ಕರೋತಿ) ಎಂಬುದಾಗಿ ಯೋಗದಿಂದಲೂ ಸಹ ವಿಷ್ಣುವಿಗೆ ಶೂನ್ಯಶಬ್ದವಾಚ್ಯತ್ವವನ್ನು ಹೇಳಬಹುದಾಗಿದೆ. ಮತ್ತು "ಏಷ ಹ್ಯೇವ ಶೂನ್ಯ ಏಷ ಹ್ಯೇವ ತುಚ್ಛ ಏಷ ಹ್ಯೇವಾಭಾವ ಏಷ ಹ್ಯೇವಾವ್ಯಕ್ತೋಽದೃಶ್ಯೋಽಚಿಂತ್ಯೋ ನಿರ್ಗುಣಶ್ಚ" ಎಂಬುದಾಗಿ (ಮಹೋಪನಿಷತ್ತೂ ಸಹ) ಶ್ರುತಿಯೂ ಸಹ ವಿಷ್ಣುವಿಗೆ ಅಸದಾದಿಶಬ್ದವಾಚ್ಯತ್ವವನ್ನು ತಿಳಿಸುತ್ತಿದೆ. ಹೀಗಾಗಿ ಅಸದಾದಿಶಬ್ದವಾಚ್ಯತ್ವವನ್ನು ವಿಷ್ಣುವಿಗೆ ಅಂಗೀಕರಿಸಬಹುದಾಗಿದೆ.

**ಸೂ.ರ.:– न च नियम्यस्वरूपविधुरत्वात्तदधीनत्वमयुक्तमिति वाच्यम् । स्वरूपवैधुर्येऽपि निषेधमुखवेद्यत्वादिधर्माणां तदधीनत्वात् । अतोऽसदादिशब्दवाच्यत्वस्य हरेरुपपन्नत्वेन युक्तमशेषस्वरवर्णपद-वाक्यात्मकशास्त्रयोनित्वं ततो जगज्जन्मादिकर्तृत्वं मुख्यानन्तगुणवत्त्वं च विष्णोः सिद्धम् ॥**

**ಅನು.**:– ತುಚ್ಛಾದಿಗಳು ನಿಯಮ್ಯಸ್ವರೂಪ ರಹಿತವಾದ್ದರಿಂದ ಅವುಗಳಿಗೆ ಭಗವದಧೀನತ್ವವು ಕೂಡುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ತುಚ್ಛಾದಿಗಳು ನಿಯಮ್ಯಸ್ವರೂಪರಹಿತವಾದರೂ ಸಹ ಅವುಗಳಲ್ಲಿರುವ ನಿಷೇಧಮುಖವೇದ್ಯತ್ವಾದಿಧರ್ಮಗಳು ಭಗವದಧೀನವಾಗಲು ಸಾಧ್ಯವಿದೆ. ಆದ್ದರಿಂದ ಅಸದಾದಿಶಬ್ದವಾಚ್ಯತ್ವವು ವಿಷ್ಣುವಿಗೆ ಉಪಪನ್ನವೇ ಆಗುತ್ತದೆ.

ಈ ರೀತಿಯಾಗಿ ಅಸದಾದಿಶಬ್ದವಾಚ್ಯತ್ವವೂ ವಿಷ್ಣುವಿಗೆ ಉಪಪನ್ನವಾಗುವುದರಿಂದ, ಸಮಸ್ತವಾದ ಸ್ವರ-ವರ್ಣ-ಪದ-ವಾಕ್ಯರೂಪವಾದ ಶಾಸ್ತ್ರಯೋನಿತ್ವವು (ಶಾಸ್ತ್ರಗಮ್ಯತ್ವವು) ಯುಕ್ತವಾಗುತ್ತದೆ. ಶಾಸ್ತ್ರಯೋನಿತ್ವವು ಯುಕ್ತವಾಗುವುದರಿಂದ ಜಗಜ್ಜನ್ಮಾದಿಕರ್ತೃತ್ವವು ಹಾಗೂ ಮುಖ್ಯ ಅನಂತಗುಣವತ್ವವೂ ವಿಷ್ಣುವಿಗೆ ಸಿದ್ಧವಾಗುತ್ತದೆ.

ಏತೇನ ಸರ್ವೇ ವ್ಯಾಖ್ಯಾತಾಧಿಕರಣವು ಮುಗಿಯಿತು.

नाहं कर्ता हरिः कर्ता तत्पूजा कर्म चाखिलम् ।
तथापि मत्कृता पूजा त्वत्प्रसादेन नान्यथा ॥
अनेन भावि यत्पुण्यं तदाप्नोतु गुरुर्मम ॥

# द्वितीयाऽध्यायः

## प्रथमः पादः

ಅಧಿಕರಣ – 1

## ಸ್ಮೃತ್ಯಧಿಕರಣ

### ಅಧ್ಯಾಯ ಸಂಗತಿ

**ಸೂ.ರ.:– नारायणे निखिलवेदसमन्वयेन गताध्याये निरूपित-जगत्कारणत्वरूपार्थेऽविरोधं दर्शयत्यस्मिन्नध्याये ॥**

**ಅನು.:–** ಎಲ್ಲ ವೇದಗಳ ಸಮನ್ವಯಮೂಲಕವಾಗಿ (ಎಲ್ಲ ಶಾಸ್ತ್ರಗಳಿಗೆ ಪ್ರಾಮಾಣ್ಯ ಮೂಲಕವಾಗಿ) ನಾರಾಯಣನೇ ಜಗಜ್ಜನ್ಮಾದಿಕರ್ತಾ ಎಂಬುದಾಗಿ ಹಿಂದಿನ ಅಧ್ಯಾಯದಲ್ಲಿ ಯಾವ ಅರ್ಥವು (ಪ್ರಮೇಯವು) ಪ್ರತಿಪಾದಿಸಲ್ಪಟ್ಟಿದೆಯೋ ಅದಕ್ಕೆ ಯುಕ್ತ್ಯಾದಿವಿರೋಧ ಬಂದರೆ ಅದು ಪ್ರೇಕ್ಷಾವದುಪಾದಿತ್ಸಾವಿಷಯವಾಗುವುದಿಲ್ಲ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ನಿರೂಪಿತವಾದ ನಾರಾಯಣನ ಜಗತ್ಕಾರಣತ್ವರೂಪವಾದ ಅರ್ಥದ ವಿಷಯದಲ್ಲಿ (ಯುಕ್ತ್ಯಾದಿ ವಿರೋಧಾಭಾವವನ್ನು ಸಮರ್ಥಿಸುತ್ತಾರೆ) ಯುಕ್ತ್ಯಾದಿ-ವಿರೋಧಗಳನ್ನು ಪರಿಹಾರ ಮಾಡುತ್ತಾರೆ ಈ ಎರಡನೇ ಅವಿರೋಧಾಧ್ಯಾಯದಲ್ಲಿ.

### ಪಾದ ಸಂಗತಿ

**ಸೂ.ರ.:– अस्मिन् पादे युक्त्यविरोधं दर्शयति ।**

**ಅನು.:–** ಜಗತ್ಕಾರಣತ್ವರೂಪವಾದ ಅರ್ಥದಲ್ಲಿ ನಾಲ್ಕು ವಿಧವಾದ ವಿರೋಧವು ತೋರುತ್ತದೆ.

1. ಯುಕ್ತಿ ವಿರೋಧ
2. ಸಮಯ ವಿರೋಧ
3. ಶ್ರುತಿ ವಿರೋಧ
4. ನ್ಯಾಯೋಪೇತ ಶ್ರುತಿವಿರೋಧ

ಇವುಗಳಲ್ಲಿ ಎಲ್ಲ ವಿರೋಧಗಳೂ ಯುಕ್ತಿಮೂಲಕವಾದ್ದರಿಂದ ಆ ಯುಕ್ತಿವಿರೋಧ-ವನ್ನು ಮೊದಲನೇ ಪಾದದಲ್ಲಿ ಪರಿಹಾರ ಮಾಡುತ್ತಾರೆ.

## ಅಧಿಕರಣ ಸಂಗತಿ

ಸೂ.ರ.:– अत्रैकैकविरोधापेक्षया विरोधचतुष्टयात्मकस्मृतिविरोधस्य प्रबलतया प्रथमं निरसनीयत्वादिति भावेन स्मृत्यविरोधो निरूप्यते ॥

ಅನು.:– ಇವುಗಳಲ್ಲಿ ಏಕೈಕವಿರೋಧಾಪೇಕ್ಷಯಾ (ಒಂದೊಂದು ವಿರೋಧಕ್ಕಿಂತಲೂ) ವಿರೋಧಚತುಷ್ಟಯಾತ್ಮಕವಾದ ಸ್ಮೃತಿವಿರೋಧವು ಪ್ರಬಲವಾಗಿದ್ದರಿಂದ ಆ ಸ್ಮೃತಿ ವಿರೋಧವು ಮೊದಲು ಪರಿಹಾರ್ಯವಾಗಿದೆ ಎಂಬ ಅಭಿಪ್ರಾಯದಿಂದ ಸ್ಮೃತಿವಿರೋಧ-ವನ್ನು ಮೊದಲನೇ ಈ ಅಧಿಕರಣದಲ್ಲಿ ಪರಿಹರಿಸುತ್ತಾರೆ.

ಯದ್ಯಪಿ ಈ ಪಾದವು ಜಗತ್ಕಾರಣತ್ವ ಎಂಬ ಅರ್ಥದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲು ಹೊರಟಿದೆ. ಆದರೂ ಸಹ ಸ್ಮೃತಿಗಳು ಯುಕ್ತಿ-ಸಮಯಾದಿರೂಪ-ವಾಗಿದ್ದರಿಂದ ಸಮಸ್ತ ಅಧ್ಯಾಯದ ಅರ್ಥಭೂತವಾದ ಆ ಸ್ಮೃತಿವಿರೋಧಪರಿಹಾರವನ್ನು ಮೊದಲು ಮಾಡುವುದು ಸೂಕ್ತವಾಗುವುದರಿಂದ, ಮೊದಲನೇ ಅಧಿಕರಣವಾದ ಈ ಸ್ಮೃತ್ಯಧಿ-ಕರಣದಲ್ಲಿ ಪಾಶುಪತಾದಿಸ್ಮೃತಿಗಳ ವಿರೋಧವನ್ನು ಪರಿಹರಿಸುತ್ತಾರೆ ಎಂದು ಅಭಿಪ್ರಾಯ.

ವೇದಪ್ರಾಮಾಣ್ಯ ಹೇಳುವ ಮೂಲಕ ಹಿಂದಿನ ಅಧ್ಯಾಯದಲ್ಲಿ ವಿಷ್ಣುವಿಗೆ ಜಗಜ್ಜನ್ಮಾದಿಕಾರಣತ್ವರೂಪವಾದ ಯಾವ ಅರ್ಥವು ನಿರೂಪಿತವಾಗಿದೆಯೋ ಅದಕ್ಕೆ ಪಾಶುಪತಾದಿಸ್ಮೃತಿವಿರೋಧ ಬಂದರೆ ಬ್ರಹ್ಮಜಿಜ್ಞಾಸಾ ಉಪಪನ್ನವಾಗುವುದಿಲ್ಲ. ಆದ್ದರಿಂದ ಹಿಂದೆ ನಿರೂಪಿತವಾದ ಜಗಜ್ಜನ್ಮಾದಿಕರ್ತೃತ್ವವು ವಿಷ್ಣುವಿಗೆ ಉಪಪನ್ನವಾಗುತ್ತದೆಯೋ? ಇಲ್ಲವೋ? ಎಂದು ಚರ್ಚೆ ಮಾಡಿ ಉಪಪನ್ನವೇ ಆಗುತ್ತದೆ ಎಂದು ಸಮರ್ಥಿಸುತ್ತಾರೆ ಈ ಮೊದಲನೇ ಸ್ಮೃತ್ಯಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न विष्णोर्जगत्कारणत्वं युक्तम् । प्रमाणाभावात् । न च यतो वे(तै.उ.३-१-१)त्यादिश्रुतिः प्रमाणमिति वाच्यम् । अस्याः श्रुतेर्यदि विष्णोः कारणत्वे तात्पर्यं स्यात्तर्हि सर्वज्ञप्रणीतशैवाद्यागम-विरोधेनाप्रामाण्यं स्यादिति तर्कविरोधेन विष्णुकारणत्वे तात्पर्यायोगात् । भागविशेषे प्रामाण्यमपि देशकालभेदेनाविरोधोऽपि न स्यात् । विष्ण्वादीनां

**रुद्रादिभ्य उत्तमत्वस्य तदुक्तसंवाददर्शनात् । ततो विष्णोर्न जिज्ञास्यत्वमिति प्राप्ते सूत्रितम् ।**

**ಅನು.:–** ಹಿಂದೆ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಲ್ಲ. ಏಕೆಂದರೆ - ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? "ಯತೋ ವಾ ಇಮಾನಿ ಭೂತಾನಿ ಜಾಯಂತೇ" (ತೈ.ಉ. 3-1-1) ಇತ್ಯಾದಿ ಶ್ರುತಿಯೇ ಪ್ರಮಾಣವಾಗಿದೆಯಲ್ಲ? ಎಂದರೆ, ಅದು ಸರಿಯಲ್ಲ.

"ಯದಿ ಅಸ್ಯಾಃ ಶ್ರುತೇಃ ವಿಷ್ಣೋಃ ಕಾರಣತ್ವೇ ತಾತ್ಪರ್ಯಂ ಸ್ಯಾತ್ ತರ್ಹಿ ಸರ್ವಜ್ಞಪ್ರಣೀತಶೈವಾದ್ಯಾಗಮವಿರೋಧೇನಾಪ್ರಾಮಾಣ್ಯಂ ಸ್ಯಾತ್"

(ಒಂದುವೇಳೆ ಈ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ತಾತ್ಪರ್ಯ ಇದ್ದದ್ದೇ ಆದರೆ ಆಗ ಸರ್ವಜ್ಞವಿರಚಿತವಾದ ಶೈವಾದ್ಯಾಗಮಗಳ ವಿರೋಧ ಬರುವುದರಿಂದ ಅಪ್ರಾಮಾಣ್ಯ ಬರುತ್ತದೆ) ಎಂಬುದಾಗಿ ತರ್ಕದ ವಿರೋಧ ಬರುತ್ತದೆಯಾದ್ದರಿಂದ ಈ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ತಾತ್ಪರ್ಯ ಕೂಡುವುದಿಲ್ಲ.

ಶ್ರುತಿಗೆ ಸ್ಮೃತಿವಿರೋಧ ಬಂದರೂ ಸಹ ಪ್ರಾಮಾಣ್ಯ ಹೇಳಬಹುದಲ್ಲ? ಎಂದರೆ, ಅದು ಸರಿಯಾಗುವುದಿಲ್ಲ. ಸ್ಮೃತಿವಿರೋಧ ಬಂದಾಗಲೂ ಶ್ರುತಿಗೆ ಪ್ರಾಮಾಣ್ಯ ಹೇಳುವು-ದಾದರೆ (ಶ್ರುತಿಯೂ ಪ್ರಮಾಣ, ಸ್ಮೃತಿಯೂ ಪ್ರಮಾಣ ಎಂದಾದರೆ) ವಸ್ತುವಿನಲ್ಲಿ ವಿಕಲ್ಪ ಬರಬೇಕಾಗುತ್ತದೆ. ಅರ್ಥಾತ್ ವಿಷ್ಣುವಿನ ಜಗತ್ಕಾರಣತ್ವವೂ ಸರಿ, ರುದ್ರಾದಿಗಳ ಜಗತ್ಕಾರಣತ್ವವೂ ಸರಿ ಎಂದು ಆಗಬೇಕಾಗುತ್ತದೆ. ಆದ್ದರಿಂದ ಸ್ಮೃತಿವಿರೋಧ ಬಂದಾಗ ಅಪ್ರಾಮಾಣ್ಯವನ್ನು ಹೇಳಲೇಬೇಕಾಗುತ್ತದೆ.

ದೇಶ-ಕಾಲಭೇದದಿಂದಾಗಿ ಶ್ರುತಿ-ಸ್ಮೃತಿಗಳಲ್ಲಿ ವಿರೋಧವನ್ನು ಪರಿಹರಿಸ-ಬಹುದಲ್ಲವೇ? (ಕೆಲವು ಪದಾರ್ಥಗಳಿಗೆ ವಿಷ್ಣು ಕಾರಣ, ಇನ್ನು ಕೆಲವು ಪದಾರ್ಥಗಳಿಗೆ ರುದ್ರಾದಿಗಳು ಕಾರಣ ಎಂದು ಹೇಳಿ ವಿರೋಧ ಪರಿಹರಿಸಬಹುದಲ್ಲವೇ?) ಎಂದರೆ ಅದೂ ಸರಿಯಲ್ಲ. ಸ್ಮೃತಿಗಳಲ್ಲಿ ರುದ್ರಾದಿಗಳು ಸಕಲಜಗಜ್ಜನ್ಮಾದಿಕಾರಣ ಎಂದೇ ಹೇಳಿದ್ದರಿಂದ ಈ ರೀತಿ ವ್ಯವಸ್ಥೆ ಸರಿಯಾಗುವುದಿಲ್ಲ.

ಆದ್ದರಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಪಾಶುಪತಾದಿಸ್ಮೃತಿಗಳ ವಿರೋಧ ಬರುತ್ತದೆಯಾದ್ದರಿಂದ ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ-ಶ್ರುತಿಗಳಿಗೆ ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ತಾತ್ಪರ್ಯ ಇಲ್ಲ ಎಂದು ತಿಳಿಯುತ್ತದೆ.

ಆ ಕಾರಣ ಹಿಂದೆ ಹೇಳಿದ ವಿಷ್ಣುವಿನ ಜಗತ್ಕಾರಣತ್ವವು ಸರಿಯಲ್ಲ, ಅಂತೆಯೇ ವಿಷ್ಣುವಿಗೆ ಜಿಜ್ಞಾಸ್ಯತ್ವವೂ ಉಪಪನ್ನವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -.

## ॐ स्मृत्यनवकाशदोषप्रसङ्ग इति चेन्नान्यस्मृत्यनवकाशदोषप्रसङ्गात् ॐ (२.१.१)

**ಸೂತ್ರಾರ್ಥ** :– ಯತಃ = ಯಾವ ಕಾರಣ ಸ್ಮೃತ್ಯನವಕಾಶದೋಷಪ್ರಸಂಗಃ = ಸ್ಮೃತೀನಾಂ ಪಾಶುಪತಾದಿರೂಪವಾದ ಸ್ಮೃತಿಗಳು ಅನವಕಾಶೇನ ರುದ್ರಾದಿಗಳ ಜಗತ್ಕಾರಣತ್ವದ ವಿಷಯದಲ್ಲಿ ನಿರವಕಾಶವಾದ್ದರಿಂದ ಶ್ರುತೀನಾಂ ವಿಷ್ಣುಕಾರಣತಾಪರತ್ವೇ = ಯತೋ ವಾ ಇಮಾನಿ ಮೊದಲಾದ ಶ್ರುತಿಗಳಿಗೆ ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ತಾತ್ಪರ್ಯ ಇದೆ ಎನ್ನುವುದಾದರೆ ತದ್ವಿರೋಧೇನ = ಶ್ರುತಿಗಳಿಗೆ ಆ ನಿರವಕಾಶವಾದ ಪಾಶುಪತಾದಿಸ್ಮೃತಿಗಳ ವಿರೋಧ ಬರುವುದರಿಂದ ದೋಷಪ್ರಸಂಗಃ = ಅಪ್ರಾಮಾಣ್ಯ ರೂಪವಾದ ದೋಷ ಬರುತ್ತದೆಯೋ ಅತಃ = ಆ ಕಾರಣ ನ ಶ್ರುತೀನಾಂ ವಿಷ್ಣುಕಾರಣತಾಪರತ್ವಂ ಯುಕ್ತಂ=ಯತೋ ವಾ ಇಮಾನಿ ಇತ್ಯಾದಿಶ್ರುತಿಗಳಿಗೆ ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ತಾತ್ಪರ್ಯ ಇದೆ ಎನ್ನುವುದು ಸರಿಯಾಗುವುದಿಲ್ಲ, ಕಿಂತು ಶಿವಾದಿಕರ್ತೃತಾಪರತ್ವಮೇವ ಯುಕ್ತಮ್ = ಕಿಂತು ರುದ್ರಾದಿಗಳ ಜಗತ್ಕಾರಣತ್ವವನ್ನು ಹೇಳುವುದರಲ್ಲಿಯೇ ತಾತ್ಪರ್ಯ ಇದೆ ಎನ್ನುವುದೇ ಸರಿಯಾಗುತ್ತದೆ.

ಇತಿ ಚೇತ್ = ಈ ರೀತಿಯಾಗಿ ಪೂರ್ವಪಕ್ಷ ಬಂದರೆ ನ = ಅದು ಸರಿಯಲ್ಲ, ಕುತಃ = ಯಾಕೆ? ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ = ಅನ್ಯಾಸಾಂ ಸ್ಮೃತೀನಾಂ = ಪಾಶುಪತಾದಿಸ್ಮೃತಿಗಳಿಂದ ಭಿನ್ನವಾದ, ಶ್ರುತಿಸಂವಾದ ಇರುವುದರಿಂದ ಹಾಗೂ ರುದ್ರಾದಿಗಳಿಗಿಂತಲೂ ಸರ್ವಜ್ಞತಮನಾದ ವಿಷ್ಣ್ವಾದಿಗಳಿಂದ ವಿರಚಿತವಾದ್ದರಿಂದ ಇತರಸ್ಮೃತಿಗಳಿಗಿಂತಲೂ ಪ್ರಬಲವಾದ ಪಂಚರಾತ್ರಾದಿಸ್ಮೃತಿಗಳು ಅನವಕಾಶೇನ = ವಿಷ್ಣುವಿನ ಜಗತ್ಕಾರಣತ್ವಾದಿಗಳಲ್ಲಿ ನಿರವಕಾಶವಾಗಿರುವುದರಿಂದ ದೋಷಪ್ರಸಂಗಾತ್ = ತದ್ವಿರುದ್ಧವಾದ ಶೈವಾದಿಸ್ಮೃತಿಗಳಿಗೆ ಅಪ್ರಾಮಾಣ್ಯರೂಪವಾದ ದೋಷ ಬರುವುದರಿಂದ ದೋಷ = ಅಪ್ರಾಮಾಣ್ಯರೂಪವಾದ ದೋಷದೊಂದಿಗೆ ಪ್ರಸಂಗ = ಪ್ರಕೃಷ್ಟವಾದ ಸಂಗ(ಸಂಬಂಧ)ವನ್ನು ಅಂಗೀಕರಿಸಿದ್ದರಿಂದ ಆ ಪಾಶುಪತಾದಿ ಸ್ಮೃತಿಗಳ ವಿರೋಧವು ಅಕಿಂಚಿತ್ಕರವಾಗಿದೆ.

## ಸಿದ್ಧಾಂತ

**ಸೂ.ರ.:– एवं च यतो वेत्यादिश्रुतिप्रामाण्यसद्भावात् ।**

**ಅನು.:–** ಹಿಂದೆ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ಶ್ರುತಿಗಳು ಆ ವಿಷಯದಲ್ಲಿ ಪ್ರಮಾಣವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಉಪಪನ್ನವಾಗಿದೆ.

**ಸೂ.ರ.:– विष्णौ तात्पर्यमपहाय शिवादितात्पर्याङ्गीकारेऽपि नितरामाप्तैर्विष्ण्वादिभिः प्रणीतस्मृतिविरोधेन श्रुत्यप्रामाण्यापत्तिसाम्यात् ।**

**ಅನು.:–** "ಈ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವದ ವಿಷಯದಲ್ಲಿ ತಾತ್ಪರ್ಯ ಇದ್ದದ್ದಾದರೆ ಶೈವಾದ್ಯಾಗಮವಿರೋಧ ಬರುವುದರಿಂದ ಅಪ್ರಾಮಾಣ್ಯಪ್ರಸಂಗ ಬರುತ್ತದೆ. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಈ ಶ್ರುತಿಗೆ ತಾತ್ಪರ್ಯ ಇಲ್ಲ" ಎಂಬುದಾಗಿ ಈ ಹಿಂದೆಯೇ ಇದಕ್ಕೆ ಉತ್ತರ ಹೇಳಿದ್ದೇವೆಯಲ್ಲ? ಎಂದರೆ, ಅದು ಸರಿಯಲ್ಲ.

ಈ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ತಾತ್ಪರ್ಯವನ್ನು ಪರಿತ್ಯಾಗ ಮಾಡಿ ಶಿವಾದಿಗಳ ಜಗತ್ಕಾರಣತ್ವ ವಿಷಯದಲ್ಲಿ ತಾತ್ಪರ್ಯವನ್ನು ಅಂಗೀಕಾರ ಮಾಡಿದಾಗಲೂ ಸಹ ಸರ್ವಜ್ಞತಮರಾದ ವಿಷ್ಣ್ವಾದಿಗಳಿಂದ ವಿರಚಿತವಾದ ಪಂಚರಾತ್ರಾದಿ (ವೈಷ್ಣವ) ಸ್ಮೃತಿಗಳ ವಿರೋಧ ಬರುವುದರಿಂದ ಅಪ್ರಾಮಾಣ್ಯಪ್ರಸಂಗ ಎನ್ನುವುದು ಸಮಾನವೇ ಆಗಿದೆ.

**ಸೂ.ರ.:– न च स्मृतिद्वयाप्रामाण्येनानिर्णयः । श्रुतिविरुद्धायाः पाशुपतादिस्मृतेरप्रामाण्यात् ।**

**ಅನು.:–** ಪಾಶುಪತಾದಿಸ್ಮೃತಿಗಳಂತೆ ಪಂಚರಾತ್ರಾದಿ ವೈಷ್ಣವಸ್ಮೃತಿಗಳೂ ಅಪ್ರಮಾಣವೇ ಆಗಿದ್ದರಿಂದ "ಶ್ರುತಿಯು ವಿಷ್ಣುಪರವೇ ಆಗಿದೆ" ಎಂಬುದಾಗಿ ನಿರ್ಣಯ ಮಾಡಲು ಆಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ವಿಷ್ಣುವಿನ ಜಗತ್ಕಾರಣತ್ವವನ್ನು ತಿಳಿಸುವ ಶ್ರುತಿಯ ವಿರೋಧ ಬರುತ್ತಿರುವುದರಿಂದ ಪಾಶುಪತಾದಿಸ್ಮೃತಿಗಳಿಗೆ ಅಪ್ರಾಮಾಣ್ಯ ಬರುತ್ತದೆ. ಪಂಚರಾತ್ರಾದಿಸ್ಮೃತಿಗಳಿಗೆ ಶ್ರುತಿವಿರೋಧ ಬರುವುದಿಲ್ಲವಾದ್ದರಿಂದ ಅವುಗಳಿಗೆ ಅಪ್ರಾಮಾಣ್ಯಪ್ರಸಕ್ತಿ ಇಲ್ಲ.

**ಸೂ.ರ.:– न चाविस्पष्टवादित्वे श्रुतेर्दौर्बल्यमिति वाच्यम् । वैष्णवस्मृतियुक्तत्वेन प्राबल्योपपत्तेः । तथा च विष्णोः श्रुत्युक्तजगत्कारणत्वस्य न तद्विरोध इति सिद्धम् ।।**

**ಅನು.:–** ಶ್ರುತಿಯು ವಿಷ್ಣುವಿಗೆ ಜಗತ್ಕಾರಣತ್ವವನ್ನು ಸ್ಪಷ್ಟವಾಗಿ ಹೇಳುತ್ತಿಲ್ಲವಾದ್ದರಿಂದ ದುರ್ಬಲವಾಗಿದೆ. ಪಾಶುಪತಾದಿಸ್ಮೃತಿಗಳು ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಸ್ಪಷ್ಟವಾಗಿ ಹೇಳುತ್ತಿರುವುದರಿಂದ ಪ್ರಬಲವಾಗಿದೆ. ಆದ್ದರಿಂದ ಪಾಶುಪತಾದಿ ಸ್ಮೃತಿಗಳಿಗೆ ಶ್ರುತಿಯು ಬಾಧಕವಾಗುವುದಿಲ್ಲ ಎಂದು ಶಂಕೆ ಬಂದರೆ ಅದು ಸರಿಯಲ್ಲ.

ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿಲ್ಲವಾದರೂ ಸಹ, ರುದ್ರಾದಿಗಳಿಗಿಂತಲೂ ಸರ್ವಜ್ಞತಮರಾದ ವಿಷ್ಣ್ವಾದಿಗಳಿಂದ ವಿರಚಿತವಾಗಿರುವ (ವಿಷ್ಣುವಿಗೆ ಜಗತ್ಕಾರಣತ್ವವನ್ನು ಸ್ಪಷ್ಟವಾಗಿ ಹೇಳುವ) ಪಂಚರಾತ್ರಾದಿಸ್ಮೃತಿಗಳ ಅನುಕೂಲ್ಯ ಇರುವುದರಿಂದ ಶ್ರುತಿಯು ಪಾಶುಪತಾದಿಸ್ಮೃತಿಗಳಿಗಿಂತಲೂ ಪ್ರಬಲವೇ ಆಗುತ್ತದೆ. ಅಂತಹ ಪ್ರಬಲವಾದ ಶ್ರುತಿಯ ವಿರೋಧ ಬರುವುದರಿಂದ ಪಾಶುಪತಾದಿಸ್ಮೃತಿಗಳಿಗೇ ಅಪ್ರಾಮಾಣ್ಯ ಪ್ರಸಂಗ ಬರುತ್ತದೆ.

ಆದ್ದರಿಂದ ಪಂಚರಾತ್ರಾದಿಸ್ಮೃತಿಗಳ ಆನುಕೂಲ್ಯ ಪಡೆದಿರುವ ಶ್ರುತಿಯು ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಪ್ರಮಾಣವಾಗುವುದರಿಂದ, ಯತೋ ವಾ ಇಮಾನಿ ಇತ್ಯಾದಿ ಪ್ರಮಾಣಾನುಸಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹಿಂದೆ ಹೇಳಿರುವುದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 2

## ಆಕ್ಷೇಪ

**ಸೂ.ರ.:– ननु यदुक्तं वैष्णवस्मृतीनां परमात्मप्रणीतत्वेन तत्सहाय्ययुक्तश्रुत्या प्रबलया विष्णोर्जगत्कारणत्वसिद्धिरिति न तद्युक्तम् । तथा सति पाशुपतादिस्मृतीनामप्रामाण्यप्रसङ्गात् । आप्तोक्तानां तासामप्रामाण्यायोगादिति प्राप्ते सूत्रमाह ॥**

**ಅನು.:–** "ಪಂಚರಾತ್ರಾದಿ ವೈಷ್ಣವಸ್ಮೃತಿಗಳು ರುದ್ರಾದಿಗಳಿಗಿಂತಲೂ ಸರ್ವಜ್ಞನಾದ ಪರಮಾತ್ಮನಿಂದ ವಿರಚಿತವಾಗಿವೆಯಾದ್ದರಿಂದ ಅಂತಹ ವೈಷ್ಣವಸ್ಮೃತಿಗಳ ಆನುಕೂಲ್ಯ ಪಡೆದಿರುವ ಶ್ರುತಿಯು ಪ್ರಬಲವಾಗಿದೆ. ಅಂತಹ ಪ್ರಬಲವಾದ ಶ್ರುತಿಯು ಪ್ರಮಾಣವಾಗಿ ಇರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ" ಎಂಬುದಾಗಿ ಏನು ಹಿಂದೆ ಹೇಳಿದಿರಿ ಅದು ಸರಿಯಲ್ಲ.

ಹಾಗಾದರೆ ವೈಷ್ಣವಸ್ಮೃತಿಗಳ ಆನುಕೂಲ್ಯ ಪಡೆದಿರುವ ಕಾರಣ ಶ್ರುತಿಗೆ ಪ್ರಾಬಲ್ಯ ಹೇಳುವುದಾದರೆ, ಅಂತಹ ಪ್ರಬಲಶ್ರುತಿಯ ವಿರೋಧ ಬರುವ ಕಾರಣ ಪಾಶುಪತಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯ ಬರಬೇಕಾಗುತ್ತದೆ.

ಅಪ್ರಾಮಾಣ್ಯ ಬರಲಿ ಎನ್ನಲು ಬರುವುದಿಲ್ಲ, ಕಾರಣ ಆ ಪಾಶುಪತಾದಿಸ್ಮೃತಿಗಳು ಆಪ್ತರಾದ ರುದ್ರಾದಿಗಳಿಂದ ವಿರಚಿತವಾದ್ದರಿಂದ ಅವುಗಳಿಗೆ ಅಪ್ರಾಮಾಣ್ಯವನ್ನು ಅಂಗೀಕರಿಸಲು ಸಾಧ್ಯವಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ इतरेषां चानुपलब्धेः ॐ (२.१.२)

**ಸೂತ್ರಾರ್ಥ** :– (ಅನುಪಲಬ್ಧೇಃ ಎನ್ನುವುದನ್ನು ಮತ್ತೊಮ್ಮೆ ಆವರ್ತನ ಮಾಡಿಕೊಳ್ಳಬೇಕು. ಚಶಬ್ದವು ಸ್ವಲ್ಪಫಲದ ಉಪಲಬ್ಧಿಯನ್ನು ಅಂಗೀಕರಿಸಿರುವುದನ್ನು ಸೂಚಿಸುತ್ತದೆ.) ಹಾಗಾದರೆ - ಇತರೇಷಾಂ = ಅನುಪಲಬ್ಧೇಃ (ಅತೀಂದ್ರಿಯಾತ್) ಭಿನ್ನಾನಾಂ = ಅತೀಂದ್ರಿಯವಾದ (ಅಲೌಕಿಕವಾದ) ಫಲಗಳಿಂದ ಭಿನ್ನವಾದ ಅರ್ಥಾತ್ ಪ್ರತ್ಯಕ್ಷಯೋಗ್ಯವಾದ ("ಫಲವು" "ಅನಿಷ್ಟಗಳೂ" ಎಂಬುದರ ಜೊತೆಗೆ ಇದಕ್ಕೆ ಅನ್ವಯ.) ಪಾಶುಪತಾದ್ಯುಕ್ತಫಲಾನಾಂ ಅನಿಷ್ಟಾನಾಂ ಚ ತದುಕ್ತಕ್ರಿಯಾನುಷ್ಠಾನ ಪರಿತ್ಯಾಗಯೋಃ ಕೃತಯೋಃ ಅಪಿ ಅನುಪಲಬ್ಧೇಃ = ಪ್ರತ್ಯಕ್ಷತೋಽದರ್ಶನಾತ್ ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದಾಗಲೂ ಅವುಗಳಲ್ಲಿ ಹೇಳಿದ ಫಲವು ಕಂಡಿಲ್ಲ (ಪ್ರತ್ಯಕ್ಷವಾಗಿ ಕಂಡಿಲ್ಲ) ಮತ್ತು ಪಾಶುಪತಾದಿಸ್ಮೃತಿಗಳಲ್ಲಿ ಹೇಳಿದ ಕ್ರಿಯಾನುಷ್ಠಾನಗಳನ್ನು ಪರಿತ್ಯಾಗ ಮಾಡಿದಾಗಲೂ ಅವುಗಳಿಂದ ಆಗಬೇಕಾದ ಅನಿಷ್ಟಗಳೂ ಕಂಡಿಲ್ಲ, ಆದ್ದರಿಂದ ತಾಸಾಂ ಅಪ್ರಾಮಾಣ್ಯಮೇವ ಯುಕ್ತಮ್ = ಅವುಗಳಿಗೆ (ಪಾಶುಪತಾದಿಸ್ಮೃತಿಗಳಿಗೆ) ಅಪ್ರಾಮಾಣ್ಯವೇ ಯುಕ್ತವಾಗಿದೆ.

### ಸಮಾಧಾನ

**ಸೂ.ರ.**:– एवं च शैवागमोक्तस्योपलब्धियोग्यस्य फलस्य तदुक्तानुष्ठाने कदाचिदुपलम्भेऽपि नियमेनानुपलम्भेनाप्तत्वानिश्चयात् । तथा च पाशुपतादिस्मृतीनामप्रामाण्यमेवेति सिद्धम् ॥

**ಅನು.**:– ಪಾಶುಪತಾದಿ ಶೈವಾಗಮಗಳಲ್ಲಿ ಹೇಳಿದ, ಪ್ರತ್ಯಕ್ಷಯೋಗ್ಯವಾದ ಫಲಗಳು ಅಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದಾಗ ಕೆಲವೊಮ್ಮೆ ಉಪಲಬ್ಧವಾದರೂ ನಿಯಮೇನ ಉಪಲಬ್ಧವಾಗದ ಕಾರಣ (ಅಲ್ಲಿ ಹೇಳಿದ ಅನುಷ್ಠಾನವನ್ನು ಮಾಡಿದಾಗಲೆಲ್ಲ ಫಲವು ನಿಯಮೇನ ಸಿಗುವುದಿಲ್ಲವಾದ್ದರಿಂದ), ಮತ್ತು ಅಲ್ಲಿ ಹೇಳಿದ ಅನುಷ್ಠಾನವನ್ನು ಪರಿತ್ಯಾಗ ಮಾಡಿದಾಗ ನಿಯಮೇನ ಅನಿಷ್ಟಗಳೂ ಆಗುವುದಿಲ್ಲವಾದ್ದರಿಂದ, ಅವುಗಳನ್ನು ರಚಿಸಿರುವ ರುದ್ರಾದಿಗಳಿಗೆ ಆಪ್ತತ್ವವನ್ನು ನಿಶ್ಚಯ ಮಾಡಲು ಆಗುವುದಿಲ್ಲ.

ಹೀಗಾಗಿ ಪಾಶುಪತಾದಿಸ್ಮೃತಿಗಳು ರುದ್ರಾದಿಗಳಿಂದ ವಿರಚಿತವಾದರೂ ಆಪ್ತ-ವಿರಚಿತವಾಗಿಲ್ಲವಾದ್ದರಿಂದ ಅವುಗಳಿಗೆ ಶ್ರುತಿವಿರೋಧದ ಕಾರಣ ಅಪ್ರಾಮಾಣ್ಯವನ್ನು ಹೇಳುವುದೇ ಯುಕ್ತ ಎಂದು ಸಿದ್ಧವಾಗುತ್ತದೆ.

ಸೂತ್ರ - 3

## ಆಕ್ಷೇಪ

**ಸೂ.ರ.:–** **ननु तथाऽपि न सर्वासामवैष्णवस्मृतीनामुक्तनिमित्ताद-प्रामाण्यम् । योगस्मृत्युक्तस्वेदनगात्रभञ्जनादिफलानां नियमेनोपलम्भात्ता-सामाप्तप्रणीतत्वनिश्चयोपपत्तेरिति प्राप्ते सूत्रं पठति ॥**

**ಅನು.:–** ತದುಕ್ತ ಅನುಷ್ಠಾನ ಮಾಡಿದರೂ ಫಲ ಕಂಡಿಲ್ಲ ಎಂಬ ಹಿಂದೆ ಹೇಳಿದ ನಿಮಿತ್ತದಿಂದ ಎಲ್ಲ ಅವೈಷ್ಣವಸ್ಮೃತಿಗಳಿಗೂ ಅಪ್ರಾಮಾಣ್ಯ ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ- ಯೋಗಸ್ಮೃತಿಗಳಲ್ಲಿ ಹೇಳಿದ ಸ್ವೇದನ-ಗಾತ್ರಭಂಜನಾದಿ ಫಲಗಳು ನಿಯಮೇನ ಉಪಲಬ್ಧವಾಗುವುದರಿಂದ ಅವುಗಳಿಗೆ ಆಪ್ತಪ್ರಣೀತತ್ವವನ್ನು ನಿಶ್ಚಯಿಸಲು ಬಂದೇ ಬರುತ್ತದೆ. ಅರ್ಥಾತ್ ಫಲದರ್ಶನ ನಿಮಿತ್ತದಿಂದಾಗಿ ಅವುಗಳಿಗೆ ಪ್ರಾಮಾಣ್ಯ ಹೇಳಲು ಬಂದೇ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ एतेन योगः प्रत्युक्तः ॐ (२.१.३)**

ಏತೇನ = ಫಲ ಅದರ್ಶನ ಎಂಬ ಪೂರ್ವೋಕ್ತ ಹೇತುವಿನಿಂದಲೇ ಯೋಗಃ = ಯೋಗಶಾಸ್ತ್ರವು ಪ್ರತ್ಯುಕ್ತಃ = ನಿರಸ್ತವಾಯಿತು.

## ಸಮಾಧಾನ

**ಸೂ.ರ.:–** **एवं च प्रथमं स्वेदनं द्वितीयं गात्रभञ्जनमित्याद्युक्ताभ्यासा-वस्थोत्कर्षसम्पत्तिकाल एव स्वेदनादीनामदृष्टत्वेनाप्तोक्तत्वानिश्चयात् । तथा च नियमेन फललम्भहेतोरसिद्ध्याऽऽप्तोक्तत्वनिश्चयासम्भवाद्योगस्मृतेर-प्रामाण्यमेवेति सर्वासामवैष्णवस्मृतीनां प्रामाण्याभावाद्विष्णोर्जगत्कारणत्वे न तद्विरोध इति सिद्धम् ॥**

**ಅನು.:**– ಮೊದಲು ಸ್ವೇದನ ಅನಂತರ ಗಾತ್ರಭಂಜನ. ಗಾತ್ರಭಂಜನ ಎಂದರೆ – ಕಾಮದಹನಾದ್ಯಾಸನೇಷು ಪಾದೋರ್ಧ್ವಭಾಗಾದೇರಧೋಭಾಗಾದೌ ಪ್ರಾಪಣಂ ಗಾತ್ರಭಂಜನಮಿತ್ಯುಚ್ಯತೇ । (ಗುರ್ವರ್ಥದೀಪಿಕಾ 2-1-1) ಈ ರೀತಿಯಾಗಿ ಯೋಗಶಾಸ್ತ್ರದಲ್ಲಿ ಹೇಳಿದ ಅಭ್ಯಾಸಾವಸ್ಥೆಯ ಉತ್ಕರ್ಷಸಂಪತ್ತಿಕಾಲದಲ್ಲಿಯೇ (ಅಭ್ಯಾಸ ಮಾಡುವ ಅವಸ್ಥೆಯ ಉತ್ಕರ್ಷವು ಸಂಪತ್ತಿಯು ಯಾವ ಕಾಲದಲ್ಲಿ ಆಗುವುದೋ ಆ ಕಾಲದಲ್ಲಿಯೇ) ಸ್ವೇದನಾದಿ ಫಲಗಳು ಕಂಡಿಲ್ಲವಾದ್ದರಿಂದ, ಈ ಯೋಗಶಾಸ್ತ್ರಗಳಿಗೆ ಆಪ್ತಪ್ರಣೀತತ್ವವು ನಿಶ್ಚಯವಾಗುವುದಿಲ್ಲ.

ಆದ್ದರಿಂದ ನಿಯಮೇನ ಫಲೋಪಲಬ್ಧಿಯು ಅಸಿದ್ಧವಾದ್ದರಿಂದ ಆಪ್ತಪ್ರಣೀತತ್ವವನ್ನು ನಿಶ್ಚಯಿಸಲು ಬಾರದ ಕಾರಣ ಯೋಗಸ್ಮೃತಿಗೆ ಅಪ್ರಾಮಾಣ್ಯವೇ ಉಪಪನ್ನವಾಗುತ್ತದೆ. ಹೀಗೆ ಎಲ್ಲ ಅವೈಷ್ಣವಸ್ಮೃತಿಗಳಿಗೂ ಪ್ರಾಮಾಣ್ಯ ಇಲ್ಲದ ಕಾರಣ (ಅಪ್ರಾಮಾಣ್ಯ ಇರುವುದರಿಂದ) ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಹೇಳಲು ಬರುವುದಿಲ್ಲ.

ಪರಂತು ಪರಮ ಆಪ್ತನಾದ, ಸರ್ವಜ್ಞತಮನಾದ ವಿಷ್ಣುವಿನಿಂದ ವಿರಚಿತವಾದ ಪಂಚರಾತ್ರಸ್ಮೃತಿಗಳಿಗೇ ಪ್ರಾಮಾಣ್ಯ ಕೂಡುತ್ತದೆ. ಇಂತಹ ಪಂಚರಾತ್ರಸ್ಮೃತಿಗಳ ಅನುಕೂಲ್ಯ ಇರುವುದರಿಂದ ಶ್ರುತಿಯು ಪ್ರಬಲವಾಗಿದೆ. ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ಪ್ರಬಲಶ್ರುತಿಗಳು ಪ್ರಮಾಣವಾಗಿ ಇರುವುದರಿಂದ ಹಿಂದೆ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸ್ಮೃತ್ಯಧಿಕರಣವು ಮುಗಿಯಿತು.

# ನ ವಿಲಕ್ಷಣತ್ವಾಧಿಕರಣ

## ಸಂಗತಿ

**ಸೂ.ರ.:– अत्र विष्णोर्जगत्कारणत्वे प्रमाणत्वेनोक्तवेदादिप्रामाण्ये युक्तिविरोधः परिह्रियते ।**

**ಅನು.:–** ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ ಪ್ರಮಾಣತ್ವೇನ ಉದಾಹೃತವಾದ ವೇದಾದಿಗಳ ಪ್ರಾಮಾಣ್ಯವಿಚಾರದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ ಈ ಎರಡನೇ ನವಿಲಕ್ಷಣತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु वेदा वैष्णवस्मृतयश्च न प्रमाणम् । तदुक्तानुष्ठानेऽपि फलानुपलम्भात् । यदि फलानुपलम्भेऽपि प्रामाण्यं तर्हि पाशुपतादि-स्मृतीनामपि फलानुपलम्भसाम्येऽपि वेदादेरेव प्रामाण्यं न पाशुपतादि-स्मृतीनामिति विभागहेतोरभावात् । ततश्च फलानुपलम्भेन वेदाद्येक-देशस्याप्रामाण्ये तदेकदेशान्तरप्रामाण्येऽनाश्वासान्न विष्णोर्जगत्कारणत्व-सिद्धिरिति प्राप्ते सूत्रितम् ॥**

**ಅನು.:–** ವೇದಗಳು ಹಾಗೂ ವೈಷ್ಣವಸ್ಮೃತಿಗಳು ಪ್ರಮಾಣ ಅಲ್ಲ. ಏಕೆಂದರೆ – ವೇದಾದಿಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದರೂ ಫಲವು ಉಪಲಬ್ಧವಾಗಿಲ್ಲ.

ಫಲವು ಉಪಲಬ್ಧವಾಗದಿದ್ದರೂ ಸಹ ಪ್ರಾಮಾಣ್ಯವನ್ನು ಅಂಗೀಕರಿಸುತ್ತೇವೆ ಎನ್ನುವುದು ಸರಿಯಲ್ಲ. ಪಾಶುಪತಾದಿಸ್ಮೃತಿಗಳಿಗೂ ಸಹ ಫಲಾನುಫಲಬ್ಧಿ ಎನ್ನುವುದು ಸಮಾನವೇ ಆಗಿದ್ದರಿಂದ ''ವೇದಾದಿಗಳಿಗೆ ಪ್ರಾಮಾಣ್ಯ ಇದೆ – ಪಾಶುಪತಾದಿಸ್ಮೃತಿಗಳಿಗೆ ಪ್ರಾಮಾಣ್ಯ ಇಲ್ಲ'' ಎಂಬುದಾಗಿ ವಿಭಾಗ ಮಾಡಲು ಪ್ರಯೋಜಕವಾದದ್ದು ಯಾವುದೂ ಇಲ್ಲವಾದ್ದರಿಂದ ಹಾಗೆ ಹೇಳಲು ಬರುವುದಿಲ್ಲ.

ಹಾಗಾಗಿ ಫಲಾನುಪಲಬ್ಧಿ ನಿಮಿತ್ತದಿಂದ ವೇದಾದಿ ಏಕದೇಶಭಾಗಕ್ಕೆ ಅಪ್ರಾಮಾಣ್ಯ ಬರುತ್ತಿರಲು, ಉಳಿದ ಏಕದೇಶಭಾಗದ ಪ್ರಾಮಾಣ್ಯವಿಷಯದಲ್ಲಿಯೂ ವಿಶ್ವಾಸ ಬಾರದ ಕಾರಣ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ವೇದಾದಿಗಳು ಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಮಾಣ ಇಲ್ಲದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ न विलक्षणत्वादस्य तथात्वं च शब्दात् ॐ (२.१.४)

**ಸೂತ್ರಾರ್ಥ** :- ಅಸ್ಯ = ಶ್ರುತಿ ಹಾಗೂ ತದನುಸಾರಿಯಾದ ಸ್ಮೃತ್ಯಾದಿಗಳಿಗೆ ನ = ಶೈವಾದಿಸ್ಮೃತಿಗಳಂತೆ ಅಪ್ರಾಮಾಣ್ಯ ಇಲ್ಲ. ಕುತಃ = ಯಾಕೆ? ವಿಲಕ್ಷಣತ್ವಾತ್ = ಸ್ವತಃ ಪ್ರಾಮಾಣ್ಯ ಎಂಬ ಇತರ ಪ್ರಮಾಣಗಳಿಂದ ವೈಲಕ್ಷಣ್ಯ ಇರುವುದರಿಂದ, ಕಿಂಚ = ಮತ್ತು ವಿಲಕ್ಷಣತ್ವಾತ್ = ಅಪೌರುಷೇಯತ್ವರೂಪವಾದ ವೈಲಕ್ಷಣ್ಯ ಇರುವುದರಿಂದ. ಇನ್ನು ಸ್ಮೃತೇಃ = ಪಂಚರಾತ್ರಾದಿ ವೈಷ್ಣವಸ್ಮೃತಿಗಳಿಗೆ ವಿಲಕ್ಷಣತ್ವಾತ್ = ಶ್ರುತ್ಯನುಸಾರಿತ್ವ ಎಂಬ ವೈಲಕ್ಷಣ್ಯ ಇರುವುದರಿಂದ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ.

ತಥಾತ್ವಂ ಚ = ಈ ವಿಧವಾದ ಅಪೌರುಷೇಯತ್ವಾದಿ ನಿಮಿತ್ತ ವೈಲಕ್ಷಣ್ಯವಾದರೂ ಶಬ್ದಾತ್ = ವಾಚಾ ವಿರೂಪ ನಿತ್ಯಯಾ (ಋ.8-64-6) ಎಂಬ ಆಗಮದಿಂದ ನಿಶ್ಚಿತವಾಗಿದೆ.

## ಸಿದ್ಧಾಂತ

**ಸೂ.ರ.:- एवं च प्रमाणमेव वेदादिकम् । अपौरुषेयत्वात्तदनुसारित्वाच्च । न चापौरुषेयत्वं कुत इति वाच्यम् । अपौरुषेयत्वस्य च प्रागेवोक्तसामान्यसिद्धिपरिशेषाभ्यां वाचा विरूप्येति श्रुत्या च सिद्धत्वात् । तथा च तेषां प्रमाणत्वेन विरोधाभावाद्विष्णोर्जगत्कारणत्वमिति सिद्धम् ॥**

**ಅನು.**:- ವೇದಗಳು ಅಪೌರುಷೇಯವಾದ್ದರಿಂದ ಹಾಗೂ ಪಂಚರಾತ್ರಾದಿ ವೈಷ್ಣವಸ್ಮೃತಿಗಳು ತದನುಸಾರಿಯಾಗಿದ್ದರಿಂದ (ಉಳಿದ ಪಾಶುಪತಾದಿ ಸ್ಮೃತಿಗಳಿಂದ ವೈಲಕ್ಷಣ್ಯ ಇರುವುದರಿಂದ) ಪ್ರಮಾಣವೇ ಆಗಿವೆ.

ವೇದಗಳಿಗೆ ಅಪೌರುಷೇಯತ್ವ ಇದ್ದರೆ ಆ ನಿಮಿತ್ತದಿಂದ ವೈಲಕ್ಷಣ್ಯ ಬರುತ್ತಿತ್ತು. ಆದರೆ

ವೇದಗಳಿಗೆ ಅಪೌರುಷೇಯತ್ವವೇ ಹೇಗೆ? ಎಂದರೆ, ಹಿಂದೆ ಹೇಳಿದ ಸಾಮಾನ್ಯಸಿದ್ಧಿ-ಪರಿಶೇಷಗಳಿಂದಾಗಿ ವೇದಗಳಿಗೆ ಅಪೌರುಷೇಯತ್ವವು ಸಿದ್ಧಿಸುತ್ತದೆ.

ಮತ್ತು "ವಾಚಾ ವಿರೂಪ ನಿತ್ಯಯಾ" (ಋ. 8-64-6) ಮೊದಲಾದ ಪ್ರಮಾಣಗಳು ವೇದಗಳಿಗೆ ಅಪೌರುಷೇಯತ್ವವನ್ನು ಹೇಳುತ್ತಿರುವುದರಿಂದ ವೇದಗಳಿಗೆ ಅಪೌರುಷೇಯತ್ವವು ಪ್ರಾಮಾಣಿಕವಾಗಿದೆ. ಅಂತಹ ಅಪೌರುಷೇಯವಾದ ವೇದಗಳಿಗೆ ಅನುಸಾರಿಯಾದ್ದರಿಂದ ಪಂಚರಾತ್ರಾದಿ ಸ್ಮೃತಿಗಳಿಗೂ ಪ್ರಾಮಾಣ್ಯ ಸಿದ್ಧವಾಗುತ್ತದೆ.

ಹೀಗೆ ವೇದಗಳು ಹಾಗೂ ವೈಷ್ಣವಸ್ಮೃತಿಗಳು ಪ್ರಮಾಣವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಯತೋ ವಾ ಇಮಾನಿ ಇತ್ಯಾದಿ ವೇದವಾಕ್ಯಗಳು ಪ್ರಮಾಣವಾಗುವುದರಿಂದ, ಯಾವ ವಿರೋಧವೂ ಬಾರದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಉಪಪನ್ನವೇ ಆಗುತ್ತದೆ.

### ಸೂತ್ರ - 5

### ಆಕ್ಷೇಪ

**ಸೂ.ರ.:– ननु श्रुत्यादेः स्वतः प्रामाण्यवादिनाऽपि दोषदर्शनेऽप्रामाण्यस्यावश्यं ग्राह्यत्वात् । वेदेऽपि, प्रत्येक्षवेद्य । दर्शनाद्दोषादप्रामाण्यमेव वक्तव्यमिति प्राप्ते सूत्रं पठति ॥**

**ಅನು.:–** ಶ್ರುತ್ಯಾದಿಗಳಿಗೆ ಸ್ವತಃ ಪ್ರಾಮಾಣ್ಯವನ್ನು ಅಂಗೀಕರಿಸುವ ವಾದಿಗಳೂ ಸಹ ಶ್ರುತ್ಯಾದಿಗಳಿಗೆ ದೋಷ ಕಂಡರೆ ಅಪ್ರಾಮಾಣ್ಯವನ್ನು ಒಪ್ಪಲೇಬೇಕಾಗುತ್ತದೆ. ಪ್ರಕೃತದಲ್ಲಿ ವೇದಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದರೂ ಸಹ ಫಲವು ಸಿಗುವುದಿಲ್ಲವಾದ್ದರಿಂದ, ಫಲ ಅದರ್ಶನ ರೂಪವಾದ ದೋಷವು ವೇದಗಳಲ್ಲಿ ಇರುವುದರಿಂದ ವೇದಗಳಿಗೂ ಅಪ್ರಾಮಾಣ್ಯವನ್ನೇ ಹೇಳಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ–

### ॐ दृश्यते तु ॐ (२.१.५)

**ಅನು.:–** ತುಶಬ್ದವು ವಿಶೇಷ ಎಂಬ ಅರ್ಥದಲ್ಲಿದೆ. ಯತಃ = ಯಾವ ಕಾರಣ ತತ್ಫಲಯೋಗ್ಯಾಧಿಕಾರಿವಿಶೇಷಾಣಾಂ ತು = ಶ್ರುತ್ಯುಕ್ತಫಲವನ್ನು ಹೊಂದಲು ಯೋಗ್ಯರಾದ ವಿಶೇಷ ಅಧಿಕಾರಿಗಳಿಗೆ ಶ್ರುತ್ಯಾದ್ಯುಕ್ತಂ ಫಲಂ = ಶ್ರುತ್ಯಾದಿಗಳಲ್ಲಿ ಹೇಳಿದ ಫಲವು ದೃಶ್ಯತೇ = ಉಪಲಬ್ಧವಾಗುತ್ತದೆಯೋ ಅತಃ = ಆ ಕಾರಣ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ

ಹಾಗಾಗಿ ಫಲಾನುಪಲಬ್ಧಿ ನಿಮಿತ್ತದಿಂದ ವೇದಾದಿ ಏಕದೇಶಭಾಗಕ್ಕೆ ಅಪ್ರಾಮಾಣ್ಯ ಬರುತ್ತಿರಲು, ಉಳಿದ ಏಕದೇಶಭಾಗದ ಪ್ರಾಮಾಣ್ಯವಿಷಯದಲ್ಲಿಯೂ ವಿಶ್ವಾಸ ಬಾರದ ಕಾರಣ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ವೇದಾದಿಗಳು ಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಮಾಣ ಇಲ್ಲದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न विलक्षणत्वादस्य तथात्वं च शब्दात् ॐ (२.१.४)**

**ಸೂತ್ರಾರ್ಥ :–** ಅಸ್ಯ = ಶ್ರುತಿ ಹಾಗೂ ತದನುಸಾರಿಯಾದ ಸ್ಮೃತ್ಯಾದಿಗಳಿಗೆ ನ = ಶೈವಾದಿಸ್ಮೃತಿಗಳಂತೆ ಅಪ್ರಾಮಾಣ್ಯ ಇಲ್ಲ. ಕುತಃ = ಯಾಕೆ? ವಿಲಕ್ಷಣತ್ವಾತ್ = ಸ್ವತಃ ಪ್ರಾಮಾಣ್ಯ ಎಂಬ ಇತರ ಪ್ರಮಾಣಗಳಿಂದ ವೈಲಕ್ಷಣ್ಯ ಇರುವುದರಿಂದ, ಕಿಂಚ = ಮತ್ತು ವಿಲಕ್ಷಣತ್ವಾತ್ = ಅಪೌರುಷೇಯತ್ವರೂಪವಾದ ವೈಲಕ್ಷಣ್ಯ ಇರುವುದರಿಂದ. ಇನ್ನು ಸ್ಮೃತೇಃ = ಪಂಚರಾತ್ರಾದಿ ವೈಷ್ಣವಸ್ಮೃತಿಗಳಿಗೆ ವಿಲಕ್ಷಣತ್ವಾತ್ = ಶ್ರುತ್ಯನುಸಾರಿತ್ವ ಎಂಬ ವೈಲಕ್ಷಣ್ಯ ಇರುವುದರಿಂದ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ.

ತಥಾತ್ವಂ ಚ = ಈ ವಿಧವಾದ ಅಪೌರುಷೇಯತ್ವಾದಿ ನಿಮಿತ್ತ ವೈಲಕ್ಷಣ್ಯವಾದರೂ ಶಬ್ದಾತ್ = ವಾಚಾ ವಿರೂಪ ನಿತ್ಯಯಾ (ಋ.8-64-6) ಎಂಬ ಆಗಮದಿಂದ ನಿಶ್ಚಿತವಾಗಿದೆ.

## ಸಿದ್ಧಾಂತ

**ಸೂ.ರ.:– एवं च प्रमाणमेव वेदादिकम् । अपौरुषेयत्वात्तदनुसारित्वाच्च । न चापौरुषेयत्वं कुत इति वाच्यम् । अपौरुषेयत्वस्य च प्रागेवोक्तसामान्यसिद्धिपरिशेषाभ्यां वाचा विरूप्येति श्रुत्या च सिद्धत्वात् । तथा च तेषां प्रमाणत्वेन विरोधाभावाद्विष्णोर्जगत्कारणत्वमिति सिद्धम् ॥**

**ಅನು.:–** ವೇದಗಳು ಅಪೌರುಷೇಯವಾದ್ದರಿಂದ ಹಾಗೂ ಪಂಚರಾತ್ರಾದಿ ವೈಷ್ಣವಸ್ಮೃತಿಗಳು ತದನುಸಾರಿಯಾಗಿದ್ದರಿಂದ (ಉಳಿದ ಪಾಶುಪತಾದಿ ಸ್ಮೃತಿಗಳಿಂದ ವೈಲಕ್ಷಣ್ಯ ಇರುವುದರಿಂದ) ಪ್ರಮಾಣವೇ ಆಗಿವೆ.

ವೇದಗಳಿಗೆ ಅಪೌರುಷೇಯತ್ವ ಇದ್ದರೆ ಆ ನಿಮಿತ್ತದಿಂದ ವೈಲಕ್ಷಣ್ಯ ಬರುತ್ತಿತ್ತು. ಆದರೆ

ವೇದಗಳಿಗೆ ಅಪೌರುಷೇಯತ್ವವೇ ಹೇಗೆ? ಎಂದರೆ, ಹಿಂದೆ ಹೇಳಿದ ಸಾಮಾನ್ಯಸಿದ್ಧಿ-ಪರಿಶೇಷಗಳಿಂದಾಗಿ ವೇದಗಳಿಗೆ ಅಪೌರುಷೇಯತ್ವವು ಸಿದ್ಧಿಸುತ್ತದೆ.

ಮತ್ತು "ವಾಚಾ ವಿರೂಪ ನಿತ್ಯಯಾ" (ಋ. 8-64-6) ಮೊದಲಾದ ಪ್ರಮಾಣಗಳು ವೇದಗಳಿಗೆ ಅಪೌರುಷೇಯತ್ವವನ್ನು ಹೇಳುತ್ತಿರುವುದರಿಂದ ವೇದಗಳಿಗೆ ಅಪೌರುಷೇಯತ್ವವು ಪ್ರಾಮಾಣಿಕವಾಗಿದೆ. ಅಂತಹ ಅಪೌರುಷೇಯವಾದ ವೇದಗಳಿಗೆ ಅನುಸಾರಿಯಾದ್ದರಿಂದ ಪಂಚರಾತ್ರಾದಿ ಸ್ಮೃತಿಗಳಿಗೂ ಪ್ರಾಮಾಣ್ಯ ಸಿದ್ಧವಾಗುತ್ತದೆ.

ಹೀಗೆ ವೇದಗಳು ಹಾಗೂ ವೈಷ್ಣವಸ್ಮೃತಿಗಳು ಪ್ರಮಾಣವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಯತೋ ವಾ ಇಮಾನಿ ಇತ್ಯಾದಿ ವೇದವಾಕ್ಯಗಳು ಪ್ರಮಾಣವಾಗುವುದರಿಂದ, ಯಾವ ವಿರೋಧವೂ ಬಾರದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಉಪಪನ್ನವೇ ಆಗುತ್ತದೆ.

### ಸೂತ್ರ - 5

### ಆಕ್ಷೇಪ

**ಸೂ.ರ.:– ननु श्रुत्यादेः स्वतः प्रामाण्यवादिनाऽपि दोषदर्शनेऽप्रामाण्यस्यावश्यं ग्राह्यत्वात् । वेदेऽपि, प्रत्येक्षवेद्य । दर्शनाद्दोषादप्रामाण्यमेव वक्तव्यमिति प्राप्ते सूत्रं पठति ॥**

**ಅನು.:–** ಶ್ರುತ್ಯಾದಿಗಳಿಗೆ ಸ್ವತಃ ಪ್ರಾಮಾಣ್ಯವನ್ನು ಅಂಗೀಕರಿಸುವ ವಾದಿಗಳೂ ಸಹ ಶ್ರುತ್ಯಾದಿಗಳಿಗೆ ದೋಷ ಕಂಡರೆ ಅಪ್ರಾಮಾಣ್ಯವನ್ನು ಒಪ್ಪಲೇಬೇಕಾಗುತ್ತದೆ. ಪ್ರಕೃತದಲ್ಲಿ ವೇದಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದರೂ ಸಹ ಫಲವು ಸಿಗುವುದಿಲ್ಲವಾದ್ದರಿಂದ, ಫಲ ಅದರ್ಶನ ರೂಪವಾದ ದೋಷವು ವೇದಗಳಲ್ಲಿ ಇರುವುದರಿಂದ ವೇದಗಳಿಗೂ ಅಪ್ರಾಮಾಣ್ಯವನ್ನೇ ಹೇಳಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ–

### ॐ दृश्यते तु ॐ (२.१.५)

**ಅನು.:–** ತುಶಬ್ದವು ವಿಶೇಷ ಎಂಬ ಅರ್ಥದಲ್ಲಿದೆ. ಯತಃ = ಯಾವ ಕಾರಣ ತತ್ಫಲಯೋಗ್ಯಾಧಿಕಾರಿವಿಶೇಷಾಣಾಂ ತು = ಶ್ರುತ್ಯುಕ್ತಫಲವನ್ನು ಹೊಂದಲು ಯೋಗ್ಯರಾದ ವಿಶೇಷ ಅಧಿಕಾರಿಗಳಿಗೆ ಶ್ರುತ್ಯಾದ್ಯುಕ್ತಂ ಫಲಂ = ಶ್ರುತ್ಯಾದಿಗಳಲ್ಲಿ ಹೇಳಿದ ಫಲವು ದೃಶ್ಯತೇ =ಉಪಲಬ್ಧವಾಗುತ್ತದೆಯೋ ಅತಃ = ಆ ಕಾರಣ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ

ಹಾಗಾಗಿ ಫಲಾನುಪಲಬ್ಧಿ ನಿಮಿತ್ತದಿಂದ ವೇದಾದಿ ಏಕದೇಶಭಾಗಕ್ಕೆ ಅಪ್ರಾಮಾಣ್ಯ ಬರುತ್ತಿರಲು, ಉಳಿದ ಏಕದೇಶಭಾಗದ ಪ್ರಾಮಾಣ್ಯವಿಷಯದಲ್ಲಿಯೂ ವಿಶ್ವಾಸ ಬಾರದ ಕಾರಣ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ವೇದಾದಿಗಳು ಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಮಾಣ ಇಲ್ಲದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न विलक्षणत्वादस्य तथात्वं च शब्दात् ॐ (२.१.४)**

**ಸೂತ್ರಾರ್ಥ** :– ಅಸ್ಯ = ಶ್ರುತಿ ಹಾಗೂ ತದನುಸಾರಿಯಾದ ಸ್ಮೃತ್ಯಾದಿಗಳಿಗೆ ನ = ಶೈವಾದಿಸ್ಮೃತಿಗಳಂತೆ ಅಪ್ರಾಮಾಣ್ಯ ಇಲ್ಲ. ಕುತಃ = ಯಾಕೆ? ವಿಲಕ್ಷಣತ್ವಾತ್ = ಸ್ವತಃ ಪ್ರಾಮಾಣ್ಯ ಎಂಬ ಇತರ ಪ್ರಮಾಣಗಳಿಂದ ವೈಲಕ್ಷಣ್ಯ ಇರುವುದರಿಂದ, ಕಿಂಚ = ಮತ್ತು ವಿಲಕ್ಷಣತ್ವಾತ್ = ಅಪೌರುಷೇಯತ್ವರೂಪವಾದ ವೈಲಕ್ಷಣ್ಯ ಇರುವುದರಿಂದ. ಇನ್ನು ಸ್ಮೃತೇಃ = ಪಂಚರಾತ್ರಾದಿ ವೈಷ್ಣವಸ್ಮೃತಿಗಳಿಗೆ ವಿಲಕ್ಷಣತ್ವಾತ್ = ಶ್ರುತ್ಯನುಸಾರಿತ್ವ ಎಂಬ ವೈಲಕ್ಷಣ್ಯ ಇರುವುದರಿಂದ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ.

ತಥಾತ್ವಂ ಚ = ಈ ವಿಧವಾದ ಅಪೌರುಷೇಯತ್ವಾದಿ ನಿಮಿತ್ತ ವೈಲಕ್ಷಣ್ಯವಾದರೂ ಶಬ್ದಾತ್ = ವಾಚಾ ವಿರೂಪ ನಿತ್ಯಯಾ (ಋ.8-64-6) ಎಂಬ ಆಗಮದಿಂದ ನಿಶ್ಚಿತವಾಗಿದೆ.

## ಸಿದ್ಧಾಂತ

**ಸೂ.ರ.:– एवं च प्रमाणमेव वेदादिकम् । अपौरुषेयत्वात्तदनुसारित्वाच्च । न चापौरुषेयत्वं कुत इति वाच्यम् । अपौरुषेयत्वस्य च प्रागेवोक्तसामान्यसिद्धिपरिशेषाभ्यां वाचा विरूप्येति श्रुत्या च सिद्धत्वात् । तथा च तेषां प्रमाणत्वेन विरोधाभावाद्विष्णोर्जगत्कारणत्वमिति सिद्धम् ॥**

**ಅನು.**:– ವೇದಗಳು ಅಪೌರುಷೇಯವಾದ್ದರಿಂದ ಹಾಗೂ ಪಂಚರಾತ್ರಾದಿ ವೈಷ್ಣವಸ್ಮೃತಿಗಳು ತದನುಸಾರಿಯಾಗಿದ್ದರಿಂದ (ಉಳಿದ ಪಾಶುಪತಾದಿ ಸ್ಮೃತಿಗಳಿಂದ ವೈಲಕ್ಷಣ್ಯ ಇರುವುದರಿಂದ) ಪ್ರಮಾಣವೇ ಆಗಿವೆ.

ವೇದಗಳಿಗೆ ಅಪೌರುಷೇಯತ್ವ ಇದ್ದರೆ ಆ ನಿಮಿತ್ತದಿಂದ ವೈಲಕ್ಷಣ್ಯ ಬರುತ್ತಿತ್ತು. ಆದರೆ

ವೇದಗಳಿಗೆ ಅಪೌರುಷೇಯತ್ವವೇ ಹೇಗೆ? ಎಂದರೆ, ಹಿಂದೆ ಹೇಳಿದ ಸಾಮಾನ್ಯಸಿದ್ಧಿ-ಪರಿಶೇಷಗಳಿಂದಾಗಿ ವೇದಗಳಿಗೆ ಅಪೌರುಷೇಯತ್ವವು ಸಿದ್ಧಿಸುತ್ತದೆ.

ಮತ್ತು "ವಾಚಾ ವಿರೂಪ ನಿತ್ಯಯಾ" (ಋ. 8-64-6) ಮೊದಲಾದ ಪ್ರಮಾಣಗಳು ವೇದಗಳಿಗೆ ಅಪೌರುಷೇಯತ್ವವನ್ನು ಹೇಳುತ್ತಿರುವುದರಿಂದ ವೇದಗಳಿಗೆ ಅಪೌರುಷೇಯತ್ವವು ಪ್ರಾಮಾಣಿಕವಾಗಿದೆ. ಅಂತಹ ಅಪೌರುಷೇಯವಾದ ವೇದಗಳಿಗೆ ಅನುಸಾರಿಯಾದ್ದರಿಂದ ಪಂಚರಾತ್ರಾದಿ ಸ್ಮೃತಿಗಳಿಗೂ ಪ್ರಾಮಾಣ್ಯ ಸಿದ್ಧವಾಗುತ್ತದೆ.

ಹೀಗೆ ವೇದಗಳು ಹಾಗೂ ವೈಷ್ಣವಸ್ಮೃತಿಗಳು ಪ್ರಮಾಣವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಯತೋ ವಾ ಇಮಾನಿ ಇತ್ಯಾದಿ ವೇದವಾಕ್ಯಗಳು ಪ್ರಮಾಣವಾಗುವುದರಿಂದ, ಯಾವ ವಿರೋಧವೂ ಬಾರದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವು ಉಪಪನ್ನವೇ ಆಗುತ್ತದೆ.

ಸೂತ್ರ - 5

## ಆಕ್ಷೇಪ

**ಸೂ.ರ.:– ननु श्रुत्यादेः स्वतः प्रामाण्यवादिनाऽपि दोषदर्शनेऽप्रामाण्यस्यावश्यं ग्राह्यत्वात् । वेदेऽपि, प्रत्यक्षवेद्य । दर्शनाद्दोषादप्रामाण्यमेव वक्तव्यमिति प्राप्ते सूत्रं पठति ॥**

**ಅನು.:–** ಶ್ರುತ್ಯಾದಿಗಳಿಗೆ ಸ್ವತಃ ಪ್ರಾಮಾಣ್ಯವನ್ನು ಅಂಗೀಕರಿಸುವ ವಾದಿಗಳೂ ಸಹ ಶ್ರುತ್ಯಾದಿಗಳಿಗೆ ದೋಷ ಕಂಡರೆ ಅಪ್ರಾಮಾಣ್ಯವನ್ನು ಒಪ್ಪಲೇಬೇಕಾಗುತ್ತದೆ. ಪ್ರಕೃತದಲ್ಲಿ ವೇದಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದರೂ ಸಹ ಫಲವು ಸಿಗುವುದಿಲ್ಲವಾದ್ದರಿಂದ, ಫಲ ಅದರ್ಶನ ರೂಪವಾದ ದೋಷವು ವೇದಗಳಲ್ಲಿ ಇರುವುದರಿಂದ ವೇದಗಳಿಗೂ ಅಪ್ರಾಮಾಣ್ಯವನ್ನೇ ಹೇಳಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೇಳುತ್ತಾರೆ–

## ॐ दृश्यते तु ॐ (२.१.५)

**ಅನು.:–** ತುಶಬ್ದವು ವಿಶೇಷ ಎಂಬ ಅರ್ಥದಲ್ಲಿದೆ. ಯತಃ = ಯಾವ ಕಾರಣ ತತ್ಫಲಯೋಗ್ಯಾಧಿಕಾರಿವಿಶೇಷಾಣಾಂ ತು = ಶ್ರುತ್ಯುಕ್ತಫಲವನ್ನು ಹೊಂದಲು ಯೋಗ್ಯರಾದ ವಿಶೇಷ ಅಧಿಕಾರಿಗಳಿಗೆ ಶ್ರುತ್ಯಾದ್ಯುಕ್ತಂ ಫಲಂ = ಶ್ರುತ್ಯಾದಿಗಳಲ್ಲಿ ಹೇಳಿದ ಫಲವು ದೃಶ್ಯತೇ =ಉಪಲಬ್ಧವಾಗುತ್ತದೆಯೋ ಅತಃ = ಆ ಕಾರಣ ನ ಅಪ್ರಾಮಾಣ್ಯಂ = ಅಪ್ರಾಮಾಣ್ಯ ಇಲ್ಲ

**ಸೂ.ರ.:– एवं चाधिकारिणां फलोपलम्भेन फलानुपलम्भस्य कर्तृवैगुण्यादिनोपपत्तेः । फलविसंवादस्यान्यथासिद्धत्वात् । अवैष्णव-स्मृतीनां पाशुपतादीनामनुपलभ्यमानफलसाधनत्वस्योक्तत्वेन प्रामाण्य-भावस्य निश्चितत्वात् । वेदप्रामाण्यस्य युक्तिविरोधाभावेन तेन जगत्कारणत्वं हरेर्युक्तमिति सिद्धम् ॥**

**ಅನು.:–** ಶ್ರುತ್ಯುಕ್ತವಾದ ಫಲವನ್ನು ಹೊಂದಲು ಯೋಗ್ಯರಾದ ಅಧಿಕಾರಿಗಳು ವೇದೋಕ್ತಕ್ರಿಯಾನುಷ್ಠಾನ ಮಾಡುವುದರಿಂದ ಫಲವನ್ನು ಪಡೆಯುತ್ತಿದ್ದಾರೆ. ಆದ್ದರಿಂದ ಫಲ ಸಿಕ್ಕಿಲ್ಲ ಎನ್ನುವುದು ಸರಿಯಲ್ಲ.

ಕೆಲವು ಅಧಿಕಾರಿಗಳಿಗೆ ಸಿಕ್ಕರೂ ಸಹ ಮತ್ತೆ ಕೆಲವರಿಗೆ ಫಲ ಸಿಗುವುದಿಲ್ಲವಲ್ಲ? ಎಂದರೆ, ಅಲ್ಲಿ ಫಲ ಅನುಪಲಬ್ಧಿಯು ವೇದಗಳ ಅಪ್ರಾಮಾಣ್ಯದಿಂದಾಗಿ ಅಲ್ಲ. ಪರಂತು ಕರ್ತೃವೈಗುಣ್ಯಾದಿ ನಿಮಿತ್ತಕವಾಗಿದೆ. (ಸರಿಯಾಗಿ ಕರ್ಮ ಮಾಡದಿರುವುದು ಮೊದಲಾದ ಕರ್ತೃವಿನಲ್ಲಿರುವ ದೋಷಗಳಿಂದಾಗಿ ಫಲಾನುಪಲಬ್ಧಿ ಕಾಣುತ್ತದೆ.) ಹಾಗಾಗಿ ಫಲವಿಸಂವಾದವು ಅನ್ಯಥಾಸಿದ್ಧವಾಗಿದೆ.

ಇನ್ನು ಪಾಶುಪತಾದಿ ಅವೈಷ್ಣವಸ್ಮೃತಿಗಳಿಗೆ ಅನುಪಲಭ್ಯಮಾನ ಫಲಸಾಧನತ್ವವನ್ನು ಉಪಪಾದನೆ ಮಾಡಿದ್ದರಿಂದ (ಅವೈಷ್ಣವಸ್ಮೃತಿಗಳಲ್ಲಿ ಹೇಳಿದ ಕ್ರಿಯಾನುಷ್ಠಾನ ಮಾಡಿದರೂ ಫಲವು ಉಪಲಬ್ಧವಾಗುವುದಿಲ್ಲವಾದ್ದರಿಂದ ಅವುಗಳು ಅನುಪಲಭ್ಯಮಾನ-ಫಲಸಾಧನವಾಗಿವೆ ಎಂದು ಹಿಂದೆ ಸಮರ್ಥಿಸಿದ್ದರಿಂದ) ಅವೈಷ್ಣವ ಸ್ಮೃತಿಗಳಿಗೆ ಪ್ರಾಮಾಣ್ಯಾಭಾವವು ನಿಶ್ಚಿತವಾಗಿದೆ.

ಹೀಗೆ ಅವೈಷ್ಣವಸ್ಮೃತಿಗಳಿಗೆ ಪ್ರಾಮಾಣ್ಯಾಭಾವವು ನಿಶ್ಚಿತವಾದ್ದರಿಂದ ವೇದಪ್ರಾಮಾಣ್ಯಕ್ಕೆ ಆ ಪಾಶುಪತಾದಿಸ್ಮೃತಿವಿರೋಧವು ಬರುವುದಿಲ್ಲವಾದ್ದರಿಂದ ವಿಷ್ಣುವಿನ ಜಗತ್ಕಾರಣತ್ವ-ವಿಷಯದಲ್ಲಿ ವೇದಗಳು - ಪಂಚರಾತ್ರಾದಿ ಸ್ಮೃತಿಗಳು ಪ್ರಮಾಣವಾಗುವುದರಿಂದ ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ಪ್ರಮಾಣಾನುಸಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹಿಂದೆ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ನ ವಿಲಕ್ಷಣತ್ವಾಧಿಕರಣವು ಮುಗಿಯಿತು.

ಅಧಿಕರಣ – 3

# ಅಭಿಮಾನ್ಯಧಿಕರಣ

## ಸಂಗತಿ

**ಸೂ.ರ.:– अत्र विष्णोर्जगत्कर्तृत्वप्रतिपादकवेदप्रामाण्यरूपोक्तार्थे दृढयुक्त्यविरोध उच्यते ।**

**ಅನು.:–** ವಿಷ್ಣುವಿಗೆ ಜಗತ್ಕರ್ತೃತ್ವಪ್ರತಿಪಾದಕವಾದ ವೇದಗಳ ಪ್ರಾಮಾಣ್ಯರೂಪವಾದ ಹಿಂದಿನ ಅರ್ಥದಲ್ಲಿ ದೃಢಯುಕ್ತಿವಿರೋಧವನ್ನು ಪರಿಹರಿಸುತ್ತಾರೆ ಈ ಮೂರನೇ ಅಭಿಮಾನ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न वेदः प्रमाणम् । मृदब्रवीत् (श.ब्रा. ६-१-३) इत्यादिनाऽभिहितमृदादिवक्तृत्वादेर्मृन्न वदति जडत्वादित्यादियुक्ति-विरुद्धत्वात् ।**

**ಅನು.:–** ವೇದವು ಪ್ರಮಾಣವಾಗಲು ಸಾಧ್ಯವಿಲ್ಲ. ಏಕೆಂದರೆ – 'ಮೃದಬ್ರವೀತ್' 'ಆಪೋಽಬ್ರುವನ್' 'ತಾ ಆಪ ಐಕ್ಷಂತ' 'ತತ್ತೇಜ ಐಕ್ಷತ' 'ಓಷಧಯಃ ಸಂವದಂತೇ' ಇತ್ಯಾದಿಯಾಗಿ ಮೃದಾದಿಗಳಿಗೆ ವಕ್ತೃತ್ವಾದಿಗಳನ್ನು ಹೇಳುತ್ತಿದೆ ವೇದ. ಆದರೆ ಆ ಮೃದಾದಿ-ವಕ್ತೃತ್ವಾದಿಗಳು ಮೃತ್ ನ (ವಕ್ತ್ರೀ) ವದತಿ ಜಡತ್ವಾತ್ ಇತ್ಯಾದಿ ಯುಕ್ತಿವಿರುದ್ಧವಾದ್ದರಿಂದ, ಮೃದಾದಿವಕ್ತೃತ್ವಾದಿಗಳು ಅಸತ್ ಆಗಿವೆ. ಅಂತಹ ಅಸದಭಿಧಾಯಕವಾದ ವೇದವು ಅಪ್ರಮಾಣವೇ ಆಗುತ್ತದೆ.

**ಸೂ.ರ.:– वेदैकदेशस्याप्रामाण्ये वेदप्रामाण्यसाधकस्यापौरुषेयत्वस्य तत्रैव व्यभिचारादाभासत्वेनासाधकत्वात् ।**

**ಅನು.:–** ಯಾವಾಗ ಮೃದಬ್ರವೀತ್ ಮೊದಲಾದ ವೇದೈಕದೇಶಕ್ಕೆ ಅಪ್ರಾಮಾಣ್ಯ ಬರುತ್ತದೆ ಆಗ ವೇದಃ ಪ್ರಮಾಣಂ ಅಪೌರುಷೇಯತ್ವಾತ್ ಎಂಬ ಅನುಮಾನಕ್ಕೆ ಅಪ್ರಮಾಣಭೂತವಾದ ಆ ಏಕದೇಶದಲ್ಲಿಯೇ ವ್ಯಭಿಚಾರ ಬರುವುದರಿಂದ

ಅಪೌರುಷೇಯತ್ವಹೇತುವು ಆಭಾಸವಾಗುವ ಕಾರಣ ವೇದಪ್ರಾಮಾಣ್ಯಕ್ಕೆ ಸಾಧಕವಾಗುವುದಿಲ್ಲ.

**ಸೂ.ರ.:– युक्त्यविरोधाय श्रुतेरन्यार्थकल्पनाऽयोगात् । अभिमानि-देवतैकदेशे सति विग्रहवत्त्वे उपलम्भप्रसङ्गात् । विग्रहाभावे वचनाद्य-योगात् । देवताऽभावे तद्रहितदेशवद्देशान्तरोपपत्तौ तद्वैयर्थ्यप्रसङ्गात् । देवतासद्भावे प्रमाणाभावात् । श्रुतेरविश्वसनीयत्वादिति प्राप्ते सूत्रितम् ॥**

**ಅನು.:–** ಮೃದಬ್ರವೀತ್ ಮೊದಲಾದ ಶ್ರುತಿಗಳು ಜಡವಾದ ಮೃದಾದಿಗಳಿಗೇ ವಕ್ತೃತ್ವಾದಿಗಳನ್ನು ಹೇಳುತ್ತಿಲ್ಲ. ಕಿಂತು ಆ ಮೃದಾದಿ ಜಡಪದಾರ್ಥಗಳಿಗೆ ಅಭಿಮಾನಿ-ದೇವತೆಗಳು ಯಾರು ಇದ್ದಾರೆ ಅವರಿಗೆ ವಕ್ತೃತ್ವಾದಿಗಳನ್ನು ಹೇಳುತ್ತಿವೆ. ಹೀಗೆ ಶ್ರುತಿಗಳಿಗೆ ಅಭಿಮಾನಿದೇವತಾಪರತ್ವವನ್ನು ಅಂಗೀಕರಿಸುವುದರಿಂದ ಯುಕ್ತಿವಿರೋಧ ಬರುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ಏಕೆಂದರೆ – ಯುಕ್ತಿವಿರೋಧಪರಿಹಾರಕ್ಕಾಗಿ ಶ್ರುತಿಗಳಿಗೆ ಅನ್ಯಾರ್ಥಕಲ್ಪನಾ ಮಾಡುವುದು ಸರಿಯಲ್ಲ. ಕಾರಣ – ಅಭಿಮಾನಿದೇವತೆಗಳಿಗೆ ದೇಹ ಇರುವುದಾದರೆ ನಮಗೆ ಕಾಣಿಸಬೇಕಿತ್ತು. ದೇಹ ಇಲ್ಲ ಎನ್ನುವುದಾದರೆ ವಚನಾದಿಗಳು ಕೂಡುವುದಿಲ್ಲ. ಮತ್ತು ದೇವತೆಗಳು ಇಲ್ಲ ಎನ್ನುವುದಾದರೆ ಅಭಿಮಾನಿದೇವತೆಗಳಿಂದ ರಹಿತವಾದ ದೇಶವು ಹೇಗೆ ಉಪಪನ್ನವಾಗುವುದೋ ಅದೇ ರೀತಿಯಾಗಿ ಉಳಿದ ದೇಶವೂ ದೇವತೆಗಳಿಲ್ಲದೇ ಉಪಪನ್ನವಾಗುವುದರಿಂದ ವೈಯರ್ಥ್ಯ ಬರುತ್ತದೆ. ಅಷ್ಟೇ ಅಲ್ಲದೇ ಅಭಿಮಾನಿದೇವತೆಗಳು ಇದ್ದಾರೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಶ್ರುತಿಗಳೇ ಪ್ರಮಾಣವಾಗಿವೆ ಎಂದರೆ ಅದು ಸರಿಯಲ್ಲ. ಶ್ರುತಿಗಳು ವಿಶ್ವಸನೀಯವಾಗಿಲ್ಲ.

ಆದ್ದರಿಂದ ಶ್ರುತಿಗಳಲ್ಲಿರುವ ಮೃದಾದಿಪದಗಳಿಗೆ ಅಭಿಮಾನಿದೇವತಾಪರತ್ವವನ್ನು ಅಂಗೀಕರಿಸಲು ಬಾರದ ಕಾರಣ ಜಡವಾದ ಮೃದಾದಿಗಳಿಗೇ ವಕ್ತೃತ್ವಾದಿಗಳನ್ನು ಹೇಳಬೇಕು. ಹಾಗೆ ಜಡವಾದ ಮೃದಾದಿಗಳಿಗೇ ವಕ್ತೃತ್ವಾದಿಗಳನ್ನು ಹೇಳಿದರೆ ಮೃತ್ ನ ವಕ್ತ್ರೀ ಜಡತ್ವಾತ್ ಎಂಬ ಯುಕ್ತಿವಿರೋಧ ಬರುವುದರಿಂದ, ವೇದಗಳು ಅಪ್ರಮಾಣವೇ ಆಗುತ್ತವೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अभिमानिव्यपदेशस्तु विशेषानुगतिभ्यां ॐ (२.१.६)**

**ಸೂತ್ರಾರ್ಥ** :– (ತುಶಬ್ದವು ಅವಧಾರಣಾರ್ಥದಲ್ಲಿದೆ) ಅಭಿಮಾನಿವ್ಯಪದೇಶಃ (ತು) ಏವ = ಮೃದಬ್ರವೀತ್ ಇತ್ಯಾದಿಗಳಲ್ಲಿ ಅಭಿಮಾನಿಯಾದ (ಚೇತನನನ್ನೇ ಹೇಳಲಾಗಿದೆ) ಚೇತನನ ವ್ಯಪದೇಶವೇ ಇರುವುದು. ನ ತು ಅಚೇತನಸ್ಯ = ಹೊರತು ಅಚೇತನವಾದ ಮೃದಾದಿಗಳಿಗೆ ವಕ್ತೃತ್ವಾದಿಗಳನ್ನು ಹೇಳಿಲ್ಲ. ಕುತಃ = ಯಾಕೆ? ಜಡವಾದ ಮೃದಾದಿಗಳಿಗೇ ವಕ್ತೃತ್ವಾದಿಗಳನ್ನು ಹೇಳಿದ್ದಾದರೆ ಮೃತ್ ನ ವಕ್ತ್ರೀ ಜಡತ್ವಾತ್ ಎಂಬ ಯುಕ್ತಿವಿರೋಧ ಬರುವುದರಿಂದ ಹಾಗೆ ಹೇಳುತ್ತಿಲ್ಲ. ಅಭಿಮಾನಿಚೇತನರಿಗೆ ವಕ್ತೃತ್ವಾದಿಗಳು ಉಪಪನ್ನವಾಗುವುದರಿಂದ ವೇದಗಳಿಗೆ ಅಪ್ರಾಮಾಣ್ಯ ಇಲ್ಲ.

ಅಭಿಮಾನಿಗಳಿಗೆ ದೇಹಾಭಾವವು ಕೂಡದ ಕಾರಣ ಸದೇಹತ್ವವನ್ನೇ ಹೇಳಬೇಕು. ಅಭಿಮಾನಿದೇವತೆಗಳಿಗೆ ದೇಹವನ್ನು ಒಪ್ಪುವುದಾದರೆ ಅವರು ಕಾಣದಿರುವುದು ಹೇಗೆ? ಬೇರೆ ವಸ್ತುವಿನ ಅಧಿಷ್ಠಾನದಿಂದ ಅವರಿಗೆ ವಕ್ತೃತ್ವ ಹೇಗೆ? ಅಭಿಮನ್ಯಮಾನವಾದ ವಸ್ತುಗಳು ಅನೇಕ ಇರುವುದರಿಂದ ಅಂತಹ ಅನೇಕ ಅಭಿಮನ್ಯಮಾನವಾದ ವಸ್ತುಗಳಲ್ಲಿ ಅವರು ಅಧಿಷ್ಠಾತೃಗಳಾಗುವುದಾದರೂ ಹೇಗೆ? ಎಂದು ಅನೇಕ ಪ್ರಶ್ನೆಗಳು ಬಂದರೆ ಅದಕ್ಕೆ ಉತ್ತರರೂಪವಾಗಿ ಹೇಳಿದರು ವಿಶೇಷಾನುಗತಿಭ್ಯಾಂ= ವಿಶೇಷಃ=ಸಾಮರ್ಥ್ಯ ಅನುಗತಿ= ಅಭಿಮನ್ಯಮಾನವಾದ ಎಲ್ಲ ಪದಾರ್ಥಗಳಲ್ಲಿ ವ್ಯಾಪ್ತಿ, ಇವುಗಳಿಂದಾಗಿ ಸರ್ವಂ ಯುಜ್ಯತೇ =ಅದರ್ಶನ – ಅನ್ಯವಸ್ತ್ವಧಿಷ್ಠಾನದಿಂದ ವಕ್ತೃತ್ವ – ಅನೇಕ ಅಭಿಮನ್ಯಮಾನ ವಸ್ತುಗಳಲ್ಲಿ ಅಧಿಷ್ಠಾತೃತ್ವ ಇದೆಲ್ಲವೂ ಉಪಪನ್ನವಾಗುತ್ತವೆ.

### ಸಿದ್ಧಾಂತ

**ಸೂ.ರ.:– एवं च मृदब्रवीदिति वेदस्याभिमानिदेवतापरत्वेन युक्त्यविरोधात् । श्रुतेरन्यार्थकल्पने प्रतीतार्थादपि मुख्यार्थलाभेन सावकाशत्वात् । श्रुतेर्युक्तिबाधाभावात् ।**

**ಅನು.**:– ಮೃದಬ್ರವೀತ್ ಇತ್ಯಾದಿಗಳಲ್ಲಿ ಜಡವಾದ ಮೃದಾದಿಗಳಿಗೇ ವಕ್ತೃತ್ವಾದಿಗಳನ್ನು ಹೇಳುವುದಿಲ್ಲ. ಕಿಂತು ಶ್ರುತಿಗಳಿಗೆ ಅಭಿಮಾನಿದೇವತಾಪರತ್ವವನ್ನು ಹೇಳುತ್ತೇವೆಯಾದ್ದರಿಂದ ಅರ್ಥಾತ್ ವಕ್ತೃತ್ವಾದಿಗಳು ಅಭಿಮಾನಿದೇವತೆಗಳಿಗೆ ಉಪಪನ್ನವಾಗುವುದರಿಂದ ಮೃತ್ ನ ವಕ್ತ್ರೀ ಜಡತ್ವಾತ್ ಎಂಬ ಯುಕ್ತಿವಿರೋಧ ಬರುವುದಿಲ್ಲ.

ಈ ರೀತಿಯಾಗಿ ಶ್ರುತಿಗಳಿಗೆ ಅನ್ಯರ್ಥಕಲ್ಪನಾ (ಅಭಿಮಾನಿದೇವತಾಪರತ್ವ) ಮಾಡಿದ್ದರಿಂದ ಪ್ರತೀತಾರ್ಥಕ್ಕಿಂತಲೂ ಮುಖ್ಯಾರ್ಥವು ಉಪಲಬ್ಧವಾಗುವುದರಿಂದ ಶ್ರುತಿಗಳು ಸಾವಕಾಶವಾಗುತ್ತವೆ. ಹೀಗಾಗಿ ಶ್ರುತಿಗಳಿಗೆ ಯುಕ್ತಿಬಾಧ ಬರುವುದಿಲ್ಲ.

**ಸೂ.ರ.:– अभिमन्यमानव्यापिनीनां विग्रहवतीनां च देवतानां सद्भावात् । महतामुपलब्धिप्रसङ्गे इष्टापत्तिः । प्रमाणप्रसिद्धत्वात् । अज्ञानां त्वदृष्टियोग्यत्वात् । देवतासद्भावे महतां प्रत्यक्षस्यैव प्रमाणत्वात् । ततश्च वेदप्रामाण्ये युक्त्यविरोधात्तेन भगवतो जगत्कारणत्वसाधनं युक्तमिति सिद्धम् ॥**

**ಅನು.:–** ಶ್ರುತಿಗಳಿಗೆ ಅಭಿಮಾನಿದೇವತಾಪರತ್ವವನ್ನು ಹೇಳುವುದಾದರೆ ಅಭಿಮಾನಿದೇವತೆಗಳು ಇರಬೇಕಲ್ಲ? ಎಂದರೆ, ಅಭಿಮನ್ಯಮಾನವಾದ ಎಲ್ಲ ವಸ್ತುಗಳಲ್ಲಿ ವ್ಯಾಪಿಸಿ ಇರುವ, ದೇಹಸಹಿತರಾದ ಅಭಿಮಾನಿದೇವತೆಗಳು ಇದ್ದೇ ಇದ್ದಾರೆ.

ಅಭಿಮಾನಿದೇವತೆಗಳು ಇದ್ದಾರೆ ಎನ್ನುವುದಾದರೆ ಅವರು ಕಣ್ಣಿಗೆ ಕಾಣಬೇಕಿತ್ತು ಎಂದರೆ, ಯಾರಿಗೆ ಕಾಣಬೇಕು? ದೊಡ್ಡವರಿಗೆ (ಜ್ಞಾನಿಗಳಿಗೆ) ಕಾಣಬೇಕು ಎಂದು ಅಭಿಪ್ರಾಯವೋ? ಅಜ್ಞಾನಿಗಳಿಗೆ ಕಾಣಬೇಕು ಎಂದು ಅಭಿಪ್ರಾಯವೋ?

ಯದಿ ಅಭಿಮಾನಿದೇವತಾಃ ಸ್ಯುಃ ತರ್ಹಿ ಮಹತಾಂ ಉಪಲಬ್ಧಿಃ ಸ್ಯಾತ್ (ಅಭಿಮಾನಿ ದೇವತೆಗಳು ಇದ್ದಿದ್ದರೆ ದೊಡ್ಡವರಿಗೆ ತೋರಲಿ) ಎಂದು ಅಭಿಪ್ರಾಯವಾದರೆ ಅದಕ್ಕೆ ಇಷ್ಟಾಪತ್ತಿಯನ್ನು ಹೇಳುತ್ತೇವೆ. ಅರ್ಥಾತ್ ಅಭಿಮಾನಿದೇವತೆಗಳು ದೊಡ್ಡವರಿಗೆ ಕಾಣುತ್ತಾರೆ ಎನ್ನುವುದು ಪ್ರಮಾಣಸಿದ್ಧವಾದ್ದರಿಂದ ಅದು ನಮಗೆ ಸಮ್ಮತವೇ ಆಗಿದೆ. ಇನ್ನು ಅಜ್ಞಾನಿಗಳಿಗೆ ತೋರಲಿ ಎನ್ನುವುದು ಸರಿಯಲ್ಲ. ಅಂತಹ ದೇವತೆಗಳನ್ನು ನೋಡುವ ಯೋಗ್ಯತೆ ಅಜ್ಞಾನಿಗಳಿಗೆ ಇರುವುದಿಲ್ಲವಾದ್ದರಿಂದ ಅಜ್ಞಾನಿಗಳಿಗೆ ದೇವತೆಗಳು ತೋರುವುದಿಲ್ಲ.

ಅಭಿಮಾನಿದೇವತೆಗಳು ಇದ್ದಾರೆ ಎನ್ನಲು ಏನು ಪ್ರಮಾಣ? ಎಂದರೆ ದೊಡ್ಡವರ (ಜ್ಞಾನಿಗಳ) ಪ್ರತ್ಯಕ್ಷವೇ ಪ್ರಮಾಣವಾಗಿದೆ.

ಆದ್ದರಿಂದ ಮೃದಬ್ರವೀತ್ ಇತ್ಯಾದಿಗಳು ಅಭಿಮಾನಿದೇವತಾಪರವಾದ್ದರಿಂದ ಯುಕ್ತಿವಿರೋಧ ಬರುವುದಿಲ್ಲ. ಹೀಗಾಗಿ ವೇದಗಳಿಗೆ ಪ್ರಾಮಾಣ್ಯವು ಉಪಪನ್ನವಾಗುತ್ತದೆ. ವೇದಗಳು ಪ್ರಮಾಣವಾದ್ದರಿಂದ ಯತೋ ವಾ ಇಮಾನಿ ಇತ್ಯಾದಿ ಶ್ರುತಿಪ್ರಮಾಣಾನುಸಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಸಾಧಿಸಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

## ಸೂತ್ರ - 7

### ಆಕ್ಷೇಪ

**ಸೂ.ರ.:– नन्वप्रामाणिकदेवतातत्सामर्थ्यकल्पनापेक्षया वेदप्रामाण्यकल्पनं वरम्। लाघवात्। वस्त्वन्तरमधिष्ठाय स्थितानां तासां व वनादीनाम युक्तत्वात्। सामर्थ्यविशेषे प्रमाणाभावात्। वेदप्रामाण्यस्य विप्रतिपन्नत्वादिति प्राप्ते सूत्रमाह ॥**

**ಅನು.:–** ದೇವತೆಗಳಿಗೆ ಮತ್ತೊಂದು ವಸ್ತುವಿನಲ್ಲಿ ಇದ್ದು ಮಾತನಾಡುವ ಅಪ್ರಾಮಾಣಿಕವಾದ ಸಾಮರ್ಥ್ಯವಿಶೇಷವನ್ನು ಕಲ್ಪಿಸುವುದು ಗೌರವ ಬರುವ ಕಾರಣ ಸರಿಯಾಗುವುದಿಲ್ಲ. ಅದಕ್ಕಿಂತಲೂ ಕೇವಲ ವೇದಗಳಿಗೆ ಅಪ್ರಾಮಾಣ್ಯವನ್ನು ಮಾತ್ರ ಕಲ್ಪಿಸುವುದು ಲಘುಭೂತವಾಗುವುದರಿಂದ ಸರಿಯಾಗುತ್ತದೆ.

ಮತ್ತೊಂದು ವಸ್ತುವಿನಲ್ಲಿ ನಿಂತು ಅವರು ಮಾತನಾಡುವುದು ಸರಿಯಲ್ಲ. ಅಂತಹ ಸಾಮರ್ಥ್ಯವಿಶೇಷ ಅವರಿಗೆ ಇದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ವೇದವೇ ಪ್ರಮಾಣ ಎನ್ನಲು ಬರುವುದಿಲ್ಲ. ವೇದವು ಈಗ ವಿಪ್ರತಿಪನ್ನ(ವಿವಾದವಿಷಯ)ವಾಗಿದೆ. ಆದ್ದರಿಂದ ಅಭಿಮಾನಿದೇವತೆಗಳನ್ನು ಅಂಗೀಕರಿಸಿ ಅವರಿಗೆ ವಕ್ತೃತ್ವಾದಿಗಳನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳಲು ಸೂತ್ರವನ್ನು ಹೇಳುತ್ತಾರೆ–

**ॐ दृश्यते च ॐ (२.१.७)**

**ಸೂತ್ರಾರ್ಥ :–** ಅಭಿಮಾನಿದೇವತಾಯಾಂ ಸಾಮರ್ಥ್ಯಂ = ಅಭಿಮಾನಿದೇವತೆಯಲ್ಲಿ ಸಾಮರ್ಥ್ಯವಿಶೇಷವು ದೃಶ್ಯತೇ ಚ = ಯೋಗಿಗಳಿಗೆ ಉಪಲಬ್ಧವಾಗುತ್ತಿದೆ ಕೂಡ. ಅತೋ ನಾದರ್ಶನವಿರೋಧಃ = ಆದ್ದರಿಂದ ಅದರ್ಶನವಿರೋಧ ಇಲ್ಲ.

### ಸಮಾಧಾನ

**ಸೂ.ರ.:– एवं च सामर्थ्यविशेषसद्भावेन वचनानामुपपत्तेः। विशेषे महद्दर्शनस्य प्रमाणत्वात्। पृथिव्याद्यभिमानिन्य (भविष्यत्पर्वणि) इति स्मृतेः। अतो युक्त्यविरोधाद्वेदेन भगवज्जगत्कर्तृत्वसाधनं युक्तमिति सिद्धम् ॥**

**ಅನು.:–** ಅಭಿಮಾನಿದೇವತೆಗಳಲ್ಲಿ ಸಾಮರ್ಥ್ಯವಿಶೇಷ (ಮತ್ತೊಂದು ವಸ್ತುವಿನಲ್ಲಿ ಇದ್ದು ಮಾತನಾಡುವ ಸಾಮರ್ಥ್ಯ) ಇದೆ ಎಂಬ ವಿಷಯದಲ್ಲಿ

**ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ ।**
**ಅಚಿಂತ್ಯಾಃ ಶಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ ।**
**ತಾಶ್ಚ ಸರ್ವಗತಾ ನಿತ್ಯಂ ವಾಸುದೇವೈಕಸಂಶ್ರಯಾಃ ॥**

ಇತ್ಯಾದಿಯಾಗಿ ಭವಿಷ್ಯತ್ಪುರಾಣ ಪ್ರಮಾಣಗಳು ಇರುವುದರಿಂದ, ಮತ್ತು ಆ ಸಾಮರ್ಥ್ಯವಿಶೇಷವು ದೊಡ್ಡವರ ಪ್ರತ್ಯಕ್ಷವಿಷಯವೂ ಆಗಿದ್ದರಿಂದ ಅಭಿಮಾನಿದೇವತೆಗಳಿಗೆ ಸಾಮರ್ಥ್ಯವಿಶೇಷವನ್ನು ಅಂಗೀಕರಿಸಬಹುದಾಗಿದೆ.

ಆದ್ದರಿಂದ ಮೃದಬ್ರವೀತ್ ಇತ್ಯಾದಿಶ್ರುತಿಗಳಿಗೆ ಯುಕ್ತಿವಿರೋಧ ಬಾರದ ಕಾರಣ ವೇದಗಳಿಗೆ ಪ್ರಾಮಾಣ್ಯ ಕೂಡುತ್ತದೆ. ಅಂತಹ ವೇದಪ್ರಮಾಣಾನುಸಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಅಭಿಮಾನ್ಯಧಿಕರಣವು ಮುಗಿಯಿತು.

*ಅಧಿಕಾರಣ – 4*

# ಅಸದಧಿಕರಣ

## ಸಂಗತಿ

**ಸೂ.ರ.:– अत्र ब्रह्मणो जगत्कर्तृत्वे श्रुत्युपसर्जनप्रागभावकर्तृकत्व-साधकयुक्तिविरोधो निरस्यते ।**

**ಅನು.:–** ಬ್ರಹ್ಮನ ಜಗತ್ಕರ್ತೃತ್ವವಿಷಯದಲ್ಲಿ ಶ್ರುತ್ಯುಪಸರ್ಜನ (ಪ್ರಾಗಭಾವಕ್ಕೆ ಜಗತ್ಕರ್ತೃತ್ವವನ್ನು ಸಾಧಿಸುವ) ಪ್ರಾಗಭಾವಕರ್ತೃಕತ್ವಸಾಧಕವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಾರೆ ನಾಲ್ಕನೇ ಈ ಅಸದಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न विष्णोर्जगत्कारणत्वं युक्तम् । प्रमाणाभावात् । न च यतो वेत्यादि (तै.उ.३-१-१) श्रुतिः प्रमाणमिति वाच्यम् । ब्रह्म न जगत्कारणम् । तत्पूर्वमसत्त्वात् । यद्यतः पूर्वं नास्ति न तत् तस्य कारणमिति युक्ति विरोधेन प्रतीतार्थे प्रामाण्यायोगात् ।**

**ಅನು.:–** ಹಿಂದೆ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಲ್ಲ. ಯಾಕೆಂದರೆ– ವಿಷ್ಣುವು ಜಗತ್ಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

''ಯತೋ ವಾ ಇಮಾನಿ ಭೂತಾನಿ ಜಾಯಂತೇ'' (ತೈ.ಉ. 3-1-1) ಇತ್ಯಾದಿ ಶ್ರುತಿಯೇ ಪ್ರಮಾಣವಾಗಿದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಬ್ರಹ್ಮ ನ ಜಗತ್ಕಾರಣಂ ತತ್ಪೂರ್ವಮಸತ್ತ್ವಾತ್ । ಯತ್ ಯತಃ ಪೂರ್ವಂ ನಾಸ್ತಿ ನ ತತ್ ತಸ್ಯ ಕಾರಣಮ್ । (ಬ್ರಹ್ಮನು ಜಗತ್ಕಾರಣನಾಗಲು ಸಾಧ್ಯವಿಲ್ಲ. ಯಾಕೆ? ಜಗತ್ತಿಗಿಂತಲೂ ಪೂರ್ವದಲ್ಲಿ ಇಲ್ಲವಾದ್ದರಿಂದ. ಯಾವುದು ಯಾವುದಕ್ಕಿಂತ ಮೊದಲು ಇರುವುದಿಲ್ಲ, ಅದು ಅದಕ್ಕೆ ಕಾರಣವಾಗುವುದಿಲ್ಲ) ಎಂಬ ಯುಕ್ತಿಯ ವಿರೋಧ ಬರುತ್ತಿರುವುದರಿಂದ ಯತೋ ವಾ ಎಂಬ ಈ ಶ್ರುತಿಗೆ ಪ್ರತೀತಾರ್ಥದಲ್ಲಿ (ವಿಷ್ಣುವಿನ ಜಗತ್ಕಾರಣತ್ವ ವಿಷಯದಲ್ಲಿ) ಪ್ರಾಮಾಣ್ಯವು ಕೂಡುವುದಿಲ್ಲ.

**ಸೂ.ರ.:– न चासिद्धो हेतुः । असदेवेदमग्र (छां.६-२-१) इति श्रुतिसिद्धत्वात् । न च ब्रह्मणोऽकारणत्वे निष्कारणं जगदापद्यत इति वाच्यम् । असतः सदजायतेति (ऋ.१०.७२.३) श्रुतिबलेनाभावस्यैव कारणत्वेन ग्राह्यत्वात् ।**

**ಅನು.:–** ಬ್ರಹ್ಮನು ಜಗತ್ತಿಗಿಂತಲೂ ಪೂರ್ವದಲ್ಲಿ ಇಲ್ಲ ಎಂದು ಏಕೆ ಹೇಳುತ್ತೀರಿ? ಜಗತ್ತಿಗಿಂತಲೂ ಪೂರ್ವದಲ್ಲಿ ಬ್ರಹ್ಮನು ಇದ್ದೇ ಇದ್ದಾನೆ. ಹೀಗಾಗಿ ಪಕ್ಷನಾದ ಬ್ರಹ್ಮನಲ್ಲಿ ತತ್ಪೂರ್ವಮಸತ್ತ್ವ ಹೇತುವು ಬಾರದ ಕಾರಣ ಅನುಮಾನಕ್ಕೆ ಅಸಿದ್ಧಿ ಬರುತ್ತದೆ ಎಂದು ಶಂಕಿಸುವುದು ಸರಿಯಲ್ಲ.

ಜಗತ್ತಿಗಿಂತಲೂ ಪೂರ್ವದಲ್ಲಿ ಬ್ರಹ್ಮನು ಇರಲಿಲ್ಲ ಎನ್ನುವುದು "ಅಸದೇವ ಇದಮಗ್ರ ಆಸೀತ್" (ಛಾಂ.6-2-1) ಎಂಬ ಶ್ರುತಿಯಿಂದಲೇ ಸಿದ್ಧವಾಗಿದೆ. ಹೀಗಾಗಿ ಶ್ರುತಿ-ಯಿಂದಲೇ ಹೇತುವುದು ಸಿದ್ಧವಾಗಿದೆಯಾದ್ದರಿಂದ ಅಸಿದ್ಧಿಶಂಕೆಗೆ ಅವಕಾಶವಿಲ್ಲ. ಆದ್ದರಿಂದ ಜಗತ್ತಿಗಿಂತಲೂ ಪೂರ್ವದಲ್ಲಿ ಇಲ್ಲದ ಬ್ರಹ್ಮನು ಜಗತ್ತಿಗೆ ಕಾರಣನಾಗಲು ಸಾಧ್ಯವಿಲ್ಲ.

ಹೌದು, ಈ ರೀತಿಯಾಗಿ ಬ್ರಹ್ಮನು ಜಗತ್ಕಾರಣನಲ್ಲ ಎಂದು ಉಪಪಾದನೆ ಮಾಡಿದರೆ ಬೇರೆಯವರು ಕಾರಣರಾಗಲು ಸಾಧ್ಯವಿಲ್ಲವಾದ್ದರಿಂದ ಜಗತ್ತಿಗೆ ಕಾರಣರೇ ಇಲ್ಲದಂತಾಗ-ಬೇಕಾಗುತ್ತದೆ (ಜಗತ್ತು ನಿಷ್ಕಾರಣವಾಗಬೇಕಾಗುತ್ತದೆ) ಎಂದು ಶಂಕೆ ಬಂದರೆ ಅದೂ ಸರಿಯಲ್ಲ.

ಅಸತಃ ಸದಜಾಯತ (ಋ.10-72-3) ಎಂದು ಶ್ರುತಿಯು ಹೇಳುವಂತೆ ಪ್ರಾಗಭಾವವೇ ಜಗತ್ಕಾರಣವಾಗಬಹುದಾಗಿದೆ. ಆದ್ದರಿಂದ ನಿಷ್ಕಾರಣತ್ವಪ್ರಸಂಗ ಇಲ್ಲ.

**ಸೂ.ರ.:– न च ब्रह्मणः कारणत्व इवाभावस्य कारणत्वाङ्गीकारे युक्तिविरोधोऽस्ति । प्रत्युताभावस्य जगत्कारणत्वे प्रलयकालीनं कारण-मसद्भवितुमर्हति वस्तुत्वात्कार्यवदित्यनुमानं चास्ति । अतोऽभावस्यैव जगत्कारणत्वं न ब्रह्मण इत्ययुक्तं लक्षणसूत्रमिति प्राप्ते निराकुर्वत्सूत्रमाह ।**

**ಅನು.:–** ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಅಂಗೀಕರಿಸಿದರೆ ಹೇಗೆ ಯುಕ್ತಿವಿರೋಧ ಬರುವುದೋ ಹಾಗೆ ಅಭಾವಕ್ಕೆ ಜಗತ್ಕಾರಣತ್ವವನ್ನು ಅಂಗೀಕರಿಸಿದರೂ ಯುಕ್ತಿವಿರೋಧ

ಬರುವುದಿಲ್ಲವೇ? ಎಂದರೆ, ಜಗತ್ತಿಗಿಂತಲೂ ಪೂರ್ವದಲ್ಲಿ ಅಭಾವವೇ (ಪ್ರಾಗಭಾವವೇ) ಇರುವುದರಿಂದ ಯುಕ್ತಿವಿರೋಧ ಬರುವುದಿಲ್ಲ.

ಯುಕ್ತಿವಿರೋಧ ಬರುವುದಿಲ್ಲ ಎಂದಷ್ಟೇ ಅಲ್ಲ. ಕಿಂತು ಪ್ರಲಯಕಾಲೀನಂ ಕಾರಣಂ, ಅಸತ್ ಭವಿತುಮರ್ಹತಿ ವಸ್ತುತ್ವಾತ್ ಕಾರ್ಯವತ್ (ಪ್ರಲಯಕಾಲದಲ್ಲಿರುವ ಕಾರಣವು, ಅಸತ್ (ಅಭಾವರೂಪ) ಆಗಿರಲು ಯೋಗ್ಯವಾಗಿದೆ. ವಸ್ತುವಾದ್ದರಿಂದ ಕಾರ್ಯದಂತೆ) ಎಂಬುದಾಗಿ ಅಭಾವವು ಜಗತ್ಕಾರಣವಾಗಿದೆ ಎಂಬ ವಿಷಯದಲ್ಲಿ ಅನುಮಾನ ಪ್ರಮಾಣವೂ ಸಾಧಕವಾಗಿ ಇದೆ.

ಆದ್ದರಿಂದ ಅಭಾವಕ್ಕೆ ಜಗತ್ಕಾರಣತ್ವವನ್ನು ಹೇಳಬೇಕೇ ಹೊರತು ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವದಲ್ಲಿ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ असदिति चेन्न प्रतिषेधमात्रत्वात् ॐ (२.१.८)

**ಸೂತ್ರಾರ್ಥ :–** ಅಸತ್ = ಜಗತ್ತಿನ ಪ್ರಾಗಭಾವವೇ ಜಗತ್ಕಾರಣವಾಗಿದೆ. ಹೊರತು ಈಶ್ವರ ಅಲ್ಲ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ. ಕುತಃ = ಯಾಕೆ? ಪ್ರತಿಷೇಧಮಾತ್ರತ್ವಾತ್ = ಅಭಾವಧರ್ಮತ್ವವನ್ನು ಬಿಟ್ಟು ಸ್ವಾಭಾವಿಕವಾಗಿಯೇ ನಿಷೇಧಬುದ್ಧಿಯಲ್ಲಿ ವಿಷಯವಾದ್ದರಿಂದ.

### ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वं न त्वसतः । तस्य कारणं नेति कारणताप्रतिषेधबुद्धिविषयत्वात् । अतो युक्त्यादेराभासकत्वेनाविरोधकत्वाद्युक्तं लक्षणसूत्रमिति सिद्धम् ॥**

**ಅನು.:–** ವಿಷ್ಣುವಿಗೇ ಜಗತ್ಕಾರಣತ್ವವನ್ನು ಹೇಳಬೇಕು ಹೊರತು ಅಸತ್‌ಗೆ (ಅಭಾವಕ್ಕೆ) ಜಗತ್ಕಾರಣತ್ವವನ್ನು ಹೇಳಬಾರದು. ಯಾಕೆ? ಅಸತ್ (ಅಭಾವವು) ಕಾರಣಂ ನ ಎಂಬುದಾಗಿ ಕಾರಣತಾಪ್ರತಿಷೇಧಬುದ್ಧಿವಿಷಯವಾಗುತ್ತದೆಯಾದ್ದರಿಂದ. (ಅಭಾವಧರ್ಮತ್ವವನ್ನು ಬಿಟ್ಟು ಸ್ವಾಭಾವಿಕವಾಗಿಯೇ ಪ್ರತಿಷೇಧಬುದ್ಧಿವಿಷಯವಾದ್ದರಿಂದ.)

ಅಂತೆಯೇ ಘಟಪ್ರಾಗಭಾವವು ಘಟಕ್ಕೆ ಕಾರಣವಾಗುವುದಿಲ್ಲ. ಶಶವಿಷಾಣಾದಿಗಳು ಯಾವುದನ್ನು ಕುರಿತಾಗಿಯೂ ಕಾರಣವಾಗಲು ಸಾಧ್ಯವಿಲ್ಲ.

ಹೀಗಾಗಿ ಪ್ರಾಗಭಾವವು ಪ್ರತಿಷೇಧಬುದ್ಧಿವಿಷಯವಾಗುವುದರಿಂದ ಜಗತ್ತನ್ನು ಕುರಿತು ಕಾರಣವಾಗಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮ ನ ಜಗತ್ಕಾರಣಂ, ತತ್ಪೂರ್ವಂ ಅಸತ್ವಾತ್ । ಪ್ರಲಯಕಾಲೀನಂ ಕಾರಣಂ, ಅಸತ್ ಭವಿತುಮರ್ಹತಿ, ವಸ್ತುತ್ವಾತ್ ಎಂಬ ಅನುಮಾನ-ಗಳು ದುಷ್ಟವಾದ್ದರಿಂದ (ಯುಕ್ತ್ಯಾಭಾಸವಾದ್ದರಿಂದ) ಯತೋ ವಾ ಇಮಾನಿ ಎಂಬ ಶ್ರುತಿಗೆ ಯುಕ್ತಿವಿರೋಧ ಬರುವುದಿಲ್ಲ. ಕಿಂತು ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಪ್ರಾಮಾಣ್ಯವೇ ಉಪಪನ್ನವಾಗುತ್ತದೆ. ಆದ್ದರಿಂದ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

### ಸೂತ್ರ - 9

### ಆಕ್ಷೇಪ

**ಸೂ.ರ.:– ननु यदुक्तं प्रतिषेधमात्रत्वादिति युक्तिविरोधान्नासतः कारणत्वमिति न तद्युक्तम् । युक्तिविरुद्धस्यापि श्रुतिबलात्कस्यचिदभावस्य कर्तृत्वाभ्युपगमे बाधकाभावात् ।**

**ಅನು.:–** ಪ್ರತಿಷೇಧಬುದ್ಧಿವಿಷಯವಾದ್ದರಿಂದ ಅಭಾವವು ಜಗತ್ಕಾರಣವಾಗಲು ಸಾಧ್ಯವಿಲ್ಲ (ಅಸತ್ ನ ಜಗತ್ಕಾರಣಂ ಪ್ರತಿಷೇಧಮಾತ್ರತ್ವಾತ್) ಎಂಬ ಯುಕ್ತಿಯ ವಿರೋಧ ಬರುವುದರಿಂದ ಅಸತ್‌ಗೆ ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ನೀವು ಉತ್ತರಿಸಿದ್ದು ಸರಿಯಾಗುವುದಿಲ್ಲ.

ಅಸತ್‌ಗೆ ಕಾರಣತ್ವವು ಯುಕ್ತಿವಿರುದ್ಧವಾದರೂ ಸಹ ಅಸದ್ವಾ ಇದಮಗ್ರ ಆಸೀತ್ ಎಂಬ ಶ್ರುತಿಬಲದಿಂದಾಗಿ ಕೆಲವು ಅಭಾವಕ್ಕೆ (ಪ್ರಕೃತ ಜಗತ್ತಿನ ಪ್ರಾಗಭಾವಕ್ಕೆ) ಕಾರಣತ್ವವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ.

**ಸೂ.ರ.:– न चैवं घटप्रागभावादीनामपि कर्तृत्वप्रसङ्ग इति वाच्यम् । भावेषु कस्यचित्कर्तृत्वं कस्यचिदकर्तृत्वमिति वैलक्षण्यवदभावेष्वपि घटप्रागभावादेर कर्तृत्वं विश्वप्रागभावस्य चासदेवेत्यादि (छां.६-२-१) श्रुतिबलात्कर्तृत्वमिति वैलक्षण्योपपत्तेरिति प्राप्ते समादधत्सूत्रमाह ॥**

ವಿಶ್ವಪ್ರಾಗಭಾವಕ್ಕೆ ಕಾರಣತ್ವವನ್ನು ಅಂಗೀಕರಿಸುವುದಾದರೆ, ಘಟಪ್ರಾಗಭಾವಕ್ಕೂ

ಸಹ ಘಟವನ್ನು ಕುರಿತು ಕಾರಣತ್ವವನ್ನು ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ ಎಂದು ಶಂಕಿಸುವುದು ಸರಿಯಲ್ಲ.

ಭಾವಪದಾರ್ಥಗಳಲ್ಲಿ ಕೆಲವು ಪದಾರ್ಥಕ್ಕೆ ಕಾರಣತ್ವ ಇದೆ ಮತ್ತೆ ಕೆಲವು ಪದಾರ್ಥಕ್ಕೆ ಕಾರಣತ್ವ ಇಲ್ಲ ಎಂದು ಹೇಗೆ ವೈಲಕ್ಷಣ್ಯ ಇದೆಯೋ ಅದರಂತೆಯೇ ಅಭಾವಪದಾರ್ಥ-ಗಳಲ್ಲಿಯೂ ಸಹ ಘಟಪ್ರಾಗಭಾವಕ್ಕೆ ಕಾರಣತ್ವ ಇಲ್ಲ ವಿಶ್ವಪ್ರಾಗಭಾವಕ್ಕೆ ಕಾರಣತ್ವ ಇದೆ ಎಂಬುದಾಗಿ ವೈಲಕ್ಷಣ್ಯವನ್ನು ಹೇಳಬಹುದಾಗಿದೆ. ಆದ್ದರಿಂದ ವಿಶ್ವಪ್ರಾಗಭಾವಕ್ಕೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ಬಾಧಕ ಇಲ್ಲ.

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अपीतौ तद्वत्प्रसङ्गादसमञ्जसम् ॐ (२.१.९)**

**ಸೂತ್ರಾರ್ಥ :–** ಅಪೀತೌ = ಪ್ರಲಯಕಾಲದಲ್ಲಿ ತದ್ವತ್ಪ್ರಸಂಗಾತ್ = ಅಸತ್ ಮಾತ್ರ ಇರಬೇಕಾದ ಪ್ರಸಂಗ ಬರುವುದರಿಂದ, ಅಸತ್‌ಗೆ ಕರ್ತೃತ್ವವು ಅಸಮಂಜಸಮ್ = ಯುಕ್ತವಲ್ಲ.

## ಸಮಾಧಾನ

**ಸೂ.ರ.:– एवं च प्रलये सर्वस्य भावमात्रस्यासत्वेऽसन्मात्रावशेषः स्यात् । कार्यनाशे कारणमात्रावशेषनियमात् । तथा च कालोऽपि न स्यादित्यतिप्रसङ्गस्य वक्तुं शक्यत्वात् । अतो विरोधाभावेन युक्तं लक्षण-सूत्रमिति सिद्धम् ।**

**ಅನು.:–** ಹಾಗೆ ಒಂದುವೇಳೆ ಅಸತ್‌ಗೆ ಕಾರಣತ್ವವನ್ನು ಅಂಗೀಕರಿಸುವುದಾದರೆ, ಎಲ್ಲ ಕಾರ್ಯಗಳೂ ನಾಶವಾದರೆ ಕಾರಣವು ಮಾತ್ರ ಉಳಿಯಬೇಕಾದ ನಿಯಮದಿಂದಾಗಿ ಪ್ರಲಯಕಾಲದಲ್ಲಿ ಯಾವ ಭಾವಪದಾರ್ಥಗಳೂ ಇಲ್ಲದೇ ಅಸತ್ ಮಾತ್ರ ಇರಬೇಕಾದ ಪ್ರಸಂಗ (ಅತಿಪ್ರಸಂಗ) ಬರಬೇಕಾಗುತ್ತದೆ.

ಯಾವ ಭಾವಪದಾರ್ಥಗಳೂ ಇಲ್ಲ ಎಂದಾದರೆ ಕಾಲವೂ ಇಲ್ಲದೇ ಹೋಗಬೇಕಾದ ಅತಿಪ್ರಸಂಗ ಬರುತ್ತದೆ. ಹೀಗಾಗಿ ಅಸತ್‌ಗೆ ಕಾರಣತ್ವವನ್ನು ಅಂಗೀಕರಿಸಲು ಬರುವುದಿಲ್ಲ. (ಅಸತ್‌ಗೆ ಕಾರಣತ್ವವನ್ನು ಅನುಮಾನಗಳಿಂದ ಹೇಳುವುದು ಸರಿಯಾಗುವುದಿಲ್ಲ.)

ಆದ್ದರಿಂದ ಯತೋ ವಾ ಇಮಾನಿ ಎಂಬ ಶ್ರುತಿಯಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ಅನುಮಾನಗಳ ವಿರೋಧವೂ ಬಾರದ ಕಾರಣ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹಿಂದೆ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 10

## ಆಕ್ಷೇಪ

**ಸೂ.ರ.:– नन्वस्माभिरपि प्रलयेऽसन्मात्रावशेषस्याभिलषितत्वान्ना-निष्टापादनमेतदित्याशङ्कां परिहरत्सूत्रमुपन्यस्यति ॥**

**ಅನು.:–** ''ಒಂದುವೇಳೆ ಅಸತ್‌ಗೆ ಕಾರಣತ್ವವನ್ನು ಅಂಗೀಕರಿಸುವುದಾದರೆ ಪ್ರಲಯಕಾಲದಲ್ಲಿ ಯಾವ ಭಾವಪದಾರ್ಥಗಳೂ ಇಲ್ಲದೇ ಅಸತ್ ಮಾತ್ರ ಇರಬೇಕಾದ ಅತಿಪ್ರಸಂಗ ಬರುತ್ತದೆ' ಎಂಬುದಾಗಿ ನಮ್ಮನ್ನು ಕುರಿತು ನೀವು ಆಪಾದನೆ ಮಾಡುವುದು ಸರಿಯಾಗುವುದಿಲ್ಲ. ಏಕೆಂದರೆ – ಪ್ರಲಯಕಾಲದಲ್ಲಿ ಅಸತ್ ಮಾತ್ರ (ಇರಬೇಕಾದ ಪ್ರಸಂಗವು) ಇರುವುದು ನಮಗೆ ಇಷ್ಟವೇ ಆಗಿದೆ. ಹಾಗಾಗಿ ''ಅಸತ್ ಮಾತ್ರ ಇರಬೇಕಾಗುತ್ತದೆ' ಎಂದು ನೀವು ಆಪಾದನೆ ಮಾಡಿದರೆ ಅದು ನಮಗೆ ಇಷ್ಟಾಪಾದನವೇ ಆಗುತ್ತದೆ. ಅನಿಷ್ಟಾಪಾದನೆ ಆಗುವುದಿಲ್ಲವಲ್ಲ? ಎಂದು ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ न तु दृष्टान्तभावात् ॐ (२.१.१०)

**ಸೂತ್ರಾರ್ಥ :–** (ತುಶಬ್ದವು ಅವಧಾರಣ (ಏವ) ಎಂಬ ಅರ್ಥದಲ್ಲಿದೆ.) ನ ಪ್ರಲಯೇ ಸರ್ವಾಸತ್ತ್ವಂ ನ ಯುಜ್ಯತೇ = ಪ್ರಲಯಕಾಲದಲ್ಲಿ ಎಲ್ಲದಕ್ಕೂ ಅಸತ್ತ್ವವನ್ನು ಅಂಗೀಕರಿಸುವುದು (ಅಸತ್ ಮಾತ್ರ ಇರುತ್ತದೆ ಸತ್ ಇರುವುದಿಲ್ಲ ಎಂದು ಅಂಗೀಕರಿಸುವುದು) ಸರಿಯಾಗುವುದಿಲ್ಲ. ಕುತಃ = ಯಾಕೆ?

ತದಾ = ಪ್ರಲಯಕಾಲದಲ್ಲಿ ತು(ಏವ) ಸರ್ವಪದಾರ್ಥಸತ್ತ್ವೇ ಏವ = ಎಲ್ಲ ಪದಾರ್ಥಗಳಿಗೂ ಸತ್ತ್ವ ಇದೆ ಎನ್ನುವುದರಲ್ಲಿಯೇ (ಸತ್ ಇರುತ್ತದೆ ಎಂಬ ವಿಷಯ-ದಲ್ಲಿಯೇ) ದೃಷ್ಟಾಂತಭಾವಾತ್ = ದೃಷ್ಟಾಂತ ಇರುವುದರಿಂದ.

## ಸಮಾಧಾನ

**ಸೂ.ರ.:– एवं च विप्रतिपन्नोत्पत्तिः सतो भवितुमर्हति उत्पत्तित्त्वात् । घटोत्पत्तिवत् । विमतो विनाशः सशेषः । विनाशत्वात् घटनाशवत् । इत्यनुमानाभ्यां प्रलयकालगतस्य सत्त्वसिद्ध्या तदनङ्गीकारस्य प्रामाणिक-हानरूपत्वेनानिष्टापादनरूपत्वात् । अतो विरोधाभावेन युक्तं लक्षण-सूत्रमिति सिद्धम् ॥**

**ಅನು.:–** 1) ವಿಪ್ರತಿಪನ್ನಾ ಉತ್ಪತ್ತಿಃ, ಸತೋ ಭವಿತುಮರ್ಹತಿ, ಉತ್ಪತ್ತಿತ್ವಾತ್, ಘಟೋತ್ಪತ್ತಿವತ್ । ವಿಪ್ರತಿಪನ್ನವಾದ ಉತ್ಪತ್ತಿಯು (ಸಂದೇಹವಿಷಯವಾಗಿರುವ ಜಗತ್ತಿನ ಉತ್ಪತ್ತಿಯು), ಸತ್ ಆದ ವಸ್ತುವಿನಿಂದ ಆಗಲು ಯೋಗ್ಯವಾಗಿದೆ. ಉತ್ಪತ್ತಿಯಾದ್ದರಿಂದ. ಘಟದ ಉತ್ಪತ್ತಿಯು ಉತ್ಪತ್ತಿಯಾದ್ದರಿಂದ ಅದು ಹೇಗೆ ಸತ್ ಆದ ದಂಡದಿಂದ ಆಗಿದೆಯೋ ಅದರಂತೆ ಜಗತ್ತಿನ ಉತ್ಪತ್ತಿಯೂ ಉತ್ಪತ್ತಿಯಾದ್ದರಿಂದ ಸತ್ ಪದಾರ್ಥದಿಂದ ಆಗುತ್ತದೆ.

2) ವಿಮತೋ ವಿನಾಶಃ, ಸಶೇಷಃ, ವಿನಾಶತ್ವಾತ್ । ಘಟನಾಶವತ್ । ವಿಮತವಾದ ನಾಶವು (ಸಂದೇಹವಿಷಯವಾದ ಜಗತ್ತಿನ ನಾಶವು) ಸಶೇಷವಾಗಿದೆ. ವಿನಾಶವಾದ್ದರಿಂದ. ಘಟದ ನಾಶವು ನಾಶವಾದ್ದರಿಂದ ಅದು ಹೇಗೆ ಸಶೇಷವಾಗಿದೆಯೋ ಅದರಂತೆ ಜಗತ್ತಿನ ನಾಶವೂ ನಾಶವೇ ಆದ್ದರಿಂದ ಅದೂ ಸಶೇಷವೇ ಆಗಿದೆ.

ಎಂಬ ಈ ಎರಡು ಅನುಮಾನಗಳಿಂದ ಪ್ರಲಯಕಾಲದಲ್ಲಿರುವ ಪದಾರ್ಥಗಳಿಗೆ ಸತ್ತ್ವವು ಸಿದ್ಧವಾಗುವುದರಿಂದ (ಪ್ರಲಯಕಾಲದಲ್ಲಿರುವ ಪದಾರ್ಥವು ಸತ್ ಆಗಿದೆ ಎಂದು ಸಿದ್ಧವಾಗುವುದರಿಂದ) ಅದನ್ನು ಅಂಗೀಕರಿಸದೇ ಇರುವುದು (ಪ್ರಲಯಕಾಲದಲ್ಲಿರುವ ವಸ್ತುಗಳಿಗೆ ಸತ್ತ್ವವನ್ನು ಒಪ್ಪದಿರುವುದು) ಪ್ರಾಮಾಣಿಕಹಾನ ರೂಪವಾಗುವುದರಿಂದ ನಮ್ಮ ಆಪಾದನೆಯು ಅನಿಷ್ಟಾಪಾದನವೇ ಆಗುತ್ತದೆ.

ಆದ್ದರಿಂದ ಯತೋ ವಾ ಎಂಬ ಶ್ರುತಿಗೆ ಅನುಮಾನವಿರೋಧ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 11

**ಸೂ.ರ.:– न केवलं प्रामाणिकपरित्यागप्रास्या प्रलये सर्वासत्व-मनिष्टमपि त्वप्रामाणिकत्वाच्चेत्यर्थप्रतिपादकसूत्रमुपन्यस्यति ॥**

**ಅನು.:–** "ಪ್ರಲಯಕಾಲದಲ್ಲಿರುವ ವಸ್ತುಗಳಿಗೆ ಸತ್ವವನ್ನು ಒಪ್ಪದೇ ಹೋದರೆ ಪ್ರಾಮಾಣಿಕಹಾನಿ ಆಗುತ್ತದೆ. ಆದ್ದರಿಂದ ಪ್ರಾಮಾಣಿಕಪರಿತ್ಯಾಗ ಮಾಡಬೇಕಾಗುವುದರಿಂದ ಸರ್ವಾಸತ್ವವು ಅನಿಷ್ಟವಾಗಿದೆ' ಎಂದಷ್ಟೇ ಅಲ್ಲ. ಕಿಂತು ಪ್ರಲಯಕಾಲದಲ್ಲಿರುವ ವಸ್ತುಗಳಿಗೆ ಅಸತ್ವವು ಅಪ್ರಾಮಾಣಿಕವೂ ಆಗಿದೆ. ಆ ಕಾರಣದಿಂದಲೂ ಸರ್ವಾಸತ್ವವು ಅಂಗೀಕಾರಾರ್ಹವಲ್ಲ ಎಂದು ತಿಳಿಸುವ ಸೂತ್ರವನ್ನು ಹೇಳುತ್ತಾರೆ–

### ॐ स्वपक्षदोषाच्च ॐ (२.१.११)

**ಸೂತ್ರಾರ್ಥ :–** ಸ್ವಪಕ್ಷದೋಷಾಚ್ಚ = ಸ್ವಪಕ್ಷೇ ಪ್ರಲಯಕಾಲದಲ್ಲಿನ ವಸ್ತುಗಳಿಗೆ ಅಸತ್ವವನ್ನು ಒಪ್ಪುವ ಪಕ್ಷದಲ್ಲಿ ದೋಷಾಚ್ಚ = ದೃಷ್ಟಾಂತಾಭಾವರೂಪವಾದ ದೋಷ ಇರುವುದರಿಂದಲೂ ಸಹ ಆ ಪಕ್ಷವು (ಸರ್ವಾಸತ್ವಪಕ್ಷವು) ಯುಕ್ತವಲ್ಲ.

**ಸೂ.ರ.:– एवं च प्रलये सर्वासत्त्वमप्रामाणिकम् । तथाहि । प्रलये स्थितानां कालादीनामसत्त्वं किं प्रत्यक्षवेद्यम् । उतागमवेद्यम् । आहो-स्विदनुमानवेद्यम् । नाद्यः । असन्निकृष्टत्वात् । न द्वितीयः । तदभावात् । नापि तृतीयः । दृष्टान्ताद्यभावात् । तथा च प्रलये सर्वासत्त्वपक्षस्या-प्रामाणिकत्वेन तदभ्युपगमस्यानिष्टत्वायुक्तं लक्षणसूत्रमिति सिद्धम् ॥**

**ಅನು.:–** ಪ್ರಲಯಕಾಲದಲ್ಲಿರುವ ವಸ್ತುಗಳಿಗೆ ಅಸತ್ವವನ್ನು ಒಪ್ಪುವುದು (ಸರ್ವಾಸತ್ವವು) ಅಪ್ರಾಮಾಣಿಕವಾಗಿದೆ. ಹೇಗೆಂದರೆ -

ಪ್ರಲಯಕಾಲೀನವಾದ ಕಾಲಾದಿಗಳಿಗೆ ಅಸತ್ವವು ಪ್ರತ್ಯಕ್ಷದಿಂದ ವೇದ್ಯವಾಗುವುದೋ? ಅಥವಾ ಆಗಮದಿಂದ ವೇದ್ಯವೋ? ಅಥವಾ ಅನುಮಾನದಿಂದ ವೇದ್ಯವೋ?

ಪ್ರತ್ಯಕ್ಷದಿಂದ ವೇದ್ಯ ಎನ್ನಲು ಬರುವುದಿಲ್ಲ. ಏಕೆಂದರೆ - ಪ್ರಲಯಕಾಲೀನವಾದ ಕಾಲಾದಿಗಳು ಸನ್ನಿಕೃಷ್ಟವಾಗುವ ಪದಾರ್ಥ ಆಗಿಲ್ಲವಾದ್ದರಿಂದ ಅವುಗಳ ಅಸತ್ವವು ಪ್ರತ್ಯಕ್ಷದಿಂದ ವೇದ್ಯವಾಗುವುದಿಲ್ಲ.

ಇನ್ನು ಆಗಮವೇದ್ಯ ಎನ್ನಲೂ ಬರುವುದಿಲ್ಲ. ಯಾಕೆ? ಪ್ರಲಯಕಾಲೀನವಾದ ಕಾಲಾದಿಗಳಿಗೆ ಅಸತ್ವವನ್ನು ಹೇಳುವ ಅಂತಹ ಯಾವ ಆಗಮವೂ ಇಲ್ಲ.

ಕೊನೆಯದಾಗಿ ಅನುಮಾನವೇದ್ಯ ಎನ್ನಬೇಕು. ಆದರೆ ಅದೂ ಸರಿಯಾಗುವುದಿಲ್ಲ. ಕಾರಣ - ಅಂತಹ ಕಾಲಾದಿಗಳಿಗೆ ಅಸತ್ವವನ್ನು ಹೇಳುವುದಕ್ಕಾಗಿ ಯಾವ ದೃಷ್ಟಾಂತವೂ ಸಿಗುವುದಿಲ್ಲ.

ಹೀಗೆ ಸರ್ವಾಸತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗದ ಕಾರಣ ಅಪ್ರಾಮಾಣಿಕವಾಗಿದೆ. ಪ್ರಕೃತ ಪ್ರಲಯಕಾಲೀನವಾದ ಕಾಲಾದಿಗಳಿಗೆ ಅಸತ್ವವನ್ನು ಅಂಗೀಕಾರ ಮಾಡಿದರೆ, ಪ್ರಾಮಾಣಿಕವಾದದ್ದನ್ನು ಪರಿತ್ಯಾಗ ಮಾಡಿದಂತಾಗುತ್ತದೆ ಎಂದಷ್ಟೇ ಅಲ್ಲದೇ ಅಪ್ರಾಮಾಣಿಕವಾದದ್ದನ್ನು ಸ್ವೀಕಾರ ಮಾಡಿದಂತಾಗುವುದರಿಂದಲೂ ಸರ್ವಾಸತ್ವಪಕ್ಷವು ಯುಕ್ತವಲ್ಲ. ಅರ್ಥಾತ್ ಸರ್ವಾಸತ್ವವನ್ನು ಒಪ್ಪುವುದು ಅನಿಷ್ಟವಾದ್ದರಿಂದ (ಅಸನ್ಮಾತ್ರಾವಸಾನಾಪಾದನೆಯು ಅನಿಷ್ಟಾಪಾದನೆಯಾಗುವುದರಿಂದ) ಸರ್ವಾಸತ್ವವು ನಿಮಗೆ ಬಾಧಕವೇ. ಹೀಗಾಗಿ ಲಕ್ಷಣಸೂತ್ರದಲ್ಲಿ ಹೇಳಿದ ಬ್ರಹ್ಮನ ಜಗತ್ಕಾರಣತ್ವವೇ ಯುಕ್ತವಾದದ್ದು ಎಂದು ಸಿದ್ಧವಾಗುತ್ತದೆ.

ಸೂತ್ರ - 12

## ಆಕ್ಷೇಪ

**ಸೂ.ರ.:– नन्वयं पूर्वपक्षः सिद्धान्तश्चानुपपन्नः । एतावानेव तर्क इति प्रतिष्ठापक प्रमाणाभावेनोक्तादन्यथाऽप्यनुमातुं शक्यत्वादिति न सदसतोः कारणत्वसाधनबाधने इत्याक्षिप्य समादधत्सूत्रमाह ॥**

**ಅನು.:–** ಈ ರೀತಿಯಾಗಿ ಪೂರ್ವಪಕ್ಷ ಮಾಡಿಕೊಳ್ಳುವುದು ಹಾಗೂ ಸಿದ್ಧಾಂತ ಮಾಡುವುದು ಎರಡೂ ಸರಿಯಲ್ಲ (ತರ್ಕಬಲದಿಂದಾಗಿ ಸತ್‌ಗೆ ಕಾರಣತ್ವವನ್ನು ಸಾಧಿಸುವುದು ಹಾಗೂ ಅಸತ್‌ಗೆ ಕಾರಣತ್ವವನ್ನು ಬಾಧಿಸುವುದು ಎರಡೂ ಸರಿಯಲ್ಲ.) ಏಕೆಂದರೆ - ತರ್ಕದಿಂದ ಯಾವುದು ಸಾಧಿಸಲ್ಪಡುವುದೋ ಅದಕ್ಕೆ ವಿಪರೀತವಾಗಿಯೂ ಪ್ರತಿತರ್ಕದಿಂದ ಸಾಧಿಸಲು ಶಕ್ಯವಾದ್ದರಿಂದ ತರ್ಕವು ಅಪ್ರಮಾಣವಾಗಿದೆ.

ಈ ವಿಧವಾದ ತರ್ಕವು ಇಂತಹ ತರ್ಕವನ್ನು ಬಾಧಿಸುತ್ತದೆ, ಇಂತಹ ತರ್ಕವನ್ನು ಬಾಧಿಸುವುದಿಲ್ಲ ಎಂಬುದಕ್ಕೆ ನಿಯಾಮಕವಾದದ್ದಿಲ್ಲ. ಆದ್ದರಿಂದ ಎಲ್ಲ ಅನುಮಾನ-ಗಳಲ್ಲಿಯೂ ಪ್ರತಿತರ್ಕವು ಅನಿವಾರ್ಯವಾದ್ದರಿಂದ (ಬಂದೇ ಬರುತ್ತದೆಯಾದ್ದರಿಂದ)

ತರ್ಕಕ್ಕೆ ಪ್ರಾಮಾಣ್ಯವನ್ನು ಒಪ್ಪಲು ಬರುವುದಿಲ್ಲ. ಹೀಗಾಗಿ ಅಂತಹ (ಅಪ್ರಮಾಣವಾದ) ತರ್ಕದ ಆಧಾರದ ಮೇಲೆ ಸತ್ಕಾರಣತ್ವಸಾಧನೆ – ಅಸತ್ಕಾರಣತ್ವಬಾಧನೆಗಳು ಸರಿಯಲ್ಲ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರ ಹೊರಡುತ್ತದೆ–

**ॐ तर्काप्रतिष्ठानादप्यन्यथाऽनुमेयमिति चेदेवमप्यनिर्मोक्ष प्रसङ्गः ॐ**

**(२.१.१२)**

**ಸೂತ್ರಾರ್ಥ** :– ತರ್ಕಾಪ್ರತಿಷ್ಠಾನಾತ್ = ದೃಷ್ಟಾಂತಭಾವಾದಿರೂಪವಾದ ತರ್ಕವು ಅವ್ಯವಸ್ಥಿತವಾದ್ದರಿಂದ ಅನ್ಯಥಾಪಿ = ಸಿದ್ಧಾಂತಿಗಳು ಹೇಳಿದ ಪ್ರಕಾರಕ್ಕಿಂತಲೂ ವಿರುದ್ಧ ಪ್ರಕಾರವಾಗಿಯೂ ಸಹ ಅನುಮೇಯಂ = ಪ್ರತಿತರ್ಕದಿಂದ ಸಾಧಿಸಲು ಶಕ್ಯವಿದೆ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ. ಕುತಃ = ಯಾಕೆ? ಏವಮಪಿ = ಈ ರೀತಿಯಾಗಿ ಎಲ್ಲ ತರ್ಕಕ್ಕೂ ಅಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ ಅನಿರ್ಮೋಕ್ಷ-ಪ್ರಸಂಗಃ = ಎಲ್ಲ ಸಿದ್ಧಾಂತಿಗಳೂ ತಮ್ಮ ತಮ್ಮ ಶಾಸ್ತ್ರಕ್ಕೆ ಪ್ರಯೋಜನವನ್ನಾಗಿ ಅಂಗೀಕರಿಸಿರುವ ಮೋಕ್ಷವೇ ಲೋಪವಾಗುವ ಪ್ರಸಂಗ ಬರುತ್ತದೆ.

ಕುತಃ = ಯಾಕೆ? ವಿಪ್ರತಿಪನ್ನನಾದ ವ್ಯಕ್ತಿಯನ್ನು ಕುರಿತು ಮೋಕ್ಷವನ್ನು ಅನುಮಾನ-ಮೂಲಕವಾಗಿಯೇ ಸಾಧಿಸಬೇಕಿರುವುದರಿಂದ, ಅಂತಹ ಮೋಕ್ಷಸಾಧಕವಾದ ಅನುಮಾನಕ್ಕೂ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿರುವುದರಿಂದ.

## ಸಮಾಧಾನ

**ಸೂ.ರ.:– एवं चात्र वक्तव्यम् । किं प्रामाणिकं तर्कसिद्धं प्रतितर्केण दूषयितुं शक्यम् । उताप्रामाणिकम् । द्वितीयस्त्वभिमतः । आद्येऽपि किमेवं वादिनो मते मोक्षोऽस्ति न वेति । नेति पक्षेऽवादित्वेनोपेक्ष-णीयत्वात् । सिद्धान्त्यभिमतप्रमेयाविघातक इति सत्कारणत्वादिकं यथास्थितमेव । आद्ये यदि तर्कोऽप्रामाणं स्यात्तर्हि मोक्ष एव न सिद्ध्येत् । तत्साधनोपाया भावात् । न चागमेन तत्सिद्धिः । मोक्षमनभ्युपगच्छता तत्प्रामाण्यानङ्गीकारात् । सदकारणत्वासत्कारणत्वसाधकतर्कयोर-प्रामाणिकत्वात्ताभ्यां निषेधायोगात् । अतो विरोधाभावेन युक्तं लक्षणसूत्रमिति सिद्धम् ॥**

**ಅನು.:**– ತರ್ಕಸಿದ್ಧವಾದದ್ದನ್ನು ಪ್ರತಿತರ್ಕದಿಂದ ದೂಷಿಸುವವನನ್ನು ಕುರಿತು ಈ ರೀತಿಯಾಗಿ ಪ್ರಶ್ನಿಸಬೇಕು–

ತರ್ಕಸಿದ್ಧವಾದ ಪ್ರಾಮಾಣಿಕವಾದದ್ದನ್ನು ಪ್ರತಿತರ್ಕದಿಂದ ದೂಷಿಸಲು ಸಾಧ್ಯವೋ? ಅಥವಾ ತರ್ಕಸಿದ್ಧವಾದ ಅಪ್ರಾಮಾಣಿಕವಾದದ್ದನ್ನು ಪ್ರತಿತರ್ಕದಿಂದ ದೂಷಿಸಲು ಸಾಧ್ಯವೋ?

ತರ್ಕಸಿದ್ಧವಾದ ಅಪ್ರಾಮಾಣಿಕವಾದದ್ದನ್ನು ಪ್ರತಿತರ್ಕದಿಂದ ದೂಷಿಸುವುದಾದರೆ ಅದು ನಮಗೆ ಸಮ್ಮತೇ ಆಗಿದೆ. (ಅಪ್ರಾಮಾಣಿಕವಾದದ್ದನ್ನು ದೂಷಿಸಿದರೆ ನಮಗೆ ತೊಂದರೆ ಇಲ್ಲ)

ಇನ್ನು ಪ್ರಾಮಾಣಿಕವಾದದ್ದನ್ನು ದೂಷಿಸುವುದಾದರೆ, ಅವನನ್ನು ಕುರಿತು ಪ್ರಶ್ನಿಸುತ್ತೇವೆ – ಹೀಗೆ ದೂಷಿಸುವ ನಿನ್ನ ಮತದಲ್ಲಿ ಮೋಕ್ಷವು ಅಂಗೀಕರಿಸಲ್ಪಡುವುದೋ? ಇಲ್ಲವೋ?

ಮೋಕ್ಷವನ್ನು ಅಂಗೀಕರಿಸುವುದಿಲ್ಲ ಎನ್ನುವುದಾದರೆ, ಶಾಸ್ತ್ರಕ್ಕೆ ಮೋಕ್ಷರೂಪವಾದ ಪ್ರಯೋಜನವು ಇಲ್ಲವಾದ್ದರಿಂದ ನೀನು ವಾದಿಯೇ ಆಗದೇ ಹೋಗಬೇಕಾಗಿ ಬಂದು ಉಪೇಕ್ಷಣೀಯನಾಗುತ್ತೀಯ. ಮತ್ತು ಸಿದ್ಧಾಂತಿಗೆ ಅಭಿಮತವಾದ ಪ್ರಮೇಯಕ್ಕೆ ವಿಘಾತಕವಾಗಲಿಲ್ಲವಾದ್ದರಿಂದ ಸತ್ಕಾರಣತ್ವಾದಿಗಳು ಯಥಾಸ್ಥಿತವಾಗಿಯೇ ಉಳಿಯುತ್ತವೆ. (ಸತ್ಕಾರಣತ್ವಾದಿಗಳಿಗೆ ಯಾವ ತೊಂದರೆಯೂ ಬರುವುದಿಲ್ಲ)

ಇನ್ನು ಮೋಕ್ಷವನ್ನು ಅಂಗೀಕರಿಸುತ್ತೇವೆ ಎನ್ನುವುದಾದರೆ, ಪ್ರಕೃತದಲ್ಲಿ ಒಂದುವೇಳೆ ತರ್ಕವನ್ನು ಅಪ್ರಮಾಣವೆಂದು ಹೇಳಿದರೆ ಆಗ ಮೋಕ್ಷವೇ ಸಿದ್ಧಿಸದೇ ಹೋಗಬೇಕಾಗುತ್ತದೆ. ಯಾಕೆ? ಮೋಕ್ಷವನ್ನು ಸಾಧಿಸಲು ಬೇರೆ ಉಪಾಯ ಯಾವುದೂ ಇಲ್ಲ. ಆಗಮದಿಂದ ಮೋಕ್ಷವನ್ನು ಸಾಧಿಸಬಹುದಲ್ಲ? ಎಂದರೆ, ಅದು ಸರಿಯಲ್ಲ. ಮೋಕ್ಷವನ್ನೇ ಒಪ್ಪದಿರುವ ವ್ಯಕ್ತಿಯು ಆಗಮಕ್ಕೆ ಪ್ರಾಮಾಣ್ಯವನ್ನು ಒಪ್ಪಿಲ್ಲ. ಹೀಗಾಗಿ ತರ್ಕಕ್ಕೆ ಪ್ರಾಮಾಣ್ಯವನ್ನು ಒಪ್ಪದೇ ಹೋದರೆ ಮೋಕ್ಷವೇ ಸಿದ್ಧಿಸದೇ ಹೋಗಬೇಕಾಗುತ್ತದೆ.

ಮತ್ತು ಸತ್‌ಗೆ ಕಾರಣತ್ವ ಇಲ್ಲ ಎಂದು ಸಾಧಿಸುವ, ಅಸತ್‌ಗೆ ಕಾರಣತ್ವವನ್ನು ಸಾಧಿಸುವ ನಿಮ್ಮ ತರ್ಕಗಳೂ ಅಪ್ರಮಾಣವಾಗುವುದರಿಂದ ಆ ತರ್ಕಗಳಿಂದಾಗಿ 'ಸತ್‌ಗೆ ಕಾರಣತ್ವ ಇಲ್ಲ' ಎಂದು ನಿಷೇಧಿಸಲು ಬರುವುದಿಲ್ಲ.

ಆದ್ದರಿಂದ ತರ್ಕಕ್ಕೆ ಪ್ರಾಮಾಣ್ಯವನ್ನು ಒಪ್ಪಲೇಬೇಕಾದ್ದರಿಂದ, ತರ್ಕಬಲದಿಂದಾಗಿ ಸತ್‌ಗೆ ಕಾರಣತ್ವವನ್ನು ಸಮರ್ಥಿಸಿದ್ದು ಹಾಗೂ ಅಸತ್‌ಗೆ ಕಾರಣತ್ವವನ್ನು ನಿಷೇಧಿಸಿದ್ದು

ಸಮಂಜಸವೇ ಆಗಿದೆ ಎಂದು ಸಿದ್ಧವಾಗಿ, ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 13

### ಆಕ್ಷೇಪ

**ಸೂ.ರ.:– ननु मास्त्वसच्छब्दिताभावतत्त्वं जगतः कारणम् । तथाऽपि न विष्णोर्जगत्कारणत्वसम्भवः । विप्रतिपन्नं जगन्निष्कारणकं, अचेतनकारणकं, जीवकारणकं, वा कार्यत्वात् कूलपतनदध्यादिवदिति निष्कारणत्वादिसाधकयुक्तिविरोधात् । न च निर्मूलयुक्तेरसाधकत्वमिति वाच्यम् । अकस्मादिति श्रुतिमूलत्वादित्याशंकां परिहरत्सूत्रमुपन्यस्यति ॥**

**ಅನು.:–** ಅಸತ್‌ಶಬ್ದವಾಚ್ಯವಾದ ಅಭಾವತತ್ತ್ವವು ಜಗತ್ತಿಗೆ ಕಾರಣವಾಗುವುದು ಬೇಡ. ಆದರೂ ವಿಷ್ಣುವಿಗೆ ಜಗತ್ಕಾರಣತ್ವವು (ಉಪಪನ್ನವಾಗುವುದಿಲ್ಲ) ಸಂಭಾವಿತ ವಾಗುವುದಿಲ್ಲ. ಯಾಕೆಂದರೆ –

**ವಿಪ್ರತಿಪನ್ನಂ ಜಗತ್ ನಿಷ್ಕಾರಣಕಂ ಕಾರ್ಯತ್ವಾತ್ ಕೂಲಪತನದಧ್ಯಾದಿವತ್**
**ವಿಪ್ರತಿಪನ್ನಂ ಜಗತ್ ಅಚೇತನಕಾರಣಕಂ ಕಾರ್ಯತ್ವಾತ್ ಕೂಲಪತನದಧ್ಯಾದಿವತ್**
**ವಿಪ್ರತಿಪನ್ನಂ ಜಗತ್ ಜೀವಕಾರಣಕಂ ಕಾರ್ಯತ್ವಾತ್ ಕೂಲಪತನದಧ್ಯಾದಿವತ್**

ಎಂಬುದಾಗಿ ನಿಷ್ಕಾರಣತ್ವಸಾಧಕವಾದ, ಅಚೇತನಕಾರಣಕತ್ವಸಾಧಕವಾದ, ಜೀವಕಾರಣಕತ್ವಸಾಧಕವಾದ ಯುಕ್ತಿಗಳ ವಿರೋಧ ಬರುತ್ತದೆ.

ಈ ಯುಕ್ತಿಗಳಿಗೆ ಮೂಲಪ್ರಮಾಣ ಯಾವುದೂ ಇಲ್ಲವಾದ್ದರಿಂದ ನಿರ್ಮೂಲ-ಯುಕ್ತಿಗಳು ಸಾಧಕವಾಗುವುದಿಲ್ಲ ಎಂದು ಆಶಂಕೆ ಬಂದರೆ, ಅದು ಸರಿಯಲ್ಲ.

"ಅಕಸ್ಮಾದ್ಧೀದಮಾವಿರಾಸೀದಕಸ್ಮಾತ್ತಿಷ್ಠತ್ಯಕಸ್ಮಾಲ್ಲಯಮಭ್ಯುಪೈತಿ"

ಎಂಬ ಶ್ರುತಿಯೇ ಈ ಯುಕ್ತಿಗಳಿಗೆ ಆಧಾರವಾಗಿರುವುದರಿಂದ ಯುಕ್ತಿಗಳು ನಿರ್ಮೂಲವಲ್ಲ. ಆದ್ದರಿಂದ ಯುಕ್ತಿಗಳಿಗೆ ಸಾಧಕತ್ವವು ಉಪಪನ್ನವಾಗುತ್ತದೆ. ಅಂತಹ ಸಾಧಕವಾದ ಯುಕ್ತಿಗಳ ವಿರೋಧ ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ एतेन शिष्टा अपरिग्रहा अपि व्याख्याता: ॐ (२.१.१३)

**ಸೂತ್ರಾರ್ಥ :–** ಏತೇನ=ಸ್ವಪಕ್ಷದಲ್ಲಿ ದೃಷ್ಟಾಂತಭಾವ, ಪರಪಕ್ಷದಲ್ಲಿ ದೃಷ್ಟಾಂತಾಭಾವ ಎಂಬ ಹೇತುವಿನಿಂದಲೇ ಅಪರಿಗ್ರಹಾಃ = ವೇದಪರಿಗ್ರಹಶೂನ್ಯವಾದ ವೇದವಿರುದ್ಧವೂ ಆದ ಅಪಿ ಶಿಷ್ಟಾಃ = ಉಳಿದ (ಅವಶಿಷ್ಟವಾದ) ಜೀವಕರ್ತೃತ್ವಪಕ್ಷಕಾಲಕರ್ತೃತ್ವಪಕ್ಷ - ಸ್ವಭಾವಕರ್ತೃತ್ವಪಕ್ಷಗಳೂ ಸಹ ವ್ಯಾಖ್ಯಾತಾಃ = ದೂಷಿತವಾಗಿವೆ.

### ಸಮಾಧಾನ

**ಸೂ.ರ.:– एवं च दृष्टान्तभावेनाभावेन च वेदविरुद्धानामकारणत्वाचेतनकर्तृकत्वमायिब्रह्मकर्तृकत्वकालस्वभावकारणत्वसिद्धान्तानां निरस्तत्वात् । अकस्माद्धीदं, प्रधानादिदमुत्पन्नं, जीवाद्भवन्ति भूतानि, इत्यादिश्रुतीनां विष्णुपरत्वात् । अतो युक्त्यादेराभासत्वेनाविरोधाद्युक्तं लक्षणसूत्रमिति सिद्धम् ॥**

**ಅನು.:–** ಹಿಂದೆ ಹೇಳಿದ ಸ್ವಪಕ್ಷದಲ್ಲಿ ದೃಷ್ಟಾಂತಭಾವ - ಪರಪಕ್ಷದಲ್ಲಿ ದೃಷ್ಟಾಂತಾ-ಭಾವ ಎಂಬ ಹೇತುವಿನಿಂದಲೇ ವೇದವಿರುದ್ಧವಾದ ಅಕಾರಣತ್ವಪಕ್ಷ-ಅಚೇತನಕರ್ತೃತ್ವಪಕ್ಷ - ಮಾಯಿಬ್ರಹ್ಮಕರ್ತೃತ್ವಪಕ್ಷ - ಕಾಲಕರ್ತೃತ್ವಪಕ್ಷ - ಸ್ವಭಾವಕಾರಣತ್ವ ಪಕ್ಷಗಳೆಲ್ಲವೂ ನಿರಸ್ತವಾಗಿವೆ.

ಹಾಗಾದರೆ ''ಅಕಸ್ಮಾದ್ಧೀದಂ'' ''ಪ್ರಧಾನಾದಿದಮುತ್ಪನ್ನಂ'' ''ಜೀವಾದ್ಭವಂತಿ ಭೂತಾನಿ'' ಇತ್ಯಾದಿಶ್ರುತಿಗಳಿಗೆ ಗತಿ ಏನು? ಎಂದರೆ, ಈ ಎಲ್ಲ ಶ್ರುತಿಗಳೂ ಮುಖ್ಯವಾಗಿ ವಿಷ್ಣುಪರವೇ ಆಗಿವೆ. ಹೀಗಾಗಿ ಶ್ರುತಿವಿರೋಧವೂ ಬರುವುದಿಲ್ಲ.

ಆದ್ದರಿಂದ ನಿಷ್ಕಾರಣಕತ್ವಾದಿಯುಕ್ತಿಗಳು ಆಭಾಸವಾಗುವುದರಿಂದ ಅವುಗಳ ವಿರೋಧ ವಿಷ್ಣುವಿನ ಜಗತ್ಕಾರಣತ್ವಪಕ್ಷಕ್ಕೆ ಬರುವುದಿಲ್ಲ.

ಹಾಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡಿದರೆ ಯಾವ ಯುಕ್ತಿವಿರೋಧವಾಗಲೀ ಶ್ರುತಿವಿರೋಧವಾಗಲೀ ಬಾರದ ಕಾರಣ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತ್ಯಾದಿ ಶ್ರುತಿಪ್ರಮಾಣಗಳಿಗೆ ಅನುಸಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣಸೂತ್ರದಲ್ಲಿ ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಅಸದಧಿಕರಣವು ಮುಗಿಯಿತು.

ಅಧಿಕರಣ - 5

## ಭೋಕ್ತ್ರಧಿಕರಣ

### ಸಂಗತಿ

**ಸೂ.ರ.:– अत्र बहुश्रुतिसिद्धत्वेन प्रबलया दृढयुक्त्या विरोधः परिह्रियते ॥**

**ಅನು.:–** ಬಹುಶ್ರುತಿಸಿದ್ಧವಾದ ನಿಮಿತ್ತ ಪ್ರಬಲವಾದ ದೃಢಯುಕ್ತಿಯ ವಿರೋಧವನ್ನು ಪರಿಹಾರ ಮಾಡುತ್ತಾರೆ ಐದನೇ ಈ ಭೋಕ್ತ್ರಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न विष्णोर्जगत्कारणत्वादि युक्तम् । तस्य जीवाभिन्नत्वात् । न हि जीवाभिन्नस्य कर्तृत्वाद्युपपद्यते । तस्य जीवाभेदः कुत इति चेत् । परेऽव्यये सर्व एकीभवन्तीति (मुं.३-२-७) श्रुतेः । अतो जीवाभिन्नत्वादीश्वरस्य जगत्कारणत्वाद्यनुपपन्नमिति न लक्षणसूत्रं युक्तमिति प्राप्ते सूत्रमुपन्यस्यति ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವಾದಿಗಳನ್ನು ಹೇಳಿದ್ದು ಯುಕ್ತವಲ್ಲ. ಏಕೆಂದರೆ - ವಿಷ್ಣುವು ಜೀವನಿಂದ ಅಭಿನ್ನನಾಗಿದ್ದಾನೆ. ಅಂತಹ ಜೀವನಿಂದ ಅಭಿನ್ನನಾದವನಿಗೆ ಕರ್ತೃತ್ವಾದಿಗಳು ಉಪಪನ್ನವಾಗುವುದಿಲ್ಲ.

ವಿಷ್ಣುವಿಗೆ ಜೀವನಿಂದ ಅಭೇದ ಇದೆ ಎನ್ನುವುದಾದರೂ ಹೇಗೆ ಸಿದ್ಧವಾಗುತ್ತದೆ? ಎಂದರೆ, ''ಪರೇಽವ್ಯಯೇ ಸರ್ವ ಏಕೀಭವಂತಿ'' (ಮುಂ.3-2-7) ಎಂಬ ಶ್ರುತಿಯಿಂದಲೇ ಜೀವ-ಬ್ರಹ್ಮರಲ್ಲಿ ಅಭೇದವು ಸಿದ್ಧವಾಗಿದೆ.

ಆದ್ದರಿಂದ ಈಶ್ವರನು ಜೀವನಿಂದ ಅಭಿನ್ನನಾದ್ದರಿಂದ ಅವನಿಗೆ ಜಗತ್ಕಾರಣತ್ವಾದಿ-ಗಳು ಅನುಪಪನ್ನವಾಗಿವೆ. ಹೀಗಾಗಿ ಲಕ್ಷಣಸೂತ್ರದಲ್ಲಿ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದೂ ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ भोक्त्रापत्तेरविभागश्चेत्स्याल्लोकवत् ॐ (२.१.१४)

**ಸೂತ್ರಾರ್ಥ** :– ಭೋಕ್ತ್ರಾಪತ್ತೇಃ = ಯಾವ ಕಾರಣ ಭೋಕ್ತೃವಾದ ಜೀವನಿಗೆ "ಪರೇಽವ್ಯಯೇ ಏಕೀಭವಂತಿ" ಎಂಬ ವಾಕ್ಯದಲ್ಲಿ ಬ್ರಹ್ಮಭಾವಾಪತ್ತಿಯು ಶ್ರುತವಾಗುತ್ತಿರುವುದರಿಂದ ತಯೋಃ ಅವಿಭಾಗಃ = ಆ ಜೀವ-ಬ್ರಹ್ಮರಲ್ಲಿ ಭೇದಾಭಾವವು (ಅಭೇದವು) ಇರುವುದೋ ತಸ್ಮಾತ್ = ಆ ಕಾರಣ ಅಲ್ಪಜೀವಾಭಿನ್ನಬ್ರಹ್ಮಣಃ ಜಗತ್ಕಾರಣತ್ವಂ ನ ಯುಕ್ತಂ = ಅಲ್ಪನಾದ ಜೀವನಿಂದ ಅಭಿನ್ನನಾದ ಬ್ರಹ್ಮನಿಗೆ ಜಗತ್ಕಾರಣತ್ವವು ಯುಕ್ತವಲ್ಲ ಇತಿ ಚೇತ್ = ಎಂಬುದಾಗಿ ಆಕ್ಷೇಪ ಬಂದರೆ, ನ = ಅದು ಸರಿಯಲ್ಲ.

ಕುತಃ=ಯಾಕೆ? ಎಂದರೆ, ಯತಃ=ಯಾವ ಕಾರಣ ಲೋಕವತ್ ಸ್ಯಾತ್=ಲೋಕದಲ್ಲಿ ನೀರಿನಲ್ಲಿ ಮತ್ತೊಂದು ನೀರು ಸೇರಿದಾಗ ಏಕೀಭೂತವಾಯಿತು ಎಂಬುದಾಗಿ ಹೇಗೆ ಹೇಳುತ್ತೇವೆಯೋ ಅದೇ ರೀತಿಯಾಗಿ ಇಲ್ಲಿಯೂ ಸಹ ಸ್ಥಾನೈಕ್ಯಾದಿಗಳನ್ನು ಅವಲಂಬಿಸಿ ಜೀವ-ಬ್ರಹ್ಮರಲ್ಲಿ ಏಕೀಭವಂತಿ ಎಂದು ಐಕ್ಯೋಕ್ತಿಯು ಉಪಚರಿತವಾಗುತ್ತದೆ. ಆದ್ದರಿಂದ ದೋಷವಿಲ್ಲ.

### ಸಿದ್ಧಾಂತ

**ಸೂ.ರ.:– एवं च जीवेश्वरयोरभेदाभावान्नेश्वरस्य विरुद्धं जगत्कारणत्वादिकम् । न च परेऽव्यये सर्व इति श्रुतेः कथमैक्याभाव इति । निरञ्जनः परमं साम्यमुपैतीति (मुं.३-१-३) संनिहितवाक्यविरोधेन श्रुतेस्तत्र तात्पर्याभावात् । का गतिस्तर्ह्यभेदश्रुतेरिति चेत् । स्थानैक्याद्यालम्बनत्वेन जलैकीभावोक्तिवदुपचरितत्वोपपत्तेः ।**

**ಅನು.**:– ಜೀವ-ಬ್ರಹ್ಮರಲ್ಲಿ ಅಭೇದ ಇಲ್ಲವಾದ್ದರಿಂದ ಈಶ್ವರನಿಗೆ ಜಗತ್ಕಾರಣತ್ವಾದಿಗಳು ವಿರುದ್ಧವಲ್ಲ.

ಪರೇಽವ್ಯಯೇ ಏಕೀಭವಂತಿ ಎಂಬುದಾಗಿ ಶ್ರುತಿ ಇರುವುದರಿಂದ ಜೀವ-ಬ್ರಹ್ಮರಲ್ಲಿ ಐಕ್ಯ ಇಲ್ಲ ಎಂದು ಹೇಗೆ ಹೇಳುತ್ತೀರಿ? ಎಂದರೆ, ಅದು ಸರಿಯಲ್ಲ. ಪರೇಽವ್ಯಯೇ ಎಂಬ ಶ್ರುತಿಯು ಐಕ್ಯಪರವೇ ಆಗಿದ್ದಾದರೆ ನಿರಂಜನಃ ಪರಮಂ ಸಾಮ್ಯಮುಪೈತಿ (ಮುಂ. 3-1-3) ಎಂಬ ಭೇದಬೋಧಕವಾದ ಸನ್ನಿಹಿತವಾದ ವಾಕ್ಯದ ವಿರೋಧ ಬರುವುದರಿಂದಾಗಿ ಪರೇಽವ್ಯಯೇ ಎಂಬ ಶ್ರುತಿಗೆ ಐಕ್ಯದಲ್ಲಿ ತಾತ್ಪರ್ಯವು ಕೊಡುವುದಿಲ್ಲ.

ಹಾಗಾದರೆ ಪರೇಽವ್ಯಯೇ ಇತ್ಯಾದಿ ಅಭೇದಶ್ರುತಿಗೆ ಗತಿ ಏನು? ಎಂದರೆ, ನೀರಿನಲ್ಲಿ ನೀರು ಸೇರಿದಾಗ ಏಕೀಭೂತವಾಯಿತು ಎಂದು ವ್ಯವಹರಿಸುವಂತೆ ಸ್ಥಾನೈಕ್ಯಾದಿ ನಿಮಿತ್ತದಿಂದಾಗಿ ಏಕೀಭಾವವ್ಯವಹಾರವನ್ನು ಕೂಡಿಸಬಹುದಾಗಿದೆಯಾದ್ದರಿಂದ ಉಪಚರಿತವಾಗಿದೆ ಅಭೇದಶ್ರುತಿ.

**ಸೂ.ರ.:– न च मुक्तेश्वरयोर्भेदसमर्थनस्य फलाध्यायसङ्गतत्वेन नैतत्सूत्रार्थ इति । अस्याधिकरणस्य फलाध्यायसङ्गतत्वेऽपि न ह्यन्यस्येत्युक्त विरोधपरिहारात्मके पादेऽतर्भूतत्वेनात्रास्याधिकरणस्य विशेषितत्वात् । अतो विष्णोर्जगत्कारणत्वे युक्तिविरोधाभावेनोपपन्नं लक्षणसूत्रमिति सिद्धम् ॥**

**ಅನು.:–** ಮುಕ್ತ–ಬ್ರಹ್ಮರಲ್ಲಿ ಭೇದಸಮರ್ಥನೆಯು ಫಲಾಧ್ಯಾಯಕ್ಕೆ ಸಂಗತವಾದ್ದ-ರಿಂದ ಈ ಸೂತ್ರದ ಅರ್ಥವಾಗಲು ಸಾಧ್ಯವಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಈ ಅಧಿಕರಣವು ಫಲಾಧ್ಯಾಯಕ್ಕೆ ಸಂಗತವಾಗುವುದಾದರೂ ಸಹ ಯುಕ್ತಿವಿರೋಧ ಪರಿಹಾರಾತ್ಮಕವಾದ ಪಾದದಲ್ಲಿ ಅಂತರ್ಭಾವವಾಗುವುದರಿಂದ ಇಲ್ಲಿ ಈ ಅಧಿಕರಣವು ವಿಶೇಷಿತವಾಗಿದೆ.

ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ಯುಕ್ತಿವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಭೋಕ್ತ್ರಧಿಕರಣವು ಮುಗಿಯಿತು.

ಅಧಿಕರಣ - 6

# ಆರಂಭಣಾಧಿಕರಣ

## ಸಂಗತಿ

**ಸೂ.ರ.:– अत्र विष्णोर्जगत्कर्तृत्वे बहुयुक्तिविरोधः परिह्रियते ॥**

**ಅನು.:–** ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಿದಾಗ ಬರುವ ಬಹುಯುಕ್ತಿ ವಿರೋಧವನ್ನು ಪರಿಹಾರ ಮಾಡುತ್ತಾರೆ ಆರನೇ ಈ ಆರಂಭಣಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु विप्रतिपन्ना सृष्टिः स्वतन्त्रबहुसाधनसापेक्षा । सृष्टित्वात् । घटादिसृष्टिवत् । तथा चेश्वरः स्वतन्त्रसाधनसापेक्ष एव सृष्ट्यादिकर्तेति न तस्य जगज्जन्मादिकारणत्वेन सर्वगुणपूर्णत्वसिद्धिरिति प्राप्ते सूत्रमाह ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ, ಏಕೆಂದರೆ- ''ವಿಪ್ರತಿಪನ್ನಾ ಸೃಷ್ಟಿಃ ಸ್ವತಂತ್ರಬಹುಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಘಟಸೃಷ್ಟಿವತ್'' ಸಂದೇಹಕ್ಕೆ ವಿಷಯವಾಗಿರುವ ಈ ಜಗತ್ತಿನ ಸೃಷ್ಟಿಯು, ಅನೇಕ ಸ್ವತಂತ್ರಸಾಧನಗಳಿಂದ ಸಾಪೇಕ್ಷವಾಗಿದೆ, ಸೃಷ್ಟಿಯಾದ್ದರಿಂದ. ಘಟದ ಸೃಷ್ಟಿಯೂ ಒಂದು ಸೃಷ್ಟಿಯಾದ್ದರಿಂದ ಅದು ಮೃತ್ ಮೊದಲಾದ ಸ್ವತಂತ್ರಸಾಧನಗಳಿಂದ ಹೇಗೆ ಸಾಪೇಕ್ಷವಾಗಿದೆಯೋ ಹಾಗೆ ಜಗತ್ತಿನ ಸೃಷ್ಟಿಯೂ ಒಂದು ಸೃಷ್ಟಿಯೇ ಆದ್ದರಿಂದ ಅನೇಕ ಸ್ವತಂತ್ರಸಾಧನಗಳಿಂದ ಸಾಪೇಕ್ಷವಾಗಿದೆ ಎಂದು ಅನುಮಾನದಿಂದ ಸಾಧಿಸುತ್ತೇವೆ.

ಆದ್ದರಿಂದ ಈಶ್ವರನು ಸ್ವತಂತ್ರಸಾಧನಸಾಪೇಕ್ಷವಾಗಿಯೇ ಸೃಷ್ಟ್ಯಾದಿಕರ್ತೃವಾಗಿದ್ದಾನೆ ಹೀಗಾಗಿ ಜಗಜ್ಜನ್ಮಾದಿಕಾರಣತ್ವನಿಮಿತ್ತದಿಂದಾಗಿ ಈಶ್ವರನಿಗೆ ಸರ್ವಗುಣಪೂರ್ಣತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ तदनन्यत्वमारम्भणशब्दादिभ्यः ॐ (२.१.१५)**

ತದನನ್ಯತ್ವಂ = ತಸ್ಯ ಸ್ವತಂತ್ರಕಾರಣವಾದದ್ದಕ್ಕೆ ಅನನ್ಯತ್ವಂ ಬ್ರಹ್ಮನಿಂದ ಅಭಿನ್ನತ್ವ (ಅಭೇದ)ವನ್ನು ಹೇಳಬೇಕು. ಕುತಃ = ಯಾಕೆ? ಆರಂಭಣಶಬ್ದಾದಿಭ್ಯಃ = ಆರಂಭಣೇ ಸಾಧನವಿಷಯದಲ್ಲಿ ಫಲೋಪಲಕ್ಷಿತವಾದ ಕಿಂ ಸ್ವಿದಾಸೀತ್ (ಋ. 10-81-2) ಎಂಬುದಾಗಿ ಅಧಿಷ್ಠಾನಾದಿಗಳ ಆಕ್ಷೇಪ ಮಾಡುವ ವಾಕ್ಯ(ಶ್ರುತಿ) ಇರುವುದರಿಂದ. ಸ್ವಾತಂತ್ರ್ಯಾದಿಯುಕ್ತಿಭಿಶ್ಚ= ಮತ್ತು ಸ್ವಾತಂತ್ರ್ಯಾದಿ ಯುಕ್ತಿಗಳೂ ಇರುವುದರಿಂದ.

## ಸಿದ್ಧಾಂತ

**ಸೂ.ರ.:– एवं च नानुमानबलेनेश्वरसृष्टेः स्वतन्त्रबहुसाधनसाध्यत्वं वक्तुं शक्यम् । किं स्विदसीदिति श्रुत्येश्वरः स्वतन्त्रसाधनविधुरः साधनान्तरमपहाय स्रष्टुं शक्तत्वात् । व्यतिरेकेण कुलालवत् । तथेश्वरः स्वतन्त्रसाधनशून्यः । स्वेच्छयोपात्तसाधनत्वात् । यः स्वतन्त्र-साधनसहितः नासौ स्वेच्छयोपात्तसाधनः । किन्तु विपक्षे कार्यानुत्पत्ति-भयोपात्तसाधनः । यथा कुलालः । तथेश्वरः स्वतन्त्रसाधनरहितः साधनसत्ताप्रदत्वात् । व्यतिरेकेण कुलालवदित्यादियुक्तिभिश्च विरुद्धत्वात् । अतो भगवतः स्वातन्त्र्येण सर्वकर्तृत्वे विरोधगन्धाभावाद्युक्तं तस्य सर्वगुणपूर्णत्वमिति सिद्धम् ॥**

**ಅನು.:–** ಅನುಮಾನಬಲದಿಂದಾಗಿ ಈಶ್ವರಸೃಷ್ಟಿಗೆ ಸ್ವತಂತ್ರಬಹುಸಾಧನಸಾಧ್ಯತ್ವ-ವನ್ನು ಹೇಳುವುದು ಸರಿಯಾಗುವುದಿಲ್ಲ, ಹಾಗೆ ಹೇಳುವುದಾದರೆ – "ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮಾತ್ಸ್ವಿತ್ಕಥಾಽಽಸೀತ್" (ಋ.ಸಂ. 10-81-2) ಎಂಬುದಾಗಿ ಅಧಿಷ್ಠಾನಾದಿ ಆರಂಭಣಗಳನ್ನು ಆಕ್ಷೇಪಿಸುತ್ತಿರುವ ಶ್ರುತಿಯ ವಿರೋಧ ಬರಬೇಕಾಗುತ್ತದೆ. ಮತ್ತು ಅನುಮಾನಗಳ ವಿರೋಧವೂ ಬರಬೇಕಾಗುತ್ತದೆ.

### ಅನುಮಾನ – 1

ಈಶ್ವರಃ, ಸ್ವತಂತ್ರಸಾಧನವಿಧುರಃ, ಸಾಧನಾಂತರಮಪಹಾಯ ಸ್ರಷ್ಟುಂ ಶಕ್ತತ್ವಾತ್, ವ್ಯತಿರೇಕೇಣ ಕುಲಾಲವತ್ ।

ಈಶ್ವರನು, ಸ್ವತಂತ್ರಸಾಧನರಹಿತನಾಗಿದ್ದಾನೆ, ಇತರ ಸಾಧನಗಳನ್ನು ಬಿಟ್ಟು ಸೃಷ್ಟಿಸಲು ಸಮರ್ಥನಾದ್ದರಿಂದ, ವ್ಯತಿರೇಕೇಣ ಕುಲಾಲನಂತೆ. (ಕುಲಾಲನು ಇತರ ಸಾಧನಗಳನ್ನು ಬಿಟ್ಟು ಸೃಷ್ಟಿಸಲು ಸಮರ್ಥನಾಗಿಲ್ಲ. ಆದ್ದರಿಂದ ಅವನು ಹೇಗೆ ಸ್ವತಂತ್ರಸಾಧನಸಹಿತನೋ ಹಾಗೆ ಈಶ್ವರ ಅಲ್ಲ)

ಅನುಮಾನ – 2

**ಈಶ್ವರಃ ಸ್ವತಂತ್ರಸಾಧನಶೂನ್ಯಃ ಸ್ವೇಚ್ಛಯೋಪಾತ್ತಸಾಧನತ್ವಾತ್ ।**
**ಯಃ ಸ್ವತಂತ್ರಸಾಧನಸಹಿತಃ ನಾಸೌ ಸ್ವೇಚ್ಛಯೋಪಾತ್ತಸಾಧನಃ ।**
**ಕಿಂತು ವಿಪಕ್ಷೇ ಕಾರ್ಯಾನುತ್ಪತ್ತಿಭಯೋಪಾತ್ತಸಾಧನಃ ಯಥಾ ಕುಲಾಲಃ ।**

ಈಶ್ವರನು, ಸ್ವತಂತ್ರಸಾಧನಶೂನ್ಯನಾಗಿದ್ದಾನೆ, ಸ್ವೇಚ್ಛಾದಿಂದಲೇ ಸಾಧನಗಳನ್ನು ತೆಗೆದುಕೊಂಡದ್ದರಿಂದ. ಯಾವನು ಸ್ವತಂತ್ರಸಾಧನಸಹಿತನಾಗಿರುತ್ತಾನೋ ಅವನು ಸ್ವೇಚ್ಛಾದಿಂದ ಉಪಾತ್ತಸಾಧನನಲ್ಲ. ಕಿಂತು ಸ್ವತಂತ್ರಸಾಧನಗಳನ್ನು ಪಡೆಯದೇ ಇದ್ದರೆ ಕಾರ್ಯವು ಹುಟ್ಟದೇ ಹೋಗಬೇಕಾಗುತ್ತದೆ ಎಂಬ ಭಯದಿಂದ ಸಾಧನಗಳನ್ನು ಪಡೆದವನಾಗಿರುತ್ತಾನೆ, ಕುಲಾಲನಂತೆ.

ಅನುಮಾನ – 3

**ಈಶ್ವರಃ ಸ್ವತಂತ್ರಸಾಧನರಹಿತಃ ಸಾಧನಸತ್ತಾಪ್ರದತ್ವಾತ್ । ವ್ಯತಿರೇಕೇಣ ಕುಲಾಲವತ್ ।**

ಈಶ್ವರನು, ಸ್ವತಂತ್ರಸಾಧನರಹಿತನಾಗಿದ್ದಾನೆ, ಆ ಸಾಧನಗಳಿಗೇ ಸತ್ತಾಪ್ರದನಾಗಿದ್ದ-ರಿಂದ. ಕುಲಾಲನು ಸಾಧನಗಳಿಗೆ ಸತ್ತಾಪ್ರದನಾಗಿಲ್ಲವಾದ್ದರಿಂದ ಅವನು ಸ್ವತಂತ್ರಸಾಧನ-ಸಹಿತನಾಗಿದ್ದಾನೆ. ಈಶ್ವರನು ಸಾಧನಗಳಿಗೆ ಸತ್ತಾಪ್ರದನಾಗಿರುವ ಕಾರಣ ಅವನು ಸ್ವತಂತ್ರಸಾಧನರಹಿತನಾಗಿದ್ದಾನೆ.

ಇತ್ಯಾದಿ ಅನುಮಾನಗಳು ಈಶ್ವರನಿಗೆ ಸ್ವತಂತ್ರಸಾಧನರಹಿತತ್ವವನ್ನು ಸಾಧಿಸು-ತ್ತಿರುವುದರಿಂದ ಪ್ರಕೃತ ಈಶ್ವರನಿಗೆ ಸ್ವತಂತ್ರಸಾಧನಸಹಿತತ್ವವನ್ನು ಶಂಕಿಸುವುದಾದರೆ ಈ ಅನುಮಾನಗಳ ವಿರೋಧವೂ ಬರುತ್ತದೆ. ಆದ್ದರಿಂದ ಶ್ರುತಿ-ಅನುಮಾನಗಳ ವಿರೋಧ ಬರುವ ಕಾರಣ ಈಶ್ವರನಿಗೆ ಸ್ವತಂತ್ರಸಾಧನಸಹಿತತ್ವವನ್ನು ಹೇಳಲು ಬರುವುದಿಲ್ಲ.

ಹೀಗಾಗಿ ಭಗವಂತನಿಗೆ ಸ್ವಾತಂತ್ರ್ಯೇಣ ಸರ್ವಜಗತ್ಸೃಷ್ಟ್ಯಾದಿಕರ್ತೃತ್ವವನ್ನು ಹೇಳಿದರೆ ಯಾವ ವಿರೋಧದ ಗಂಧವೂ ಬಾರದ ಕಾರಣ ವಿಷ್ಣುವಿಗೆ ಸರ್ವಕರ್ತೃತ್ವವನ್ನು ಹೇಳಿ ಆ ಮೂಲಕ ಸಕಲಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

## ಸೂತ್ರ - 16

**ಸೂ.ರ.:– युक्त्यन्तरेण स्वतन्त्रसाधनं प्रतिक्षिपत्सूत्रमुपन्यस्यति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಸ್ವತಂತ್ರಸಾಧನವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ–

### ॐ भावे चोपलब्धेः ॐ (२.१.१६)

**ಸೂತ್ರಾರ್ಥ :–** ಯತಃ = ಯಾವ ಕಾರಣ ಈಶ್ವರಾನ್ಯಸ್ವತಂತ್ರಸಾಧನಸ್ಯ ಭಾವೇ = ಭಗವಂತನಿಂದ ಭಿನ್ನವಾದ ಸ್ವತಂತ್ರಸಾಧನವು ಇರುವುದೇ ಆಗಿದ್ದರೆ ಉಪಲಬ್ಧೇಃ ಚ = ಕಾಣಬೇಕಾದ ಪ್ರಸಂಗ ಇರುವುದರಿಂದಲೂ ಸಹ ಅತೋಽಪಿ = ಆ ಕಾರಣದಿಂದಲೂ ಸಹ ನಾಸ್ತ್ಯತ್ ಸ್ವತಂತ್ರಸಾಧನಮ್ = ಪರಮಾತ್ಮನಿಂದ ಭಿನ್ನವಾದ ಸ್ವತಂತ್ರಸಾಧನ ಯಾವುದೂ ಇಲ್ಲ.

**ಸೂ.ರ.:– एवं च यदीश्वरातिरिक्तं स्वतन्त्रसाधनं स्यात्तर्हि वेदादि-प्रमाणैरुपलभ्येत । न चोपलभ्यते । तस्मान्नास्तीति बाधकतर्कसद्भावात् ।**

**ಅನು.:–** "ಒಂದುವೇಳೆ ಈಶ್ವರನಿಂದ ಭಿನ್ನವಾದ ಸ್ವತಂತ್ರಸಾಧನವು ಇದ್ದದ್ದೇ ಆದರೆ ಹಾಗಾದಲ್ಲಿ ವೇದಾದಿಪ್ರಮಾಣಗಳಿಂದ ಅದು ಉಪಲಬ್ಧವಾಗಬೇಕಿತ್ತು. ಆದರೆ ಈಗಲಾದರೋ ಅಂತಹ ಸಾಧನವು ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ಈಶ್ವರನಿಂದ ಭಿನ್ನವಾದ ಸ್ವತಂತ್ರಸಾಧನ ಯಾವುದೂ ಇಲ್ಲ" ಎಂಬುದಾಗಿ ಬಾಧಕತರ್ಕ ಇರುವುದರಿಂದ ಸ್ವತಂತ್ರಸಾಧನ ಇಲ್ಲ ಎಂದು ತಿಳಿದುಬರುತ್ತದೆ.

**ಸೂ.ರ.:– ननु प्रमाणानुपलब्धमपि वस्तु किं न स्यादिति चेत् । पञ्चभिर्वेदैरनुक्तमपि वस्तु नास्ति । कुतः । प्रमाणमात्रासिद्धमस्तीत्यनुक्तं पञ्चभिरिति (स्कान्दे) वचनात् । अतो विरोधाभावायुक्तं लक्षणसूत्रमिति सिद्धम् ॥**

**ಅನು.:–** ಈಶ್ವರಾತಿರಿಕ್ತವಾದ ಸ್ವತಂತ್ರಸಾಧನವು ಪ್ರಮಾಣಗಳಿಂದ ಅನುಪಲಬ್ಧ-ವಾದ್ದರಿಂದ ಇಲ್ಲ ಎಂದು ಏಕೆ ಹೇಳುತ್ತೀರಿ? ಅರ್ಥಾತ್ ಪ್ರಮಾಣಗಳಿಂದ ಅನುಪಲಬ್ಧ-ವಾದ ಮಾತ್ರಕ್ಕೆ ವಸ್ತು ಏಕೆ ಇರಬಾರದು? ಎಂದು ಶಂಕೆ ಬಂದರೆ, ಅದು ಸರಿಯಲ್ಲ

**ಅನುಕ್ತಂ ಪಂಚಭಿರ್ವೇದೈಃ ನ ವಸ್ತ್ವಸ್ತಿ ಕುತಶ್ಚನ ।**
**ಅತೋ ವೇದತ್ವಮೇತೇಷಾಂ ಯತಸ್ತೇ ಸರ್ವವೇದಕಾಃ ॥**

ಎಂಬುದಾಗಿ ಸ್ಕಾಂದಪುರಾಣದ ವಚನ ಇರುವುದರಿಂದ ಐದು ವೇದಗಳಲ್ಲಿ ಹೇಳದ ವಸ್ತು ಇರಲು ಸಾಧ್ಯವೇ ಇಲ್ಲ. ಹೀಗಾಗಿ ಆ ಐದು ವೇದಗಳಲ್ಲಿಯೂ ಸ್ವತಂತ್ರಸಾಧನವು ಹೇಳಲ್ಪಟ್ಟಿಲ್ಲವಾದ್ದರಿಂದ ಅಂತಹ ಈಶ್ವರಾತಿರಿಕ್ತವಾದ ಸ್ವತಂತ್ರಸಾಧನವು ಇಲ್ಲ. ಆದ್ದರಿಂದ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 17

### ಆಕ್ಷೇಪ

**ಸೂ.ರ.:– नन्वद्भ्यः सम्भूत (महाना.१-११) इति श्रुतौ प्रकृतिं स्वामवष्टभ्य विसृजामि युगे युग इति (भ.गी.४-६) स्मृतौ च भगवदितर प्रकृत्यबादिस्वतन्त्रसाधनसत्त्वप्रतीतेस्तदनुपलब्धेरिष्टापादनमिति प्राप्ते सूत्रमवतारयति ॥**

**ಅನು.:–** "ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ" (ತೈ.ಆ. 3-13) ಎಂಬ ಶ್ರುತಿಯಲ್ಲಿ ಹಾಗೂ "ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಯುಗೇ ಯುಗೇ।" (ಭ.ಗೀ. 4-6) ಎಂಬುದಾಗಿ ಸ್ಮೃತಿಯಲ್ಲಿಯೂ ಭಗವಂತನಿಂದ ಭಿನ್ನವಾದ ಪ್ರಕೃತಿ - ಅಪ್ ಮೊದಲಾದ ಸ್ವತಂತ್ರಸಾಧನಗಳು ಇವೆ ಎಂದು ಹೇಳುತ್ತಿರುವುದರಿಂದ "ಸ್ವತಂತ್ರಸಾಧನಗಳು ಇದ್ದದ್ದಾದರೆ ಉಪಲಬ್ಧವಾಗಬೇಕಿತ್ತು" ಎಂಬ ಆಪಾದನೆಯು ಇಷ್ಟಾಪಾದನವೇ ಆಗಿದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

### ॐ सत्त्वाचावरस्य ॐ (२.१.१७)

**ಸೂತ್ರಾರ್ಥ :–** (ಚಶಬ್ದವು ಏವ ಎಂಬ ಅರ್ಥದಲ್ಲಿದೆ) ಅವರಸ್ಯ = ಅಸ್ವತಂತ್ರವಾದ ಸಾಧನವು ಸತ್ವಾಚ್ಚ(ಸತ್ವಾದೇವ) = ಇರುವುದರಿಂದಲೇ "ಅದ್ಭ್ಯಃ ಸಂಭೂತಃ" ಎಂಬ ವಾಕ್ಯವು ಅಂತಹ ಅಸ್ವತಂತ್ರಸಾಧನಪರವಾಗಿದೆ. ಹೀಗಾಗಿ ಈ ವಾಕ್ಯದ ವಿರೋಧ ಬರುವುದಿಲ್ಲ.

## ಸಮಾಧಾನ

**ಸೂ.ರ.:– एवं चावरस्यैव साधनस्य सत्त्वादेव श्रुतेस्तद्विपयत्वात् । ततश्च यस्योपलब्धिरापाद्यते न तस्योपलब्धिः । यच्चोपलभ्यते न तत्स्वतन्त्रसाधनमितीष्टापादनाभावात् ।**

**ಅನು.:–** ಭಗವಂತನಿಂದ ಭಿನ್ನವಾದ ಅಸ್ವತಂತ್ರಸಾಧನವು ಇರುವುದರಿಂದಲೇ ಅದ್ಭ್ಯಃ ಸಂಭೂತಃ ಎಂಬ ಈ ಶ್ರುತಿಯು ಆ ಅಸ್ವತಂತ್ರಸಾಧನಪರವಾಗಿದೆ. ಹಾಗಾಗಿ ಯಾವ ಸ್ವತಂತ್ರಸಾಧನಗಳು ಉಪಲಬ್ಧವಾಗಲಿ ಎಂದು ಆಪಾದಿಸಲ್ಪಡುತ್ತಿವೆಯೋ ಅಂತಹ ಸ್ವತಂತ್ರಸಾಧನಗಳು ಇಲ್ಲವೇ ಇಲ್ಲವಾದ್ದರಿಂದ ಅವು ಉಪಲಬ್ಧವಾಗುವುದೇ ಇಲ್ಲ. ಇನ್ನು ಯಾವ ಪ್ರಕೃತಿ-ಅಪ್ ಮೊದಲಾದ ಸಾಧನಗಳು ಉಪಲಬ್ಧವಾಗುತ್ತಿವೆ ಅವು ಸ್ವತಂತ್ರಸಾಧನವಾಗಿಲ್ಲ. ಆದ್ದರಿಂದ ಆಪಾದನೆಯು ಇಷ್ಟಾಪಾದನೆಯಾಗಲು ಸಾಧ್ಯವಿಲ್ಲ.

**ಸೂ.ರ.:– न चास्यां श्रुतौ साधनमात्रं प्रतीयते न तु तस्य भगवदधीनत्वं तच्च लोकानुसारात्स्वतन्त्रमेव किं न स्यादिति वाच्यम् । काल आसीदिति (कापायण) श्रुतेः । प्रागभावेनोत्पत्तौ सिद्धायां सत्यां तदुत्पादकस्यान्यस्याभावाद्धरेरेव जगत्कर्तृत्वस्य सिद्धेः । तस्माद्युक्तं जगत्कारणत्वलक्षणमिति सिद्धम् ॥**

**ಅನು.:–** ಅದ್ಭ್ಯಃ ಸಂಭೂತಃ ಎಂಬ ಈ ಶ್ರುತಿಯಲ್ಲಿ ಪ್ರಕೃತ್ಯಾದಿಸಾಧನಗಳು ಇವೆ ಎಂದಷ್ಟೇ ತೋರುತ್ತಿದೆ. ಹೊರತು ಆ ಸಾಧನಗಳಿಗೆ ಭಗವದಧೀನತ್ವವು ತೋರುತ್ತಿಲ್ಲ. ಹಾಗಾಗಿ ಲೋಕಾನುಸಾರವಾಗಿ ಆ ಪ್ರಕೃತ್ಯಾದಿಸಾಧನಗಳು ಸ್ವತಂತ್ರಸಾಧನಗಳೇ ಏಕೆ ಆಗಬಾರದು? ಎಂದು ಶಂಕಿಸುವುದು ಸರಿಯಲ್ಲ.

''ಕಾಲ ಆಸೀತ್ಪುರುಷ ಆಸೀತ್ಪರಮ ಆಸೀತ್ತದ್ಯದಾಸೀತ್ತದಾವೃತಮಾಸೀ-ತ್ತದಧೀನಮಾಸೀದಥ ಹ್ಯೇಕ ಏವ ಪರಮ ಆಸೀದ್ಯಸ್ಯೈತದಾಸೀನ್ನ ಹ್ಯೇತದಾಸೀತ್''

ಎಂಬುದಾಗಿ ಕಾಷಾಯಣ ಶ್ರುತಿಯು ಹೇಳುವಂತೆ ಇರುವ ಆ ಪ್ರಕೃತ್ಯಾದಿ-ಸಾಧನಗಳೆಲ್ಲವೂ ಭಗವದಧೀನವಾಗಿಯೇ ಇರುತ್ತವೆಯೇ ಹೊರತು ಸ್ವತಂತ್ರವಾಗಿ ಇರುವುದಿಲ್ಲ.

ಹೀಗಾಗಿ ವಿಷ್ಣುವಿಗೇ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ. ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 18

## ಆಕ್ಷೇಪ

**ಸೂ.ರ.:– ननु नासदासीदिति (ऋ. १०-१२९-१) श्रुत्या सर्वस्यासत्त्वाभिधानात्साधनान्तरमङ्गीकृत्य तस्येश्वराधीनत्ववर्णनमयुक्तमित्याक्षिप्य समादधत्सूत्रमुपन्यस्यति ॥**

**ಅನು.:–** "ನಾಸದಾಸೀನ್ನೋ ಸದಾಸೀತ್" (ಋ.ಸಂ. 10-129-1) ಎಂಬ ಶ್ರುತಿಯಿಂದ ಎಲ್ಲದಕ್ಕೂ ಅಸತ್ವವನ್ನು ಹೇಳಿದ್ದರಿಂದ, ಈಶ್ವರಾತಿರಿಕ್ತವಾದ ಸಾಧನಗಳನ್ನು ಅಂಗೀಕರಿಸಿ ಅವುಗಳಿಗೆ ಈಶ್ವರಾಧೀನತ್ವವನ್ನು ವರ್ಣಿಸುವುದು ಅಯುಕ್ತವಾಗುತ್ತದೆ ಎಂದು ಆಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ असद्व्यपदेशान्नेति चेन्न धर्मान्तरेण वाक्यशेषात् ॐ (२.१.१८)**

**ಸೂತ್ರಾರ್ಥ :–** ಅಸದ್ವ್ಯಪದೇಶಾತ್ = ನಾಸದಾಸೀತ್ ಎಂಬ ಶ್ರುತಿಯಿಂದ ಈಶ್ವರಾತಿರಿಕ್ತ ಸಾಧನಗಳಿಗೆ ಅಸತ್ವವನ್ನು ಹೇಳಿದ್ದರಿಂದ ನ ಅನ್ಯಸತ್ವಂ ನ ಯುಕ್ತಂ = ಇತರ ಸಾಧನಗಳಿಗೆ ಅಸತ್ವವನ್ನು ಹೇಳುವುದು ಯುಕ್ತವಲ್ಲ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಕುತಃ = ಯಾಕೆ? ಯತಃ = ಯಾವ ಕಾರಣ ತನ್ನಿಷೇಧಃ = ಅವುಗಳ ನಿಷೇಧವು ಧರ್ಮಾಂತರೇಣ = ಅಸ್ವಾತಂತ್ರ್ಯಾದಿ ಧರ್ಮವಿಶೇಷದಿಂದ ಕೂಡುತ್ತದೆ. ಕುತ ಏತತ್? = ಈ ರೀತಿಯಾಗಿ ಏಕೆ ಅಂಗೀಕಾರ ಮಾಡಬೇಕು? ಎಂದರೆ, ವಾಕ್ಯಶೇಷಾತ್ = "ತಮ ಆಸೀತ್" (ಋ. 10-129-3) ಎಂಬುದಾಗಿ ಉಳಿದ ವಾಕ್ಯಶೇಷ ಇರುವುದರಿಂದ.

## ಸಮಾಧಾನ

**ಸೂ.ರ.:– एवं च नासदासीदिति श्रुतावव्यक्तत्वपरतन्त्रत्वाधमत्व-**

**विकृतरूपविनाशादिधर्मापेक्षयाऽसत्त्वमुच्यते । अव्यक्तादौ तद्व्यपदेशस्य लोके दृष्टत्वान्न तु सर्वथाऽसत्त्वाभिप्रायेण । कुतः । तम आसीदिति वाक्यशेषे साधनान्तरस्य सत्त्वाभिधानात् ।**

**ಅನು.**:– ನಾಸದಾಸೀತ್ ನೋ ಸದಾಸೀತ್ ಎಂಬ ಶ್ರುತಿಯಲ್ಲಿ ಅವ್ಯಕ್ತತ್ವ-ಪರತಂತ್ರತ್ವ- ಅಧಮತ್ವ-ವಿಕೃತರೂಪವಿನಾಶ ಮೊದಲಾದ ಧರ್ಮಾಪೇಕ್ಷೆಯಿಂದಾಗಿ ಅಸತ್ತ್ವವನ್ನು ಹೇಳುತ್ತಿದ್ದಾರೆ. ಅವ್ಯಕ್ತಾದಿಗಳಲ್ಲಿ ಆ ವಿಧವಾಗಿ ವ್ಯಪದೇಶವು (ಪಾರತಂತ್ರ್ಯಾದಿ-ರೂಪದಿಂದ ಅಸದ್ವ್ಯಪದೇಶವು) ಲೋಕದಲ್ಲಿ ಕಂಡಿದ್ದರಿಂದ, ಆ ಧರ್ಮವಿವಕ್ಷೆಯಿಂದಾಗಿ ಅಸದ್ವ್ಯಪದೇಶವು ಪ್ರವೃತ್ತವಾಗಿದೆ. ಹೊರತು ಶಶವಿಷಾಣಾದಿಗಳಲ್ಲಿ ಪ್ರವೃತ್ತವಾದಂತೆ ಸರ್ವಥಾ ಅಸತ್ವ ಎಂಬ ಅರ್ಥದಲ್ಲಿ ಅಸದ್ವ್ಯಪದೇಶವು ಪ್ರವೃತ್ತವಾಗಿಲ್ಲ. ಯಾಕೆಂದರೆ ತಮ ಆಸೀತ್ ಎಂಬುದಾಗಿ ವಾಕ್ಯಶೇಷದಲ್ಲಿ ಇತರಸಾಧನಗಳಿಗೆ ಸತ್ತ್ವವನ್ನು ಹೇಳಿದ್ದರಿಂದ. ಸರ್ವಥಾ ಅಸತ್ತ್ವವನ್ನು ಹೇಳಲು ಅವಕಾಶವಿಲ್ಲ.

**ಸೂ.ರ.**:– **चेतनाचेतनप्रपञ्चस्य ब्रह्मानन्यत्त्वे प्रमाणाभावात् । एतेन वाचारम्भणमिति (छां.६-१-४) श्रुत्या तस्य ब्रह्मानन्यत्वमिति परेषां व्याकृतिर्निरस्ता । अजो ह्येक इति (महाना.१०-५) श्रुतेः विश्वमिथ्यात्वमतस्यासुरत्वात् । असत्यमप्रतिष्ठमिति (गीता.१६-८) स्मृतेः ।**

**ಅನು.**:– ನಾಸದಾಸೀತ್ ನೋ ಸದಾಸೀತ್ ಎಂಬ ಶ್ರುತಿಯು ಸಾಧನಗಳಿಗೆ ಸ್ವರಪತಃ ಅಸತ್ತ್ವವನ್ನು ಹೇಳಲು ಹೊರಟಿದೆ ಎಂದು ಕೆಲವರು ಹೇಳುವುದುಂಟು. ಅಂದರೆ – ಹಿಂದಿನ ಅಧಿಕರಣದಲ್ಲಿ ವ್ಯವಹಾರವನ್ನು ಅಂಗೀಕರಿಸಿ ಚೇತನಾಚೇತನವಿಭಾಗವನ್ನು ನಿರೂಪಿಸಲಾಗಿದೆ. ಈಗ ಪಾರಮಾರ್ಥಿಕದಶೆಯನ್ನು ಅವಲಂಬಿಸಿ, ಚೇತನಾಚೇತನ ವಿಶ್ವಕ್ಕೆ ಬ್ರಹ್ಮಾನನ್ಯತ್ವವನ್ನು (ಬ್ರಹ್ಮಾಭಿನ್ನತ್ವವನ್ನು) ಹೇಳುತ್ತಿದ್ದಾರೆ ಎಂಬುದಾಗಿ ಇಲ್ಲಿ ಕೆಲವರು ಹೀಗೆ ವ್ಯಾಖ್ಯಾನ ಮಾಡುವುದುಂಟು.

ಆದರೆ ಆ ರೀತಿ ವ್ಯಾಖ್ಯಾನ ಸರಿಯಲ್ಲ, ಕಾರಣ ಚೇತನಾಚೇತನ ವಿಶ್ವವು ಬ್ರಹ್ಮನಿಂದ ಅನನ್ಯವಾಗಿದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. "ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" (ಮ.ನಾ.ಉ. 10-5) ಎಂಬುದಾಗಿ ಮುಕ್ತ-ಅಮುಕ್ತರಲ್ಲಿ ಪರಸ್ಪರಭೇದವು ಸ್ಪಷ್ಟವಾಗಿ

ಶ್ರುತವಾಗುತ್ತಿರುವುದರಿಂದ ಚೇತನರಿಗೆ ಬ್ರಹ್ಮಾನನ್ಯತ್ವವನ್ನು ಹೇಳುವುದು ಸರಿಯಾಗುವು-ದಿಲ್ಲ. ಮತ್ತು "ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್" (ಭ.ಗೀ. 16-8) ಎಂಬುದಾಗಿ ಸ್ಮೃತಿಯೂ ಹೇಳಿದಂತೆ ವಿಶ್ವಮಿಥ್ಯಾತ್ವಮತವು ಅಸುರಮತ ಎಂದು ಪರಿಗಣಿಸಲ್ಪಟ್ಟಿದೆ. ಹೀಗಾಗಿ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದೂ ಸರಿಯಲ್ಲ.

**ಸೂ.ರ.:– न च न जीवो ब्रह्मणो भिद्यते चेतनत्वात् ब्रह्मवत् । प्रपञ्चो वा बाध्यो दृश्यत्वाच्छुक्तिरजतवदित्यादियुक्तिसद्भावात्कथमन्यत्र प्रमाणाभाव इति वाच्यम् । श्रुतिस्मृत्यनुकूलहीनायाः केवलाया युक्तेरप्य-प्रामाण्यात् । ततश्च विरोधाभावेन युक्तं जगत्कारणत्वलक्षणमिति सिद्धम् ॥**

**ಅನು.:**– ಚೇತನರು ಬ್ರಹ್ಮಾನನ್ಯರಾಗಿದ್ದಾರೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲ ಎನ್ನುವುದು ಸರಿಯಲ್ಲ. 'ಜೀವೋ ಬ್ರಹ್ಮಣೋ ನ ಭಿದ್ಯತೇ ಚೇತನತ್ವಾತ್ ಬ್ರಹ್ಮವತ್' ಎಂಬ ಯುಕ್ತಿಯೇ ಆ ವಿಷಯದಲ್ಲಿ ಪ್ರಮಾಣವಾಗಿದೆ.

ಮತ್ತು ಅಚೇತನವಿಶ್ವವು ಮಿಥ್ಯಾ (ಬಾಧಿತವಾಗಿದೆ) ಆಗಿದೆ ಎನ್ನುವ ವಿಷಯದಲ್ಲಿಯೂ ಪ್ರಮಾಣವಿಲ್ಲ ಎನ್ನುವುದೂ ಸರಿಯಲ್ಲ.

ಪ್ರಪಂಚಃ ಬಾಧ್ಯಃ ದೃಶ್ಯತ್ವಾತ್ ಶುಕ್ತಿರಜತವತ್ ಎಂಬ ಯುಕ್ತಿಯೇ ಪ್ರಮಾಣ-ವಾಗಿದೆ. ಆದ್ದರಿಂದ ಉಭಯತ್ರ ಪ್ರಮಾಣಾಭಾವಶಂಕೆಯು ಸರಿಯಾಗುವುದಿಲ್ಲವಲ್ಲ? ಎಂದು ಆಕ್ಷೇಪ ಬಂದರೆ, ಅದು ತಪ್ಪು.

ಚೇತನರು ಬ್ರಹ್ಮಾನನ್ಯರಾಗಿದ್ದಾರೆ ಎಂಬ ವಿಷಯದಲ್ಲಿ ಹೇಳಿದ ಯುಕ್ತಿ ಹಾಗೂ ಅಚೇತನವು ಮಿಥ್ಯಾ (ಬಾಧಿತ) ಆಗಿದೆ ಎಂಬ ವಿಷಯದಲ್ಲಿ ಹೇಳಿದ ಯುಕ್ತಿ ಎರಡೂ ಶ್ರುತಿ-ಸ್ಮೃತಿಗಳಿಗೆ ಅನುಕೂಲವಾಗದಿರುವ ಕಾರಣ, ಕೇವಲ ಯುಕ್ತಿಯು (ಶ್ರುತಿ-ಸ್ಮೃತಿಗಳ ಆನುಕೂಲ್ಯ ಪಡೆಯದ ಅನುಮಾನವು) ಪ್ರಮಾಣವಾಗುವುದಿಲ್ಲ. ಆದ್ದರಿಂದ ಚೇತನರಿಗೆ ಬ್ರಹ್ಮಾನನ್ಯತ್ವವನ್ನು, ಅಚೇತನಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದ್ದಾರೆ ಇಲ್ಲಿ ಎಂಬ ವ್ಯಾಖ್ಯಾನವು ಸಮಂಜಸವಾದದ್ದಲ್ಲ.

ಹೀಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 19

## ಆಕ್ಷೇಪ

**ಸೂ.ರ.:– ननु साधनान्तरमभ्युपगम्य तस्येश्वराधीनत्वकथनाद्वरं साधनाभावकथनमेव । साधनशून्यस्य सृष्ट्यादिकर्तृत्वाभ्युपगमे महिमाधिक्यलाभादित्याशङ्कामपाकुर्वत्सूत्रमुपन्यस्यति ॥**

**ಅನು.:–** ಇತರ ಸಾಧನಗಳನ್ನು ಅಂಗೀಕರಿಸಿ ಅವುಗಳಿಗೆ ಈಶ್ವರಾಧೀನತ್ವವನ್ನು ಹೇಳುವುದಕ್ಕಿಂತ ಇತರ ಸಾಧನಗಳಾವುದೂ ಇಲ್ಲ ಎಂದು ಹೇಳುವುದೇ ಉತ್ತಮ-ವಾಗುತ್ತದೆಯಲ್ಲವೇ? ಮತ್ತು ಸಾಧನಗಳೇ ಇಲ್ಲದೇ ಕೇವಲ ಭಗವಂತನಿಗೆ ಸೃಷ್ಟ್ಯಾದಿಕರ್ತೃತ್ವವನ್ನು ಅಂಗೀಕರಿಸಿದರೆ ಮಹಿಮಾಧಿಕ್ಯವು ಪ್ರಾಪ್ತವಾಗುತ್ತದೆ. ಆದ್ದರಿಂದ ಸಾಧನಗಳನ್ನು ಒಪ್ಪದಿರುವುದೇ ಸೂಕ್ತವಾಗುತ್ತದೆಯಲ್ಲವೇ? ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

**ॐ युक्तेः शब्दान्तराच्च ॐ (२.१.१९)**

**ಸೂತ್ರಾರ್ಥ :–** ಪ್ರಲಯೇ = ಪ್ರಲಯಕಾದಲ್ಲಿ ಯುಕ್ತೇಃ = ದಂಡವನ್ನು ಅವಲಂಬಿಸಿ ಲೀಲೆಯಿಂದ ಓಡಾಡುವ ವ್ಯಕ್ತಿಗೆ ಪಂಗುತ್ವ ಇರುವುದಿಲ್ಲ ಹೇಗೋ ಹಾಗೆ ಭಗವಂತನಿಗೂ ಲೀಲೆಯಿಂದ ಸ್ವಾಧೀನಸಾಧನಗಳನ್ನು ಅವಲಂಬಿಸುವುದು ಯುಕ್ತವೇ ಆಗುವುದರಿಂದ, ಚ=ಮತ್ತು ಶಬ್ದಾಂತರಾತ್="ತಸ್ಮಾಚ್ಚಕ್ರೋऽಪಿ" ಎಂಬುದಾಗಿ ವಿಶೇಷ ಆಗಮಪ್ರಮಾಣವೂ ಇರುವುದರಿಂದ, ಇತರ ಸಾಧನಗಳಿಗೆ ಭಗವದಧೀನತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ.

## ಸಮಾಧಾನ

**ಸೂ.ರ.:– एवं च स्वाधीनसाधनान्तरेण प्रवृत्तेरपि परमैश्वर्य-ज्ञापकत्वस्य साधनानामिति स्मृतिसिद्धत्वेनाविरोधकत्वात् । अद्भ्यः सम्भूतो हिरण्यगर्भ इत्यष्टाविति (महाना. १-११) श्रुतौ साधनान्तराभि-धानाच्च । विष्णोर्महिमाधिक्यलाभाय प्रलयेऽवरसाधनसत्त्वस्यैवा-भ्युपेयत्वात् । अतो विरोधाभावेन युक्तं लक्षणसूत्रमिति सिद्धम् ॥**

**ಅನು.:–** ಸ್ವಾಧೀನವಾದ ಇತರ ಸಾಧನಗಳಿಂದ ಪ್ರವೃತ್ತವಾಗುವುದೂ ಸಹ ಪರಮೈಶ್ವರ್ಯಕ್ಕೆ ಜ್ಞಾಪಕವಾಗಿದೆ ಎನ್ನುವುದು–

ಸಾಧನಾನಾಂ ಸಾಧನತ್ವಂ ಯದಾತ್ಮಾಧೀನಮಿಷ್ಯತೇ ।
ತದಾ ಸಾಧನಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್ ॥

ಇತ್ಯಾದಿ ಸ್ಮೃತಿಸಿದ್ಧವೂ ಆಗಿದ್ದರಿಂದ, ಇತರ ಸಾಧನಗಳನ್ನು ಅವಲಂಬಿಸಿ ಸೃಷ್ಟ್ಯಾದಿ-ಕರ್ತೃತ್ವವನ್ನು ಭಗವಂತನಿಗೆ ಅಂಗೀಕರಿಸಿದರೂ ಯಾವ ಸ್ಮೃತಿಯ ವಿರೋಧವೂ ಬರುವುದಿಲ್ಲ. ಮತ್ತು "ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ" (ಮ.ನಾ.ಉ. 1-12) ಎಂಬ ಶ್ರುತಿಯಲ್ಲಿ ಇತರ ಸಾಧನಗಳಿಗೆ ಸತ್ವವನ್ನು ಹೇಳಿದ್ದರಿಂದಲೂ ಸಹ (ಇತರ ಸಾಧನಗಳು ಇವೆ ಎಂದು ಹೇಳಿದ್ದರಿಂದಲೂ ಸಹ) ಸಾಧನಗಳಿಗೆ ಸರ್ವಥಾ ಅಸತ್ವವನ್ನು ಹೇಳಲೂ ಬರುವುದಿಲ್ಲ. ಮತ್ತು, ವಿಷ್ಣುವಿಗೆ ಮಹಿಮಾಧಿಕ್ಯ ಹೇಳುವುದಕ್ಕಾಗಿ ಪ್ರಲಯಕಾಲ-ದಲ್ಲಿ ಅವರಸಾಧನಗಳನ್ನು ಒಪ್ಪುವುದೇ ಯುಕ್ತವಾಗಿದೆ.

ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಸೃಷ್ಟ್ಯಾದಿಕರ್ತೃತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 20

**ಸೂ.ರ.:– न केवलं श्रुतिसिद्धत्वात्किन्तु साधनसत्त्वस्य युक्तिसिद्धत्वाच्च तत्राग्रह इत्याह सूत्रकृत् ॥**

**ಅನು.:–** ಅದ್ಭ್ಯಃ ಸಂಭೂತಃ ಎಂಬ ಶ್ರುತಿಯಲ್ಲಿ ಸಿದ್ಧವಾಗಿದೆ ಎಂಬ ಕಾರಣಕ್ಕೆ ಸಾಧನಗಳಿಗೆ ಸತ್ವವನ್ನು ಒಪ್ಪಬೇಕು ಎಂದಷ್ಟೇ ಅಲ್ಲ, ಕಿಂತು ಸಾಧನಸತ್ವವು ಯುಕ್ತಿಸಿದ್ಧವೂ ಆಗಿದೆ. ಆದ್ದರಿಂದಲೂ ಸಾಧನಗಳಿಗೆ ಸತ್ವವನ್ನು ಒಪ್ಪಬೇಕು ಎಂಬುದಾಗಿ ಸಾಧನಸತ್ವದ ವಿಷಯದಲ್ಲಿ ನಮ್ಮ ಆಗ್ರಹ ಇದೆ ಎಂದು ಹೇಳಲು ಸೂತ್ರವನ್ನು ಹೇಳುತ್ತಾರೆ–

**ॐ पटवच्च ॐ (२.१.२०)**

**ಸೂತ್ರಾರ್ಥ :–** ಪಟವಚ್ಚ= ಪಟಸೃಷ್ಟಿವಚ್ಚ ವಿಶ್ವಸೃಷ್ಟಿರಪಿ ಕರ್ತೃಭಿನ್ನಸಾಧನಾಂತರ-ಸಾಧ್ಯಾ = ಪಟದ ಸೃಷ್ಟಿಯು ಹೇಗೆ ಕರ್ತೃಭಿನ್ನಸಾಧನಾಂತರ- ಸಾಧ್ಯವಾಗಿದೆಯೋ ಅದರಂತೆ ವಿಶ್ವಸೃಷ್ಟಿಯೂ ಸಹ ಕರ್ತೃಭಿನ್ನಸಾಧನಾಂತರಸಾಧ್ಯವಾಗಿದೆ ಎಂಬುದಾಗಿ ಸಾಧನಸತ್ವವು ಯುಕ್ತಿಸಿದ್ಧವೂ ಆಗಿದೆ.

**ಸೂ.ರ.:– एवं च केवलं श्रुतेः किन्तु विप्रतिपन्ना सृष्टिः कर्तृव्यतिरिक्तसाधनसापेक्षा सृष्टित्वाद्घटसृष्टिवदित्यादियुक्तिसिद्धत्त्वाच्च । अतो विरोधाभावायुक्तं लक्षणसूत्रमिति सिद्धम् ॥**

**ಅನು.:–** ಅದ್ಭ್ಯಃ ಸಂಭೂತಃ ಎಂಬುದಾಗಿ ಶ್ರುತಿಯಿರುವುದರಿಂದ ಸಾಧನಸತ್ವವನ್ನು ಒಪ್ಪಬೇಕು ಎಂದಷ್ಟೇ ಅಲ್ಲ. ಕಿಂತು ಸಾಧನಸತ್ವವು–

ವಿಪ್ರತಿಪನ್ನಾ ಸೃಷ್ಟಿಃ, ಕರ್ತೃವ್ಯತಿರಿಕ್ತಸಾಧನಸಾಪೇಕ್ಷಾ, ಸೃಷ್ಟಿತ್ವಾತ್, ಪಟಸೃಷ್ಟಿವತ್ । (ವಿವಾದಾಸ್ಪದವಾದ ವಿಶ್ವಸೃಷ್ಟಿಯು, ಕರ್ತೃವ್ಯತಿರಿಕ್ತಸಾಧನಸಾಪೇಕ್ಷವಾಗಿದೆ, ಸೃಷ್ಟಿಯಾದ್ದರಿಂದ, ಪಟದ ಸೃಷ್ಟಿಯು ಸೃಷ್ಟಿಯಾದ್ದರಿಂದ ಅದು ಹೇಗೆ ಕರ್ತೃವ್ಯತಿರಿಕ್ತಸಾಧನಸಾಪೇಕ್ಷವಾಗಿದೆಯೋ ಹಾಗೆ)

ಇತ್ಯಾದಿ ಯುಕ್ತಿಸಿದ್ಧವೂ ಆಗಿದೆ. ಆದ್ದರಿಂದಲೂ ಇತರ ಸಾಧನಗಳಿಗೆ ಸತ್ವವನ್ನು ಒಪ್ಪಲೇಬೇಕು.

ಹಾಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

## ಸೂತ್ರ – 21

## ಆಕ್ಷೇಪ

**ಸೂ.ರ.:– नन्वेवं सति विप्रतिपन्ना सृष्टिः कर्तृव्यतिरिक्तस्वतन्त्रसाधनसापेक्षा सृष्टित्वाद्घटसृष्टिवदित्यादिना साधनानां स्वातन्त्र्यमपि स्यादित्याशङ्कां परिहरत्सूत्रं पठति ।**

**ಅನು.:–** ನೀವು ಯುಕ್ತಿಯಿಂದ ಈ ರೀತಿಯಾಗಿ ಸಾಧನಗಳಿಗೆ ಸತ್ವವನ್ನು ಸಾಧಿಸುವುದಾದರೆ – ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಪಟಸೃಷ್ಟಿವತ್ (ಸಂದೇಹಾಸ್ಪದವಾದ ವಿಶ್ವಸೃಷ್ಟಿಯು, ಕರ್ತೃವ್ಯತಿರಿಕ್ತವಾದ ಸ್ವತಂತ್ರಸಾಧನಗಳ ಸಾಪೇಕ್ಷವಾಗಿದೆ, ಸೃಷ್ಟಿಯಾದ್ದರಿಂದ, ಪಟಸೃಷ್ಟಿಯಂತೆ) ಇತ್ಯಾದಿ ಯುಕ್ತಿಗಳಿಂದ ಆ ಸಾಧನಗಳಿಗೆ ಸ್ವಾತಂತ್ರ್ಯವನ್ನು ಸಾಧಿಸಲೂ ಬರುವುದರಿಂದ ಸಾಧನಗಳಿಗೆ ಸತ್ವದ ಜೊತೆಗೆ ಸ್ವಾತಂತ್ರ್ಯವನ್ನೂ ಒಪ್ಪಬೇಕಾಗುತ್ತದೆ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ यथा प्राणादिः ॐ (२.१.२१)

ಯಥಾ ಪ್ರಾಣಾದಿಃ = ಪ್ರಾಣದೇಹೇಂದ್ರಿಯಾದಿಗಳು ಹೇಗೆ ಸ್ವತಂತ್ರ ಅಲ್ಲವೋ ಅದೇ ರೀತಿಯಾಗಿ ಪ್ರಕೃತ್ಯಾದಿಸಾಧನಗಳೂ ಸ್ವತಂತ್ರ ಅಲ್ಲ.

### ಸಮಾಧಾನ

**ಸೂ.ರ.:– एवं च देहेन्द्रियादाविव प्रकृत्यादावपि परमात्मप्रवेशस्य प्रकृतिं पुरुषं चेत्यागमसिद्धत्वात् । अनुप्रवेशस्य प्रेरणार्थत्वेन साधनानामस्वातन्त्र्येण बाधितविषयत्वात् । विप्रतिपन्नं साधनजातं न स्वतन्त्रं प्रेरणार्थमीश्वरेणानुप्रविष्टत्वात् यथा शरीरेन्द्रियप्राणादिरित्येतत्प्रबलानुमानेन पूर्ववाद्युक्तानुमानस्य प्रतिपक्षितत्वात् । अतो भगवतः स्वातन्त्र्येण सर्वकर्तृत्वे विरोधगन्धाभावाद्युक्तं तस्य सर्वगुणपूर्णत्वमिति सिद्धम् ॥**

**ಅನು.:–** ಪರಮಾತ್ಮನು ದೇಹೇಂದ್ರಿಯಾದಿಗಳಲ್ಲಿ ಪ್ರವೇಶ ಮಾಡುವಂತೆ ಪ್ರಕೃತ್ಯಾದಿಗಳಲ್ಲಿಯೂ ಪರಮಾತ್ಮನು ಪ್ರವೇಶ ಮಾಡುತ್ತಾನೆ ಎನ್ನುವ ವಿಚಾರವು

**ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ ।**
**ಕ್ಷೋಭಯಾಮಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುಃ ॥**

ಎಂಬ ಆಗಮದಿಂದ (ಕೌರ್ಮವಚನದಿಂದ) ಸಿದ್ಧವಾಗಿದೆ. ಅವುಗಳಲ್ಲಿ ಪ್ರವೇಶ ಮಾಡುವುದು ಏಕೆ? ಅವುಗಳಿಗೆ ಪ್ರೇರಣೆ ಮಾಡುವುದಕ್ಕಾಗಿ. ಇದರಿಂದ ತಿಳಿಯುತ್ತದೆ ಆ ಸಾಧನಗಳಿಗೆ ಅಸ್ವಾತಂತ್ರ್ಯ ಇದೆ ಎಂದು. ಹೀಗಾಗಿ ಸ್ವತಂತ್ರಸಾಧನಗಳನ್ನು ಯುಕ್ತಿಯಿಂದ ಸಾಧಿಸಲು ಹೊರಟರೆ, ಸಾಧನಗಳಿಗೆ ಅನುಪ್ರವೇಶ ಮೂಲಕ ಅಸ್ವಾತಂತ್ರ್ಯವನ್ನು ಪ್ರತಿಪಾದಿಸುತ್ತಿರುವ ಪ್ರಕೃತಿಂ ಪುರುಷಂ ಚೈವ... ಎಂಬ ಆಗಮದಿಂದ ನಿಮ್ಮ ಅನುಮಾನವು ಬಾಧಿತವಿಷಯವಾಗುತ್ತದೆ.

ಮತ್ತು - ವಿಪ್ರತಿಪನ್ನಂ ಸಾಧನಜಾತಂ, ನ ಸ್ವತಂತ್ರಂ, ಪ್ರೇರಣಾರ್ಥಂ ಈಶ್ವರೇಣಾನುಪ್ರವಿಷ್ಟತ್ವಾತ್ । ಯಥಾ ಶರೀರೇಂದ್ರಿಯಪ್ರಾಣಾದಿಃ। (ವಿವಾದಾಸ್ಪದವಾದ ಸಾಧನಸಮೂಹವು, ಸ್ವತಂತ್ರವಾಗಿಲ್ಲ, ಪ್ರೇರಣೆಗಾಗಿ ಈಶ್ವರನಿಂದ ಅನುಪ್ರವಿಷ್ಟವಾಗುವುದರಿಂದ. ಶರೀರ-ಇಂದ್ರಿಯ-ಪ್ರಾಣಾದಿಗಳು ಪ್ರೇರಣೆಗಾಗಿ ಈಶ್ವರನಿಂದ ಅನುಪ್ರವಿಷ್ಟವಾಗುವುದರಿಂದ ಅವು ಹೇಗೆ ಸ್ವತಂತ್ರವಾಗಿಲ್ಲವೋ ಅದರಂತೆ)

ಎಂಬ ಪ್ರಬಲಾನುಮಾನದಿಂದ ಪೂರ್ವವಾದ್ಯುಕ್ತವಾದ ಅನುಮಾನಕ್ಕೆ ಪ್ರತಿಪಕ್ಷದೋಷವೂ ಬರುತ್ತದೆ. ಹೀಗಾಗಿ ಸಾಧನಗಳಿಗೆ ಅಸ್ವಾತಂತ್ರ್ಯವನ್ನೇ ಹೇಳಬೇಕು.

ಆದ್ದರಿಂದ ಭಗವಂತನಿಗೆ ಸ್ವಾತಂತ್ರ್ಯೇಣ ಸರ್ವಕರ್ತೃತ್ವವನ್ನು ಹೇಳಿದರೆ ವಿರೋಧಗಂಧವೂ ಬಾರದ ಕಾರಣ, ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಆ ಮೂಲಕ ಅವನಿಗೆ ಸರ್ವಗುಣಪರಿಪೂರ್ಣತ್ವವನ್ನು ಹೇಳಿದ್ದೂ ಯುಕ್ತವೇ ಆಗಿದೆ ಎಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

**ಇಲ್ಲಿಗೆ ಆರಂಭಣಾಧಿಕರಣವು ಮುಗಿಯಿತು.**

*ಅಧಿಕರಣ – 7*

# ಇತರವ್ಯಪದೇಶಾಧಿಕರಣ

## ಸಂಗತಿ

**ಸೂ.ರ.:– अत्र श्रुतिप्राप्तजीवकर्तृत्वपक्षो विस्तरान्निराक्रियते ।**

**ಅನು.:–** ಶ್ರುತಿಪ್ರಾಪ್ತವಾದ ಜೀವಕರ್ತೃತ್ವಪಕ್ಷವನ್ನು ವಿಸ್ತಾರವಾಗಿ ನಿರಾಕರಿಸುತ್ತಾರೆ ಏಳನೇ ಈ ಇತರವ್ಯಪದೇಶಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु स्वतन्त्र एव जीवो घटादिकार्याणां कर्ता । जीवो हि यत्कार्यं करोमीति सामग्रीं मेलयति तत्करोतीत्यनुभवात् । कुलालो घटादिकर्ता तद्विषयकृतिमत्त्वात् यथाऽहमित्यनुमानाच्च ।**

**ಅನು.:–** ಜೀವನು ಸ್ವತಂತ್ರನಾಗಿಯೇ ಘಟಾದಿಕಾರ್ಯಗಳಿಗೆ ಕರ್ತೃವಾಗಿದ್ದಾನೆ. ಜೀವನು ಯಾವ ಕಾರ್ಯವನ್ನು ಮಾಡುತ್ತೇನೆ ಎಂದು ಸಾಮಗ್ರಿಗಳನ್ನು ಒಂದುಗೂಡಿಸುವನೋ ಆ ಕಾರ್ಯವನ್ನು ಮಾಡುತ್ತಾನೆ ಎಂಬುದಾಗಿ ಅನುಭವ ಬರುವುದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಲೇಬೇಕು. ಮತ್ತು

"ಕುಲಾಲಃ ಘಟಾದಿಕರ್ತಾ ತದ್ವಿಷಯಕೃತಿಮತ್ವಾತ್ ಯಥಾಽಹಮ್" (ಕುಲಾಲನು, ಘಟಾದಿಗಳಿಗೆ ಕರ್ತೃವಾಗಿದ್ದಾನೆ, ಘಟಾದಿಗಳನ್ನು ಸೃಷ್ಟಿಸಲು ತದ್ವಿಷಯಕಪ್ರಯತ್ನ ಉಳ್ಳವನಾದ್ದರಿಂದ ನನ್ನಂತೆ) ಎಂಬ ಅನುಮಾನಪ್ರಮಾಣವೂ ಇರುವುದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಒಪ್ಪಲೇಬೇಕು.

**ಸೂ.ರ.:– न चानुभवबलेन जीवस्य कर्तृत्वेऽपि तदन्तर्याम्यधीनं किं न स्यादिति वाच्यम् । जीवशरीरे जीवनियामकेशस्याभावात् । भावे चोपलभ्येत । न हि जीवशरीरे ईश्वरोऽस्ति जीवश्च तन्नियम्यस्तथाऽपि नासौ तं पश्यतीति शक्यते वक्तुम् । नियम्यानां नियामकदर्शनावश्यम्भावात् । एवमपीश्वरकल्पने कल्पनागौरवम् । अप्रामाणिकस्य जीवशरीरस्थत्वस्य तन्नियामकत्वस्य च कल्पनात् ।**

**ಅನು.:–** ಈ ವಿಧವಾದ ಅನುಭವಬಲದಿಂದಾಗಿ ಜೀವನಿಗೆ ಕರ್ತೃತ್ವ ಇದ್ದರೂ ಸಹ, ಆ ಕರ್ತೃತ್ವವು ಅಂತರ್ಯಾಮಿಯಾದ ಭಗವಂತನ ಅಧೀನವಾದದ್ದಾಗಿದೆ ಎಂದು ಏಕೆ ಹೇಳ– ಬಾರದು? ಎಂಬುದಾಗಿ ಶಂಕಿಸುವುದು ಸರಿಯಲ್ಲ. ಜೀವಶರೀರದಲ್ಲಿ ಜೀವನಿಯಾಮಕ– ನಾದ ಈಶ್ವರನು ಇದ್ದಿದ್ದರೆ ಈ ರೀತಿ ಹೇಳಬಹುದಿತ್ತು. ಆದರೆ ಜೀವಶರೀರದಲ್ಲಿ ಜೀವನಿಯಾಮಕನಾದ ಈಶ್ವರನೇ ಇಲ್ಲ. ಹಾಗೆ ಒಂದುವೇಳೆ ಜೀವಶರೀರದಲ್ಲಿ ಜೀವನಿಯಾಮಕನಾದ ಈಶ್ವರನು ಇದ್ದದ್ದೇ ಆದರೆ ಆ ಈಶ್ವರನು ಜೀವನಿಗೆ ಕಾಣಿಸಬೇಕಿತ್ತು.

"ಹಾಗಲ್ಲ, ಜೀವಶರೀರದಲ್ಲಿ ಈಶ್ವರನು ಇದ್ದಾನೆ. ಜೀವನೂ ಸಹ ಆ ಈಶ್ವರನಿಂದ ನಿಯಮ್ಯನೂ ಆಗಿದ್ದಾನೆ. ಆದರೂ ಸಹ ನಿಯಮ್ಯನಾಗುವ ಜೀವನು ನಿಯಾಮಕನಾದ ಈಶ್ವರನನ್ನು ನೋಡುವುದಿಲ್ಲ" ಎಂದು ಹೇಳಲು ಸಾಧ್ಯವಿಲ್ಲ. ಕಾರಣ - ನಿಯಮ್ಯ– ರಾದವರಿಗೆ ನಿಯಾಮಕನ ದರ್ಶನವು ಅವಶ್ಯವಾಗಿ ಆಗಲೇಬೇಕು. ಹೀಗಾಗಿ ನಿಯಮ್ಯನಾದ ಜೀವನು ನಿಯಾಮಕನಾದ ಈಶ್ವರನನ್ನು ನೋಡುವುದಿಲ್ಲ ಎನ್ನುವುದು ಸರಿಯಾಗುವುದಿಲ್ಲ.

ಈ ರೀತಿಯಾಗಿ ಕಾಣಿಸದೇ ಇದ್ದರೂ ಈಶ್ವರನನ್ನು ಕಲ್ಪಿಸುವುದಾದರೆ ಕಲ್ಪನಾಗೌರವದೋಷ ಬರುತ್ತದೆ. ಅಪ್ರಾಮಾಣಿಕವಾದ ಜೀವಶರೀರಸ್ಥತ್ವವನ್ನು ಒಪ್ಪಬೇಕು (ಜೀವಶರೀರದಲ್ಲಿ ನಿಯಾಮಕನಾಗಿ ಈಶ್ವರನು ಇದ್ದಾನೆ ಎಂದು ಪ್ರಮಾಣಾಧಾರ ಇಲ್ಲದೇ ಕಲ್ಪಿಸಬೇಕು), ಮತ್ತು ಆ ಜೀವನಿಗೆ ನಿಯಾಮಕನಾಗಿದ್ದಾನೆ ಎನ್ನುವುದನ್ನೂ ಅಪ್ರಾಮಾಣಿಕ–

ವಾಗಿ (ಪ್ರಮಾಣಾಧಾರ ಇಲ್ಲದೇ) ಒಪ್ಪಬೇಕಾಗಿದೆ. ಹೀಗಾಗಿ ಕಲ್ಪನಾಗೌರವದೋಷ ಬರುತ್ತದೆ.

**ಸೂ.ರ.:– एवं च परिदृश्यमानानां घटादीनां जीवकर्तृत्वे सिद्धे महदादिकार्याणामप्यनीश्वरब्रह्मकर्तृत्वं सिद्ध्यति । न कुलालादयो ब्रह्मवशाः । ब्रह्म सर्वनियामकमित्यस्य तु व्याहतत्वात् । जीवाद्भवन्ति भूतानीति श्रुतेः । जीवसाधारण्येनास्याः श्रुतेर्ब्रह्मपरत्वे न नो हानिः । सर्वजीवानां सम्भूय सर्वजगत्कारणत्वं वदद्भिरस्माभिरपि सा घटादीनां कुलालजन्यत्वमिव महदादीनां जीवतुल्य ब्रह्मजन्यत्वं वदतीत्यङ्गीकारात् । परमैश्वर्यादिकविशिष्टब्रह्मपरत्वे च तस्यैवाभावात् । अतः श्रुत्यादिबलाज्जीवस्यैव स्वतः कर्तृत्वादसम्भवि लक्षणसूत्रमिति प्राप्ते सूत्रितम् ॥**

**ಅನು.:–** ಈ ರೀತಿಯಾಗಿ ಪರಿದೃಶ್ಯಮಾನವಾದ (ಕಾಣುವ) ಘಟಾದಿಗಳಿಗೆ ಜೀವಕರ್ತೃಕತ್ವವು ಸಿದ್ಧವಾಗುತ್ತಿರಲು ಅದೇ ಪ್ರಕಾರ ಮಹದಾದಿಕಾರ್ಯಗಳಿಗೂ ಅನೀಶ್ವರಬ್ರಹ್ಮಕರ್ತೃತ್ವವು (ಜೀವಕರ್ತೃತ್ವವು) ಸಿದ್ಧವಾಗುತ್ತದೆ. ಕಾರಣ – ಜೀವಾದ್ಭವಂತಿ ಭೂತಾನಿ ಎಂಬುದಾಗಿ ಶ್ರುತಿಯು ಮಹದಾದಿಕಾರ್ಯಗಳಿಗೆ ಜೀವಕರ್ತೃಕತ್ವವನ್ನು ಹೇಳುತ್ತಿದೆ.

ಈ ಶ್ರುತಿಯು ಜೀವಸಾಧಾರಣವಾಗಿ ಬ್ರಹ್ಮಪರವಾಗಿದೆ ಎಂದು ಹೇಳುವುದಾದರೆ ನಮಗೆ ಯಾವ ಹಾನಿ ಇಲ್ಲ. ಏಕೆಂದರೆ – ಸರ್ವಜೀವರಿಗೂ ಸಂಭೂಯ ಜಗತ್ಕಾರಣತ್ವವನ್ನು ಹೇಳುವ ನಾವು (ಎಲ್ಲ ಜೀವರೂ ಸೇರಿ ಜಗತ್ಕಾರಣರಾಗಿದ್ದಾರೆ ಎಂದು ಹೇಳುವ ನಾವು) ಘಟಾದಿಗಳಿಗೆ ಕುಲಾಲಜನ್ಯತ್ವವನ್ನು ಹೇಳುವಂತೆ ಮಹದಾದಿಕಾರ್ಯಗಳಿಗೆ ಜೀವತುಲ್ಯಬ್ರಹ್ಮಜನ್ಯತ್ವವನ್ನು ಹೇಳುತ್ತಿದೆ ಶ್ರುತಿ ಎಂದು ಅಂಗೀಕರಿಸಿಯೇ ಇದ್ದೇವೆ.

ಹಾಗಲ್ಲ, ಯಾವುದೋ ಬ್ರಹ್ಮಪರ ಅಲ್ಲ ಶ್ರುತಿ ಕಿಂತು ಪರಮೈಶ್ವರ್ಯಾದಿವಿಶಿಷ್ಟಬ್ರಹ್ಮಪರವಾಗಿದೆ ಎನ್ನುವುದು ಸರಿಯಲ್ಲ. ಅಂತಹ ಪರಮೈಶ್ವರ್ಯಾದಿವಿಶಿಷ್ಟನಾದ ಬ್ರಹ್ಮನೇ ಇಲ್ಲವಾದ್ದರಿಂದ ಆ ರೀತಿ ಹೇಳುವುದು ಸರಿಯಲ್ಲ.

ಆದ್ದರಿಂದ ಜೀವಾದ್ಭವಂತಿ ಭೂತಾನಿ ಇತ್ಯಾದಿ ಶ್ರುತಿ, ಅನುಮಾನ ಹಾಗೂ ಅನುಭವ ಇವುಗಳೆಲ್ಲದರ ಬಲದಿಂದಾಗಿ ಜೀವನಿಗೇನೇ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಬೇಕು. ಹೊರತು ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕರಿಸುವುದು ಸರಿಯಲ್ಲ. ಹಾಗಾಗಿ ಲಕ್ಷಣ-

ಸೂತ್ರದಲ್ಲಿ ಹೇಳಿದ ಬ್ರಹ್ಮನ ಲಕ್ಷಣವು ಅಸಂಭವಿಯಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ इतरव्यपदेशाद्धिताकरणादिदोषप्रसक्तिः ॐ (२.१.२२)**

**ಸೂತ್ರಾರ್ಥ :–** (ಇತಿ ಯದಿ ತರ್ಹಿ ಎಂಬ ಶಬ್ದಗಳನ್ನು ಶೇಷ ಮಾಡಿಕೊಳ್ಳಬೇಕು.) ಇತರವ್ಯಪದೇಶಾತ್ = ಜೀವಾದ್ಭವಂತಿ ಎಂಬ ಶ್ರುತಿಯಲ್ಲಿ ಹೇಳಿದ್ದರಿಂದ ಸ ಏವ ಕರ್ತಾ, ನ ಈಶ್ವರಃ = ಆ ಜೀವನೇ ಕರ್ತೃವಾಗುತ್ತಾನೆ. ಹೊರತು ಈಶ್ವರ ಅಲ್ಲ ಇತಿ ಯದಿ = ಎಂದು ಒಂದುವೇಳೆ ಅಂಗೀಕರಿಸುವುದಾದರೆ, ತರ್ಹಿ = ಆವಾಗ ಹಿತಾಕರಣಾದಿದೋಷಪ್ರಸಕ್ತಿಃ = ಜೀವನಿಷ್ಠವಾದ ಹಿತವಾದದ್ದನ್ನು ಮಾಡದಿರುವುದು ಅಹಿತವಾದದ್ದನ್ನು ಮಾಡುವುದು ಇವುಗಳಿಗೆ ದೋಷತ್ವ ಬರಬೇಕಾದ ಪ್ರಸಂಗ ಬರುತ್ತದೆ. (ಹಿತಅಕರಣ–ಅಹಿತಕರಣಗಳು ದೋಷವಾಗಬೇಕಾಗುತ್ತದೆ.)

ಒಂದುವೇಳೆ ಜೀವನು ಸ್ವತಂತ್ರಕರ್ತೃವಾಗಿದ್ದರೆ ಈ ಹಿತಅಕರಣ–ಅಹಿತಕರಣಗಳು ಆಗಬಾರದಿತ್ತು. ಈಗಲಾದರೋ ಹಿತಅಕರಣ – ಅಹಿತಕರಣಗಳೇ ಆಗುತ್ತಿರುವುದರಿಂದ ಜೀವನು ಸ್ವತಂತ್ರಕರ್ತೃವಾಗಲು ಸಾಧ್ಯವಿಲ್ಲ ಎಂದು ಭಾವ.

## ಸಿದ್ಧಾಂತ

**ಸೂ.ರ.:– एवं च न जीवः स्वातन्त्र्येण कर्ताऽपि तु परमेश्वरः । तर्कविरुद्धत्वात् । यदि स्वातन्त्र्येण कर्ता स्यात्तर्हि हिताकरणमहितकरणं च न स्यात् । विद्येते च ते । अतो नासौ स्वतन्त्रकर्तेति हिताकरणादि-दोषाणां जीवे प्रसक्तत्वेन स्वतन्त्रकर्तरि परमश्वरेऽयोगात् । तथा च जीवस्य स्वतन्त्रकर्तृत्वानुपपत्तेर्युक्तं हरेर्जगत्कारणत्वलक्षणमिति सिद्धम् ॥**

**ಅನು.:–** ಈಶ್ವರನು ಸ್ವತಂತ್ರಕರ್ತಾ ಆಗುತ್ತಾನೆಯೇ ಹೊರತು ಜೀವನು ಸ್ವತಂತ್ರಕರ್ತಾ ಆಗಲಾರ. ಹಾಗೆ ಹೇಳುವುದಾದರೆ ತರ್ಕವಿರೋಧ ಬರಬೇಕಾಗುತ್ತದೆ.

ಯದಿ ಸ್ವಾತಂತ್ರ್ಯೇಣ ಕರ್ತಾ ಸ್ಯಾತ್ತರ್ಹಿ ಹಿತಾಕರಣಮಹಿತಕರಣಂ ಚ ನ ಸ್ಯಾತ್। ವಿದ್ಯೇತೇ ಚ ತೇ। ಅತೋ ನಾಸೌ ಸ್ವತಂತ್ರಕರ್ತಾ।

ಒಂದುವೇಳೆ ಜೀವನು ಸ್ವತಂತ್ರಕರ್ತಾ ಆಗಿದ್ದಾದರೆ ಅವನಿಗೆ ಹಿತಅಕರಣ - ಅಹಿತಕರಣಗಳು ಆಗಬಾರದಿತ್ತು. ಈಗಲಾದರೋ ಆಗುತ್ತವೆ. ಆದ್ದರಿಂದ ಜೀವನು

ಸ್ವತಂತ್ರಕರ್ತಾ ಅಲ್ಲ ಎಂಬುದಾಗಿ ತರ್ಕದ ವಿರೋಧ ಬರುವುದರಿಂದ ಅರ್ಥಾತ್ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸುವುದೇ ಆದರೆ ಹಿತಅಕರಣಾದಿ-ದೋಷಗಳು ಪ್ರಸಕ್ತವಾಗುವುದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸುವುದು ಸರಿಯಾಗುವುದಿಲ್ಲ.

ಪರಮೇಶ್ವರನು ಸ್ವತಂತ್ರಕರ್ತಾ ಎಂದು ಒಪ್ಪಿದರೆ ಹಿತಅಕರಣಾದಿ ದೋಷಗಳು ಬಾರದ ಕಾರಣ ಪರಮೇಶ್ವರನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸುವುದು ಯೋಗ್ಯವಾಗಿದೆ.

ಆದ್ದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಅಂಗೀಕರಿಸಿದರೆ ಅನುಪಪತ್ತಿ ಬರುವುದ-ರಿಂದ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 23

### ಆಕ್ಷೇಪ

**ಸೂ.ರ.:– ननु यदि किञ्चिद्दोषमात्रेण जीवकर्तृता निराक्रियते तर्हि ब्रह्मणोऽपि न कर्तृत्वं प्राप्नुयात् । तस्यापि श्रमादिदोषनियमात् । एवं च पक्षयोः साम्येऽनुभवादिसिद्धं जीवकर्तृत्वमेवाश्रयणीयमिति प्राप्ते पराकुर्वत्सूत्रमाह ॥**

**ಅನು.:–** ಹಿತಅಕರಣಾದಿ ಕಿಂಚಿತ್ ದೋಷ ಬರುವ ಮಾತ್ರದಿಂದ ಜೀವಕರ್ತೃತ್ವವನ್ನು ನಿರಾಕರಿಸುವುದಾದರೆ, ಬ್ರಹ್ಮನಿಗೂ ಕರ್ತೃತ್ವವು ಸಂಭಾವಿತವಾಗುವುದಿಲ್ಲ. ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಹಿತಅಕರಣಾದಿ ದೋಷ ಪ್ರಸಕ್ತವಾಗುವಂತೆ, ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕರಿಸಿದರೂ ಸಹ ಶ್ರಮಾದಿದೋಷವು ಪ್ರಸಕ್ತವಾಗಬೇಕಾಗುತ್ತದೆ.

ಈ ರೀತಿಯಾಗಿ ದೋಷಪ್ರಸಕ್ತಿಯು ಎರಡು ಪಕ್ಷಗಳಲ್ಲಿಯೂ ಸಮಾನವಾಗಿರುವಾಗ ಅನುಭವಾದಿಸಿದ್ಧವಾದ ಜೀವಕರ್ತೃತ್ವವನ್ನು ಅಂಗೀಕರಿಸುವುದೇ ಉಚಿತವಾಗುತ್ತದೆ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अधिकं तु भेदनिर्देशात् ॐ (२.१.२३)**

**ಸೂತ್ರಾರ್ಥ :–** (ತುಶಬ್ದವು ಜೀವಸಾಮ್ಯವ್ಯಾವರ್ತಕವಾಗಿದೆ.) ಬ್ರಹ್ಮ ತು =

ಬ್ರಹ್ಮನಾದರೂ ಜೀವಾಪೇಕ್ಷಯಾ ಅಧಿಕಂ = ಜೀವನಿಗಿಂತಲೂ ಅಧಿಕನಾಗಿದ್ದಾನೆ. ಕುತಃ = ಯಾಕೆ? ಭೇದನಿರ್ದೇಶಾತ್ = ಶ್ರೋತಾ ಮಂತಾ (ಐ.ಆ. 3-2-4) ಇತ್ಯಾದಿ ಶ್ರುತಿಗಳಲ್ಲಿ ಶ್ರೋತೃತ್ವಾದಿ ರೂಪವಾದ ವಿಶೇಷವನ್ನು ಹೇಳಿದ್ದರಿಂದ.

## ಸಮಾಧಾನ

**ಸೂ.ರ.:– एवं चेश्वरे श्रमाद्यभावस्य प्रमाणसिद्धत्वेन तदभावापादनस्येष्टापादनत्वात् । जीवे च हिताकरणादीनां प्रामाणिकत्वेन तदभावापादनस्याप्यनिष्टत्वेन वैषम्यात् । ईश्वरस्याधिकशक्तित्वाच्छ्रमचिन्तादिदोषाप्राप्तेः । श्रोता मन्तेति श्रुतेः । योऽशनायापिपासेति (बृ.५-५-१) श्रुतेश्च । अतो युक्तं लक्षणसूत्रमिति सिद्धम् ॥**

**ಅನು.:–** ಈಶ್ವರನಲ್ಲಿ ಶ್ರಮಾದಿಗಳು ಇಲ್ಲ ಎಂಬುದಾಗಿ ಪ್ರಮಾಣಸಿದ್ಧವಾದ್ದರಿಂದ "ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕರಿಸುವುದಾದರೆ ಅವನಿಗೂ ಶ್ರಮಾದಿಗಳು ಬರಬೇಕಾಗುತ್ತದೆ" ಎಂಬುದಾಗಿ ಆಪಾದನೆ ಮಾಡಲು ಬರುವುದಿಲ್ಲ.

ಇನ್ನು ಜೀವನಲ್ಲಿ ಹಿತಅಕರಣಾದಿದೋಷಗಳು ಇರುವುದೇ ಪ್ರಮಾಣಸಿದ್ಧವಾದ್ದರಿಂದ "ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸುವುದಾದರೆ ಹಿತಅಕರಣಾದಿದೋಷಗಳು ಬರಬೇಕಾಗುತ್ತದೆ" ಎಂದು ಆಪಾದನೆ ಮಾಡಲು ಬಂದೇ ಬರುತ್ತದೆಯಾದ್ದರಿಂದ (ಹಿತಅಕರಣಾದಿ ದೋಷಪ್ರಸರಣಾಪಾದನೆಯು ಅನಿಷ್ಟಾಪಾದನೆಯೇ ಆಗುವುದರಿಂದ) ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಹೀಗಾಗಿ "ಕರ್ತೃತ್ವಾಂಗೀಕಾರ ಮಾಡಿದರೆ ದೋಷ ಬರಬೇಕಾದೀತು" ಎಂಬ ಆಪಾದನೆಯು ಜೀವ-ಬ್ರಹ್ಮ ಪಕ್ಷಗಳಲ್ಲಿ ಸಮಾನವಾಗಿಲ್ಲ. ಬ್ರಹ್ಮಪಕ್ಷದಲ್ಲಿ ವೈಷಮ್ಯ ಇದೆ.

ಜೀವ-ಬ್ರಹ್ಮ ಇಬ್ಬರೂ ಚೇತನರೇ ಆದ್ದರಿಂದ ಜೀವನಿಗೆ ದೋಷಪ್ರಸಕ್ತಿ ಇದೆ ಬ್ರಹ್ಮನಿಗೆ ದೋಷಪ್ರಸಕ್ತಿ ಇಲ್ಲ ಎಂದು ವೈಷಮ್ಯ ಏಕೆ? ಎಂದರೆ, ಬ್ರಹ್ಮನು ಜೀವನಿಗಿಂಗಲೂ ಅಧಿಕ ಶಕ್ತಿಮಂತನಾದ್ದರಿಂದ ಅವನಿಗೆ ದೋಷಪ್ರಸಕ್ತಿ ಇಲ್ಲ.

"ಶ್ರೋತಾ ಮಂತಾ ದ್ರಷ್ಟಾಽಽದೇಷ್ಟಾ ಘೋಷ್ಟಾ ವಿಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ" (ಐ.ಆ.3-2-4) "ಏಷ ತ ಆತ್ಮಾ ಸರ್ವಾಂತರಃ" (ಬೃ.ಉ. 5-5-1) "ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ" (ಬೃ.ಉ. 5-5-1).

ಇತ್ಯಾದಿ ಶ್ರುತಿಗಳೂ ಬ್ರಹ್ಮನಿಗೆ ಶ್ರಮ-ಚಿಂತಾ-ಅಸ್ಮರಣ-ದುಃಖಾದಿ ದೋಷಗಳು ಇಲ್ಲ ಎಂದೇ ತಿಳಿಸುತ್ತಿರುವುದರಿಂದ ಬ್ರಹ್ಮನಿಗೆ ದೋಷಪ್ರಸಂಗ ಇಲ್ಲ. ಆದ್ದರಿಂದ ಲಕ್ಷಣ-ಸೂತ್ರದಲ್ಲಿ ಬ್ರಹ್ಮನಿಗೆ ಜಗತ್ಕರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 24

ಆಕ್ಷೇಪ

**ಸೂ.ರ.:–** **नन्वथाऽपि जीवोऽन्यनिरपेक्षकर्ता चेतनत्वादीश्वरवदित्यनुमानाज्जीवोऽप्यन्यनिरपेक्ष एव कर्ता भवेदिति प्राप्ते निराकुर्वत्सूत्रं पठति ॥**

**ಅನು.:–** ಆದರೂ ಸಹ - ಜೀವಃ ಅನ್ಯನಿರಪೇಕ್ಷಕರ್ತಾ ಚೇತನತ್ವಾತ್ ಈಶ್ವರವತ್ (ಜೀವನು, ಅನ್ಯನಿರಪೇಕ್ಷ(ಸ್ವತಂತ್ರ) ಕರ್ತಾ ಆಗಿದ್ದಾನೆ, ಚೇತನನಾದ್ದರಿಂದ, ಈಶ್ವರನಂತೆ.) ಎಂಬುದಾಗಿ ಅನುಮಾನಪ್ರಮಾಣದಿಂದಾಗಿ ಜೀವನು ಸ್ವತಂತ್ರಕರ್ತೃವೇ ಆಗಿದ್ದಾನೆ ಎಂದೇ ಸಿದ್ಧನಾಗುತ್ತಾನಲ್ಲವೇ? ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अश्मादिवच्च तदनुपपत्तिः ॐ (२.१.२४)**

**ಸೂತ್ರಾರ್ಥ :–** (ಚಶಬ್ದಕ್ಕೆ ಅಪಿ ಎಂದು ಅರ್ಥ.) ಚ (ಅಪಿ) ಜೀವಸ್ಯ ಚೇತನತ್ವೇऽಪಿ = ಜೀವನು ಚೇತನನಾದರೂ ಸಹ ಅಶ್ಮಾದಿವತ್ = ಪಾಷಾಣಾದಿಗಳಂತೆ ತದನುಪಪತ್ತಿಃ = ಅಸ್ವಾತಂತ್ರ್ಯ ಇರುವ ಕಾರಣ ಸ್ವತಂತ್ರಕರ್ತೃತ್ವವು ಉಪಪನ್ನವಾಗುವುದಿಲ್ಲ.

ಸಮಾಧಾನ

**ಸೂ.ರ.:–** **एवं च स्वातन्त्र्येण हेतुनाऽन्यनिरपेक्षत्वाभावस्यापि साधयितुं शक्यत्वात् । चेतनत्वहेतोरप्रयोजकत्वाच्च । तथा च जीवे चेतनत्वास्वातन्त्र्ययोरुभयोः सत्त्वेऽपि पाषाणस्तम्भादिवच्चेतनत्वेन जीवस्य स्वतः कर्तृतासाधनं नोपपद्यते । चेतनत्वहेतोरप्रयोजकत्वादस्वातन्त्र्येण प्रतिपक्षितत्वाच्च । यथा दारुमयीमिति (भारत.) वचनसद्भावात् । अतो विरोधाभावेन युक्तं लक्षणसूत्रमिति सिद्धम् ॥**

**ಅನು.:–** ಚೇತನತ್ವಹೇತುವಿನಿಂದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸಲು ಬರುವುದಿಲ್ಲ. ಕಾರಣ - ಜೀವಃ ಅನ್ಯನಿರಪೇಕ್ಷಕರ್ತಾ ನ ಭವತಿ ಅಸ್ವಾತಂತ್ರ್ಯಾತ್ ಪಾಷಾಣಾದಿವತ್ (ಜೀವನು ಸ್ವತಂತ್ರಕರ್ತೃವಲ್ಲ ಅಸ್ವತಂತ್ರನಾದ್ದರಿಂದ ಪಾಷಾಣಾದಿ-ಗಳಂತೆ) ಎಂಬುದಾಗಿ ಅಸ್ವಾತಂತ್ರ್ಯಹೇತುವಿನಿಂದ ಅನ್ಯನಿರಪೇಕ್ಷಕರ್ತೃತ್ವದ ಅಭಾವವನ್ನು ಸಾಧಿಸಲೂ ಬರುವುದರಿಂದ.

ಜೀವನಲ್ಲಿ ಚೇತನತ್ವ-ಅಸ್ವತಂತ್ರತ್ವ ಎಂಬ ಎರಡೂ ಧರ್ಮಗಳು ಇದ್ದರೂ ಸಹ ಪಾಷಾಣಾದಿಗಳಿಗೆ ಹೇಗೆ ಸ್ವಾತಂತ್ರ್ಯೇಣ ಕರ್ತೃತ್ವವು ಉಪಪನ್ನವಾಗುವುದಿಲ್ಲವೋ ಆದರಂತೆ ಚೇತನತ್ವಹೇತುವಿನಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಸಾಧಿಸಲೂ ಬರುವುದಿಲ್ಲ.

ಅರ್ಥಾತ್ ''ಅಸ್ತು ಚೇತನತ್ವಂ, ಅನ್ಯನಿರಪೇಕ್ಷಕರ್ತೃತ್ವಂ ಮಾಸ್ತು'' ಚೇತನನಾಗಲಿ ಆದರೆ ಸ್ವತಂತ್ರಕರ್ತೃವಾಗುವುದು ಬೇಡ ಎಂಬುದಾಗಿ ಚೇತನತ್ವಹೇತುವಿಗೆ ಅಪ್ರಯೋಜಕತಾಶಂಕೆ ಬರುವುದರಿಂದ ಚೇತನತ್ವಹೇತುವು ಸ್ವತಂತ್ರಕರ್ತೃತ್ವಕ್ಕೆ ಸಾಧಕವಾಗುವುದಿಲ್ಲ. ಮತ್ತು -

**ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ ।**
**ಇಂಗಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ ॥**

ಎಂಬುದಾಗಿ ಮಹಾಭಾರತವಚನ ಇರುವಂತೆ ಜೀವನು ಅಸ್ವತಂತ್ರನಾಗಿದ್ದಾನೆ. ಹಾಗಾಗಿ ಜೀವಃ ಅನ್ಯನಿರಪೇಕ್ಷಕರ್ತಾ ನ ಭವತಿ ಅಸ್ವತಂತ್ರತ್ವಾತ್ ಪಾಷಾಣಾದಿವತ್ ಎಂಬ ಪ್ರತಿಪಕ್ಷಾನುಮಾನಸಹಿತವಾಗುವುದರಿಂದಲೂ ಚೇತನತ್ವಹೇತುವು ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸಲಾರದು.

ಆದ್ದರಿಂದ ವಿಷ್ಣುವಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ–

ಸೂತ್ರ - 25

### ಆಕ್ಷೇಪ

**ಸೂ.ರ.:–** ननु न जीवस्य स्वतन्त्रकर्तृत्वाभावो युक्तः । स हि यत्कार्यमारभते तत्समापयतीत्युपसंहारदर्शनादित्याशङ्कां परिहरत्सूत्र-मुपन्यस्यति ॥

**ಅನು.**:– ಜೀವನಿಗೆ ಸ್ವತಂತ್ರಕರ್ತೃತ್ವ ಇಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಜೀವನು ಯಾವ ಕಾರ್ಯವನ್ನು ಮಾಡಲು ಆರಂಭಿಸುವನೋ ಆ ಕಾರ್ಯವನ್ನು ಮಾಡಿಯೇ ಮುಗಿಸುತ್ತಾನೆ. ಈ ವಿಧವಾದ ಉಪಸಂಹಾರ (ಕಾರ್ಯಸಮಾಪನ) ಕಂಡಿದ್ದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಒಪ್ಪಲೇಬೇಕು ಎಂದು ಆಕ್ಷೇಪ ಬಂದರೆ, ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ उपसंहारदर्शनान्नेति चेत्क्षीरवद्धि ॐ (२.१.२९)

**ಸೂತ್ರಾರ್ಥ** :– ಉಪಸಂಹಾರದರ್ಶನಾತ್ = ಜೀವನು ಆರಂಭಿಸಿದ ಕಾರ್ಯಕ್ಕೆ ಸಮಾಪ್ತಿ ಕಂಡಿದ್ದರಿಂದ ಸ ಏವ ಕರ್ತಾ = ಆ ಜೀವನೇ ಸ್ವತಂತ್ರಕರ್ತಾ ಆಗುತ್ತಾನೆ ಇತಿ = ಆದ್ದರಿಂದ ಉಕ್ತಂ ಬ್ರಹ್ಮಕರ್ತೃತ್ವಂ ನ ಇತಿ ಚೇತ್ = ನೀವು ಹೇಳಿದ ಬ್ರಹ್ಮಕರ್ತೃತ್ವವು ಸರಿಯಾದದ್ದಲ್ಲ ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ. ಕುತಃ ? = ಯಾಕೆಂದರೆ ಹಿ = ಯಾವ ಕಾರಣ ಕ್ಷೀರವತ್ = ಗೋವುಗಳಲ್ಲಿ ಕಾಣುವ ಕ್ಷೀರವು ಹೇಗೆ ಮುಖ್ಯಪ್ರಾಣಕೃತವಾಗಿದೆಯೋ ಅದರಂತೆ ಜೀವಕೃತವಾದ ಉಪಸಂಹಾರವೂ ಸಹ (ಕಾರ್ಯಸಮಾಪನವೂ ಸಹ) ಪರಮಾತ್ಮಕೃತವೇ ಆಗಿದೆ.

'ಹಿ' ಶಬ್ದಪ್ರಯೋಗದಿಂದಾಗಿ ಗೋಕ್ಷೀರವು ಮುಖ್ಯಪ್ರಾಣಕೃತವಾದದ್ದು ಎಂಬ ವಿಷಯದಲ್ಲಿ ಪ್ರಮಾಣಪ್ರಸಿದ್ಧಿಯನ್ನು ಸೂಚಿಸುತ್ತಿದ್ದಾರೆ.

### ಸಮಾಧಾನ

**ಸೂ.ರ.**:– एवं च गोषु क्षीरदर्शनेऽपि प्रामाणिकत्वेन मुख्यप्राणाधीनत्ववदेतस्यापि परमात्माधीनत्वोपपत्तेः । अन्नं रसादिरूपेणेति वचनात्स्वेनानुभूयमानोऽन्यैर्दृश्यमानश्च कार्योपसंहारो जीवकर्तृत्वे न मानम् । तत्स्वातन्त्र्याभावेन परमेश्वरस्यैव तन्निमित्तत्वात् । तथा च युक्तिविरोधाभावेन युक्तं लक्षणसूत्रमिति सिद्धम् ॥

**ಅನು.**:– ಗೋವುಗಳಲ್ಲಿ ಕ್ಷೀರವು ದೃಷ್ಟವಾದರೂ ಸಹ ಅದು ಸ್ವಾತಂತ್ರ್ಯೇಣ ಗೋಕೃತವಾದದ್ದಲ್ಲ. ಕಿಂತು – "ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ ।" ಎಂಬುದಾಗಿ ಪ್ರಮಾಣವಚನಾನುಸಾರವಾಗಿ ಅದು ಮುಖ್ಯಪ್ರಾಣಕೃತವಾದದ್ದು ಎಂದೇ ಅಂಗೀಕರಿಸಲ್ಪಟ್ಟಿದೆ. ಹಾಗಾಗಿ ಗೋವುಗಳಲ್ಲಿ ದೃಷ್ಟವಾದ ಕ್ಷೀರವು ಮುಖ್ಯಪ್ರಾಣಾಧೀನ-

ವಾಗಿರುವಂತೆ, ಜೀವನಲ್ಲಿ ಕಾಣುವ ಕಾರ್ಯೋಪಸಂಹಾರವೂ ಸಹ ಪರಮಾತ್ಮಾಧೀನ-ವಾದದ್ದು ಎಂದು ಹೇಳಲು ಬರುತ್ತದೆ.

ಆದ್ದರಿಂದ ಜೀವನು ತಾನು ಆರಂಭಿಸಿದ ಕಾರ್ಯದ ಮೇಲೆ ತನಗೆ ಸ್ವಾತಂತ್ರ್ಯ ಇಲ್ಲದ ಕಾರಣ ಅಲ್ಲಿ ಆಗುವ ಕಾರ್ಯಸಮಾಪನಕ್ಕೆ ಪರಮೇಶ್ವರನೇ ನಿಮಿತ್ತನಾಗುತ್ತಾನೆ. ಹೀಗಾಗಿ ಜೀವನಿಂದ ಅನುಭವಿಸಲ್ಪಡುವ, ಇತರರು ಕಾಣುವ ಈ ಕಾರ್ಯೋಪಸಂಹಾರವು ಜೀವನ ಸ್ವಾತಂತ್ರ್ಯೇಣ ಕರ್ತೃತ್ವದ ವಿಷಯದಲ್ಲಿ ಪ್ರಮಾಣವಾಗಲಾರದು.

ಆದ್ದರಿಂದ ವಿಷ್ಣುವಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿದರೆ ಯಾವ ಯುಕ್ತಿಯ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 26

### ಆಕ್ಷೇಪ

**ಸೂ.ರ.:– ननु न जीवस्येशाधीनकर्तृत्वं वाच्यम् । ईश्वरस्य जीवनियामकत्वेन जीवशरीरेऽनुपलब्धेः । न च स हि सर्वस्येत्यादि-श्रुत्येश्वरसिद्धिः । तस्या अनुपलब्धिलिङ्गबाधितत्वात् । अथाऽपि तत्कल्पने गौरवात् । न हि जीवस्तन्नियम्यं सत्तदाज्ञया प्रवर्तते । तं च न जानातीति सम्भवति । अतो जीवनियामकत्वेन नास्त्येव जीवशरीर उदरस्थ ईश्वर इति प्राप्ते सूत्रमाह ॥**

**ಅನು.:–** ಜೀವನಿಗೆ ಈಶಾಧೀನಕರ್ತೃತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ ಜೀವನು ಈಶಾಧೀನವಾಗಿದ್ದರೆ ಈಶ್ವರನು ಜೀವನಿಯಾಮಕನಾಗಿ ಜೀವನ ಶರೀರದಲ್ಲಿ ಉಪಲಬ್ಧವಾಗಬೇಕಿತ್ತು. ಆದರೆ ಈಶ್ವರನು ಜೀವನಿಯಾಮಕನಾಗಿ ಜೀವನ ಶರೀರದಲ್ಲಿ ಉಪಲಬ್ಧನಾಗುತ್ತಿಲ್ಲ.

ಈಶ್ವರನು ಜೀವನ ಶರೀರದಲ್ಲಿ ಪ್ರತ್ಯಕ್ಷದಿಂದ ಉಪಲಬ್ಧನಾಗದಿದ್ದರೂ ಸಹ "ಸ ಹಿ ಸರ್ವಸ್ಯೇಶಾನಃ" ಎಂಬ ಶ್ರುತಿಯಿಂದ ಸಿದ್ಧನಾಗಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಅನುಪಲಬ್ಧಿಲಿಂಗದಿಂದ ಪ್ರತ್ಯಕ್ಷವು ಬಾಧಿತವಾಗುವಂತೆ ಈ ಶ್ರುತಿಯೂ ಬಾಧಿತವಾಗುತ್ತದೆ. ಹೀಗಾಗಿ ಶ್ರುತಿಯಿಂದಲೂ ಈಶ್ವರನು ಸಿದ್ಧನಾಗುವುದಿಲ್ಲ. ಈ ರೀತಿ ಪ್ರಮಾಣಸಿದ್ಧನಾಗ-ದಿದ್ದರೂ ಸಹ ಈಶ್ವರನನ್ನು ಕಲ್ಪಿಸುವುದಾದರೆ ಕಲ್ಪನಾಗೌರವ ಬರುತ್ತದೆ.

ಜೀವನು ಈಶ್ವರನಿಂದ ನಿಯಮ್ಯನಾಗಿ ಅವನ ಆಜ್ಞೆಯಿಂದ ಪ್ರವೃತ್ತನಾಗುತ್ತಾನೆ. ಆದರೂ ತನಗೆ ನಿಯಾಮಕನಾದ ಈಶ್ವರನನ್ನು ತಾನು (ಕಾಣುವುದಿಲ್ಲ) ತಿಳಿಯುವುದಿಲ್ಲ ಎಂದು ಹೇಳುವುದು ಸರಿಯಾಗುವುದಿಲ್ಲ.

ಆದ್ದರಿಂದ ಜೀವನಿಯಾಮಕನಾಗಿ ಜೀವಶರೀರದಲ್ಲಿ ಈಶ್ವರನು ಇಲ್ಲವೇ ಇಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ देवादिवदपि लोके ॐ (२.१.२६)

**ಸೂತ್ರಾರ್ಥ** :– ಅಪಿ ಏವಂಭೂತೇಶ್ವರಸ್ಯಾಪಿ = ಈ ವಿಧನಾದ ಈಶ್ವರನಿಗೂ ಸಹ ದೇವಾದಿವತ್ = ದೇವಾದಿಗಳಂತೆ ಅದರ್ಶನಂ ಯುಜ್ಯತೇ = ಅದರ್ಶನವು ಕೂಡುತ್ತದೆ. ಕಥಮೇತತ್ = ಇದು ಹೇಗೆ ಸಾಧ್ಯ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಹೇಳಿದರು ಲೋಕೇ = ಜಗತ್ತಿನಲ್ಲಿ ಪಿಶಾಚಾದಿಗಳಿಗೂ ಸಹ ಅದೃಶ್ಯತ್ವಾದಿಶಕ್ತಿಯು ಕಂಡಿದೆ ಎಂದಮೇಲೆ ಇನ್ನು ಸರ್ವೇಶ್ವರನಾದ ಭಗವಂತನಿಗೆ ಅದೃಶ್ಯತ್ವಾದಿಶಕ್ತಿ ಇದೆ ಎಂದು ಏನು ಹೇಳುವುದು?

### ಸಮಾಧಾನ

**ಸೂ.ರ.:– एवं च देवादिवदन्तर्धानशक्त्या प्रत्यक्षेणानुपलभ्यमानत्वेऽप्यागमेनोपलभ्यमानत्वात् । न चेश्वरस्य देवादिवदन्तर्धानशक्तिमत्त्वं युक्तम् । तस्या उपासनासाध्यत्वेनेश्वरे तदभावादिति चेत् । तर्हि पिशाचादीनामपि तन्न स्यात् । उपासनाभावात् ।**

**ಅನು.**:– ಈಶ್ವರನು ದೇವಾದಿಗಳಂತೆ ಅಂತರ್ಧಾನಶಕ್ತಿಯುಳ್ಳವನಾಗಿ ಪ್ರತ್ಯಕ್ಷದಿಂದ ಉಪಲಭ್ಯಮಾನನಾಗದಿದ್ದರೂ ಸಹ ಆಗಮದಿಂದ ಉಪಲಭ್ಯನಾಗುತ್ತಾನೆ.

ಹೌದು, ಈಶ್ವರನಿಗೆ ದೇವಾದಿಗಳಂತೆ ಅಂತರ್ಧಾನಶಕ್ತಿಯನ್ನು ಒಪ್ಪುವುದು ಸರಿಯಾಗುವುದಿಲ್ಲ, ಕಾರಣ – ಆ ಅಂತರ್ಧಾನಶಕ್ತಿಯು ಉಪಾಸನೆಯಿಂದ ಪಡೆಯಲು ಸಾಧ್ಯವಾದದ್ದಾದ್ದರಿಂದ ಪ್ರಕೃತ ಈಶ್ವರನಿಗಾದರೋ ಉಪಾಸನೆಯೇ ಇಲ್ಲದ ಕಾರಣ ಈಶ್ವರನಿಗೆ ಅಂತರ್ಧಾನಶಕ್ತಿಯನ್ನು ಒಪ್ಪಲು ಬರುವುದಿಲ್ಲ ಎಂದು ಆಕ್ಷೇಪ ಬಂದರೆ, ಹಾಗಾದರೆ ಪಿಶಾಚಾದಿಗಳಿಗೂ ಅಂತರ್ಧಾನಶಕ್ತಿಯು ಇಲ್ಲದೇ ಹೋಗಬೇಕಾಗುತ್ತದೆ. ಈಶ್ವರನಂತೆ ಪಿಶಾಚಾದಿಗಳಿಗೂ ಉಪಾಸನಾ ಇಲ್ಲವಾದ್ದರಿಂದ ಅವುಗಳಿಗೂ ಅಂತರ್ಧಾನಶಕ್ತಿ ಇಲ್ಲದೇ ಹೋಗಬೇಕಾಗುತ್ತದೆ.

ಸೂ.ರ.:– अथ प्रमाणसिद्धाऽन्तर्धानशक्तिः पिशाचादीनां हातुमशक्यत्वेन कारणान्तरं कल्प्यते तर्हि यत्तदद्रेश्यमिति (मुं.१-१-६) प्रमाणसिद्धा सा न हातुं शक्येति नित्या सा कल्प्यताम् ।

ಅನು.:– ಪಿಶಾಚಾದಿಗಳಲ್ಲಿ ಅಂತರ್ಧಾನಶಕ್ತಿಯು ಪ್ರಮಾಣಸಿದ್ಧವಾಗಿರುವುದರಿಂದ ಅದನ್ನು ಬಿಡಲು ಬಾರದ ಕಾರಣ ಅಲ್ಲಿ ಕಾರಣಾಂತರವನ್ನು ಕಲ್ಪಿಸುತ್ತೇವೆ ಎಂದರೆ, ಹಾಗಾದರೆ ಪ್ರಕೃತ ಈಶ್ವರನಲ್ಲಿಯೂ ಸಹ ಅಂತರ್ಧಾನಶಕ್ತಿಯು "ಯತ್ತದದ್ರೇಶ್ಯಮ್" (ಮುಂ. 1-1-6) ಎಂಬ ಪ್ರಮಾಣಸಿದ್ಧವಾಗಿರುವುದರಿಂದ ಅದನ್ನು ಬಿಡಲು ಬಾರದ ಕಾರಣ ಈಶ್ವರನಲ್ಲಿ ನಿತ್ಯವಾದ ಅಂತರ್ಧಾನಶಕ್ತಿಯನ್ನು ಕಲ್ಪಿಸಿರಿ.

ಸೂ.ರ.:– न युक्तियोगादिति (बृहत्संहिता) वचनेन श्रुतिस्मृतिरूपवाक्यानां युक्तिलक्षणोपायात्कचिदपि विषयेऽप्रमाणत्वेनासाधकत्वेन वा निराकरणायोगात् । तेषां विरोधे तासां युक्तीनामेकवाक्यानुसारिणीनामेवार्थसाधकत्वं न तु शुष्कयुक्तीनां । अतो विरोधाभावेन युक्तं लक्षणसूत्रमिति सिद्धम् ॥

ಅನು.:– ನ ಯುಕ್ತಿಯೋಗಾದ್ವಾಕ್ಯಾನಿ ನಿರಾಕಾರ್ಯಾಣ್ಯಪಿ ಕ್ವಚಿತ್ ।
ವಿರೋಧ ಏವ ವಾಕ್ಯಾನಾಂ ಯುಕ್ತಯೋ ನ ತು ಯುಕ್ತಯಃ ॥

ಎಂಬುದಾಗಿ ಬೃಹತ್ಸಂಹಿತಾವಚನಕ್ಕೆ ಅನುಸಾರವಾಗಿ ಯುಕ್ತ್ಯುಪಾಯದಿಂದಾಗಿ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಿ ನಿರಾಕರಿಸುವಂತಿಲ್ಲ. ಕಿಂತು ಯುಕ್ತಿಗಳಿಗೆ ವಾಕ್ಯಗಳ ವಿರೋಧ ಬಂದಾಗ ವಾಕ್ಯಗಳೇ ನಿಜವಾದ ಯುಕ್ತಿಗಳಾಗುತ್ತವೆ. (ಪ್ರಮಾಣವಾಗುತ್ತವೆ) ಹೊರತು ವಾಕ್ಯವಿರುದ್ಧವಾದ ಯುಕ್ತಿಗಳು ಯುಕ್ತ್ಯಾಭಾಸವಾಗುತ್ತವೆಯೇ ವಿನಃ ಪ್ರಮಾಣವಾಗುವುದಿಲ್ಲ. ಅಥವಾ ವಾಕ್ಯಗಳಲ್ಲಿಯೇ ಪರಸ್ಪರ ವಿರೋಧ ಬಂದಾಗ ಮಾತ್ರ ಯುಕ್ತಿಗಳು ಅರ್ಥಸಾಧಕವಾಗುತ್ತವೆ ಹೊರತು ಕೇವಲ ಯುಕ್ತಿಗಳು ಅರ್ಥಸಾಧಕವಾಗುವುದಿಲ್ಲ.

ಪ್ರಕೃತ ಯತ್ತದದ್ರೇಶ್ಯಮ್ (ಮುಂ. 1-1-6) ಮೊದಲಾದ ಶ್ರುತಿಗಳಿಂದ ಭಗವಂತನಲ್ಲಿ ಅಂತರ್ಧಾನಶಕ್ತಿಯು ಸಿದ್ಧವಾಗಿರುವುದರಿಂದ, ಅನುಪಲಬ್ಧಿಲಿಂಗದಿಂದ ಈಶ್ವರ ಇಲ್ಲ ಎಂದು ಯುಕ್ತಿಯಿಂದ ಸಾಧಿಸಲು ಹೊರಟರೆ ಯುಕ್ತಿಗೆ ವಾಕ್ಯ(ಶ್ರುತಿ) ವಿರೋಧ ಬರುವ ಕಾರಣ ಯುಕ್ತಿಯೇ ಯುಕ್ತ್ಯಾಭಾಸವಾಗುತ್ತದೆ ಅರ್ಥಸಾಧಕವಾಗುವುದಿಲ್ಲ.

ಆದ್ದರಿಂದ ದೇವಾದಿಗಳಂತೆ ಭಗವಂತನಿಗೆ ಅಂತರ್ಧಾನಶಕ್ತಿಯು ಉಪಪನ್ನವಾಗುವ ಕಾರಣ, ಜೀವನಿಯಾಮಕನಾಗಿ ಜೀವನ ಶರೀರದಲ್ಲಿ ಭಗವಂತ ಇದ್ದಾನೆ ಎಂದರೆ ಯಾವ ಅನುಪಪತ್ತಿಯೂ ಬಾರದಿರುವುದರಿಂದ, ಜೀವನು ಈಶ್ವರನಿಂದ ನಿಯಮ್ಯನೇ ಆಗಿದ್ದಾನೆ, ಅಂತಹ ಈಶ್ವರನು ಜಗತ್ಕಾರಣನಾಗಿದ್ದಾನೆ ಎಂದು ಲಕ್ಷಣಸೂತ್ರದಲ್ಲಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 27

**ಸೂ.ರ.:– युक्त्यन्तरेण जीवस्य स्वतः कर्तृत्वं निराकुर्वत्सूत्र-मुपन्यस्यति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ.

**ॐ कृत्स्नप्रसक्तिर्निरवयवत्वशब्दकोपो वा ॐ (२.१.२७)**

**ಸೂತ್ರಾರ್ಥ :–** ('ವಾ' ಶಬ್ದವು ಪಕ್ಷಭೇದದಿಂದಾಗಿ ದೋಷಾಪಾದನವನ್ನು ಸೂಚಿಸುತ್ತಿದೆ.)

ಜೀವಸ್ಯ ಸ್ವತಃ ಕರ್ತೃತ್ವೇ ಸರ್ವಕಾರ್ತ್ಸ್ನ್ಯೇನ ಪ್ರವರ್ತನೇ ಚಾಂಗೀಕೃತೇ = ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿ, ತನ್ನ ಎಲ್ಲ ಕಾರ್ಯಗಳಲ್ಲಿ ಸಮಸ್ತಶಕ್ತಿಯಿಂದ ಪ್ರವೃತ್ತಿಯನ್ನೂ ಅಂಗೀಕರಿಸುವುದಾದರೆ ಕೃತ್ಸ್ನಪ್ರಸಕ್ತಿಃ = ಹುಲ್ಲುಕಡ್ಡಿಯನ್ನು ಎತ್ತುವುದೇ ಮೊದಲಾದ ಎಲ್ಲ ಕಾರ್ಯಗಳಲ್ಲಿಯೂ ಸಮಸ್ತಶಕ್ತಿಯೂ ಪ್ರಕಟವಾಗಬೇಕಾದ ಅತಿಪ್ರಸಂಗ (ದೋಷ) ಬರುತ್ತದೆ. ಆದರ ಪರಿಹಾರಕ್ಕಾಗಿ ಏಕದೇಶೇನ ಪ್ರವೃತ್ತ್ಯಭ್ಯುಪಗಮೇ ಚ = ಒಂದು ಅಂಶದಿಂದ ಮಾತ್ರ ಪ್ರವೃತ್ತಿಯನ್ನು ಅಂಗೀಕರಿಸುವುದಾದರೆ ನಿರವಯವತ್ವಶಬ್ದಕೋಪಃ = "ನಿತ್ಯೋ ನಿರವಯವಃ" ಎಂಬ (ಜೀವನಿಗೆ ನಿರವಯವತ್ವವನ್ನು ತಿಳಿಸುವ) ಶ್ರುತಿಯ ವಿರೋಧ ಬರುತ್ತದೆ.

**ಸೂ.ರ.:– एवं च जीवस्य स्वतन्त्रकर्तृत्वे स सामस्त्येन सर्वस्व-कार्यकर्तेति कचिदंशेन । आद्ये यदि जीवः सामस्त्येन सर्वस्वकार्यकर्ता स्यात्सामस्त्येन तृणादानादावपि कर्ता स्यादिति तर्कविरोधः । द्वितीये यदि जीवोंऽशेन स्वकार्यकर्ता स्यात्तर्हि निरवयवप्रतिपादकश्रुत्यप्रामाण्यं स्यादिति तर्कविरोधः । तथा च कर्तृत्वं सामस्त्येनांशेन प्रवृत्तिर्व्याप्यमिति**

जीवस्य स्वातन्त्र्याङ्गीकारे व्यापकीभूतप्रवृत्त्ययोगात्कर्तृत्वमेव न स्यादिति स्वातन्त्र्यं त्याज्यम् ।

ಅನು.:- ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಅಂಗೀಕರಿಸುವುದಾದರೆ, ತನ್ನ ಎಲ್ಲ ಕಾರ್ಯಗಳಲ್ಲಿ ಸಮಸ್ತಶಕ್ತಿಯಿಂದ ಪ್ರವೃತ್ತಿಯನ್ನು ಹೇಳುತ್ತೀರೋ? ಅಥವಾ ಒಂದು ಅಂಶದಿಂದ ಮಾತ್ರ ಪ್ರವೃತ್ತಿಯನ್ನು ಅಂಗೀಕರಿಸುತ್ತೀರೋ?

1. ಸಮಸ್ತಶಕ್ತಿಯಿಂದ ಪ್ರವೃತ್ತಿಯನ್ನು ಅಂಗೀಕರಿಸಿದರೆ – ಯದಿ ಜೀವಃ ಸಾಮಸ್ತ್ಯೇನ ಸರ್ವಸ್ವಕಾರ್ಯಕರ್ತಾ ಸ್ಯಾತ್ ಸಾಮಸ್ತ್ಯೇನ ತೃಣಾದಾನಾದಾವಪಿ ಕರ್ತಾ ಸ್ಯಾತ್ (ಜೀವನು ತನ್ನ ಎಲ್ಲ ಕಾರ್ಯಗಳಲ್ಲಿ ಸಮಸ್ತಶಕ್ತಿಯಿಂದ ಪ್ರವೃತ್ತಿಯನ್ನು ಅಂಗೀಕರಿಸಿದರೆ ಹುಲ್ಲುಕಡ್ಡಿಯನ್ನು ಎತ್ತುವುದೇ ಮೊದಲಾದ ಎಲ್ಲ ಕಾರ್ಯಗಳಲ್ಲಿಯೂ ಸಮಸ್ತಶಕ್ತಿಯಿಂದ ಪ್ರವೃತ್ತನಾಗಲಿ) ಎಂಬ ತರ್ಕದ ವಿರೋಧ ಬರುತ್ತದೆ.

2. ಇನ್ನು ಒಂದಂಶದಿಂದ ಪ್ರವೃತ್ತಿಯನ್ನು ಅಂಗೀಕರಿಸಿದರೆ – "ಯದಿ ಜೀವೋऽಂ-ಶೇನ ಸ್ವಕಾರ್ಯಕರ್ತಾ ಸ್ಯಾತ್ತರ್ಹಿ ನಿರವಯವಪ್ರತಿಪಾದಕಶ್ರುತ್ಯಪ್ರಾಮಾಣ್ಯಂ ಸ್ಯಾತ್" ಜೀವನು ಒಂದಂಶದಿಂದ ಸ್ವಕಾರ್ಯಕರ್ತಾ ಎಂದು ಅಂಗೀಕರಿಸಿದರೆ ಜೀವನಿಗೆ ನಿರವಯವತ್ವವನ್ನು (ಅವಯವವಿಲ್ಲ ಎಂದು) ತಿಳಿಸುವ ಶ್ರುತಿಗೆ ಅಪ್ರಾಮಾಣ್ಯ ಬರಬೇಕಾಗುತ್ತದೆ ಎಂಬ ತರ್ಕದ ವಿರೋಧ ಬರುತ್ತದೆ.

ಹಾಗಾಗಿ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸುವುದಾದರೆ ಸಾಮಸ್ತ್ಯೇನ ಪ್ರವೃತ್ತಿ ಅಥವಾ ಏಕದೇಶೇನ ಪ್ರವೃತ್ತಿಗಳನ್ನು ಹೇಳಬೇಕಾಗುತ್ತದೆ. ಆದರೆ ಅನುಪಪತ್ತಿ ಬರುವ ಕಾರಣ ಆ ಎರಡೂವಿಧ ಪ್ರವೃತ್ತಿಗಳೂ ಕೂಡುವುದಿಲ್ಲವಾದ್ದರಿಂದ ಕರ್ತೃತ್ವವನ್ನೂ ಒಪ್ಪದೇ ಹೋಗಬೇಕಾಗುವ ಪ್ರಸಂಗ ಬರುವುದರಿಂದ ಜೀವನಿಗೆ ಸ್ವಾತಂತ್ರ್ಯವನ್ನು ಕೈಬಿಡಬೇಕು.

ಸೂ.ರ.:- ननु न जीवस्य स्वतः कर्तृत्वेऽपि दोषावकाशः । तस्योपाधिकृतांशवत्त्वेन कृत्स्नप्रसक्त्ययोगात् । स्वाभाविकांशाभावेन श्रुतिविरोधाभावादिति चेत् । किं जीवः सर्वोऽप्युपहितस्तदंशो वेति प्रष्टव्यम् ॥ नाद्यः । सर्वजीवस्योपहितत्वे सर्वस्य ग्रस्तत्वेनांश-स्योपाधिकत्वायोगात् । द्वितीये नोपाधिकत्वम् । उपाधिसम्बन्धा-त्प्रागप्यंशस्य वक्तव्यत्वात् । तस्याप्युपाध्यन्तरकृतत्वेऽनवस्थानात् ।

**ಅನು.:–** ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿದರೂ ಸಹ ಯಾವ ದೋಷವೂ ಬರುವುದಿಲ್ಲ. ಏಕೆಂದರೆ – ಜೀವನು ಉಪಾಧಿಕೃತವಾದ ಅಂಶವುಳ್ಳವ-ನಾದ್ದರಿಂದ ಕೃತ್ಸ್ನಪ್ರಸಕ್ತಿ (ಸಮಸ್ತಶಕ್ತಿಯಿಂದ ಪ್ರವೃತ್ತನಾಗಬೇಕಾದ ಪ್ರಸಂಗ) ಇಲ್ಲ. ಇನ್ನು ಸ್ವಾಭಾವಿಕವಾದ ಅಂಶ ಇಲ್ಲದ ಕಾರಣ ಜೀವನಿಗೆ ನಿರವಯವತ್ವ ಬೋಧಕವಾದ ಶ್ರುತಿಯ ವಿರೋಧವೂ ಬರುವುದಿಲ್ಲ ಎಂದು ಆಕ್ಷೇಪ ಬಂದರೆ, ಅಲ್ಲಿ ವಿಕಲ್ಪ ಮಾಡುತ್ತೇವೆ.

ಸಮಗ್ರಜೀವನು ಉಪಾಧಿಯಿಂದ ಸಂಬದ್ಧನಾಗಿದ್ದಾನೆ ಎನ್ನುತ್ತೀರೋ? ಅಥವಾ ಜೀವನ ಕೆಲವು ಅಂಶವು ಮಾತ್ರ ಉಪಾಧಿಯಿಂದ ಸಂಬದ್ಧನಾಗಿದ್ದಾನೆ ಎನ್ನುತ್ತೀರೋ?

ಸಮಗ್ರಜೀವನು ಉಪಾಧಿಯಿಂದ ಸಂಬದ್ಧ ಎನ್ನಲು ಬರುವುದಿಲ್ಲ, ಕಾರಣ ಸಮಗ್ರಜೀವನು ಉಪಾಧಿಯಿಂದ ಗ್ರಸ್ತನಾಗುವುದಾದರೆ ಅವನ ಅಂಶವು ಔಪಾಧಿಕ ಎಂದಾಗುವುದಿಲ್ಲ. ಇನ್ನು ಜೀವನ ಅಂಶವು ಉಪಾಧಿಯಿಂದ ಸಂಬದ್ಧ ಎನ್ನುವುದಾದರೆ, ಅಂಶವು ಔಪಾಧಿಕ ಎನ್ನಲು ಬರುವುದಿಲ್ಲ. ಏಕೆಂದರೆ – ಉಪಾಧಿಸಂಬಂಧದಿಂದಾಗಿ ಅಂಶ ಹುಟ್ಟಿದೆ ಎನ್ನಬೇಕಾದರೆ ಉಪಾಧಿಸಂಬಂಧವಾಗುವುದಕ್ಕಿಂತಲೂ ಮುಂಚೆಯೇ ಆ ಅಂಶವು ಇರಬೇಕಾಗುವುದರಿಂದ ಆ ಅಂಶವು ಸ್ವಾಭಾವಿಕವೆಂದೇ ಹೇಳಬೇಕಾಗುತ್ತದೆ. ಹೊರತು ಔಪಾಧಿಕ ಆಗಲು ಸಾಧ್ಯವಿಲ್ಲ. ಆ ಉಪಾಧಿಯು ಮತ್ತೊಂದು ಉಪಾಧಿಯಿಂದ ಕೃತವಾದ ಅಂಶವನ್ನು ಸಂಬಂಧಿಸಿ ಕಾರ್ಯಜನಕವಾಗುತ್ತದೆ ಎನ್ನುವುದಾದರೆ, ಆ ಮತ್ತೊಂದು ಉಪಾಧಿಯ ಸಂಬಂಧಕ್ಕಾಗಿ ಅಂಶವು ಮುಂಚೆಯೇ ಇರಬೇಕು. ಅದೂ ಇನ್ನೊಂದು ಉಪಾಧಿಕೃತ ಎನ್ನುವುದಾದರೆ ಹೀಗೆ ಉಪಾಧಿಗಳ ಪರಂಪರೆಯನ್ನೇ ಒಪ್ಪುತ್ತಾ ಹೋಗಬೇಕಾಗುವುದರಿಂದ ಅನವಸ್ಥಾ ಬರುತ್ತದೆ.

**ಸೂ.ರ.:– ननु जीवस्य कर्तृत्वं युक्तिविरुद्धत्वादविचाररमणीयाऽ-विद्यानिमित्तमस्त्विति चेन्न । अविद्यानिमित्तत्वस्याप्रामाणिकत्वात् । यद्धि युक्त्या विरुद्ध्येतेति प्रमाणविरुद्धत्वाच्च । तस्माज्जीवस्य स्वतन्त्र कर्तृत्वा-नुपपत्तेर्युक्तं हरेर्जगत्कारणत्वलक्षणमिति सिद्धम् ॥**

**ಅನು.:–** ಜೀವನ ಕರ್ತೃತ್ವವು ಯುಕ್ತಿವಿರುದ್ಧವಾದ್ದರಿಂದ ಅವಿಚಾರರಮಣೀಯ ಅವಿದ್ಯಾನಿಮಿತ್ತ ಎಂದಾಗಲಿ ಎಂದು ಹೇಳುವುದು ಸರಿಯಲ್ಲ. ಕರ್ತೃತ್ವವು ಅವಿದ್ಯಾನಿಮಿತ್ತವಾಗಿದೆ ಎನ್ನುವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ ಕರ್ತೃತ್ವಕ್ಕೆ ಅವಿದ್ಯಾನಿಮಿತ್ತತ್ವವು ಅಪ್ರಾಮಾಣಿಕವಾದ್ದರಿಂದ ಅಂಗೀಕಾರಾರ್ಹವಲ್ಲ.

ಮತ್ತು "ಯದ್ಧಿ ಯುಕ್ತ್ಯಾ ವಿರುದ್ಧ್ಯೇತ ತದೀಶಕೃತಮೇವ ಹಿ" ಎಂಬುದಾಗಿ ಪ್ರಮಾಣ

ಹೇಳುವಂತೆ ಯಾವುದು ಯುಕ್ತಿವಿರುದ್ಧವಾಗಿರುವುದೋ ಅದು ಈಶಕೃತವಾದದ್ದು ಎಂದೇ ವ್ಯವಸ್ಥೆ ಮಾಡಬೇಕಾದ್ದರಿಂದ, ಜೀವನ ಕರ್ತೃತ್ವವು ಯುಕ್ತಿವಿರುದ್ಧವಾದ ಮಾತ್ರಕ್ಕೆ ಅವಿದ್ಯಾನಿಮಿತ್ತವಾಗಬೇಕಾಗಿಲ್ಲ. ಕಿಂತು ಈಶಕೃತ ಎಂದು ವ್ಯವಸ್ಥೆ ಮಾಡಬಹುದಾಗಿದೆ. ಒಂದುವೇಳೆ ಅವಿದ್ಯಾನಿಮಿತ್ತ ಎಂದೇ ಹೇಳುವುದಾದರೆ ಈ ಪ್ರಮಾಣದ ವಿರೋಧ ಬರಬೇಕಾಗುತ್ತದೆ.

ಆದ್ದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿದರೆ ಅನುಪಪತ್ತಿ ಬರುವುದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಕಿಂತು ವಿಷ್ಣುವಿಗೇ ಜಗತ್ಕಾರಣತ್ವವನ್ನು ಅಂಗೀಕರಿಸಬೇಕು.

ಹೀಗಾಗಿ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಇತರವ್ಯಪದೇಶಾಧಿಕರಣವು ಮುಗಿಯಿತು.

ಅಧಿಕರಣ – ೮

# ಶ್ರುತೇಸ್ತು ಶಬ್ದಮೂಲತ್ವಾಧಿಕರಣ

## ಸಂಗತಿ

**ಸೂ.ರ.:– अत्र विष्णोः सर्वकर्तृत्वे प्रबलयुक्तिविरोधः परिहियते ।**

**ಅನು.:–** ವಿಷ್ಣುವಿಗೆ ಸರ್ವಕರ್ತೃತ್ವವನ್ನು ಅಂಗೀಕರಿಸಿದರೆ ಬರುವ ಪ್ರಬಲಯುಕ್ತಿ-ವಿರೋಧವನ್ನು ಪರಿಹರಿಸುತ್ತಾರೆ ಈ ಎಂಟನೇ ಶ್ರುತೇಸ್ತು ಶಬ್ದಮೂಲತ್ವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नेश्वरस्य स्वातन्त्र्येण जगत्कर्तृत्वं युक्तम् । यदीश्वरः कर्ता स्यात्तर्हि कार्त्स्न्येनांशेन वा प्रवृत्तिमान्त्स्यात् । न च तदीश्वरे सम्भवतीति तर्कबाधितत्वात् ।**

**ಅನು.:–** ಈಶ್ವರನಿಗೆ ಸ್ವಾತಂತ್ರ್ಯೇಣ ಜಗತ್ಕಾರಣತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ – "ಯದಿ ಈಶ್ವರಃ ಕರ್ತಾ ಸ್ಯಾತ್ತರ್ಹಿ ಕಾರ್ತ್ಸ್ನ್ಯೇನಾಂಶೇನ ವಾ ಪ್ರವೃತ್ತಿಮಾನ್ ಸ್ಯಾತ್ । ನ ಚ ತತ್ ಈಶ್ವರೇ ಸಂಭವತಿ" ಒಂದುವೇಳೆ ಈಶ್ವರನು ಕರ್ತಾ ಆಗುವುದಾದರೆ, ಸಮಸ್ತಶಕ್ತಿಯಿಂದ ಅಥವಾ ಒಂದಂಶದಿಂದ ಪ್ರವೃತ್ತಿ ಉಳ್ಳವನಾಗಬೇಕು. ಆದರೆ ಸಮಸ್ತಶಕ್ತಿಯಿಂದಾಗಲೀ ಒಂದಂಶದಿಂದಾಗಲೀ ಪ್ರವೃತ್ತಿಯು ಈಶ್ವರನಿಗೆ ಸಂಭವಿಸು– ವುದಿಲ್ಲ ಎಂಬ ತರ್ಕದಿಂದ ಬಾಧಿತವಾಗುವುದರಿಂದ ಈಶ್ವರನಿಗೆ ಕರ್ತೃತ್ವವನ್ನು ಅಂಗೀಕರಿಸಲು ಬರುವುದಿಲ್ಲ.

**ಸೂ.ರ.:– न चायं दोषः । जीवकर्तृत्वाङ्गीकार एव नेश्वरकर्तृत्वाङ्गीकार इति वाच्यम् । दोषनिरासोपयुक्तायाः प्रकारान्तरेण प्रवृत्तेरीश्वरेऽभावात् । अन्यथा जीवेऽपि स दोषो न स्यात् । अतो युक्तिविरोधेन न विष्णोर्जगत्कारणत्वं युक्तमिति प्राप्ते पराकुर्वत्सूत्रमाह ॥**

**ಅನು.:–** "ಸಮಸ್ತಶಕ್ತಿಯಿಂದಾಗಲೀ ಒಂದಂಶದಿಂದಾಗಲೀ ಪ್ರವೃತ್ತಿ ಕೂಡುವುದಿಲ್ಲ" ಎಂಬ ದೋಷವು ಜೀವಕರ್ತೃತ್ವವನ್ನು ಅಂಗೀಕರಿಸಿದ ಪಕ್ಷದಲ್ಲಿಯೇ ಬರುತ್ತದೆಯೇ

ಹೊರತು ಈಶ್ವರಕರ್ತೃತ್ವವನ್ನು ಅಂಗೀಕರಿಸುವ ಪಕ್ಷದಲ್ಲಿ ಬರುವುದಿಲ್ಲ ಎಂದು ಶಂಕಿಸು-ವುದು ಸರಿಯಲ್ಲ. ಈಶ್ವರನಲ್ಲಿ ಈ ಎರಡು ವಿಧ ಪ್ರವೃತ್ತಿಗಳಲ್ಲಿಯೇ ಒಂದು ರೀತಿಯ ಪ್ರವೃತ್ತಿಯನ್ನು ಅಂಗೀಕರಿಸಬೇಕು, ಹೊರತು ದೋಷನಿರಾಕರಣೆಗೆ ಉಪಯುಕ್ತವಾದ ಮತ್ತೊಂದು ರೀತಿಯಿಂದ ಪ್ರವೃತ್ತಿಯು ಈಶ್ವರನಲ್ಲಿ ಇಲ್ಲ.

ಹಾಗೆ ಒಂದುವೇಳೆ ಈ ಎರಡೂ ರೀತಿಗಳನ್ನು ಬಿಟ್ಟು ಮತ್ತೊಂದು ರೀತಿಯ ಕರ್ತೃತ್ವ-ವನ್ನು ಈಶ್ವರನಲ್ಲಿ ಅಂಗೀಕರಿಸುವುದಾದರೆ, ಅಂತಹ ಮತ್ತೊಂದು ರೀತಿಯ ಕರ್ತೃತ್ವವನ್ನು ಜೀವನದಲ್ಲಿಯೂ ಹೇಳಲು ಬರುವುದರಿಂದ ಜೀವಕರ್ತೃತ್ವಪಕ್ಷದಲ್ಲಿಯೂ ಯಾವ ದೋಷ ಬರದೇ ಇರಬೇಕಾಗುತ್ತದೆ.

ಆದ್ದರಿಂದ ಹಿಂದೆ ಹೇಳಿದ ವಿರೋಧ ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ श्रुतेस्तु शब्दमूलत्वात् ॐ (२.१.२८)

**ಸೂತ್ರಾರ್ಥ :–** ಕೃತ್ಸ್ನಪ್ರಸಕ್ತಿಃ ಇತ್ಯಾದಿಯಾಗಿ ಸೂತ್ರದಲ್ಲಿ ಹೇಳಿದ, ಜೀವಕರ್ತೃತ್ವ-ಪಕ್ಷದಲ್ಲಿ ಹೇಳಿದ ದೋಷಗಳು ಈಶ್ವರಕರ್ತೃತ್ವಪಕ್ಷದಲ್ಲಿ ಬರುವುದಿಲ್ಲ. ಕುತಃ = ಯಾಕೆ? ಶ್ರುತೇಸ್ತು = ಯೋಽಸೌ ವಿರುದ್ಧಃ ಎಂದು ಶ್ರುತಿಯೇ ಇರುವುದರಿಂದ. ನನ್ವೇತಾವತಾ ಕಥಂ ಯುಕ್ತಿವಿರೋಧಶಾಂತಿಃ? ಇತ್ಯತ ಉಕ್ತಂ = ಹೌದು, ಇಷ್ಟುಮಾತ್ರಕ್ಕೆ ಯುಕ್ತಿವಿರೋಧ-ಪರಿಹಾರ ಹೇಗಾಗುತ್ತದೆ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಸಮಾಧಾನ ಹೇಳಲು ಹೇಳುತ್ತಾರೆ - ಶಬ್ದಮೂಲತ್ವಾತ್ = ಈಶ್ವರನು ಹಾಗೂ ಅವನ ಧರ್ಮಗಳು ಶಬ್ದಪ್ರಮಾಣದಿಂದ ಮಾತ್ರ ಗಮ್ಯವಾದ್ದರಿಂದ ಯುಕ್ತಿವಿಷಯವಾಗದ ಕಾರಣ ಅವನ ವಿಷಯದಲ್ಲಿ ಯುಕ್ತಿವಿರೋಧವು ಪ್ರವೃತ್ತವಾಗುವುದಿಲ್ಲ.

ಜೀವನ ವಿಷಯದಲ್ಲಿ ಹಾಗಲ್ಲ. ಜೀವನು ಶಬ್ದವ್ಯತಿರಿಕ್ತವಾದ ಪ್ರಮಾಣಗಳಿಂದಲೂ ಗಮ್ಯನಾಗುವುದರಿಂದ, ಯುಕ್ತಿವಿಷಯನಾಗುವ ಕಾರಣ ಜೀವಕರ್ತೃತ್ವಪಕ್ಷದಲ್ಲಿ ಯುಕ್ತಿವಿರೋಧವು ಪ್ರವೃತ್ತವಾಗುತ್ತದೆ.

### ಸಿದ್ಧಾಂತ

**ಸೂ.ರ.:–** एवं च नेश्वरस्य स्वातन्त्र्येण कर्तृत्वे युक्तिविरोधः । विरोधयुक्तेर्धर्मिग्राहकागमोपजीव्यत्वेन तद्बोधनयुक्तेरेवाप्रामाण्यात् ।

**किञ्चेश्वरस्याचिन्त्यशक्तियुक्तत्वात्तद्बलेनांशत्वेऽप्यंशकार्यकारितोपपन्ना । योऽसौ विरुद्ध इति श्रुतौ लोकविरुद्धधर्माणामीश्वरेऽविरुद्धतयाऽवस्थानत्वोक्तेः । युक्तिविरोधपरिहारोपयोगिनः शब्दैकसमधिगम्यत्वस्येश्वरे सत्त्वादविशेषासिद्धेः । शुष्कानुमयाऽऽगमोक्तप्रमेयस्य निषेधायोगात् । अतो विरोधाभावेन युक्तं लक्षणसूत्रमिति सिद्धम् ॥**

**ಅನು.:–** ಈಶ್ವರನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಿದರೆ ಯುಕ್ತಿವಿರೋಧವು ಬರುವುದಿಲ್ಲ. ಏಕೆಂದರೆ – ಈ ವಿರೋಧಯುಕ್ತಿಗೆ ಧರ್ಮಿಗ್ರಾಹಕವಾದ (ಈಶ್ವರನನ್ನು ಸಿದ್ಧಮಾಡಿಕೊಡುವ) ಆಗಮವು ಉಪಜೀವ್ಯವಾಗಿದೆಯಾದ್ದರಿಂದ, ಅಂತಹ ಉಪಜೀವ್ಯವಾದ ಆಗಮವು ಈಶ್ವರನಿಗೆ ಕರ್ತೃತ್ವವನ್ನು ತಿಳಿಸುತ್ತಿರುವ ಕಾರಣ ಪ್ರಕೃತದಲ್ಲಿ ಅಂತಹ ಉಪಜೀವ್ಯವಾಗಿರುವ ಆಗಮಕ್ಕೆ ವಿರುದ್ಧವಾಗಿ ಹೇಳಿದರೆ (ಈಶ್ವರನಿಗೆ ಕರ್ತೃತ್ವ ಇಲ್ಲ ಎಂದೇ ಯುಕ್ತಿಯು ಹೇಳಿದರೆ) ಉಪಜೀವ್ಯವಿರೋಧ ಬರುವುದರಿಂದ ಅಂತಹ ಯುಕ್ತಿಯೇ ಅಪ್ರಮಾಣವಾಗುತ್ತದೆ.

ಮತ್ತು ''ಈಶ್ವರನಿಗೆ ಸಮಸ್ತಶಕ್ತಿಯಿಂದಾಗಲೀ ಒಂದಂಶದಿಂದಾಗಲೀ ಪ್ರವೃತ್ತಿ ಕೂಡುವುದಿಲ್ಲ'' ಎಂಬ ದೋಷವೂ ನಮಗೆ ಬರುವುದಿಲ್ಲ. ಕಾರಣ – ಈಶ್ವರನಿಗೆ ಅಚಿಂತ್ಯಶಕ್ತಿ ಇರುವುದರಿಂದ ಆ ಅಚಿಂತ್ಯಶಕ್ತಿಬಲದಿಂದಾಗಿ ಅಂಶದಿಂದ ಪ್ರವೃತ್ತಿಯು (ಅಂಶದಿಂದ ಕಾರ್ಯ ಮಾಡುತ್ತಾನೆ ಎನ್ನುವುದು) ಪ್ರವೃತ್ತವಾಗುತ್ತದೆ.

''ಯೋಽಸೌ ವಿರುದ್ಧೋಽವಿರುದ್ಧೋ ಮನುರಮನುರವಾಗ್ವಾಗಿಂದ್ರೋಽನಿಂದ್ರಃ ಪ್ರವೃತ್ತಿರಪ್ರವೃತ್ತಿಃ ಸ ಪರಃ ಪರಮಾತ್ಮಾ'' ಎಂಬ ಪೈಂಗಿಶ್ರುತಿ ಮೊದಲಾದ ಶ್ರುತಿಗಳಲ್ಲಿ ಲೋಕದಲ್ಲಿ ವಿರುದ್ಧವಾದ ಧರ್ಮಗಳೂ ಈಶ್ವರನಲ್ಲಿ ಅವಿರುದ್ಧವಾಗಿ ಇವೆ ಎಂದು ಹೇಳಿದ್ದರಿಂದ, ಈಶ್ವರನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಯುಕ್ತಿವಿರೋಧ ಬರುವುದಿಲ್ಲ.

ಜೀವನಿಗೂ ಈ ರೀತಿಯಾಗಿ ಕರ್ತೃತ್ವವನ್ನು ಹೇಳಿ ಕೂಡಿಸಬಹುದಲ್ಲ ಎಂದರೆ, ಯುಕ್ತಿವಿರೋಧಪರಿಹಾರಕ್ಕೆ ಉಪಯೋಗಿಯಾದ ಶಬ್ದೈಕ ಸಮಧಿಗಮ್ಯತ್ವ ಎನ್ನುವುದು ಈಶ್ವರನಲ್ಲಿ ಇರುವುದರಿಂದ, ಜೀವನಿಗಿಂತಲೂ ಈಶ್ವರನಲ್ಲಿ ವಿಶೇಷ ಇರುವ ಕಾರಣ ಜೀವನಿಂದ ಸಾಮ್ಯಶಂಕೆಯು ಸರಿಯಲ್ಲ.

ಆಗಮದಿಂದ ಈಶ್ವರನಿಗೆ ಕರ್ತೃತ್ವವನ್ನು ನೀವು ಹೇಳುವುದಾದರೆ, ಅನುಮಾನದಿಂದ ನಾನು ಕರ್ತೃತ್ವವನ್ನು ನಿಷೇಧ ಮಾಡುತ್ತೇನೆ ಎಂದರೆ, ಅದು ಸರಿಯಲ್ಲ. ಆಗಮ-

ಪ್ರತಿಪಾದ್ಯವಾದ ಪ್ರಮೇಯವನ್ನು (ಕರ್ತೃತ್ವವನ್ನು) ಶುಷ್ಕ ಅನುಮಾನದಿಂದ ನಿರಾಕರಿಸಲು ಬರುವುದಿಲ್ಲ.

ಆದ್ದರಿಂದ ಈಶ್ವರನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸುವುದಾದರೆ ಯಾವ ಅನುಮಾನದ ವಿರೋಧವೂ ಬಾರದ ಕಾರಣ, ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ-ವನ್ನು ಲಕ್ಷಣವನ್ನಾಗಿ ಹೇಳಿದ್ದು ಸರಿಯಾಗಿದೆ ಎಂದು ಸಿದ್ಧವಾಯಿತು.

ಸೂತ್ರ – 29

**ಸೂ.ರ.:– जीवपक्ष एव युक्तिविरोधो नेश्वरपक्ष इत्येतमर्थं युक्त्यन्तरेण प्रतिपाद-यत्सूत्रमुपन्यस्यति ॥**

**ಅನು.:–** ಜೀವಪಕ್ಷದಲ್ಲಿಯೇ ಯುಕ್ತಿವಿರೋಧ ಬರುತ್ತದೆಯೇ ಹೊರತು ಈಶ್ವರಪಕ್ಷದಲ್ಲಿ ಯುಕ್ತಿವಿರೋಧ ಬರುವುದಿಲ್ಲ ಎಂಬುದನ್ನು ಮತ್ತೊಂದು ಯುಕ್ತಿ-ಯಿಂದಲೂ ತಿಳಿಸುವ ಸೂತ್ರವನ್ನು ಹೇಳುತ್ತಾರೆ–

**ॐ आत्मनि चैवं विचित्राश्च हि ॐ (२.१.२९)**

**ಸೂತ್ರಾರ್ಥ :–** (ಮೊದಲನೇ ಚಶಬ್ದವು ಅವಧಾರಣ ಅರ್ಥದಲ್ಲಿದೆ. ಎರಡನೇ ಚಶಬ್ದವು ಸಮುಚ್ಚಾಯಕವಾಗಿದೆ.) ಹಿ = ಯಾವ ಕಾರಣ ಆತ್ಮನಿ ಚ (ಏವ) = ಈಶ್ವರನಲ್ಲಿಯೇ ಏವಂ = ಸಕಲಯುಕ್ತಿವಿರೋಧನಿರಾಸಕವಾದ ವಿಚಿತ್ರಾಃ = ಅಚಿಂತ್ಯವಾದ 'ವಿಚಿತ್ರಶಕ್ತಿಃ' ಎಂಬ ಶ್ರುತಿಪ್ರಸಿದ್ಧವಾದ ಶಕ್ತಿಗಳು ಸಂತಿ = ಇವೇ ನ ಜೀವೇ = ಹೊರತು ಜೀವನಲ್ಲಿ ಇಲ್ಲವೋ ತಸ್ಮಾಚ್ಚ = ಆ ಕಾರಣದಿಂದಲೂ ಸಹ ಜೀವಪಕ್ಷೇ ಏವ ಯುಕ್ತಿ-ವಿರೋಧಃ ನೇಶ್ವರಪಕ್ಷೇ = ಜೀವಪಕ್ಷದಲ್ಲಿಯೇ ಯುಕ್ತಿವಿರೋಧ ಬರುತ್ತದೆಯೇ ಹೊರತು ಈಶ್ವರಪಕ್ಷದಲ್ಲಿ ಬರುವುದಿಲ್ಲ.

**ಸೂ.ರ.:– एवं च विचित्रशक्तीनामीश्वर एव सत्वादन्येषां तदभावात् । एको वशीति (श्वेताश्वतर) श्रुतेः । शक्तेर्विचित्रत्वं तु भिन्नावयव शून्यानां जीवानामीश्वरस्य चैकदेशेन प्रवृत्त्यादिरूपा-घटितविचित्रकार्यकारित्वमिति विवेकात् । अतो युक्तिविरोधाभावेन युक्तं लक्षणसूत्रमिति सिद्धम् ॥**

ಅನು.:–

**ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ ।**
**ಏಕೋ ವಶೀ ಸರ್ವಭೂತಾಂತರಾತ್ಮಾ ಸರ್ವಾನ್ ದೇವಾನೇಕ ಏವಾನುವಿಷ್ಟಃ ॥**

ಎಂಬುದಾಗಿ ಶ್ವೇತಾಶ್ವತರಶ್ರುತಿ ಇರುವುದರಿಂದ ವಿಚಿತ್ರವಾದ ಶಕ್ತಿಗಳು ಈಶ್ವರ-ನಲ್ಲಿಯೇ ಇವೆ ಹೊರತು ಜೀವರಿಗೆ ಇಲ್ಲ. ವಿಚಿತ್ರವಾದ ಶಕ್ತಿ ಎಂದರೆ :– ಭಿನ್ನಾವಯವ-ರಹಿತರಾದ ಜೀವರಿಗೆ ಹಾಗೂ ಈಶ್ವರನಿಗೆ ಏಕದೇಶದಿಂದ (ಒಂದಂಶದಿಂದ) ಪ್ರವೃತ್ಯಾದಿರೂಪವಾದ ಅಘಟಿತವಿಚಿತ್ರಕಾರ್ಯಕಾರಿಯಾಗುವ ಶಕ್ತಿ ಎಂದರ್ಥ. ಇಂತಹ ಅಘಟಿತಘಟನಾ ಮಾಡುವ ವಿಚಿತ್ರಶಕ್ತಿಗಳು ಈಶ್ವರನಲ್ಲಿ ಮಾತ್ರ ಇರುವುದರಿಂದ ಈಶ್ವರಪಕ್ಷದಲ್ಲಿ ಯಾವ ಯುಕ್ತಿವಿರೋಧಾದಿ ದೋಷಗಳೂ ಬರುವುದಿಲ್ಲ.

ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 30

## ಆಕ್ಷೇಪ

**ಸೂ.ರ.:– ननु विष्णोः शब्दमूलत्वेन विचित्रशक्तित्वेन च युक्ति-विरोधस्यादोपत्ववज्जीवेऽपि तथा भवेत् । चेतनत्वादिलिङ्गेन युक्ति-विरोधस्याविरोधतासाधनसम्भवादिति प्राप्ते समादधत्सूत्रमाह ॥**

**ಅನು.:–** ವಿಷ್ಣುವು ಶಬ್ದಮೂಲನಾದ್ದರಿಂದ (ಆಗಮೈಕಗಮ್ಯನಾದ್ದರಿಂದ) ಮತ್ತು ವಿಚಿತ್ರಶಕ್ತಿ ಉಳ್ಳವನಾದ್ದರಿಂದ ಅವನಲ್ಲಿ ಯುಕ್ತಿವಿರೋಧವು ಹೇಗೆ ದೋಷವಾಗುವು-ದಿಲ್ಲವೋ ಅದರಂತೆ ಜೀವನಲ್ಲಿಯೂ ಸಹ ಯುಕ್ತಿವಿರೋಧವು ದೋಷವಾಗದೇ ಇರಲಿ. ಕಾರಣ – ಜೀವಃ ಯುಕ್ತಿವಿರೋಧಾಖ್ಯದೋಷವಾನ್ ನ ಭವತಿ ಚೇತನತ್ವಾತ್ ಈಶ್ವರವತ್ (ಜೀವನು, ಯುಕ್ತಿವಿರೋಧರೂಪವಾದ ದೋಷ ಉಳ್ಳವನಾಗುವುದಿಲ್ಲ, ಚೇತನನಾದ್ದರಿಂದ, ಈಶ್ವರನಂತೆ) ಎಂಬುದಾಗಿ ಚೇತನತ್ವಾದಿಲಿಂಗಗಳಿಂದ ಯುಕ್ತಿ-ವಿರೋಧಕ್ಕೆ ಅವಿರೋಧತ್ವವನ್ನು ಸಾಧಿಸಲು ಬರುತ್ತದೆಯಾದ್ದರಿಂದ, ಜೀವನ ಪಕ್ಷ-ದಲ್ಲಿಯೂ ಯುಕ್ತಿವಿರೋಧವು ದೋಷವಾಗದೇ ಇರಲಿ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

**ॐ स्वपक्षदोषाच्च ॐ (२.१.३०)**

**ಸೂತ್ರಾರ್ಥ :–** ಸ್ವಪಕ್ಷದೋಷಾಚ್ಚ = ಯೇ ದೋಷಾಃ ಎಂಬ ಶ್ರುತಿಯಲ್ಲಿ ಜೀವಪಕ್ಷದಲ್ಲಿ ಯುಕ್ತಿವಿರೋಧವು ದೋಷವೇ ಆಗುತ್ತದೆ ಎಂದು ಹೇಳಿದ್ದರಿಂದ, ಜೀವಪಕ್ಷದಲ್ಲಿ ಯುಕ್ತಿವಿರೋಧವು ಅದೋಷ ಆಗುವುದಿಲ್ಲ. ಕಿಂತು ಈಶ್ವರಪಕ್ಷದಲ್ಲಿಯೇ ಯುಕ್ತಿವಿರೋಧವು ಅದೋಷವಾಗುತ್ತದೆ.

**ಸೂ.ರ.:– एवं ज जीवस्यापि स्वातन्त्र्येण कर्तृत्वं वक्तुमशक्यम् । तस्य दोषित्वेन कल्पकाभावेन तद्दोषस्यादोषतया नेतुमशक्यत्वात् । अथ यः सः दोष इति (काषायण) श्रुतेः । कृत्स्नप्रसक्त्यादियुक्तिविरोधस्य जीवपक्षे दोषस्यैवोक्तत्वात् । जीवेशयोः सदोषत्वनिर्दोषत्ववचनविरोधाख्य-दोषसद्भावात् । ततश्च विरोधाभावेन युक्तं लक्षणसूत्रमिति सिद्धम् ॥**

**ಅನು.:– ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ ।**
**ನ ದೋಷಃ ಪರಮೇ ಕಶ್ಚಿದ್ಗುಣಾ ಏವ ನಿರಂತರಾಃ ॥**

ಎಂಬ ವಚನ ಇರುವುದರಿಂದ ಜೀವಪಕ್ಷದಲ್ಲಿ ಯುಕ್ತಿವಿರೋಧವು ದೋಷವಾಗು-ತ್ತದೆಯೇ ಹೊರತು ಅದೋಷವಾಗುವುದಿಲ್ಲ. ಈಶ್ವರಪಕ್ಷದಲ್ಲಿ ಅದೋಷವಾಗುತ್ತದೆ.

''ಅಥ ಯಸ್ಸ ದೋಷಃ ಸಾಂಜನಃ ಸಜನಿಃ ಸ ಜೀವೋऽಥ ಯಃ ಸ ನಿರ್ದೋಷೋ ನಿಷ್ಕಲಃ ಸಗುಣಃ ಪರಃ ಪರಮಾತ್ಮಾ''

ಎಂಬುದಾಗಿ ಕಾಷಾಯಣಶ್ರುತಿ ಇರುವುದರಿಂದ ಜೀವನು ದೋಷಿಯಾಗಿರು-ವುದರಿಂದ ಅದೋಷತ್ವಕ್ಕೆ ಕಲ್ಪಕವಾದದ್ದು ಇಲ್ಲವಾದ್ದರಿಂದ ಯುಕ್ತಿವಿರೋಧವನ್ನು ಅದೋಷವನ್ನಾಗಿ ಪರಿಗಣಿಸಲು ಸಾಧ್ಯವಿಲ್ಲ. ಕಿಂತು ಕೃತ್ಸ್ನಪ್ರಸಕ್ತ್ಯಾದಿ ಯುಕ್ತಿವಿರೋಧವನ್ನು ಜೀವಪಕ್ಷದಲ್ಲಿಯೇ ದೋಷವನ್ನಾಗಿ ಹೇಳಿದ್ದಾರೆ. ಹೀಗಾಗಿ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಅಂಗೀಕರಿಸಲು ಬರುವುದಿಲ್ಲ. ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ಸಮಂಜಸವೇ ಎಂದು ಸಿದ್ಧವಾಗುತ್ತದೆ.

ಸೂತ್ರ – 31

### ಆಕ್ಷೇಪ

**ಸೂ.ರ.:– ननु विचित्रशक्तिबलान्नेश्वरे विरोध इति युक्तम् । सा शक्तिर्यद्विषयिणी न भवति यदा च नश्यति तदा तत्र दोषावश्यम्भाव-नियमान्न तया तत्परिहारो युक्त इत्याशङ्कां पराकुर्वत्सूत्रमाह ॥**

**ಅನು.:–** ವಿಚಿತ್ರಶಕ್ತಿಬಲದಿಂದಾಗಿ ಈಶ್ವರಪಕ್ಷದಲ್ಲಿ ವಿರೋಧ ಇಲ್ಲ ಎಂದು ಹೇಳು-ವುದು ಸರಿಯಾಗುವುದಿಲ್ಲ. ಏಕೆಂದರೆ - ಆ ವಿಚಿತ್ರಶಕ್ತಿಯು ಯದ್ವಿಷಯಕವಾಗುವು-ದಿಲ್ಲವೋ ಮತ್ತು ಯಾವಾಗ ಈಶ್ವರನಲ್ಲಿ ಇರುವುದಿಲ್ಲವೋ ಆಗ ಈಶ್ವರನಲ್ಲಿ ಯುಕ್ತಿವಿರೋಧವು ದೋಷವಾಗಬಹುದಾಗಿದೆ. ಹೀಗಾಗಿ ವಿಚಿತ್ರಶಕ್ತಿಬಲದಿಂದಾಗಿ ಈಶ್ವರನಲ್ಲಿ ವಿರೋಧವನ್ನು ಪರಿಹರಿಸಿಕೊಳ್ಳುವುದು ಸರಿಯಾಗುವುದಿಲ್ಲ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ सर्वोपेता च तद्दर्शनात् ॐ (२.१.३१)

**ಸೂತ್ರಾರ್ಥ :–** ಯತಃ = ಯಾವ ಕಾರಣ ಪರಮಾತ್ಮಾಖ್ಯದೇವತಾ = ಪರಮಾತ್ಮ-ನೆಂಬ ದೇವತೆಯು ನ ಕೇವಲಂ ವಿಚಿತ್ರಶಕ್ತಿಮತೀ = ಕೇವಲ ಸಾಮಾನ್ಯವಾದ ವಿಚಿತ್ರಶಕ್ತಿ ಉಳ್ಳದ್ದಾಗಿಲ್ಲ ಕಿಂತು ಸರ್ವೋಪೇತಾ ಚ = ಸರ್ವವಿಷಯಕವಾದ ಸಾರ್ವಕಾಲಿಕವಾದ ವಿಚಿತ್ರಶಕ್ತಿ ಉಳ್ಳದ್ದಾಗಿದೆ. ಕುತಃ = ಅದೇಕೆ? ಎಂದರೆ, ತದ್ದರ್ಶನಾತ್ = "ಸರ್ವೈರ್ಯುಕ್ತಾ" ಎಂಬುದಾಗಿ ಚತುರ್ವೇದಶಿಖಾಶ್ರುತಿಯಿಂದ ಹಾಗೆ ಹೇಳಿದ್ದಾರೆ. ಅತೋ ನೇಶ್ವರೇ ಯುಕ್ತಿ-ವಿರೋಧಃ ಶಂಕನೀಯಃ = ಆದ್ದರಿಂದ ಈಶ್ವರನಲ್ಲಿ ಯುಕ್ತಿವಿರೋಧವನ್ನು ಶಂಕಿಸುವುದು ಸರಿಯಲ್ಲ.

### ಸಮಾಧಾನ

**ಸೂ.ರ.:–** एवं चेशस्य सदा सर्वविषये विचित्रशक्तित्वात् । सर्वैर्युक्ता शक्तिभिरिति श्रुतौ परमात्मशक्तिः सर्वदा सर्वविषयिणी सर्वकाला चेति तस्य सर्वशक्तिमत्त्वेनोक्तत्वात्तथा शक्त्या युक्तिविरोध-परिहारौचित्यात् । अतो युक्तिविरोधाभावेन युक्तं लक्षणसूत्रमिति सिद्धम् ॥

ಅನು.:– ಈಶ್ವರನು ಯಾವಾಗಲೂ (ಸದಾಕಾಲದಲ್ಲಿಯೂ) ಸರ್ವವಿಷಯಕವಾದ ವಿಚಿತ್ರಶಕ್ತಿಯುಳ್ಳವನೇ ಆಗಿದ್ದಾನೆ.

ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್ ।
ನಿತ್ಯಾನಂದಾ ನಿತ್ಯರೂಪಾಽಜರಾ ಚ ಯಾ ಶಾಶ್ವತಾಽತ್ಮೇತಿ ಚ ಯಾಂ ವದಂತಿ ॥

ಎಂಬುದಾಗಿ ಚತುರ್ವೇದಶಿಖಾಶ್ರುತಿಯಲ್ಲಿ ಪರಮಾತ್ಮಶಕ್ತಿಯು ಸದಾಕಾಲದಲ್ಲಿ ಸರ್ವವಿಷಯಕವಾದದ್ದು ಎಂದು ಪರಮಾತ್ಮನನ್ನು ಸರ್ವಶಕ್ತಿವಂತನನ್ನಾಗಿ ಹೇಳಿದ್ದರಿಂದ, ಆ ವಿಧವಾದ ಸಾರ್ವಕಾಲಿಕವಾದ ಸರ್ವವಿಷಯಕವಾದ ವಿಚಿತ್ರಶಕ್ತಿಯುಳ್ಳ ಪರಮಾತ್ಮ-ವಿಷಯದಲ್ಲಿ ಯುಕ್ತಿವಿರೋಧಪರಿಹಾರ ಮಾಡಿದ್ದು ಅತ್ಯಂತ ಉಚಿತವೇ ಆಗಿದೆ. ಆದ್ದರಿಂದ ಈಶ್ವರಪಕ್ಷದಲ್ಲಿ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 32

### ಆಕ್ಷೇಪ

**ಸೂ.ರ.:– नन्वथापि विकरणत्वान्नेश्वरस्य जगत्कर्तृत्वं युक्तम् । अपि च सर्वोपेतेति सूत्र एव विचित्राशेषशक्तिबलेन निखिलविरोधानां परिहृतत्वाच्छङ्कानवकाशात्प्रकृतसूत्रवैयर्थ्यमित्याक्षिप्य समादधत्सूत्र-मुपन्यस्यति ॥**

**ಅನು.:–** ಆದರೂ ಸಹ ಪರಮಾತ್ಮನು ವಿಕರಣನಾದ್ದರಿಂದ (ಇಂದ್ರಿಯರಹಿತ-ನಾದ್ದರಿಂದ) ಅವನಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ. ಮತ್ತು ಸರ್ವೋಪೇತಾ ಚ ತದ್ದರ್ಶನಾತ್ ಎಂಬ ಹಿಂದಿನ ಸೂತ್ರದಲ್ಲಿಯೇ ವಿಚಿತ್ರಸಕಲಶಕ್ತಿಬಲದಿಂದಾಗಿ ಎಲ್ಲವಿಧ ವಿರೋಧಗಳನ್ನೂ ಪರಿಹಾರ ಮಾಡಿದ್ದರಿಂದ ಹೆಚ್ಚಿನ ಶಂಕೆಗೆ ಅವಕಾಶವಿಲ್ಲದ ಕಾರಣ ಪ್ರಕೃತ ಮುಂದಿನ ಸೂತ್ರವು ವ್ಯರ್ಥವೇ ಎಂದು ಆಕ್ಷೇಪ ಬಂದರೆ, ಆದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ विकरणत्वान्नेति चेत्तदुक्तम् ॐ (२.१.३२)**

(ನ ಎನ್ನುವುದನ್ನು ಮತ್ತೊಮ್ಮೆ ಆವರ್ತನ ಮಾಡಿಕೊಳ್ಳಬೇಕು.) ವಿಕರಣತ್ವಾತ್ = ಅಪಾಣಿಪಾದಂ ಎಂಬ ಶ್ರುತಿಯಿಂದ ''ಈಶ್ವರನು ಹಸ್ತ ಮೊದಲಾದ ಇಂದ್ರಿಯಗಳಿಂದ ಶೂನ್ಯನಾಗಿದ್ದಾನೆ' ಎಂದು ತಿಳಿದುಬರುವುದರಿಂದ ನ ಇತಿ ಚೇತ್ = ಈಶ್ವರನಿಗೆ ಕರ್ತೃತ್ವವು ಯುಕ್ತವಲ್ಲ ಎಂದು ಶಂಕೆ ಬಂದರೆ, ನ = ಅದು ಸರಿಯಲ್ಲ. ಕುತಃ = ಯಾಕೆ? ಯಸ್ಮಾತ್ =ಯಾವ ಕಾರಣ ತದುಕ್ತಂ = ತಸ್ಮಿನ್ನ ತಸ್ಯ ಇತ್ಯಾದಿ ಆಗಮದಿಂದ ಆ ಕರಣರಾಹಿತ್ಯವು ಪ್ರಾಕೃತೇಂದ್ರಿಯವಿಷಯಕವಾಗಿದೆ ಎಂದು ಹೇಳಲಾಗಿದೆಯೋ (ವಿಕರಣನಾಗಿದ್ದಾನೆ ಎಂದರೆ ಪ್ರಾಕೃತ ಇಂದ್ರಿಯರಹಿತನಾಗಿದ್ದಾನೆ ಎಂದರ್ಥ ಎಂದು ಹೇಳಿದ್ದಾರೆಯೋ) ತಸ್ಮಾತ್ = ಆ ಕಾರಣದಿಂದ.

## ಸಮಾಧಾನ

**ಸೂ.ರ.:– एवं चापाणिपाद इति श्रुतौ पाण्यादिरहितस्यापि हरेर्ग्राहकादिकमुक्त्वा न तस्य कार्यमित्यादिना (श्वे.६-८) पाण्यादिरहितत्वस्य प्राकृतविषयत्वेन सर्वोत्तमत्वेन परमशक्तित्वेन चोपपादितत्वात् । परोक्तहेतोरप्रयोजकत्वादसिद्धेश्च ।**

ಅನು.:–

**ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ ।**
**ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಮ್ ॥**

ಎಂಬ ಶ್ರುತಿಯಲ್ಲಿ ಹಸ್ತಾದಿ ಇಂದ್ರಿಯರಹಿತನಾಗಿದ್ದರೂ ಸಹ ಶ್ರೀಹರಿಗೆ ಗ್ರಹಣಾದಿಗಳನ್ನು ಹೇಳಿ

**ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।**
**ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥**

ಎಂಬ ಶ್ರುತಿಯಲ್ಲಿ ಪಾಣ್ಯಾದಿರಹಿತತ್ವವನ್ನು ಪ್ರಾಕೃತವಿಷಯವನ್ನಾಗಿ ಉಪಪಾದನೆ ಮಾಡಿದ್ದಾರೆ. ಅರ್ಥಾತ್ ಪರಮಾತ್ಮನು ಸರ್ವೋತ್ತಮನಾದ್ದರಿಂದ, ಪರಮಶಕ್ತಿ ಉಳ್ಳವನಾದ್ದರಿಂದ ಪ್ರಾಕೃತವಾದ ಪಾಣ್ಯಾದಿ ಇಂದ್ರಿಯಗಳಿಂದ ರಹಿತನಾಗಿದ್ದಾನೆ ಎಂಬುದಾಗಿ ಉಪಪಾದನೆ ಮಾಡಿದ್ದರಿಂದ "ಪರಮಾತ್ಮಾ ನ ಜಗತ್ಕರ್ತಾ ಹಸ್ತಾದೀಂದ್ರಿಯ ಶೂನ್ಯತ್ವಾತ್" ಎಂಬ ಪರಕೀಯ ಅನುಮಾನದಲ್ಲಿ "ಅಸ್ತು ಹಸ್ತಾದೀಂದ್ರಿಯಶೂನ್ಯತ್ವಂ ಮಾಸ್ತು ಜಗತ್ಕರ್ತೃತ್ವಾಭಾವಃ" ಎಂಬುದಾಗಿ ಅಪ್ರಯೋಜಕತಾಶಂಕೆ ಬರುತ್ತದೆ ಮತ್ತು ಅಪ್ರಾಕೃತವಾದ ಹಸ್ತಾದಿ ಇಂದ್ರಿಯಗಳುಳ್ಳವನಾದ್ದರಿಂದ ಅಸಿದ್ಧಿ ದೋಷವೂ ಬರುತ್ತದೆ. ಆದ್ದರಿಂದ ಪರಮಾತ್ಮನಿಗೆ ಜಗತ್ಕಾರಣತ್ವವು ಉಪಪನ್ನವೇ ಆಗುತ್ತದೆ.

**ಸೂ.ರ.:– अपि च साधारण्येन सर्वविरोधानां परिहारे कृतेऽपि विशेषतोऽस्यैव चोद्यस्य परिहारानुकूलयुक्तिबोधनेच्छया पुनः शङ्काया दर्शितत्वेन सूत्रवैयर्थ्याभावात् । अतो विष्णोर्जगत्कर्तृत्वे युक्तिविरोधाभावेन युक्तं लक्षणसूत्रमिति सिद्धम् ॥**

**ಅನು.**:– ಮತ್ತು ಸರ್ವೋಪೇತಾ ಚ ಎಂಬ ಹಿಂದಿನ ಸೂತ್ರದಲ್ಲಿಯೇ ಸಾಧಾರಣ-ವಾಗಿ ಎಲ್ಲ ವಿರೋಧವೂ ಪರಿಹೃತವಾದರೂ ಸಹ ವಿಶೇಷವಾಗಿ ಈ ಶಂಕೆಗೆ (ಇಂದ್ರಿಯ-ರಹಿತನಾದ್ದರಿಂದ ಜಗತ್ಕರ್ತೃವಾಗಲು ಸಾಧ್ಯವಿಲ್ಲ ಎಂಬ ಶಂಕೆಗೆ) ಪರಿಹಾರಾನುಕೂಲ-ಯುಕ್ತಿಯನ್ನು ಬೋಧಿಸುವ ಇಚ್ಛೆಯಿಂದ ಪುನಃ ಶಂಕೆಯು ಪ್ರಾಪ್ತವಾದದ್ದರಿಂದ ಮುಂದಿನ ಈ ಸೂತ್ರ ಹೊರಟಿದ್ದು ಸಾರ್ಥಕವೇ ಆಗಿದೆ.

ಆದ್ದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಯಾವ ವಿರೋಧವೂ ಬರುವುದಿಲ್ಲವಾದ್ದರಿಂದ ಜನ್ಮಾದ್ಯಸ್ಯ ಯತಃ ಎಂಬ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಶ್ರುತೇಸ್ತು ಶಬ್ದಮೂಲತ್ವಾಧಿಕರಣವು ಮುಗಿಯಿತು.

*ಅಧಿಕರಣ – 9*

# ನ ಪ್ರಯೋಜನಾಧಿಕರಣ

## ಸಂಗತಿ

**ಸೂ.ರ.**:– अत्रेश्वरस्य जगत्कर्तृत्वे निष्फलत्त्वादियुक्तिविरोधः परिह्रियते ।

**ಅನು.**:– ಈಶ್ವರನಿಗೆ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ಬರುವ ನಿಷ್ಫಲತ್ವಾದಿ-ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ ಒಂಭತ್ತನೇ ಈ ನಪ್ರಯೋಜನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.**:– ननु न विष्णोः सर्वसर्जकत्वादि युक्तम् । अत्र किं विष्णुः प्रयोजनोद्देशेन सृष्ट्यादिकं करोतीत्युच्यते तदनुद्देशेनेति वा । आद्येऽपूर्णत्वात् । द्वितीये प्रवृत्तेरेवायोगेन सर्वकर्तृत्वस्य सुतरामयोगात् । विधान्तरस्य चाभावेऽनुपपन्नमेव सर्वकर्तृत्वमिति प्राप्ते सूत्रमाह ॥

**ಅನು.:–** ವಿಷ್ಣುವಿಗೆ ಸರ್ವಜಗತ್ಸರ್ಜಕತ್ವಾದಿಗಳು (ಜಗತ್ಕರ್ತೃತ್ವಾದಿಗಳು) ಯುಕ್ತ-ವಾಗುವುದಿಲ್ಲ. ಏಕೆಂದರೆ – ವಿಷ್ಣುವು ಯಾವುದಾದರೊಂದು ಪ್ರಯೋಜನೋದ್ದೇಶದಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂದು ಹೇಳುತ್ತೀರೋ? ಅಥವಾ ಯಾವ ಪ್ರಯೋಜನದ ಉದ್ದೇಶವೂ ಇಲ್ಲದೇ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂದು ಹೇಳುತ್ತೀರೋ?

ಯಾವುದಾದರೊಂದು ಪ್ರಯೋಜನೋದ್ದೇಶದಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎನ್ನುವುದಾದರೆ ಭಗವಂತನು ಅಪೂರ್ಣನಾಗುವುದರಿಂದ ಮೊದಲನೇ ಪಕ್ಷವು ಸರಿಯಲ್ಲ. ಇನ್ನು ಯಾವುದೇ ಪ್ರಯೋಜನದ ಉದ್ದೇಶವೇ ಇಲ್ಲವಾದರೆ ಪ್ರವೃತ್ತಿಯೇ ಕೂಡದ ಕಾರಣ, ಸರ್ವಕರ್ತೃತ್ವವು ಸುತರಾಂ ಕೂಡುವುದಿಲ್ಲ.

ಈ ಎರಡು ಪಕ್ಷಗಳನ್ನು ಬಿಟ್ಟು ಮೂರನೇ ರೀತಿಯಿಂದ ಜಗತ್ಕರ್ತೃತ್ವಾದಿಗಳನ್ನು ಹೇಳಲು ಬಾರದ ಕಾರಣ ವಿಷ್ಣುವಿಗೆ ಜಗತ್ಕರ್ತೃತ್ವಾದಿಗಳನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ न प्रयोजनवत्त्वात् ॐ (२.१.३३)

**ಸೂತ್ರಾರ್ಥ :–** ಈಶ್ವರಸ್ಯ ಸೃಷ್ಟ್ಯಾದೌ ಪ್ರವೃತ್ತಿಃ = ಈಶ್ವರನಿಗೆ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತಿಯು ನ ಸ್ವಪ್ರಯೋಜನೋದ್ದೇಶೇನ = ಸ್ವಪ್ರಯೋಜನೋದ್ದೇಶದಿಂದ ಅಲ್ಲ. ಕುತಃ = ಯಾಕೆ? ಪ್ರಯೋಜನವತ್ತ್ವಾತ್ = ಈಶ್ವರನು ಪೂರ್ಣಾನಂದನಾದ್ದರಿಂದ ಹೊಂದಬೇಕಾದದ್ದೆಲ್ಲವನ್ನೂ ಅವನು ಹೊಂದಿದ್ದರಿಂದ.

### ಸಿದ್ಧಾಂತ

**ಸೂ.ರ.:–** एवं च युक्तमेव विष्णोः सर्वकर्तृत्वम् । तस्य पूर्णानन्दत्वेन प्राप्तप्राप्तव्यतया फलोद्देशेन प्रवृत्त्यनङ्गीकारात् । अथैष एव परमेति (बृ.६-३-३३) श्रुतेः । तथा चाप्तकामत्वेन दयासाध्यफलाभावेन परप्रयोजनार्थमपि तस्य सृष्ट्यादिप्रवृत्त्ययोगात् । अतो विरोधाभावेन युक्तं लक्षणसूत्रमिति सिद्धम् ।

**ಅನು.:–** ವಿಷ್ಣುವಿಗೆ ಸರ್ವಕರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ – "ಅಥೈಷ ಏವ ಪರಮ ಆನಂದಃ" (ಬೃ.ಉ. 6-3-33) ಎಂದು ಶ್ರುತಿ ಇರುವುದರಿಂದ

ಈಶ್ವರನು ಪೂರ್ಣಾನಂದನಾದ್ದರಿಂದ ಹೊಂದಬೇಕಾದದ್ದೆಲ್ಲವನ್ನೂ ಹೊಂದಿದ್ದಾನಾದ್ದರಿಂದ ಅವನಿಗೆ ಫಲೋದ್ದೇಶದಿಂದ ಪ್ರವೃತ್ತಿಯನ್ನು ಅಂಗೀಕರಿಸಿಲ್ಲ. ಆದ್ದರಿಂದ ಅವನು ಆಪ್ತಕಾಮನಾದ್ದರಿಂದ ದಯಾಸಾಧ್ಯವಾದ ಫಲವು ಇಲ್ಲದ ಕಾರಣ ಪರರ ಪ್ರಯೋಜನ-ಕ್ಕಾಗಿಯೂ ಅವನಿಗೆ ಸೃಷ್ಟ್ಯಾದಿಪ್ರವೃತ್ತಿಯು ಕೂಡುವುದಿಲ್ಲ. ಹೀಗಾಗಿ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಇಲ್ಲದ ಕಾರಣ ಲಕ್ಷಣಸೂತ್ರದಲ್ಲಿ ಜಗತ್ಕರ್ತೃತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 34

## ಆಕ್ಷೇಪ

**ಸೂ.ರ.:– ननु नेश्वरः फलानुद्देशेन प्रवृत्तिमान् चेतनत्वात् यज्ञदत्त-वदित्युपपत्तिविरोधात्कथमीश्वरस्य फलानुद्देशेन प्रवृत्तिरित्याशङ्कां पराकुर्वत्सूत्रमुपन्यस्यति ॥**

**ಸೂತ್ರಾರ್ಥ** :– ಈಶ್ವರಃ ನ ಫಲಾನುದ್ದೇಶೇನ ಪ್ರವೃತ್ತಿಮಾನ್ ಚೇತನತ್ವಾತ್ ಯಜ್ಞದತ್ತವತ್ (ಈಶ್ವರನು, ಫಲೋದ್ದೇಶವಿಲ್ಲದೇ ಪ್ರವೃತ್ತಿ ಉಳ್ಳವನಲ್ಲ, ಚೇತನನಾದ್ದರಿಂದ, ಯಜ್ಞದತ್ತನಂತೆ) ಎಂಬುದಾಗಿ ಅನುಮಾನವಿರೋಧ ಬರುವುದರಿಂದ ಈಶ್ವರನಿಗೆ ಫಲೋದ್ದೇಶವಿಲ್ಲದೇ ಪ್ರವೃತ್ತಿಯನ್ನು ಹೇಗೆ ಅಂಗೀಕರಿಸಲು ಬರುತ್ತದೆ? ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ लोकवत्तु लीलाकैवल्यम् ॐ (२.१.३४)**

**ಸೂತ್ರಾರ್ಥ** :– (ತುಶಬ್ದಕ್ಕೆ ಏವ ಎಂದು ಅವಧಾರಣವು ಅರ್ಥ.) ಲೋಕವತ್ = ಲೋಕದಲ್ಲಿ ಉನ್ಮತ್ತಾದಿಗಳ ಪ್ರವೃತ್ತಿಯಂತೆಯೇ ಈಶ್ವರನ ಪ್ರವೃತ್ತಿಯು ಲೀಲಾಕೈವಲ್ಯಂ ತು (ಏವ) = ಕೇವಲ ಲೀಲಾರೂಪವೇ ಆಗಿದೆ ಹೊರತು ನ ಸ್ವಪ್ರಯೋಜನೋದ್ದೇಶ್ಯತ್ವಂ = ಸ್ವಪ್ರಯೋಜನೋದ್ದೇಶದಿಂದ ಅಲ್ಲ.

## ಸಮಾಧಾನ

**ಸೂ.ರ.:– नन्वेवं फलानुद्देशेन प्रवृत्तेरनुपपत्तिरिति चेन्न । लोकवल्लीलयैव प्रवृत्त्युपपत्तेः । न हि लीला प्रयोजनान्तराय भवति । मत्तस्य नृत्तगानादिलीलायाः प्रयोजनाभावेऽपि दर्शनात् ।**

**ಅನು.:–** ಯಾವ ಪ್ರಯೋಜನೋದ್ದೇಶ ಇಲ್ಲದೇ ಪ್ರವೃತ್ತಿಯು ಕೂಡುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಲೋಕದಲ್ಲಿ ಉನ್ಮತ್ತಾದಿಗಳ ಪ್ರವೃತ್ತಿಯು ಹೇಗೆ ಕೇವಲ ಲೀಲಾರೂಪವಾಗಿರುವುದೋ ಅದರಂತೆ ಈಶ್ವರನ ಪ್ರವೃತ್ತಿಯೂ ಸಹ ಕೇವಲ ಲೀಲಾರೂಪವಾಗಿರಲು ಕೂಡುತ್ತದೆ.

ಆ ಲೀಲೆಯು ಮತ್ತೊಂದು ಪ್ರಯೋಜನಕ್ಕಾಗಿ ಆಗಲು ಸಾಧ್ಯವಿಲ್ಲ. ಕಾರಣ - ಪಾನಮತ್ತನಾದವನಿಗೆ ತಾನು ನೃತ್ಯ-ಗಾನಾದಿ ಲೀಲೆಗಳನ್ನು ಮಾಡುವುದರಿಂದ ಯಾವ ಪ್ರಯೋಜನ ಇಲ್ಲದಿದ್ದರೂ ಸಹ ಅಂತಹ ನೃತ್ಯ-ಗಾನಾದಿ ಲೀಲೆಗಳನ್ನು ಮಾಡುವುದು ಕಂಡಿದೆ. ಅದರಂತೆಯೇ ಈಶ್ವರನ ಲೀಲೆಯೂ ಪ್ರಯೋಜನರಹಿತವಾಗಲು ಸಾಧ್ಯವಾದ್ದರಿಂದ ಪ್ರಯೋಜನೋದ್ದೇಶವಿಲ್ಲದೇ ಪ್ರವೃತ್ತಿಯು ಉಪಪನ್ನವಾಗುತ್ತದೆ.

**ಸೂ.ರ.:– पूर्वपक्ष्युक्तानुमानस्योन्मत्तादौ व्यभिचारात् । व्याख्यानादिकाले हस्तचालनादाविव प्रयोजनवत्त्वराहित्यात् । ईश्वरप्रवृत्ते-र्लोकानुग्रहार्थत्वाङ्गीकारात् । अतो विरोधाभावाद्युक्तं लक्षणसूत्रमिति सिद्धम् ॥**

**ಅನು.:–** ಇದರಿಂದಾಗಿ, ಈಶ್ವರಃ ನ ಫಲೋದ್ದೇಶೇನ ಪ್ರವೃತ್ತಿಯಾನ್, ಚೇತನತ್ವಾತ್ ಎಂಬ ಪೂರ್ವಪಕ್ಷಿಯು ಮಾಡಿದ ಅನುಮಾನಕ್ಕೆ ಉನ್ಮತ್ತಾದಿಗಳಲ್ಲಿ ವ್ಯಭಿಚಾರ ಹೇಳಿದಂತಾಯಿತು. ವ್ಯಾಖ್ಯಾನಾದಿಗಳನ್ನು ಮಾಡುವಾಗ (ಮಾತನಾಡುವಾಗ ಅಥವಾ ವಿಷಯನಿರೂಪಣೆ ಮಾಡುವಾಗ) ಹಸ್ತಚಾಲನಾದಿಗಳನ್ನು ಮಾಡುತ್ತೇವೆ. ಅಲ್ಲಿ ಆದರಿಂದ ಯಾವ ಪ್ರಯೋಜನವೂ ಇರುವುದಿಲ್ಲ. ಹೇಗೋ ಹಾಗೆಯೇ ಈಶ್ವರನು ಮಾಡುವ ಸೃಷ್ಟ್ಯಾದಿ ಪ್ರವೃತ್ತಿಗಳಲ್ಲಿ ಯಾವ ಪ್ರಯೋಜನವೂ ಇಲ್ಲ. ಅವನ ಆ ಪ್ರವೃತ್ತಿಗಳು ಲೋಕಾನುಗ್ರಹಕ್ಕಾಗಿ ಎಂದು ಅಂಗೀಕರಿಸಲಾಗಿದೆ.

ಆದ್ದರಿಂದ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ನ ಪ್ರಯೋಜನಾಧಿಕರಣವು ಮುಗಿಯಿತು.

ಅಧಿಕರಣ - 10

# ವೈಷಮ್ಯನೈರ್ಘೃಣ್ಯಾಧಿಕರಣ

## ಸಂಗತಿ

**ಸೂ.ರ.:–** अत्र पूर्वोक्तपरप्रयोजनरूपफलविषययुक्तिविरोधः परिह्रियते ।

**ಅನು.:–** ಹಿಂದೆ ಹೇಳಿದ ಪರಪ್ರಯೋಜನರೂಪವಾದ ಫಲವಿಷಯಕವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಾರೆ ಹತ್ತನೇ ಈ ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** ननु न विष्णोः सर्वकर्तृत्वं युक्तम् । वैषम्यादिदोषवत्त्वात् । अत्र प्रष्टव्यम् । ईश्वरः सुरनरतिर्यगादिनानायोनिषु प्राणिनो जनयित्वा तेषां विभागेन यत्सुखदुःखे ददाति तत्किं तेषां कर्मानुसारेण । उत तन्नैरपेक्ष्येण । आद्येऽस्वातन्त्र्यापातात् । नियमेन कर्मसापेक्षस्यास्वातन्त्र्यनियमात् । द्वितीये तु वैषम्यनैर्घृण्ये प्राप्नुतः । निर्निमित्तं विभागेन सुखदुःखदातृत्वात् । किं च नेश्वरस्य कर्तृत्वे मानम् । मानत्वेनाभिमतस्य वेदस्य ज्योतिष्टोमादिप्रतिपादकवेदवदमानत्वात् । ज्योतिष्टोमादिवेदामानत्वं तु सुखदुःखसाधनत्वेन तदुक्तानां धर्मादीनां नैरपेक्ष्येणैवेश्वरेण सुखादिप्रदत्वात्सिद्धम् । अतो हरेः सर्वकर्तृत्वायोगान्न लक्षणसूत्रमिति प्राप्ते सूत्रितम् ।

**ಅನು.:–** ವಿಷ್ಣುವಿಗೆ ಸರ್ವಕರ್ತೃತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ. ಕಾರಣ - ವಿಷ್ಣುವು ವೈಷಮ್ಯಾದಿದೋಷ ಉಳ್ಳವನಾದ್ದರಿಂದ. ಅದು ಹೇಗೆ? ಎಂದರೆ, ಇಲ್ಲಿ ಪ್ರಶ್ನಿಸುತ್ತೇವೆ – ಈಶ್ವರನು ಸುರ-ನರ-ತಿರ್ಯಗಾದಿ ನಾನಾಯೋನಿಗಳಲ್ಲಿ ಜೀವರನ್ನು ಹುಟ್ಟಿಸಿ ಅವರಿಗೆ ವಿಭಾಗಪೂರ್ವಕವಾಗಿ ಏನು ಸುಖದುಃಖಗಳನ್ನು ಕೊಡುತ್ತಾನೆ, ಆ ಸುಖದುಃಖಗಳನ್ನು ಅವರವರ ಕರ್ಮಾನುಸಾರವಾಗಿ ಕೊಡುತ್ತಾನೆಯೋ ಅಥವಾ ಕರ್ಮಗಳ ಅಪೇಕ್ಷೆ ಇಲ್ಲದೇ ಕೊಡುತ್ತಾನೆಯೋ?

ಕರ್ಮಾನುಸಾರವಾಗಿ ಸುಖದುಃಖಗಳನ್ನು ನೀಡುವುದಾದರೆ, ಈಶ್ವರನು ಅಸ್ವತಂತ್ರ-ನಾಗಬೇಕಾಗುತ್ತದೆ. ಕಾರಣ ನಿಯಮೇನ ಕರ್ಮಸಾಪೇಕ್ಷನಾದ ವ್ಯಕ್ತಿಗೆ ಅಸ್ವಾತಂತ್ರ್ಯವು ನಿಯತವಾದ್ದರಿಂದ, ಈಶ್ವರನೂ ಕರ್ಮಸಾಪೇಕ್ಷನಾದ ಕಾರಣ ಅಸ್ವತಂತ್ರನಾಗ-ಬೇಕಾಗುತ್ತದೆ.

ಕರ್ಮಗಳ ಅಪೇಕ್ಷೆ ಇಲ್ಲದೇ ಸುಖದುಃಖಗಳನ್ನು ನೀಡುವುದಾದರೆ, ಆಗ ವೈಷಮ್ಯ-ನೈರ್ಘೃಣ್ಯಗಳು ಬರಬೇಕಾಗುತ್ತದೆ. ಯಾವ ನಿಮಿತ್ತ ಇಲ್ಲದೇ ವಿಭಾಗಪೂರ್ವಕವಾಗಿ ಸುಖದುಃಖಗಳನ್ನು ಕೊಡುತ್ತಾನಾದ್ದರಿಂದ ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳು ಬರಬೇಕಾಗುತ್ತದೆ.

ಮತ್ತು ಈಶ್ವರನು ಜಗತ್ಕರ್ತಾ ಆಗಿದ್ದಾನೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? ವೇದವೇ ಪ್ರಮಾಣವಾಗಿದೆಯಲ್ಲ? ಎಂದರೆ, ಪ್ರಮಾಣತ್ವೇನ ಅಭಿಮತವಾದ ಆ ವೇದವು ಜ್ಯೋತಿಷ್ಟೋಮಾದಿ-ಪ್ರತಿಪಾದಕವಾದ ವೇದದಂತೆ ಅಪ್ರಮಾಣವಾಗಿದೆ. ಜ್ಯೋತಿಷ್ಟೋಮಾದಿಪ್ರತಿಪಾದಕವಾದ ವೇದವು ಏಕೆ ಅಪ್ರಮಾಣ? ಎಂದರೆ, ಸುಖದುಃಖಸಾಧನತ್ವೇನ ಅಲ್ಲಿ ಹೇಳಿದ ಧರ್ಮಾದಿಗಳ ಅಪೇಕ್ಷೆ ಇಲ್ಲದೆಯೇ ಈಶ್ವರನು ಸುಖಾದಿಪ್ರದಾತೃವಾದ್ದರಿಂದ.

ಆದ್ದರಿಂದ ವಿಷ್ಣುವಿಗೆ ಕರ್ಮಸಾಪೇಕ್ಷವಾಗಿ ಹಾಗೂ ನಿರಪೇಕ್ಷವಾಗಿ ಎರಡು ರೀತಿಯಿಂದಲೂ ಸುಖಾದಿದಾತೃತ್ವ ಕೂಡುವುದಿಲ್ಲವಾದ್ದರಿಂದ, ಅವನಿಗೆ ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಸರಿಯಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ वैषम्यनैर्घृण्ये न सापेक्षत्वात्तथा हि दर्शयति ॐ (२.१.३५)**

**ಸೂತ್ರಾರ್ಥ** :– ಸ್ವಾತಂತ್ರ್ಯಸಿದ್ಧ್ಯರ್ಥಮೀಶ್ವರಸ್ಯ ಜೀವೇಭ್ಯಃ ಫಲದಾನೇ ಕರ್ಮಾಪೇಕ್ಷಾನಂಗೀಕಾರೇ=ಈಶ್ವರನಿಗೆ ಸ್ವಾತಂತ್ರ್ಯಸಿದ್ಧಿಗಾಗಿ ಜೀವರಿಗೆ ಫಲ ಕೊಡುವ ವಿಷಯದಲ್ಲಿ ಕರ್ಮಾಪೇಕ್ಷೆ ಇಲ್ಲ ಎಂದು ಅಂಗೀಕರಿಸುವುದಾದರೆ, ನಿರ್ನಿಮಿತ್ತಂ ವೈಷಮ್ಯೇಣ ಫಲದಾತುಃ ತಸ್ಯ=ಯಾವ ನಿಮಿತ್ತವೂ ಇಲ್ಲದೇ ವೈಷಮ್ಯದಿಂದ ಫಲ ಕೊಡುವ ಈಶ್ವರನಿಗೆ ವೈಷಮ್ಯನೈರ್ಘೃಣ್ಯೇ ಯೇ ಪ್ರಸಕ್ತೇ = ವೈಷಮ್ಯ-ನೈರ್ಘೃಣ್ಯಗಳು (ವಿಷಮತ್ವ-ನಿರ್ದಯತ್ವಗಳು) ಏನು ಪ್ರಸಕ್ತವಾಗುತ್ತವೆಯೋ ತೇ = ಅವು ನ ಸ್ತಃ = ಈಶ್ವರನಿಗೆ ಬರುವುದಿಲ್ಲ.

ಕುತಃ = ಯಾಕೆ? ಸಾಪೇಕ್ಷತ್ವಾತ್ = ಈಶ್ವರನು ಕರ್ಮಾಪೇಕ್ಷೆಯಿಂದಲೇ ಫಲ ನೀಡುತ್ತಾನೆ ಎಂದು ಅಂಗೀಕರಿಸಿದ್ದರಿಂದ. ತತ್ಕುತಃ = ಈಶ್ವರನು ಕರ್ಮಾಪೇಕ್ಷೆಯಿಂದಲೇ ಫಲ ನೀಡುತ್ತಾನೆ ಎಂದು ಹೇಗೆ ಹೇಳುತ್ತೀರಿ? ಎಂದರೆ, ಹಿ=ಯಾವ ಕಾರಣ ಪುಣ್ಯೇನ ಪುಣ್ಯಂ (ಪ್ರ.3-7) ಎಂಬ ಶ್ರುತಿಯು ತಥಾ ದರ್ಶಯತಿ = ಹಾಗೆ ತಿಳಿಸುತ್ತಿದೆಯೋ ಆ ಕಾರಣ.

### ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्स्रष्टृत्वादिकम् । तत्तत्कर्मानुसारेण फलदातृत्वाङ्गीकारेण वेषम्यनैर्घृण्याभावात् । अतो लक्षणसूत्रं युक्तमिति सिद्धम् ॥**

**ಅನು.:–** ವಿಷ್ಣುವಿಗೆ ಜಗತ್ಸ್ರಷ್ಟೃತ್ವಾದಿಗಳು ಯುಕ್ತವೇ ಆಗಿವೆ. ಅವರವರ ಕರ್ಮಗಳಿಗೆ ಅನುಸಾರವಾಗಿ ಫಲದಾತೃತ್ವವನ್ನು ಅಂಗೀಕರಿಸಿದ್ದರಿಂದ, ಈಶ್ವರನಿಗೆ ವೈಷಮ್ಯ-ನೈರ್ಘೃಣ್ಯಗಳು ಬರುವುದಿಲ್ಲ.

ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 36

### ಆಕ್ಷೇಪ

**ಸೂ.ರ.:– नन्वपेक्षया कर्मणोऽभावान्न तदपेक्षया वैषम्यादिदोषपरिहारः सम्भवति । न चास्ति पूर्वकर्मेति वाच्यम् । एष ह्येवेति (कौ.३-८) श्रुतौ तस्यापि भगवदधीनत्वश्रवणात् । स्वकारितापेक्षया फलदाने वैषम्यादेरनिस्तारादिति प्राप्ते सूत्रमाह ।**

**ಅನು.:–** ಕರ್ಮಾಪೇಕ್ಷೆಯಿರುವ ಕಾರಣ ವೈಷಮ್ಯ ನೈರ್ಘೃಣ್ಯಾದಿಗಳು ಬರುವುದಿಲ್ಲ ಎಂಬುದಾಗಿ ಪರಿಹಾರ ಮಾಡಿಕೊಳ್ಳಲು ಬರುವುದಿಲ್ಲ. ಏಕೆಂದರೆ, ಯಾವ ಕರ್ಮದ ಅಪೇಕ್ಷೆಯಿಂದ ಫಲ ನೀಡಬೇಕಿದೆ ಅಂತಹ ಅಪೇಕ್ಷಣೀಯವಾದ ಕರ್ಮವೇ ಇಲ್ಲ.

ಕರ್ಮ ಇಲ್ಲ ಎಂದು ಏಕೆ ಹೇಳುತ್ತೀರಿ? ಪೂರ್ವಕರ್ಮವು ಇದೆಯಲ್ಲ? ಎಂದರೆ, ಅದು ಸರಿಯಲ್ಲ.

ಏಷ ಹ್ಯೇವೈನಂ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತ ಏಷ ಉ ಏವಾಸಾಧುಕರ್ಮ ಕಾರಯತಿ ತಂ ಯಮಧೋ ನಿನೀಷತ (ಕೌ.ಉ. 3-8)

ಎಂಬ ಶ್ರುತಿಯಲ್ಲಿ ಆ ಪೂರ್ವಕರ್ಮವೂ ಭಗವಂತನ ಅಧೀನವಾಗಿದೆ ಎಂದು ಶ್ರುತವಾಗುತ್ತಿದೆ. ಹೀಗಾಗಿ ಭಗವಂತನು ಸ್ವಕೃತಕರ್ಮಾಪೇಕ್ಷೆಯಿಂದ ಫಲ ನೀಡುವುದಾದರೆ ವೈಷಮ್ಯಾದಿದೋಷಗಳು ಅಪರಿಹಾರ್ಯವಾಗುತ್ತವೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

## ॐ न कर्माविभागादिति चेन्नानादित्वात् ॐ (२.१.३६)

**ಸೂತ್ರಾರ್ಥ** :- ವೈಷಮ್ಯ-ನೈರ್ಘೃಣ್ಯಗಳ ಪರಿಹಾರಕ್ಕಾಗಿ ಭಗವಂತನಿಂದ ಅಪೇಕ್ಷಣೀಯವಾದ ಯಾವ ಕರ್ಮ ಇದೆಯೋ ಕರ್ಮ ನ=ಅಂತಹ ಕರ್ಮವೇ ಇಲ್ಲ. ಕುತಃ = ಏಕೆ? ಅವಿಭಾಗಾತ್ = ಆ ಕರ್ಮವು ಅಸ್ವತಂತ್ರವಸ್ತುಗಳಿಂದ ಭಿನ್ನವಾಗಿಲ್ಲ. ಅರ್ಥಾತ್ ಕರ್ಮವೂ ಅಸ್ವತಂತ್ರವಾದ್ದರಿಂದ.

ತಥಾ ಚ ಸ್ವಾಧೀನಕರ್ಮಾಪೇಕ್ಷಯಾ ವೈಷಮ್ಯಾದೇರಪರಿಹಾರಃ=ಆದ್ದರಿಂದ ಸ್ವಾಧೀನವಾದ ಕರ್ಮಗಳ ಅಪೇಕ್ಷೆ ಇರುವುದಾದರೆ ಮತ್ತೆ ವೈಷಮ್ಯಾದಿಗಳು ಅಪರಿಹಾರ್ಯವೇ ಆಗುತ್ತವೆ ಇತಿ ಚೇತ್=ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಕುತಃ=ಯಾಕೆ? ಅನಾದಿತ್ವಾತ್ = ಕರ್ಮಪರಂಪರೆಯು ಅನಾದಿಯಾದ್ದರಿಂದ. ತಥಾ ಚೇಶ್ವರಃ ಪೂರ್ವಪೂರ್ವಮಪೇಕ್ಷ್ಯೋತ್ತರೋತ್ತರಕರ್ಮ ಜೀವೇನ ಕಾರಯತೀತ್ಯಂಗೀ-ಕಾರೇಣ ಕರ್ಮಣ ಅಪೇಕ್ಷಣೀಯತ್ವಾಪತ್ತೇಃ ಸೋಕ್ತದೋಷಃ = ಆದ್ದರಿಂದ ಈಶ್ವರನು ಹಿಂದಿನ ಹಿಂದಿನ ಕರ್ಮಗಳನ್ನು ಅಪೇಕ್ಷಿಸಿಕೊಂಡು ಉತ್ತರೋತ್ತರಕರ್ಮಗಳನ್ನು ಜೀವನಿಂದ ಮಾಡಿಸುತ್ತಾನೆ ಎಂದು ಅಂಗೀಕರಿಸಿದ್ದರಿಂದ ಕರ್ಮಾಪೇಕ್ಷೆಯಿಂದಾಗಿ ವೈಷಮ್ಯಾದಿ-ದೋಷಗಳು ಬರುವುದಿಲ್ಲ.

ಸೂ.ರ.:- एवं च भवेदयं दोपः । यदि पूर्वतनं कर्मेश्वरेण निरपेक्षेण कारितं स्यात् । न चैवम् । किं तर्हि प्राचीनकर्मानुसारेण कारितम् । यत्रैव पर्यवसानं तदारभ्य दोष इति कर्मपरम्पराया अनादित्वात् । पुण्यपापादिकमिति (भविप्यत्पुराण.) वचनात् । अतो विरोधाभावेनोक्तं लक्षणसूत्रमिति सिद्धम् ॥

**ಅನು.:–** ಈಶ್ವರನಿಗೆ ವೈಷಮ್ಯಾದಿದೋಷಗಳು ಬರುತ್ತಿತ್ತು. ಒಂದುವೇಳೆ ಪೂರ್ವ-ಕರ್ಮಗಳನ್ನು ಅಪೇಕ್ಷಿಸದೇ ಕರ್ಮ ಮಾಡಿಸುವುದಾಗಿದ್ದರೆ ದೋಷಕ್ಕೆ ಅವಕಾಶವಿರುತ್ತಿತ್ತು. ಆದರೆ ಪ್ರಕೃತ ಹಾಗಿಲ್ಲ.

**ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್ಪೂರ್ವಕರ್ಮಣಾ ।**
**ಅನಾದಿತ್ವಾತ್ಕರ್ಮಣಶ್ಚ ನ ವಿರೋಧಃ ಕಥಂಚನ ॥**

ಎಂಬುದಾಗಿ ಭವಿಷ್ಯತ್ಪುರಾಣವಚನ ಇರುವುದರಿಂದ ಭಗವಂತನು ಪೂರ್ವಕರ್ಮ-ಗಳನ್ನು ಅನುಸರಿಸಿಯೇ ಉತ್ತರೋತ್ತರಕರ್ಮಗಳನ್ನು ಜೀವರಿಂದ ಮಾಡಿಸುತ್ತಾನೆ. ಈ ಕರ್ಮಪರಂಪರೆಯು ಅನಾದಿಯಾಗಿರುವುದರಿಂದ "ಕರ್ಮ ಇಲ್ಲ" ಎಂಬ ಶಂಕೆಗೆ ಅವಕಾಶವಿಲ್ಲ.

ಆದ್ದರಿಂದ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 37

## ಆಕ್ಷೇಪ

**ಸೂ.ರ.:– नन्वथाऽपि नेश्वरस्य कर्मापेक्षया फलदातृत्वं युक्तम् । अस्वातन्त्र्यप्रसङ्गादित्याशङ्कां परिहरत्सूत्रमुपन्यस्यति ।**

**ಅನು.:–** ಆದರೂ ಸಹ ಈಶ್ವರನಿಗೆ ಕರ್ಮಾಪೇಕ್ಷಯಾ ಫಲದಾತೃತ್ವವು ಉಪಪನ್ನ-ವಾಗುವುದಿಲ್ಲ. ಕಾರಣ- ಕರ್ಮಾಪೇಕ್ಷವಾಗಿ ಫಲ ನೀಡುವುದಾದರೆ ಭಗವಂತನಿಗೆ ಅಸ್ವಾತಂತ್ರ್ಯ ಬರಬೇಕಾಗುತ್ತದೆ ಎಂದು ಆಕ್ಷೇಪ ಬಂದರೆ, ಅದಕ್ಕೆ ಪರಿಹಾರ ಹೇಳು-ವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ उपपद्यते चाप्युपलभ्यते च ॐ (२.१.३७)**

ಅಪಿ ಈಶ್ವರಸ್ಯ ಕರ್ಮಾಪೇಕ್ಷಾಯಾಮಪಿ = ಈಶ್ವರನಿಗೆ ಕರ್ಮಾಪೇಕ್ಷೆಯನ್ನು ಅಂಗೀಕರಿಸಿದರೂ ಸಹ ಉಪಪದ್ಯತೇ = ಸ್ವಾತಂತ್ರ್ಯವು ಉಪಪನ್ನವಾಗಿಯೇ ಆಗುತ್ತದೆ. ಕುತಃ = ಯಾಕೆ? ಕರ್ಮಣಃ ಸ್ವಾಧೀನತ್ವಾತ್ = ಕರ್ಮವು ತನ್ನ ಅಧೀನವಾದ್ದರಿಂದ.

ನನು ಪುನಃ ಸ್ವಾಧೀನಕರ್ಮಸಾಪೇಕ್ಷತ್ವಕೃತವೈಷಮ್ಯಾಪಾತಃ = ಹಾಗಾದರೆ ಮತ್ತೆ ಸ್ವಾಧೀನಕರ್ಮಸಾಪೇಕ್ಷತ್ವ ನಿಮಿತ್ತದಿಂದ ವೈಷಮ್ಯ ಬರಬೇಕಾಗುತ್ತದೆಯಲ್ಲವೇ? ಇತ್ಯತ

ಉಕ್ತಂ = ಎಂದು ಆಕ್ಷೇಪ ಬಂದರೆ, ಆದಕ್ಕಾಗಿ ಹೇಳಿದರು - ಉಪಲಭ್ಯತೇ ಚ = ಸ ಕಾರಯೇತ್ (ಚತುರ್ವೇದಶಿಖಾ ಶ್ರುತಿ) ಎಂಬುದಾಗಿ ಶ್ರುತಿ ಇರುವುದರಿಂದ ಅಂತಹ ವೈಷಮ್ಯವು ದೋಷವಲ್ಲವೆಂದು ತಿಳಿಯಲ್ಪಟ್ಟಿದೆ.

## ಸಮಾಧಾನ

**ಸೂ.ರ.:- एवं चोपपद्यते खल्वीश्वरस्य कर्मसापेक्षत्वेऽपि स्वातन्त्र्यम् । स्वाधीनसापेक्षायाः स्वातन्त्र्याविरोधित्वात् । न च तथा सति पुनर्वैषम्यादिकं स्यादिति वाच्यम् । इष्टत्वात् । वैषम्यमिति वचनात् । अतो हरेः सर्वकर्तृत्वे विरोधाभावाद्युक्तं लक्षणसूत्रमिति सिद्धम् ।**

**ಅನು.:-** ಈಶ್ವರನಿಗೆ ಕರ್ಮಸಾಪೇಕ್ಷತ್ವ ಇದ್ದರೂ ಸಹ ಸ್ವಾತಂತ್ರ್ಯವು ಉಪಪನ್ನವೇ ಆಗುತ್ತದೆ. ಕಾರಣ ಅಂತಹ ಸ್ವಾಧೀನಸಾಪೇಕ್ಷತ್ವವು ಸ್ವಾತಂತ್ರ್ಯಕ್ಕೆ ವಿರೋಧಿಯಾಗಿಲ್ಲ. ಆದರೂ ಸ್ವಾಧೀನಸಾಪೇಕ್ಷತ್ವ ನಿಮಿತ್ತದಿಂದಾಗಿ ಮತ್ತೆ ವೈಷಮ್ಯಪ್ರಸಕ್ತಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ. ಏಕೆಂದರೆ -

**ಸ ಕಾರಯೇತ್ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನೀಶಿತಾऽಪಿ ।<br>ಈಶೋ ಯತೋ ಗುಣದೋಷಾದಿ ಸತ್ವೇ ಸ್ವಯಂ ಪರೋऽನಾದಿರಾದಿಃ ಪ್ರಜಾನಾಮ್ ॥**

ಎಂಬುದಾಗಿ ಚತುರ್ವೇದಶಿಖಾಶ್ರುತಿ ಹೇಳಿದಂತೆ ಅಂತಹ ವೈಷಮ್ಯವು ದೋಷವಲ್ಲದ ಕಾರಣ ಇಷ್ಟವೇ ಆಗಿದೆ.

ಆದ್ದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವೈಷಮ್ಯನೈರ್ಘೃಣ್ಯಾಧಿಕರಣವು ಮುಗಿಯಿತು.

ಅಧಿಕರಣ – 11

# ಸರ್ವಧರ್ಮೋಪಪತ್ತ್ಯಧಿಕರಣ

## ಸಂಗತಿ

ಸೂ.ರ.:– अत्र विष्णोः सर्वगुणपूर्तौ सर्वदोषरहित्ये च युक्त्यविरोध उच्यते ।

ಅನು.:– ವಿಷ್ಣುವಿನ ಸರ್ವಗುಣಪೂರ್ಣತ್ವದ ವಿಷಯದಲ್ಲಿ, ಸರ್ವದೋಷ-ದೂರತ್ವದ ವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ ಈ ಹನ್ನೊಂದನೇ ಸರ್ವಧರ್ಮೋಪಪತ್ತ್ಯಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न विष्णुः सर्वगुणपूर्णः । चेतनत्वात् । अन्यथा देवदत्तादीनामपि तथात्वं स्यात् । सर्वेषां युक्तिविरोधानां परिहृतत्वेनोत्तरसूत्रवैयर्थ्याच्चेति प्राप्ते परिहरत्सूत्रमाह ।

ಅನು.:– ವಿಷ್ಣುಃ ನ ಸರ್ವಗುಣಪೂರ್ಣಃ ಚೇತನತ್ವಾತ್ ದೇವದತ್ತವತ್ (ವಿಷ್ಣು ಸರ್ವಗುಣಪೂರ್ಣನಲ್ಲ ಚೇತನನಾದ್ದರಿಂದ ದೇವದತ್ತನಂತೆ.) ಎಂಬ ಅನುಮಾನದಿಂದ ವಿಷ್ಣು ಸರ್ವಗುಣಪೂರ್ಣನಲ್ಲ ಎಂದೇ ಸಿದ್ಧವಾಗುತ್ತದೆ. ಹಾಗೆ ಒಂದುವೇಳೆ ವಿಷ್ಣು ಚೇತನನಾದರೂ ಸರ್ವಗುಣಪೂರ್ಣ ಎಂದೇ ಅಂಗೀಕರಿಸುವುದಾದರೆ ದೇವದತ್ತಾದಿಗಳೂ ಚೇತನರೇ ಆದ್ದರಿಂದ ಅವರಿಗೂ ಸರ್ವಗುಣಪೂರ್ಣತ್ವ ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ.

ಮತ್ತು ಹಿಂದಿನ ಅಧಿಕರಣದಲ್ಲಿಯೇ ಎಲ್ಲ ಯುಕ್ತಿವಿರೋಧಗಳನ್ನೂ ಪರಿಹರಿಸಿದ್ದ-ರಿಂದ ಈ ಮುಂದಿನ ಸೂತ್ರವು ವ್ಯರ್ಥವೇ ಎಂಬುದಾಗಿ ಆಕ್ಷೇಪ ಬಂದರೆ ಅದರ ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ सर्वधर्मोपपत्तेश्च ॐ (२.१.३८)**

ಸರ್ವಧರ್ಮೋಪಪತ್ತೇಃ ಚ = ಗುಣವತ್ವ - ದೋಷಾಭಾವವತ್ವ ರೂಪವಾದ ಎಲ್ಲ ಧರ್ಮಗಳೂ ಉಪಪನ್ನವಾಗುವುದರಿಂದ, ಸ್ವಾತಂತ್ರ್ಯಾದಿಗಳಿಂದಾಗಿ ಬ್ರಹ್ಮನಲ್ಲಿ ಗುಣಪೂರ್ಣತ್ವಾದಿಗಳು ಯುಕ್ತವೂ ಆದ್ದರಿಂದ, ವಿಷ್ಣುವಿನ ಗುಣಪೂರ್ಣತ್ವದ ವಿಷಯದಲ್ಲಿ ಯಾವ (ಯುಕ್ತಿವಿರೋಧವೂ ಶಂಕನೀಯವಲ್ಲ) ಯುಕ್ತಿವಿರೋಧವನ್ನೂ ಶಂಕಿಸುವ ಹಾಗಿಲ್ಲ.

### ಸಿದ್ಧಾಂತ

**ಸೂ.ರ.:– एवं च युक्तमेव विष्णोः सर्वगुणपूर्णत्वम् । स्वातन्त्र्यात् । गुणाः श्रुता इति (सौपर्ण.) श्रुतेश्च ।**

**ಅನು.:–** ವಿಷ್ಣುವಿಗೆ ಸರ್ವಗುಣಪೂರ್ಣತ್ವವನ್ನು ಹೇಳುವುದು ಯುಕ್ತವೇ ಆಗುತ್ತದೆ.

ವಿಷ್ಣುಃ ಸರ್ವಗುಣಪೂರ್ಣಃ ಸ್ವತಂತ್ರತ್ವಾತ್ (ವ್ಯತಿರೇಕೇಣ ದೇವದತ್ತವತ್) ವಿಷ್ಣುವು ಸ್ವತಂತ್ರನಾದ್ದರಿಂದ ಸರ್ವಗುಣಪೂರ್ಣನಾಗಿದ್ದಾನೆ ಎಂಬ ಅನುಮಾನದಿಂದ ಗುಣಪೂರ್ಣತ್ವವು ಸಿದ್ಧವಾಗುತ್ತದೆ. ಮತ್ತು

**ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।**
**ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥**

ಎಂಬುದಾಗಿ ಶ್ರುತಿಯೂ ಗುಣಪೂರ್ಣತ್ವವನ್ನು ಹೇಳುತ್ತಿರುವುದರಿಂದ ವಿಷ್ಣುವಿಗೆ ಸರ್ವಗುಣಪರಿಪೂರ್ಣತ್ವವು (ಅಂಗೀಕಾರಾರ್ಹವಾಗಿದೆ) ಉಪಪನ್ನವೇ ಆಗಿದೆ.

**ಸೂ.ರ.:– पूर्वाधिकरणेषु तस्य प्रत्येकमेकैकगुणविषये दोषाभावे च विरोधं परिहृत्य समर्थनं कृतम् । सर्वगुणपूर्णत्वविषये च प्राप्तयुक्ति-विरोधपरिहारेण च तत्प्रकरणस्यात्र समापितत्वात्सूत्रवैयर्थ्याभावात् । चेतनत्वहेतोरप्रयोजकत्वाच्छ्रुतिविरुद्धत्वाच्च । ततश्च विष्णोः सर्वगुणपूर्णत्वे विरोधाभावेनोक्तं सर्वमुपपन्नमिति सिद्धम् ।**

**ಅನು.:–** ಮತ್ತು ಈ ಸೂತ್ರಕ್ಕೆ ವೈಯರ್ಥ್ಯವೂ ಇಲ್ಲ, ಕಾರಣ - ಹಿಂದಿನ ಅಧಿಕರಣಗಳಲ್ಲಿ ವಿಷ್ಣುವಿನ ಒಂದೊಂದು ಗುಣದ ವಿಷಯದಲ್ಲಿ ಹಾಗೂ ದೋಷಾಭಾವದ ವಿಷಯದಲ್ಲಿ ವಿರೋಧವನ್ನು ಪರಿಹಾರ ಮಾಡಿ ಒಂದೊಂದು ಗುಣದ/ ದೋಷಾಭಾವದ ಸಮರ್ಥನೆಯನ್ನು ಮಾಡಲಾಗಿದೆ. ಆದರೆ ಸರ್ವಗುಣಪೂರ್ಣತ್ವದ ವಿಷಯದಲ್ಲಿ,

ಸಕಲದೋಷಾಭಾವದ ವಿಷಯದಲ್ಲಿ ಬಂದ ಯುಕ್ತಿವಿರೋಧವನ್ನು ಅಲ್ಲಿ ಪರಿಹರಿಸಿಲ್ಲ. ಆ ಕಾರ್ಯವನ್ನು ಈ ಅಧಿಕರಣದಲ್ಲಿ ಮಾಡಿ, ಗುಣಪೂರ್ಣತ್ವದ ಪ್ರಕರಣವನ್ನು ಇಲ್ಲಿ ಸಮಪ್ತಿಗೊಳಿಸುತ್ತಿರುವುದರಿಂದ ಈ ಸೂತ್ರಕ್ಕೆ ವೈಯರ್ಥ್ಯದೋಷವೂ ಇಲ್ಲ.

''ವಿಷ್ಣುವೂ ಚೇತನನೇ ಆದ್ದರಿಂದ ಗುಣಪೂರ್ಣನಲ್ಲ'' ಎಂಬ ಅನುಮಾನವು ಅಪ್ರಯೋಜಕತಾದೋಷ ಉಳ್ಳದ್ದಾಗಿದೆ. ಅರ್ಥಾತ್ (ಚೇತನತ್ವಂ ಅಸ್ತು ಗುಣಪೂರ್ಣತ್ವಾಭಾವಃ ಮಾಸ್ತು) ಚೇತನನಾದರೂ ಗುಣಪೂರ್ಣನಾಗಬಹುದಾದ್ದರಿಂದ ಅನುಮಾನಕ್ಕೆ ಅಪ್ರಯೋಜಕತಾದೋಷ ಬರುತ್ತದೆ.

ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ... ಎಂಬ ಈ ಹಿಂದೆ ಹೇಳಿದ ಶ್ರುತಿಯು ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳುತ್ತಿರುವುದರಿಂದ, ಪ್ರಕೃತ ಚೇತನತ್ವ ಹೇತುವಿನಿಂದ ಗುಣಪೂರ್ಣನಲ್ಲ ಎಂದು ಹೇಳುವುದಾದರೆ ಗುಣಪೂರ್ಣತ್ವ ಪ್ರತಿಪಾದಕವಾದ ಈ ಶ್ರುತಿಯ ವಿರೋಧವೂ ಬರುವುದರಿಂದ ಅನುಮಾನವು ಬಾಧಿತವೂ ಆಗುತ್ತದೆ. ಹೀಗಾಗಿ ಗುಣಪೂರ್ಣನಲ್ಲ ವಿಷ್ಣು ಎಂಬುದಾಗಿ ಅನುಮಾನದಿಂದ ಸಾಧಿಸಲು ಬರುವುದಿಲ್ಲ.

ಆದ್ದರಿಂದ ವಿಷ್ಣುವಿನ ಗುಣಪೂರ್ಣತ್ವದ ವಿಷಯದಲ್ಲಿ ಯಾವ ವಿರೋಧವೂ ಬಾರದ ಕಾರಣ ಓಂ ಜನ್ಮಾದ್ಯಸ್ಯ ಯತಃ ಓಂ ಎಂಬ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು, ಮತ್ತು ಆ ಮೂಲಕ ಸರ್ವಗುಣಪೂರ್ಣತ್ವವನ್ನು ಹೇಳಿದ್ದು ಎಲ್ಲವೂ ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸರ್ವಧರ್ಮೋಪಪತ್ತ್ಯಧಿಕರಣವು ಮುಗಿಯಿತು.**

**ಎರಡನೇ ಅಧ್ಯಾಯದ ಮೊದಲನೇ ಪಾದವು ಮುಗಿಯಿತು.**

# द्वितीयाऽध्यायः

## द्वितीयः पादः

*ಅಧಿಕರಣ - 1*

## ರಚನಾನುಪಪತ್ತ್ಯಧಿಕರಣ

### ಪಾದಸಂಗತಿ

**ಸೂ.ರ.:–** इतरेषां चानुपलब्धेरिति नये सामान्यतो निराकृतसमयानां विशेषतो निराकरणं क्रियतेऽस्मिन्पादे ॥

**ಅನು.:–** ದ್ವಿತೀಯಾಧ್ಯಾಯದ ಪ್ರಥಮಪಾದದಲ್ಲಿ ಓಂ ಇತರೇಷಾಂ ಚಾನುಪಲಬ್ಧೇಃ ಓಂ ಎಂಬ ಅಧಿಕರಣದಲ್ಲಿ ಸಾಮಾನ್ಯತಃ ನಿರಾಕೃತವಾದ ಸಮಯ(ಸಿದ್ಧಾಂತ)ಗಳನ್ನು ವಿಶೇಷವಾಗಿ ನಿರಾಕರಣೆ ಮಾಡುತ್ತಾರೆ ಈ ಎರಡನೇ ಪಾದದಲ್ಲಿ.

### ಅಧಿಕರಣ ಸಂಗತಿ

**ಸೂ.ರ.:–** अत्र अचेतनप्रवृत्तिमतं निराक्रियते ।

**ಅನು.:–** ಅಚೇತನವಾದದ್ದಕ್ಕೆ ಸ್ವತಃ ಪ್ರವೃತ್ತಿಯನ್ನು ಹೇಳುವ ಮತವನ್ನು ನಿರಾಕರಿಸುತ್ತಾರೆ ಮೊದಲನೇ ಈ ರಚನಾನುಪಪತ್ತ್ಯಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:–** ननु न विष्णोर्जगत्कारणत्वं युक्तम् । साङ्ख्यसमये महदादिकं स्वसदृशकारणजन्यम् । कार्यत्वात् । घटवदित्यनुमानेन प्रकृतेः कारणत्वं प्रसाध्य तस्य अनन्याधीनतया कार्योन्मुखत्वाभिधानात् । अतः प्रकृतेरेवानन्याधीनतयाऽशेषकार्योन्मुखत्वेन नेश्वरकर्तृत्वं चास्तीति न जगत्कारणत्वं युक्तमिति प्राप्ते पराकुर्वत्सूत्रमाह ॥

ಅನು.:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ, ಏಕೆಂದರೆ – ಸಾಂಖ್ಯಸಿದ್ಧಾಂತದಲ್ಲಿ–

ಮಹದಾದಿಕಂ ಸ್ವಸದೃಶಕಾರಣಜನ್ಯಂ ಕಾರ್ಯತ್ವಾತ್ ಘಟವತ್

ಘಟವು ಕಾರ್ಯವಾದ್ದರಿಂದ ಹೇಗೆ ಸ್ವಸದೃಶಕಾರಣಜನ್ಯವಾಗಿದೆಯೋ (ತನ್ನಂತೆಯೇ ಅಚೇತನವಾದ ಕಾರಣದಿಂದ ಹುಟ್ಟಿದೆಯೋ) ಅದರಂತೆ ಮಹದಾದಿಗಳೂ ಕಾರ್ಯವಾದ್ದರಿಂದ ಸ್ವಸದೃಶಕಾರಣಜನ್ಯವಾಗಿವೆ (ತನ್ನಂತೆಯೇ ಅಚೇತನವಾದ ಪ್ರಕೃತಿ ಎಂಬ ಕಾರಣದಿಂದ ಜನ್ಯವಾಗಿವೆ)

ಎಂಬ ಅನುಮಾನದಿಂದ ಪ್ರಕೃತಿಗೆ ಕಾರಣತ್ವವನ್ನು ಸಾಧಿಸಿ, ಆ ಪ್ರಕೃತಿಯು ಅನನ್ಯಾ-ಧೀನವಾಗಿ (ಸ್ವತಂತ್ರವಾಗಿ) ಕಾರ್ಯೋನ್ಮುಖವಾಗುತ್ತದೆ ಎಂದು ಹೇಳಿದ್ದಾರೆ.

ಆದ್ದರಿಂದ ಪ್ರಕೃತಿಯೇ ಅನನ್ಯಾಧೀನವಾಗಿ (ಸ್ವತಂತ್ರವಾಗಿ) ಎಲ್ಲ ಕಾರ್ಯಗಳಲ್ಲಿ ಉನ್ಮುಖವಾಗುವ ಕಾರಣ (ಪ್ರಕೃತಿಗೇ ಜಗತ್ಕಾರಣತ್ವವು ಉಪಪನ್ನವಾಗುವ ಕಾರಣ) ಈಶ್ವರನಿಗೆ ಕರ್ತೃತ್ವವು ಇಲ್ಲ. ಹೀಗಾಗಿ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ-ಲಕ್ಷಣವು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತವನ್ನು ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

## ॐ रचनानुपपत्तेश्च नानुमानम् ॐ (२.२.१)

ಅನುಮಾನಂ = ಸಾಂಖ್ಯಾನುಮಾನಕಲ್ಪಿತವಾದ ಪ್ರಧಾನವು ನ ಜಗತ್ಕರ್ತೃ = ಜಗತ್ಕರ್ತೃವಲ್ಲ. ಕುತಃ = ಯಾಕೆ? ರಚನಾನುಪಪತ್ತೇಃ = ಪ್ರಧಾನವು ಜಡವಾದ್ದರಿಂದ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲವಾದ್ದರಿಂದ. ಚ = ಮತ್ತು ಅಚೇತನಕ್ಕೆ ಸ್ವತಃ ಪ್ರವೃತ್ತಿ ಇದೆ ಎಂಬ ವಿಷಯದಲ್ಲಿ ಪ್ರಮಾಣವೂ ಯಾವುದೂ ಇಲ್ಲ.

### ಸಿದ್ಧಾಂತ

ಸೂ.ರ.:– एवं च युक्तमेव विष्णोः जगत्कर्तृत्वम् । कार्यं स्वसदृश-कारणजन्यमित्यनुमानेन कारणतया परिकल्पितस्य प्रधानस्याचेतनत्वेन स्वतः कार्योन्मुखत्वायोगात् । प्रधानस्य स्वतः प्रवृत्त्यभावेऽचेतनत्वाख्य-हेतुसूचनादसिद्धेः परिहृतत्वात् । तद्विरुद्धोपपत्तेरेव तदभावसाधकत्वात् ।

**ಅನು.:–** ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇ ಆಗಿದೆ. ಏಕೆಂದರೆ - ಪ್ರಕೃತಿಗೆ ಜಗತ್ಕರ್ತೃತ್ವವು ಉಪಪನ್ನವಾಗುವುದಿಲ್ಲವಾದ್ದರಿಂದ. ಮಹದಾದಿಕಂ ಸ್ವಸದೃಶಕಾರಣಜನ್ಯಂ ಕಾರ್ಯತ್ವಾತ್ ಘಟವತ್ ಎಂಬ ಅನುಮಾನದಿಂದ ಪ್ರಕೃತಿಗೆ ಕಾರಣತ್ವವನ್ನು ಹೇಳಿದ್ದೇವೆ-ಯಲ್ಲ? ಎಂದರೆ, ಅದು ಸರಿಯಲ್ಲ.

**ಪ್ರಧಾನಂ ನ ಜಗತ್ಕರ್ತೃ ಸ್ವತಃ ಪ್ರವೃತ್ತಿಶೂನ್ಯತ್ವಾತ್ ।**

ಪ್ರಧಾನವು, ಜಗತ್ಕಾರಣವಾಗಲು ಸಾಧ್ಯವಿಲ್ಲ, ಅದಕ್ಕೆ ಸ್ವತಃಪ್ರವೃತ್ತಿ ಇಲ್ಲವಾದ್ದರಿಂದ.

ಎಂಬುದಾಗಿ ಸ್ವತಃ ಪ್ರವೃತ್ತ್ಯಭಾವ ಹೇತುವಿನಿಂದಾಗಿ ಪ್ರಧಾನಕ್ಕೆ ಜಗತ್ಕರ್ತೃತ್ವವನ್ನು ನಿಷೇಧಿಸುತ್ತೇವೆ. ಹೌದು, ಪ್ರಧಾನಕ್ಕೆ ಸ್ವತಃ ಪ್ರವೃತ್ತಿ ಇಲ್ಲ ಎಂದು ಏಕೆ ಹೇಳುತ್ತೀರಿ? ಪ್ರಧಾನಕ್ಕೆ ಸ್ವತಃ ಪ್ರವೃತ್ತಿ ಇದೆಯಾದ್ದರಿಂದ ನಿಮ್ಮ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ ಎಂದು ಶಂಕೆ ಬಂದರೆ ಅದು ಸರಿಯಲ್ಲ, ಕಾರಣ–

ಪ್ರಧಾನಂ, ನ ಸ್ವತಃ ಪ್ರವೃತ್ತಿಮತ್, ಅಚೇತನತ್ವಾತ್ ಪ್ರಧಾನವು, ಸ್ವತಃ ಪ್ರವೃತ್ತಿ ಉಳ್ಳದ್ದಲ್ಲ, ಅಚೇತನವಾದ್ದರಿಂದ.

ಎಂಬುದಾಗಿ ಅಚೇತನತ್ವ ಹೇತುವಿನಿಂದಾಗಿ ಪ್ರಧಾನಕ್ಕೆ ಸ್ವತಃ ಪ್ರವೃತ್ತ್ಯಭಾವವನ್ನು ಸಾಧಿಸುವುದರಿಂದ ಅಸಿದ್ಧಿದೋಷಕ್ಕೆ ಅವಕಾಶವಿಲ್ಲ. ಆದ್ದರಿಂದ ಪ್ರಧಾನಕ್ಕೆ ಜಗತ್ಕರ್ತೃತ್ವವು ಉಪಪನ್ನವಾಗುವುದಿಲ್ಲ.

**ಸೂ.ರ.:– प्रागुक्तानुमानस्य कारणत्वमात्रसाधकत्वेन स्वतः कार्योन्मुखत्वासाधकत्वात् । प्रमाणान्तरस्य चाभावात् । अतो निरीश्वर-साङ्ख्यमतस्याप्रामाणिकत्वेन तद्विरोधाभावाद्युक्तं जन्मादिकारणत्व-लक्षणमिति सिद्धम् ।**

**ಅನು.:–** ಮತ್ತು ನೀವು ಹೇಳಿದ ಕಾರ್ಯತ್ವಾನುಮಾನವು ಪ್ರಧಾನಕ್ಕೆ ಕಾರಣತ್ವವನ್ನು ಮಾತ್ರ ಸಾಧಿಸುತ್ತದೆಯೇ ಹೊರತು ಸ್ವತಃ ಕಾರ್ಯೋನ್ಮುಖತ್ವಕ್ಕೆ ಸಾಧಕವಾಗುವುದಿಲ್ಲ.

ಅಂತಹ ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯನ್ನು ಸಾಧಿಸುವ ಬೇರೆ ಪ್ರಮಾಣವೂ ಯಾವುದೂ ಇಲ್ಲ. ಆದ್ದರಿಂದ ಈ ವಿಧವಾದ (ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯನ್ನು ಹೇಳುವಂತಹ) ನಿರೀಶ್ವರ ಸಾಂಖ್ಯಮತವು ಅಪ್ರಾಮಾಣಿಕವಾದ್ದರಿಂದ, ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಆ ಮತದ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 2

ಸೂ.ರ.:- एवं प्रधानस्य कारणत्वमचेतनत्वादिना निराकृत्य युक्त्यन्तरेणापि तन्निराकुर्वत्सूत्रमुपन्यस्यति ।

ಅನು.:- ಈ ರೀತಿಯಾಗಿ ಪ್ರಧಾನಕ್ಕೆ ಅಚೇತನತ್ವ - ಸ್ವತಃ ಪ್ರವೃತಿಶೂನ್ಯತ್ವ ಪ್ರಮಾಣ-ಗಳಿಂದಾಗಿ ಜಗತ್ಕಾರಣತ್ವವನ್ನು ನಿರಾಕರಿಸಿ, ಪ್ರಕೃತ ಮತ್ತೊಂದು ಯುಕ್ತಿಯಿಂದಲೂ ಸಹ ಪ್ರಧಾನಕ್ಕೆ ಜಗತ್ಕಾರಣತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-

**ॐ प्रवृत्तेश्च ॐ (२.२.२)**

ಪ್ರವೃತ್ತೇಶ್ಚ= ಅಹಂ ಕರೋಮಿ (ನಾನು ಮಾಡುತ್ತೇನೆ) ಎಂಬುದಾಗಿ ಚೇತನನಿಗೇನೇ ಪ್ರವೃತ್ತಿಯು ಕಂಡಿದ್ದರಿಂದಲೂ ಸಹ, ಪ್ರಧಾನವು ಜಗತ್ಕರ್ತೃ ಅಲ್ಲ.

ಸೂ.ರ.:- एवं च कुलालादेर्घटादिसृष्टौ व्यापारस्याहं करोमीत्यनुभवसिद्धत्वात् । किं च पटादिसृष्टेश्चेतनेच्छानुसारित्वदर्शनेन महदादिसृष्टेरपि तथाऽभ्युपगन्तव्यत्वात् । महदादिसृष्टिश्चेतनेच्छानुसारिणी सृष्टित्वाद्घट-सृष्टिवदिति मानान्तरविरोधात् । चेतनस्य प्रवृत्तिः क्रिया । सा च कृतिं विना नोपपन्ना । सा च नेच्छां विना । सा च न ज्ञानं विनेति प्रवृत्त्यादिकार्याणां स्वस्वकारणाविनाभूतत्वेन प्रवृत्त्या इच्छापूर्वकत्वसाधन-सम्भवात् । अतो जगत्कारणत्वलक्षणं युक्तमिति सिद्धम् ।

ಅನು.:- ಘಟಾದಿಗಳ ಸೃಷ್ಟಿವಿಷಯದಲ್ಲಿ ವ್ಯಾಪಾರವು ಅಹಂ ಕರೋಮಿ (ನಾನು ಮಾಡುತ್ತೇನೆ) ಎಂಬುದಾಗಿ ಕುಲಾಲಾದಿಗಳಿಗೇ ಅನುಭವಸಿದ್ಧವಾಗಿದೆಯಾದ್ದರಿಂದ, ಚೇತನಕ್ಕೆ ಕರ್ತೃತ್ವವನ್ನು ಹೇಳಬೇಕೇ ಹೊರತು ಅಚೇತನವಾದದ್ದಕ್ಕೆ ಕರ್ತೃತ್ವವನ್ನು ಹೇಳಲು ಬರುವುದಿಲ್ಲ.

ಮತ್ತು ಅಚೇತನವಾದದ್ದಕ್ಕೆ ಕರ್ತೃತ್ವವನ್ನು ಹೇಳುವುದಾದರೆ ಮುಂದೆ ಹೇಳುವ ಅನುಮಾನದ ವಿರೋಧವೂ ಬರುತ್ತದೆ.

ಮಹದಾದಿಸೃಷ್ಟಿಃ ಚೇತನೇಚ್ಛಾನುಸಾರಿಣೀ ಸೃಷ್ಟಿತ್ವಾತ್ ಘಟಸೃಷ್ಟಿವತ್ "ಘಟ-ಸೃಷ್ಟಿಯು ಚೇತನೇಚ್ಛಾನುಸಾರಿಯಾಗಿರುವುದು ಕಂಡಿದೆಯಾದ್ದರಿಂದ ಅದರಂತೆ ಮಹದಾದಿಸೃಷ್ಟಿಯೂ ಚೇತನೇಚ್ಛಾನುಸಾರಿಯಾಗಿಯೇ ಇದೆ" ಎಂದು ಸಾಧಿಸುತ್ತೇವೆ.

ಚೇತನನಿಗೆ ಪ್ರವೃತ್ತಿ ಎಂದರೆ ಕ್ರಿಯೆ. ಆ ಕ್ರಿಯೆಯು ಪ್ರಯತ್ನವಿಲ್ಲದೇ ಕೂಡುವುದಿಲ್ಲ. ಆ ಪ್ರಯತ್ನವಾದರೂ ಇಚ್ಛೆ ಇಲ್ಲದೇ ಕೂಡುವುದಿಲ್ಲ. ಆ ಇಚ್ಛೆಯಾದರೂ ಜ್ಞಾನ ಇಲ್ಲದೇ ಕೂಡುವುದಿಲ್ಲ.

ಈ ರೀತಿಯಾಗಿ ಪ್ರವೃತ್ತಿ ಮೊದಲಾದ ಕಾರ್ಯಗಳು ತಮ್ಮ ತಮ್ಮ ಕಾರಣದಿಂದ ಅವಿನಾಭೂತವಾದ್ದರಿಂದ "ಪ್ರವೃತ್ತಿಯು ಇಚ್ಛಾಪೂರ್ವಕವಾಗಿದೆ" ಎಂದು ಸಾಧಿಸಲು ಬರುತ್ತದೆ.

ಆದ್ದರಿಂದ ಪ್ರಧಾನಕ್ಕೆ ಕರ್ತೃತ್ವವನ್ನು ಹೇಳಿದರೆ ಚೇತನೇಚ್ಛಾನುಸಾರಿತ್ವಾನುಮಾನದ ವಿರೋಧ ಬರುವ ಕಾರಣ ಅಚೇತನವಾದ ಪ್ರಧಾನಕ್ಕೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಹೀಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 3

## ಆಕ್ಷೇಪ

**ಸೂ.ರ.:– नन्वचेतनयोरपि पयोऽबुनोः स्वतः प्रवृत्तिर्दृश्यते । अतस्तत्रैवाचेतनत्वहेतोर्व्यभिचारात् । अचेतनस्य स्वतः प्रवृत्तौ च स एव दृष्टान्तो भविष्यतीति प्राप्ते पराकुर्वत्सूत्रमाह ॥**

**ಅನು.:–** ಹಾಲು ಮತ್ತು ನೀರು ಅಚೇತನವಾದರೂ ಸಹ ಅವುಗಳಿಗೆ ಸ್ವತಃ ಪ್ರವೃತ್ತಿಯು ಕಂಡಿದೆ. (ಹಾಲು ತನ್ನಷ್ಟಕ್ಕೆ ತಾನೇ ಮೊಸರಾಗಿ ಪರಿಣಾಮ ಹೊಂದುತ್ತದೆ. ನೀರು ತನ್ನಷ್ಟಕ್ಕೆ ತಾನು ಹರಿಯುತ್ತದೆ.) ಹೀಗಾಗಿ ಪ್ರಧಾನಂ ನ ಸ್ವತಃ ಪ್ರವೃತ್ತಿಮತ್ ಅಚೇತನತ್ವಾತ್ ಎಂಬ ನಿಮ್ಮ ಅನುಮಾನಕ್ಕೆ ಹಾಲು–ನೀರುಗಳಲ್ಲಿಯೇ ವ್ಯಭಿಚಾರ ಬರುತ್ತದೆ (ಸ್ವತಃ ಪ್ರವೃತ್ತ್ಯಭಾವ ಎಂಬ ಸಾಧ್ಯ ಇಲ್ಲ. ಆದರೆ ಅಚೇತನತ್ವ ಹೇತು ಇರುವುದರಿಂದ ವ್ಯಭಿಚಾರ ಬರುತ್ತದೆ.)

ಆದ್ದರಿಂದ ಅಚೇತನವಾದ್ದರಿಂದ ಸ್ವತಃಪ್ರವೃತ್ತಿ ಇಲ್ಲ ಎಂದು ಹೇಳುವುದು ಸರಿಯಾಗುವುದಿಲ್ಲ. ಮತ್ತು ಅಚೇತನವಾದದ್ದಕ್ಕೂ ಸ್ವತಃ ಪ್ರವೃತ್ತಿ ಇದೆ ಎಂಬುದಕ್ಕೆ ಈ ಹಾಲು – ನೀರುಗಳೇ ದೃಷ್ಟಾಂತವಾಗುತ್ತದೆ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ पयोऽम्बुवच्चेत्तत्रापि ॐ (२.२.३)**

ಪಯೋಽಂಬುವತ್ = ಅಚೇತನವಾದ ಹಾಲು - ನೀರುಗಳಿಗೆ ಹೇಗೆ ಸ್ವತಃ ಪ್ರವೃತ್ತಿಯು ಕಂಡಿದೆಯೋ ಅದರಂತೆ ಪ್ರಧಾನವು ಅಚೇತನವಾದರೂ ಸ್ವತಃ ಪ್ರವೃತ್ತಿ ಕೂಡಲಿ ಇತಿ ಚೇತ್ = ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ. ಕುತಃ = ಯಾಕೆ? ಯತಃ = ಯಾವ ಕಾರಣ ತತ್ರಾಪಿ = ಹಾಲು - ನೀರು ಮೊದಲಾದವುಗಳಲ್ಲಿಯೂ ಸಹ ಕೊನೆಗೆ ಈಶ್ವರನಿಂದಲೇ ಪ್ರವೃತ್ತಿಯು ಉಂಟಾಗುವುದು. ನ ಸ್ವತಃ ಪ್ರವೃತ್ತಿಃ = ಹೊರತು ಸ್ವತಃ ಪ್ರವೃತ್ತಿ ಇಲ್ಲವೋ ಆ ಕಾರಣ.

**ಸೂ.ರ.:– एवं चैतस्य वाऽक्षरस्य प्रशासन इति (बृ. ५-८-९) श्रुत्या तत्रापीश्वरनिमित्तप्रवृत्तिसद्भावावगमात् तथा च पूर्ववाद्युक्त-प्रत्यनुमानदृष्टान्ते पयोंऽब्वादौ सिद्धान्त्यभिमतसाध्यस्यैव सत्वान्न तदनु-मानस्य सत्प्रतिपक्षता न वा व्यभिचारः । अतो जन्मादिकारणत्वलक्षणं युक्तमिति सिद्धम् ।**

**ಅನು.:–** "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ, ಯಾಶ್ಚ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನು" (ಬೃ.ಉ. 5.8.9) "ಏತೇನ ಹ ವಾವ ಪಯೋ ಮಂಡಂ ಭವತಿ"

ಇತ್ಯಾದಿ ಶ್ರುತಿಗಳು ತಿಳಿಸುತ್ತಿರುವಂತೆ ನೀರು ಹರಿಯಬೇಕಾದರೆ, ಹಾಲು ಮೊಸರಾಗಿ ಪರಿವರ್ತಿತವಾಗಬೇಕಾದರೆ ಅಲ್ಲಿಯೂ ಈಶ್ವರನಿಂದಲೇ ಪ್ರವೃತ್ತಿ ಆಗುತ್ತದೆಯೇ ಹೊರತು ಹಾಲು-ನೀರುಗಳಲ್ಲಿ ಸ್ವತಃ ಪ್ರವೃತ್ತಿ ಎನ್ನುವುದು ಇಲ್ಲ ಎಂದು ತಿಳಿದುಬರುತ್ತದೆ.

ಆದ್ದರಿಂದ ನಿಮ್ಮ ಅನುಮಾನಕ್ಕೆ ನಾವು ಮಾಡಿದ ಪ್ರತ್ಯನುಮಾನದಲ್ಲಿ (ಅಚೇತನ-ತ್ವಾನುಮಾನದಲ್ಲಿ) ಹಾಲು-ನೀರುಗಳು ದೃಷ್ಟಾಂತವಾಗುವುದರಿಂದ (ಸಿದ್ಧಾಂತಿಗಳಿಗೆ ಅಭಿಮತವಾದ ಸಾಧ್ಯವು ಹಾಲು-ನೀರುಗಳಲ್ಲಿ ಇರುವುದರಿಂದ) ಸತ್ಪ್ರತಿಪಕ್ಷತಾ ದೋಷವಾಗಲೀ, ವ್ಯಭಿಚಾರ ದೋಷವಾಗಲೀ ಬರುವುದಿಲ್ಲ. ಆದ್ದರಿಂದ ಪ್ರಧಾನಕ್ಕೆ ಜಗತ್ಕರ್ತೃತ್ವವು ಉಪಪನ್ನವಾಗದ ಕಾರಣ, ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 4

## ಆಕ್ಷೇಪ

**ಸೂ.ರ.:– ननु श्रुतिसामर्थ्येन पयोंऽबुनोः प्रवृत्तेरीश्वराधीनतया तत्र**

**व्यभिचाराभावेऽप्ययस्कान्तशिलादिरूपाचेतनान्तरस्य प्रवृत्तौ सिद्धायां भविष्यति तत्र व्यभिचारः । सेत्स्यति च प्रधानस्य स्वतः प्रवृत्तौ साध्यायामयस्कान्तादिकमेव निदर्शनम् । उदाहरणनियमस्यानाश्रयणीयत्वादित्याशङ्कामपाकुर्वत्सूत्रं पठति ॥**

**ಅನು.:–** ಏತಸ್ಯ ವಾऽಕ್ಷರಸ್ಯ ... ಎಂಬ ಶ್ರುತಿಸಾಮರ್ಥ್ಯದಿಂದಾಗಿ ಹಾಲು-ನೀರುಗಳ ಪ್ರವೃತ್ತಿಯೂ ಈಶ್ವರಾಧೀನವಾದ್ದರಿಂದ ಅಲ್ಲಿ ಅಚೇನತ್ವಹೇತುವಿಗೆ ವ್ಯಭಿಚಾರ ಬರದಿದ್ದರೂ ಸಹ, ಅಯಸ್ಕಾಂತಶಿಲಾದಿರೂಪವಾದ ಅಚೇತನಪದಾರ್ಥಗಳಲ್ಲಿ ಸ್ವತಃ ಪ್ರವೃತ್ತಿಯು ಕಾಣುವುದರಿಂದ ಅಚೇತನತ್ವಹೇತುವಿಗೆ ಆ ಅಯಸ್ಕಾಂತ ಶಿಲಾದಿರೂಪ ಪದಾರ್ಥಗಳಲ್ಲಿ ವ್ಯಭಿಚಾರವು ಬಂದೇ ಬರುತ್ತದೆ.

ಮತ್ತು "ಅಚೇತನಕ್ಕೆ ಸ್ವತಃಪ್ರವೃತ್ತಿ ಇದೆ" ಎಂಬ ವಿಷಯಕ್ಕೆ ಅಯಸ್ಕಾಂತಾದಿಗಳು ದೃಷ್ಟಾಂತವಾಗುತ್ತವೆ. ಆದ್ದರಿಂದ ಅಯಸ್ಕಾಂತಾದಿಗಳು ಹೇಗೆ ಸ್ವತಃ ಪ್ರವೃತ್ತಿ ಉಳ್ಳದ್ದಾಗಿವೆಯೋ ಆದರಂತೆ ಪ್ರಧಾನವೂ ಸ್ವತಃಪ್ರವೃತ್ತಿ ಉಳ್ಳದ್ದಾಗಬಹುದು ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರ ಹೇಳುತ್ತಾರೆ –

**ॐ व्यतिरेकानवस्थितेश्चानपेक्षत्वात् ॐ (२.२.४)**

ವ್ಯತಿರೇಕಾನವಸ್ಥಿತೇಃ = ನ ಋತ (ಋ. 10-113-9) ಎಂಬ ಶ್ರುತಿಯಿಂದ ಈಶ್ವರನ ಪ್ರೇರಣೆ ಇಲ್ಲದೇ ಯಾವ ಕರ್ಮವೂ ನಡೆಯುವುದಿಲ್ಲ ಎಂದು ತಿಳಿಯುವುದರಿಂದ, ಅಂತೆಯೇ "ಅಚೇತನಸ್ಯೈವ ಸ್ವತಃ ಪ್ರವೃತ್ತಿಃ" (ಅಚೇತನಕ್ಕೇನೇ ಸ್ವತಃ ಪ್ರವೃತ್ತಿ ಇದೆ) ಎಂಬ ನಿರೀಶ್ವರಸಾಂಖ್ಯಮತವು ಅಪ್ರಾಮಾಣಿಕವಾದ್ದರಿಂದ, ಅತ ಏವ ಆದ್ದರಿಂದಲೇ ಅನಪೇಕ್ಷತ್ವಾತ್ = ಸಜ್ಜನರಿಂದ ಅನಾದರಣೀಯವಾದ್ದರಿಂದ ವಿಷ್ಣುವಿನ ಜಗತ್ಕರ್ತೃತ್ವಕ್ಕೆ ಆ ಸಾಂಖ್ಯಮತದ ವಿರೋಧ ಬರುವುದಿಲ್ಲ.

**ಸೂ.ರ.:– एवं च न ऋते त्वत्क्रियत इति श्रुत्या सर्वस्यापीश्वराधीनत्वावगमात् । ईश्वरव्यतिरेकेण तं विना कस्यापि कर्मणोऽनवस्थितिश्रुतेरचेतनत्वहेतोः कुत्रापि व्यभिचाराभावात् । पूर्ववाद्युक्तानुमाने दृष्टान्तालाभात् । साङ्ख्यपरिकल्पितानुमानस्याप्रामाणिकत्वेन प्रमाणविरुद्धत्वेन च महाजनपरिगृहीतत्वाभावान्नानुमानपरिकल्पितं प्रधानं**

जगत्कर्तृ । अतो निरीश्वरसाङ्ख्यमतस्याप्रामाणिकत्वेन तद्विरोधाभावाद्युक्तं जगत्कारणत्वलक्षणमिति सिद्धम् ॥

**ಅನು.:–** "ನ ಋತೇ ತ್ವತ್ಕ್ರಿಯತೇ ಕಿಂಚನಾರೇ" (ಋ.ಸಂ. 10-113-9) ಎಂಬ ಶ್ರುತಿಯಿಂದ ಎಲ್ಲವೂ ಈಶ್ವರಾಧೀನವಾಗಿದೆ ಎಂದು ತಿಳಿಯುವುದರಿಂದ, ಈಶ್ವರನ ಪ್ರೇರಣೆ ಇಲ್ಲದೇ ಯಾವ ಕರ್ಮವೂ ನಡೆಯುವುದಿಲ್ಲವೆಂದು ಶ್ರುತವಾಗುತ್ತಿರುವುದರಿಂದ ನಮ್ಮ ಅಚೇತನತ್ವ- ಹೇತುವಿಗೆ ಎಲ್ಲಿಯೂ ವ್ಯಭಿಚಾರ ಬರುವುದಿಲ್ಲ.

ಮತ್ತು ಅವರು ಹೇಳಿದ ಅನುಮಾನದಲ್ಲಿ (ಅಚೇತನಕ್ಕೆ ಸ್ವತಃ ಪ್ರವೃತ್ತಿ ಇದೆ ಸಾಧಿಸುವ ಅನುಮಾನದಲ್ಲಿ) ದೃಷ್ಟಾಂತವೂ ಯಾವುದೂ ಸಿಗುವುದಿಲ್ಲ.

ಈ ವಿಧವಾದ ಸಾಂಖ್ಯಪರಿಕಲ್ಪಿತವಾದ ಅನುಮಾನವು ಅಪ್ರಾಮಾಣಿಕವಾದ್ದರಿಂದ ಮತ್ತು ನ ಋತೇ ಇತ್ಯಾದಿ ಪ್ರಮಾಣವಿರುದ್ಧವೂ ಆದ್ದರಿಂದ ಮಹಾಜನ (ಸಜ್ಜನ) ಪರಿಗೃಹೀತವಾಗಿಲ್ಲವಾದ್ದರಿಂದ, ಸಾಂಖ್ಯಾನುಮಾನಕಲ್ಪಿತವಾದ ಪ್ರಧಾನವು ಜಗತ್ಕರ್ತೃ ಆಗುವುದಿಲ್ಲ.

ಹೀಗೆ ನಿರೀಶ್ವರಸಾಂಖ್ಯಮತವು ಅಪ್ರಾಮಾಣಿಕವಾದ್ದರಿಂದ, ವಿಷ್ಣುವಿನ ಜಗತ್ಕರ್ತೃತ್ವಕ್ಕೆ ಆ ನಿರೀಶ್ವರಸಾಂಖ್ಯಮತದ ವಿರೋಧ ಬರುವುದಿಲ್ಲವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ರಚನಾನುಪಪತ್ತ್ಯಧಿಕರಣವು ಮುಗಿಯಿತು.

ಅಧಿಕರಣ – 2

## ಅನ್ಯತ್ರಾಭಾವಾಧಿಕರಣ

### ಸಂಗತಿ

**ಸೂ.ರ.:– अत्र सेश्वरसाङ्ख्यमतं निराक्रियते ।**

**ಅನು.:–** ನಿರೀಶ್ವರಸಾಂಖ್ಯಮತವನ್ನು ನಿರಾಕರಿಸಿ ಪ್ರಕೃತ ಸೇಶ್ವರಸಾಂಖ್ಯಮತವನ್ನು ನಿರಾಕರಿಸುತ್ತಾರೆ ಈ ಎರಡನೇ ಅನ್ಯತ್ರಾಭಾವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नेश्वरस्य स्वातन्त्र्येण कर्तृत्वं युक्तम् । परमेश्वरानुगृहीतप्रधानादेव । पर्जन्यानुगृहीतपृथिव्या अङ्करोत्पत्तिवज्जगदुत्पत्तिसम्भवात् । अतो नेश्वरस्य स्वातंत्र्येण जगत्काणत्वलक्षणं युक्तमिति प्राप्ते सूत्रमाह ॥**

**ಅನು.:–** ಈಶ್ವರನಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ ಪರ್ಜನ್ಯನಿಂದ ಅನುಗೃಹೀತವಾದ ಪೃಥಿವಿಯಿಂದ ಅಂಕುರೋತ್ಪತ್ತಿಯು ಹೇಗೆ ಆಗುವುದೋ ಅದರಂತೆ ಪರಮಾತ್ಮನಿಂದ ಅನುಗೃಹೀತವಾದ ಪ್ರಧಾನದಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾದ್ದರಿಂದ ಪ್ರಧಾನಕ್ಕೆ ಕಾರಣತ್ವವನ್ನು ಒಪ್ಪಬೇಕು. ಹೊರತು ಈಶ್ವರನಿಗೆ ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಆದ್ದರಿಂದ ಈಶ್ವರನಿಗೆ ಹೇಳಿದ ಸ್ವಾತಂತ್ರ್ಯೇಣ ಜಗತ್ಕಾರಣತ್ವಲಕ್ಷಣವು ಸರಿಯಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अन्यत्राभावाच्च न तृणादिवत् ॐ (२.२.५)**

ತೃಣಾದಿವತ್ = ಪೃಥಿವೀಜನ್ಯವಾದ ತೃಣಾದಿಕಾರ್ಯದಲ್ಲಿ ಪರ್ಜನ್ಯವು ಹೇಗೆ ಸಹಕಾರಿ ಮಾತ್ರ ಆಗಿದೆಯೋ ಅದರಂತೆ ಪ್ರಕೃತಿಜನ್ಯವಾಗುವ ಮಹದಾದಿಕಾರ್ಯದಲ್ಲಿಯೂ ಸಹ ಈಶ್ವರನು ಅನುಗ್ರಾಹಕನು ಅಷ್ಟೇ ಆಗಿದ್ದಾನೆ. ಹೊರತು ನ ಸ್ವತಂತ್ರಃ =

ಈಶ್ವರನು ಸ್ವತಂತ್ರಕಾರಣನಲ್ಲ ಇತಿ ಸೇಶ್ವರಸಾಂಖ್ಯಮತೋಽಪಿ ನ = ಎಂಬ ಸೇಶ್ವರ-ಸಾಂಖ್ಯಮತವೂ ಸರಿಯಲ್ಲ.

ಕುತಃ = ಏಕೆಂದರೆ, ಅನ್ಯತ್ರಾಭಾವಾಚ್ಚ = ಈಶ್ವರನನ್ನು ಬಿಟ್ಟು ಉಳಿದ ವಸ್ತುಗಳ ವಿಷಯದಲ್ಲಿ ತತ್ಪ್ರೇರಣಾಂ ವಿನಾ = ಈಶ್ವರನ ಪ್ರೇರಣೆ ಇಲ್ಲದೇ ಜಗತೋಽಭಾವಾತ್ = ಯಾವ ವಸ್ತುವೂ ಪ್ರವೃತ್ತವಾಗುವುದಿಲ್ಲವಾದ್ದರಿಂದ, ಮತ್ತು ಈಶ್ವರನು ಪ್ರಕೃತಿಗೆ ಸತ್ತಾದಿಪ್ರದನಾದ್ದರಿಂದಲೂ ಸಹ.

## ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । स्वातन्त्र्येण तत्प्रेरणामन्तरेण कस्यापि वस्तुनोऽभावात् । मूलकारणभूतायाः प्रकृतेरपि तदधीनसत्ताकत्वाच्च । अतः सेश्वरसाङ्ख्यमतस्याप्रामाणिकत्वेनाविरोधकत्वाद्युक्तं जगत्कारणत्वलक्षणमिति सिद्धम् ।**

**ಅನು.:–** ವಿಷ್ಣುವಿಗೆ ಸ್ವಾತಂತ್ರ್ಯೇಣ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ಸ್ವತಂತ್ರವಾಗಿ, ವಿಷ್ಣುವಿನ ಪ್ರೇರಣೆ ಇಲ್ಲದೇ ಯಾವ ವಸ್ತುವೂ ಪ್ರವೃತ್ತವಾಗುವುದಿಲ್ಲ. ಮತ್ತು ಮೂಲಕಾರಣವಾಗಿರುವ (ಪ್ರಕೃತಿಗೂ ಸಹ ಭಗವಂತನೇ ಸತ್ತಾದಿಗಳನ್ನು ಕೊಡುವವನಾಗಿದ್ದಾನೆ) ಪ್ರಕೃತಿಯೂ ಸಹ ಭಗವದಧೀನಸತ್ತಾ ಉಳ್ಳದ್ದಾಗಿದೆ.

ಹೀಗಾಗಿ ಪ್ರಧಾನದಿಂದ ಜಗತ್ತಿನ ಉತ್ಪತ್ತಿ ಆದರೂ ಸಹ, ಭಗವಂತನ ಪ್ರೇರಣೆ-ಯಿಂದಲೇ ಅಲ್ಲಿ ಉತ್ಪತ್ತಿಕ್ರಿಯೆಯು ನಡೆಯಬೇಕಾಗಿದೆಯಾದ್ದರಿಂದ ವಿಷ್ಣುವೇ ಸ್ವತಂತ್ರ ಜಗತ್ಕಾರಣನಾಗಿದ್ದಾನೆ. ಆದ್ದರಿಂದ ಸೇಶ್ವರಸಾಂಖ್ಯಮತವು ಅಪ್ರಾಮಾಣಿಕವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವಕ್ಕೆ ಸೇಶ್ವರಸಾಂಖ್ಯಮತದ ವಿರೋಧ ಬರುವುದಿಲ್ಲವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಸ್ವಾತಂತ್ರ್ಯೇಣ ಕರ್ತೃತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನ್ಯತ್ರಾಭಾವಾಧಿಕರಣವು ಮುಗಿಯಿತು.

ಅಧಿಕರಣ – 3

# ಅಭ್ಯುಪಗಮಾಧಿಕರಣ

## ಸಂಗತಿ

**ಸೂ.ರ.:– अत्र लोकायतपक्षो निराक्रियते ।**

**ಅನು.:–** ಸಾಙ್ಖ್ಯಮತವನ್ನು ನಿರಾಕರಿಸಿ ಪ್ರಕೃತ ಚಾರ್ವಾಕಮತವನ್ನು ನಿರಾಕರಿಸುತ್ತಾರೆ ಈ ಮೂರನೇ ಅಭ್ಯುಪಗಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु नेश्वरस्य स्वातंत्र्येण कर्तृत्वं युक्तम् । अन्तरेणापीश्वरं पूर्वस्मात्पूर्वस्मादुत्तरोत्तरोत्पत्तिसम्भवात् । चैतन्योत्पत्तेरपि मदिरोत्पत्तिवत्स्वभावादेवोपपत्तेः । न च श्रुत्यादिबाधः । तस्या अप्रामाण्यात् । न च तस्या अप्रामाण्ये धर्माद्यसिद्धिप्रसङ्गः । अतींद्रियवस्तुनोऽभावेनेष्टत्वात् । अत इश्वराभावान्नेश्वरस्य जगत्कारणत्वलक्षणं युक्तमिति प्राप्ते सूत्रं पठति ।**

**ಅನು.:–** ಈಶ್ವರನಿಗೆ ಸ್ವಾತಂತ್ರ್ಯೇಣ ಕರ್ತೃತ್ವವು ಯುಕ್ತವಾಗುವುದಿಲ್ಲ. ಏಕೆಂದರೆ - ಈಶ್ವರನು ಇಲ್ಲದೇ ಹೋದರೂ ಸಹ ಪೂರ್ವಪೂರ್ವ ವಸ್ತುಗಳಿಂದ ಉತ್ತರ ಉತ್ತರ ಪದಾರ್ಥಗಳ ಉತ್ಪತ್ತಿಯನ್ನು ಅಂಗೀಕರಿಸಬಹುದಾಗಿದೆ. ಇನ್ನು ಚೈತನ್ಯದ ಉತ್ಪತ್ತಿ ಹೇಗೆ? ಎಂದರೆ, ಅನೇಕ ಧಾತುಗಳು ಮಿಶ್ರಿತವಾಗಿ ಹೇಗೆ ಮದ್ಯದ ಉತ್ಪತ್ತಿ ಆಗುವುದೋ ಅದರಂತೆ ಅನೇಕ ಧಾತುಗಳು ಸೇರಿ ಸ್ವಾಭಾವಿಕವಾಗಿಯೇ ಚೈತನ್ಯದ ಉತ್ಪತ್ತಿಯು ಆಗುತ್ತದೆ.

ಹೀಗೆ ಸ್ವಾಭಾವಿಕವಾಗಿ ಉತ್ಪತ್ತಿಯನ್ನು ಅಂಗೀಕರಿಸಿದರೆ, ಭಗವಂತನಿಂದ ಉತ್ಪತ್ತಿಯನ್ನು ಹೇಳುವ ಶ್ರುತ್ಯಾದಿಗಳ (ವಿರೋಧ) ಬಾಧ ಬರುತ್ತದೆಯಲ್ಲ? ಎಂಬ ಶಂಕೆಯು ಸರಿಯಲ್ಲ. ಕಾರಣ - ಆ ಶ್ರುತ್ಯಾದಿಗಳೇ ಮೊದಲು ಅಪ್ರಮಾಣವಾಗಿವೆ. ಪ್ರತ್ಯಕ್ಷ ಒಂದೇ ಪ್ರಮಾಣ. ಪ್ರತ್ಯಕ್ಷ ಬಿಟ್ಟು ಉಳಿದ ಯಾವ ಅನುಮಾನ-ಆಗಮಗಳೂ ಪ್ರಮಾಣವಲ್ಲ.

ಹಾಗಾದರೆ ಶ್ರುತಿಗೇ ಅಪ್ರಾಮಾಣ್ಯವನ್ನು ಹೇಳಿಬಿಟ್ಟರೆ, ಆಗಮದಿಂದ ಮಾತ್ರ ಸಿದ್ಧವಾಗಬೇಕಾದ ಧರ್ಮ-ಅಧರ್ಮಾದಿಗಳು ಅಸಿದ್ಧವಾಗಬೇಕಾಗುತ್ತದೆಯಲ್ಲವೇ?

ಎಂದರೆ, ಅದು ಸರಿಯಲ್ಲ. ಕಾರಣ-ನಮ್ಮ (ಚಾರ್ವಾಕರ) ಸಿದ್ಧಾಂತದಲ್ಲಿ ಅತೀಂದ್ರಿಯ-ವಾದ ವಸ್ತುವೇ ಯಾವುದೂ ಇಲ್ಲವಾದ್ದರಿಂದ ಧರ್ಮಾದ್ಯಸಿದ್ಧಿಯು ಇಷ್ಟವೇ ಆಗಿದೆ.

ಆದ್ದರಿಂದ ಅತೀಂದ್ರಿಯನಾದ ಈಶ್ವರನೇ ಇಲ್ಲವಾದ್ದರಿಂದ ಆ ಈಶ್ವರನಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ अभ्युपगमेऽप्यर्थाभावात् ॐ (२.२.६)

(ನ ಎನ್ನುವುದನ್ನು ಅನುವರ್ತನೆ ಮಾಡಿಕೊಳ್ಳಬೇಕು.) ಅನಭ್ಯುಪಗಮೇಽಪಿ ಚಾರ್ವಾಕೈಃ ಸ್ವಶಾಸ್ತ್ರಸ್ಯ ಸಿದ್ಧಾಂತತ್ವಾನಭ್ಯುಪಗಮೇ ಸಿದ್ಧಮಸ್ಮದಿಷ್ಟಮ್ = ಚಾರ್ವಾಕರು ತಮ್ಮ ಶಾಸ್ತ್ರಕ್ಕೆ ಸಿದ್ಧಾಂತತ್ವವನ್ನು ಅಂಗೀಕರಿಸದೇ ಹೋದರೆ ನಮ್ಮ ಇಷ್ಟಾರ್ಥವು ಸಿದ್ಧವಾಗುತ್ತದೆ. ಅಭ್ಯುಪಗಮೇಽಪಿ = ಇನ್ನು ತಮ್ಮ ಶಾಸ್ತ್ರಕ್ಕೆ ಸಿದ್ಧಾಂತತ್ವವನ್ನು ಅಂಗೀಕರಿಸಿದರೂ ಸಹ ಅರ್ಥಾಭಾವಾತ್ = ಸಿದ್ಧಾಂತತ್ವಕ್ಕೆ ವ್ಯಾಪಕವಾದ ಅರ್ಥಶಬ್ದ-ಪ್ರತಿಪಾದ್ಯವಾದ ವಿಷಯ-ಪ್ರಯೋಜನಗಳು ಅಸತ್ (ಇಲ್ಲ) ಎಂದು ಅಂಗೀಕರಿಸಿದ್ದರಿಂದ ಸ್ವವ್ಯಾಘಾತವು ಬರುತ್ತದೆ. ಆದ್ದರಿಂದ ತತ್ಪಕ್ಷೋಽಪಿ ನ ಯುಕ್ತಃ = ಚಾರ್ವಾಕರ ಆ ಪಕ್ಷವೂ ಸರಿಯಲ್ಲ.

### ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । चार्वाकसमयस्य विषयप्रयोजनादिशून्यत्वेनाप्रमाणत्वेन विरोधाभावात् । तथाहि । न तावत्तत्समयस्यातीन्द्रियो विषयः । तदभावात् । नाप्यैंद्रियकम् । तस्य प्रत्यक्षसिद्धत्वेन शास्त्रानपेक्षणात् । नापि स्वर्गापवर्गादि श्रोतृफलम् । तदलाभात् । नापि दृष्टं धनादि । तस्य कृष्यादिलघूपायसाध्यत्वात् । नापि प्रणेतुः प्रयोजनम् । न च धर्माद्यभावप्रतिपादनद्वारा लोकोपकारः प्रयोजनमिति वाच्यम् । धर्माद्यभावज्ञाने परस्परहिंसादिनाऽपकारस्यैव प्राप्तेः । नाप्युपकारः स्वतः प्रयोजनम् । सुखदुःखावाप्तिहानिरूपत्वा-भावात् । न वा तेनापि किञ्चित्साध्यं प्रयोजनम् । एवंविधेऽधिकारी**

**दूरोत्सारितः । तदभावादेव सम्बन्धोऽपि । अतश्चार्वाकसमयस्या-प्रामाणिकत्वायुक्तं लक्षणसूत्रमिति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ಚಾರ್ವಾಕರ ಮತವು ವಿಷಯ-ಪ್ರಯೋಜನಾದಿಶೂನ್ಯವಾದ್ದರಿಂದ ಅಪ್ರಮಾಣವಾಗಿದೆ-ಯಾದ್ದರಿಂದ ಆ ಚಾರ್ವಾಕಮತದ ವಿರೋಧ ಬರುವುದಿಲ್ಲ.

ಚಾರ್ವಾಕಮತವು ವಿಷಯ-ಪ್ರಯೋಜನಾದಿಶೂನ್ಯ ಹೇಗೆ? ಎಂದರೆ, ಅದನ್ನು ಹೀಗೆ ತೋರಿಸಬಹುದು. ಚಾರ್ವಾಕಮತಕ್ಕೆ ಅತೀಂದ್ರಿಯವಾದದ್ದು ವಿಷಯವಾಗಲು ಸಾಧ್ಯವಿಲ್ಲ. ಕಾರಣ – ಅವರ ಸಿದ್ಧಾಂತದಲ್ಲಿ ಅತೀಂದ್ರಿಯವಾದ ವಸ್ತುವೇ ಇಲ್ಲ. ಇನ್ನು ಐಂದ್ರಿಯಕ-ವಾದದ್ದೂ ವಿಷಯವಾಗಲು ಸಾಧ್ಯವಿಲ್ಲ. ಕಾರಣ – ಆ ಐಂದ್ರಿಯಕವಾದ ವಸ್ತುವು ಪ್ರತ್ಯಕ್ಷದಿಂದಲೇ ಸಿದ್ಧವಾಗಿರುವುದರಿಂದ ಅದಕ್ಕೆ ಶಾಸ್ತ್ರದ ಅಪೇಕ್ಷೆ ಇಲ್ಲ.

ಮತ್ತು ಶ್ರೋತೃಗಳಿಗೆ ಸ್ವರ್ಗ-ಮೋಕ್ಷಾದಿಗಳು ಫಲವಾಗಲು ಸಾಧ್ಯವಿಲ್ಲ. ಕಾರಣ – ನಿಮ್ಮ ಸಿದ್ಧಾಂತದಿಂದ ಆ ಸ್ವರ್ಗ-ಮೋಕ್ಷಾದಿಗಳು ಸಿಗುವುದಿಲ್ಲ. ಇನ್ನು ದೃಷ್ಟವಾದ ಧನಾದಿಗಳೂ ಫಲವಾಗಲು ಸಾಧ್ಯವಿಲ್ಲ. ಕಾರಣ – ಆ ದೃಷ್ಟಫಲವಾದ ಧನಾದಿಗಳು ಕೃಷಿ ಮೊದಲಾದ ಲಘು ಉಪಾಯದಿಂದ ಸಾಧ್ಯವಾಗಿವೆ. ಹೀಗಾಗಿ ಅದಕ್ಕೆ ಶಾಸ್ತ್ರದ ಅಪೇಕ್ಷೆ ಇಲ್ಲ.

ಹಾಗೂ ಶಾಸ್ತ್ರವನ್ನು ರಚಿಸುವ ವ್ಯಕ್ತಿಗೂ ಯಾವುದೇ ಪ್ರಯೋಜನ ಇಲ್ಲ. ಪ್ರಯೋಜನ ಇಲ್ಲ ಎಂದು ಏಕೆ ಹೇಳುತ್ತೀರಿ? ಧರ್ಮಾದಿಗಳು ಇಲ್ಲ ಎಂದು ಪ್ರತಿಪಾದಿಸುವ ಮೂಲಕ ಲೋಕಕ್ಕೆ ಮಾಡಿದ ಉಪಕಾರವೇ ಪ್ರಯೋಜನವಾಗಿದೆಯಲ್ಲ ಎಂದರೆ, ಅದು ಸರಿಯಲ್ಲ. ಹಾಗೊಂದುವೇಳೆ ಧರ್ಮಾದಿಗಳು ಇಲ್ಲ ಎಂದೇ ಹೇಳಿಬಿಟ್ಟರೆ ಜನರಲ್ಲಿ ಪರಸ್ಪರ ಹಿಂಸಾದಿಗಳೇ ಉಂಟಾಗಿ ಅಪಕಾರವೇ ಪ್ರಾಪ್ತವಾಗುತ್ತದೆ.

ಅಲ್ಲದೇ ಈ ವಿಧವಾದ ಉಪಕಾರವು ಸ್ವತಃ ಪ್ರಯೋಜನವಾಗುವುದಿಲ್ಲ. ಏಕೆಂದರೆ-ಪ್ರಯೋಜನವು ಸುಖದ ಅವಾಪ್ತಿ, ದುಃಖಹಾನಿ ರೂಪವಾಗಿರುತ್ತದೆ. ಪ್ರಕೃತ ಉಪಕಾರವು ಸುಖದ ಅವಾಪ್ತಿರೂಪವೂ ಆಗಿಲ್ಲ, ದುಃಖಹಾನಿರೂಪವೂ ಆಗಿಲ್ಲ. ಅಥವಾ ಈ ಉಪಕಾರದಿಂದ ಯಾವ ಪ್ರಯೋಜನವೂ ಸಿಗುವುದೂ ಇಲ್ಲ.

ಈ ರೀತಿಯಾಗಿ ವಿಷಯ-ಪ್ರಯೋಜನಗಳು ಇಲ್ಲ ಎಂದಮೇಲೆ ಅಧಿಕಾರಿಯು ದೂರದಿಂದಲೇ ಉತ್ಸಾರಿತನಾಗುತ್ತಾನೆ. ಅಧಿಕಾರಿ ಇಲ್ಲದಿದ್ದ ಮೇಲೆ ಸಂಬಂಧವೂ ದೂರೋತ್ಸಾರಿತವಾಗುತ್ತದೆ.

ಅಂದಮೇಲೆ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧ ಈ ನಾಲ್ಕು ಇಲ್ಲದ ಕಾರಣ ಚಾರ್ವಾಕಮತವು ಅಪ್ರಾಮಾಣಿಕವಾಯಿತು. ಅಂತಹ ಅಪ್ರಾಮಾಣಿಕವಾದ ಚಾರ್ವಾಕಮತದ ವಿರೋಧ ಬಾರದ ಕಾರಣ, ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವ ಲಕ್ಷಣವು ಸೂಕ್ತವೇ ಆಗಿದೆ ಎಂದು ಸಿದ್ಧವಾಯಿತು.

**ಅಭ್ಯುಪಗಮಾಧಿಕರಣವು ಮುಗಿಯಿತು.**

*ಅಧಿಕರಣ – 4*

# ಪುರುಷಾಶ್ಮಾಧಿಕರಣ

## ಸಂಗತಿ

**ಸೂ.ರ.:– अत्र पुरुषोपसर्जनप्रकृतिकर्तृवादो निराक्रियते ।**

**ಅನು.:–** ಪುರುಷೋಪಸರ್ಜನಭೂತವಾದ ಪ್ರಕೃತಿಗೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಏಕದೇಶಮತವನ್ನು ನಿರಾಕರಿಸುತ್ತಾರೆ ನಾಲ್ಕನೇ ಈ ಪುರುಷಾಶ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न हरेर्जगत्कारणत्वं युक्तम् । चेतनोपसर्जनशरीरस्याश्मानयनादिकर्तृत्वदर्शनेन पुरुषोपसर्जनप्रधानेनैव जगदुत्पत्तिसम्भवात् । प्रधानं चेतनसन्निधानात्स्वतः प्रवृत्तिमत् अचेतनत्वात् शरीरवदिति मानसद्भावात् । अत ईश्वरस्यैवाभावाज्जगत्कारणत्वलक्षणं तस्यैवेत्येतद्दूरोत्सारितमिति प्राप्ते सूत्रमाह ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ –

"ಪ್ರಧಾನಂ ಚೇತನಸನ್ನಿಧಾನಾತ್ಸ್ವತಃ ಪ್ರವೃತ್ತಿಮತ್ ಅಚೇತನತ್ವಾತ್ ಶರೀರವತ್"

**दूरोत्सारितः । तदभावादेव सम्बन्धोऽपि । अतश्चार्वाकसमयस्याप्रामाणिकत्वाद्युक्तं लक्षणसूत्रमिति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ಚಾರ್ವಾಕರ ಮತವು ವಿಷಯ-ಪ್ರಯೋಜನಾದಿಶೂನ್ಯವಾದ್ದರಿಂದ ಅಪ್ರಮಾಣವಾಗಿದೆಯಾದ್ದರಿಂದ ಆ ಚಾರ್ವಾಕಮತದ ವಿರೋಧ ಬರುವುದಿಲ್ಲ.

ಚಾರ್ವಾಕಮತವು ವಿಷಯ-ಪ್ರಯೋಜನಾದಿಶೂನ್ಯ ಹೇಗೆ? ಎಂದರೆ, ಅದನ್ನು ಹೀಗೆ ತೋರಿಸಬಹುದು. ಚಾರ್ವಾಕಮತಕ್ಕೆ ಅತೀಂದ್ರಿಯವಾದದ್ದು ವಿಷಯವಾಗಲು ಸಾಧ್ಯವಿಲ್ಲ. ಕಾರಣ – ಅವರ ಸಿದ್ಧಾಂತದಲ್ಲಿ ಅತೀಂದ್ರಿಯವಾದ ವಸ್ತುವೇ ಇಲ್ಲ. ಇನ್ನು ಐಂದ್ರಿಯಕವಾದದ್ದೂ ವಿಷಯವಾಗಲು ಸಾಧ್ಯವಿಲ್ಲ. ಕಾರಣ – ಆ ಐಂದ್ರಿಯಕವಾದ ವಸ್ತುವು ಪ್ರತ್ಯಕ್ಷದಿಂದಲೇ ಸಿದ್ಧವಾಗಿರುವುದರಿಂದ ಅದಕ್ಕೆ ಶಾಸ್ತ್ರದ ಅಪೇಕ್ಷೆ ಇಲ್ಲ.

ಮತ್ತು ಶ್ರೋತೃಗಳಿಗೆ ಸ್ವರ್ಗ-ಮೋಕ್ಷಾದಿಗಳು ಫಲವಾಗಲು ಸಾಧ್ಯವಿಲ್ಲ. ಕಾರಣ - ನಿಮ್ಮ ಸಿದ್ಧಾಂತದಿಂದ ಆ ಸ್ವರ್ಗ-ಮೋಕ್ಷಾದಿಗಳು ಸಿಗುವುದಿಲ್ಲ. ಇನ್ನು ದೃಷ್ಟವಾದ ಧನಾದಿಗಳೂ ಫಲವಾಗಲು ಸಾಧ್ಯವಿಲ್ಲ. ಕಾರಣ – ಆ ದೃಷ್ಟಫಲವಾದ ಧನಾದಿಗಳು ಕೃಷಿ ಮೊದಲಾದ ಲಘು ಉಪಾಯದಿಂದ ಸಾಧ್ಯವಾಗಿವೆ. ಹೀಗಾಗಿ ಅದಕ್ಕೆ ಶಾಸ್ತ್ರದ ಅಪೇಕ್ಷೆ ಇಲ್ಲ.

ಹಾಗೂ ಶಾಸ್ತ್ರವನ್ನು ರಚಿಸುವ ವ್ಯಕ್ತಿಗೂ ಯಾವುದೇ ಪ್ರಯೋಜನ ಇಲ್ಲ. ಪ್ರಯೋಜನ ಇಲ್ಲ ಎಂದು ಏಕೆ ಹೇಳುತ್ತೀರಿ? ಧರ್ಮಾದಿಗಳು ಇಲ್ಲ ಎಂದು ಪ್ರತಿಪಾದಿಸುವ ಮೂಲಕ ಲೋಕಕ್ಕೆ ಮಾಡಿದ ಉಪಕಾರವೇ ಪ್ರಯೋಜನವಾಗಿದೆಯಲ್ಲ ಎಂದರೆ, ಅದು ಸರಿಯಲ್ಲ. ಹಾಗೊಂದುವೇಳೆ ಧರ್ಮಾದಿಗಳು ಇಲ್ಲ ಎಂದೇ ಹೇಳಿಬಿಟ್ಟರೆ ಜನರಲ್ಲಿ ಪರಸ್ಪರ ಹಿಂಸಾದಿಗಳೇ ಉಂಟಾಗಿ ಅಪಕಾರವೇ ಪ್ರಾಪ್ತವಾಗುತ್ತದೆ.

ಅಲ್ಲದೇ ಈ ವಿಧವಾದ ಉಪಕಾರವು ಸ್ವತಃ ಪ್ರಯೋಜನವಾಗುವುದಿಲ್ಲ. ಏಕೆಂದರೆ- ಪ್ರಯೋಜನವು ಸುಖದ ಅವಾಪ್ತಿ, ದುಃಖಹಾನಿ ರೂಪವಾಗಿರುತ್ತದೆ. ಪ್ರಕೃತ ಉಪಕಾರವು ಸುಖದ ಅವಾಪ್ತಿರೂಪವೂ ಆಗಿಲ್ಲ, ದುಃಖಹಾನಿರೂಪವೂ ಆಗಿಲ್ಲ. ಅಥವಾ ಈ ಉಪಕಾರದಿಂದ ಯಾವ ಪ್ರಯೋಜನವೂ ಸಿಗುವುದೂ ಇಲ್ಲ.

ಈ ರೀತಿಯಾಗಿ ವಿಷಯ-ಪ್ರಯೋಜನಗಳು ಇಲ್ಲ ಎಂದಮೇಲೆ ಅಧಿಕಾರಿಯು ದೂರದಿಂದಲೇ ಉತ್ಸಾರಿತನಾಗುತ್ತಾನೆ. ಅಧಿಕಾರಿ ಇಲ್ಲದಿದ್ದ ಮೇಲೆ ಸಂಬಂಧವೂ ದೂರೋತ್ಸಾರಿತವಾಗುತ್ತದೆ.

ಅಂದಮೇಲೆ ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧ ಈ ನಾಲ್ಕು ಇಲ್ಲದ ಕಾರಣ ಚಾರ್ವಾಕಮತವು ಅಪ್ರಾಮಾಣಿಕವಾಯಿತು. ಅಂತಹ ಅಪ್ರಾಮಾಣಿಕವಾದ ಚಾರ್ವಾಕಮತದ ವಿರೋಧ ಬಾರದ ಕಾರಣ, ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವ ಲಕ್ಷಣವು ಸೂಕ್ತವೇ ಆಗಿದೆ ಎಂದು ಸಿದ್ಧವಾಯಿತು.

**ಅಭ್ಯುಪಗಮಾಧಿಕರಣವು ಮುಗಿಯಿತು.**

*ಅಧಿಕರಣ – 4*

# ಪುರುಷಾಶ್ಮಾಧಿಕರಣ

## ಸಂಗತಿ

**ಸೂ.ರ.:– अत्र पुरुषोपसर्जनप्रकृतिकर्तृवादो निराक्रियते ।**

ಅನು.:– ಪುರುಷೋಪಸರ್ಜನಭೂತವಾದ ಪ್ರಕೃತಿಗೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಏಕದೇಶಮತವನ್ನು ನಿರಾಕರಿಸುತ್ತಾರೆ ನಾಲ್ಕನೇ ಈ ಪುರುಷಾಶ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न हरेर्जगत्कारणत्वं युक्तम् । चेतनोपसर्जनशरीरस्याभ्मानयनादिकर्तृत्वदर्शनेन पुरुषोपसर्जनप्रधानेनैव जगदुत्पत्तिसम्भवात् । प्रधानं चेतनसन्निधानात्स्वतः प्रवृत्तिमत् अचेतनत्वात् शरीरवदिति मानसद्भावात् । अत ईश्वरस्यैवाभावाज्जगत्कारणत्वलक्षणं तस्यैवेत्येतद्दूरोत्सारितमिति प्राप्ते सूत्रमाह ॥**

ಅನು.:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ –

"ಪ್ರಧಾನಂ ಚೇತನಸನ್ನಿಧಾನಾತ್ಸ್ವತಃ ಪ್ರವೃತ್ತಿಮತ್ ಅಚೇತನತ್ವಾತ್ ಶರೀರವತ್"

ಶರೀರವು ಅಚೇತನವಾದರೂ ಚೇತನೋಪಸರ್ಜನವಾದ ಶರೀರಕ್ಕೆ ಅಶ್ಮಾನಯನಾದಿ-ಕರ್ತೃತ್ವವು ಹೇಗೆ ಕಂಡಿದೆಯೋ ಅದರಂತೆ ಪ್ರಧಾನವು ಅಚೇತನವಾದರೂ ಪುರುಷೋಪಸರ್ಜನವಾದ ಪ್ರಧಾನಕ್ಕೆ ಜಗತ್ಕಾರಣತ್ವವು ಉಪಪನ್ನವಾಗುತ್ತದೆ.

ಆದ್ದರಿಂದ ಈಶ್ವರನೇ ಇಲ್ಲವಾದ್ದರಿಂದ "ಜಗತ್ಕಾರಣತ್ವ ಲಕ್ಷಣವು ಈಶ್ವರನಿಗೇ" ಎಂಬ ವಾದವು ದೂರತ ಏವ ಅಪಾಸ್ತವಾಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ–

### ॐ पुरुषाश्मवदिति चेत्तत्रापि ॐ (२.२.७)

ಪುರುಷಾಶ್ಮವತ್ = ಪುರುಷಸಂಬಂಧದಿಂದಾಗಿ ಅಚೇತನವಾದ ಶರೀರವು ಅಶ್ಮಾನಯನಾದಿಗಳಲ್ಲಿ ಹೇಗೆ ಪ್ರವೃತ್ತವಾಗುತ್ತದೆಯೋ ಅದರಂತೆ ಅಚೇತನ ಪ್ರಕೃತಿಯೂ ಸಹ ಚೇತನಸಂಬಂಧದಿಂದಾಗಿ ಪ್ರವೃತ್ತವಾಗುತ್ತದೆ ಇತಿ ಚೇತ್ = ಎಂದು ಆಕ್ಷೇಪ ಬಂದರೆ ನ = ಅದು ಸರಿಯಲ್ಲ.

ಕುತಃ = ಯಾಕೆ? ಯತಃ = ಯಾವ ಕಾರಣ ತತ್ರಾಪಿ = ಆ ಶರೀರಪ್ರವೃತ್ತಿಯ ವಿಷಯದಲ್ಲಿಯೂ ಸಹ ಚೇತನನಾದ ಈಶ್ವರನೇ ಕರ್ತೃವಾದ್ದರಿಂದ, ಪ್ರಧಾನಕ್ಕೆ ಕಾರಣತ್ವವನ್ನು ಸಾಧಿಸುವ ಅನುಮಾನದಲ್ಲಿ ದೃಷ್ಟಾಂತ ಇಲ್ಲವೋ ಆ ಕಾರಣ.

### ಸಿದ್ಧಾಂತ

**ಸೂ.ರ.:– एवं च युक्तमेव हरेर्जगत्कारणत्वम् । पुरुषोपसर्जन-प्रकृतेर्जगत्कारणत्वसाधने दृष्टान्ताभावात् । न च शरीरमेव दृष्टान्त इति वाच्यम् । न ऋते त्वत्क्रियत इति (ऋ.१०-११३-९) श्रुत्या शरीरप्रवृत्तावपि परमात्माधीनत्वेन दृष्टान्तस्य साध्यविकलत्वात् । ततश्च मतान्तर-विरोधाभावेन युक्तं जगत्कारणत्वलक्षणमिति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ-ಪುರುಷೋಪಸರ್ಜನವಾದ ಪ್ರಕೃತಿಗೆ ಕಾರಣತ್ವವನ್ನು ಸಾಧಿಸುವುದಕ್ಕೆ ದೃಷ್ಟಾಂತ ಯಾವುದೂ ಇಲ್ಲ.

ದೃಷ್ಟಾಂತ ಇಲ್ಲ ಎಂದು ಏಕೆ ಹೇಳುತ್ತೀರಿ? ಶರೀರವನ್ನೇ ದೃಷ್ಟಾಂತವನ್ನಾಗಿ ಕೊಟ್ಟಿದ್ದೇವೆ-

ಯಲ್ಲ? ಎಂದರೆ, ಅದು ಸರಿಯಲ್ಲ. ನ ಋತೇ ತ್ವತ್ಕ್ರಿಯತೇ ಕಿಂಚನಾರೇ (ಋ. 10-113-9) ಎಂದು ಶ್ರುತಿ ಹೇಳುವಂತೆ ಶರೀರದ ಪ್ರವೃತ್ತಿಯೂ ಪರಮಾತ್ಮನ ಅಧೀನವಾದ್ದರಿಂದ, ಪ್ರಕೃತ ಶರೀರವನ್ನು ದೃಷ್ಟಾಂತವನ್ನಾಗಿ ಕೊಡುವುದಾದರೆ ಸಾಧ್ಯವಾದ ಸ್ವತಃ ಪ್ರವೃತ್ತಿಮತ್ತ್ವವು ಅಲ್ಲಿ ಬಾರದ ಕಾರಣ ಸಾಧ್ಯವೈಕಲ್ಯ ಬರುತ್ತದೆ. ಅನುಮಾನವು ಸಾಧಕವಾಗಲಾರದು.

ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ಮತದ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 8

**ಸೂ.ರ.:- एवं श्रुतिलक्षणहेतुना दृष्टान्ते साध्यवैकल्यमभिधाय हेत्वन्तरेण दृष्टान्ते साध्यवैकल्योपपादनाय सूत्रमुपन्यस्यति ।**

**ಅನು.:-** ಈ ರೀತಿಯಾಗಿ ಶ್ರುತಿರೂಪವಾದ ಹೇತುವಿನಿಂದ ದೃಷ್ಟಾಂತದಲ್ಲಿ ಸಾಧ್ಯ-ವೈಕಲ್ಯವನ್ನು ಹೇಳಿ ಪ್ರಕೃತ ಮತ್ತೊಂದು ಹೇತುವಿನಿಂದಲೂ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

**ॐ अङ्गित्वानुपपत्तेः ॐ (२.२.८)**

ಪುರುಷನಿಗೆ ಅಂಗತ್ವವನ್ನು ಅಂಗೀಕರಿಸುವುದಾದರೆ ಅಂಗಮಂಗೀ ಎಂಬ ವಾಕ್ಯದಲ್ಲಿ ಅಂಗಿತ್ವಾನುಪಪತ್ತೇಃ = ಪುರುಷನಿಗೆ ಅಂಗಿತ್ವವನ್ನು (ಪ್ರಾಧಾನ್ಯವನ್ನು) ಹೇಳಿದ್ದು ಅನುಪಪನ್ನವಾಗುವುದರಿಂದ, ನ ಪುರುಷೋಪಸರ್ಜನಪ್ರಕೃತಿಕರ್ತೃತ್ವಪಕ್ಷೇ ದೃಷ್ಟಾಂತೋಽಸ್ತಿ=ಪುರುಷೋಪಸರ್ಜನ ಪ್ರಕೃತಿಗೆ ಕರ್ತೃತ್ವವನ್ನು ಹೇಳುವ ಪಕ್ಷದಲ್ಲಿ ದೃಷ್ಟಾಂತ ಇಲ್ಲ ಎಂದು ಭಾವ.

**ಸೂ.ರ.:- एवं च यदि पुरुषोपसर्जनं शरीरमेव कर्तृ स्यात्तर्हि पुरुषोऽङ्गी शरीरमङ्गमिति प्रामाणिकलौकिकव्यवहारो न स्यात् । अस्ति चासौ । अतो नायं दृष्टान्तः । तस्मात्पुरुषसंवलितशरीरस्यैव स्वतः प्रवृत्तावुच्यमानायां पुरुषस्याङ्गत्वाप्रधानत्वावश्यं भावादङ्गमिति स्मृतौ पुरुषस्याङ्गित्वव्यवहारः शरीरं प्रति प्राधान्यव्यवहारोपदेशोऽनुपपन्नः स्यात् । एवं दार्ष्टान्तिकेऽपि पुरुषस्य प्रधानाङ्गत्वापत्त्यांऽगित्वव्यवहारानुपपत्तिः ।**

**तथा च दृष्टान्ताभावो बाधश्च दर्शिते । अतो मतान्तरविरोधाभावेन युक्तं जगत्कारणत्वलक्षणमिति सिद्धम् ॥**

**ಅನು.:-** ಒಂದುವೇಳೆ ಪುರುಷೋಪಸರ್ಜನವಾದ ಶರೀರವೇ ಕರ್ತೃವಾಗು-ವುದಾದರೆ, ಆಗ "ಪುರುಷನು ಅಂಗೀ - ಶರೀರವು ಅಂಗ" ಎಂಬ ಪ್ರಾಮಾಣಿಕವಾದ ಲೌಕಿಕವ್ಯವಹಾರವು ಅನುಪಪನ್ನವಾಗಬೇಕಾಗುತ್ತದೆ. ಈಗಲಾದರೋ ಅಂತಹ ಪ್ರಾಮಾಣಿಕ ಲೌಕಿಕವ್ಯಾವಹಾರವು ಇದೆ ಎಂದಮೇಲೆ ಪುರುಷೋಪಸರ್ಜನ ಪ್ರಕೃತಿಗೆ ಕರ್ತೃತ್ವವನ್ನು ಹೇಳುವ ಪಕ್ಷದಲ್ಲಿ ಶರೀರವು ದೃಷ್ಟಾಂತವಾಗಲಾರದು.

ಆದ್ದರಿಂದ ಪುರುಷಸಂವಲಿತವಾದ ಶರೀರಕ್ಕೇನೇ ಸ್ವತಃ ಪ್ರವೃತ್ತಿಯನ್ನು ಹೇಳುವು-ದಾದರೆ ಪುರುಷನಿಗೆ ಅಂಗತ್ವವು (ಅಪ್ರಾಧಾನ್ಯವು) ಅವಶ್ಯ ಬರುವುದರಿಂದ, "ಅಂಗಮಂಗೀ ಸಮಾದಾಯ ಯಥಾಕಾರ್ಯಂ ಕರೋತ್ಯಸೌ" ಎಂಬ ಸ್ಮೃತಿಯಲ್ಲಿ ಪುರುಷನಿಗೆ ಅಂಗಿತ್ವವ್ಯವಹಾರವು (ಶರೀರವನ್ನು ಕುರಿತು ಪ್ರಾಧಾನ್ಯವ್ಯವಹಾರವು) ಅನುಪಪನ್ನವಾಗಬೇಕಾಗುತ್ತದೆ.

ಅದೇ ರೀತಿಯಾಗಿ ದಾರ್ಷ್ಟಾಂತಿಕದಲ್ಲಿಯೂ ಸಹ ಪುರುಷನಿಗೆ ಅಂಗತ್ವ ಬರುವುದರಿಂದ ಅಂಗಿತ್ವ ವ್ಯವಹಾರವು ಅನುಪಪನ್ನವಾಗಬೇಕಾಗುತ್ತದೆ.

ಹೀಗಾಗಿ ಪುರುಷೋಪಸರ್ಜನ ಪ್ರಕೃತಿಗೆ ಕಾರಣತ್ವವನ್ನು ಸಾಧಿಸಲು ಹೊರಟ ನಿಮ್ಮ ಅನುಮಾನಕ್ಕೆ ದೃಷ್ಟಾಂತಾಭಾವ ಹಾಗೂ ಬಾಧ ದೋಷಗಳನ್ನು ತೋರಿಸಿದಂತಾಯಿತು. ಆ ಕಾರಣ ಅನುಮಾನವು ದುಷ್ಟವಾದ್ದರಿಂದ ಸಾಧಕವಾಗಲಾರದು. ಅರ್ಥಾತ್ ಈ ಅನುಮಾನದಿಂದ ಪ್ರಧಾನಕ್ಕೆ ಕಾರಣತ್ವವನ್ನು ಸಾಧಿಸಲು ಬರುವುದಿಲ್ಲ.

ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಯಾವ ಮತದ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಪುರುಷಾಶ್ಮಾಧಿಕರಣವು ಮುಗಿಯಿತು.

ಅಧಿಕರಣ – 5

# ಅನ್ಯಥಾನುಮಿತ್ಯಧಿಕರಣ

## ಸಂಗತಿ

**ಸೂ.ರ.:– अत्र प्रकृत्युपसर्जनपुरुषकर्तृवादो निराक्रियते ।**

**ಅನು.:–** ಪ್ರಕೃತ್ಯುಪಸರ್ಜನವಾದ ಪುರುಷನಿಗೆ ಕರ್ತೃತ್ವವನ್ನು ಹೇಳುವ ವಾದವನ್ನು ನಿರಾಕರಿಸುತ್ತಾರೆ ಈ ಐದನೇ ಅನ್ಯಥಾನುಮಿತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न हरेर्जगत्कारणत्वं युक्तम् । प्रधानोपसर्जनपुरुषादेव जगदुत्पत्तिसम्भवेनेश्वरवैयर्थ्यात् । तथा च प्रयोगः । विमता प्रवृत्तिः अचेतनोपर्सजनपुरुषाधीना प्रवृत्तित्वात् अश्मानयनादिप्रवृत्तिवदिति । अतो न जगत्कारणत्वलक्षणं युक्तमिति प्राप्ते सूत्रमाह ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಕಾರಣ– ಪ್ರಧಾನೋಪಸರ್ಜನ ಪುರುಷನಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾದ್ದರಿಂದ ಈಶ್ವರನನ್ನು ಒಪ್ಪುವುದು ವ್ಯರ್ಥವಾಗುತ್ತದೆ. ಈ ವಿಷಯದಲ್ಲಿ ಹೀಗೆ ಅನುಮಾನಪ್ರಯೋಗ ಮಾಡಬಹುದು.

ವಿಮತಾ ಪ್ರವೃತ್ತಿಃ, ಅಚೇತನೋಪಸರ್ಜನಪುರುಷಾಧೀನಾ, ಪ್ರವೃತ್ತಿತ್ವಾತ್, ಅಶ್ಮಾನಯನಾದಿಪ್ರವೃತ್ತಿವತ್ । ವಿಪ್ರತಿಪನ್ನವಾದ ಈ ಜಗತ್ತಿನ ಪ್ರವೃತ್ತಿಯು, ಪ್ರವೃತ್ತಿಯೇ ಆದ್ದರಿಂದ, ಅಚೇತನೋಪಸರ್ಜನಪುರುಷನ ಅಧೀನವಾಗಿದೆ, ಅಶ್ಮಾನಯನಾದಿ ಪ್ರವೃತ್ತಿಯಂತೆ.

ಈ ಅನುಮಾನದಿಂದ ಅಚೇತನೋಪಸರ್ಜನಪುರುಷನಿಗೆ ಜಗತ್ಕಾರಣತ್ವವು ಸಿದ್ಧಿಸುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ–

### ॐ अन्यथाऽनुमितौ च ज्ञशक्तिवियोगात् ॐ (२.२.९)

(ಚಶಬ್ದದಿಂದ ಹಿಂದೆ ಹೇಳಿದ ಅಂಗಿತ್ವಾನುಪಪತ್ತಿಯನ್ನು ಸಮಾಕರ್ಷ ಮಾಡಿ-ಕೊಳ್ಳಬೇಕು.) ಅನ್ಯಥಾಽನುಮಿತೌ ಚ = ಹಿಂದಿನ ಪಕ್ಷದಿಂದ ಭಿನ್ನವಾಗಿ (ಬೇರೆ ರೀತಿಯಿಂದ) ಪ್ರಕೃತ್ಯುಪಸರ್ಜನ ಪುರುಷನಿಗೆ ಕರ್ತೃತ್ವವನ್ನು ಸಾಧನ ಮಾಡಿದರೂ ಸಹ ಜ್ಞಶಕ್ತಿವಿಯೋಗಾತ್ = ಜೀವನಿಗೆ ಶರೀರಸಂಬಂಧಕ್ಕಾಗಿ ಪ್ರವೃತ್ತಿಶಕ್ತಿವಿಯೋಗ ಇರುವುದರಿಂದ, ಅಂಗಿತ್ವಾನುಪಪತ್ತಿ ಬರುವುದರಿಂದಲೇ.

## ಸಿದ್ಧಾಂತ

**ಸೂ.ರ.:– एवं च युक्तमेवेश्वरस्य जगत्कारणत्वम् । प्रकृत्युपसर्जन-पुरुषस्य कर्तृत्वे मानाभावात् । अथ मतम् । प्राचीनमतादन्यथाऽनु-मितमिति । तथा सति दृष्टान्ते साध्याभावात् । केवलस्य प्रवृत्तिशक्ते-रङ्गीकारे शरीरवैयर्थ्यम् । नो चेच्छरीरसम्बन्धाभावप्रसङ्गेनाश्मानयनादि-प्रवृत्तिर्न स्यात् । अस्ति चासौ । अतः पुरुषस्य शरीरसम्बन्धघटकोऽश्मा-नयनादिशक्तिप्रद ईश्वरोऽङ्गीकार्य इति कथं न दृष्टान्तः साध्यविकलः । अतो जगत्कारणत्वलक्षणं युक्तमिति सिद्धम् ।**

ಅನು.:– ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ ಆಗಿದೆ. ಏಕೆಂದರೆ - ಪ್ರಕೃತ್ಯುಪಸರ್ಜನ ಪುರುಷನಿಗೆ ಕರ್ತೃತ್ವ ಇದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ.

ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? ಹಿಂದಿನ ಪಕ್ಷಕ್ಕಿಂತಲೂ ಭಿನ್ನವಾಗಿ (ಬೇರೆ ರೀತಿಯಿಂದ) ಅನುಮಾನ ಮಾಡಿದ್ದೇವೆಯಲ್ಲ? ಎಂದರೆ, ಆ ಅನುಮಾನವು ನಿರ್ದುಷ್ಟ-ವಾಗುವುದಿಲ್ಲ. ಕಾರಣ– ಅನುಮಾನದ ದೃಷ್ಟಾಂತದಲ್ಲಿ ಸಾಧ್ಯ ಬಾರದ ಕಾರಣ ಸಾಧ್ಯವೈಕಲ್ಯ ಬರುತ್ತದೆ.

ಹೇಗೆಂದರೆ - ಕೇವಲ ಪುರುಷನಿಗೆ (ಶರೀರರಹಿತನಾದ ಪುರುಷನಿಗೆ) ಪ್ರವೃತ್ತಿಶಕ್ತಿಯನ್ನು ಅಂಗೀಕರಿಸುವುದಾದರೆ ಶರೀರವು ವ್ಯರ್ಥವಾಗಬೇಕಾಗುತ್ತದೆ. ಕೇವಲ ಪುರುಷನಿಗೆ ಪ್ರವೃತ್ತಿಶಕ್ತಿ ಇಲ್ಲ. ಕಿಂತು ಶರೀರವುಳ್ಳ ಪುರುಷನಿಗೆ ಪ್ರವೃತ್ತಿಶಕ್ತಿಯನ್ನು ಅಂಗೀಕರಿಸುತ್ತೇವೆ ಎಂದರೆ, ಪುರುಷನಿಗೆ ಶರೀರಸಂಬಂಧ ಉಂಟಾಗುವುದಕ್ಕಾಗಿ ಈಶ್ವರನು

ಅಪೇಕ್ಷಣೀಯನಾಗಿದ್ದಾನೆ. ಅಂತಹ ಈಶ್ವರನನ್ನು ಒಪ್ಪದಿದ್ದರೆ ಪುರುಷನಿಗೆ ಶರೀರಸಂಬಂಧ ಇಲ್ಲದೇ ಹೋಗಬೇಕಾದ ಪ್ರಸಂಗ ಬರುವುದರಿಂದ ಅಶ್ಮಾನಯನಾದಿಗಳಲ್ಲಿ ಪ್ರವೃತ್ತಿಯು ಕೂಡುವುದಿಲ್ಲ.

ಈಗಲಾದರೋ ಪುರುಷನಿಗೆ ಅಶ್ಮಾನಯನಾದಿಗಳಲ್ಲಿ ಪ್ರವೃತ್ತಿ ಇರುವುದರಿಂದ, ಅದಕ್ಕೆ ಆವಶ್ಯಕವಾದ ಶರೀರಸಂಬಂಧವನ್ನು ಉಂಟುಮಾಡಿಸುವದಕ್ಕಾಗಿ ಮತ್ತು ಅಶ್ಮಾನಯನಾದಿಗಳಲ್ಲಿ ಶಕ್ತಿಯನ್ನು ಕೊಡುವುದಕ್ಕಾಗಿ ಈಶ್ವರನನ್ನು ಒಪ್ಪಲೇಬೇಕು. ಹಾಗೆ ಈಶ್ವರನನ್ನು ಅಂಗೀಕರಿಸಿದ ಮೇಲೆ ನಿಮ್ಮ ಅನುಮಾನದಲ್ಲಿ (ದೃಷ್ಟಾಂತವಾದ ಅಶ್ಮಾನಯನಾದಿ ಪ್ರವೃತ್ತಿಯಲ್ಲಿ ಸಾಧ್ಯವಾದ ಅಚೇತನೋಪಸರ್ಜನ ಪುರುಷಾಧೀನತ್ವವು ಬಾರದ ಕಾರಣ) ಸಾಧ್ಯವೈಕಲ್ಯ ಬಂದೇ ಬರುತ್ತದೆ. ಅನುಮಾನವು ದುಷ್ಟವಾಗುತ್ತದೆ. ಆದ್ದರಿಂದ ವಿಷ್ಣುವಿಗೆ ಕರ್ತೃತ್ವವನ್ನು ಹೇಳಿದರೆ ಯಾವ ವಿರೋಧವೂ ಬಾರದ ಕಾರಣ ಲಕ್ಷಣಸೂತ್ರದಲ್ಲಿ ಹೇಳಿದ ವಿಷ್ಣುವಿನ ಜಗತ್ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं प्रत्येकं दूषितान्यनीश्वरमतानि सामान्यदूषणेनापि निराकुर्वत्सूत्रं पठति ।**

**ಅನು.:–** ಈ ರೀತಿಯಾಗಿ ಪ್ರತ್ಯೇಕವಾಗಿ ನಿರಾಕರಿಸಲ್ಪಟ್ಟ ನಿರೀಶ್ವರಮತಗಳನ್ನು ಸಾಮಾನ್ಯ ದೋಷದಿಂದಲೂ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ विप्रतिषेधाच्चासमञ्जसम् ॐ (२.२.१०)**

ವಿಪ್ರತಿಷೇಧಾಚ್ಚ = ಎಲ್ಲ ಶ್ರುತಿ-ಸ್ಮೃತಿ-ಯುಕ್ತಿವಿರುದ್ಧವಾದದ್ದರಿಂದಲೂ ಸಹ ಅನೀಶ್ವರಮತವು ಅಸಮಂಜಸಮ್ = ಅಯುಕ್ತವಾಗಿದೆ.

**ಸೂ.ರ.:– एवं च द्यावाभूमी जनयन् (श्वे. ३-३) । यतो वा (तै.३-१) । यः सर्वज्ञ (मुं. १-१-९) इत्यादिश्रुतीनाम् उत्पत्तिस्थितिसंहाराः । स्रष्टा पाता तथैवात्ता । इत्यादिस्मृतीनां, विमतं सकर्तृकं कार्यत्वात् । चिच्चेत्ये केनचिन्नियतेऽस्वतन्त्रत्वात् इत्यादियुक्तीनां च विरोधेन प्रकृतिस्वातन्त्र्यादि रूपमर्थं वदतोऽन्यो नीचो नास्तीति (पाद्मे.) वचनात् । ततश्च सकलश्रुतिस्मृतियुक्तिविरुद्धत्वात्सर्वमप्यनीश्वरमतमप्रमाणम् । अतो साङ्ख्यादिमतविरोधेन लक्षणासम्भव इति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಅನೇಕ ಶ್ರುತಿ-ಸ್ಮೃತಿ-ಯುಕ್ತಿಗಳ ವಿರೋಧ ಬರುತ್ತದೆ ಎಂದು ತೋರಿಸುತ್ತಾರೆ. ಹೇಗೆಂದರೆ –

ಪ್ರಕೃತಿಗೆ ಸ್ವಾತಂತ್ರ್ಯವನ್ನು ಹೇಳುವುದಾದರೆ, ಜಗತ್ಕಾರಣತ್ವವನ್ನು ಅಂಗೀಕರಿಸು-ವುದಾದರೆ

ದ್ಯಾವಾಭೂಮೀ ಜನಯನ್ ದೇವ ಏಕಃ (ಶ್ವೇ. 3-3), ಯತೋ ವಾ ಇಮಾನಿ ಭೂತಾನಿ ಜಾಯಂತೇ (ತೈ. 3-1), ಯಃ ಸರ್ವಜ್ಞಃ ಸ ಸರ್ವವಿತ್ (ಮುಂ. 1-1-9) ಎಂಬುದಾಗಿ ವಿಷ್ಣುವಿಗೆ ಕರ್ತೃತ್ವವನ್ನು ಹೇಳುವ ಇತ್ಯಾದಿ ಶ್ರುತಿಗಳ ವಿರೋಧವು ಬರುತ್ತದೆ. ಮತ್ತು "ಉತ್ಪತ್ತಿಸ್ಥಿತಿಸಂಹಾರಾಃ ..." "ಸ್ರಷ್ಟಾ ಪಾತಾ ತಥೈವಾತ್ತಾ" ಇತ್ಯಾದಿ ಸ್ಮೃತಿಗಳ ವಿರೋಧವೂ ಬರುತ್ತದೆ. ಮತ್ತು "ವಿಮತಂ ಸಕರ್ತೃಕಂ ಕಾರ್ಯತ್ವಾತ್" "ಚೇಷ್ಟೇತ್ಯೇ ಕೇನಚಿನ್ನಿಯತೇ ಅಸ್ವತಂತ್ರತ್ವಾತ್" ಇತ್ಯಾದಿ ಯುಕ್ತಿಗಳ ವಿರೋಧವೂ ಬರುತ್ತದೆ.

ಅದಲ್ಲದೇ –

**ಶ್ರುತಯಃ ಸ್ಮೃತಯಶ್ಚೈವ ಯುಕ್ತಯಶ್ಚೇಶ್ವರಂ ಪರಮ್ ।**
**ವದಂತಿ ತದ್ವಿರುದ್ಧಂ ಯೋ ವದೇತ್ತಸ್ಮಾನ್ನ ಚಾಧಮಃ ॥**

'ಎಲ್ಲ ಶ್ರುತಿಗಳು, ಸ್ಮೃತಿಗಳು, ಯುಕ್ತಿಗಳು ಈಶ್ವರನಿಗೆ ಸ್ವತಂತ್ರತ್ವವನ್ನು, ಜಗತ್ಕಾರಣತ್ವವನ್ನು ಹೇಳುತ್ತಿವೆ. ಅದಕ್ಕೆ ವಿರುದ್ಧವಾಗಿ ಪ್ರಕೃತಿಗೇ ಸ್ವಾತಂತ್ರ್ಯಾದಿರೂಪ ಅರ್ಥವನ್ನು ಯಾವ ವಾದಿಗಳು (ನಿರೀಶ್ವರ ಸಾಂಖ್ಯವಾದಿಗಳು) ಹೇಳುತ್ತಾರೆಯೋ ಅವರಿಗಿಂತಲೂ ಅಧಮರು ಮತ್ತಾರೂ ಇಲ್ಲ' ಎಂಬುದಾಗಿ ಪಾದ್ಮವಚನವೂ ಇರುವುದ-ರಿಂದ ಸಕಲ ಶ್ರುತಿ-ಸ್ಮೃತಿ-ಯುಕ್ತಿವಿರುದ್ಧವಾದ್ದರಿಂದ ಎಲ್ಲ ನಿರೀಶ್ವರ ಸಾಂಖ್ಯಮತವೂ ಅಪ್ರಮಾಣವಾಗಿದೆ. ಹೀಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಸಾಂಖ್ಯಾದಿ-ಮತವಿರೋಧ ಬಾರದ ಕಾರಣ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅನ್ಯಥಾಽನುಮಿತ್ಯಧಿಕರಣವು ಮುಗಿಯಿತು.

ಅಧಿಕರಣ - 6

# ವೈಶೇಷಿಕಾಧಿಕರಣ

## ಸಂಗತಿ

ಸೂ.ರ.:– अत्र परमाण्वारम्भवादोऽपाक्रियते ।

ಅನು.:– ಪರಮಾಣುಗಳಿಂದ ಉತ್ಪತ್ತಿಯಾಗುತ್ತದೆ ಎಂದು ಹೇಳುವ ವೈಶೇಷಿಕ-ಮತವನ್ನು ನಿರಾಕರಿಸುತ್ತಾರೆ ಈ ಆರನೇ ವೈಶೇಷಿಕಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु द्रव्यादिपदार्थाः सप्तैव । तत्र द्रव्याणि पृथिव्यादीनि नवैव । गुणास्तु रूपादयश्चतुर्विंशतिरेव । कर्म चोत्क्षेपणादि पञ्चविधम् । सामान्यमनेकविधम् । जातिरूपमुपधिरूपं च । समवायस्त्वेक एव । विशेषास्त्वनन्ताः ।

ಅನು.:– ದ್ರವ್ಯ-ಗುಣ-ಕರ್ಮ ಮುಂತಾಗಿ ಪದಾರ್ಥಗಳು ಏಳು ಮಾತ್ರ ಇರುವುದು. ಅದರಲ್ಲಿ ಪೃಥಿವೀ-ಜಲ-ತೇಜಸ್ಸು ಮುಂತಾಗಿ ದ್ರವ್ಯವು ಒಂಭತ್ತು ಮಾತ್ರ. ಗುಣಗಳಾದರೂ ರೂಪ-ರಸ-ಸ್ಪರ್ಶ ಮುಂತಾಗಿ ಇಪ್ಪತ್ನಾಲ್ಕು ಇವೆ. ಉತ್ಕ್ಷೇಪಣ-ಅಪಕ್ಷೇಪಣ ಮುಂತಾಗಿ ಕರ್ಮವು ಐದುವಿಧವಾಗಿದೆ. ಸಾಮಾನ್ಯವು ಜಾತಿರೂಪ-ಉಪಾಧಿರೂಪ ಎಂಬುದಾಗಿ ಅನೇಕವಿಧವಾಗಿದೆ. ಇನ್ನು ಸಮವಾಯವು ಒಂದೇ ಆಗಿದೆ. ಆದರೆ ವಿಶೇಷಗಳು ಅನಂತವಾಗಿವೆ.

ಸೂ.ರ.:– एतत्त्रितयं नित्यमेव । तत्रानित्यं कारणत्रितयजन्यम् । यत्समवेतं कार्यमुत्पद्यते तत्समवायिकारणं परमाण्वादि द्रव्यमेव । आदिसृष्टौ च परमाणवोद्व्यणुकादिक्रमेणावयविनमारभन्ते । समवायि-कारणप्रत्यासन्नमवधृतसामर्थ्यमसमवायिकारणम् । प्रत्यासत्तिर्द्वेधा । कार्यैकार्यप्रत्यासत्तिः कारणैकार्यप्रत्यासत्तिश्चेति । तत्र कार्यद्रव्यस्यावयव-

**संयोग एव कार्यैकार्थप्रत्यासत्त्याऽसमवायिकारणं भवति । कार्यगतगुणानां च कारगतगुणाः कर्म च कारणैकार्यप्रत्यासत्यादिना असमवायिकारणम् । कार्यगतकर्मणश्च कारणगतगुणकर्मणी कार्यैकार्यप्रत्यासत्या असमवायिकारणम् । तत्र परिमाणं कारणगतं कार्यगतपरिमाणस्यासमवायिकारणं भवति । परमाणुद्व्यणुकतूलगतं परिमाणं न द्व्यणुकत्र्यणुकतूलपिण्डगताः परिमाणाः असमवायकारणम् । किंतु द्व्यणुकत्र्यणुकगतसङ्ख्ययैव । तूलपिंडपरिमाणं तु प्रचयेन भवति ।**

**ಅನು.:–** ಸಾಮಾನ್ಯ-ವಿಶೇಷ-ಸಮವಾಯ ಎಂಬ ಈ ಮೂರು ನಿತ್ಯವೇ ಆಗಿವೆ. ಇನ್ನು ದ್ರವ್ಯ ಮೊದಲಾದ ಅನಿತ್ಯಪದಾರ್ಥಗಳು ಮೂರುವಿಧ ಕಾರಣಗಳಿಂದ ಜನ್ಯವಾಗುತ್ತವೆ. ಸಮವಾಯಕಾರಣ – ಅಸಮವಾಯಿಕಾರಣ – ನಿಮಿತ್ತಕಾರಣ ಎಂಬುದಾಗಿ ಮೂರುವಿಧ ಕಾರಣಗಳಿಂದ ಜನ್ಯವಾಗುತ್ತವೆ ಎಂದು ಅಭಿಪ್ರಾಯ.

ಯಾವುದರಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರ್ಯವು ಹುಟ್ಟುತ್ತದೆಯೋ ಅದು ಸಮವಾಯಿಕಾರಣ. ಅಂತಹ ಸಮವಾಯಿಕಾರಣ ಪರಮಾಣು ಮೊದಲಾದ ದ್ರವ್ಯವೇ ಆಗುತ್ತದೆ. ಈ ಪರಮಾಣುಗಳು ದ್ವ್ಯಣುಕ-ತ್ರ್ಯಣುಕ ಮುಂತಾದ ಕ್ರಮದಿಂದ ಅವಯವಿಯನ್ನು ಹುಟ್ಟಿಸುತ್ತವೆ.

ಇನ್ನು ಸಮವಾಯಿಕಾರಣದಲ್ಲಿ ಪ್ರತ್ಯಾಸನ್ನವಾಗಿ ಅವಧೃತಸಾಮರ್ಥ್ಯ ಉಳ್ಳ (ಕಾರ್ಯ ಹುಟ್ಟಿಸುವ ಸಾಮರ್ಥ್ಯ ಉಳ್ಳ) ಕಾರಣಕ್ಕೆ ಅಸಮವಾಯಿಕಾರಣ ಎಂದು ಹೆಸರು.

ಅದರಲ್ಲಿ ಕಾರ್ಯದ್ರವ್ಯವನ್ನು ಕುರಿತು ಅವಯವಸಂಯೋಗವೇ ಕಾರ್ಯೈಕಾರ್ಥ-ಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವಾಗುತ್ತದೆ. ಇನ್ನು ಕಾರ್ಯಗುಣಗಳನ್ನು ಕುರಿತು ಕಾರಣಗತವಾದ ಗುಣಗಳೇ ಕಾರ್ಯೈಕಾರ್ಥ-ಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣ-ಗಳಾಗುತ್ತವೆ. ಅದೇ ಪ್ರಕಾರ ಕಾರ್ಯಕರ್ಮಗಳನ್ನು ಕುರಿತು ಕಾರಣಗತವಾದ ಕರ್ಮಗಳೇ ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿ ಕಾರಣಗಳಾಗುತ್ತವೆ. ಮತ್ತು ಕಾರಣಗತವಾದ ಪರಿಮಾಣವು ಕಾರ್ಯಗತವಾದ ಪರಿಮಾಣಕ್ಕೆ ಅಸಮವಾಯಿಕಾರಣ-ವಾಗುತ್ತದೆ. ಇನ್ನು ದ್ವ್ಯಣುಕ-ತ್ರ್ಯಣುಕ-ತೂಲಪಿಂಡಗತವಾದ ಪರಿಮಾಣಗಳನ್ನು ಕುರಿತು ಪರಮಾಣು-ದ್ವ್ಯಣುಕ-ತೂಲಗತವಾದ ಪರಿಮಾಣವು ಅಸಮವಾಯಿಕಾರಣ-ವಾಗುವುದಿಲ್ಲ. ಕಿಂತು ದ್ವ್ಯಣುಕ-ತ್ರ್ಯಣುಕಗತವಾದ ಸಂಖ್ಯೆಯೇ ಅಸಮವಾಯಿಕಾರಣ-ವಾಗುತ್ತದೆ. ತೂಲಪಿಂಡಪರಿಮಾಣವಾದರೂ ಪ್ರಚಯೇನ ಆಗುತ್ತದೆ.

**ಸೂ.ರ.:– एतदन्यत्कारणं निमित्तम् । ईश्वरादृष्टकालादि । तत्रेश्वर आत्मविशेषः । आत्मा च सङ्ख्यादिचतुर्दशगुणयुक्तः । परमेश्वरस्तु संख्यादि-पञ्चगुणकः । कर्तृत्वोपयोगिज्ञानेच्छाप्रयत्नशाली च शिष्टषड्गुणायोग्य इति कथं तस्यानन्तगुणवत्वं युक्तम् । अतो व्यर्थ एव पूर्वाध्याय इति प्राप्ते सूत्रितम् ।**

**ಅನು.:–** ಈ ಸಮವಾಯಿಕಾರಣ-ಅಸಮವಾಯಿಕಾರಣಗಳನ್ನು ಬಿಟ್ಟು ಉಳಿದ ಕಾರಣಕ್ಕೆ ನಿಮಿತ್ತಕಾರಣ ಎಂದು ಹೆಸರು. ಈಶ್ವರ-ಅದೃಷ್ಟ-ಕಾಲಾದಿಗಳು ನಿಮಿತ್ತಕಾರಣ-ಗಳಾಗುತ್ತವೆ.

ಅದರಲ್ಲಿ ಈಶ್ವರನು ಆತ್ಮವಿಶೇಷನಾಗಿದ್ದಾನೆ. (ಆತ್ಮಪ್ರಭೇದನಾಗಿದ್ದಾನೆ.) ಉಳಿದ ಆತ್ಮರು ಸಂಖ್ಯಾ ಮೊದಲಾದ ಹದಿನಾಲ್ಕು ಗುಣಗಳಿಂದ ಯುಕ್ತರಾಗಿದ್ದಾರೆ. ಇನ್ನು ಈಶ್ವರನಾದರೂ ಸಂಖ್ಯಾ ಮೊದಲಾದ ಐದು ಗುಣಗಳಿಂದ ವಿಶಿಷ್ಟನಾಗಿದ್ದಾನೆ. ಮತ್ತು ಕರ್ತೃತ್ವಕ್ಕೆ ಉಪಯೋಗಿಯಾದ ಜ್ಞಾನ-ಇಚ್ಛಾ-ಪ್ರಯತ್ನ ಉಳ್ಳವನಾಗಿದ್ದಾನೆ. ಆದರೆ ಉಳಿದ ಆರುಗುಣಗಳಿಗೆ ಯೋಗ್ಯನಾಗಿಲ್ಲ (ಉಳಿದ ಗುಣಗಳು ಅವನಲ್ಲಿ ಇಲ್ಲ).

ಅಂದಮೇಲೆ ಅಂತಹ ಸೀಮಿತಗುಣಗಳುಳ್ಳ ಈಶ್ವರನಿಗೆ ಅನಂತಗುಣಪೂರ್ಣತ್ವವು ಹೇಗೆ ಯುಕ್ತವಾಗುತ್ತದೆ? ಆದ್ದರಿಂದ ಗುಣಪೂರ್ಣತ್ವವನ್ನು ಹೇಳಲು ಹೊರಟ ಪೂರ್ವಾಧ್ಯಾಯವು ವ್ಯರ್ಥವೇ ಆಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ महद्दीर्घवद्वा ह्रस्वपरिमण्डलाभ्याम् ॐ (२.२.११)**

ಮಹದ್ದೀರ್ಘವತ್ = ವೈಶೇಷಿಕಮತದಲ್ಲಿ ತ್ರ್ಯಣುಕಾದಿಗತವಾದ ಮಹತ್ವದಿಂದ ದೀರ್ಘತ್ವದಿಂದ ಚತುರಣುಕಾದಿಗತ ಪರಿಮಾಣವು ಹೇಗೆ ಹುಟ್ಟುತ್ತದೆಯೋ ಅದೇ ರೀತಿಯಾಗಿ ಹ್ರಸ್ವಪರಿಮಂಡಲಾಭ್ಯಾಂ ಅಪಿ = ಪರಮಾಣು-ದ್ವ್ಯಣುಕ ಉಭಯಗತವಾದ ಹ್ರಸ್ವತ್ವ-ಪಾರಿಮಾಂಡಿಲ್ಯ ಪರಿಮಾಣಗಳಿಂದಲೂ ಸಹ ತ್ರ್ಯಣುಕ-ದ್ವ್ಯಣುಕಗತವಾದ ಪರಿಮಾಣದ ಉತ್ಪತ್ತಿಯು ಆಗಲಿ.

ಅನ್ಯಥಾ ಮಹತ್ವ-ದೀರ್ಘತ್ವಗಳಿಂದಲೂ ಕಾರ್ಯೋತ್ಪತ್ತಿಯು ಆಗದಿರಲಿ ಎಂದು ವಾ ಶಬ್ದದ ಅರ್ಥ. ಆದ್ದರಿಂದ ವೈಶೇಷಿಕಮತವು ಅನುಪಪನ್ನವಾಗಿದೆ ಎಂದು ಭಾವ.

## ಸಿದ್ಧಾಂತ

**ಸೂ.ರ.:– एवं च युक्तमेव हरेरनन्तगुणपरिपूर्णत्वलक्षणम् । वैशेषिकादीनामनुपपन्नभाषित्वेन तत्समयस्याप्रामाणिकत्वात् । यच्चोक्तम् । ह्रस्वाणुपरिमाणयोर्नासमवायिकारणत्वमिति । तन्न । तथासति महत्त्व-दीर्घत्वयोरपि तदभावापातात् । महद्दीर्घपरिमाणयोः कारणत्वेऽनयोरपि तत्साम्यात् । अविशेषात् । तस्मादुत्पत्तिविरुद्धत्वान्न तयोरसमवायि-कारणत्वम् । किंत्वेतयोरेवेति वैशेषिकाद्युक्तमसमञ्जसमेवेति न तद्विरोध ईश्वरानन्तगुणत्वस्येति युक्तं लक्षणसूत्रमिति सिद्धम् ।**

**ಅನು.:–** ವಿಷ್ಣುವಿಗೆ ಅನಂತಗುಣಪರಿಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ವೈಶೇಷಿಕಾದಿಗಳು ಅನುಪಪನ್ನಭಾಷಿಗಳಾದ್ದರಿಂದ ಅವರ ಸಮಯವು ಅಪ್ರಾಮಾಣಿಕ-ವಾಗಿದೆ.

ಏಕೆಂದರೆ – ಹ್ರಸ್ವ-ಅಣುಪರಿಮಾಣಗಳು ಅಸಮವಾಯಿಕಾರಣ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಹಾಗಾಗುವುದಾದರೆ ಮಹತ್ವ-ದೀರ್ಘತ್ವಗಳಿಗೂ ಅಸಮವಾಯಿಕಾರಣತ್ವವು ಇಲ್ಲದೇ ಹೋಗಬೇಕಾಗುತ್ತದೆ. ಒಂದುವೇಳೆ ಮಹತ್ವ-ದೀರ್ಘತ್ವಗಳಿಗೆ ಕಾರಣತ್ವವನ್ನು ಅಂಗೀಕರಿಸುವುದಾದರೆ ಇವುಗಳಲ್ಲಿ ಸಾಮ್ಯ ಇರುವ ಕಾರಣ ಹ್ರಸ್ವ-ಅಣುಪರಿಮಾಣಗಳಿಗೂ ಅಸಮವಾಯಿಕಾರಣತ್ವ ಬರಬೇಕಾಗುತ್ತದೆ.

ಆದ್ದರಿಂದ ''ಉತ್ಪತ್ತಿವಿರುದ್ಧವಾದ್ದರಿಂದ ಹ್ರಸ್ವ-ಅಣುಪರಿಮಾಣಗಳಿಗೆ ಅಸಮವಾಯಿಕಾರಣತ್ವ ಇಲ್ಲ. ಕಿಂತು ಮಹತ್ವ-ದೀರ್ಘತ್ವಗಳಿಗೆ ಮಾತ್ರ ಅಸಮವಾಯಿ-ಕಾರಣತ್ವ ಇದೆ'' ಎಂಬುದಾಗಿ ವೈಶೇಷಿಕಾದಿಗಳು ಹೇಳುವುದು ಅಸಮಂಜಸವೇ ಆಗಿದೆ. ಹೀಗಾಗಿ ಈಶ್ವರನಿಗೆ ಅನಂತಗುಣಪೂರ್ಣತ್ವವನ್ನು ಹೇಳಿದರೆ ವೈಶೇಷಿಕಮತದ ವಿರೋಧವೂ ಬರುವುದಿಲ್ಲವಾದ್ದರಿಂದ ಲಕ್ಷಣಸೂತ್ರವು ಯುಕ್ತವೇ ಎಂದು ಸಿದ್ಧವಾಯಿತು.

## ಸಂಗತಿ

**ಸೂ.ರ.:– एवं वैशेषिकादिमते महत्त्वदीर्घत्वादेरसमवायिकारणत्व-खण्डनरीत्यासमवायिकारणमात्रं निरस्तं भवतीत्यभिप्रेत्य निमित्तकारण-मप्येवं निराकुर्वत्सूत्रमुपन्यस्यति ।**

**ಅನು.:–** ಈ ರೀತಿಯಾಗಿ ವೈಶೇಷಿಕಾದಿಮತಗಳಲ್ಲಿ ಮಹತ್ವ-ದೀರ್ಘತ್ವಗಳಿಗೆ ಅಸಮವಾಯಿಕಾರಣತ್ವವನ್ನು ನಿರಾಕರಿಸುವ ಮೂಲಕ ಅಸಮವಾಯಿಕಾರಣ ಎಲ್ಲವೂ ನಿರಸ್ತವಾಯಿತು ಎಂಬ ಅಭಿಪ್ರಾಯದಿಂದ, ಅದರ ಜೊತೆಗೆ ನಿಮಿತ್ತಕಾರಣವನ್ನೂ ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ–

**ॐ उभयथाऽपि न कर्मातस्तदभावः ॐ (२.२.१२)**

ಯತಃ = ಯಾವ ಕಾರಣ ಉಭಯಥಾಽಪಿ = ಈಶ್ವರೇಚ್ಛೆಗೆ ನಿತ್ಯತ್ವಪಕ್ಷದಲ್ಲಿ ಹಾಗೂ ಅನಿತ್ಯತ್ವಪಕ್ಷದಲ್ಲಿ ಎರಡೂ ಪಕ್ಷಗಳಲ್ಲಿಯೂ ಸಹ ನ ಕರ್ಮ = ಪರಮಾಣುಗಳಲ್ಲಿ ಕ್ರಿಯೋತ್ಪತ್ತಿ ಸಂಭಾವಿತವಾಗುವುದಿಲ್ಲವೋ ಅತಃ = ಆ ಕಾರಣದಿಂದ ತದಭಾವಃ = ವೈಶೇಷಿಕಾದಿಮತದಲ್ಲಿ ದ್ವ್ಯಣುಕಾದಿಕಾರ್ಯಾಭಾವವು ಆಗುತ್ತದೆ.

**ಸೂ.ರ.:–** एवं चेश्वरेच्छा निमित्तकारणमिति चेत् । सा किं नित्याऽनित्या वा । उभयथाऽपि न परमाणुकर्म सम्भवति । यदीश्वरेच्छा नित्या तर्हि प्रलये सत्यामपि तस्यां परमाणुचेष्टाभावेनान्यदाऽपि तदभावः । अथानित्या तत्कारणाभावेनेश्वरेच्छानुत्पत्त्या परमाणुकर्माभावः । न च वाच्यं पूर्वकल्पीयेच्छाऽनित्याऽपि यागवन्निमित्तमिति । प्रमाणाभावात् । अथ नेश्वरेच्छा कारणं तदेवास्तु । तर्ह्यन्यत्रापि कारणं न स्यात् । स एव परमते परमाणुकर्माभावेन संयोगाभावाद्व्यणुकादिकार्याभावः ।

**ಅನು.:–** ದ್ವ್ಯಣುಕಾದಿಕಾರ್ಯಗಳನ್ನು ಕುರಿತು ಈಶ್ವರೇಚ್ಛಾ ನಿಮಿತ್ತಕಾರಣ ಎನ್ನುವುದಾದರೆ, ಆ ಈಶ್ವರೇಚ್ಛಾವು ನಿತ್ಯವೋ? ಅನಿತ್ಯವೋ? ಎರಡೂ ಪಕ್ಷಗಳಲ್ಲಿಯೂ ಪರಮಾಣುಕರ್ಮವು ಸಂಭವಿಸುವುದಿಲ್ಲ.

ಒಂದುವೇಳೆ ಈಶ್ವರೇಚ್ಛಾ ನಿತ್ಯ ಎನ್ನುವುದಾದರೆ ಆಗ ಪ್ರಲಯಕಾಲದಲ್ಲಿ ಈಶ್ವರೇಚ್ಛಾ ಇದ್ದರೂ ಸಹ ಪರಮಾಣುಚೇಷ್ಟೆ ಇಲ್ಲದ ಕಾರಣ ಅದರಂತೆ ಸೃಷ್ಟ್ಯಾದಿಕಾಲದಲ್ಲಿಯೂ ಪರಮಾಣುಕರ್ಮ ಇರುವುದು ಬೇಡ.

ಆ ಈಶ್ವರೇಚ್ಛಾ ಅನಿತ್ಯ ಎನ್ನುವುದಾದರೆ, ಕಾರಣವಾದ ಈಶ್ವರೇಚ್ಛಾ ಇಲ್ಲದ ಕಾರಣ ಪರಮಾಣುಕರ್ಮ ಇರುವುದು ಬೇಡ.

ಹಾಗಲ್ಲ, ಈಶ್ವರೇಚ್ಛಾ ಅನಿತ್ಯವಾದರೂ ಸಹ ಪೂರ್ವಕಲ್ಪೀಯ ಇಚ್ಛಾ ಎನ್ನುವುದು ಯಾಗಾದಿಗಳಂತೆ ನಿಮಿತ್ತಕಾರಣವಾಗಬಹುದಲ್ಲ? ಎಂದರೆ, ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲದ ಕಾರಣ ಹಾಗೆ ಹೇಳಲು ಬರುವುದಿಲ್ಲ.

ಈ ರೀತಿಯಾಗಿ ಪರಮತದಲ್ಲಿ ಪರಮಾಣುಕರ್ಮವು ಅನುಪಪನ್ನವಾಗುವುದರಿಂದ ಪರಮಾಣುಗಳಲ್ಲಿ ಸಂಯೋಗ ಇಲ್ಲದ ಕಾರಣ ದ್ವ್ಯಣುಕಾದಿಕಾರ್ಯವು ಕೂಡುವುದಿಲ್ಲ.

**ಸೂ.ರ.:– वैदिकेश्वरपक्षे तु सत्यामपीश्वरेच्छायां सर्वं कार्यानुत्पादादिकमीश्वराचिन्त्यशक्तित एवोपपद्यते । न च परपक्षे सममेतत् । तस्यानुमानगम्येश्वरत्वेन वेदैकगम्येश्वरत्वाभावात् । अतो वैशेषिकायुक्तस्यासामञ्जस्येन युक्तं हरेरनन्तगुणत्वलक्षणमिति सिद्धम् ।**

**ಅನು.:–** ಇದೇ ದೋಷವು ನಿಮಗೂ ಬರುತ್ತದೆಯಲ್ಲವೇ? ಎಂದರೆ, ವೈದಿಕ ಈಶ್ವರ-ಪಕ್ಷದಲ್ಲಿ ಮಾತ್ರ ಈಶ್ವರೇಚ್ಛಾ ಇದ್ದರೂ ಸಹ ಎಲ್ಲ ಕಾರ್ಯಾನುತ್ಪಾದಾದಿಗಳು ಈಶ್ವರನ ಅಚಿಂತ್ಯಶಕ್ತಿಯಿಂದಲೇ ಉಪಪನ್ನವಾಗುತ್ತವೆ.

ಇದೇ ಸಮಾಧಾನ ಪರಪಕ್ಷದಲ್ಲಿ ಹೇಳಲು ಬರುವುದಿಲ್ಲ. ಕಾರಣ – ಅವರು ಈಶ್ವರ-ನನ್ನು ಅನುಮಾನಗಮ್ಯ ಎಂದು ಹೇಳುತ್ತಾರೆಯೇ ಹೊರತು ನಮ್ಮಂತೆ ವೇದೈಕಗಮ್ಯ ಎಂದು ಹೇಳುವುದಿಲ್ಲ.

ಆದ್ದರಿಂದ ವೈಶೇಷಿಕಾದಿಗಳು ಹೇಳುವುದು ಅಸಮಂಜಸವಾದ್ದರಿಂದ ವಿಷ್ಣುವಿಗೆ ಅನಂತಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं वैशेपिकादिपक्षे निमित्तकारणासम्भवं दर्शयित्वा समवायि-कारणमपि निराकुर्वत्सूत्रमाह ॥**

**ಅನು.:–** ಈ ರೀತಿಯಾಗಿ ವೈಶೇಷಿಕಾದಿಪಕ್ಷದಲ್ಲಿ ನಿಮಿತ್ತಕಾರಣವು ಅಸಂಭಾವಿತ ಎಂದು ತೋರಿಸಿ ಪ್ರಕೃತ ಸಮವಾಯಿಕಾರಣವನ್ನೂ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ समवायाभ्युपगमाच्च साम्यादनवस्थितेः ॐ (२.२.१३)**

ವೈಶೇಷಿಕೈಃ = ವೈಶೇಷಿಕರಿಂದ ಅವಯವಾವಯವ್ಯಾದೀನಾಂ = ಅವಯವ -

ಅವಯವಿ ಮೊದಲಾದವುಗಳಿಗೆ ಭಿನ್ನತ್ವನಿಮಿತ್ತೇನ = ಭಿನ್ನತ್ವನಿಮಿತ್ತದಿಂದಾಗಿ ಸಮವಾಯಾಭ್ಯುಪಗಮಾತ್ = ಸಮವಾಯಸಂಬಂಧವನ್ನು ಅಂಗೀಕರಿಸಿದ್ದರಿಂದ ಸಾಮ್ಯಾತ್ = ಸಮವಾಯಿ ಅಸಮವಾಯಿ ಕಾರಣಗಳಿಗೂ ಭಿನ್ನತ್ವಸಾಮ್ಯ ಇರುವುದರಿಂದ ತತ್ರಾಪಿ ಸಮವಾಯಾಭ್ಯುಪಗಮೇ = ಅವುಗಳಲ್ಲಿಯೂ ಮತ್ತೆ ಸಮವಾಯಸಂಬಂಧವನ್ನು ಅಂಗೀಕರಿಸುವುದಾದರೆ ಅನವಸ್ಥಿತೇಃ ಚ = ಅನವಸ್ಥಾದೋಷ ಬರುವುದರಿಂದಲೂ ಸಹ, ಆ ವೈಶೇಷಿಕಾದಿಮತವು ಅಯುಕ್ತವಾಗಿದೆ.

**ಸೂ.ರ.:– एवं च यदपि परमाण्वादिद्रव्यं समवायिकारणमिति । तन्न । अवयवावयविनोर्भिन्नत्वमङ्गीकृत्य विशेषणविशेष्यभावोपपत्तये समवायाभ्युपगमात् । समवायस्यापि भिन्नत्वसाम्येन मृद्घटसमवाय इत्यादिविशेषणविशेष्यभावोपपत्तये समवायान्तरापेक्षा स्यात् । तत्राप्येवमित्यनवस्थानात् । मूलभूतावयवावयव्यादिसम्बन्धस्यैवासिद्ध्या तदसिद्धिः । तेषां प्रथमसम्बन्धसिद्ध्यर्थमभ्युपगन्तव्यानां सम्बन्धान्तराणां सुतरामसिद्धेः ।**

**ಅನು.:–** ಮತ್ತು, ವೈಶೇಷಿಕರು ಏನು ಹೇಳಿದ್ದಾರೆ – ಪರಮಾಣು ಮೊದಲಾದ ದ್ರವ್ಯವು ಸಮವಾಯಿಕಾರಣವಾಗಿದೆ ಎಂದು, ಅದೂ ಸರಿಯಲ್ಲ. ಏಕೆಂದರೆ - ಅವಯವ - ಅವಯವಿಗಳಲ್ಲಿ ಭಿನ್ನತ್ವವನ್ನು (ಭೇದವನ್ನು) ಅಂಗೀಕರಿಸಿ ವಿಶೇಷಣ-ವಿಶೇಷ್ಯಭಾವ ಸಂಬಂಧವನ್ನು ಕೂಡಿಸುವುದಕ್ಕಾಗಿ ಸಮವಾಯವನ್ನು ಅಂಗೀಕರಿಸಿದ್ದರಿಂದ, ಪ್ರಕೃತ ಅವಯವ-ಅವಯವಿ ಹಾಗೂ ಸಮವಾಯ ಇವುಗಳಲ್ಲಿಯೂ ಭಿನ್ನತ್ವವು (ಭೇದವು) ಸಮಾನವೇ ಆಗಿರುವುದರಿಂದ 'ಮೃದ್ಘಟಸಮವಾಯಃ' ಇತ್ಯಾದಿ ವಿಶೇಷಣ-ವಿಶೇಷ್ಯಭಾವ ಸಂಬಂಧವನ್ನು ಕೂಡಿಸುವುದಕ್ಕಾಗಿ ಅವುಗಳಲ್ಲಿ ಮತ್ತೊಂದು ಸಮವಾಯವನ್ನು ಅಂಗೀಕರಿಸಬೇಕಾಗುತ್ತದೆ. ಆ ಸಮವಾಯಕ್ಕೂ ಸಮವಾಯಿಗೂ ಮತ್ತೊಂದು ಸಮವಾಯವನ್ನು ಅಂಗೀಕರಿಸಬೇಕಾಗುತ್ತದೆ. ಹೀಗೆ ಅನವಸ್ಥಾದೋಷ ಬರುತ್ತದೆ. ಹೀಗಾಗಿ ಮೂಲಭೂತವಾದ ಅವಯವ-ಅವಯವ್ಯಾದಿ ಸಂಬಂಧವೇ ಸಿದ್ಧವಾಗದ ಕಾರಣ ಸಮವಾಯವು ಸಿದ್ಧವಾಗುವುದಿಲ್ಲ. ಅಂತಹ ಪ್ರಥಮಸಂಬಂಧದ ಸಿದ್ಧಿಗಾಗಿ ಅಂಗೀಕರಿಸಲ್ಪಡುವ ಇತರ ಸಂಬಂಧಗಳಂತೂ ಸುತರಾಂ ಸಿದ್ಧವಾಗುವುದಿಲ್ಲ.

**ಸೂ.ರ.:– समवायस्य स्वनिर्वाहकत्वे स्वस्मिन्स्वयमेव विशेषण विशेष्यभाववुद्धिजनकत्वेऽङ्गीकृते समवायासिद्धेः । गुणगुण्यादिभेदं तत्समवायं चाङ्गीकृत्य तत्स्वनिर्वाहकत्वकल्पनापेक्षया लाघवेन गुण-गुण्यादेरभेदमङ्गीकृत्यैकस्य द्रव्यस्यैव स्वनिर्वाहकत्वोपपत्तौ समवाय-वैयर्थ्यात् । अतो युक्तं लक्षणसूत्रमिति सिद्धम् ॥**

**ಅನು.:–** ಅನವಸ್ಥಾ ಪರಿಹಾರ ಮಾಡಿಕೊಳ್ಳಲು ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದಾದರೆ (ತನ್ನಲ್ಲಿ ತಾನೇ ವಿಶೇಷಣ – ವಿಶೇಷ್ಯ ಭಾವ ಬುದ್ಧಿಜನಕ ಎಂದು ಅಂಗೀಕರಿಸುವುದಾದರೆ) ಸಮವಾಯವು ಸಿದ್ಧವಾಗದೇ ಹೋಗಬೇಕಾಗುತ್ತದೆ. ಕಾರಣ - ಗುಣಗುಣ್ಯಾದಿಗಳಲ್ಲಿ ಭೇದವನ್ನು ಹಾಗೂ ಅವುಗಳಲ್ಲಿ ಸಮವಾಯವನ್ನೂ ಅಂಗೀಕರಿಸಿ ಆ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದಕ್ಕಿಂತಲೂ, ಗುಣಗುಣ್ಯಾದಿಗಳಲ್ಲಿ ಅಭೇದವನ್ನು ಅಂಗೀಕರಿಸಿ ಒಂದು ದ್ರವ್ಯಕ್ಕೇನೇ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದು ಲಘುಭೂತವಾಗುವುದರಿಂದ ಸಮವಾಯವನ್ನು ಒಪ್ಪುವುದು ವ್ಯರ್ಥವಾಗುತ್ತದೆ.

ಆದ್ದರಿಂದ ಸಮವಾಯಿಕಾರಣವೂ ಅಯುಕ್ತವಾದ್ದರಿಂದ ವಿಷ್ಣುವಿಗೆ ಅನಂತ-ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं परमते कारणत्रयनिरासेन सृष्टिं निरस्य प्रलयनिरासार्थं प्रवृत्तं सूत्रमुपन्यस्यति ॥**

**ಅನು.:–** ಈ ರೀತಿಯಾಗಿ ಪರಮತದಲ್ಲಿ (ವೈಶೇಷಿಕ ಮತದಲ್ಲಿ) ಸಮವಾಯಿಕಾರಣ – ಅಸಮವಾಯಿಕಾರಣ – ನಿಮಿತ್ತಕಾರಣಗಳನ್ನು ನಿರಾಕರಿಸುವ ಮೂಲಕ ಸೃಷ್ಟಿಯನ್ನು ನಿರಾಕರಿಸಿ ಪ್ರಕೃತ ಅವರ ಮತದಲ್ಲಿ ಪ್ರಲಯವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತವಾದ ಸೂತ್ರವನ್ನು ನಿರಾಕರಿಸುತ್ತಾರೆ –

### ॐ नित्यमेव च भावात् ॐ (२.२.१४)

ಈಶ್ವರೇಚ್ಛಾ-ಪರಮಾಣು ಮೊದಲಾದ ಕಾರಣಗಳು ನಿತ್ಯವಾದ್ದರಿಂದ ವೈಶೇಷಿಕ-ಮತದಲ್ಲಿ ನಿತ್ಯಮೇವ = ಯಾವಾಗಲೂ ಭಾವಾತ್ = ಇರುವುದರಿಂದ ನಿತ್ಯಮೇವ ಕಾರ್ಯೋತ್ಪತ್ತಿಃ ಸ್ಯಾತ್ = ಯಾವಾಗಲೂ ಕಾರ್ಯೋತ್ಪತ್ತಿ ಆಗಲಿ ನ ತು ಕದಾಚಿತ್ = ಹೊರತು ಕದಾಚಿತ್ ಉತ್ಪತ್ತಿ, ಕದಾಚಿತ್ ಉತ್ಪತ್ತಿ ಇಲ್ಲ ಎಂದಾಗಬಾರದು.

**ಸೂ.ರ.:– एवं च परमते लयासम्भवः । समवायिकारणा-समवायिकारणनिमित्तकारणानां सद्भावेन कार्यानुत्पादे कारणाभावात् । समवायिकारणपरमाणूनां सदातनत्वे समवायस्यैव जनित्वाङ्गीकारे सर्वं कार्यं नित्यं जनिमदेव स्यात् । समवायिकारणादिसत्वे कार्योत्पत्त्युपरमे कदाऽपि तस्मात्कार्योत्पत्तिर्न स्यात् । सति पुष्कलकारणे कार्यानुत्पादे तस्य तत्कारणत्वायोगात् । अतो युक्तं लक्षणसूत्रमिति सिद्धम् ।**

**ಅನು.:–** ವೈಶೇಷಿಕಮತದಲ್ಲಿ ಲಯವು ಕೂಡುವುದಿಲ್ಲ. ಏಕೆಂದರೆ - ಪ್ರಲಯ-ಕಾಲದಲ್ಲಿಯೂ ಸಹ ಸಮವಾಯಿಕಾರಣ - ಅಸಮವಾಯಿಕಾರಣ - ನಿಮಿತ್ತಕಾರಣಗಳು ಇರುವುದರಿಂದ ಕಾರ್ಯ ಹುಟ್ಟದಿರುವುದಕ್ಕೆ ಯಾವ ಕಾರಣವೂ ಇರುವುದಿಲ್ಲ. ಸಮವಾಯಿಕಾರಣವಾದ ಪರಮಾಣುಗಳು ನಿತ್ಯವಾಗುವುದಾದರೆ, ಸಮವಾಯಕ್ಕೇನೇ ಜನಿತ್ವವನ್ನು ಅಂಗೀಕರಿಸುವುದಾದರೆ ಎಲ್ಲ ಕಾರ್ಯಗಳೂ ನಿತ್ಯದಲ್ಲಿಯೂ ಹುಟ್ಟುತ್ತಾ ಇರಬೇಕಾಗುತ್ತದೆ. ಸಮವಾಯಿಕಾರಣಾದಿಗಳು ಇದ್ದಾಗಲೂ ಕಾರ್ಯೋತ್ಪತ್ತಿಗೆ ಉಪರಮ ಹೇಳುವುದಾದರೆ ಸಮವಾಯಿಕಾರಣಾದಿಗಳಿಂದ ಯಾವಾಗಲೂ ಕಾರ್ಯೋತ್ಪತ್ತಿಯು ಆಗದೇ ಹೋಗಬೇಕಾಗುತ್ತದೆ. ಏಕೆಂದರೆ - ಕಾರಣಸಾಮಗ್ರೀ ಇರುವಾಗ ಕಾರ್ಯ ಹುಟ್ಟಲಿಲ್ಲ ಎಂದಾದರೆ ಅದಕ್ಕೆ ಕಾರಣತ್ವವು ಕೂಡುವುದಿಲ್ಲ.

ಆದ್ದರಿಂದ ಪ್ರಲಯಕಾಲದಲ್ಲಿಯೂ ಕಾರ್ಯೋತ್ಪತ್ತಿಪ್ರಸಂಗ ಬರುವುದರಿಂದ ವೈಶೇಷಿಕಮತವು ಅಸಮಂಜಸವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं परमाणूनां नित्यत्वमभ्युपेत्य तदारम्भकवादो दूषितः । इदानीं नित्यत्वमपाकुर्वत्सूत्रमुपन्यस्यति ।**

**ಅನು.:–** ಈ ರೀತಿಯಾಗಿ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಿ, ಆ ಪರಮಾಣು ಗಳಿಂದ ಕಾರ್ಯಗಳು ಆರಂಭವಾಗುತ್ತವೆ ಎಂಬ ವಾದವನ್ನು ನಿರಾಕರಿಸಿದರು. ಪ್ರಕೃತ ಆ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಲೂ ಬರುವುದಿಲ್ಲ ಎಂಬುದಾಗಿ ಪರಮಾಣುನಿತ್ಯತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ रूपादिमत्वाच्च विपर्ययो दर्शनात् ॐ (२.२.१५)**

**ಸೂ.ರ.:– समवायस्य स्वनिर्वाहकत्वे स्वस्मिन्स्वयमेव विशेषण विशेष्यभावबुद्धिजनकत्वेऽङ्गीकृते समवायासिद्धेः । गुणगुण्यादिभेदं तत्समवायं चाङ्गीकृत्य तत्स्वनिर्वाहकत्वकल्पनापेक्षया लाघवेन गुण-गुण्यादेरभेदमङ्गीकृत्यैकस्य द्रव्यस्यैव स्वनिर्वाहकत्वोपपत्तौ समवाय-वैयर्थ्यात् । अतो युक्तं लक्षणसूत्रमिति सिद्धम् ॥**

**ಅನು.:–** ಅನವಸ್ಥಾ ಪರಿಹಾರ ಮಾಡಿಕೊಳ್ಳಲು ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದಾದರೆ (ತನ್ನಲ್ಲಿ ತಾನೇ ವಿಶೇಷಣ - ವಿಶೇಷ್ಯಭಾವ ಬುದ್ಧಿಜನಕ ಎಂದು ಅಂಗೀಕರಿಸುವುದಾದರೆ) ಸಮವಾಯವು ಸಿದ್ಧವಾಗದೇ ಹೋಗಬೇಕಾಗುತ್ತದೆ. ಕಾರಣ - ಗುಣಗುಣ್ಯಾದಿಗಳಲ್ಲಿ ಭೇದವನ್ನು ಹಾಗೂ ಅವುಗಳಲ್ಲಿ ಸಮವಾಯವನ್ನೂ ಅಂಗೀಕರಿಸಿ ಆ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದಕ್ಕಿಂತಲೂ, ಗುಣಗುಣ್ಯಾದಿಗಳಲ್ಲಿ ಅಭೇದವನ್ನು ಅಂಗೀಕರಿಸಿ ಒಂದು ದ್ರವ್ಯಕ್ಕೇನೇ ಸ್ವನಿರ್ವಾಹಕತ್ವವನ್ನು ಅಂಗೀಕರಿಸುವುದು ಲಘುಭೂತವಾಗುವುದರಿಂದ ಸಮವಾಯವನ್ನು ಒಪ್ಪುವುದು ವ್ಯರ್ಥವಾಗುತ್ತದೆ.

ಆದ್ದರಿಂದ ಸಮವಾಯಿಕಾರಣವೂ ಅಯುಕ್ತವಾದ್ದರಿಂದ ವಿಷ್ಣುವಿಗೆ ಅನಂತ-ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं परमते कारणत्रयनिरासेन सृष्टिं निरस्य प्रलयनिरासार्थं प्रवृत्तं सूत्रमुपन्यस्यति ॥**

**ಅನು.:–** ಈ ರೀತಿಯಾಗಿ ಪರಮತದಲ್ಲಿ (ವೈಶೇಷಿಕ ಮತದಲ್ಲಿ) ಸಮವಾಯಿಕಾರಣ - ಅಸಮವಾಯಿಕಾರಣ - ನಿಮಿತ್ತಕಾರಣಗಳನ್ನು ನಿರಾಕರಿಸುವ ಮೂಲಕ ಸೃಷ್ಟಿಯನ್ನು ನಿರಾಕರಿಸಿ ಪ್ರಕೃತ ಅವರ ಮತದಲ್ಲಿ ಪ್ರಲಯವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತವಾದ ಸೂತ್ರವನ್ನು ನಿರಾಕರಿಸುತ್ತಾರೆ -

### ॐ नित्यमेव च भावात् ॐ (२.२.१४)

ಈಶ್ವರೇಚ್ಛಾ-ಪರಮಾಣು ಮೊದಲಾದ ಕಾರಣಗಳು ನಿತ್ಯವಾದ್ದರಿಂದ ವೈಶೇಷಿಕ-ಮತದಲ್ಲಿ ನಿತ್ಯಮೇವ = ಯಾವಾಗಲೂ ಭಾವಾತ್ = ಇರುವುದರಿಂದ ನಿತ್ಯಮೇವ ಕಾರ್ಯೋತ್ಪತ್ತಿಃ ಸ್ಯಾತ್ = ಯಾವಾಗಲೂ ಕಾರ್ಯೋತ್ಪತ್ತಿ ಆಗಲಿ ನ ತು ಕದಾಚಿತ್ = ಹೊರತು ಕದಾಚಿತ್ ಉತ್ಪತ್ತಿ, ಕದಾಚಿತ್ ಉತ್ಪತ್ತಿ ಇಲ್ಲ ಎಂದಾಗಬಾರದು.

ಸೂ.ರ.:– एवं च परमते लयासम्भवः । समवायिकारणा-समवायिकारणनिमित्तकारणानां सद्भावेन कार्यानुत्पादे कारणाभावात् । समवायिकारणपरमाणूनां सदातनत्वे समवायस्यैव जनित्वाङ्गीकारे सर्वं कार्यं नित्यं जनिमदेव स्यात् । समवायिकारणादिसत्वे कार्योत्पत्त्युपरमे कदाऽपि तस्मात्कार्योत्पत्तिर्न स्यात् । सति पुष्कलकारणे कार्यानुत्पादे तस्य तत्कारणत्वायोगात् । अतो युक्तं लक्षणसूत्रमिति सिद्धम् ।

ಅನು.:– ವೈಶೇಷಿಕಮತದಲ್ಲಿ ಲಯವು ಕೂಡುವುದಿಲ್ಲ. ಏಕೆಂದರೆ – ಪ್ರಲಯ-ಕಾಲದಲ್ಲಿಯೂ ಸಹ ಸಮವಾಯಿಕಾರಣ – ಅಸಮವಾಯಿಕಾರಣ – ನಿಮಿತ್ತಕಾರಣಗಳು ಇರುವುದರಿಂದ ಕಾರ್ಯ ಹುಟ್ಟದಿರುವುದಕ್ಕೆ ಯಾವ ಕಾರಣವೂ ಇರುವುದಿಲ್ಲ. ಸಮವಾಯಿಕಾರಣವಾದ ಪರಮಾಣುಗಳು ನಿತ್ಯವಾಗುವುದಾದರೆ, ಸಮವಾಯಕ್ಕೇನೇ ಜನಿತ್ವವನ್ನು ಅಂಗೀಕರಿಸುವುದಾದರೆ ಎಲ್ಲ ಕಾರ್ಯಗಳೂ ನಿತ್ಯದಲ್ಲಿಯೂ ಹುಟ್ಟುತ್ತಾ ಇರಬೇಕಾಗುತ್ತದೆ. ಸಮವಾಯಿಕಾರಣಾದಿಗಳು ಇದ್ದಾಗಲೂ ಕಾರ್ಯೋತ್ಪತ್ತಿಗೆ ಉಪರಮ ಹೇಳುವುದಾದರೆ ಸಮವಾಯಿಕಾರಣಾದಿಗಳಿಂದ ಯಾವಾಗಲೂ ಕಾರ್ಯೋತ್ಪತ್ತಿಯು ಆಗದೇ ಹೋಗಬೇಕಾಗುತ್ತದೆ. ಏಕೆಂದರೆ – ಕಾರಣಸಾಮಗ್ರೀ ಇರುವಾಗ ಕಾರ್ಯ ಹುಟ್ಟಲಿಲ್ಲ ಎಂದಾದರೆ ಅದಕ್ಕೆ ಕಾರಣತ್ವವು ಕೂಡುವುದಿಲ್ಲ.

ಆದ್ದರಿಂದ ಪ್ರಲಯಕಾಲದಲ್ಲಿಯೂ ಕಾರ್ಯೋತ್ಪತ್ತಿಪ್ರಸಂಗ ಬರುವುದರಿಂದ ವೈಶೇಷಿಕಮತವು ಅಸಮಂಜಸವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂ.ರ.:– एवं परमाणूनां नित्यत्वमभ्युपेत्य तदारम्भकवादो दूषितः । इदानीं नित्यत्वमपाकुर्वत्सूत्रमुपन्यस्यति ।

ಅನು.:– ಈ ರೀತಿಯಾಗಿ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಿ, ಆ ಪರಮಾಣು ಗಳಿಂದ ಕಾರ್ಯಗಳು ಆರಂಭವಾಗುತ್ತವೆ ಎಂಬ ವಾದವನ್ನು ನಿರಾಕರಿಸಿದರು. ಪ್ರಕೃತ ಆ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಲೂ ಬರುವುದಿಲ್ಲ ಎಂಬುದಾಗಿ ಪರಮಾಣುನಿತ್ಯತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

ॐ रूपादिमत्वाच्च विपर्ययो दर्शनात् ॐ (२.२.१५)

ಮತ್ತು ವೈಶೇಷಿಕಮತದಲ್ಲಿ ರೂಪಾದಿಮತ್ವಾಚ್ಚ = ಪಾರ್ಥಿವ - ಆಪ್ಯ - ತೈಜಸ ಪರಮಾಣುಗಳು ರೂಪಾದಿಗಳುಳ್ಳದ್ದಾದ್ದರಿಂದ ವಿಪರ್ಯಯಃ = ನಿತ್ಯತ್ವಕ್ಕೆ ವಿಪರೀತವಾದ ಅನಿತ್ಯತ್ವವು ಬರಬೇಕಾಗುತ್ತದೆ. ಕುತಃ = ಯಾಕೆ? ದರ್ಶನಾತ್ = ಯತ್ ರೂಪಾದಿಮತ್ ತತ್ ಅನಿತ್ಯಂ (ಯಾವುದು ರೂಪಾದಿಗಳುಳ್ಳದ್ದು ಆಗಿದೆಯೋ ಅದು ಅನಿತ್ಯವಾಗಿದೆ) ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿದ್ದರಿಂದ.

**ಸೂ.ರ.:– एवं च वस्तुतस्तु न परमाणूनां नित्यत्वमुपपद्यते । प्राकृतरूपत्वेनावश्यं भावात् । दृश्यते खलु लोके यत्प्राकृतरूपादिमत्तदनित्यमिति । पार्थिवाप्यतैजसपरमाणूनां भौतिकरूपरसगन्धस्पर्शवत्त्वादनित्यत्वम् । ततश्च परमाणूनां नित्यत्वाभावेनोक्तं लक्षणसूत्रं युक्तमिति सिद्धम् ।**

**ಅನು.:–** ವಾಸ್ತವಿಕವಾಗಿ ಪರಮಾಣುಗಳಿಗೆ ನಿತ್ಯತ್ವವು ಉಪಪನ್ನವಾಗುವುದಿಲ್ಲ. ಏಕೆಂದರೆ - ಪರಮಾಣುಗಳು ಪ್ರಾಕೃತರೂಪ ಉಳ್ಳದ್ದಾದ್ದರಿಂದ ಅನಿತ್ಯತ್ವವು ಬರಬೇಕಾಗುತ್ತದೆ. ಲೋಕದಲ್ಲಿ ಯಾವುದು ಪ್ರಾಕೃತರೂಪಾದಿಗಳುಳ್ಳದ್ದಾಗಿರುವುದೋ ಅದು ಅನಿತ್ಯವಾಗಿದೆ ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿದೆ. ಪ್ರಕೃತದಲ್ಲಿ ಪಾರ್ಥಿವ-ಆಪ್ಯ-ತೈಜಸ ಪರಮಾಣುಗಳು ಭೌತಿಕ ರೂಪ-ರಸ-ಗಂಧ-ಸ್ಪರ್ಶ ಉಳ್ಳದ್ದಾದ್ದರಿಂದ ಅವುಗಳಿಗೆ ಅನಿತ್ಯತ್ವವನ್ನು ಒಪ್ಪಲೇಬೇಕಾಗುತ್ತದೆ.

ಆದ್ದರಿಂದ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಲು ಬಾರದ ಕಾರಣ (ವೈಶೇಷಿಕಮತವು ಅಯುಕ್ತವಾದ್ದರಿಂದ) ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಆಕ್ಷೇಪ

**ಸೂ.ರ.:– ननु यद्रूपादिमत्तदनित्यमिति सामान्यव्याप्तिः । यन्निरवयवं द्रव्यं तन्नित्यमिति विशेषव्याप्तिर्बलवती । अतस्तया बाधितत्वेन रूपादिमत्त्वं परमाणूनामनित्यत्वं न साधयेत् । अस्तु वा परमाणूनां सादित्वम् । तथाऽपि न द्व्यणुकादि कार्याभावः । पारमाणूनां**

**कारणान्तरेणोत्पत्तौ तेभ्यो द्व्यणुकाद्युत्पत्तिसम्भवादिति प्राप्ते पराकुर्वत्सूत्रमाह ।**

**ಅನು.:–** ಯತ್ ರೂಪಾದಿಮತ್ ತತ್ ಅನಿತ್ಯಂ (ಯಾವುದು ಪ್ರಾಕೃತರೂಪಾದಿಗಳುಳ್ಳದ್ದಾಗಿರುತ್ತದೆಯೋ ಅದು ಅನಿತ್ಯವಾಗಿರುತ್ತದೆ) ಎಂಬ ವ್ಯಾಪ್ತಿಯು ಸಾಮಾನ್ಯವ್ಯಾಪ್ತಿಯಾಗಿದೆ. ಯತ್ ನಿರವಯವಂ ದ್ರವ್ಯಂ ತತ್ ನಿತ್ಯಂ (ಯಾವುದು ನಿರವಯವವಾದ ದ್ರವ್ಯವಾಗಿರುತ್ತದೆಯೋ ಅದು ನಿತ್ಯವಾಗಿರುತ್ತದೆ) ಎಂಬ ವ್ಯಾಪ್ತಿಯು ವಿಶೇಷವಾಪ್ತಿಯಾಗಿದೆ. ಮತ್ತು ಪ್ರಬಲವಾಗಿದೆ. ಇಂತಹ ಪ್ರಬಲವಾದ ವಿಶೇಷವ್ಯಾಪ್ತಿಯಿಂದ ಬಾಧಿತವಾಗುವುದರಿಂದ ರೂಪಾದಿಮತ್ತ್ವವು ಪರಮಾಣುಗಳಿಗೆ ಅನಿತ್ಯವನ್ನು ಸಾಧಿಸಲು ಸಮರ್ಥವಾಗುವುದಿಲ್ಲ.

ಅಥವಾ ನಿಮ್ಮ ಪ್ರಕಾರ ಪರಮಾಣುಗಳು ಅನಿತ್ಯ (ಸಾದಿಯಾಗಿವೆ) ಎಂದೇ ಆಗಲಿ. ಆದರೂ ಸಹ ದ್ವ್ಯಣುಕಾದಿಕಾರ್ಯಗಳು ಅನುಪಪನ್ನವಾಗುವುದಿಲ್ಲ. ಏಕೆಂದರೆ – ಪರಮಾಣುಗಳು ಮತ್ತೊಂದು ಕಾರಣದಿಂದ ಉತ್ಪನ್ನವಾಗಿ ಅವುಗಳಿಂದ ದ್ವ್ಯಣುಕಾದಿಕಾರ್ಯಗಳು ಸಂಭಾವಿತವಾಗಬಹುದು ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ उभयथा च दोषात् ॐ (२.२.१६)**

ವೈಶೇಷಿಕಮತದಲ್ಲಿ ಉಭಯಥಾ ಚ = ಪರಮಾಣುಗಳಿಗೆ ನಿತ್ಯತ್ವಪಕ್ಷ ಹಾಗೂ ಅನಿತ್ಯತ್ವಪಕ್ಷ ಎರಡೂ ಪಕ್ಷಗಳಲ್ಲಿಯೂ ಸಹ ದೋಷಾತ್ = ಅದರಂತೆ ಎಲ್ಲದಕ್ಕೂ ನಿತ್ಯತ್ವಪ್ರಸಕ್ತಿ ಅಥವಾ ಕಾರಣಾಭಾವನಿಮಿತ್ತಕವಾಗಿ ಉತ್ಪತ್ತ್ಯಭಾವ ರೂಪವಾದ ದೋಷ ಇರುವುದರಿಂದ ನ ತತ್ಪಕ್ಷೋ ಯುಕ್ತಃ = ವೈಶೇಷಿಕಮತವು ಯುಕ್ತವಲ್ಲ.

**ಸೂ.ರ.:– एवं च यदुक्तम् । यद्रूपादिमत्तदनित्यमिति सामान्यव्याप्तिरिति । तन्न । रूपादिमत्यनित्यत्वापवादकस्य विशेषप्रमाणस्याभावात् । न च निरवयवत्वं विशेषप्रमाणम् । रूपादिमत्त्वेन परमाणौ तदभावस्यापि साधयितुं शक्यत्वात् ।**

**ಅನು.:–** "ಯತ್ ರೂಪಾದಿಮತ್ ತತ್ ಅನಿತ್ಯಂ ಎನ್ನುವುದು ಸಾಮಾನ್ಯವ್ಯಾಪ್ತಿಯಾಗಿದೆ" ಎಂದು ಹೇಳಿದ್ದು ಯುಕ್ತವಾಗುವುದಿಲ್ಲ. ಏಕೆಂದರೆ – ರೂಪಾದಿಗಳುಳ್ಳ ವಸ್ತುವಿನಲ್ಲಿ ಅನಿತ್ಯತ್ವ ಬರುವುದಕ್ಕೆ ಅಪವಾದಕವಾದ ಯಾವ ವಿಶೇಷ ಪ್ರಮಾಣವೂ ಇಲ್ಲ.

ಅನಿತ್ಯತ್ವಕ್ಕೆ ಅಪವಾದಕವಾದ ವಿಶೇಷಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ ? ಯತ್ ನಿರವಯವಂ ದ್ರವ್ಯಂ ತತ್ ನಿತ್ಯಂ ಎಂಬುದಾಗಿ ಅನಿತ್ಯತ್ವಕ್ಕೆ ಅಪವಾದಕವಾದ ನಿರವಯವತ್ವವೇ ವಿಶೇಷಪ್ರಮಾಣವಾಗುತ್ತದೆ ಎಂದು ಹೇಳಿದ್ದೇವೆಯಲ್ಲ? ಎಂದರೆ, ಅದು ಸರಿಯಲ್ಲ. ಪರಮಾಣವಃ ನ ನಿರವಯವಾಃ ರೂಪಾದಿಮತ್ತ್ವಾತ್ ಘಟಾದಿವತ್ ಎಂಬುದಾಗಿ ರೂಪಾದಿಮತ್ವದಿಂದಾಗಿ ಪರಮಾಣುಗಳಿಗೆ ನಿರವಯವತ್ವಾ ಭಾವವನ್ನೂ ಸಾಧಿಸಲು ಬರುತ್ತದೆ. ಆದ್ದರಿಂದ ನಿರವಯವತ್ವದಿಂದಾಗಿ ನಿತ್ಯತ್ವವನ್ನು ಹೇಳುವುದು ಸರಿಯಾಗುವುದಿಲ್ಲ.

**ಸೂ.ರ.:– यदप्यनित्यत्वे दोषाभाव इति । तन्न । त्वन्मते परमाणूनां कारणासम्भवेनानुत्पत्तौ द्व्यणुकादिकार्यानुत्पत्तिप्रसङ्गलक्षणबाधकसद्भावात् । एवं पक्षद्वयेऽपि दोषदुष्टत्वेन युक्तं लक्षणसूत्रमिति सिद्धम् ।**

"ಅಥವಾ ಪರಮಾಣುಗಳಿಗೆ ಅನಿತ್ಯತ್ವವನ್ನು (ಸಾದಿತ್ವವನ್ನು) ಅಂಗೀಕರಿಸಿದರೂ ಬಾಧಕ ಇಲ್ಲ" ಎಂದು ಏನು ಹೇಳಿದ್ದೀರಿ ಅದೂ ಸರಿಯಲ್ಲ. ನಿಮ್ಮ ಮತದಲ್ಲಿ ಪರಮಾಣು-ಗಳಿಗೆ ಕಾರಣವಾದದ್ದು ಯಾವುದೂ ಇಲ್ಲವಾದ್ದರಿಂದ ಅವುಗಳಿಗೆ ಉತ್ಪತ್ತಿ ಇಲ್ಲ ಎಂದಾದಾಗ ದ್ವ್ಯಣುಕಾದಿ ಕಾರ್ಯಗಳ ಉತ್ಪತ್ತಿಯೂ ಆಗದೇ ಹೋಗಬೇಕಾದ ಅತಿಪ್ರಸಂಗರೂಪವಾದ ಬಾಧಕ ಇರುವುದರಿಂದ "ಪರಮಾಣುಗಳಿಗೆ ಅನಿತ್ಯತ್ವ ಒಪ್ಪಿದರೂ ದೋಷವಿಲ್ಲ" ಎನ್ನುವುದು ಸರಿಯಲ್ಲ.

ಆದ್ದರಿಂದ ಪರಮಾಣುಗಳಿಗೆ ನಿತ್ಯತ್ವ ಹಾಗೂ ಅನಿತ್ಯತ್ವ ಎಂಬ ಎರಡು ಪಕ್ಷ-ಗಳಲ್ಲಿಯೂ ದೋಷ ಬರುವುದರಿಂದ (ವೈಶೇಷಿಕಮತವು ಅಸಮಂಜಸವಾದ್ದರಿಂದ) ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– एवं प्रपञ्चेन दूषितं परमाण्वारम्भवादमप्रामाणिकत्वेनापि दूषयत्सूत्रमाह ।**

**ಅನು.:–** ಈ ರೀತಿಯಾಗಿ ವಿಸ್ತಾರವಾಗಿ ನಿರಾಕರಿಸಿದ ಪರಮಾಣ್ವಾರಂಭವಾದವನ್ನು ಅಪ್ರಾಮಾಣಿಕತ್ವ ನಿಮಿತ್ತದಿಂದಲೂ ಸಹ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अपरिग्रहाच्चात्यन्तमनपेक्षा ॐ (२.२.१७)**

ಅಪರಿಗ್ರಹಾಚ್ಚ = ವೈಶೇಷಿಕಮತವು ಶ್ರುತ್ಯಾದಿಪರಿಗ್ರಹಶೂನ್ಯವಾದ್ದರಿಂದ ಶ್ರುತ್ಯಾದಿವಿರುದ್ಧವಾದ್ದರಿಂದಲೂ ಸಹ ತತ್ರ = ಆ ವೈಶೇಷಿಕಮತದಲ್ಲಿ ಅತ್ಯಂತಂ ಅನಪೇಕ್ಷಾ = ಅತ್ಯಂತ ಅನಾದರವನ್ನು ಮಾಡಬೇಕು.

**ಸೂ.ರ.:–** **एवं च वैशेषिकमतस्य सकलश्रुतिस्मृत्याद्यपरिगृहीतत्वात्तद्विरुद्धत्वाच्च । प्रधानकारणत्ववादापेक्षयाऽतिशयेनानादरणीयत्वात् । आन्वीक्षिकीमिति मोक्षधर्मवचननिन्दितत्वाच्च । अतः परमाण्वारम्भवादस्यानुपपन्नत्वेनाविरोधाद्युक्तं पूर्वाध्यायोक्तमीश्वरस्यानन्तगुणपूर्णत्वमिति सिद्धम् ।**

**ಅನು.:–** ವೈಶೇಷಿಕಮತವು ಸಕಲಶ್ರುತಿ-ಸ್ಮೃತ್ಯಾದಿಗಳಿಂದ ಪರಿಗೃಹೀತವಾಗದ ಕಾರಣ, ಮತ್ತು ಸಕಲ ಶ್ರುತಿ-ಸ್ಮೃತಿಗಳಿಗೆ ವಿರುದ್ಧವೂ ಆದದ್ದರಿಂದ,

ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಕಾಮ್ ।

ಎಂಬುದಾಗಿ ಮೋಕ್ಷಧರ್ಮವಚನದಲ್ಲಿ ನಿಂದಿತವಾದ್ದರಿಂದಲೂ ಸಹ, ಪ್ರಧಾನಕ್ಕೆ ಕಾರಣತ್ವವನ್ನು ಹೇಳುವ ವಾದಕ್ಕಿಂತಲೂ (ಅತಿಶಯವಾಗಿ) ಹೆಚ್ಚು ಅನಾದರಣೀಯವಾಗಿದೆ.

ಆದ್ದರಿಂದ ಪರಮಾಣ್ವಾರಂಭವಾದವು ಅನುಪಪನ್ನವಾದ್ದರಿಂದ ವಿಷ್ಣುವಿನ ಗುಣಪೂರ್ಣತ್ವಕ್ಕೆ ವೈಶೇಷಿಕಮತದ ವಿರೋಧ ಬಾರದ ಕಾರಣ, ಹಿಂದಿನ ಅಧ್ಯಾಯದಲ್ಲಿ ಈಶ್ವರನಿಗೆ ವಿಷ್ಣುವಿಗೆ ಅನಂತಗುಣಪೂರ್ಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ವೈಶೇಷಿಕಾಧಿಕರಣವು ಮುಗಿಯಿತು.

ಅಧಿಕರಣ – 7

## ಸಮುದಾಯಾಧಿಕರಣ

### ಸಂಗತಿ

ಸೂ.ರ.:– अत्र परमाणुपुञ्जवादिमतमपाक्रियते ।

ಅನು.:– ಪರಮಾಣುಪುಂಜವಾದಿಗಳ ಮತವನ್ನು ನಿರಾಕರಿಸುತ್ತಾರೆ ಏಳನೇ ಈ ಸಮುದಾಯಾಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु न विष्णोर्जगत्कारणत्वं युक्तम् । वैभाषिक-सौत्रान्तिकमतविरुद्धत्वात् । रूपविज्ञानवेदनासंज्ञासंस्काररूपेणावस्थितं खलु जगत्परमार्थसत्तदशेषं परमाणुसमुदायात्मकम् । न त्ववयवी नाम कश्चिदस्ति । परमाणुसमुदाय एव घटादिबुद्ध्युपपत्तौ परमाणुपरिमाणस्य तदारब्धस्य वाऽवयविनोऽभ्युपगमस्य व्यर्थत्वात् ।

ಅನು.:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಏಕೆಂದರೆ – ಅದು ವೈಭಾಷಿಕ-ಸೌತ್ರಾಂತಿಕ ಮತಗಳಿಗೆ ವಿರುದ್ಧವಾಗುತ್ತದೆ. ಹೇಗೆಂದರೆ –

ರೂಪ ವಿಜ್ಞಾನ ವೇದನಾ ಸಂಜ್ಞಾ ಸಂಸ್ಕಾರ ರೂಪದಿಂದ ಇರುವ, ಪಾರಮಾರ್ಥಿಕ ಸತ್ ಆದ ಎಲ್ಲ ಜಗತ್ತು ಪರಮಾಣುಸಮುದಾಯಾತ್ಮಕವಾಗಿದೆ. ಹೊರತು ಅವಯವೀ ಎಂಬುವುದು ಒಂದು ಪ್ರತ್ಯೇಕವಾಗಿ ಇಲ್ಲ. ಪರಮಾಣುಸಮುದಾಯದಲ್ಲಿಯೇ ಘಟಾದಿಬುದ್ಧಿಯು ಉಪಪನ್ನವಾಗುವಾಗ ಪರಮಾಣುಪರಿಮಾಣವನ್ನಾಗಲೀ ಅದರಿಂದ ಆರಬ್ಧವಾಗುವ ಅವಯವಿಯನ್ನು ಆಗಲೀ ಅಂಗೀಕರಿಸುವುದು ವ್ಯರ್ಥವಾಗುತ್ತದೆ. ಆದ್ದರಿಂದ ಪರಮಾಣುಸಮುದಾಯವೇ ಜಗತ್ತು. ಹೊರತು ಅವಯವೀ ಎನ್ನುವುದು ಪ್ರತ್ಯೇಕವಾಗಿ ಇಲ್ಲ.

ಸೂ.ರ.:– विद्यमानं च सर्वं क्षणिकमेव । असत्त्वस्य क्षणिकत्व-व्याप्त्यभावात् । व्यापकाभावे व्याप्यायोगात् । तच्चैतत्कार्यजातं कालकर्म-

रूपनिमित्तेनैव भवति । नोपादानापेक्षा। ततः पूर्वपूर्वपरमाणूनां विनाशेनोपादानाभावेऽप्युत्तरोत्तरपरमाणूनां सृष्टिः कालकर्मादिनैव भवतीति किमीश्वरेण कृत्यम् । न चेश्वरे प्रमाणमस्ति। वेदादेरप्रमाणत्वात् । अत ईश्वरस्यैवाभावेन तस्य जन्मादिकारणत्वमयुक्तमिति प्राप्ते सूत्रितम् ।

**ಅನು.**:- ಮತ್ತು ಇರುವುದು ಎಲ್ಲ ಕ್ಷಣಿಕವೇ ಆಗಿದೆ. 'ಯತ್ ಸತ್ ತತ್ ಕ್ಷಣಿಕಂ' ಎಂಬುದಾಗಿ ಸತ್ವಕ್ಕೆ ಕ್ಷಣಿಕತ್ವದಿಂದ ವ್ಯಾಪ್ತಿ ಇದೆ. ಹೊರತು ಅಸತ್ವಕ್ಕೆ ಕ್ಷಣಿಕತ್ವದಿಂದ ವ್ಯಾಪ್ತಿ ಇಲ್ಲ.

ಈ ಪಾರಮಾರ್ಥಿಕಸತ್ ಆದ, ಕ್ಷಣಿಕವಾದ ಎಲ್ಲ ಕಾರ್ಯಸಮೂಹವು ಕಾಲ-ಕರ್ಮರೂಪವಾದ ನಿಮಿತ್ತದಿಂದಲೇ ಆಗುತ್ತದೆ. ಹೊರತು ಕಾರ್ಯಗಳಿಗೆ ಉಪಾದಾನ-ಕಾರಣದ ಅಪೇಕ್ಷೆ ಇಲ್ಲ. ಹೀಗಾಗಿ ಉಪಾದಾನಕಾರಣ ಇಲ್ಲದೇ ಇದ್ದರೂ ಸಹ ಪೂರ್ವಪೂರ್ವಪರಮಾಣುಗಳು ವಿನಾಶವಾಗುವುದರಿಂದ ಉತ್ತರೋತ್ತರಪರಮಾಣುಗಳ ಸೃಷ್ಟಿಯು ಕಾಲ-ಕರ್ಮಾದಿಗಳಿಂದಲೇ ನಡೆಯುತ್ತದೆ.

ಹೀಗಿರುವಾಗ ಈಶ್ವರನ ಕಾರ್ಯ (ಪ್ರಯೋಜನ) ಏನಿದೆ? ಮತ್ತು ಈಶ್ವರನ ವಿಷಯದಲ್ಲಿ ಪ್ರಮಾಣವೂ ಯಾವುದೂ ಇಲ್ಲ. ವೇದಾದಿಗಳೇ ಪ್ರಮಾಣವಾಗಬಹುದಲ್ಲ? ಎಂದರೆ, ಅದು ಸರಿಯಲ್ಲ. ವೇದಾದಿಗಳಿಗೆ ಪ್ರಾಮಾಣ್ಯ ಇಲ್ಲವೇ ಇಲ್ಲ. ಈಶ್ವರನ ವಿಷಯದಲ್ಲಿ ಪ್ರಮಾಣವೇ ಇಲ್ಲದ ಕಾರಣ ಈಶ್ವರನನ್ನು ಅಂಗೀಕರಿಸುವುದು ಸರಿಯಲ್ಲ.

ಅಂದಮೇಲೆ ಈಶ್ವರನೇ ಇಲ್ಲ ಎಂದಮೇಲೆ ಆ ಈಶ್ವರನಿಗೆ ಜನ್ಮಾದಿಕಾರಣತ್ವವನ್ನು ಹೇಳುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ समुदाय उभयहेतुकेऽपि तदप्राप्तिः ॐ (२.२.१८)

ಯತಃ = ಯಾವ ಕಾರಣ ಸಮುದಾಯೇ = ಪರಮಾಣುಸಮುದಾಯವು ಉಭಯಹೇತುಕೇऽಪಿ = ಅನೇಕತ್ವಸಂಖ್ಯಾರೂಪವಾಗಿದೆ ಮಿಲಿತಾನೇಕಪರಮಾಣು ನಿಮಿತ್ತಕವಾಗಿದೆ ಎಂಬುದಾಗಿ ಅಂಗೀಕರಿಸಿದರೂ ಅಥವಾ ವಿರಲಾನೇಕಹೇತುಕವಾಗಿದೆ ಎಂದು ಅಂಗೀಕರಿಸಿದರೂ ಸಹ ತದಪ್ರಾಪ್ತಿಃ = ಆ ಸಮುದಾಯಕ್ಕೆ ವಿರಲಾನೇಕ-ಹೇತುಕವಾದದ್ದಕ್ಕೆ ಅನುಪಪತ್ತಿ ಇದೆ. ಕುತಃ = ಏಕೆ? ಅನ್ಯೋನ್ಯಾಶ್ರಯಾದಿದೋಷಾತ್ = ಅನ್ಯೋನ್ಯಾಶ್ರಯ ಮೊದಲಾದ ದೋಷ ಬರುವುದರಿಂದ.

ಆದ್ದರಿಂದ ಪರಮಾಣುಪುಂಜವೇ ಘಟ ಅವಯವೀ ಎಂದು ಹೇಳುವ ಬೌದ್ಧಪಕ್ಷವೂ ಸರಿಯಲ್ಲ.

## ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वाभिधानम् । वैभाषिकसौत्रान्तिकयोरनुपपन्नभाषित्वेन तत्समयस्याप्रामाण्यात् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ವೈಭಾಷಿಕ - ಸೌತ್ರಾಂತಿಕರು ಅನುಪಪನ್ನಭಾಷಿಗಳಾದ್ದರಿಂದ ವೈಭಾಷಿಕಮತವು ಸೌತ್ರಾಂತಿಕಮತವು ಅಪ್ರಮಾಣವಾಗಿದೆ.

**ಸೂ.ರ.:– यदुक्तम् । कालकर्मादिनिमित्तेन क्षणिकपरमाणुनिमित्तकः समुदायो भवति न त्ववयवी कश्चिदस्तीति । तन्न । तत्र किमयं समुदाय एकपरमाणुहेतुको वाऽनेकपरमाणुहेतुको वेति । नाद्यः । एकस्मात्समुदाय इत्यस्य व्याहतत्वात् । द्वितीयेऽपि किं मिलितानेकहेतुको विरलानेकहेतुको वा । नाद्यः । मेलनस्यैव समुदायत्वेनात्माश्रयात् । समुदायद्वयस्य कार्यकारणभावाङ्गीकारेऽन्योन्याश्रयात् । व्यक्तिबाहुल्याङ्गीकारेऽनव-स्थानात् । नोत्तरः । विरलपरमाणुप्रवाहस्य सदा सद्भावेन समुदायस्यापि सदातनत्वापत्या समुदायरूपकार्यविरहात्मकप्रलयाभावप्रसङ्गात् । अतो समुदायस्य प्रास्यभावेन गोघटादिबुद्धिवेद्यो न त्ववयवी कश्चिदस्तीति पक्षस्यायुक्तत्वेन युक्तं जगत्कारणत्वलक्षणमिति सिद्धम् ।**

**ಅನು.:–** "ಕಾಲ–ಕರ್ಮಾದಿ ನಿಮಿತ್ತದಿಂದ ಕ್ಷಣಿಕವಾದ ಪರಮಾಣುನಿಮಿತ್ತಕವಾದ ಸಮುದಾಯವು ಹುಟ್ಟುತ್ತದೆ. ಹೊರತು ಅವಯವೀ ಎಂದು ಪ್ರತ್ಯೇಕವಾದದ್ದು ಒಂದು ಇಲ್ಲ" ಎಂಬುದಾಗಿ ಏನು ಹೇಳಿದ್ದಾರೆ ಅದು ಯುಕ್ತವಲ್ಲ. ಏಕೆಂದರೆ – ಈ ಸಮುದಾಯವು ಏಕಪರಮಾಣುಹೇತುಕವಾಗಿದೆಯೋ? ಅನೇಕಪರಮಾಣುಹೇತುಕವಾಗಿದೆಯೋ?

ಒಂದು ಪರಮಾಣುವಿನಿಂದ ಸಮುದಾಯ ಹುಟ್ಟಿದೆ ಎನ್ನುವುದು

ವ್ಯಾಹತವಾಗುವುದರಿಂದ ಸಮುದಾಯವು ಏಕಪರಮಾಣುಹೇತುಕ ಎಂಬ ಮೊದಲನೇ ಪಕ್ಷವು ಸರಿಯಲ್ಲ.

ಇನ್ನು ಅನೇಕಪರಮಾಣುಹೇತುಕ ಎಂಬ ಎರಡನೇ ಪಕ್ಷದಲ್ಲಿಯೂ ಸಹ ಸಮುದಾಯವು ಮಿಲಿತಾನೇಕಹೇತುಕವಾಗಿದೆಯೋ? ಅಥವಾ ವಿರಲಾನೇಕ-ಹೇತುಕವಾಗಿದೆಯೋ?

ಸಮುದಾಯವು ಮಿಲಿತಾನೇಕಹೇತುಕವಾಗಿದೆ ಎನ್ನುವುದಾದರೆ, ಮೇಲನವೇ ಸಮುದಾಯವಾದ್ದರಿಂದ (ಸಮುದಾಯದಿಂದ ಸಮುದಾಯ ಎಂದು ಹೇಳಿದಂತಾಗುವುದರಿಂದ) ಆತ್ಮಾಶ್ರಯದೋಷವು ಬರುತ್ತದೆ. ಹಾಗಲ್ಲ ಒಂದು ಸಮುದಾಯ ಕಾರಣವಾಗಿದೆ, ಮತ್ತೊಂದು ಸಮುದಾಯವು ಕಾರ್ಯವಾಗಿದೆ ಎನ್ನುವುದಾದರೆ ಎರಡು ಸಮುದಾಯಗಳಲ್ಲಿ ಪರಸ್ಪರ ಕಾರ್ಯಕಾರಣಭಾವ ಬರುವುದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಅನೇಕ ಸಮುದಾಯಗಳನ್ನು ಅಂಗೀಕರಿಸುವುದಾದರೆ ಅನವಸ್ಥಾದೋಷ ಬರುತ್ತದೆ. ಆದ್ದರಿಂದ ಮಿಲಿತಾನೇಕಹೇತುಕ ಎನ್ನುವುದು ಸರಿಯಲ್ಲ.

ಇನ್ನು ವಿರಲಾನೇಕಹೇತುಕ ಎಂಬ ಪಕ್ಷವೂ ಸರಿಯಾಗುವುದಿಲ್ಲ. ಅಂತಹ ವಿರಲಾನೇಕಪರಮಾಣುಪ್ರವಾಹವು ಸದಾ ಇರುವುದರಿಂದ ಸಮುದಾಯರೂಪ-ಕಾರ್ಯವಿರಹಾತ್ಮಕ ಪ್ರಲಯವೇ ಇಲ್ಲದೇ ಹೋಗಬೇಕಾಗುತ್ತದೆ.

ಆದ್ದರಿಂದ ಸಮುದಾಯವು ಅನುಪಪನ್ನವಾಗುವ ಕಾರಣ 'ಗೋಘಟಾದಿ-ಬುದ್ಧಿವೇದ್ಯವಾದದ್ದು ಅವಯವೀ ಅಲ್ಲ' ಎಂಬ ಪಕ್ಷವು ಅಸಮಂಜಸವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸೂ.ರ.:– नन्वस्त्वेवं सदा समुदायोत्पत्तिः । तथाऽपि न प्रलयाभावः । वित्तिव्यवहाराभावादेव प्रलयोपपत्तिरिति प्राप्ते सूत्रमाह ॥**

**ಅನು.:–** ಸಮುದಾಯವು ಸದಾತನವಾಗಬೇಕಾದೀತು ಎಂಬುದಾಗಿ ಆಪಾದಿಸುವುದು ಸರಿಯಲ್ಲ. ಕಾರಣ ಸಮುದಾಯವು ಯಾವಾಗಲೂ ಇರಲಿ ಎಂದೇ ಅಂಗೀಕರಿಸುತ್ತೇವೆ. ಹಾಗಾದರೆ ಸಮುದಾಯವು ಯಾವಾಗಲೂ ಇರುವುದಾದರೆ ಪ್ರಲಯಾಭಾವಪ್ರಸಂಗ ಬರುವುದಲ್ಲ? ಎಂದರೆ, ಅದೂ ಸರಿಯಲ್ಲ. ಏಕೆಂದರೆ– ಸಮುದಾಯ ಸದಾತನವಾದರೂ ವಿತ್ತಿ-ವ್ಯವಹಾರಗಳು ಆ ಕಾಲದಲ್ಲಿ ಇರುವುದಿಲ್ಲ-ವಾದ್ದರಿಂದ ಪ್ರಲಯವು ಉಪಪನ್ನವಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ इतरेतरप्रत्ययत्वादिति चेन्नोत्पत्तिमात्रनिमित्तत्वात् ॐ (२.२.१९)

**ಸೂತ್ರಾರ್ಥ** :– ಪರಮಾಣುಪುಂಜವು ಸದಾ ಇರುವುದಾದರೂ ಸಹ ನಮ್ಮ ಪಕ್ಷದಲ್ಲಿ ಪ್ರಲಯಾನುಪಪತ್ತಿ ಇಲ್ಲ. ಕುತಃ=ಏಕೆ? [1]ತದ್ವ್ಯವಹಾರಾದೇಃ=ಅದರ ವಿತ್ತಿ-ವ್ಯವಹಾರಗಳು ಇತರೇತರಪ್ರತ್ಯಯತ್ವಾತ್='ಇದಂ ಇದಂ ಚ' ಎಂಬುದಾಗಿ ಪರಮಾಣುಪರಸ್ಪರಾಪೇಕ್ಷಾಬುದ್ಧಿನಿಮಿತ್ತಕವಾಗಿರುವುದರಿಂದ, ಆದ್ದರಿಂದ ಪರಮಾಣುಗಳ ಪರಸ್ಪರಾಪೇಕ್ಷಾಬುದ್ಧಿಯು ಇಲ್ಲದ ಕಾಲದಲ್ಲಿ ಸಮುದಾಯವ್ಯವಹಾರಾದಿಗಳು ಇರುವುದಿಲ್ಲವಾದ್ದರಿಂದ ಪ್ರಲಯವು ಉಪಪನ್ನವಾಗುತ್ತದೆ ಇತಿ ಚೇತ್=ಎಂಬುದಾಗಿ ಆಕ್ಷೇಪ ಬಂದರೆ ನ=ಅದು ಸರಿಯಲ್ಲ.

ಕುತಃ=ಯಾಕೆ ಸರಿಯಲ್ಲ? ಎಂದರೆ, ಉತ್ಪತ್ತಿಮಾತ್ರನಿಮಿತ್ತತ್ವಾತ್= ಪರಮಾಣುಗಳು ಸ್ವಸಮುದಾಯದ ಉತ್ಪತ್ತಿಗೆ ಮಾತ್ರ ನಿಮಿತ್ತವಾಗುವುದರಿಂದ. ಹೊರತು ಪರಮಾಣುಗಳಿಂದ ಅಪೇಕ್ಷಾಬುದ್ಧಿ-ವಿತ್ತಿವ್ಯವಹಾರಗಳು ಹುಟ್ಟುವುದಿಲ್ಲ ಎನ್ನುವುದು 'ಮಾತ್ರ' ಶಬ್ದದ ಅರ್ಥವಾಗಿದೆ.

ಹಾಗಾದರೆ ಕ್ಷಣಿಕಮತದಲ್ಲಿ ಪರಮಾಣುನಿಮಿತ್ತಕವಾದ ವ್ಯವಹಾರಾದಿಗಳು ಎಂದಿಗೂ ಕೂಡುವುದಿಲ್ಲ. ಆದ್ದರಿಂದ ವಿತ್ತಿ-ವ್ಯವಹಾರಗಳ ಅಭಾವದಿಂದ ಪ್ರಲಯವನ್ನು ಕೂಡಿಸಲು ಬರುವುದಿಲ್ಲ.

**ಸೂ.ರ.:– एवं च वित्तिव्यवहारयोः कदाऽप्ययोगेन सृष्ट्यभावप्रसङ्गात् । तथाहि । आदौ परमाणूनां दर्शनं ततोऽपेक्षा ततो व्यवहार इति क्रमः । न चासावुपपद्यते । परमाणूनां क्षणिकत्वेन कार्यमुत्पाद्य नष्टत्वात् । न ह्यन्यत्र प्रदर्शनमन्यत्रापेक्षाऽन्यत्र व्यवहार इति सम्भवति । अतिप्रसङ्गात् । एवं पुरुषेऽपि ।**

---

(1. ನಾವು ಪ್ರಲಯಕಾಲದಲ್ಲಿ ಸಮುದಾಯ ಇರುವುದಿಲ್ಲ ಎನ್ನುವುದಿಲ್ಲ. ಕಿಂತು ಸಮುದಾಯ ಸದಾತನವಾದರೂ ಅದರ ವಿತ್ತಿ-ವ್ಯವಹಾರಗಳು ಪ್ರಲಯಕಾಲದಲ್ಲಿ ಇರುವುದಿಲ್ಲ ಎನ್ನುತ್ತೇವೆ. ಪ್ರಲಯಕಾಲದಲ್ಲಿ ವಿತ್ತಿ-ವ್ಯವಹಾರಗಳು ಏಕೆ ಇರುವುದಿಲ್ಲ? ಎಂದರೆ,)

**ಅನು.:–** ವಿತ್ತಿ-ವ್ಯವಹಾರಗಳು ಕ್ಷಣಿಕಮತದಲ್ಲಿ ಎಂದಿಗೂ ಕೂಡದ ಕಾರಣ ಸೃಷ್ಟಿಯೇ ಕೂಡದೇ ಹೋಗಬೇಕಾಗುತ್ತದೆ. ಅದು ಹೇಗೆಂದರೆ– ಮೊದಲಿಗೆ ಪರಮಾಣುಗಳ ದರ್ಶನ, ಅನಂತರ ಅಪೇಕ್ಷಾಬುದ್ಧಿ ಅನಂತರ ವ್ಯವಹಾರ ಎಂಬುದಾಗಿ ಕ್ಷಣಿಕಮತದ ಕ್ರಮ. ಆದರೆ ಇದು ಕೂಡುವುದಿಲ್ಲ. ಕ್ಷಣಿಕಮತದಲ್ಲಿ ಪರಮಾಣುಗಳು ಕ್ಷಣಿಕವಾದ್ದರಿಂದ ಅವು (ವಿರಲ-ಪರಮಾಣುಗಳು) ಕಾರ್ಯವನ್ನು (ಮಿಲಿತ ಪರಮಾಣುಗಳನ್ನು) ಹುಟ್ಟಿಸಿ ನಷ್ಟವಾಗುವುದ-ರಿಂದ ದರ್ಶನ-ಬುದ್ಧಿ-ವ್ಯವಹಾರ ಎಂಬ ಕ್ರಮ ಕೂಡುವುದಿಲ್ಲ.

ಎರಡು ಮಿಲಿತ ಪರಮಾಣುಗಳನ್ನು ನೋಡಿದ ಮೇಲೆ (ಅವು ನಷ್ಟವಾದರೂ) ಮತ್ತೆರಡು ಪರಮಾಣುಗಳಲ್ಲಿ ಪರಸ್ಪರಾಪೇಕ್ಷಾಬುದ್ಧಿ ಬೇರೆ ಪರಮಾಣುಗಳ ವ್ಯವಹಾರ ಎಂದು ಹೇಳಲು ಬರುವುದಿಲ್ಲ. ನೋಡುವುದು ರಾಮ-ಕೃಷ್ಣರನ್ನಾದರೂ ಇಮೌ ವಾಮನ-ಭಾರ್ಗವೌ ಎಂಬುದಾಗಿ ವ್ಯವಹಾರ ಮಾಡಬೇಕಾದ ಅತಿಪ್ರಸಂಗ ಬರುತ್ತದೆ.

ಪುರುಷನಲ್ಲಿಯೂ ಈ ಅನುಪಪತ್ತಿ ಬಂದೇ ಬರುತ್ತದೆ. ಅಂದರೆ ಕ್ಷಣಿಕಮತದಲ್ಲಿ ಪುರುಷ ಪರಮಾಣುಗಳನ್ನು ನೋಡಿದಮೇಲೆ ಮುಂದಿನ ಕ್ಷಣದಲ್ಲಿ ಅವನು ನಷ್ಟನಾಗು-ವುದರಿಂದ, ನೋಡುವ ಪುರುಷ ಒಬ್ಬ, ಅಪೇಕ್ಷಾಬುದ್ಧಿ ಬರುವುದು ಬೇರೆ ಪುರುಷನಿಗೆ, ವ್ಯವಹಾರ ಮಾಡುವುದು ಮತ್ತೊಬ್ಬ ಪುರುಷ ಎಂಬ ಸಮಸ್ಯೆ ಬರುತ್ತದೆ ಎಂದು ಭಾವ.

**ಸೂ.ರ.:– विरलपरमाणुजन्यानां मिलितपरमाणूनां स्थायित्वाभ्युपगमे प्रतिक्षणे कार्योत्पादप्रसङ्गः । तथा चाल्पतरकालेऽप्येकैकस्मात्परमाणु-पुञ्जात्मकघटादनेककार्योत्पत्त्या कुलालशालापरिपूर्तिप्रसङ्गः । अतो युक्तं जगत्कारणत्व लक्षणमिति सिद्धम् ॥**

**ಅನು.:–** ವಿರಲಪರಮಾಣುಗಳು ಕ್ಷಣಿಕವಾದರೂ ಆ ವಿರಲಪರಮಾಣುಗಳಿಂದ ಜನ್ಯವಾಗುವ ಮಿಲಿತಪರಮಾಣುಗಳು ಸ್ಥಾಯಿಯಾಗುತ್ತವೆ ಎಂದು ಅಂಗೀಕರಿಸಿದರೆ, ಆ ಮಿಲಿತ ಪರಮಾಣುಗಳು ಮುಂದಿನ ಮಿಲಿತಪರಮಾಣುಗಳಿಗೆ (ಘಟಾದಿಗಳಿಗೆ) ಕಾರಣವಾಗುವುದರಿಂದ

"ಸಮರ್ಥಸ್ಯ ಕ್ಷೇಪಾಯೋಗಾತ್"

(ಕಾರ್ಯವನ್ನು ಹುಟ್ಟಿಸಲು ಸಮರ್ಥವಾದ ಕಾರಣವು ಇದ್ದಮೇಲೆ ಕಾರ್ಯ ಹುಟ್ಟದೇ ಇರಲು ಸಾಧ್ಯವಿಲ್ಲ.)

ಎಂಬುದಾಗಿ ಹೇಳಿದ್ದರಿಂದ ಕಾರಣವಾದ ಮಿಲಿತಪರಮಾಣುಗಳು ಇದ್ದಮೇಲೆ ಪ್ರತಿಕ್ಷಣದಲ್ಲಿಯೂ ಕಾರ್ಯವು ಹುಟ್ಟಬೇಕಾದ ಅತಿಪ್ರಸಂಗ ಬರುತ್ತದೆ. ಹಾಗಾದರೆ ಅಲ್ಪತರವಾದ ಕಾಲದಲ್ಲಿಯೇ ಒಂದೊಂದು ಪರಮಾಣು ಪುಂಜಾತ್ಮಕ ಘಟದಿಂದ ಅನೇಕ ಘಟಗಳು ಹುಟ್ಟಬೇಕಾಗುವುದರಿಂದ ಕುಲಾಲನ ಶಾಲೆಯು ಪರಿಪೂರ್ಣವಾಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಮಿಲಿತಪರಮಾಣುಗಳು ಕಾರಣವಾಗಲು ಸಾಧ್ಯವಿಲ್ಲ-ವಾದ್ದರಿಂದ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ ಲಕ್ಷಣವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 20

**ಸೂ.ರ.:- एवं विरलपरमाणुभ्यो मिलितपरमाणूत्पत्तिमभ्युपेत्य व्यवहाराद्यसम्भवो दर्शितः । अथ विसदृशकार्योत्पत्तिमपि पराकुर्वत्सूत्र-मुपन्यस्यति ।**

**ಅನು.:-** ಈ ರೀತಿಯಾಗಿ ವಿರಲಪರಮಾಣುಗಳಿಂದ ಮಿಲಿತ ಪರಮಾಣುಗಳು ಹುಟ್ಟುತ್ತವೆ ಎಂಬುದನ್ನು ಅಂಗೀಕರಿಸಿ ಕ್ಷಣಿಕಮತದಲ್ಲಿ ವಿತ್ತಿ-ವ್ಯವಹಾರಾದಿಗಳು ಕೂಡುವುದಿಲ್ಲ ಎಂಬುದನ್ನು ತೋರಿಸಿದರು. ಪ್ರಕೃತ ವಿಸದೃಶ ಕಾರ್ಯೋತ್ಪತ್ತಿಯನ್ನೂ ನಿರಾಕರಿಸುವ (ವಿರಲಪರಮಾಣುಗಳಿಂದ ವಿಸದೃಶಕಾರ್ಯವು=ಮಿಲಿತಪರಮಾಣುಗಳು ಹುಟ್ಟಲು ಸಾಧ್ಯವಿಲ್ಲ ಎಂದು ತಿಳಿಸುವ) ಸೂತ್ರವನ್ನು ಹೇಳುತ್ತಾರೆ–

**ॐ उत्तरोत्पादे च पूर्वनिरोधादिति ॐ (२.२.२०)**

**ಸೂತ್ರಾರ್ಥ :-** ಚಶಬ್ದವು ಅವಧಾರಣಾರ್ಥದಲ್ಲಿ ಹಾಗೂ ಸಮುಚ್ಚಯಾರ್ಥದಲ್ಲಿ ಇದೆ. ನ ಎನ್ನುವುದನ್ನು ಅನುವರ್ತನ ಮಾಡಿಕೊಳ್ಳಬೇಕು. ಸಾಮರ್ಥ್ಯಾತ್ ಎಂದು ಶೇಷ ಮಾಡಿಕೊಳ್ಳಬೇಕು.

ನ ಕೇವಲಂ ಕ್ಷಣಿಕಮತೇ ಸಮುದಾಯವ್ಯವಹಾರಾನುಪಪತ್ತಿಃ=ಕ್ಷಣಿಕಮತದಲ್ಲಿ ಸಮುದಾಯವ್ಯವಹಾರಾದಿಗಳು ಕೂಡುವುದಿಲ್ಲ ಎಂದಷ್ಟೇ ಅಲ್ಲ, ಕಿಂತು ವಿಶೇಷ-ಕಾರ್ಯೋತ್ಪತ್ತಿಶ್ಚ ನ ಯುಕ್ತಾ=ಸದೃಶಕಾರಣಗಳಿಂದ ವಿಸದೃಶ ಕಾರ್ಯದ ಉತ್ಪತ್ತಿಯೂ ಕೂಡುವುದಿಲ್ಲ. ಕುತಃ=ಏಕೆ? ಉತ್ತರೋತ್ಪಾದೇ ಚ (ಏವ) ಸಾಮರ್ಥ್ಯಾತ್=ಕಾರಣಕ್ಕೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲಿ ಮಾತ್ರವೇ ಸಾಮರ್ಥ್ಯ ಇರುವುದರಿಂದ,

ನನು ಕಾರಣಂ ಪ್ರಥಮಂ ಸ್ವಸದೃಶಕಾರ್ಯಂ ಉತ್ಪಾದ್ಯ ಪಶ್ಚಾತ್ ವಿಸದೃಶಕಾರ್ಯಂ ಉತ್ಪಾದಯೇತ್ ಕೋ ದೋಷಃ?=ಕಾರಣವು ಮೊದಲಿಗೆ ಸ್ವಸದೃಶವಾದ ಕಾರ್ಯವನ್ನು ಹುಟ್ಟಿಸಿ ಅನಂತರ ವಿಸದೃಶವಾದ ಕಾರ್ಯವನ್ನು ಹುಟ್ಟಿಸಲಿ, ಏನು ದೋಷ? ಎಂದು ಶಂಕೆ ಬಂದರೆ, ಅದಕ್ಕೂ ಇದೇ ಉತ್ತರವೇ ಉತ್ತರೋತ್ಪಾದೇ ಚ=ಉತ್ತರಸ್ಯ ಸ್ವಸದೃಶವಾದ ಕಾರ್ಯದ, ಉತ್ಪಾದೇ ಏವ ಉತ್ಪತ್ತಿ ಆದಾಗಲೇನೇ ಪೂರ್ವನಿರೋಧಾತ್=ಕಾರಣವು ನಾಶವಾಗುವುದರಿಂದ, ಪುನಃ ವಿಸದೃಶ ಕಾರ್ಯಜನಕತ್ವಾಸಂಭವಃ=ಪುನಃ ವಿಸದೃಶ-ಕಾರ್ಯವನ್ನು ಹುಟ್ಟಿಸಲು ಸಾಧ್ಯವಿಲ್ಲ.

**ಸೂ.ರ.:– एवं च परमते विशेषकार्योत्पत्त्यसम्भवः । कारणस्य स्वसदृशकार्यजनकत्वस्वाभाव्यात् । अन्यथा घटात्पठोत्पत्तिप्रसङ्गात् । न च स्वसदृशकार्यमुत्पाद्य पश्चाद्वैसादृश्यमपि जनयतीति वाच्यम् । कार्योत्पादे तस्य नष्टत्वेन वैसादृश्यजननायोगात् । अतो जगत्कारणत्वलक्षणं युक्तमिति सिद्धम् ॥**

**ಅನು.:–** ಪರಮತ(ಕ್ಷಣಿಕಮತ)ದಲ್ಲಿ ವಿಶೇಷ ಕಾರ್ಯೋತ್ಪತ್ತಿಯು (ಸದೃಶವಾದ ಕಾರಣದಿಂದ ವಿಸದೃಶವಾದ ಕಾರ್ಯದ ಉತ್ಪತ್ತಿಯು) ಕೂಡುವುದಿಲ್ಲ. ಏಕೆಂದರೆ– ನಿಮ್ಮ ಮತದ ಪ್ರಕಾರ ಕಾರಣಕ್ಕೆ ಸದೃಶವಾದ ಕಾರ್ಯವನ್ನು ಮಾತ್ರ ಹುಟ್ಟಿಸುವ ಸ್ವಭಾವ ಇದೆ. ಹೊರತು ವಿಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವ ಇಲ್ಲ. ಒಂದುವೇಳೆ ವಿಸದೃಶ-ಕಾರ್ಯವನ್ನು ಹುಟ್ಟಿಸುವ ಸ್ವಭಾವ ಇದ್ದದ್ದಾದರೆ, ಘಟದಿಂದ ಪಟ ಹುಟ್ಟಬೇಕಾದ ಅತಿಪ್ರಸಂಗ ಬರುತ್ತದೆ.

ಕಾರಣಕ್ಕೆ ಸ್ವಸದೃಶಕಾರ್ಯಜನನಸ್ವಭಾವ ಇದ್ದರೂ ಮೊದಲಿಗೆ ಸ್ವಸದೃಶವಾದ ಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರ್ಯವನ್ನೂ ಹುಟ್ಟಿಸಲಿ ಎಂದು ಶಂಕಿಸುವುದು ಸರಿಯಲ್ಲ. ಕಾರಣವು ಸ್ವಸದೃಶವಾದ ಕಾರ್ಯವನ್ನು ಹುಟ್ಟಿಸಿ ನಷ್ಟವಾಗುವುದರಿಂದ ಅನಂತರ ವಿಸದೃಶ ಕಾರ್ಯವನ್ನು ಹುಟ್ಟಿಸಲು ಸಾಧ್ಯವಿಲ್ಲ.

ಆದ್ದರಿಂದ ಕ್ಷಣಿಕಮತದಲ್ಲಿ ವಿಸದೃಶ ಕಾರ್ಯೋತ್ಪತ್ತಿಯು ಅನುಪಪನ್ನವಾಗುವುದ-ರಿಂದ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣ ಹೇಳಿದ್ದು ಸಮಂಜಸ ಎಂದು ಸಿದ್ಧವಾಗುತ್ತದೆ.

ಸೂತ್ರ - 21

**ಸೂ.ರ.:– एवं विसदृशकार्योत्पत्तिनिरासेन व्यवहारादिकं पराकृत्ये-दानीं प्रतिक्षणकार्योत्पत्तिमेव निराकुर्वत्सूत्रमुपन्यस्यति ।**

**ಅನು.:–** ಈ ರೀತಿಯಾಗಿ ಸದೃಶಕಾರಣದಿಂದ ವಿಸದೃಶಕಾರ್ಯೋತ್ಪತ್ತಿಯನ್ನು ನಿರಾಕರಿಸಿ ಈಗ ಕ್ಷಣಿಕವಾದದ ಮೂಲತತ್ವವಾದ ಪ್ರತಿಕ್ಷಣಕಾರ್ಯೋತ್ಪತ್ತಿಯನ್ನೇ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ असति प्रतिज्ञोपरोधो यौगपद्यमन्यथा ॐ (२.२.२१)**

**ಸೂತ್ರಾರ್ಥ :–** ಕ್ಷಣಿಕಮತೇ ನ ಪ್ರತಿಕ್ಷಣಂ ಕಾರ್ಯೋತ್ಪತ್ತಿಃ ಯುಜ್ಯತೇ= ಕ್ಷಣಿಕಮತದಲ್ಲಿ ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿಯು ಕೂಡುವುದಿಲ್ಲ. ಕುತಃ=ಏಕೆ? ಅಸತಿ ಕಾರಣೇ ಕಾರ್ಯಮುತ್ಪದ್ಯತೇ ಇತ್ಯಂಗೀಕಾರೇ=ಕಾರಣ ಇಲ್ಲದಿದ್ದಾಗ ಕಾರ್ಯ ಹುಟ್ಟುತ್ತದೆ ಎಂದು ಅಂಗೀಕರಿಸುವುದಾದರೆ ಪ್ರತಿಜ್ಞೋಪರೋಧಃ=ಪ್ರತಿಜ್ಞಾಯಾಃ 'ಅದು ಇದಕ್ಕೆ ಕಾರಣ' 'ಇದು ಅದರ ಕಾರ್ಯ' ಎಂಬ ಸಿದ್ಧಾಂತವ್ಯವಹಾರಕ್ಕೆ ಉಪರೋಧಃ ಹಾನಿ ಉಂಟಾಗುತ್ತದೆ.

ಅನ್ಯಥಾ=ಕಾರಣ ಇದ್ದಾಗ ಕಾರ್ಯ ಹುಟ್ಟುತ್ತದೆ ಎಂದು ಅಂಗೀಕರಿಸಿದರೆ ಯೌಗಪದ್ಯಂ=ಒಂದೇ ಕಾಲದಲ್ಲಿ ಕಾರಣದ ಜೊತೆಗೆ ಕಾರ್ಯಗಳೂ ಇರಬೇಕಾದ ಅವಸ್ಥೆ ಬರಬೇಕಾಗುತ್ತದೆ.

**ಸೂ.ರ.:– एवं च प्रतिक्षणं कार्योत्पत्त्यङ्गीकारे किमसति कारणे कार्यमुत्पद्यते । उत सति । आद्ये प्रतिज्ञाहानिः । द्वितीये प्रथमक्षणोत्पन्नानां विरलपरमाणूनां कार्योत्पत्तिसमयेऽपि भावे क्षणिकत्वनियमाभावेन विनाशकसंपत्तिपर्यन्तमवस्थानं स्यात् । तन्मतेच कारणे सति कार्यं भवत्येवेति नियमात्पुनः पुनः कार्योत्पत्तिः स्यादिति सकलकार्याणां यौगपद्यं स्यात् । ततश्चैकस्यां घटिकायां कुलालशालापूर्तिप्रसङ्गः ।**

**ಅನು.:–** ಪ್ರತಿಕ್ಷಣದಲ್ಲಿಯೂ ಕಾರ್ಯವು ಹುಟ್ಟುತ್ತದೆ ಎಂದು ಹೇಳುವುದಾದರೆ, ಕಾರಣ ಇಲ್ಲದಿದ್ದಾಗ ಕಾರ್ಯ ಹುಟ್ಟುತ್ತದೆ ಎಂದು ಹೇಳುತ್ತೀರೋ? ಅಥವಾ ಕಾರಣ ಇದ್ದಾಗಲೇ ಕಾರ್ಯ ಹುಟ್ಟುತ್ತದೆ ಎಂದು ಹೇಳುತ್ತೀರೋ?

ಕಾರಣ ಇಲ್ಲದಿದ್ದಾಗ ಕಾರ್ಯ ಹುಟ್ಟುತ್ತದೆ ಎನ್ನುವುದಾದರೆ ಪ್ರತಿಜ್ಞಾಹಾನಿ ('ಅದು ಇದಕ್ಕೆ ಕಾರಣ' 'ಇದು ಅದರ ಕಾರ್ಯ' ಎಂಬ ಸಿದ್ಧಾಂತವ್ಯವಹಾರಕ್ಕೆ ಹಾನಿಯಾಗುತ್ತದೆ). ಇನ್ನು ಕಾರಣ ಇದ್ದಾಗಲೇ ಕಾರ್ಯವು ಹುಟ್ಟುತ್ತದೆ ಎಂದು ಹೇಳುವುದಾದರೆ, ಮೊದಲ ಕ್ಷಣದಲ್ಲಿ ಹುಟ್ಟುವ ವಿರಲಪರಮಾಣುಗಳು ಸ್ವಜನ್ಯಕಾರ್ಯೋತ್ಪತ್ತಿಸಮಯದಲ್ಲಿಯೂ ಇರುವುದಾದರೆ ಕ್ಷಣಿಕತ್ವನಿಯಮ ಭಗ್ನವಾದಂತಾಗಿ ಕಾರಣವು ದ್ವಿಕ್ಷಣಿಕವಾಗಬೇಕಾಗುತ್ತದೆ. ಹಾಗೆ ಕಾರಣವು ದ್ವಿಕಣಕವಾದರೆ,

'ಸಮರ್ಥಸ್ಯ ಕ್ಷೇಪಾಯೋಗಾತ್'

ಕಾರ್ಯ ಹುಟ್ಟಿಸಲು ಸಮರ್ಥವಾದ ಕಾರಣವು ಇದ್ದರೆ ಕಾರ್ಯವು ಹುಟ್ಟೇ ಹುಟ್ಟುತ್ತದೆ ಎಂದು ನಿಮ್ಮ ಮತದಲ್ಲಿ ನಿಯಮ ಇರುವುದರಿಂದ ಪುನಃ ಪುನಃ ಕಾರ್ಯೋತ್ಪತ್ತಿಯಾಗಬೇಕಾಗಿ ಬಂದು ಸಕಲಕಾರ್ಯಗಳಲ್ಲಿ ಯೌಗಪದ್ಯ ಬರ-ಬೇಕಾಗುತ್ತದೆ. ಹಾಗಾಗಿ ಒಂದೇ ಘಟಿಕಾದಲ್ಲಿ ಕುಲಾಲನ ಶಾಲೆಯು ಪರಿಪೂರ್ಣ-ವಾಗಬೇಕಾಗುತ್ತದೆ.

**ಸೂ.ರ.:– यद्वा । परमाणूनां क्षणिकत्वेन यस्मिन्क्षणे परमाण-वस्तस्मिन्नेव क्षणे कार्यमिति कार्यकारणयोः पौर्वापर्यं न स्यात् । न च क्षणे पूर्वापरमध्यभागोऽस्ति । येन प्रथमभागे परमाणूत्पत्तिः । द्वितीयभागे तु कार्यजनकत्वमिति स्यात् । अतो युक्तं लक्षणसूत्रमिति सिद्धम् ॥**

**ಅನು.:–** ಅಥವಾ ಕಾರಣ ಇದ್ದಾಗಲೇ ಕಾರ್ಯ ಹುಟ್ಟುತ್ತದೆ ಎನ್ನುವುದಾದರೆ, ಪರಮಾಣುಗಳು ಕ್ಷಣಿಕವಾದ್ದರಿಂದ ಯಾವ ಕ್ಷಣದಲ್ಲಿ ಪರಮಾಣುಗಳು (ಕಾರಣವಾದ ಪರಮಾಣುಗಳು) ಇರುತ್ತವೆಯೋ ಅದೇ ಕ್ಷಣದಲ್ಲಿಯೇನೇ ಕಾರ್ಯ ಇರಬೇಕಾಗು-ವುದರಿಂದ ಕಾರ್ಯ-ಕಾರಣಗಳಲ್ಲಿ ಪೌರ್ವಾಪರ್ಯ (ಕಾರಣ ಮೊದಲಿರಬೇಕು, ಕಾರ್ಯ ಅನಂತರ ಇರಬೇಕು ಎಂಬ ನಿಯಮವು) ಇಲ್ಲದೇ ಹೋಗಬೇಕಾಗುತ್ತದೆ.

ಹಾಗಲ್ಲ ಕ್ಷಣದ ಪೂರ್ವಭಾಗದಲ್ಲಿ ಪರಮಾಣುಗಳ ಉತ್ಪತ್ತಿ, ಮಧ್ಯಭಾಗದಲ್ಲಿ ಕಾರ್ಯ ಹುಟ್ಟಿಸುತ್ತವೆ ಎಂದು ಹೇಳಬಹುದಲ್ಲ? ಎಂಬ ಶಂಕೆಯೇ ಸರಿಯಲ್ಲ. ಕಾರಣ–

"ಪೂರ್ವಮಧ್ಯಾಪರಕಲಾವಿಕಲಃ ಕ್ಷಣ ಇಷ್ಯತೇ।"

ಎಂಬುದಾಗಿ ಹೇಳಿದಂತೆ ಕ್ಷಣದಲ್ಲಿ ಪೂರ್ವ–ಅಪರ–ಮಧ್ಯಭಾಗಗಳು ಇಲ್ಲವೇ ಇಲ್ಲ.

ಆದ್ದರಿಂದ ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿ ಎನ್ನುವುದೇ ಉಪಪನ್ನವಾಗದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 22

**ಸೂ.ರ.:– एवं क्षणिकवादे कार्योत्पत्तिं निराकृत्य विनाशं च निराकुर्वत्सूत्रमुपन्यस्यति ॥**

**ಅನು.:–** ಈ ರೀತಿಯಾಗಿ ಕ್ಷಣಿಕವಾದದಲ್ಲಿ ಕಾರ್ಯೋತ್ಪತ್ತಿಯನ್ನು ನಿರಾಕರಿಸಿ ಪ್ರಕೃತ ವಿನಾಶವನ್ನೂ ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ–

**ॐ प्रतिसङ्ख्याऽप्रतिसङ्ख्यानिरोधाप्राप्तिरविच्छेदात् ॐ**

**(२.२.२२)**

**ಸೂತ್ರಾರ್ಥ :–** ಏವಂ=ಕ್ಷಣಿಕವಾದದಲ್ಲಿ ಪ್ರತಿಕ್ಷಣ ಕಾರ್ಯೋತ್ಪತ್ತಿಯು ಹೇಗೆ ಕೂಡುವುದಿಲ್ಲವೋ ಅದೇ ರೀತಿಯಾಗಿ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿಃ = ಪ್ರತಿಸಂಖ್ಯಾನಿರೋಧ-ಅಪ್ರತಿಸಂಖ್ಯಾನಿರೋಧಗಳ (ಸಂತಾನವಿನಾಶ-ಪ್ರತಿಕ್ಷಣ-ವಿನಾಶಗಳ) ಅಪ್ರಾಪ್ತಿ=ಅನುಪಪತ್ತಿ ಇದ್ದೇ ಇದೆ. ಕುತಃ=ಏಕೆ? ಅವಿಚ್ಛೇದಾತ್=ಅವರ ಪ್ರಕಾರ ಕಾರ್ಯೋತ್ಪತ್ತಿಯಾದಾಗ ಕಾರಣಗಳು ನಷ್ಟವಾಗದೇ ಇರುವುದರಿಂದ.

**ಸೂ.ರ.:– एवं च परमते विनाशो न युज्यते । तन्मते विनाशो द्विविधः । कार्यमुत्पाद्य तदपहाय तत्क्षणे नाशः । तस्याप्येवमेवमिति प्रतिक्षणं नाशः । स एव असन्तानविनाशोऽप्रतिसङ्ख्यानिरोध इति गीयते । सन्तानं विनैव कारणस्य नष्टत्वात् । अपरस्तु कार्यमुत्पाद्य तेन सहैव मुद्गरप्रहरादिना क्षणमात्रे नाशः । स एव ससन्ताननाशः प्रतिसङ्ख्यानिरोध इति च गीयते ।**

**ಅನು.:–** ಕ್ಷಣಿಕವಾದದಲ್ಲಿ ವಿನಾಶವು ಕೂಡುವುದಿಲ್ಲ. ಹೇಗೆಂದರೆ– ಅವರ ಮತದಲ್ಲಿ ವಿನಾಶವು ಎರಡು ವಿಧವಾಗಿದೆ.

1) ಕಾರ್ಯವನ್ನು ಹುಟ್ಟಿಸಿ ಅದನ್ನು ಪರಿತ್ಯಾಗ ಮಾಡಿ ತತ್ಕ್ಷಣದಲ್ಲಿ ನಾಶ-ವಾಗುವುದು, ಹುಟ್ಟಿದ ಆ ಕಾರ್ಯವೂ ಮತ್ತೊಂದು ಕಾರ್ಯವನ್ನು ಹುಟ್ಟಿಸಿ ತತ್ಕ್ಷಣದಲ್ಲಿ

ನಾಶವಾಗುವುದು. ಈ ರೀತಿಯಾಗಿ ಪ್ರತಿಕ್ಷಣದಲ್ಲಿ ಆಗುವ ನಾಶ. ಇಲ್ಲಿ ಸಂತಾನ (ಮುಂದಿನ ಕಾರ್ಯ) ನಾಶವಾಗದೇ ಕೇವಲ ಕಾರಣ ನಾಶವಾಗುವುದರಿಂದ ಈ ವಿಧವಾದ ನಾಶಕ್ಕೆ ಅಸಂತಾನವಿನಾಶ=ಅಪ್ರತಿಸಂಖ್ಯಾನಿರೋಧ ಎಂದು ಹೆಸರು.

2) ಕಾರ್ಯವನ್ನು ಹುಟ್ಟಿಸಿ ಆ ಕಾರ್ಯದ ಜೊತೆಗೇನೇ ಮುದ್ಗರಪ್ರಹಾರಾದಿಗಳಿಂದ ಕ್ಷಣಮಾತ್ರದಲ್ಲಿ ಆಗುವ ನಾಶ. ಇಲ್ಲಿ ಸಂತಾನವೂ (ಮುಂದಿನ ಕಾರ್ಯವೂ) ನಾಶವಾಗು-ವುದರಿಂದ ಈ ವಿಧವಾದ ನಾಶಕ್ಕೆ ಸಸಂತಾನನಾಶ=ಪ್ರತಿಸಂಖ್ಯಾನಿರೋಧ ಎಂದು ಹೆಸರು.

**ಸೂ.ರ.:– तत्राद्यस्तावन्न युज्यते । कार्यमुत्पाद्य तत्परित्यागसमये सत्त्वेन ततश्च कार्यजनकत्वमिति नियमात्कार्यमुत्पादयेदेव । तद्वियोग-समयेऽप्येवमिति न कदापि निःसन्तानो नाशः । नापि सन्तानविनाशो युज्यते । सतो घटस्य ह्यात्यन्तिको विनाशः । अतोऽसौ सत्त्वात्कार्य-मुत्पादयेन्न तु नश्येत् । एवमुत्तरत्रापि सत्त्वात्कार्यमेवोत्पादयेन्न तु नश्येदिति ससन्तानोच्छेदावसराभावात् । अतो युक्तं लक्षणसूत्रमिति सिद्धम् ॥**

**ಅನು.:–** ಈ ಎರಡುವಿಧವಾದ ನಾಶಗಳಲ್ಲಿ ಮೊದಲನೇ ನಾಶವು=ಅಪ್ರತಿಸಂಖ್ಯಾ-ನಿರೋಧವು ಕೂಡುವುದಿಲ್ಲ. ಏಕೆಂದರೆ– ಕಾರಣವು ಕಾರ್ಯವನ್ನು ಹುಟ್ಟಿಸಿ ಅದನ್ನು ಪರಿತ್ಯಾಗ ಮಾಡಿ ತಾನು ನಾಶವಾಗುತ್ತದೆ ಎಂದು ಹೇಳಬೇಕು. ಆದರೆ ಕಾರ್ಯವನ್ನು ಪರಿತ್ಯಾಗ ಮಾಡುವ ಕಾಲದಲ್ಲಿ ಕಾರಣವು ಸತ್ ಆಗಿರುವುದರಿಂದಲೇ (ಅರ್ಥ ಕ್ರಿಯಾಕಾರಿಯಾದ್ದರಿಂದಲೇ) ಕಾರ್ಯವನ್ನು ಹುಟ್ಟಿಸಲೇಬೇಕು. ಸಮರ್ಥಸ್ಯ ಕ್ಷೇಪಾಯೋಗಾತ್=ಕಾರ್ಯ ಹುಟ್ಟಿಸಲು ಸಮರ್ಥವಾದ ಕಾರಣ ಇದ್ದಾಗ ಕಾರ್ಯವು ಹುಟ್ಟಲೇಬೇಕು ಎಂದು ನಿಯಮ ಒಪ್ಪಿದ್ದರಿಂದ. ಕಾರಣವು ಕಾರ್ಯಪರಿತ್ಯಾಗಕಾಲದಲ್ಲಿ ಕಾರ್ಯವನ್ನು ಹುಟ್ಟಿಸಿದ ನಂತರ, ಆ ಕಾರ್ಯವೂ ಸತ್ ಆದ್ದರಿಂದ ಮತ್ತೊಂದು ಕಾರ್ಯವನ್ನು ಹುಟ್ಟಿಸಲೇಬೇಕು. ಹೀಗೆ ಕಾರ್ಯೋತ್ಪತ್ತಿಯು ನಿರಂತರವಾಗಿ ನಡೆಯುತ್ತಲೇ ಇರುವುದರಿಂದ ಪ್ರತಿಕ್ಷಣವಿನಾಶ ಎನ್ನುವುದು ಕೂಡುವುದಿಲ್ಲ.

ಇನ್ನು ಎರಡನೆಯದಾದ ಸಂತಾನವಿನಾಶ (ಕಾರ್ಯದ ಜೊತೆಗೇ ಮುದ್ಗರ-ಪ್ರಹಾರಾದಿಗಳಿಂದ ನಾಶ=ಪ್ರತಿಸಂಖ್ಯಾನಿರೋಧವು) ಅದೂ ಕೂಡುವುದಿಲ್ಲ. ಏಕೆಂದರೆ– ಸತ್ ಆದ ಘಟಕ್ಕೆ ತಾನೇ ಆತ್ಯಂತಿಕನಾಶವನ್ನು ಹೇಳಬೇಕು. ಅವರ ಪ್ರಕಾರ ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ. ಅಂದಮೇಲೆ ನಾಶಕಾಲದಲ್ಲಿ ಇರುವ ಘಟವು ಸತ್ ಆದ್ದರಿಂದ

ಅರ್ಥಕ್ರಿಯಾಕಾರಿ ಆಗಲೇಬೇಕು. ಘಟರೂಪಕಾರ್ಯಾಂತರವನ್ನು ಹುಟ್ಟಿಸಲೇಬೇಕು. ಸಮರ್ಥಸ್ಯ ಕ್ಷೇಪಾಯೋಗಾತ್ ಎಂದು ನಿಯಮ ಒಪ್ಪಿದ್ದರಿಂದ. ಆ ಕಾರ್ಯವೂ ಮತ್ತೊಂದು ಕಾರ್ಯವನ್ನು ಹುಟ್ಟಿಸಲೇಬೇಕು. ಹೀಗಾಗಿ ಸಂತಾನನಾಶವಾಗುವ ಪ್ರಸಂಗವೇ ಇಲ್ಲವಾದ್ದರಿಂದ ಸಂತಾನವಿನಾಶವೂ=ಪ್ರತಿಸಂಖ್ಯಾನಿರೋಧವೂ ಕೂಡುವುದಿಲ್ಲ.

ಆದ್ದರಿಂದ ಕ್ಷಣಿಕಮತದಲ್ಲಿ ಪ್ರತಿಸಂಖ್ಯಾನಿರೋಧ-ಅಪ್ರತಿಸಂಖ್ಯಾನಿರೋಧ ಎಂಬ ನಾಶಗಳೇ ಅನುಪಪನ್ನವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಲಕ್ಷಣಸೂತ್ರವು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 23

**ಸೂ.ರ.:– नन्वथाऽपि सतां भावपदार्थानां क्षणिकत्वं निषेद्धुं न शक्यम् । सत्त्वं नामार्थक्रियाकारित्वम् । न च क्षणिकतामन्तरेण तदुपपन्नम् । यदि घट आद्यक्षणे घटान्तरमुत्पाद्य स्वयं न नश्येत्तर्हि द्वितीयादिक्षणे घटान्तरमपि जनयेत् । घटान्तराण्यपि तथेत्यनन्तकार्यापातः । तस्मादर्थक्रियाकारित्वरूपसत्त्वसिध्यै भावानां क्षणिकत्वमेवैष्टव्यमिति प्राप्ते सूत्रमाह ॥**

**ಅನು.:–** ಆದರೂ ಸಹ ಸತ್ ಆದ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ನಿಷೇಧಿಸಲು ಶಕ್ಯವಿಲ್ಲ. ಏಕೆಂದರೆ– ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ. ಈ ವಿಧವಾದ ಸತ್ವವು ಕ್ಷಣಿಕತ್ವವನ್ನು ಒಪ್ಪದ ಹೊರತು ಕೂಡುವುದಿಲ್ಲ. ಯಾಕೆಂದರೆ ಘಟವು ಮೊದಲನೇ ಕ್ಷಣದಲ್ಲಿ ಮತ್ತೊಂದು ಘಟವನ್ನು ಹುಟ್ಟಿಸಿ ಸ್ವಯಂ ತಾನು ನಾಶವಾಗುವುದಿಲ್ಲ ಎಂದಾದರೆ ಆಗ ದ್ವಿತೀಯಾದಿಕ್ಷಣದಲ್ಲಿ ಬೇರೆ ಘಟವನ್ನು ಹುಟ್ಟಿಸಬೇಕಾಗುತ್ತದೆ. ಆ ಬೇರೆ ಘಟವೂ ಸಹ ಮತ್ತೊಂದು ಘಟವನ್ನು ಹುಟ್ಟಿಸಬೇಕಾಗುತ್ತದೆ. ಹೀಗಾಗಿ ಅನಂತಕಾರ್ಯಾಪತ್ತಿ ಬರುತ್ತದೆ.

ಆದ್ದರಿಂದ ಅರ್ಥಕ್ರಿಯಾಕಾರಿತ್ವ ರೂಪವಾದ ಸತ್ವವನ್ನು ಕೂಡಿಸುವುದಕ್ಕಾಗಿ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಹೇಳುವುದೇ ಸೂಕ್ತ ಎಂಬುದಾಗಿ ಆಕ್ಷೇಪ ಬಂದರೆ, ಅದರ ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ उभयथा च दोषात् ॐ (२.२.२३)**

**ಸೂತ್ರಾರ್ಥ :–** ಉಭಯಥಾ ಚ=ಕಾರಣೇ ಸತಿ ಕಾರ್ಯಂ ಭವತ್ಯೇವ ಎಂಬ

ನಿಯಮವನ್ನು ಒಪ್ಪುವ ಪಕ್ಷದಲ್ಲಿ ಹಾಗೂ ಒಪ್ಪದ ಪಕ್ಷದಲ್ಲಿ ಎರಡೂ ಪಕ್ಷಗಳಲ್ಲಿಯೂ ಸಹ ದೋಷಾತ್=ಕಾರ್ಯಕಾರಣಗಳಲ್ಲಿ ವಿಶೇಷಾಭಾವ, ಕಾರ್ಯಾನುತ್ಪತ್ತಿ ರೂಪವಾದ ದೋಷ ಇರುವುದರಿಂದ, ನ ಅನ್ಯತರಪಕ್ಷಾವಲಂಬೇನ ಅರ್ಥಾಪತ್ತ್ಯಾ ಕ್ಷಣಿಕತ್ವಪಕ್ಷೋ ಯುಕ್ತಃ=ಯಾವುದಾದರೂ ಒಂದು ಪಕ್ಷವನ್ನು ಅವಲಂಬಿಸಿ ಅರ್ಥಾಪತ್ತಿಯಿಂದ ಕ್ಷಣಿಕತ್ವವನ್ನು ಹೇಳುವ ಪಕ್ಷ ಸರಿಯಲ್ಲ.

**ಸೂ.ರ.:– एवं च भावानां क्षणिकत्वाङ्गीकारे तत्रार्थक्रियाकारित्वं सत्त्वम् । तदन्यथाऽनुपपत्त्या क्षणिकत्वमिति वदता कारणे सति कार्यं भवत्येवेति यो नियम आश्रितः स किं वास्तवो न वा । आद्ये कार्य-कारणयोः सव्येतरविषाणवत्समानकालीनत्वेनकार्यकारणभावो न स्यात् । द्वितीये प्रथमक्षणे कार्यानुत्पादकत्वे नार्थक्रियाकारित्वाभावादसत्त्वं स्यात् । ततः कदाऽपि कार्योत्पत्तिर्न स्यात् । ततश्च सत्त्वान्यथाऽनुपपत्त्या कल्प्यमानं क्षणिकत्वं च न स्यात् । अनेन परपक्ष एवोभयथा दोषसत्त्वादस्मत्पक्षे दोषाभावादिति मन्तव्यम् । अतो युक्तं लक्षणसूत्रमिति सिद्धम् ।**

**ಅನು.:–** ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ. ಕ್ಷಣಿಕತ್ವ ಒಪ್ಪದಿದ್ದರೆ ಅದು ಕೂಡುವುದಿಲ್ಲ. ಆದ್ದರಿಂದ ಸತ್ವಾನ್ಯಥಾನುಪಪತ್ತಿಯಿಂದಾಗಿ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಅಂಗೀಕರಿಸಲೇಬೇಕು ಎಂದು ಹೇಳುವ ನಿಮಗೆ ಪ್ರಶ್ನೆ ಕೇಳುತ್ತೇವೆ– ಕಾರಣೇ ಸತಿ ಕಾರ್ಯಂ ಭವತ್ಯೇವ=ಕಾರಣ ಇದ್ದರೆ ಕಾರ್ಯ ಹುಟ್ಟಿಯೇ ಹುಟ್ಟುತ್ತದೆ ಎಂಬ ನಿಯಮವನ್ನು ಏನು ನೀವು ಆಶ್ರಯಿಸಿದ್ದೀರಿ ಆ ನಿಯಮವು ವಾಸ್ತವವೋ? ಅಲ್ಲವೋ?

ನಿಯಮ ವಾಸ್ತವ ಎನ್ನುವುದಾದರೆ, ಕಾರಣವಿರುವ ಕ್ಷಣದಲ್ಲಿಯೇ ಕಾರ್ಯ ಹುಟ್ಟುತ್ತದೆ ಎಂದಾಗುವುದರಿಂದ ಗೋವಿನ ಎರಡು (ಎಡ-ಬಲ) ಕೊಂಬುಗಳು ಒಂದೇ ಕಾಲದಲ್ಲಿ ಇರುವ ಕಾರಣ ಅವುಗಳಲ್ಲಿ ಕಾರ್ಯಕಾರಣಭಾವ ಹೇಗೆ ಇಲ್ಲವೋ ಅದರಂತೆ ಇವುಗಳಲ್ಲಿಯೂ ಕಾರ್ಯಕಾರಣಭಾವ (ಪೂರ್ವಾಪರವೃತ್ತಿತ್ವ) ಕೂಡುವುದಿಲ್ಲ.

ನಿಯಮ ಇಲ್ಲ ಎನ್ನುವುದಾದರೆ, ಕಾರಣ ಇದ್ದರೂ ಕಾರ್ಯ ಹುಟ್ಟಬೇಕಿಲ್ಲ ಎಂದಾಯಿತು. ಹಾಗಾದರೆ ಕಾರಣವು ಪ್ರಥಮಕ್ಷಣದಲ್ಲಿ ಕಾರ್ಯವನ್ನು ಹುಟ್ಟಿಸಲಿಲ್ಲ-ವಾದ್ದರಿಂದ ಅದಕ್ಕೆ ಅರ್ಥಕ್ರಿಯಾಕಾರಿತ್ವ ಇಲ್ಲ ಎಂದಾಯಿತು. ಅರ್ಥಕ್ರಿಯಾಕಾರಿತ್ವ ಇಲ್ಲ

ಎಂದಾದರೆ ಅರ್ಥಕ್ರಿಯಾಕಾರಿತ್ವವೇ ಸತ್ವ ಆಗಿದ್ದರಿಂದ ಕಾರಣವು ಅಸತ್ ಎಂದಾಯಿತು. ಕಾರಣವು ಅಸತ್ ಆದರೆ (ಅರ್ಥಕ್ರಿಯಾಕಾರಿ ಅಲ್ಲ ಎಂದಾದರೆ) ಅದರಿಂದ ಎಂದಿಗೂ ಕಾರ್ಯ ಹುಟ್ಟಬಾರದು. ಅಂದಮೇಲೆ ಸತ್ವಾನ್ಯಥಾನುಪಪತ್ತಿಯಿಂದ ಕಲ್ಪ್ಯಮಾನವಾದ ಕ್ಷಣಿಕತ್ವವೂ ಉಪಪನ್ನವಾಗದೇ ಹೋಗಬೇಕಾಗುತ್ತದೆ. ಆದ್ದರಿಂದ ಎರಡನೇ ಪಕ್ಷವೂ ಸರಿಯಲ್ಲ ಎಂದಾಗುತ್ತದೆ.

ಸತ್ವಂ ನಾಮ ಅರ್ಥಕ್ರಿಯಾಕಾರಿತ್ವಂ=ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ ಎಂಬುದಾಗಿ ಕ್ಷಣಿಕವಾದಿಗಳು ಅಂಗೀಕರಿಸಿದ್ದರಿಂದ ಅವರ ಪಕ್ಷದಲ್ಲಿ ಈ ರೀತಿಯಾದ ದೋಷ ಬರುತ್ತದೆ. ನಾವು ಸತ್ವಂ ನಾಮ ಅರ್ಥಕ್ರಿಯಾಕಾರಿತ್ವಂ ಎಂದು ಒಪ್ಪಿಲ್ಲ ಮತ್ತು ಕಾರಣೇ ಸತಿ ಕಾರ್ಯಂ ಭವತ್ಯೇವ ಎಂಬ ನಿಯಮವನ್ನೂ ಒಪ್ಪಿಲ್ಲವಾದ್ದರಿಂದ ನಮಗೆ ಈ ದೋಷ ಬರುವುದಿಲ್ಲ ಎಂದು ತಿಳಯಬೇಕು.

ಹೀಗೆ ಕ್ಷಣಿಕಮತವು ಅನುಪಪನ್ನವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣ ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 24

**ಸೂ.ರ.:– ननु मा भूदर्थापत्त्या क्षणिकत्वसिद्धिः । यत्सत्तत्क्षणिकम् । यथा दीपादि । सन्तश्चामी भावाः पदार्था इत्यनुमानेन सेत्स्यति । न च वाच्यं साध्यविकलतेति । यद्विरुद्धधर्माधिकरणं तन्नाना यथा घटपटौ । तथा चायं दीपः पूर्वोत्तरक्षणविरुद्धधर्माधिकरणं विशेषदर्शनादिति प्राप्ते सूत्रमाह ॥**

**ಅನು.:–** ಅರ್ಥಾಪತ್ತಿಯಿಂದ (ಸತ್ವಾನ್ಯಥಾನುಪಪತ್ತಿಯಿಂದ) ಕ್ಷಣಿಕತ್ವವು ಸಿದ್ಧವಾಗುವುದಿಲ್ಲ ಎಂದರೆ, ಅರ್ಥಾಪತ್ತಿಯಿಂದ ಸಿದ್ಧವಾಗುವುದು ಬೇಡ. ಕಿಂತು–

ಘಟಾದಯಃ ಪದಾರ್ಥಾಃ, ಕ್ಷಣಿಕಾಃ, ಸತ್ವಾತ್, ಯತ್ ಸತ್ ತತ್ ಕ್ಷಣಿಕಮ್ । ಯಥಾ ದೀಪಾದಿ ।

ಘಟಪಟಾದಿ ಪದಾರ್ಥಗಳು ಕ್ಷಣಿಕವಾಗಿವೆ, ಸತ್ ಆದ್ದರಿಂದ. ಯಾವುದು ಸತ್ ಆಗಿರುತ್ತದೆಯೋ ಅದು ಕ್ಷಣಿಕವಾಗಿರುತ್ತದೆ. ದೀಪವು ಸತ್ ಆಗಿದ್ದರಿಂದ ಕ್ಷಣಿಕವಾಗಿರುವಂತೆ, ಎಂಬ ಅನುಮಾನದಿಂದ ಕ್ಷಣಿಕತ್ವವು ಸಿದ್ಧಿಸುತ್ತದೆ.

ದೀಪವು ಕ್ಷಣಿಕವಾಗಿದೆ ಎಂದು ಹೇಗೆ ಹೇಳುತ್ತೀರಿ? ಅರ್ಥಾತ್ ದೃಷ್ಟಾಂತವಾದ

ದೀಪದಲ್ಲಿ ಕ್ಷಣಿಕತ್ವಸಾಧ್ಯ ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆಯಲ್ಲವೇ? ಎಂದು ಶಂಕಿಸುವುದು ಸರಿಯಲ್ಲ. ಘಟಪಟಗಳು ವಿರುದ್ಧ ಧರ್ಮಾಧಿಕರಣವಾದ್ದರಿಂದ ಭಿನ್ನವಾಗಿವೆ. ಅದರಂತೆ ದೀಪವು ಪೂರ್ವೋತ್ತರಕ್ಷಣಗಳಲ್ಲಿ ಇದ್ದರೂ ಸಹ ಪರಿಣಾಮ-ವಿಶೇಷ ಕಂಡಿದ್ದರಿಂದ ವಿರುದ್ಧಧರ್ಮಾಧಿಕರಣವಾದ ಕಾರಣ ನಾನಾ ಆಗಿದೆ ಅರ್ಥಾತ್ ಕ್ಷಣಿಕವಾಗಿದೆ ಎಂಬುದಾಗಿ ದೀಪದಲ್ಲಿ ಕ್ಷಣಿಕತ್ವವು ಸಿದ್ಧವಾಗಿರುವುದರಿಂದ ಸತ್ವಾನು-ಮಾನದಲ್ಲಿ ಸಾಧ್ಯವೈಕಲ್ಯ ಬರುವುದಿಲ್ಲ. ಆದ್ದರಿಂದ ಅರ್ಥಾಪತ್ತಿಯಿಂದ ಕ್ಷಣಿಕತ್ವವು ಸಿದ್ಧಿಸದಿದ್ದರೂ ಸಹ ಅನುಮಾನದಿಂದ ಕ್ಷಣಿಕತ್ವವು ಸಿದ್ಧಿಸುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

## ॐ आकाशे चाविशेषात् (२.२.२४)

**ಸೂತ್ರಾರ್ಥ :–** ದೀಪದ ದೃಷ್ಟಾಂತದಿಂದ ಸತ್ವಹೇತುವಿನಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧಿಸುವುದಾದರೆ,

ಘಟಾದಯಃ ಪದಾರ್ಥಾಃ ಅಕ್ಷಣಿಕಾಃ ಸತ್ವಾತ್, ಆಕಾಶವತ್ ।

ಎಂಬುದಾಗಿ ಆಕಾಶದ ದೃಷ್ಟಾಂತದಿಂದ ಅಕ್ಷಣಿಕತ್ವವನ್ನೂ ಸಾಧಿಸಬೇಕಾಗುತ್ತದೆ.

ದೃಷ್ಟಾಂತವಾದ ಆಕಾಶದಲ್ಲಿ ಅಕ್ಷಣಿಕತ್ವಸಾಧ್ಯ ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆಯಲ್ಲವೇ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಹೇಳಿದರು– ಆಕಾಶೇ ಚಾ ವಿಶೇಷಾತ್ ಎಂದು. ಅಂದರೆ– ಕ್ಷಣಿಕತ್ವಕ್ಕೆ ಸಾಧಕವಾಗಿ ಪರರು ಹೇಳಿದ ಪರಿಣಾಮವಿಶೇಷ ಎನ್ನುವುದು ದೀಪದಲ್ಲಿ ಕಂಡಂತೆ ಆಕಾಶೇ ಚ=ಆಕಾಶದಲ್ಲಿಯಾದರೂ ಅವಿಶೇಷಾತ್=ಆ ಪರಿಣಾಮವಿಶೇಷ ಕಂಡಿಲ್ಲವಾದ್ದರಿಂದ.

ಆದ್ದರಿಂದ ದೀಪದೃಷ್ಟಾಂತದಿಂದ ಕ್ಷಣಿಕತ್ವವನ್ನು ಸಾಧಿಸುವುದಾದರೆ ಆಕಾಶ-ದೃಷ್ಟಾಂತದಿಂದ ಅಕ್ಷಣಿತತ್ವವನ್ನೂ ಸಾಧಿಸಲು ಬರುವುದರಿಂದ, ನಿಮ್ಮ ಅನುಮಾನವು ಸತ್ಪ್ರತಿಪಕ್ಷವಾಗುವುದರಿಂದ ನಿಮ್ಮ ಈ ಅನುಮಾನದಿಂದ ಕ್ಷಣಿಕತ್ವವು ಸಿದ್ಧಿಸುವುದಿಲ್ಲ.

**ಸೂ.ರ.:– एवं च यत्सत्तदक्षणिकं यथाऽऽकाशमित्यक्षणिकत्वस्यापि साधयितुं शक्यत्वात् । न चाकाशे साध्याभावः । विशेषदर्शनाभावेन क्षणिकत्वसाधकाभावात् । न च हेत्वन्तरेण तत्सिद्धिः । पञ्चस्कन्धाति-रिक्तत्वेन तत्र तदनभ्युपगमात् ।**

**ಅನು.:–** "ಘಟಾದಯಃ ಪದಾರ್ಥಾಃ ಕ್ಷಣಿಕಾಃ ಸತ್ವಾತ್ ದೀಪವತ್"

ಎಂಬುದಾಗಿ ದೀಪದ ದೃಷ್ಟಾಂತದಿಂದ ಸತ್ವಹೇತುವಿನಿಂದ ಕ್ಷಣಿಕತ್ವವನ್ನು ಸಾಧಿಸು-ವುದಾದರೆ,

"ಘಟಾದಯಃ ಪದಾರ್ಥಾಃ ಅಕ್ಷಣಿಕಾಃ ಸತ್ವಾತ್ ಆಕಾಶವತ್"

ಎಂಬುದಾಗಿ ಆಕಾಶದ ದೃಷ್ಟಾಂತದಿಂದ ಅದೇ ಸತ್ವಹೇತುವಿನಿಂದ ಅಕ್ಷಣಿಕತ್ವವನ್ನೂ ಸಾಧಿಸಲು ಬರುತ್ತದೆಯಾದ್ದರಿಂದ ಕ್ಷಣಿಕತ್ವ ಸಿದ್ಧಿಸುವುದಿಲ್ಲ.

ದೃಷ್ಟಾಂತವಾದ ಆಕಾಶದಲ್ಲಿ ಅಕ್ಷಣಿಕತ್ವ ಸಾಧ್ಯ ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆಯಲ್ಲವೇ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಕ್ಷಣಿಕತ್ವಸಾಧಕವಾದ ಪರಿಣಾಮ-ವಿಶೇಷ ಎನ್ನುವುದು ದೀಪದಲ್ಲಿ ಕಂಡಂತೆ ಆಕಾಶದಲ್ಲಿ ಕಂಡಿಲ್ಲ. ಆದ್ದರಿಂದ ಆಕಾಶದಲ್ಲಿ ಅಕ್ಷಣಿಕತ್ವ ಸಾಧ್ಯ ಇದ್ದೇ ಇದೆ. ಆಕಾಶವು ಪಂಚಸ್ಕಂಧಗಳಿಂದ ಭಿನ್ನವಾಗಿರುವುದರಿಂದ ಕ್ಷಣಿಕತ್ವವನ್ನು ಒಪ್ಪದಿರುವುದರಿಂದ ಅಲ್ಲಿ ಬೇರೆ ಹೇತುಗಳಿಂದಲೂ ಕ್ಷಣಕತ್ವವನ್ನು ಸಾಧಿಸಲು ಬರುವುದಿಲ್ಲ.

**ಸೂ.ರ.:– आकाशे सत्त्वं नास्तीति चेत् । किमिदं सत्त्वं यदाकाशे नास्ति । अर्थक्रियाकारित्वं चेत् । त्वन्मते पूर्वोक्तरीत्या कस्याप्यर्थ-क्रियाकारित्वाभावेनासिद्धिः । साधनविकलता च निदर्शनस्य । अथ स्वरूपेण विद्यमानता भावरूपता वा । साप्याकाशेऽस्त्येवेति व्यभिचारो दुष्परिहारः। अतः सत्त्वहेतोः स्वेनैव प्रतिपक्षितत्वान्नानेनापि क्षणिकत्वसिद्धिः । अतो युक्तं लक्षणसूत्रमिति सिद्धम् ॥**

**ಅನು.:–** ದೃಷ್ಟಾಂತವಾದ ಆಕಾಶದಲ್ಲಿ ಸತ್ವಹೇತು ಇಲ್ಲವಾದ್ದರಿಂದ ಸಾಧನವೈಕಲ್ಯ ಬರುತ್ತದೆ? ಎಂದು ಶಂಕೆ ಬಂದರೆ, ಆಕಾಶದಲ್ಲಿ ಸತ್ವ ಇಲ್ಲ ಎಂದು ನಿಷೇಧಿಸುವ ಆ ಸತ್ವ ಎಂದರೆ ಏನು?

ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ ಎನ್ನುವುದಾದರೆ, ಈ ಹಿಂದೆ 22ನೇ ಸೂತ್ರದಲ್ಲಿ ಹೇಳಿದಂತೆ ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ ಎಂದು ಹೇಳಿದರೆ ನಾಶವೇ ಕೂಡದೇ ಹೋಗಬೇಕಾಗುತ್ತದೆ ಎಂಬ ಅನುಪಪತ್ತಿ ಬರುವುದರಿಂದ ನಿಮ್ಮ ಮತದಲ್ಲಿ ಯಾವ ಪದಾರ್ಥಕ್ಕೂ ಅರ್ಥಕ್ರಿಯಾಕಾರಿತ್ವ ಇಲ್ಲವಾದ್ದರಿಂದ, ಕ್ಷಣಿಕತ್ವಸಾಧ್ಯಕವಾದ ನಿಮ್ಮ

ಅನುಮಾನದಲ್ಲಿ ಪಕ್ಷದಲ್ಲಿ (ಜಗತ್ತಿನಲ್ಲಿ) ಎಲ್ಲಿಯೂ ಸತ್ವಹೇತು ಬಾರದ ಕಾರಣ ಅಸಿದ್ಧಿ ಬರುತ್ತದೆ. ಜೊತೆಗೆ ದೃಷ್ಟಾಂತವಾದ ದೀಪದಲ್ಲಿಯೂ ಸತ್ವ (ಅರ್ಥಕ್ರಿಯಾಕಾರಿತ್ವ) ಹೇತು ಬಾರದ ಕಾರಣ ಸಾಧನವೈಕಲ್ಯವೂ ಬರುತ್ತದೆ.

ಸತ್ವ ಎಂದರೆ ಸ್ವರೂಪೇಣ ವಿದ್ಯಮಾನತ್ವ ಎಂದಾಗಲೀ ಅಥವಾ ಭಾವರೂಪತ್ವ ಎಂದಾಗಲೀ ಹೇಳುವುದಾದರೆ ಅಂತಹ ಸತ್ವವು ಆಕಾಶದಲ್ಲಿ ಇದ್ದೇ ಇದೆಯಾದ್ದರಿಂದ ಆಕಾಶದಲ್ಲಿ ಕ್ಷಣಿಕತ್ವಸಾಧ್ಯ ಇಲ್ಲ ಸತ್ವಹೇತು ಇದೆ. ಹೀಗಾಗಿ ಕ್ಷಣಿಕತ್ವಸಾಧ್ಯಕ ನಿಮ್ಮ ಅನುಮಾನದಲ್ಲಿ ವ್ಯಭಿಚಾರ ಅಪರಿಹಾರ್ಯವಾಗುತ್ತದೆ.

ಆದ್ದರಿಂದ ದೀಪದ ದೃಷ್ಟಾಂತದಿಂದ ಸತ್ವಹೇತುವಿನಿಂದ ಕ್ಷಣಿಕತ್ವವನ್ನು ಸಾಧಿಸು-ವುದಾದರೆ, ಆಕಾಶದ ದೃಷ್ಟಾಂತದಿಂದ ಅದೇ ಸತ್ವಹೇತುವಿನಿಂದ ಅಕ್ಷಣಿಕತ್ವವನ್ನೂ ಸಾಧಿಸಲು ಬರುವುದರಿಂದ ಅಂದರೆ ಸತ್ವಹೇತುವು ತನ್ನಿಂದಲೇ ಪ್ರತಿಪಕ್ಷಿತವಾಗುವುದರಿಂದ ಈ ಅನುಮಾನದಿಂದಲೂ ಕ್ಷಣಿಕತ್ವ ಸಿದ್ಧಿಸುವುದಿಲ್ಲ. ಆದ್ದರಿಂದ ಜಗತ್ತಿಗೆ ಕ್ಷಣಿಕತ್ವ ಸಿದ್ಧಿಸದ ಕಾರಣ ಬ್ರಹ್ಮನಿಗೆ ಜಗತ್ಕಾರಣತ್ವ ಪ್ರತಿಪಾದಕವಾದ ಲಕ್ಷಣಸೂತ್ರವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 25

**ಸೂ.ರ.:–** **एवं प्रतिपक्षेण सत्त्वानुमानं निरस्य प्रमाणवाधेनापि निराकुर्वत्सूत्रमुपन्यस्यति ॥**

**ಅನು.:–** ಈ ರೀತಿಯಾಗಿ ಪ್ರತಿಪಕ್ಷಾನುಮಾನದಿಂದ ಸತ್ವಾನುಮಾನವನ್ನು ನಿರಾಕರಿಸಿ ಪ್ರಮಾಣಭಾದದಿಂದಲೂ ಸತ್ವಾನುಮಾನವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अनुस्मृतेश्च ॐ (२.२.२५)**

**ಸೂತ್ರಾರ್ಥ :–** ಅನುಸ್ಮೃತೇಶ್ಚ=ತದೇವೇದಂ ಎಂಬುದಾಗಿ ಪ್ರತ್ಯಭಿಜ್ಞಾ ಬರುವುದರಿಂದಲೂ ಸಹ, ಆ ಪ್ರತ್ಯಭಿಜ್ಞಾವಿರೋಧ ಬರುವ ಕಾರಣ ಸತ್ವಹೇತುವಿನಿಂದ ಕ್ಷಣಿಕತ್ವಸಾಧನ ಮಾಡುವುದು ಯುಕ್ತವಲ್ಲ.

**ಸೂ.ರ.:–** **एवं च सोऽयं घट इति प्रत्यभिज्ञाविरोधः । तया स्थायित्वसिद्धेः । न च प्रत्यभिज्ञा भ्रान्तिः । बाधकाभावात् । घटोऽयं**

निरन्तरोत्तरक्षणवृत्तिध्वंसप्रतियोगी घटत्वात् मुसलाहतैकक्षणवृत्तिघटवदिति चोक्तरीत्या परास्तम् । किंच घटशब्देन परमाणूंल्लक्षयित्वा घटत्वशब्देन परमाणुत्वमेव हेतुतया विवक्ष्यते । उत समुदायमेव पक्षीकृत्य घटत्वमेव हेतुतया विवक्ष्यते । नाद्यः । मुसलाहतस्य घटस्य समुदायत्वेन परमाणुत्वाभावात् । तत्र हेत्वभावेन व्याप्तिग्रहणाभावप्रसङ्गात् । न द्वितीयः । सत एव त्वया क्षणिकत्वस्य साधनीयत्वेनावस्तुनस्तत्साधनस्यानुपयुक्तत्वात् । अतो वैभाषिकसौत्रान्तिकमतस्यानुपपन्नत्वेनाविरोधकत्वाद्युक्तमीश्वरस्याशेषजगत्कारणत्वलक्षणमिति सिद्धम् ॥

**ಅನು.:–** "ಸೋಽಯಂ ಘಟಃ" ಎಂಬುದಾಗಿ ಪ್ರತ್ಯಭಿಜ್ಞಾ ಬರುತ್ತದೆ. ಈ ಪ್ರತ್ಯಭಿಜ್ಞಾವು ಘಟಕ್ಕೆ ಸ್ಥಾಯಿತ್ವವನ್ನು ಹೇಳುತ್ತಿದೆ. ಪ್ರಕೃತ ಘಟಕ್ಕೆ ಕ್ಷಣಿಕತ್ವವನ್ನು ಹೇಳುವುದಾದರೆ ಸ್ಥಾಯಿತ್ವಬೋಧಕ ಪ್ರತ್ಯಭಿಜ್ಞಾವಿರೋಧ ಬರುತ್ತದೆ. 'ಸೋಽಯಂ ಘಟಃ' ಎಂಬ ಪ್ರತ್ಯಭಿಜ್ಞಾ ಭ್ರಾಂತಿ ಎಂದು ಹೇಳಲು ಬರುವುದಿಲ್ಲ. ಕಾರಣ– ಅದು ಭ್ರಾಂತಿ ಆಗಿದ್ದರೆ ಬಾಧಜ್ಞಾನ ಬರಬೇಕಿತ್ತು. ಆದರೆ ಈಗ ಬಾಧಜ್ಞಾನ ಬರುವುದಿಲ್ಲವಾದ್ದರಿಂದ ಪ್ರತ್ಯಭಿಜ್ಞಾವನ್ನು ಭ್ರಾಂತಿ ಎನ್ನಲು ಬರುವುದಿಲ್ಲ.

"ಅಯಂ ಘಟಃ, ನಿರಂತರೋತ್ತರಕ್ಷಣವೃತ್ತಿಧ್ವಂಸಪ್ರತಿಯೋಗೀ, ಘಟತ್ವಾತ್, ಮುಸಲಾಹತೈಕಕ್ಷಣವೃತ್ತಿಘಟವತ್"

ಎಂಬ ಅನುಮಾನವು ಕ್ಷಣಿಕತ್ವವಿಷಯದಲ್ಲಿ ಪ್ರಮಾಣವಾಗಬಹುದಲ್ಲ? ಎಂಬುದಾಗಿ ಶಂಕಿಸುವುದು ಸರಿಯಲ್ಲ. ಅರ್ಥಕ್ರಿಯಾಕಾರಿಯಾದ ಘಟಕ್ಕೆ ವಿನಾಶ ಕೊಡುವುದಿಲ್ಲ ಎಂಬುದಾಗಿ ಹಿಂದೆಯೇ ದೋಷವನ್ನು ಹೇಳಿ ನಿರಾಕರಿಸಲಾಗಿದೆ.

ಮತ್ತು ಈ ಅನುಮಾನದಲ್ಲಿ ಘಟಶಬ್ದದಿಂದ ಲಕ್ಷಣಯಾ ಪರಮಾಣುಗಳನ್ನು ಸ್ವೀಕರಿಸಿ, ಘಟತ್ವಶಬ್ದದಿಂದ ಪರಮಾಣುತ್ವವನ್ನೇ ಹೇತುವನ್ನಾಗಿ ಹೇಳುತ್ತೀರೋ? ಅಥವಾ ಸಮುದಾಯವನ್ನೇ ಪಕ್ಷ ಮಾಡಿಕೊಂಡು ಘಟತ್ವವನ್ನೇ ಹೇತುವನ್ನಾಗಿ ಹೇಳುತ್ತೀರೋ?

ಮೊದಲನೇ ಪಕ್ಷ ಸರಿಯಲ್ಲ. ಮುಸಲದಿಂದ ನಷ್ಟವಾದ ಘಟವು ಸಮುದಾಯವಾದ್ದರಿಂದ ಅದರಲ್ಲಿ ಪರಮಾಣುತ್ವ ಇಲ್ಲ. ದೃಷ್ಟಾಂತದಲ್ಲಿ ಪರಮಾಣುತ್ವಹೇತು ಇಲ್ಲದ ಕಾರಣ ಸಾಧನವೈಕಲ್ಯ ಬರುತ್ತದೆ ಎಂದು ಭಾವ. ದೃಷ್ಟಾಂತದಲ್ಲಿ ಹೇತು ಇಲ್ಲ ಎಂದಾದರೆ ವ್ಯಾಪ್ತಿಗ್ರಹಣ ಆಗದೇ ಹೋಗಬೇಕಾಗುತ್ತದೆ.

ಎರಡನೇ ಪಕ್ಷವೂ ಸರಿಯಲ್ಲ. ಸತ್ ಆದ ವಸ್ತುವಿಗೇ ನೀವು ಕ್ಷಣಿಕತ್ವವನ್ನು ಸಾಧಿಸ-ಬೇಕಾದ್ದರಿಂದ, ನೀವು ಕಲ್ಪಿಸಿರುವ ಸಮುದಾಯವು ನಿಜವಾಗಿ ವಸ್ತುವೇ ಅಲ್ಲವಾದ್ದರಿಂದ, ಅಂತಹ ಸಮುದಾಯಕ್ಕೆ ಕ್ಷಣಿಕತ್ವವನ್ನು ಸಾಧಿಸುವುದು ಅನುಪಯುಕ್ತವೇ ಆಗಿದೆ.

ಆದ್ದರಿಂದ ವೈಭಾಷಿಕ-ಸೌತ್ರಾಂತಿಕ ಮತಗಳು ಅನುಪಪನ್ನವಾದ್ದರಿಂದ ಆ ಮತಗಳ ವಿರೋಧ ಬಾರದ ಕಾರಣ ಈಶ್ವರನಿಗೆ ಅಶೇಷಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸಮುದಾಯಾಧಿಕರಣವು ಮುಗಿಯಿತು.

*ಅಧಿಕರಣ – 8*

## ಅಸದಧಿಕರಣ

### ಸಂಗತಿ

**ಸೂ.ರ.:–अत्र शून्यवादो निराक्रियते ।**

**ಅನು.:–** ಶೂನ್ಯವಾದವನ್ನು ನಿರಾಕರಿಸುತ್ತಾರೆ ಈ ಎಂಟನೇ ಅಸದಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न विष्णोर्जगत्कारणत्वं युक्तम् । शून्यसमयविरुद्ध-त्वात् । एकमेव शून्यमन्तत्रयरहितं परमार्थसत् । तस्मादेवाशेषं जगदुदेति । न चासङ्गस्य तदनुपपत्तिः । संवृतिसम्बन्धेन तदुपपत्तेः । न च श्रुतिविरोधः । तत्प्रामाण्यानभ्युपगमात् । ततश्च शून्यसमयविरुद्धत्वादयुक्तं विष्णो-र्जगत्कारणत्वलक्षणमिति प्राप्ते सूत्रितम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಏಕೆಂದರೆ – ಅದು ಶೂನ್ಯಮತಕ್ಕೆ ವಿರುದ್ಧವಾಗುತ್ತದೆ. ಹೇಗೆಂದರೆ – ಶೂನ್ಯವು ಒಂದೇ ಅಂತತ್ರಯರಹಿತವಾಗಿ ಪಾರಮಾರ್ಥಿಕ ಸತ್ ಆದದ್ದಾಗಿದೆ. ಅಂತಹ ಶೂನ್ಯದಿಂದಲೇ ಜಗತ್ತು ಸೃಷ್ಟವಾಗುತ್ತದೆ.

ಆ ಶೂನ್ಯವು ಅಸಂಗವಾದ್ದರಿಂದ ಅಂತಹ ಶೂನ್ಯಕ್ಕೆ ಜಗತ್ಕಾರಣತ್ವವು ಉಪಪನ್ನ-ವಾಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಶೂನ್ಯವು ಅಸಂಗವಾದರೂ ಸಹ ಸಂವೃತಿಯ (ಅಜ್ಞಾನದ) ಸಂಬಂಧದಿಂದಾಗಿ ಅದಕ್ಕೆ ಜಗತ್ಕಾರಣತ್ವವು ಉಪಪನ್ನ-ವಾಗುತ್ತದೆ.

ಶೂನ್ಯದಿಂದ ಜಗತ್ತಿನ ಉತ್ಪತ್ತಿಯನ್ನು ಅಂಗೀಕರಿಸುವುದಾದರೆ, ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಗಳ ವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಕಾರಣ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಅಂತಹ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸುವುದೇ ಇಲ್ಲ.

ಆದ್ದರಿಂದ ಶೂನ್ಯಕ್ಕೆ ಜಗತ್ಕಾರಣತ್ವವು ಉಪಪನ್ನವಾಗುವುದರಿಂದ, ಪ್ರಕೃತ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಅಂತಹ ಶೂನ್ಯಮತದ ವಿರೋಧ ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ नासतोऽदृष्टत्वात् ॐ (२.२.२६)**

ಅಸತಃ = ಶೂನ್ಯಕ್ಕೆ ನ ಜಗತ್ಕರ್ತೃತ್ವಂ = ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ. ಕುತಃ = ಏಕೆ? ಪ್ರಮಾಣಾಭಾವಾತ್ = ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ.

ತತ್ ಕುತಃ = ಅದು ಏಕೆ? (ಪ್ರಮಾಣ ಇಲ್ಲ ಎಂದು ಏಕೆ?) ಅದೃಷ್ಟತ್ವಾತ್ = ಅಸತ್‌ಗೆ ಕಾರಣತ್ವವು ಎಲ್ಲೂ ಕಂಡಿಲ್ಲವಾದ್ದರಿಂದ. ಆದ್ದರಿಂದಲೇ ಅನುಮಾನ-ಆಗಮಗಳೂ ಪ್ರಮಾಣವಾಗುವುದಿಲ್ಲ.

### ಸಿದ್ಧಾಂತ

**ಸೂ.ರ.:–** एवं च युक्तमेव विष्णोर्जगत्कारणत्वम् । शून्यसमयस्याप्रामाणिकत्वात् । शून्यमेव जगत्कारणमित्यत्र प्रमाणाभावात् । प्रमाणं भवत्प्रत्यक्षं वाऽनुमानं वाऽऽगमो वा स्यात् । न तावत्प्रत्यक्षम् । शून्यकारणत्वस्याप्रत्यक्षत्वात् । नाप्यनुमानम् । दृष्टान्ताभावात् । घटादावेव कारणत्वदर्शनेऽपि नासौ दृष्टान्तः । तस्य त्वन्मतेऽसत्त्वेनासति प्रतिवादिना

**कारणत्वस्यानुपलब्धत्वेन कारणत्वाभावस्यानुमातुं शक्यत्वेन साध्य-वैकल्यात् । आगमोऽपि बौद्धाद्यागमो वा वेदादिर्वा भवेत् । नाद्यः । तत्प्रामाण्यस्य प्रतिवादिनोऽसम्मतेः । न द्वितीयः । तत्प्रामाण्यस्य वाद्यसम्प्रतिपत्तेः । तथाविधवेदानुपलम्भाच्च । अतः शून्यमतस्यायुक्त-त्वेनेश्वरस्य जगत्कारणत्वलक्षणं युक्तमिति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ – ಹಿಂದೆ ನಿರೂಪಿತವಾದ ಶೂನ್ಯವಾದವು ಅಪ್ರಾಮಾಣಿಕವಾಗಿದೆ. ಶೂನ್ಯವೇ ಜಗತ್ಕಾರಣ-ವಾಗಿದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ ಶೂನ್ಯವಾದವು ಅಪ್ರಾಮಾಣಿಕ ಎಂದು ಭಾವ.

ಶೂನ್ಯವೇ ಜಗತ್ಕಾರಣ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? ಎಂದರೆ, ಯಾವುದು ಪ್ರಮಾಣವಾಗಬಲ್ಲದು? ಪ್ರತ್ಯಕ್ಷವೋ? ಅನುಮಾನವೋ? ಆಗಮವೋ?

ಪ್ರತ್ಯಕ್ಷವು ಪ್ರಮಾಣವಾಗಲು ಸಾಧ್ಯವಿಲ್ಲ. ಕಾರ್ಯಕಾರಣಭಾವವು ಪ್ರತ್ಯಕ್ಷಕ್ಕೆ ಯೋಗ್ಯವಲ್ಲದ ಕಾರಣ ಶೂನ್ಯಕ್ಕೆ ಜಗತ್ಕಾರಣತ್ವವು ಪ್ರತ್ಯಕ್ಷಯೋಗ್ಯವಾಗಿಲ್ಲ. ಇನ್ನು ಅನುಮಾನವೂ ಪ್ರಮಾಣವಾಗುವುದಿಲ್ಲ. ಶೂನ್ಯಕ್ಕೆ ಜಗತ್ಕಾರಣತ್ವವನ್ನು ಅನುಮಾನದಿಂದ ಸಾಧಿಸುವುದಕ್ಕೆ ದೃಷ್ಟಾಂತ ಯಾವುದೂ ಇಲ್ಲ.

ಆಗಮವು ಪ್ರಮಾಣವಾಗುತ್ತದೆ ಎನ್ನುವುದಾದರೆ, ಬೌದ್ಧಾದ್ಯಾಗಮವು ಪ್ರಮಾಣ-ವಾಗುತ್ತದೆಯೋ? ವೇದಾದಿಗಳು ಪ್ರಮಾಣವಾಗುತ್ತವೆಯೋ?

ಬೌದ್ಧಾದಿಗಳ ಆಗಮಕ್ಕೆ ಪ್ರತಿವಾದಿಗಳಾದ ನಾವು ಪ್ರಾಮಾಣ್ಯವನ್ನು ಅಂಗೀಕಾರ ಮಾಡಿಲ್ಲವಾದ್ದರಿಂದ ಮೊದಲನೇ ಪಕ್ಷ ಸರಿಯಲ್ಲ. ಇನ್ನು ವೇದಾದಿಗಳಿಗೆ ಪ್ರಾಮಾಣ್ಯವನ್ನು ವಾದಿಗಳಾದ ನೀವು ಅಂಗೀಕರಿಸಿಲ್ಲವಾದ್ದರಿಂದ ವೇದಾದಿ ಆಗಮಗಳು ಪ್ರಮಾಣ ಎನ್ನಲು ಬರುವುದಿಲ್ಲ. ಮತ್ತು ಶೂನ್ಯವೇ ಜಗತ್ಕಾರಣ ಎಂದು ತಿಳಿಸುವ ವೇದವಚನವೂ ಇಲ್ಲವಾದ್ದರಿಂದ ಎರಡನೇ ಪಕ್ಷವೂ ಸರಿಯಲ್ಲ.

ಆದ್ದರಿಂದ ಶೂನ್ಯವೇ ಜಗತ್ಕಾರಣ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ-ವಾದ್ದರಿಂದ, (ಅಪ್ರಾಮಾಣಿಕವಾದ್ದರಿಂದ) ಶೂನ್ಯಮತವು ಅಯುಕ್ತವಾಗಿದೆ. ಹೀಗಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಆಕ್ಷೇಪ

**ಸೂ.ರ.:– नन्वदृष्टमपि जगत्कारणत्वं शून्यस्याभ्युपगतं चेत् को दोषः । न चोक्तमदृष्टत्वादेवाप्रामाणिकत्वान्नाङ्गीकारार्हतेति । अदृष्टत्वेन दृष्टानुमानानुपपत्तावपि सामान्यतो दृष्टत्वोपपत्तेः । कारणस्य हि कार्यवद्वस्तुत्वेन सत्त्वे निषिद्धे कार्यत्वेन हेतुनाऽसत एव जन्म सेत्स्यतीत्याशङ्कां पराकुर्वत्सूत्रमुपन्यस्यति ।**

**ಅನು.:–** ಶೂನ್ಯಕ್ಕೆ ಜಗತ್ಕಾರಣತ್ವವು ಅದೃಷ್ಟವಾದರೂ ಸಹ ಅದನ್ನು ಅಂಗೀಕರಿಸಿದರೆ ಏನು ದೋಷ? ಜಗತ್ಕಾರಣತ್ವವು ಅದೃಷ್ಟವಾದ್ದರಿಂದ ಅಪ್ರಾಮಾಣಿಕವಾಗಿದೆ, ಹೀಗಾಗಿ ಅದು ಅಂಗೀಕಾರಾರ್ಹವಾಗಿಲ್ಲ ಎಂದು ಹೇಳಿದ್ದೇವೆಯಲ್ಲ? ಎಂದರೆ, ಅದು ಸರಿಯಲ್ಲ, ಏಕೆಂದರೆ – ಅಸತ್‌ಗೆ ಜಗತ್ಕಾರಣತ್ವವು ಅದೃಷ್ಟವಾದ್ದರಿಂದ ದೃಷ್ಟಾನುಮಾನ ಅನುಪಪನ್ನವಾದರೂ ಸಹ ಸಾಮಾನ್ಯತೋ ದೃಷ್ಟಾನುಮಾನವು ಉಪಪನ್ನವಾಗುತ್ತದೆ. ಹೇಗೆಂದರೆ (ಕಾರಣಂ, ಸತ್ ನ ಭವತಿ, ವಸ್ತುತ್ವಾತ್, ಕಾರ್ಯವತ್ ।) ಕಾರ್ಯವು ವಸ್ತುವಾದ್ದರಿಂದ ಹೇಗೆ ಸತ್ ಆಗಿಲ್ಲವೋ ಅದರಂತೆ ಕಾರಣವೂ ವಸ್ತುವಾದ್ದರಿಂದ ಅದಕ್ಕೆ ಸತ್ವವು ನಿಷಿದ್ಧವಾದ ಮೇಲೆ,

ಜಗತ್, ಸಕಾರಣಕಂ (ಅಸತ್ಕಾರಣಕಂ) ಕಾರ್ಯತ್ವಾತ್

ಎಂಬುದಾಗಿ ಕಾರ್ಯತ್ವ ಹೇತುವಿನಿಂದ ಅಸತ್‌ನಿಂದಲೇ ಜನ್ಮವು ಸಿದ್ಧವಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

### ॐ उदासीनानामपि चैवं सिद्धिः ॐ (२.२.२७)

ಏವಂ ಸತಿ = ಅಸತ್‌ಗೆ ಕಾರ್ಯೋತ್ಪಾದಕತ್ವವನ್ನು ಅಂಗೀಕರಿಸುವುದಾದರೆ ಉದಾಸೀನಾನಾಮಪಿ = ಹೇಯತ್ವಬುದ್ಧಿ-ಉಪಾದೇಯತ್ವಬುದ್ಧಿ ವಿಷಯವಾದ ಗಗನ-ಕುಸುಮಾದಿಗಳಿಗೂ ಸಹ ಸಿದ್ಧಿಃ = ಸೌರಭ್ಯಾದಿ ಕಾರ್ಯಸಿದ್ಧಿಯು ಆಗಲಿ.

ಅನ್ಯಥಾ = ಗಗನಕುಸುಮಾದಿಗಳಿಗೆ ಸೌರಭ್ಯಾದಿಸಿದ್ಧಿ ಆಗುವುದಿಲ್ಲ ಎನ್ನುವುದಾದರೆ ಶೂನ್ಯದಿಂದ ಕಾರ್ಯೋತ್ಪತ್ತಿಯೂ ಆಗದೇ ಹೋಗಲಿ ಎನ್ನುವುದು ಚ ಶಬ್ದದ ಅರ್ಥ.

## ಸಮಾಧಾನ

**ಸೂ.ರ.:– एवं चासतः कारणत्वे हेयोपादेयबुद्धिविषयतावर्जितानां खपुष्पादीनां सौरभ्यादिकार्यसिद्धिप्रसङ्गात् । व्यतिरेक्यनुमानस्य तत्रापि कर्तुं शक्यत्वात् । पराभिमतानुमानानां तर्कबाधितत्वात् । अतो युक्तं लक्षणसूत्रमिति सिद्धम् ।**

**ಅನು.:–** "ಯದಿ ಅಸತ್ ಕಾರಣಂ ಸ್ಯಾತ್ ತರ್ಹಿ ಹೇಯೋಪಾದೇಯ-ಬುದ್ಧಿವಿಷಯತ್ವ ವರ್ಜಿತಾನಾಂ ಖಪುಷ್ಪಾದೀನಾಂ ಸೌರಭ್ಯಾದಿಕಾರ್ಯಸಿದ್ಧಿಃ ಸ್ಯಾತ್"

ಈ ರೀತಿಯಾಗಿ ನೀವು ಅಸತ್‌ಗೆ ಕಾರಣತ್ವವನ್ನು ಅಂಗೀಕರಿಸುವುದಾದರೆ ಹೇಯತ್ವ-ಬುದ್ಧಿ – ಉಪಾದೇಯತ್ವ ಬುದ್ಧಿಗಳಲ್ಲಿ ವಿಷಯವಾಗದ ಗಗನಕುಸುಮಾದಿಗಳಿಗೂ ಸಹ ಸೌರಭ್ಯಾದಿಕಾರ್ಯಸಿದ್ಧಿ ಆಗಲಿ ಎಂದು ಅತಿಪ್ರಸಂಗ ಬರುತ್ತದೆ. ಗಗನಕುಸುಮಾದಿಗಳಿಗೂ ಸಹ ಅನುಮಾನದಿಂದ ಸೌರಭ್ಯಾದಿಗಳನ್ನು ಸಾಧಿಸಲು ಬರುವುದರಿಂದ ಅತಿಪ್ರಸಂಗ ಬರುತ್ತದೆ.

ಶೂನ್ಯವೇ ಜಗತ್ಕಾರಣವಾಗಿದೆ ಎಂಬ ವಿಷಯದಲ್ಲಿ ಹಿಂದೆ ಹೇಳಿದ (ಪರಕೀಯ) ಅನುಮಾನಗಳು ಪ್ರಮಾಣವಾಗಿವೆಯಲ್ಲ? ಎಂದರೆ, ಆ ಪರಕೀಯ ಅನುಮಾನಗಳು ನಮ್ಮ ತರ್ಕದಿಂದ ಬಾಧಿತವಾಗುವುದರಿಂದ ಪ್ರಮಾಣವಾಗುವುದಿಲ್ಲ.

ಆದ್ದರಿಂದ ಶೂನ್ಯಕ್ಕೆ ಜಗತ್ಕಾರಣತ್ವವು ಅಪ್ರಾಮಾಣಿಕವಾದ್ದರಿಂದ, ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಆಕ್ಷೇಪ

**ಸೂ.ರ.:– ननु भवेदेतद्दूषणम् । यदि शून्यतत्त्वात्परमार्थतो मृत्पिण्डाद्घट इव जगदुत्पद्येत । न चैवम् । किं नाम संवृतिशब्दिताज्ञान-विशेषादसतो रजताकारेणेव शून्यस्यापि जगदाकारेणावभासाख्य-विवर्तत्वाभ्युपगमादित्याशङ्कां पराकुर्वत्सूत्रमाह ।**

**ಅನು.:–** ನೀವು ಹೇಳಿದ ಈ ದೋಷ ಬರಬಹುದಿತ್ತು. ಒಂದುವೇಳೆ ಮೃತ್ಪಿಂಡದಿಂದ ಘಟವು ಹುಟ್ಟುವಂತೆ ಶೂನ್ಯತತ್ವದಿಂದ ಪಾರಮಾರ್ಥಿಕವಾಗಿ ಜಗತ್ತು ಹುಟ್ಟುತ್ತಿದ್ದರೆ ಆಗ

ನೀವು ಹೇಳಿದಂತೆ ದೋಷ ಬರುತ್ತಿತ್ತು. ಆದರೆ ಪ್ರಕೃತ ನಾವು ಹಾಗೆ ಹೇಳುವುದಿಲ್ಲ. ಕಿಂತು ಅಸತ್ ಆದ ಶುಕ್ತಿಯು ರಜತಾಕಾರೇಣ ತೋರುವಂತೆ, ಅಸತ್ ಆದ ಶೂನ್ಯವೇ ಜಗದಾಕಾರೇಣ ತೋರುತ್ತದೆ ಅರ್ಥಾತ್ ಶೂನ್ಯವು ವಿವರ್ತವಾಗಿದೆ (ಜಗದಾರೋಪಕ್ಕೆ ಅಧಿಷ್ಠಾನವಾಗಿದೆ) ಎಂಬುದಾಗಿ ಅಂಗೀಕರಿಸುತ್ತೇವೆ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ नाभाव उपलब्धेः ॐ (२.२.२८)**

ಜಗತ್ = ಜಗುತ್ತು ಅಭಾವಃ ನ = ಅಸತ್ ಆಗಿಲ್ಲ. ಕುತಃ = ಯಾಕೆ? ಉಪಲಬ್ಧೇಃ = ಸತ್ ಎಂದು ತೋರುವುದರಿಂದ (ಪ್ರತೀತವಾಗುವುದರಿಂದ).

## ಸಮಾಧಾನ

**ಸೂ.ರ.:– एवं च शून्यस्य जगदाकारेण वृत्त्यङ्गीकारे जगतो मिथ्यात्वप्रसङ्गात् । न चेष्टापत्तिः । सदिति प्रतीयमानत्वात् । शून्यस्य रजताकारेणावभासत्वे शुक्तेरेव रजतारोपाधिष्ठानत्वस्यानुभवसिद्धत्वेन शून्यस्य तदधिष्ठानत्वाभावात् । अतो लक्षणसूत्रं युक्तमिति सिद्धम् ।**

**ಅನು.:–** ಶೂನ್ಯವೇ ಜಗದಾಕಾರೇಣ ತೋರುತ್ತದೆ ಎಂದು ಹೇಳುವುದಾದರೆ, (ಶೂನ್ಯವು ಜಗದಾರೋಪಕ್ಕೆ ಅಧಿಷ್ಠಾನವಾಗಿದೆ, ಜಗತ್ತು ಶೂನ್ಯದಲ್ಲಿ ಆರೋಪಿತವಾಗಿದೆ ಎಂದು ಹೇಳುವುದಾದರೆ) ಜಗತ್ತು ಮಿಥ್ಯಾ ಆಗಬೇಕಾಗುತ್ತದೆ.

ಮಿಥ್ಯಾ ಆಗಲಿ ಎಂದು ಇಷ್ಟಾಪತ್ತಿಯನ್ನು ಹೇಳಲು ಬರುವುದಿಲ್ಲ. ಸನ್ ಘಟಃ ಸನ್ ಪಟಃ ಎಂಬುದಾಗಿ ಜಗತ್ತು ಸತ್ಯವಾಗಿ ಪ್ರತೀತವಾಗುವುದರಿಂದ ಜಗತ್ತನ್ನು ಮಿಥ್ಯಾ ಎಂದು ಅಂಗೀಕರಿಸಲು ಬರುವುದಿಲ್ಲ.

ಶೂನ್ಯವೇ ರಜತಾಕಾರೇಣ ತೋರುತ್ತದೆ ಎನ್ನುವುದಾದರೆ ಶೂನ್ಯಕ್ಕೇನೇ ರಜತಾ-ರೋಪಾಧಿಷ್ಠಾನತ್ವವನ್ನು ಹೇಳಿದಂತಾಗುತ್ತದೆ. ಆದರೆ ಶುಕ್ತಿಗೇ ರಜತಾರೋಪಾಧಿಷ್ಠಾನತ್ವವು ಅನುಭವಸಿದ್ಧವಾಗಿರುವುದರಿಂದ ಶೂನ್ಯಕ್ಕೆ ರಜತಾರೋಪಾಧಿಷ್ಠಾನತ್ವವನ್ನು ಹೇಳುವುದು ಸಮಂಜಸವಾಗುವುದಿಲ್ಲ.

ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಆಕ್ಷೇಪ

**ಸೂ.ರ.:– ननु सदिति दृश्यमानस्यापि स्वाप्नजाग्रत्वादे रज्जु-भुजङ्गादेरसत्त्वात्तद्वज्जगतोऽसत्त्वं किं न स्यादित्याशंकां परिहरत्सूत्र-मुपन्यस्यति ।**

**ಅನು.:–** ಜಗತ್ತು ಸತ್ ಎಂಬುದಾಗಿ ದೃಶ್ಯಮಾನವಾದರೂ ಸಹ ಸ್ವಾಪ್ನ (ಸ್ವಪ್ನದಲ್ಲಿ ತೋರುವ) ವಸ್ತುಗಳಿಗೆ ತಿಳಿಯುವ ಜಾಗ್ರತ್ವವು ಅಸತ್ ಆದಂತೆ, ರಜ್ಜುವಿನಲ್ಲಿ ಆರೋಪಿತ-ವಾದ ಭುಜಂಗವು ಅಸತ್ ಆದಂತೆ ಅಸತ್ ಆಗಬಾರದೇಕೆ? ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ.

### ॐ वैधर्म्याच्च न स्वप्नादिवत् ॐ (२.२.२९)

ಜಗತ್ = ಜಗತ್ತು ಸ್ವಪ್ನಾದಿವತ್ = ಸ್ವಾಪ್ನವಸ್ತುಗಳಲ್ಲಿ ಆರೋಪಿತವಾದ ಜಾಗ್ರತ್ವ-ದಂತೆ, ರಜ್ಜುವಿನಲ್ಲಿ ಆರೋಪಿತವಾದ ಸರ್ಪದಂತೆ ಅಸತ್ ನ = ಅಸತ್ ಅಲ್ಲ. ಕುತಃ = ಏಕೆ ? ವೈಧರ್ಮ್ಯಾತ್ ಚ = ಸ್ವಾಪ್ನಜಾಗ್ರತ್ವವು ಬಾಧ್ಯತ್ವ ರೂಪವಾದ ವಿಲಕ್ಷಣಧರ್ಮ ಉಳ್ಳದ್ದಾದ್ದರಿಂದ, ಜಗತ್ತಿನಲ್ಲಾದರೂ ಆ ವಿಧವಾದ ಬಾಧ್ಯತ್ವಧರ್ಮವು ಇಲ್ಲವಾದ್ದರಿಂದ.

## ಸಮಾಧಾನ

**ಸೂ.ರ.:– एवं च स्वप्न एवायं न जाग्रद्रज्जुरियं न सर्प इति बाधकप्रत्ययविषयत्ववत्प्रकृते बाधकप्रत्ययविषयत्वाभावेन वैषम्यात् । एतेन परोदीरितप्रतिपक्षानुमानस्य बाधकप्रमाणविषयत्वरूपोपाधेस्तदभावरूप-प्रतिपक्षस्य चोक्तत्वात् । तदेवं शून्यमतस्याप्ययुक्तत्वाद्युक्तमीश्वरस्य जगत्कारणत्वलक्षणमिति सिद्धम् ॥**

**ಅನು.:–** 'ಸ್ವಪ್ನ ಏವಾಯಂ ನ ಜಾಗ್ರತ್' ಎಂಬುದಾಗಿ ಸ್ವಾಪ್ನಜಾಗ್ರತ್ವವು ಬಾಧಕ-ಜ್ಞಾನವಿಷಯವಾಗುವಂತೆ, ಇಯಂ ರಜ್ಜುಃ ನ ಸರ್ಪಃ ಎಂಬುದಾಗಿ ರಜ್ವಾರೋಪಿತಸರ್ಪವು ಬಾಧಕಜ್ಞಾನವಿಷಯವಾಗುವಂತೆ ಜಗತ್ತು ಬಾಧಕಜ್ಞಾನವಿಷಯವಾಗುವುದಿಲ್ಲವಾದ್ದರಿಂದ ಸ್ವಾಪ್ನಜಾಗ್ರತ್ವ-ರಜ್ಜುಸರ್ಪಗಳಿಗೂ ಜಗತ್ತಿಗೂ ವೈಷಮ್ಯ ಇರುವುದರಿಂದ ಜಗತ್ತು ಅವುಗಳಂತೆ ಅಸತ್ ಅಲ್ಲ.

ಜಗತ್ತು ಅಸತ್ ಆಗಿದೆ ಎಂಬ ವಿಷಯದಲ್ಲಿ ಪ್ರತಿಪಕ್ಷಾನುಮಾನವನ್ನು ಹೇಳಿದ್ದೇವೆ-ಯಲ್ಲ? ಎಂದರೆ, ಆ ಅನುಮಾನಕ್ಕೆ ಬಾಧಕಪ್ರಮಾಣವಿಷಯತ್ವ ಎಂಬ ಉಪಾಧಿಯನ್ನು ಹೇಳಿದಂತಾಯಿತು. ಮತ್ತು ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧಿಸುವ ಪ್ರತಿಪಕ್ಷಾನುಮಾನವನ್ನೂ ಹೇಳಿದಂತಾಯಿತು.

ಹೀಗೆ ಶೂನ್ಯಮತವು ಅಯುಕ್ತವಾದ್ದರಿಂದ (ಶೂನ್ಯಮತದ ವಿರೋಧ ಬಾರದ ಕಾರಣ) ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

**ಅಸದಧಿಕರಣವು ಮುಗಿಯಿತು.**

*ಅಧಿಕರಣ – 9*

# ಅನುಪಲಬ್ಧ್ಯಧಿಕರಣ

## ಸಂಗತಿ

**ಸೂ.ರ.:– अत्र विज्ञानवादो निराक्रियते ।**

**ಅನು.:–** ವಿಜ್ಞಾನವಾದವನ್ನು ನಿರಾಕರಿಸುತ್ತಾರೆ ಒಂಭತ್ತನೇ ಈ ಅನುಪಲಬ್ಧ್ಯಧಿ-ಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न विष्णोर्जगत्कारणत्वं युक्तम् । विज्ञानवादिमत-विरुद्धत्वात् । नित्यनिरञ्जनं विज्ञानतत्त्वमेव खलु विद्यमानम् । तन्मात्रमेतदशेषं जगत् । न ततोऽतिरिक्तं किञ्चिदस्ति । अतो जगदुत्पत्ता-वीश्वरेण कृत्याभावादयुक्तं लक्षणसूत्रमिति प्राप्ते सूत्रमाह ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ – ಅದು ವಿಜ್ಞಾನವಾದಿಮತಕ್ಕೆ ವಿರುದ್ಧವಾಗುತ್ತದೆ. ಹೇಗೆಂದರೆ – ನಿತ್ಯವಾದ ನಿರಂಜನವಾದ

ವಿಜ್ಞಾನತತ್ವ ಒಂದೇ ಪಾರಮಾರ್ಥಿಕವಾಗಿ ಇರುವಂತಹದ್ದಾಗಿದೆ. ಈ ಎಲ್ಲ ಜಗತ್ತು ತನ್ಮಾತ್ರ-ವಾಗಿದೆ. (ಜ್ಞಾನಾತ್ಮಕವಾಗಿದೆ) ಹೊರತು ವಿಜ್ಞಾನದಿಂದ ಅತಿರಿಕ್ತವಾದ ಪಾರಮಾರ್ಥಿಕ-ವಾದ ಯಾವ ವಸ್ತುವೂ ಇಲ್ಲ. ಅಂದಮೇಲೆ ಜಗತ್ತಿನ ಉತ್ಪತ್ತಿವಿಷಯದಲ್ಲಿ ಈಶ್ವರನಿಂದ ಯಾವ ಕೃತ್ಯವೂ ಇಲ್ಲದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಅಯುಕ್ತವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ–

**ॐ न भावोऽनुपलब्धेः ॐ (२.२.३०)**

ಜಗತ್ = ಜಗತ್ತು ಭಾವಃ ನ=ಜ್ಞಾನಾತ್ಮಕವಾಗಿದೆ ಎನ್ನುವುದೂ ಸರಿಯಲ್ಲ. ಕುತಃ = ಏಕೆ? ಅನುಪಲಬ್ಧೇಃ = ಜ್ಞಾನ-ಜ್ಞೇಯಗಳಲ್ಲಿ ಅಭೇದವು ಅನುಭವವಿಷಯವಾಗ-ದಿರುವುದರಿಂದ.

## ಸಿದ್ಧಾಂತ

**ಸೂ.ರ.:–** एवं च युक्तमेव हरेर्जगत्कारणत्वम् । विज्ञानवादि-समयस्यायुक्तत्वेनाविरोधकत्वात् । विज्ञानातिरिक्तं जगन्नास्तीत्यत्र विज्ञानतत्त्वे जगदध्यस्तं चेत् । सदिति प्रतीयमानत्वेनारोपितत्वायोगात् । विज्ञानतत्त्वजगतोरभेद इति चेत् । जगतो ज्ञानात्मकत्वे प्रमाणाभावात् । न च सहोपलम्भनियमादभेदो नीलतद्धियोरिति वाच्यम् । भेदप्रतीतिविरोधात् । न च सा भ्रान्तिः । बाधकाभावात् । नीलादीनां स्वप्रतीत्यभेदवद्भेदस्यापि स्वप्रतीत्यभेदेन यथार्थत्वात् । तत्प्रतीतेर्भ्रमत्वायोगाच्च । साहित्यस्य भेदव्याप्तत्वेन सहोपलंभादभेद इति प्रतिज्ञाहेत्वोर्विरोधाच्च ।

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ವಿಜ್ಞಾನವಾದಿಗಳ ಸಿದ್ಧಾಂತವು ಅಯುಕ್ತವಾಗಿದ್ದರಿಂದ, ಅದು ವಿರೋಧಕವಾಗಿಲ್ಲ-ವಾದ್ದರಿಂದ ವಿಷ್ಣುವಿನ ಜಗತ್ಕಾರಣತ್ವವು ಉಪಪನ್ನವೇ.

ವಿಜ್ಞಾನವಾದಿಗಳ ಸಿದ್ಧಾಂತವು ಏಕೆ ಅಯುಕ್ತ? ಎಂದರೆ, ಅಲ್ಲಿ ಹೀಗೆ ವಿಕಲ್ಪಿಸುತ್ತೇವೆ– ವಿಜ್ಞಾನಾತಿರಿಕ್ತವಾದ ಜಗತ್ತು ಇಲ್ಲ ಎಂಬ ಮಾತಿಗೆ ಅಭಿಪ್ರಾಯವೇನು? ವಿಜ್ಞಾನತತ್ವದಲ್ಲಿ

ಜಗತ್ತು ಆರೋಪಿತವಾಗಿದೆ ಎಂದು ಅಭಿಪ್ರಾಯವೋ? ಅಥವಾ ಪಾರಮಾರ್ಥಿಕವಾಗಿ ವಿಜ್ಞಾನ-ಜಗತ್ತುಗಳಲ್ಲಿ ಅಭೇದ ಇದೆ ಎಂದು ಅಭಿಪ್ರಾಯವೋ?

ವಿಜ್ಞಾನತತ್ತ್ವದಲ್ಲಿ ಜಗತ್ತು ಆರೋಪಿತ ಎನ್ನುವುದು ಸರಿಯಲ್ಲ. ಹಾಗೆ ಜಗತ್ತು ಆರೋಪಿತವಾಗುವುದಾದರೆ ಮಿಥ್ಯಾ-ಅಸತ್ ಎಂದಾಗುವುದು. ಆದರೆ ಸನ್ ಘಟಃ ಸನ್ ಪಟಃ ಇತ್ಯಾದಿಯಾಗಿ ಸತ್ ಎಂದು ತೋರುತ್ತಿರುವುದರಿಂದ ಜಗತ್ತನ್ನು ಮಿಥ್ಯಾ-ಅಸತ್ ಎನ್ನಲು ಬರುವುದಿಲ್ಲ. ಅರ್ಥಾತ್ ಜಗತ್ತು ಆರೋಪಿತವಲ್ಲ.

ಇನ್ನು ವಿಜ್ಞಾನ-ಜಗತ್ತುಗಳಲ್ಲಿ ಅಭೇದ ಹೇಳಲೂ ಬರುವುದಿಲ್ಲ. ಕಾರಣ ಹಾಗೆ ಅಭೇದ ಹೇಳಿದರೆ ಜಗತ್ತು ಜ್ಞಾನಾತ್ಮಕ ಎಂದು ಹೇಳಿದಂತಾಗುತ್ತದೆ. ಆದರೆ ಜಗತ್ತು ಜ್ಞಾನಾತ್ಮಕವಾಗಿದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ ಅವುಗಳಲ್ಲಿ ಅಭೇದ ಹೇಳಲು ಬರುವುದಿಲ್ಲ.

ಜಗತ್ತು ಜ್ಞಾನಾತ್ಮಕವಾಗಿದೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲ ಏಕೆ? ನೀಲಾದಯಃ ಜ್ಞಾನಾತ್ಮಕಾಃ ಸಹೋಪಲಂಭಾತ್ (ಅಥವಾ, ನೀಲತದ್ಧಿಯೌ ಅಭಿನ್ನೇ ಸಹೋಪಲಂಭಾತ್) ''ನೀಲಘಟ ಹಾಗೂ ಅದರ ಜ್ಞಾನ ಎರಡೂ ಒಟ್ಟಿಗೆ ತೋರುವುದರಿಂದ ಅವುಗಳು ಅಭಿನ್ನ' ಎಂಬ ಅನುಮಾನವೇ ಪ್ರಮಾಣವಾಗುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ನೀಲಘಟವೇ ಬೇರೆ, ಅದರ ಜ್ಞಾನವೇ ಬೇರೆ ಎಂಬುದಾಗಿ ಸ್ಪಷ್ಟವಾಗಿ ಭೇದಪ್ರತೀತಿ ಬರುತ್ತಿರುವುದರಿಂದ ಅನುಮಾನಕ್ಕೆ ಭೇದಪ್ರತೀತಿಯ ವಿರೋಧ ಬರುತ್ತದೆ.

ಆ ಭೇದಪ್ರಕೀತಿಯು ಭ್ರಾಂತಿ ಎನ್ನಲು ಬರುವುದಿಲ್ಲ. ಬಾಧಕಜ್ಞಾನ ಬರುತ್ತಿದ್ದರೆ ಆಗ ಅದನ್ನು ಭ್ರಾಂತಿ ಎನ್ನಬಹುದಿತ್ತು. ಆದರೆ ಭೇದಪ್ರತೀತಿಗೆ ಯಾವ ಬಾಧಕಜ್ಞಾನವೂ ಬರುವುದಿಲ್ಲವಾದ್ದರಿಂದ ಭೇದಪ್ರತೀತಿಯನ್ನು ಭ್ರಾಂತಿ ಎನ್ನಲು ಬರುವುದಿಲ್ಲ.

ಮತ್ತು ಸಾಹಿತ್ಯವು ಭೇದದಿಂದ ವ್ಯಾಪ್ತವಾಗಿರುವುದರಿಂದ ಸಹೋಪಲಂಭ ಇರುವುದರಿಂದ ಭೇದವೇ ಪುಸ್ತಕವಾಗುವುದರಿಂದ ಸಹೋಪಲಂಭಾತ್ ಅಭೇದಃ ಎಂಬ ಪ್ರತಿಜ್ಞಾ-ಹೇತುಗಳಲ್ಲಿ ವಿರೋಧವೂ ಬರುತ್ತದೆ.

**ಸೂ.ರ.:– ननु यत्प्रकाशते तद्विज्ञानं यथा ज्ञानम् । प्रकाशंते च नीलादय इत्यनुमानेन नीलादीनां ज्ञानत्वसिद्धेरिति चेत् । प्रकाशत इत्यनेन ज्ञानविषयत्वाङ्गीकारे मायावादिना स्ववृत्तिविरोधेन विज्ञाने साधन-वैकल्याभिधाने निरुत्तरत्वप्रसङ्गात् । अज्ञाने व्यभिचाराच्च । प्रकाश-**

त्वाङ्गीकारेऽसिद्धेः । अतो बौद्धमतस्याप्रामाणिकत्वेनाविरोधाद्युक्तं विष्णोर्जगत्कारणत्वमिति सिद्धम् ॥

**ಅನು.:–** ಜಗತ್ತು ಜ್ಞಾನಾತ್ಮಕವಾಗಿದೆ ಎಂಬ ವಿಷಯದಲ್ಲಿ ಪೂರ್ವೋಕ್ತ ಅನುಮಾನವು ಪ್ರಮಾಣವಾಗದಿದ್ದರೂ ಸಹ "ಜಗತ್ ವಿಜ್ಞಾನಾತ್ಮಕಂ ಪ್ರಕಾಶತ್ವಾತ್ ಜ್ಞಾನವತ್" (ಜಗತ್ತು ತೋರುವುದರಿಂದ ವಿಜ್ಞಾನಾತ್ಮಕವಾಗಿದೆ) "ಯತ್ ಪ್ರಕಾಶತೇ ತತ್ ವಿಜ್ಞಾನಂ ಯಥಾ ಜ್ಞಾನಂ" ಯಾವುದು ತೋರುತ್ತದೆಯೋ ಅದು ಜ್ಞಾನರೂಪವಾಗಿರುತ್ತದೆ ಜ್ಞಾನದಂತೆ. ಪ್ರಕೃತ ನೀಲಘಟಾದಿಗಳೂ ತೋರುವುದರಿಂದ ಅವು ಜ್ಞಾನಾತ್ಮಕವಾಗಿವೆ.

ಈ ಅನುಮಾನದಿಂದ ಜಗತ್ತಿಗೆ ವಿಜ್ಞಾನಾತ್ಮಕತ್ವವು ಸಿದ್ಧವಾಗುತ್ತದೆ ಎಂದರೆ, 'ಪ್ರಕಾಶತೇ' ಎಂಬ ಮಾತಿಗೆ ಜ್ಞಾನವಿಷಯ ಎಂದು ಅಭಿಪ್ರಾಯವಾದರೆ, ಮಾಯಾವಾದಿಗಳು ಸ್ವವೃತ್ತಿವಿರೋಧ ಬರುವ ಕಾರಣ ಜ್ಞಾನದಲ್ಲಿ ಜ್ಞಾನವಿಷಯತ್ವವನ್ನು ಒಪ್ಪಿಲ್ಲವಾದ್ದರಿಂದ ದೃಷ್ಟಾಂತವಾದ ಜ್ಞಾನದಲ್ಲಿ ಪ್ರಕಾಶತ್ವ (ಜ್ಞಾನವಿಷಯತ್ವ) ಎಂಬ ಹೇತು ಬಾರದ ಕಾರಣ ಸಾಧನವೈಕಲ್ಯ ಬರುತ್ತದೆ. ಮತ್ತು ಅಜ್ಞಾನದಲ್ಲಿ ಜ್ಞಾನಾತ್ಮಕತ್ವ ಎಂಬ ಸಾಧ್ಯವಿಲ್ಲ, ಜ್ಞಾನವಿಷಯತ್ವ ಎಂಬ ಹೇತು ಬರುವುದರಿಂದ ಅಜ್ಞಾನದಲ್ಲಿ ವ್ಯಭಿಚಾರವೂ ಬರುತ್ತದೆ.

ಇನ್ನು ಪ್ರಕಾಶತೇ ಎಂಬ ಮಾತಿಗೆ ಪ್ರಕಾಶತ್ವ ಎಂದೇ ಅಭಿಪ್ರಾಯವಾದರೆ, ಜಗತ್ತಿನಲ್ಲಿ (ಪಕ್ಷದಲ್ಲಿ) ಪ್ರಕಾಶತ್ವ ಹೇತುವು ಬಾರದ ಕಾರಣ ಅಸಿದ್ಧಿದೋಷ ಬರುತ್ತದೆ.

ಆದ್ದರಿಂದ ಬೌದ್ಧಮತವು ಅಪ್ರಾಮಾಣಿಕವಾದ್ದರಿಂದ ಅದರ ವಿರೋಧ ಬಾರದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 31

**ಸೂ.ರ.:–** युक्त्यन्तरेणापि जगतो विज्ञानात्मकत्वं पराकुर्वत्सूत्रमुपन्यस्यति ।

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಜಗತ್ತಿಗೆ ವಿಜ್ಞಾನಾತ್ಮಕತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ क्षणिकत्वाच्च ॐ (२.२.३१)**

ಕ್ಷಣಿಕತ್ವಾಚ್ಚ = ಜ್ಞಾನವು ಏಕಕ್ಷಣಾವಸ್ಥಾಯಿಯಾಗಿದೆ, ಜಗತ್ತಾದರೂ ಸ್ಥಾಯಿ-ಯಾಗಿದೆ. ಆ ಸ್ಥಾಯಿತ್ವದ ವಿರೋಧ ಬರುವುದರಿಂದ ಜ್ಞಾನ-ಜಗತ್ತುಗಳಲ್ಲಿ ಐಕ್ಯವನ್ನು ಹೇಳಲು ಬರುವುದಿಲ್ಲ.

**ಸೂ.ರ.:- एवं च ज्ञानस्य क्षणिकत्वाज्जगतश्च स्थायित्वेन तयोरैक्यायोगात् । क्षणिकत्वस्य विनाश्यत्वस्वाभाव्यात् । अतो जगत्कारणत्वलक्षणं युक्तमिति सिद्धम् ।**

ಜ್ಞಾನವು ಕ್ಷಣಿಕವಾದ ವಸ್ತುವಾಗಿದೆ. ಜಗತ್ತು ಸ್ಥಾಯಿಯಾಗಿದೆ. ಅಂತಹ ವಿರುದ್ಧ ಸ್ವಭಾವವುಳ್ಳ (ಕ್ಷಣಿಕ-ಸ್ಥಾಯಿಗಳಾದ) ಜ್ಞಾನ-ಜಗತ್ತುಗಳಲ್ಲಿ ಐಕ್ಯವನ್ನು ಹೇಳಲು ಬರುವುದಿಲ್ಲ. ಆದ್ದರಿಂದಲೂ ಜಗತ್ತು ಜ್ಞಾನಾತ್ಮಕವಾಗದ ಕಾರಣ ವಿಷ್ಣುವಿಗೆ ಹೇಳಿದ ಜಗತ್ಕಾರಣತ್ವ ಲಕ್ಷಣವು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 32

**ಸೂ.ರ.:- एवं प्रत्येकं दूषितानि वैभाषिकादिबौद्धमतानि पुनः सामान्यदूषणेन पराकुर्वत्सूत्रमुपन्यस्यति ।**

**ಅನು.:-** ಈ ರೀತಿಯಾಗಿ ಪ್ರತ್ಯೇಕವಾಗಿ ದೂಷಿಸಲ್ಪಟ್ಟ ವೈಭಾಷಿಕಾದಿ ಬೌದ್ಧಮತಗಳನ್ನು ಮತ್ತೆ ಸಾಮಾನ್ಯದೋಷದಿಂದಲೂ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ सर्वथाऽनुपपत्तेश्च ॐ (२.२.३२)**

ಸರ್ವಥಾಽನುಪಪತ್ತೇಶ್ಚ = ಸರ್ವಪ್ರಕಾರದಿಂದಲೂ ಅನುಪಪತ್ತಿ ಇರುವುದರಿಂದ, ಬೌದ್ಧಸಿದ್ಧಾಂತವು ಯುಕ್ತಿಶೂನ್ಯವಾದ್ದರಿಂದ ಹಾಗೂ ಯುಕ್ತಿವಿರುದ್ಧವೂ ಆದ್ದರಿಂದ ಅದು ಗ್ರಾಹ್ಯವಾದದ್ದಲ್ಲ.

**ಸೂ.ರ.:- एवं च प्रत्यक्षक्षणिकत्वकल्पने प्रतिक्षणमुत्पन्नविनाशकल्पने शून्याद्वैतकल्पने विज्ञानाद्वैतकल्पने प्रकटने प्रच्छादने वा नर्ते (ऋ. १०-११३-९) । यच्च किञ्चित् (महाना. ११) ब्रह्मण्येवेदमाविरासीत् इत्यादि-श्रुतीनां, स एव भूयः इत्यादिस्मृतीनां, सूत्रोक्तयुक्त्यादीनां च विरोधित्वेन**

सर्वेषां वेदविद्वेषिणां पक्षाणामनुपपन्नत्वेन युक्तं विष्णोर्जगत्कारणत्वमिति सिद्धम् ।

**ಅನು.:–** ಪ್ರತ್ಯಕ್ಷಸಿದ್ಧವಾದ ಎಲ್ಲವೂ ಕ್ಷಣಿಕ ಎಂದು ಕಲ್ಪಿಸುವುದಾದರೆ, ಪ್ರತಿಕ್ಷಣದಲ್ಲಿ ಉತ್ಪನ್ನ-ವಿನಾಶಗಳನ್ನು ಕಲ್ಪಿಸುವುದಾದರೆ, ಶೂನ್ಯದಿಂದ ಅತಿರಿಕ್ತವಾದ ಜಗತ್ತು ಇಲ್ಲ ಎಂದು ಕಲ್ಪಿಸುವುದಾದರೆ, ಎಲ್ಲ ಜಗತ್ತೂ ವಿಜ್ಞಾನಾತ್ಮಕವಾಗಿದೆ ಎಂದು ಕಲ್ಪಿಸುವುದಾದರೆ, ''ನರ್ತೇ ತ್ವತ್ಕ್ರಿಯತೇ'' (ಋ. 10-113-9), ''ಯಚ್ಚ ಕಿಂಚಿಜ್ಜಗತ್ಸರ್ವಂ'' (ಮಹಾನಾ - 11), ''ಬ್ರಹ್ಮಣ್ಯೇವೇದಮಾವಿರಾಸೀತ್'' ಇತ್ಯಾದಿ ಶ್ರುತಿಗಳ ವಿರೋಧ ಬರುವುದರಿಂದ, ''ಸ ಏವ ಭೂಯಃ'' ಇತ್ಯಾದಿ ಸ್ಮೃತಿಗಳ ವಿರೋಧ ಬರುವುದರಿಂದ ಮತ್ತು ಸೂತ್ರೋಕ್ತ ಯುಕ್ತ್ಯಾದಿಗಳ ವಿರೋಧವೂ ಬರುವುದರಿಂದ ಎಲ್ಲ ವೇದವಿದ್ವೇಷಿಗಳ ಪಕ್ಷಗಳೂ ಅನುಪಪನ್ನವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

**ಅನುಪಲಬ್ಧ್ಯಧಿಕರಣವು ಮುಗಿಯಿತು.**

*ಅಧಿಕರಣ – 10*

# ನೈಕಸ್ಮಿನ್ನಧಿಕರಣ

## ಸಂಗತಿ

**ಸೂ.ರ.:–** अत्र स्याद्वादिमतं दूष्यते ।

**ಅನು.:–** ಜೈನಮತವನ್ನು ನಿರಾಕರಿಸುತ್ತಾರೆ ಹತ್ತನೇ ಈ ನೈಕಸ್ಮಿನ್ನಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** ननु न विष्णोर्जगत्कारणत्वं युक्तम् । जैनमतविरुद्ध-त्वात् । जैनास्तु सप्तभङ्गि जगद्वदन्ति । तथाहि । सदित्येकप्रकारः । असदित्यपरः । सदसदात्मकमिति तृतीयः । सदसद्विलक्षणमिति चतुर्थः । सत्त्वे सति सद्विलक्षणमिति पञ्चमः । असत्त्वे सत्यसद्विलक्षणमिति

**षष्ठः । सदसदात्मकं सदसद्विलक्षणमिति सप्तमश्चेति । ततश्च जगतः कायपरिमाणाज्जीवात्मनो दृष्टादृष्टसाधनैश्चोत्पत्तिसंभवात्किमीश्वरेण कृत्यमित्ययुक्तं लक्षणसूत्रमिति प्राप्ते पराकुर्वत्सूत्रमाह ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ, ಕಾರಣ ಅದು ಜೈನಮತಕ್ಕೆ ವಿರುದ್ಧವಾಗುತ್ತದೆ. ಹೇಗೆಂದರೆ – ಜೈನರು ಜಗತ್ತನ್ನು ಸಪ್ತಭಂಗಿಯಾಗಿದೆ ಎಂದು ಹೇಳುತ್ತಾರೆ. ಅದು ಇಂತಿದೆ – ಸತ್ ಎನ್ನುವುದು ಒಂದನೇ ಪ್ರಕಾರ, ಅಸತ್ ಎನ್ನುವುದು ಎರಡನೇ ಪ್ರಕಾರ, ಸದಸತ್ ಎನ್ನುವುದು ಮೂರನೇ ಪ್ರಕಾರ, ಸದಸದ್ವಿಲಕ್ಷಣ ಎನ್ನುವುದು ನಾಲ್ಕನೇ ಪ್ರಕಾರ, ಸತ್ತ್ವೇ ಸತಿ ಸದ್ವಿಲಕ್ಷಣ ಎನ್ನುವುದು ಐದನೇ ಪ್ರಕಾರ, ಅಸತ್ತ್ವೇ ಸತಿ ಅಸದ್ವಿಲಕ್ಷಣ ಎನ್ನುವುದು ಆರನೇ ಪ್ರಕಾರ, ಸದಸದಾತ್ಮಕವೂ ಆಗಿದೆ ಸದಸದ್ವಿಲಕ್ಷಣವೂ ಆಗಿದೆ ಎನ್ನುವುದು ಏಳನೇ ಪ್ರಕಾರವಾಗಿದೆ. ಆದ್ದರಿಂದ ಜಗತ್ತು ಕಾಯಪರಿಮಾಣ ಉಳ್ಳ ಜೀವಾತ್ಮನ ದೃಷ್ಟಾದೃಷ್ಟಸಾಧನಗಳಿಂದ ಉತ್ಪತ್ತಿಯಾಗುವುದರಿಂದ ಈಶ್ವರನಿಂದ ಏನು ಪ್ರಯೋಜನ? ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂದು ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರ ಹೇಳುತ್ತಾರೆ –

## ॐ नैकस्मिन्नसम्भवात् ॐ (२.२.३३)

ಜೈನೋಕ್ತಪ್ರಕಾರಾಃ = ಜೈನರು ಹೇಳುವ ಸಪ್ತಪ್ರಕಾರಗಳು ಏಕಸ್ಮಿನ್ ವಸ್ತುನಿ ನ ಯುಕ್ತಾಃ = ಒಂದೇ ವಸ್ತುವಿನಲ್ಲಿ ಕೂಡುವುದಿಲ್ಲ, ಕುತಃ = ಯಾಕೆ? ಅಸಂಭವಾತ್ = ಸಪ್ತಪ್ರಕಾರಗಳು ಅಸಂಭಾವಿತವಾದ್ದರಿಂದ ಒಂದೇ ವಸ್ತುವಿನಲ್ಲಿ ಅವು ಅಸಂಭಾವಿತವಾದ್ದರಿಂದ.

ಸಪ್ತಪ್ರಕಾರಗಳು ಇಂತಿವೆ – ಸತ್ತ್ವ, ಅಸತ್ತ್ವ, ಸದಸತ್ತ್ವ, ಸದಸದ್ವಿಲಕ್ಷಣತ್ವ,

ಸತ್ತ್ವೇ ಸತಿ ಸದ್ವಿಲಕ್ಷಣತ್ವ, ಅಸತ್ತ್ವೇ ಸತಿ ಅಸದ್ವಿಲಕ್ಷಣತ್ವ, ಸದಸತ್ತ್ವೇ ಸತಿ ಸದಸದ್ವಿಲಕ್ಷಣತ್ವ.

## ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । जैनमतस्याप्रामाणिकत्वात् । सप्तभङ्गि जगदिति यदुक्तम् । तन्न । सदसद्व्यातिरिक्तप्रकारस्याप्रामाणिकत्वात् । एकस्मिन्नसम्भवाच्च । न चैकैकाङ्गीकारे दोषस्य**

विद्यमानत्वादङ्गीक्रियत इति युक्तम् । तथात्वे दोषभयेन सर्वमपि त्याज्यं स्यात् । सदसद्भ्यामन्यभङ्गिन एवाप्रामाणिकत्वेनैकस्मिन्सप्तभङ्गित्वस्य सुतरामप्रामाणिकत्वात् । ततश्च जैनमतस्यानुपपन्नत्वेनाविरोधाद्युक्तं लक्षणसूत्रमिति सिद्धम् ।

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವ ಹೇಳಿದ್ದು ಯುಕ್ತವೇ ಆಗಿದೆ. ಕಾರಣ ಜೈನಮತವು ಅಪ್ರಾಮಾಣಿಕವಾಗಿದೆ. ಹೇಗೆಂದರೆ - ಜಗತ್ತು ಸಪ್ತಭಂಗಿಯಾಗಿದೆ ಎಂದು ಹೇಳಿದ್ದು ಸರಿಯಲ್ಲ, ಜಗತ್ತಿನಲ್ಲಿ ಸತ್ ಹಾಗೂ ಅಸತ್ ಎಂದು ಎರಡೇ ಪ್ರಕಾರಗಳು ಪ್ರಾಮಾಣಿಕ-ವಾಗಿವೆ. ಹೊರತು ಸತ್-ಅಸತ್ ಎಂಬ ಎರಡು ಪ್ರಕಾರಗಳಿಂದ ಭಿನ್ನವಾದ ಪ್ರಕಾರವು ಪ್ರಾಮಾಣಿಕವಾಗಿಲ್ಲ (ಅಪ್ರಾಮಾಣಿಕವಾಗಿದೆ). ಮತ್ತು ಸತ್-ಅಸತ್ ಪ್ರಕಾರಗಳಿಂದ ಭಿನ್ನವಾದ ಪ್ರಕಾರಗಳು ಒಂದೇ ವಸ್ತುವಿನಲ್ಲಿ ಸಂಭಾವಿತವೂ ಅಲ್ಲ.

ಹಾಗೇಕೆ ಹೇಳುತ್ತೀರಿ? ಒಂದೊಂದು ಆಕಾರವನ್ನು ಅಂಗೀಕರಿಸಿದರೂ ದೋಷ ಬರುವುದರಿಂದ ಸಪ್ತಪ್ರಕಾರಗಳನ್ನು ಅಂಗೀಕರಿಸುತ್ತೇವೆ ಎಂದರೆ, ಹಾಗಾಗುವುದಾದರೆ ದೋಷ ಬರುವ ಭಯದಿಂದ ಎಲ್ಲ ಪ್ರಕಾರಗಳನ್ನೂ ಪರಿತ್ಯಜಿಸಬೇಕಾಗುತ್ತದೆ.

ಆದ್ದರಿಂದ ಸತ್-ಅಸತ್ ಪ್ರಕಾರಗಳಿಂದ ಭಿನ್ನವಾದ ಪ್ರಕಾರಗಳೇ ಅಪ್ರಾಮಾಣಿಕ-ವಾದ್ದರಿಂದ, ಒಂದೇ ವಸ್ತುವಿನದಲ್ಲಿ ಅನೇಕ ಪ್ರಕಾರಗಳನ್ನು ಅಂಗೀಸುವುದು ಅಸಂಭಾವಿತವೂ ಆಗಿದ್ದರಿಂದ ಅನೇಕ ಪ್ರಕಾರಗಳು ಸುತರಾಂ ಅಪ್ರಾಮಾಣಿಕವಾಗಿವೆ. ಹೀಗಾಗಿ ಜೈನಮತವು ಅನುಪಪನ್ನವಾದ್ದರಿಂದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಜೈನಮತದ ವಿರೋಧ ಬಾರದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 34

**ಸೂ.ರ.:–** यदपि जिनेनोक्तं जीवस्याणुत्वे सर्वाङ्गवेदनानुसन्धानायोगाद्व्याप्तत्वे च देहान्तरगतस्याप्यनुसन्धानप्रसङ्गाच्छरीरपरिमितत्वमिति । तत्र किं तत्स्वीयसर्वशरीरावगतचेष्टोपपत्त्यर्थमुपेयते । उत शरीरावच्छिन्नत्वमन्तरेणात्मनः स्वतः परिमाणाभावाद्वा । तत्राद्यपक्षं निरसितुं प्रवृत्तं सूत्रमाह ॥

**ಅನು.:–** ಜಿನನು ಮತ್ತೆ ಏನು ಹೇಳಿದ್ದಾನೆ – ಜೀವನು ಅಣುವಾಗಿದ್ದಾನೆ ಎನ್ನುವು-ದಾದರೆ ಸರ್ವಾಂಗವೇದನಾನುಸಂಧಾನವು ಕೂಡುವುದಿಲ್ಲ, ಇನ್ನು ಜೀವನು ವ್ಯಾಪ್ತ-ನಾಗಿದ್ದಾನೆ ಎನ್ನುವುದಾದರೆ ಬೇರೆಯವರ ದೇಹದಲ್ಲಿ ಆಗುವ ಅನುಸಂಧಾನಗಳೂ ಬರಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಜೀವನು ಅಣುವೂ ಅಲ್ಲ, ವ್ಯಾಪ್ತನೂ ಅಲ್ಲ. ಕಿಂತು ಶರೀರಪರಿಮಿತನಾಗಿದ್ದಾನೆ ಎಂದು ಹೇಳಿರುವುದು ಸರಿಯಲ್ಲ.

ಏಕೆಂದರೆ – ಜೀವನು ಶರೀರಪರಿಮಿತನಾಗಿದ್ದಾನೆ ಎಂದು ಹೇಳುವುದಕ್ಕೆ ಕಾರಣ-ವೇನು? ತನ್ನ ಸರ್ವಶರೀರಾವಗತಚೇಷ್ಟೆಯನ್ನು ಕೂಡಿಸುವುದಕ್ಕಾಗಿ ಹಾಗೆ ಹೇಳುತ್ತೀರೋ? ಅಥವಾ ಶರೀರಾವಚ್ಛಿನ್ನತ್ವವನ್ನು ಬಿಟ್ಟು ಆತ್ಮನಿಗೆ ಸ್ವತಃ ಪರಿಮಾಣ ಇಲ್ಲ ಎಂಬ ಕಾರಣದಿಂದ ಹೇಳುತ್ತೀರೋ?

ಅದರಲ್ಲಿ ಮೊದಲನೇ ಪಕ್ಷವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತವಾದ ಸೂತ್ರವನ್ನು ಹೇಳುತ್ತಾರೆ –

## ॐ एवं चात्माकार्त्स्न्यं ॐ (२.२.३४)

ಏವಂ ಚ = ಜೀವನಿಗೆ ಶರೀರಪರಿಮಾಣವನ್ನು ಅಂಗೀಕರಿಸುತ್ತಿರಲು, ಆತ್ಮಾಕಾರ್ತ್ಸ್ನ್ಯಂ ಆತ್ಮನಃ = ಮೊದಲು ಪಿಪೀಲಿಕಾ (ಇರುವೆ) ದೇಹವನ್ನು ಹೊಂದಿದ್ದ ಆದ್ದರಿಂದಲೇ ಪಿಪೀಲಿಕಾದೇಹಪರಿಮಿತನಾದ ಜೀವನಿಗೆ ಅಕಾರ್ತ್ಸ್ನ್ಯಂ = ಗಜಗರ್ದಭಾದಿಶರೀರವು ಪ್ರಾಪ್ತವಾದಾಗ ಅಪೂರ್ಣತಾ ಬರಬೇಕಾಗುತ್ತದೆ. ಅದೇ ರೀತಿ ಆತ್ಮನಃ = ಗಜಶರೀರವನ್ನು ಪಡೆದಿರುವ ಜೀವನಿಗೆ ಮುಂದೆ ಪಿಪೀಲಿಕಾದೇಹವು ಪ್ರಾಪ್ತವಾದಾಗ ಅಕಾರ್ತ್ಸ್ನ್ಯಂ = ಆಧಿಕ್ಯವೂ ಬರಬೇಕಾಗುತ್ತದೆ.

**ಸೂ.ರ.:–** एवं चात्मनः कायपरिमाणाभ्युपगमेऽपि प्राप्तव्यसर्वशरीरेषु सर्वचेष्टानुपपादकत्वात् । गजगर्दभादिशरीरस्य तत्परिमाणस्यात्मनः पिपीलिकादिशरीरे कर्मवशात्प्राप्ते सति तच्छरीर एवातिरेकः स्यात् । तथा च शरीरपरिमाणत्वभङ्गः । अतो युक्तं लक्षणसूत्रमिति सिद्धम् ।

**ಅನು.:–** ಜೀವನಿಗೆ ಶರೀರಪರಿಮಾಣವನ್ನು ಅಂಗೀಕರಿಸಿದರೂ ಸಹ ಮುಂದೆ ಬರಲಿರುವ ಸರ್ವಶರೀರಗಳಲ್ಲಿ ಸರ್ವಚೇಷ್ಟೆಗಳಿಗೆ ಅನುತ್ಪಾದಕವಾಗುತ್ತದೆ. ಅಂದರೆ ಜೀವನು ಗಜ-ಗರ್ದಭಾದಿಶರೀರದಲ್ಲಿರುವಾಗ ಆ ಗಜ-ಗರ್ದಭಾದಿಶರೀರ-ಪರಿಮಿತನಾದ ಜೀವನಿಗೆ ಕರ್ಮವಶಾತ್ ಪಿಪೀಲಿಕಾದಿಶರೀರಗಳು ಪ್ರಾಪ್ತವಾದಾಗ

ಗಜಗರ್ದಭಾದಿಶರೀರಪರಿಮಿತನಾದ ಜೀವನಿಗೆ ಪಿಪೀಲಿಕಾದಿಶರೀರಗಳಲ್ಲಿ ಅತಿರೇಕ (ಆಧಿಕ್ಯವು- ಪಿಪೀಲಿಕಾದಿಶರೀರಗಳಿಗಿಂತಲೂ ಹೆಚ್ಚಿನ ಪರಿಮಾಣವು) ಉಂಟಾಗ-ಬೇಕಾಗುತ್ತದೆ.

ಆದ್ದರಿಂದ ಜೀವನಿಗೆ ಶರೀರಪರಿಮಾಣತ್ವವು ಭಗ್ನವಾಗುವುದರಿಂದ, ಜೈನಮತವು ಅಯುಕ್ತವಾಗುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 35

### ಆಕ್ಷೇಪ

**ಸೂ.ರ.:– ननु नैकदेहपरिमाण एवात्मा किन्तु यदा यच्छरीरं प्राप्नोति तदा तत्परिमाण इति । न चैवं सति प्रागुक्तदोषप्रसक्तिरिति प्राप्ते परिहरत्सूत्रमुपन्यस्यति ॥**

**ಅನು.:–** ಜೀವನು ಒಂದೇ ದೇಹದ ಪರಿಮಾಣ ಉಳ್ಳವನಾಗಿಲ್ಲ, ಕಿಂತು ಯಾವಾಗ ಯಾವಾಗ ಯಾವ ಯಾವ ಶರೀರವನ್ನು ಪಡೆಯುತ್ತಾನೆಯೋ ಆವಾಗ ಆವಾಗ ಆ ಆ ಶರೀರದಷ್ಟು ಪರಿಮಾಣ ಉಳ್ಳವನಾಗುತ್ತಾನೆ. ಆದ್ದರಿಂದ ಹಿಂದೆ ಹೇಳಿದ ಅಪೂರ್ಣತಾ ಆಧಿಕ್ಯ ದೋಷಗಳು ಪ್ರಸಕ್ತವಾಗುವುದಿಲ್ಲ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ न च पर्यायादप्यविरोधो विकारादिभ्यः ॐ (२.२.३५)**

ಪರ್ಯಾಯಾತ್ ಅಪಿ = ಕ್ರಮವಾಗಿ ತತ್ತದ್ದೇಹಪರಿಮಾಣತ್ವವನ್ನು ಅಂಗೀಕರಿಸಿದರೂ ಸಹ ಅವಿರೋಧಃ = ಹಿಂದೆ ಹೇಳಿದ ಅಪೂರ್ಣತಾ - ಆಧಿಕ್ಯ ದೋಷಗಳು ಬರುವುದಿಲ್ಲ ಇತಿ ಚ=ಎಂಬ ಅಭಿಪ್ರಾಯವೂ ಸಹ ನ ಯುಜ್ಯತೇ = ಸರಿಯಾದದ್ದಲ್ಲ.

ಕುತಃ = ಯಾಕೆ? ಯತಃ ಪರ್ಯಾಯೋ ನ ಯುಜ್ಯತೇ = ಯಾವ ಕಾರಣ ಪರ್ಯಾಯವು (ಕ್ರಮವಾಗಿ ತತ್ತದ್ದೇಹಪರಿಮಾಣತ್ವವು) ಕೂಡುವುದಿಲ್ಲವೋ ಆ ಕಾರಣದಿಂದಾಗಿ.

ತದಪಿ ಕುತಃ = ಕ್ರಮವಾಗಿ ತತ್ತದ್ದೇಹಪರಿಮಾಣತ್ವವು ಏಕೆ ಕೂಡುವುದಿಲ್ಲ? ಎಂದರೆ, ವಿಕಾರಾದಿಭ್ಯಃ = ಹಾಗಾದರೆ ತತ್ತತ್ಕಾಲೀನವಾದ ಪರಿಮಾಣಭೇದದಿಂದಾಗಿ ವಸ್ತುವಿನಲ್ಲಿ ಭೇದ ಬರಬೇಕಾಗುವುದರಿಂದ, ಜೀವನಿಗೆ ವಿಕಾರಿತ್ವವು ಬರಬೇಕಾಗುತ್ತದೆ. ಜೀವನಿಗೆ

**ಅನು.:–** ಜಿನನು ಮತ್ತೆ ಏನು ಹೇಳಿದ್ದಾನೆ – ಜೀವನು ಅಣುವಾಗಿದ್ದಾನೆ ಎನ್ನುವು-ದಾದರೆ ಸರ್ವಾಂಗವೇದನಾನುಸಂಧಾನವು ಕೂಡುವುದಿಲ್ಲ. ಇನ್ನು ಜೀವನು ವ್ಯಾಪ್ತ-ನಾಗಿದ್ದಾನೆ ಎನ್ನುವುದಾದರೆ ಬೇರೆಯವರ ದೇಹದಲ್ಲಿ ಆಗುವ ಅನುಸಂಧಾನಗಳೂ ಬರಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಜೀವನು ಅಣುವೂ ಅಲ್ಲ, ವ್ಯಾಪ್ತನೂ ಅಲ್ಲ. ಕಿಂತು ಶರೀರಪರಿಮಿತನಾಗಿದ್ದಾನೆ ಎಂದು ಹೇಳಿರುವುದು ಸರಿಯಲ್ಲ.

ಏಕೆಂದರೆ – ಜೀವನು ಶರೀರಪರಿಮಿತನಾಗಿದ್ದಾನೆ ಎಂದು ಹೇಳುವುದಕ್ಕೆ ಕಾರಣ-ವೇನು? ತನ್ನ ಸರ್ವಶರೀರಾವಗತಚೇಷ್ಟೆಯನ್ನು ಕೂಡಿಸುವುದಕ್ಕಾಗಿ ಹಾಗೆ ಹೇಳುತ್ತೀರೋ? ಅಥವಾ ಶರೀರಾವಚ್ಛಿನ್ನತ್ವವನ್ನು ಬಿಟ್ಟು ಆತ್ಮನಿಗೆ ಸ್ವತಃ ಪರಿಮಾಣ ಇಲ್ಲ ಎಂಬ ಕಾರಣದಿಂದ ಹೇಳುತ್ತೀರೋ?

ಅದರಲ್ಲಿ ಮೊದಲನೇ ಪಕ್ಷವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತವಾದ ಸೂತ್ರವನ್ನು ಹೇಳುತ್ತಾರೆ –

### ॐ एवं चात्माकार्त्स्न्यं ॐ (२.२.३४)

ಏವಂ ಚ = ಜೀವನಿಗೆ ಶರೀರಪರಿಮಾಣವನ್ನು ಅಂಗೀಕರಿಸುತ್ತಿರಲು, ಆತ್ಮಾಕಾರ್ತ್ಸ್ನ್ಯಂ ಆತ್ಮನಃ = ಮೊದಲು ಪಿಪೀಲಿಕಾ (ಇರುವೆ) ದೇಹವನ್ನು ಹೊಂದಿದ್ದ, ಆದ್ದರಿಂದಲೇ ಪಿಪೀಲಿಕಾದೇಹಪರಿಮಿತನಾದ ಜೀವನಿಗೆ ಅಕಾರ್ತ್ಸ್ನ್ಯಂ = ಗಜಗರ್ದಭಾದಿಶರೀರವು ಪ್ರಾಪ್ತವಾದಾಗ ಅಪೂರ್ಣತಾ ಬರಬೇಕಾಗುತ್ತದೆ. ಅದೇ ರೀತಿ ಆತ್ಮನಃ = ಗಜಶರೀರವನ್ನು ಪಡೆದಿರುವ ಜೀವನಿಗೆ ಮುಂದೆ ಪಿಪೀಲಿಕಾದೇಹವು ಪ್ರಾಪ್ತವಾದಾಗ ಅಕಾರ್ತ್ಸ್ನ್ಯಂ = ಆಧಿಕ್ಯವೂ ಬರಬೇಕಾಗುತ್ತದೆ.

**ಸೂ.ರ.:–** एवं चात्मनः कायपरिमाणाभ्युपगमेऽपि प्राप्तव्यसर्वशरीरेषु सर्वचेष्टानुपपादकत्वात् । गजगर्दभादिशरीरस्य तत्परिमाणस्यात्मनः पिपीलिकादिशरीरे कर्मवशात्प्राप्ते सति तच्छरीर एवातिरेकः स्यात् । तथा च शरीरपरिमाणत्वभङ्गः । अतो युक्तं लक्षणसूत्रमिति सिद्धम् ।

**ಅನು.:–** ಜೀವನಿಗೆ ಶರೀರಪರಿಮಾಣವನ್ನು ಅಂಗೀಕರಿಸಿದರೂ ಸಹ ಮುಂದೆ ಬರಲಿರುವ ಸರ್ವಶರೀರಗಳಲ್ಲಿ ಸರ್ವಚೇಷ್ಟೆಗಳಿಗೆ ಅನುತ್ಪಾದಕವಾಗುತ್ತದೆ. ಅಂದರೆ ಜೀವನು ಗಜ-ಗರ್ದಭಾದಿಶರೀರದಲ್ಲಿರುವಾಗ ಆ ಗಜ-ಗರ್ದಭಾದಿಶರೀರ-ಪರಿಮಿತನಾದ ಜೀವನಿಗೆ ಕರ್ಮವಶಾತ್ ಪಿಪೀಲಿಕಾದಿಶರೀರಗಳು ಪ್ರಾಪ್ತವಾದಾಗ

ಗಜಗರ್ದಭಾದಿಶರೀರಪರಿಮಿತನಾದ ಜೀವನಿಗೆ ಪಿಪೀಲಿಕಾದಿಶರೀರಗಳಲ್ಲಿ ಆತಿರೇಕ (ಆಧಿಕ್ಯವು-ಪಿಪೀಲಿಕಾದಿಶರೀರಗಳಿಗಿಂತಲೂ ಹೆಚ್ಚಿನ ಪರಿಮಾಣವು) ಉಂಟಾಗ-ಬೇಕಾಗುತ್ತದೆ.

ಆದ್ದರಿಂದ ಜೀವನಿಗೆ ಶರೀರಪರಿಮಾಣತ್ವವು ಭಗ್ನವಾಗುವುದರಿಂದ, ಜೈನಮತವು ಅಯುಕ್ತವಾಗುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 35

## ಆಕ್ಷೇಪ

**ಸೂ.ರ.:– ननु नैकदेहपरिमाण एवात्मा किन्तु यदा यच्छरीरं प्राप्नोति तदा तत्परिमाण इति । न चैवं सति प्रागुक्तदोषप्रसक्तिरिति प्राप्ते परिहरत्सूत्रमुपन्यस्यति ॥**

**ಅನು.:–** ಜೀವನು ಒಂದೇ ದೇಹದ ಪರಿಮಾಣ ಉಳ್ಳವನಾಗಿಲ್ಲ, ಕಿಂತು ಯಾವಾಗ ಯಾವಾಗ ಯಾವ ಯಾವ ಶರೀರವನ್ನು ಪಡೆಯುತ್ತಾನೆಯೋ ಆವಾಗ ಆವಾಗ ಆ ಆ ಶರೀರದಷ್ಟು ಪರಿಮಾಣ ಉಳ್ಳವನಾಗುತ್ತಾನೆ. ಆದ್ದರಿಂದ ಹಿಂದೆ ಹೇಳಿದ ಅಪೂರ್ಣತಾ ಆಧಿಕ್ಯ ದೋಷಗಳು ಪ್ರಸಕ್ತವಾಗುವುದಿಲ್ಲ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न च पर्यायादप्यविरोधो विकारादिभ्यः ॐ (२.२.३५)**

ಪರ್ಯಾಯಾತ್ ಅಪಿ = ಕ್ರಮವಾಗಿ ತತ್ತದ್ದೇಹಪರಿಮಾಣತ್ವವನ್ನು ಅಂಗೀಕರಿಸಿದರೂ ಸಹ ಅವಿರೋಧಃ = ಹಿಂದೆ ಹೇಳಿದ ಅಪೂರ್ಣತಾ - ಆಧಿಕ್ಯ ದೋಷಗಳು ಬರುವುದಿಲ್ಲ ಇತಿ ಚ=ಎಂಬ ಅಭಿಪ್ರಾಯವೂ ಸಹ ನ ಯುಜ್ಯತೇ = ಸರಿಯಾದದ್ದಲ್ಲ.

ಕುತಃ = ಯಾಕೆ? ಯತಃ ಪರ್ಯಾಯೋ ನ ಯುಜ್ಯತೇ = ಯಾವ ಕಾರಣ ಪರ್ಯಾಯವು (ಕ್ರಮವಾಗಿ ತತ್ತದ್ದೇಹಪರಿಮಾಣತ್ವವು) ಕೂಡುವುದಿಲ್ಲವೋ ಆ ಕಾರಣದಿಂದಾಗಿ.

ತದಪಿ ಕುತಃ = ಕ್ರಮವಾಗಿ ತತ್ತದ್ದೇಹಪರಿಮಾಣತ್ವವು ಏಕೆ ಕೂಡುವುದಿಲ್ಲ? ಎಂದರೆ, ವಿಕಾರಾದಿಭ್ಯಃ = ಹಾಗಾದರೆ ತತ್ತತ್ಕಾಲೀನವಾದ ಪರಿಮಾಣಭೇದದಿಂದಾಗಿ ವಸ್ತುವಿನಲ್ಲಿ ಭೇದ ಬರಬೇಕಾಗುವುದರಿಂದ, ಜೀವನಿಗೆ ವಿಕಾರಿತ್ವವು ಬರಬೇಕಾಗುತ್ತದೆ. ಜೀವನಿಗೆ

ವಿಕಾರಿತ್ವ ಬಂದರೆ ಅನಿತ್ಯನಾಗುವುದರಿಂದ ಮೋಕ್ಷರಹಿತನಾಗಬೇಕಾದ ದೋಷಗಳು ಪ್ರಸಕ್ತವಾಗಬೇಕಾಗುತ್ತದೆ.

## ಸಮಾಧಾನ

**ಸೂ.ರ.:– एवं चात्मनो विकारित्वेनानित्यत्वप्रसङ्गात् । तथा चानिर्मोक्षप्रसङ्गः । शास्त्रवैफल्यं च । गजपिपीलिकादिशरीरस्थस्यात्मनः क्रमिकतत्तद्देहपरिमाणत्वाभ्युपगमे चोक्तदोषानपगमेन विकारित्वापत्तेरनित्यतापातात् । अतो युक्तं लक्षणसूत्रमिति सिद्धम् ।**

**ಅನು.:–** ಗಜ-ಪಿಪೀಲಿಕಾದಿಶರೀರಸ್ಥನಾದ ಜೀವನಿಗೆ ಕ್ರಮವಾಗಿ ತತ್ತದ್ದೇಹ-ಪರಿಮಾಣತ್ವವನ್ನು ಅಂಗೀಕರಿಸುವುದಾದರೆ, ಹಿಂದಿನ ಅಪೂರ್ಣತಾ-ಆಧಿಕ್ಯ ದೋಷಗಳು ಪರಿಹಾರವಾಗದ ಕಾರಣ ಜೀವನಿಗೆ ವಿಕಾರಿತ್ವವು ಬರುವುದರಿಂದ ಅನಿತ್ಯತ್ವ ಪ್ರಸಕ್ತ-ವಾಗಬೇಕಾಗುತ್ತದೆ. ಹಾಗೆ ಜೀವನು ಅನಿತ್ಯನಾಗುವುದಾದರೆ ಮೋಕ್ಷ ಇಲ್ಲದೇ ಹೋಗ-ಬೇಕಾದ ಅತಿಪ್ರಸಂಗ ಬರುತ್ತದೆ. ಮತ್ತು ಜೀವನಿಗೆ ಮೋಕ್ಷ ಕೊಡಿಸುವುದಕ್ಕಾಗಿ ಹೊರಟಿರುವ ಶಾಸ್ತ್ರಕ್ಕೆ ವೈಫಲ್ಯವೂ ಬರಬೇಕಾಗುತ್ತದೆ.

ಆದ್ದರಿಂದ ಜೀವನಿಗೆ ಕ್ರಮವಾಗಿ ತತ್ತದ್ದೇಹಪರಿಮಾಣತ್ವವನ್ನು ಹೇಳುವುದು ಅಯುಕ್ತವಾಗುವುದರಿಂದ, ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 36

**ಸೂ.ರ.:– इदानीं शरीरावच्छेदमन्तरेणात्मनः स्वतः परिमाणाभावात्तदर्थं कायपरिमाणत्वमङ्गीक्रियत इति द्वितीयपक्षं निराकुर्वत्सूत्रमुपन्यस्यति ।**

**ಅನು.:–** ಇಲ್ಲಿಯವರೆಗೆ ''ತನ್ನ ಸರ್ವಶರೀರಾವಗತಚೇಷ್ಟೆಯನ್ನು ಕೂಡಿಸುವುದಕ್ಕಾಗಿ ಜೀವನು ಶರೀರಪರಿಮಿತನಾಗಿದ್ದಾನೆ'' ಎಂಬ ಮೊದಲನೇ ಪಕ್ಷವನ್ನು ನಿರಾಕರಿಸಿ ಈಗ ''ಶರೀರಾವಚ್ಛಿನ್ನತ್ವವನ್ನು ಬಿಟ್ಟು ಜೀವನಿಗೆ ಸ್ವತಃ ಪರಿಮಾಣ ಇಲ್ಲವಾದ್ದರಿಂದ ಜೀವನು ಶರೀರಪರಿಮಿತನಾಗಿದ್ದಾನೆ'' ಎಂಬ ಎರಡನೇ ಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ अन्त्यावस्थितेश्चोभयनित्यत्वादविशेषात् ॐ (२.२.३६)

ಹಿಂದಿನ ಸೂತ್ರದಿಂದ ಏವಂ ಚ ಎನ್ನುವುದನ್ನು ಅನುಷಂಗ ಮಾಡಿಕೊಳ್ಳಬೇಕು. ಅಂತ್ಯಾವಸ್ಥಿತೇಃ ಎನ್ನುವುದನ್ನು ಮತ್ತೊಮ್ಮೆ ಆವರ್ತನ ಮಾಡಿಕೊಳ್ಳಬೇಕು. ಚ ಶಬ್ದವು ಅವಧಾರಣ ಹಾಗೂ ಸಮುಚ್ಚಯ ಎಂಬ ಅರ್ಥದಲ್ಲಿದೆ.

ಏವಂ ಚ (ಸತಿ) = ಜೀವನಿಗೆ ಕಾಯಪರಿಮಾಣತ್ವವನ್ನು ಅಂಗೀಕರಿಸುವುದಾದರೆ, ಅಂತ್ಯಾವಸ್ಥಿತೇಃ (ಪ್ರಸಂಗ ಇತಿ ಶೇಷಃ) = ಮೋಕ್ಷದಲ್ಲಿಯೂ ಇರುವ ಜೀವನಿಗೆ ಶರೀರಸತ್ವವನ್ನು ಅಂಗೀಕರಿಸಬೇಕಾಗುತ್ತದೆ.

ಕುತಃ = ಯಾಕೆ? ಅಂತ್ಯಾವಸ್ಥಿತೇಃ ಅಂತ್ಯಸ್ಯ = ಮುಕ್ತಿಗತವಾದ ಪರಿಮಾಣವು ಅವಸ್ಥಿತೇಃ = ಅವಶ್ಯ ಅಂಗೀಕಾರ್ಯವಾಗಿದೆ. ಅವಚ್ಛೇದಕವಾದ ಶರೀರ ಇಲ್ಲದೇ ಅವಚ್ಛೇದ್ಯನಾದ ಜೀವನಿಗೆ ಪರಿಮಾಣವು ಕೂಡುವುದಿಲ್ಲವಾದ್ದರಿಂದ ಎಂದು ಭಾವ.

ಜೀವನಿಗೆ ಪರಿಮಾಣವನ್ನೇ ಏಕೆ ಒಪ್ಪಬೇಕು? ಎಂದರೆ, ಅದಕ್ಕೂ ಉತ್ತರ ಅಂತ್ಯಾವಸ್ಥಿತೇಃ ಅಂತ್ಯಸ್ಯ = ಮುಕ್ತಿಗತ ಜೀವಸ್ವರೂಪಕ್ಕೆ ಮೋಕ್ಷದಲ್ಲಿ ಅವಸ್ಥಿತೇಃ = ಪರಿಮಾಣ ಇಲ್ಲದೇ ಸ್ವರೂಪಸತ್ವವು ಉಪಪನ್ನವಾಗುವುದಿಲ್ಲವಾದ್ದರಿಂದ, ಜೀವನಿಗೆ ಪರಿಮಾಣ ಅವಶ್ಯ ಒಪ್ಪಲೇಬೇಕು. ಆ ಜೀವನಿಗೆ ಪರಿಮಾಣ ಉಪಪನ್ನವಾಗಬೇಕಾದರೆ ಶರೀರವನ್ನು ಒಪ್ಪುವುದು ಅನಿವಾರ್ಯವಾಗಿದೆ ಎಂದರ್ಥ.

ಆಗಲಿ ಮೋಕ್ಷದಲ್ಲಿಯೂ ಶರೀರ ಇರಲಿ. ಮುಂದೇನು? ಎಂದರೆ, ಅದಕ್ಕೆ ಹೇಳಿದರು ಉಭಯನಿತ್ಯತ್ವಾತ್ = ಹಾಗೆ ಮೋಕ್ಷದಲ್ಲಿಯೂ ಶರೀರ ಇರುವುದಾದರೆ, ಉಭಯೋಃ = ಮುಕ್ತಿಕಾಲೀನರಾದ ದೇಹ-ಆತ್ಮರಿಗೆ ಇಬ್ಬರಿಗೂ ನಿತ್ಯತ್ವಪ್ರಸಂಗತ್ = ನಿತ್ಯತ್ವ ಬರಬೇಕಾದ ಪ್ರಸಂಗ ಬರುತ್ತದೆ.

ಆಗಲಿ ಮುಕ್ತಿಕಾಲೀನ ಶರೀರವು ನಿತ್ಯವಾಗಲಿ ಮುಂದೇನು? ಎಂದರೆ, ಚ ಸರ್ವ-ನಿತ್ಯತ್ವಂ ಸ್ಯಾತ್ = ಈಗಿರುವ ಎಲ್ಲ ಶರೀರಗಳಿಗೂ ಸಹ ನಿತ್ಯತ್ವ ಬರಲಿ. ಕುತಃ = ಏಕೆ? ಅವಿಶೇಷಾತ್ = ಮುಕ್ತಿಕಾಲೀನವಾದ ಹಾಗೂ ಈಗಿರುವ ಶರೀರಗಳಲ್ಲಿ ಶರೀರತ್ವವು ಸಮಾನವಾದ್ದರಿಂದ.

ಆದ್ದರಿಂದ ಜೀವನಿಗೆ ಕಾಯಪರಿಮಾಣತ್ವವನ್ನು ಅಂಗೀಕರಿಸುವುದು ಯುಕ್ತವಲ್ಲ ಎಂದು ಭಾವ.

ಸೂ.ರ.:- एवं च जीवस्य मोक्षे परिमाणाभावः चेदात्मस्वरूपा-

**भावप्रसङ्गः । न हि परिमाणशून्यं द्रव्यमस्ति । अस्ति चेच्छरीरमन्तरेण परिमाणायोगात् । तत्रापि तच्छरीरमनित्यं चेत्संसारसमानधर्मतापातः । नित्यं चेच्छरीरत्वाविशेषादिदानीन्तनशरीरमपि नित्यं स्यात् । अतो नात्मनः कायपरिमाणत्वपक्षो युक्तः । तस्माज्जैनमतस्यानुपपन्नत्वेनाविरोधकत्वाद्युक्तं जगत्कारणत्वलक्षणमिति सिद्धम् ।**

**ಅನು.:–** ಮೋಕ್ಷದಲ್ಲಿ ಜೀವನಿಗೆ ಪರಿಮಾಣ ಇದೆ ಎನ್ನುತ್ತೀರೋ? ಪರಿಮಾಣ ಇಲ್ಲ ಎನ್ನುತ್ತೀರೋ?

ಮೋಕ್ಷದಲ್ಲಿ ಜೀವನಿಗೆ ಪರಿಮಾಣ ಇಲ್ಲ ಎನ್ನುವುದಾದರೆ, ಪರಿಮಾಣ ಇಲ್ಲದೇ ದ್ರವ್ಯ ಇರಲು ಸಾಧ್ಯವಿಲ್ಲವಾದ್ದರಿಂದ ಮೋಕ್ಷದಲ್ಲಿ ಆತ್ಮಸ್ವರೂಪವೇ ಇಲ್ಲದೇ ಹೋಗಬೇಕಾದ ಅತಿಪ್ರಸಂಗ ಬರುತ್ತದೆ.

ಮೋಕ್ಷದಲ್ಲಿ ಜೀವನಿಗೆ ಪರಿಮಾಣ ಇದೆ ಎನ್ನುವುದಾದರೆ, ಅವಚ್ಛೇದಕವಾದ ಶರೀರ ಇಲ್ಲದೇ ಅವಚ್ಛೇದ್ಯನಾದ ಜೀವನಿಗೆ ಪರಿಮಾಣ ಇರಲು ಸಾಧ್ಯವಿಲ್ಲವಾದ್ದರಿಂದ ಮೋಕ್ಷದಲ್ಲಿ ಜೀವನಿಗೆ ಶರೀರ ಇದೆ ಎಂದೇ ಒಪ್ಪಬೇಕಾಗುತ್ತದೆ.

ಮೋಕ್ಷದಲ್ಲಿ ಜೀವನಿಗೆ ಶರೀರ ಇದೆ, ಆದರೆ ಆ ಶರೀರವು ಅನಿತ್ಯವಾಗಿದೆ ಎಂದು ಹೇಳುತ್ತೇವೆ ಎಂದರೆ, ಸಂಸಾರದಲ್ಲಿಯೂ ಶರೀರವು ಅನಿತ್ಯವಾದ್ದರಿಂದ ಮೋಕ್ಷಕ್ಕೆ ಸಂಸಾರಸಮಾನಧರ್ಮತ್ವ ಬರಬೇಕಾಗುತ್ತದೆ.

ಇನ್ನು ಮೋಕ್ಷದಲ್ಲಿ ಜೀವನಿಗೆ ಇರುವ ಶರೀರವು ನಿತ್ಯವಾಗಿದೆ ಎಂದು ಹೇಳುವುದಾದರೆ, ಈಗಿರುವ ಶರೀರಗಳೂ ಶರೀರವೇ ಆದ್ದರಿಂದ (ಶರೀರತ್ವ ಉಳ್ಳದ್ದಾದ್ದರಿಂದ) ಮೋಕ್ಷಗತ ಶರೀರವು ನಿತ್ಯವಾದಂತೆ ಈಗಿರುವ ಶರೀರಗಳೂ ನಿತ್ಯವಾಗಬೇಕಾಗುತ್ತದೆ.

ಆದ್ದರಿಂದ ಜೀವನಿಗೆ ಕಾಯಪರಿಮಾಣತ್ವವನ್ನು ಹೇಳುವ ಪಕ್ಷವು ಸರಿಯಲ್ಲ.

ಹೀಗೆ ಜೀವನಿಗೆ ಕಾಯಪರಿಮಾಣತ್ವವನ್ನು ಹೇಳುವ ಜೈನಮತವು ಅನುಪಪನ್ನವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವಕ್ಕೆ ಅದು ವಿರೋಧಕವಾಗದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ನೈಕಸ್ಮಿನ್ನಧಿಕರಣವು ಮುಗಿಯಿತು.

ಅಧಿಕರಣ – 11

## ಪತ್ಯುರಧಿಕರಣ

### ಸಂಗತಿ

ಸೂ.ರ.:– अत्र पाशुपतपक्षोऽपाक्रियते ।

ಅನು.:– ಪಾಶುಪತಪಕ್ಷವನ್ನು ನಿರಾಕರಿಸುತ್ತಾರೆ ಈ ಹನ್ನೊಂದನೇ ಪತ್ಯುರಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु न विष्णोर्जगत्कारणत्वं युक्तम् । पाशुपतसमय-विरुद्धत्वात् । पशुपतिः खलु सार्वज्ञ्यादिगुणशाली । मायामुपादानीकृत्य हरिहिरण्यगर्भादिजगदुत्पत्त्यादि सर्वं करोति । श्रुतिस्मृतयश्चास्मिन्नर्थे भवन्ति । अतो लक्षणसूत्रमयुक्तमिति प्राप्ते सूत्रं पठति ।

ಅನು.:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಕಾರಣ – ಅದು ಪಾಶುಪತಮತಕ್ಕೆ ವಿರುದ್ಧವಾಗುತ್ತದೆ. ಹೇಗೆಂದರೆ – ಪಶುಪತಿಯು ನಿಜವಾಗಿ ಸಾರ್ವಜ್ಞ್ಯಾದಿಗುಣಶಾಲಿಯಾಗಿದ್ದಾನೆ. ಮಾಯಾವನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ಹರಿ–ಹಿರಣ್ಯಗರ್ಭಾದಿ ಜಗತ್ತಿನ ಉತ್ಪತ್ತ್ಯಾದಿಗಳೆಲ್ಲವನ್ನೂ ಮಾಡುತ್ತಾನೆ. ಈ ವಿಷಯದಲ್ಲಿ ಅನೇಕ ಶ್ರುತಿ–ಸ್ಮೃತಿಗಳು ಪ್ರಮಾಣವಾಗಿ ಇವೆ. ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಲಕ್ಷಣವನ್ನಾಗಿ ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ पत्युरसामञ्जस्यात् ॐ (२.२.३७)**

ಪತ್ಯುಃ = ಪಶುಪತಿಗೆ ಜಗತ್ಕಾರಣತ್ವಂ ನ = ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಕುತಃ= ಯಾಕೆ? ಅಸಾಮಂಜಸ್ಯಾತ್ = ಪಾರತಂತ್ರ್ಯ–ಉತ್ಪತ್ತ್ಯಾದಿದೋಷ ಉಳ್ಳವನಾದ್ದರಿಂದ.

### ಸಿದ್ಧಾಂತ

ಸೂ.ರ.:– एवं च युक्तं विष्णोर्जगत्कारणत्वम् । पाशुपतसमयस्या-

प्रामाणिकत्वात् । न पशुपतिर्जगत्कर्ता । पारतन्त्र्यजननमरणदोषदुष्टत्वात् । न चासिद्धो हेतुः । यं कामये तं तमुग्रमिति (ऋ.१०-१२५-५) श्रुतिसिद्धत्वात् । अपि चैको नारायण आसीदिति (महा.१) श्रुत्या प्रलये पशुपतेरभावावगमात् । ततश्च पाशुपतसमयस्यानुपपन्नत्वेनाविरोधकत्वाद्युक्तं लक्षणसूत्रमिति सिद्धम् ।

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ – ಪಾಶುಪತ ಸಮಯವು ಅಪ್ರಾಮಾಣಿಕವಾದ್ದರಿಂದ.

ಪಶುಪತಿಯು ಜಗತ್ಕರ್ತಾ ಆಗಲು ಸಾಧ್ಯವಿಲ್ಲ, ಕಾರಣ – ಅವನು ಪಾರತಂತ್ರ್ಯ-ಜನನ-ಮರಣ ದೋಷಗಳಿಂದ ದುಷ್ಟನಾಗಿದ್ದಾನೆ. ಹೀಗಾಗಿ ಅಂತಹ ವ್ಯಕ್ತಿ ಜಗತ್ಕಾರಣನಾಗಲು ಸಾಧ್ಯವಿಲ್ಲ.

ಪಶುಪತಿಃ ನ ಜಗತ್ಕರ್ತಾ ಪಾರತಂತ್ರ್ಯಜನನಮರಣದೋಷದುಷ್ಟತ್ವಾತ್ ।

ಎಂದು ಅನುಮಾನ ಮಾಡಿದಂತಾಯಿತು.

ಪಕ್ಷನಾದ ಪಶುಪತಿಯಲ್ಲಿ ಪಾರತಂತ್ರ್ಯ-ಜನನ-ಮರಣದೋಷದುಷ್ಟತ್ವ ಎಂಬ ಹೇತುವೇ ಇಲ್ಲವಾದ್ದರಿಂದ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆಯಲ್ಲ? ಎಂದು ಶಂಕಿಸುವುದು ಸರಿಯಲ್ಲ. "ಯಂ ಕಾಮಯೇ ತಂ ತಮುಗ್ರಂ ಕೃಣೋಮಿ" (ಋ. 10-125-5) ಎಂಬ ಶ್ರುತಿಯಿಂದ ಪಶುಪತಿಗೆ ಪಾರತಂತ್ರ್ಯಾದಿಗಳು ಸಿದ್ಧವಾಗುತ್ತಿರುವುದರಿಂದ ಅಸಿದ್ಧಿಗೆ ಅವಕಾಶವಿಲ್ಲ.

ಮತ್ತು – "ಏಕೋ ನಾರಾಯಣ ಆಸೀತ್" (ಮಹಾ-1) ಎಂಬ ಶ್ರುತಿಯಿಂದ ಪ್ರಲಯಕಾಲದಲ್ಲಿ ನಾರಾಯಣ ಒಬ್ಬನೇ ಇದ್ದ ಪಶುಪತಿ ಇರಲಿಲ್ಲ ಎಂಬ ವಿಚಾರವು ತಿಳಿದುಬರುವುದರಿಂದ ಅರ್ಥಾತ್ ಪಶುಪತಿಗೆ ಜನನಾದಿಗಳು ಇರುವುದರಿಂದ ಪಶುಪತಿಯು ಜಗತ್ಕರ್ತಾ ಆಗಲು ಸಾಧ್ಯವೂ ಇಲ್ಲ.

ಆದ್ದರಿಂದ ಪಾಶುಪತಸಮಯವು ಅನುಪಪನ್ನವಾದ್ದರಿಂದ ವಿಷ್ಣುವಿನ ಜಗತ್ಕಾರಣತ್ವಕ್ಕೆ ವಿರೋಧಕವಾಗದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 38

**ಸೂ.ರ.:– युक्त्यन्तरेण पशुपतेर्जगत्कारणत्वं पराकुर्वत्सूत्रमुपन्यस्यति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಪಶುಪತಿಗೆ ಜಗತ್ಕಾರಣತ್ವವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ –

**ॐ सम्बन्धानुपपत्तेश्च ॐ (२.२.३८)**

ಸಂಬಂಧಾನುಪಪತ್ತೇಶ್ಚ= ಶಿವನು ಅಶರೀರನಾದ್ದರಿಂದ (ಶರೀರರಹಿತನಾದ್ದರಿಂದ) ಜಗತ್ತಿನೊಂದಿಗೆ ಸಂಬಂಧವು ಅನುಪಪನ್ನವಾದ್ದರಿಂದಲೂ, ಶಿವನಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ.

**ಸೂ.ರ.:– एवं च न केवलं पारतन्त्र्यादेः किंत्वशरीरत्वाच्च पशुपते-र्जगत्कर्तृत्वायोगात् । न ह्यशरीरस्य कर्तृत्वं दृश्यते येन तस्य तथा भवेत् । न च कार्येण जगताऽपि सम्बन्धमात्रमशरीरस्यापि सम्भवति गगनादेर्घटादिसंयोगवदिति वाच्यम् । त्यक्तदेहपुरुषवत्कर्तृत्वरूपसम्बन्धा-भावात् । ततश्च पशुपतेर्जगत्कर्तृत्वायोगेन युक्तं लक्षणसूत्रमिति सिद्धम् ।**

**ಅನು.:–** ಪಾರತಂತ್ರ್ಯಾದಿ ದೋಷಗಳಿರುವ ಕಾರಣ ಶಿವನಿಗೆ ಜಗತ್ಕರ್ತೃತ್ವ ಯುಕ್ತವಲ್ಲ ಎಂದಷ್ಟೇ ಅಲ್ಲ. ಕಿಂತು ಶಿವನು ಅಶರೀರನಾದ್ದರಿಂದಲೂ (ಶರೀರರಹಿತನಾದ್ದರಿಂದಲೂ) ಸಹ ಶಿವನಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ.

ಅಶರೀರನಾದರೂ ಕರ್ತಾ ಏಕಾಗಬಾರದು? ಎಂದು ಶಂಕಿಸುವುದು ಸರಿಯಲ್ಲ. ಅಶರೀರನಾದವನಿಗೂ ಕರ್ತೃತ್ವವು ಕಂಡಿದ್ದರೆ ಆಗ ಈ ರೀತಿ ಶಂಕಿಸಬಹುದಿತ್ತು. ಆದರೆ ಶರೀರರಹಿತನಾದವನಿಗೆ ಲೋಕದಲ್ಲಿ ಕರ್ತೃತ್ವವು ಕಂಡಿಲ್ಲವಾದ್ದರಿಂದ ಹಾಗೆ ಶಂಕಿಸುವುದು ಸರಿಯಲ್ಲ.

ಶಿವನು ಅಶರೀರನಾದರೂ ಸಹ ಕಾರ್ಯವಾದ ಜಗತ್ತಿನೊಂದಿಗೆ ಸಂಬಂಧಮಾತ್ರವು ಸಂಭಾವಿತವಾಗಿದೆ. ಗಗನವು ಅಶರೀರವಾಗಿದ್ದರೂ ಸಹ ಘಟಾದಿ ಕಾರ್ಯಗಳೊಂದಿಗೆ ಸಂಯೋಗ ಉಳ್ಳದ್ದಾಗಿದ್ದು ಕಂಡಿದೆಯಲ್ಲವೇ? ಎಂಬ ಶಂಕೆಯು ಸರಿಯಲ್ಲ. ಆ ರೀತಿಯಾಗಿ ಅಶರೀರವಾದ ವಸ್ತುವಿಗೆ ಸಂಯೋಗಾದಿ ಸಂಬಂಧ ಉಪಪನ್ನವಾದರೂ ಸಹ, ದೇಹವನ್ನು ತ್ಯಜಿಸಿದ ಪುರುಷನಿಗೆ ಕರ್ತೃತ್ವಸಂಬಂಧವು ಅನುಪಪನ್ನವಾಗುವಂತೆ

ಅಶರೀರನಾದ ಶಿವನಿಗೆ ಜಗತ್ತಿನೊಂದಿಗೆ ಕರ್ತೃತ್ವರೂಪ ಸಂಬಂಧವು ಉಪಪನ್ನ-ವಾಗುವುದಿಲ್ಲ.

ಆದ್ದರಿಂದ ಅಶರೀರನಾದ ಶಿವನಿಗೆ ಜಗತ್ಕರ್ತೃತ್ವವು ಅನುಪಪನ್ನವಾಗುವುದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 39

**ಸೂ.ರ.:– हेत्वन्तरेण पशुपतेर्जगत्कारणत्वं पराकुर्वत्सूत्रमुपन्यस्यति ॥**

**ಅನು.:–** ಮತ್ತೊಂದು ಹೇತುವಿನಿಂದಲೂ ಪಶುಪತಿಗೆ ಜಗತ್ಕಾರಣತ್ವವನ್ನು ನಿರಾಕರಿಸುವ ಸೂತ್ರವನ್ನು ಹೇಳುತ್ತಾರೆ –

**ॐ अधिष्ठानानुपपत्तेश्च ॐ (२.२.३९)**

ಅಧಿಷ್ಠಾನಾನುಪಪತ್ತೇಶ್ಚ = ಪ್ರಲಯಕಾಲದಲ್ಲಿ ಎಲ್ಲ ಪದಾರ್ಥಗಳೂ ನಷ್ಟವಾದ್ದರಿಂದ, ಪುನಃ ಸೃಷ್ಟಿಕಾಲದಲ್ಲಿ ಪಶುಪತಿಗೆ ಪೃಥಿವ್ಯಾದಿ ಆಶ್ರಯಗಳು ಅನುಪಪನ್ನವಾದ್ದರಿಂದಲೂ ಸಹ ಪಶುಪತಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ.

**ಸೂ.ರ.:– एवं च पशुपतेरधिष्ठानानुपलम्भेन कर्तृत्वायोगात् । पृथिव्याद्यधिष्ठाने स्थितस्य कुलालादेर्घटादिकार्यदर्शनेनास्य तदभावात् । सौत्रहेतुना व्यतिरेकव्याप्तेः सामान्यतः पृथिव्याद्यधिष्ठानदृष्टान्तेन दर्शितत्वात् । अतो युक्तं लक्षणसूत्रमिति सिद्धम् ।**

**ಅನು.:–** ಪೃಥಿವ್ಯಾದಿ ಅಧಿಷ್ಠಾನದಲ್ಲಿ ಇರುವಂತಹ ಕುಲಾಲಾದಿಗಳಿಂದ ಘಟಾದಿ ಕಾರ್ಯಗಳು ಕಂಡಿದ್ದರಿಂದ, ಪ್ರಕೃತ ಪಶುಪತಿಗೆ ಜಗತ್ಕರ್ತೃತ್ವವು ಉಪಪನ್ನವಾಗ-ಬೇಕಾದರೂ ಅವನಿಗೂ ಪೃಥಿವ್ಯಾದಿ ಅಧಿಷ್ಠಾನಗಳು ಬೇಕು. ಆದರೆ ಪ್ರಲಯಕಾಲದಲ್ಲಿ ಎಲ್ಲವೂ ನಷ್ಟವಾಗುವುದರಿಂದ ಪಶುಪತಿಗೆ ಅಧಿಷ್ಠಾನವು ಉಪಲಬ್ಧವಾಗುವುದಿಲ್ಲ. ಅಧಿಷ್ಠಾನವು ಉಪಲಬ್ಧವಾಗದ ಕಾರಣ ಪಶುಪತಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ.

ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 40

### ಆಕ್ಷೇಪ

**ಸೂ.ರ.:- ननु न प्रलयकाले नित्यतया विद्यमानं प्रकृत्यादिकं साक्षात्प्रयत्नाधिष्ठेयतया शरीरादिवत् । न च साक्षात्प्रयत्नाधिष्ठेयप्रेरणाय शरीरापेक्षा । शरीरप्रेरणार्थमपि शरीरान्तरापेक्षाप्रसङ्गात् । अतः शरीरादि-प्रतिनिधिसद्भावात्कर्तृत्वमुपपन्नमिति प्राप्ते सूत्रमुपन्यस्यति ।**

**ಅನು.:-** ನಿತ್ಯವಾದ್ದರಿಂದ ಪ್ರಲಯಕಾಲದಲ್ಲಿಯೂ ಇರುವಂತಹ ಪ್ರಕೃತ್ಯಾದಿಗಳು ಪಶುಪತಿಗೆ ಸಾಕ್ಷಾತ್‌ಪ್ರಯತ್ನಾಧಿಷ್ಠೇಯವಾದ್ದರಿಂದ ಶರೀರಾದಿಗಳಂತೆ ಅಲ್ಲ ಅವು. ಅಂತಹ ಸಾಕ್ಷಾತ್ ಪ್ರಯತ್ನಾಧಿಷ್ಠೇಯವಾದಂತಹ ಪ್ರಕೃತ್ಯಾದಿಗಳನ್ನು ಪ್ರೇರಿಸುವುದಕ್ಕಾಗಿ ಪಶುಪತಿಗೆ ಶರೀರಾಪೇಕ್ಷೆ ಇಲ್ಲ. ಹಾಗೊಂದುವೇಳೆ ಶರೀರಾಪೇಕ್ಷೆ ಇರುವುದಾದರೆ ಆ ಶರೀರವನ್ನು ಪ್ರೇರಿಸುವುದಕ್ಕಾಗಿ ಮತ್ತೊಂದು ಶರೀರವನ್ನು ಅಪೇಕ್ಷಿಸಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರಕೃತ್ಯಾದಿಗಳು ಸಾಕ್ಷಾತ್ ಪ್ರಯತ್ನಾಧಿಷ್ಠೇಯವಾದ್ದರಿಂದ ಶರೀರಾದಿಗಳಂತೆ ಅಲ್ಲ. ಅದನ್ನು ಪ್ರೇರಿಸುವುದಕ್ಕಾಗಿ ಪಶುಪತಿಗೆ ಶರೀರಾಪೇಕ್ಷೆ ಇಲ್ಲ.

ಹಾಗಾಗಿ ಪಶುಪತಿಗೆ ಶರೀರ ಇಲ್ಲದಿದ್ದರೂ ಸಹ ಶರೀರಪ್ರತಿನಿಧಿ ಇರುವುದರಿಂದ ಪಶುಪತಿಗೆ ಕರ್ತೃತ್ವವು ಉಪಪನ್ನವಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಆದರ ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ करणवच्चेन्न भोगादिभ्यः ॐ (२.२.४०)**

ಯತಃ = ಯಾವ ಕಾರಣ ಸಾಧನಜಾತಂ = ಪ್ರಕೃತ್ಯಾದಿಗಳು ಪಶುಪತೇಃ = ಪಶುಪತಿಗೆ ಕರಣವತ್ = ಶರೀರದಂತೆ ಶರೀರತುಲ್ಯವಾಗಿವೆ ಹಾಗೂ ಅಧಿಷ್ಠಾನತುಲ್ಯವೂ ಆಗಿವೆಯೋ ಅತಃ = ಆ ಕಾರಣ ನ ಉಕ್ತದೋಷಃ = ಹಿಂದೆ ಹೇಳಿದ ದೋಷಪ್ರಸಕ್ತಿ ಇಲ್ಲ ಇತಿ ಚೇತ್ ನ = ಎಂದು ಆಕ್ಷೇಪ ಬಂದರೆ, ಅದು ಸರಿಯಲ್ಲ.

ಕುತಃ=ಏಕೆ? ಭೋಗಾದಿಭ್ಯಃ = ಶರೀರಕೃತವಾದ ಸುಖದುಃಖಭೋಗ-ಉತ್ಪತ್ತಿ-ಮರಣಾದಿ ದೋಷಗಳು ಬರುವುದರಿಂದ.

### ಸಮಾಧಾನ

**ಸೂ.ರ.:- एवं च कारकसमूहस्य शरीरतुल्यत्वेन शरीरोपादान-**

**परित्यागाभ्यां जननमरणवत्तदुपादानपरित्यागाभ्यामपि जननमरणप्रसङ्गात् । ततश्च सुखदुःखभोगप्राप्तेः । यज्ञदत्तादेः साक्षात्प्रयत्नाधिष्ठेयविकारात्मकशरीरोपादानहानयोः सतोस्तन्निमित्तयोरुत्पत्तिविनाशयोर्दर्शनात् । अतो युक्तं लक्षणसूत्रमिति सिद्धम् ।**

**ಅನು.:–** ಯಜ್ಞದತ್ತಾದಿಗಳಿಗೆ ಸಾಕ್ಷಾತ್ ಪ್ರಯತ್ನಾಧಿಷ್ಠೇಯವಾದ ವಿಕಾರಾತ್ಮಕವಾದ ಶರೀರದ ಉಪಾದಾನ-ಹಾನಗಳು ಇದ್ದಾಗ ತನ್ನಿಮಿತ್ತವಾದ ಉತ್ಪತ್ತಿ-ವಿನಾಶಗಳು ಕಂಡಿದ್ದರಿಂದ, ಪ್ರಕೃತದಲ್ಲಿ ಪ್ರಕೃತ್ಯಾದಿ ಕಾರಕಸಮೂಹವು ಪಶುಪತಿಗೆ ಶರೀರತುಲ್ಯವಾದ್ದರಿಂದ ಶರೀರದ ಉಪಾದಾನ-ಪರಿತ್ಯಾಗಗಳಿಂದ ಜನನ-ಮರಣಗಳು ಆಗುವಂತೆ ಶರೀರತುಲ್ಯವಾದ ಪ್ರಕೃತ್ಯಾದಿಗಳ ಉಪಾದಾನ-ಪರಿತ್ಯಾಗಗಳಿಂದಲೂ ಸಹ ಪಶುಪತಿಗೆ ಜನನ-ಮರಣಗಳು ಬರಬೇಕಾದ ಅತಿಪ್ರಸಂಗ ಬರುತ್ತದೆ.

ಅಂತೆಯೇ ಸುಖ-ದುಃಖಗಳ ಭೋಗವು ಪ್ರಾಪ್ತವಾಗಬೇಕಾಗುತ್ತದೆ. ಆದ್ದರಿಂದ ಪಶುಪತಿಗೆ ಜಗತ್ಕಾರಣತ್ವವು ಉಪಪನ್ನವಾಗದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 41

**ಸೂ.ರ.:– सम्बन्धानुपपत्तेः, करणवच्च, इत्याभ्यामुक्तशरीरभावाभावपक्षावेव विकल्पभंग्या दोषान्तरेण दूषयत्सूत्रं पठित्वा व्याचष्टे ।**

"ಸಂಬಂಧಾನುಪಪತ್ತೇಃ" "ಕರಣವಚ್ಚ" ಎಂಬ ಸೂತ್ರಗಳಿಂದ ಹೇಳಿದ ಶರೀರಭಾವ ಶರೀರಾಭಾವ ಪಕ್ಷಗಳನ್ನೇ ವಿಕಲ್ಪಭಂಗಿಯಿಂದ ಬೇರೆ ದೋಷಗಳಿಂದ ದೂಷಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಾರೆ –

**ॐ अन्तवत्वमसर्वज्ञता वा ॐ (२.२.४१)**

ಯತಃ =ಯಾವ ಕಾರಣ ಶಿವಸ್ಯ ದೇಹಿತ್ವತದಭಾವಪಕ್ಷಯೋಃ = ಪಶುಪತಿಗೆ ದೇಹ ಇದೆ ಹಾಗೂ ದೇಹ ಇಲ್ಲ ಎಂಬ ಪಕ್ಷಗಳಲ್ಲಿ ಕ್ರಮೇಣ = ಕ್ರಮವಾಗಿ ಅಂತವತ್ವಂ = ನಾಶವತ್ವ ದೋಷವು, ಅಸರ್ವಜ್ಞತಾ ವಾ=ಸರ್ವಜ್ಞತ್ವ ಇಲ್ಲದೇ ಹೋಗಬೇಕಾದ ದೋಷ ಬರುತ್ತದೆಯೋ ಅತಃ = ಆದ್ದರಿಂದ ನ ತತ್ ಯುಕ್ತಮ್ = ಪಾಶುಪತಮತವು ಯುಕ್ತವಲ್ಲ

**ಸೂ.ರ.:–** एवं च पशुपतेर्जगत्कर्तृत्वाङ्गीकारे तस्य शरीरवत्त्वपक्षे विनाशप्रसङ्गः तदभावे तु ज्ञानाभावः । न चैते दोषा विष्णुपक्षेऽपि । बुद्धिमान्मनोवानित्यादिश्रुत्या ज्ञानाभावस्य परिहृतत्वात् । यदात्मको भगवानि(एकायनश्रुतिः)त्यादिनाऽन्तवत्त्वादिदोषाणां निरस्तत्वात् । तत्र भगवद्देहस्य तत्स्वरूपत्वज्ञानाद्यात्मकत्वेनोक्तत्वात् । अनयैव दिशा शाक्तेयसौरस्कान्दगाणपत्यानां समया निराकृता वेदितव्याः । अतः पाशुपतसमयस्यानुपपन्नत्वेनाविरोधकत्वाद्युक्तं लक्षणसूत्रमिति सिद्धम् ।

**ಅನು.:–** ಪಶುಪತಿಗೆ ಜಗತ್ಕರ್ತೃತ್ವವನ್ನು ಅಂಗೀಕರಿಸುವುದಾದರೆ, ಅವನಿಗೆ ಶರೀರವನ್ನು ಒಪ್ಪುತ್ತೀರೋ? ಇಲ್ಲವೋ?

ಪಶುಪತಿಗೆ ಶರೀರವನ್ನು ಅಂಗೀಕರಿಸುವುದಾದರೆ, ವಿನಾಶಪ್ರಸಂಗ ಬರುತ್ತದೆ. ಶರೀರ ಇಲ್ಲ ಎನ್ನುವುದಾದರೆ ಜ್ಞಾನ ಇಲ್ಲದೇ ಹೋಗಬೇಕಾಗುತ್ತದೆ. ಆದ್ದರಿಂದ ಶರೀರ ಇದೆ, ಇಲ್ಲ ಎಂಬ ಎರಡು ಪಕ್ಷಗಳೂ ಸಮಂಜಸವಲ್ಲ.

ಹೌದು, ಈ ದೋಷಗಳು ವಿಷ್ಣುಪಕ್ಷದಲ್ಲಿಯೂ ಬಂದೇ ಬರುತ್ತವೆಯಲ್ಲವೇ? ಅರ್ಥಾತ್ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಿದಾಗ ವಿಷ್ಣುವಿಗೆ ಶರೀರವನ್ನು ಒಪ್ಪುತ್ತೀರೋ? ಇಲ್ಲವೋ? ಶರೀರ ಇದೆ ಎಂದರೆ ವಿನಾಶಪ್ರಸಂಗ, ಶರೀರ ಇಲ್ಲ ಎನ್ನುವುದಾದರೆ ಜ್ಞಾನಾ-ಭಾವಪ್ರಸಂಗ, ಹೀಗೆ ಸಮಾನವಲ್ಲವೇ? ಎಂದರೆ, ಅದು ಸರಿಯಲ್ಲ.

**ಬುದ್ಧಿಮನೋಽಂಗಪ್ರತ್ಯಂಗವತ್ತಾಂ ಭಗವತೋ ಲಕ್ಷಯಾಮಹೇ ।**
**ಬುದ್ಧಿಮಾನ್ ಮನೋವಾನ್ ಅಂಗಪ್ರತ್ಯಂಗವಾನ್ ॥**

ಇತ್ಯಾದಿ ಶ್ರುತಿಯಿಂದ ವಿಷ್ಣುವಿಗೆ ಜ್ಞಾನಾಭಾವವನ್ನು ಪರಿಹರಿಸಲಾಗಿದೆ ಅರ್ಥಾತ್ ಜ್ಞಾನವಂತನಾಗಿದ್ದಾನೆ ಎಂದು ಸಮರ್ಥಿಸಲಾಗಿದೆ. ಮತ್ತು

**ಯದಾತ್ಮಕೋ ಭಗವಾಂಸ್ತದಾತ್ಮಿಕೀ ವ್ಯಕ್ತಿಃ ।**
**ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕ ಐಶ್ವರ್ಯಾತ್ಮಕಃ ಶಕ್ತ್ಯಾತ್ಮಕಃ ॥**

ಇತ್ಯಾದಿ ಶ್ರುತಿಯಿಂದ ವಿಷ್ಣುವಿಗೆ ಶರೀರ ಇದ್ದರೂ ಅಂತವತ್ತ್ವಾದಿ ಪ್ರಸಂಗಗಳನ್ನು (ವಿನಾಶಾದಿ ದೋಷಗಳನ್ನು) ಪರಿಹರಿಸಲಾಗಿದೆ. ಅಂದರೆ – ವಿಷ್ಣುವಿಗೆ ಶರೀರವನ್ನು

ಅಂಗೀಕರಿಸಿದರೂ ಆ ಭಗವದ್ದೇಹವು ಭಗವಂತನ ಸ್ವರೂಪಭೂತವಾಗಿದೆ, ಜ್ಞಾನಾದ್ಯಾತ್ಮಕವಾಗಿದೆ ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ಅಂತವತ್ತ್ವದೋಷವಾಗಲೀ ಜ್ಞಾನಾಭಾವದೋಷವಾಗಲೀ ವಿಷ್ಣುಪಕ್ಷದಲ್ಲಿ ಬರುವುದಿಲ್ಲ. ಹೀಗಾಗಿ ಪಶುಪತಿಗೆ ಜಗತ್ಕರ್ತೃತ್ವವನ್ನು ಹೇಳುವುದು ಸಮಂಜಸವಾಗುವುದಿಲ್ಲ.

ಇದೇ ಪ್ರಕಾರವಾಗಿ ಶಾಕ್ತೇಯ-ಸೌರ-ಸ್ಕಾಂದ-ಗಾಣಪತ್ಯರ ಸಮಯಗಳು ನಿರಾಕೃತವಾದದ್ದನ್ನಾಗಿ ತಿಳಿಯಬೇಕು.

ಆದ್ದರಿಂದ ಪಾಶುಪತಸಮಯವು ಅನುಪಪನ್ನವಾದ್ದರಿಂದ ವಿಷ್ಣುವಿನ ಜಗತ್ಕರ್ತೃತ್ವಕ್ಕೆ ವಿರೋಧಕವಾಗದ ಕಾರಣ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಪತ್ಯುರಧಿಕರಣವು ಮುಗಿಯಿತು.

*ಅಧಿಕರಣ – 12*

# ಉತ್ಪತ್ತ್ಯಧಿಕರಣ

## ಸಂಗತಿ

**ಸೂ.ರ.:– अत्र शक्तिपक्षो दूष्यते ।**

**ಅಸು.:–** ಶಕ್ತಿಯೇ ಜಗತ್ಕಾರಣ ಎಂದು ಹೇಳುವ ಶಾಕ್ತೇಯರ ಸಮಯವನ್ನು ನಿರಾಕರಿಸುತ್ತಾರೆ ಈ ಹನ್ನೆರಡನೇ ಉತ್ಪತ್ತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** ननु न विष्णोर्जगत्कारणत्वं युक्तम् । शाक्तेयमत-विरुद्धत्वात् । शक्तिरेव खलु सार्वज्ञ्यादिगुणशालिनी सकलजगज्जननी श्रुतिस्मृतीतिहासपुराणेषु पठ्यते । अतो हरेर्न लक्षणसूत्रं युक्तमिति प्राप्ते सूत्रमुपन्यस्यति ॥

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಕಾರಣ ಅದು ಶಾಕ್ತೇಯಮತಕ್ಕೆ ವಿರುದ್ಧವಾಗುತ್ತದೆ. ಏಕೆಂದರೆ - ಶಕ್ತಿಯೇ ಸಾರ್ವಜ್ಞ್ಯಾದಿ ಗುಣಶಾಲಿಯಾದದ್ದು ಮತ್ತು ಸಕಲಜಗತ್ತಿಗೆ ಜನಕವಾದದ್ದು. ಶ್ರುತಿ-ಸ್ಮೃತಿ- ಇತಿಹಾಸ-ಪುರಾಣಗಳಲ್ಲಿ ಶಕ್ತಿಯೇ ಜಗತ್ಕಾರಣ ಎಂಬುದಾಗಿ ಪಠಿತವಾಗುತ್ತಿದೆ. ಆದ್ದರಿಂದ ಶಕ್ತಿಯೇ ಜಗತ್ಕಾರಣವಾಗಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತವನ್ನು ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ उत्पत्त्यसम्भवात् ॐ (२.२.४२)**

ಶಕ್ತಿಯು ಜಗತ್ಕಾರಣವಾಗಲು ಸಾಧ್ಯವಿಲ್ಲ. ಕುತಃ = ಏಕೆ? ಉತ್ಪತ್ತ್ಯಸಂಭವಾತ್ = ಶಕ್ತಿಶಬ್ದವಾಚ್ಯರಾದ ಕೇವಲ ಸ್ತ್ರೀಯರಿಂದ ಅಪತ್ಯೋತ್ಪತ್ತಿಯು ಕೂಡುವುದಿಲ್ಲವಾದ್ದರಿಂದ.

ಸಿದ್ಧಾಂತ

**ಸೂ.ರ.:– एवं च महावामानां मते यदुच्यते शक्तिरेव पुरुषाननुगृहीतजगत्कारणमिति न तद्युक्तम् । शक्तिरेव पुरुषाननुगृहीता जगत्कारणमित्यस्यार्थस्य प्रमाणादृष्टत्वात् । केवलायास्तस्या जगत्कर्तृत्वासम्भवात् । परोदाहृतानामजामेकामि(तै.आ.१०-१०-१)त्यादिप्रमाणानां त्वीश्वराधीनतयैव जगत्कारणत्वाभिधायित्वेनातत्परत्वात् । ततश्च महावामानां मतमप्रमाणमिति युक्तं जगत्कारणत्वलक्षणमिति सिद्धम् ।**

**ಅನು.:–** ಮಹಾವಾಮರ ಮತದಲ್ಲಿ ಏನು ಹೇಳುತ್ತಾರೆ - ''ಶಕ್ತಿಯೇ ಪುರುಷ ಅನನುಗೃಹೀತವಾಗಿ ಜಗತ್ಕಾರಣವಾಗುತ್ತದೆ'' ಎಂದು. ಅದು ಸರಿಯಲ್ಲ. ಪುರುಷ ಅನನು-ಗೃಹೀತವಾಗಿ ಶಕ್ತಿಯೇ ಜಗತ್ಕಾರಣವಾಗುತ್ತದೆ ಎಂಬ ವಿಷಯವು ಯಾವ ಪ್ರಮಾಣ-ಸಿದ್ಧವಾಗಿಲ್ಲ. ಕೇವಲ ಶಕ್ತಿಗೆ (ಪುರುಷ ಅನನುಗೃಹೀತವಾದ (ಶಕ್ತಿಗೆ) ಸ್ತ್ರೀಗೆ) ಜಗತ್ಕರ್ತೃತ್ವವು ಸಂಭಾವಿತವೂ ಆಗಲಾರದು.

ಶಕ್ತಿಯು ಜಗತ್ಕಾರಣ ಎಂಬ ವಿಷಯದಲ್ಲಿ ಅಜಾಮೇಕಾಮ್ (ತೈ.ಆ. 10-10-1) ಎಂಬ ಶ್ರುತಿಯೇ ಪ್ರಮಾಣವಾಗಿದೆಯಲ್ಲ? ಎಂದರೆ, ಅದು ಸರಿಯಲ್ಲ. ಈ ಶ್ರುತಿಯು ಶಕ್ತಿಯು ಈಶ್ವರಾಧೀನವಾಗಿಯೇ ಜಗತ್ಕಾರಣವಾಗಿದೆ ಎಂದು ತಿಳಿಸುತ್ತಿದೆಯೇ ಹೊರತು ಶಕ್ತಿಗೆ ಸ್ವಾತಂತ್ರ್ಯೇಣ ಜಗತ್ಕಾರಣತ್ವವನ್ನು ಹೇಳುವುದಿಲ್ಲ.

ಆದ್ದರಿಂದ ಮಹಾವಾಮನರ ಮತವು ಅಪ್ರಾಮಾಣಿಕವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 43

**ಆಕ್ಷೇಪ**

**ಸೂ.ರ.:– ननु सार्वज्ञ्यादिगुणाविधुरः सदाशिवः शक्त्यनुग्राहकोऽस्ति । तदनुगृहीतायाः शक्तेः जगत्कारणत्वेऽजामेकामि(तै.आ. १०-१०-१)त्यादिश्रुतेः प्रमाणत्वात् । सदाशिवानुगृहीतशक्तेः जगत्कारणत्वमिति वदतां मध्यमवामानां मतं निराकुर्वत्सूत्रमुपन्यस्यति ॥**

**ಅನು.:–** ಸಾರ್ವಜ್ಞ್ಯಾದಿಗುಣವಿಶಿಷ್ಟವಾದ ಸದಾಶಿವನು ಶಕ್ತಿಗೆ ಅನುಗ್ರಾಹಕನಾಗಿ ಇದ್ದಾನೆ, ಅಂದಮೇಲೆ ಶಕ್ತಿಯು ಸ್ವತಂತ್ರವಾಗಿ ಜಗತ್ಕಾರಣವಾಗದೇ ಹೋದರೂ ಸಹ, ಸರ್ವಜ್ಞನಾದ ಸದಾಶಿವನಿಂದ ಅನುಗೃಹೀತವಾದ ಶಕ್ತಿಯು ಜಗತ್ಕಾರಣವಾಗಬಹುದು. ಹೀಗಾಗಿ ಸದಾಶಿವನಿಂದ ಅನುಗೃಹೀತವಾದ ಶಕ್ತಿಗೆ ಜಗತ್ಕಾರಣತ್ವ ಇದೆ ಎಂಬ ವಿಷಯದಲ್ಲಿ "ಅಜಾಮೇಕಾಂ" (ತೈ.ಆ.10-10-1) ಎಂಬ ಶ್ರುತಿಗೆ ಪ್ರಾಮಾಣ್ಯ ಕೂಡುತ್ತದೆ.

ಈ ರೀತಿಯಾಗಿ ಸದಾಶಿವನಿಂದ ಅನುಗೃಹೀತವಾದ ಶಕ್ತಿಗೆ ಜಗತ್ಕಾರಣತ್ವವನ್ನು ಹೇಳುವ ಮಧ್ಯಮವಾಮರ ಮತವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ न च कर्तुः करणम् ॐ (२.२.४३)**

ಯತಃ = ಯಾವ ಕಾರಣ ಕರ್ತುಃ ಚ = ಶಕ್ತಿಗೆ ಅನುಗ್ರಾಹಕನಾದ ಸದಾಶಿವನಿಗೂ ಸಹ ಕರಣಂ = ಜ್ಞಾನಾದಿಸಾಧನವು ನ = ಇಲ್ಲವೋ ಅತಃ = ಆ ಕಾರಣ ನ ತಸ್ಯ ಶಕ್ತ್ಯನುಗ್ರಾಹಕತ್ವಂ = ಸದಾಶಿವನಿಗೂ ಸಹ ಶಕ್ತ್ಯನುಗ್ರಾಹಕತ್ವ ಇಲ್ಲ.

**ಸೂ.ರ.:– एवं च सदाशिवस्य सार्वज्ञ्यादिवैधुर्येणानुग्राहकत्वायोगात् । उत्पत्त्युपयोगिज्ञानादेस्तत्साधनेंद्रियादेस्तत्कारणशरीरस्य चाभावेनात एव पुरुपानुगृहीतशक्तेरपि जगदुत्पत्त्यसम्भवात् । अतो मध्यमवामानां मतस्याप्रामाणिकत्वेन युक्तं जगत्कारणत्वलक्षणमिति सिद्धम् ।**

**ಅನು.:–** ಸದಾಶಿವನಲ್ಲಿ ಸಾರ್ವಜ್ಞ್ಯಾದಿಗುಣಗಳು ಇಲ್ಲವಾದ್ದರಿಂದ ಅವನು ಶಕ್ತಿಗೆ ಅನುಗ್ರಾಹಕನಾಗಲು ಸಾಧ್ಯವಿಲ್ಲ. ಜಗತ್ತಿನ ಉತ್ಪತ್ತಿಗೆ ಉಪಯೋಗಿಯಾದ ಜ್ಞಾನಾದಿಗಳು, ಅದಕ್ಕೆ ಸಾಧನವಾದ ಇಂದ್ರಿಯಾದಿಗಳು, ಅದಕ್ಕೆ ಕಾರಣವಾದ ಶರೀರವು ಇದಾವುದೂ ಸದಾಶಿವನಿಗೆ ಇಲ್ಲವಾದ್ದರಿಂದ ಅವನು ಅನುಗ್ರಾಹಕನಾಗಲಾರ. ಅವನು ಅನುಗ್ರಾಹಕ ಆಗದ ಕಾರಣ ಅವನಿಂದ ಅನುಗೃಹೀತವಾದ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯೂ ಸಂಭಾವಿತವಲ್ಲ.

ಆದ್ದರಿಂದ ಸದಾಶಿವನಿಂದ ಅನುಗೃಹೀತವಾದ ಶಕ್ತಿಗೆ ಜಗತ್ಕಾರಣತ್ವವನ್ನು ಹೇಳುವ ಮಧ್ಯಮವಾಮರ ಮತವು ಅಪ್ರಾಮಾಣಿಕವಾದ್ದರಿಂದ, ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 44

## ಆಕ್ಷೇಪ

**ಸೂ.ರ.:– ननु शक्त्यनुग्राहकपुरुषभावाच्छक्तेर्जगदुत्पत्तिर्युक्तेत्येव नोच्यते । किंतु तस्य पुंसः सार्वज्ञ्यादेरपि सद्भावेन युक्ततरा शक्तेर्जगदुत्पत्तिरितीत्यङ्गीकुर्वतामणुवामानां मतनिरासाय सूत्रमुपन्यस्यति ।**

**ಅನು.:–** ಕೇವಲ ಶಕ್ತಿಗೆ ಅನುಗ್ರಾಹಕನಾದ ಪುರುಷ ಇರುವುದರಿಂದಾಗಿ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯು ಯುಕ್ತವಾಗಿದೆ ಎಂದಷ್ಟೇ ಹೇಳುವುದಿಲ್ಲ. ಕಿಂತು ಶಕ್ತಿಗೆ ಅನುಗ್ರಾಹಕನಾದ ಆ ಪುರುಷನಿಗೆ (ಸದಾಶಿವನಿಗೆ) ಸಾರ್ವಜ್ಞ್ಯಾದಿಗುಣಗಳೂ ಅಂಗೀಕೃತವಾದ್ದರಿಂದ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯು ಅತ್ಯಂತ ಯುಕ್ತತರವೇ ಆಗಿದೆ ಎಂಬುದಾಗಿ ಹೇಳುವ ಅಣುವಾಮರ ಮತವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ विज्ञानादिभावे वा तदप्रतिषेधः ॐ (२.२.४४)

ವಿಜ್ಞಾನಾದಿಭಾವೇ ವಾ = ಸದಾಶಿವನಿಗೆ ಜ್ಞಾನೇಚ್ಛಾದಿಗಳು ಇವೆ (ಸಾರ್ವಜ್ಞ್ಯಾದಿಗುಣಗಳು ಇವೆ) ಎಂದು ಅಂಗೀಕರಿಸುವುದಾದರೆ ತದಪ್ರತಿಷೇಧಃ = ಆ ಶೈವಪಕ್ಷದ ಅನಿಷೇಧವು (ಅನಿರಾಸವು) ಆಗಬೇಕಾಗಿತ್ತು. ಅರ್ಥಾತ್ ಆ ಶೈವಪಕ್ಷವು ಅಂಗೀಕೃತವಾಗಬೇಕಾಗಿತ್ತು. ಆದರೆ ಈಗಲಾದರೂ ಶೈವಪಕ್ಷವು ನಿರಾಕರಿಸಲ್ಪಟ್ಟಿದೆಯೇ ಹೊರತು ಅಂಗೀಕೃತವಾಗಿಲ್ಲ.

**ಸೂ.ರ.:– एवं च यदि शक्त्यनुग्रहकर्तुर्जगदुत्पत्त्युपयोगिविज्ञान-शरीरेन्द्रियसत्त्वमङ्गीक्रियते तत एव शक्त्यनुग्रहकर्तुः शिवादेः कर्त्रन्तर-मनपेक्ष्यैव जगदुत्पत्त्यादिसम्भवात् तदा शक्तिमतस्य पाशुपतमतैक्येन तस्य च निरस्तत्वात् पुनर्निरसने कारणाभावात् । अतोऽणुवामानां मतम-प्रमाणमिति जगत्कारणत्वलक्षणं युक्तमिति सिद्धम् ।**

**ಅನು.:–** ಒಂದುವೇಳೆ ಶಕ್ತಿಗೆ ಅನುಗ್ರಾಹಕನಾದ ಸದಾಶಿವನಿಗೆ ಜಗತ್ತಿನ ಉತ್ಪತ್ತಿಗೆ ಉಪಯೋಗಿಯಾದ ವಿಜ್ಞಾನ-ಶರೀರ-ಇಂದ್ರಿಯಗಳು ಇವೆ ಎಂದು ಅಂಗೀಕರಿಸುವುದೇ ಆದರೆ ಆಗ ಅಂತಹ ಶಕ್ತಿಗೆ ಅನುಗ್ರಾಹಕನಾದ ಶಿವನಿಂದಲೇ (ಶಕ್ತಿಯ ಅಪೇಕ್ಷೆ ಇಲ್ಲದೇ) ಜಗತ್ತಿನ ಉತ್ಪತ್ತ್ಯಾದಿಗಳು ಸಂಭಾವಿತವಾಗಬಹುದಾದ್ದರಿಂದ ಶಿವನಿಗೇ ಜಗತ್ಕಾರಣತ್ವವನ್ನು ಅಂಗೀಕರಿಸುವುದು ಉಚಿತವಾಗುವುದು.

ಹಾಗೆ ಶಿವನಿಗೇ ಜಗತ್ಕಾರಣತ್ವವನ್ನು ಅಂಗೀಕರಿಸಿದರೆ ಪಾಶುಪತಮತದಿಂದ ಐಕ್ಯ ಬರುತ್ತದೆ. ಆದರೆ ಆ ಪಾಶುಪತಮತವು ಈ ಹಿಂದೆಯೇ ನಿರಾಕೃತವಾದ್ದರಿಂದ ಈ ಶಾಕ್ತೇಯಮತವನ್ನು ಮತ್ತೆ ನಿರಾಕರಿಸುವುದಕ್ಕೆ ಕಾರಣ ಇಲ್ಲ.

ಆದ್ದರಿಂದ ಅಣುವಾಮರ ಮತವೂ ಅಪ್ರಾಮಾಣಿಕವಾದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ ಲಕ್ಷಣವನ್ನು ಹೇಳಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 45

**ಸೂ.ರ.:– एवं शाक्तेयमतत्रयं पृथङ्निराकृत्य समुदितदूषणेनापि पराकुर्वत्सूत्रमुपन्यस्यति ।**

**ಅನು.:–** ಈ ರೀತಿಯಾಗಿ ಮೂರುವಿಧವಾದ ಶಾಕ್ತೇಯಮತವನ್ನು ಪ್ರತ್ಯೇಕ ಪ್ರತ್ಯೇಕವಾಗಿ ನಿರಾಕರಿಸಿ ಸಮುದಿತದೋಷದಿಂದಲೂ ಸಹ ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ विप्रतिषेधाच्च ॐ (२.२.४५)**

ವಿಪ್ರತಿಷೇಧಾಚ್ಚ = ಸಕಲಶ್ರುತಿ-ಸ್ಮೃತಿವಿರುದ್ಧವಾದದ್ದರಿಂದಲೂ ಸಹ ಶಾಕ್ತೇಯ ಮತವು ಅಸಮಂಜಸವಾಗಿದೆ (ಅಯುಕ್ತವಾಗಿದೆ).

ಸೂ.ರ.:– एवं च 'नर्ते' (ऋ.१०-११३-९) 'एको नारायण' (महोपनिषत्) इत्यादिश्रुतीनाम्। 'स एव' (भाग.१-१०-२३) इत्यादिस्मृतीनाम्। पूर्वोक्तहेतूनां च विरोधेन शिष्टजनैर्जुगुप्सितत्वात्। सर्वमपि शाक्तेयमतमयुक्तमेवेति युक्तं विष्णोर्जगज्जन्मादिकारणत्वलक्षणमिति सिद्धम्।

**ಅನು.:–** "ನರ್ತೇ ತ್ವತ್ಕ್ರಿಯತೇ ಕಿಂಚನಾರೇ" (ಋ.10-113-9), "ಏಕೋ ನಾರಾಯಣ ಆಸೀತ್" (ಮಹೋಪನಿಷತ್) ಇತ್ಯಾದಿ ಶ್ರುತಿಗಳ ಮತ್ತು ಸ ಏವ (ಭಾಗ 1-10-23) ಇತ್ಯಾದಿ ಸ್ಮೃತಿಗಳ ಹಾಗೂ ಹಿಂದೆ ಹೇಳಿದ ಹೇತುಗಳ ವಿರೋಧವೂ ಬರುವುದರಿಂದ ಶಿಷ್ಟಜನರಿಂದ ಜುಗುಪ್ಸಿತವಾದ್ದರಿಂದ ಎಲ್ಲವಿಧವಾದ ಶಾಕ್ತೇಯಮತವು (ಮೂರುವಿಧವಾದ ಶಾಕ್ತೇಯಮತವು) ಅಯುಕ್ತವೇ ಆಗಿದೆ.

ಆದ್ದರಿಂದ ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವನ್ನು ಹೇಳಿದ್ದು ಅತ್ಯಂತ ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಉತ್ಪತ್ತ್ಯಧಿಕರಣವು ಮುಗಿಯಿತು.

# द्वितीयाऽध्यायः

## तृतीयः पादः

*ಅಧಿಕರಣ - 1*

## ವಿಯದಧಿಕರಣ

### ಪಾದಸಂಗತಿ

**ಸೂ.ರ.:– जीवपरमात्माधिभूताधिदैवेषु श्रुतीनां परस्परविरोधमपाकरोत्यस्मिन्पादे ॥**

**ಅನು.:–** ಜೀವ-ಪರಮಾತ್ಮ-ಅಧಿಭೂತ-ಅಧಿದೈವವಿಷಯಕವಾದ ಶ್ರುತಿಗಳಲ್ಲಿ ಪರಸ್ಪರ ವಿರೋಧವನ್ನು ಪರಿಹರಿಸುತ್ತಾರೆ ಈ ಮೂರನೇ ಪಾದದಲ್ಲಿ.

### ಅಧಿಕರಣ ಸಂಗತಿ

**ಸೂ.ರ.:– अत्र वियदुत्पत्तिविषयश्रुतिविरोधः परिह्रियते ।**

**ಅನು.:–** ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಹೇಳುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಈ ಮೊದಲನೇ ವಿಯದಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न विष्णोर्जगत्कारणत्वं युक्तम् । अनादिर्वाऽयमाकाश इति श्रुतेः । आकाशस्यानादित्वेनाकाशकारणत्वाभावात् । न चात्मन आकाशः सम्भूत इति (तै.२-१) श्रुत्याऽऽत्मन आकाशकारणत्वमुपपद्यते । अनुभूतियुक्तिवहुवाग्विरुद्धत्वेन तस्याः श्रुतेरप्रामाण्यात् । न च सम्भूतश्रुतेरर्थान्तरपरत्वेनाप्रामाण्याभावः । वाय्वादावप्यन्यार्थतापातात् । न हि यत्र शब्दः श्रूयते तत्रामुख्यो यात्राकृष्यते**

**तत्र मुख्य इति सम्भवः । तस्मादाकाशश्रुतेरप्रामाण्यादयुक्तं श्रुतिसमन्वयेनाकाशकारणत्वं ब्रह्मण इति प्राप्ते सूत्रमाह ।**

**ಅನು.:–** ಲಕ್ಷಣಸೂತ್ರದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವಲ್ಲ. ಏಕೆಂದರೆ – 'ಅನಾದಿರ್ವಾऽಯಮಾಕಾಶಃ' ಎಂಬುದಾಗಿ ಶ್ರುತಿ ಇರುವುದರಿಂದ ಆಕಾಶವು ಅನಾದಿಯಾಗಿದೆ. ಆಕಾಶವು ಅನಾದಿಯಾದ್ದರಿಂದ (ಆಕಾಶಕ್ಕೆ ಉತ್ಪತ್ತಿ ಇಲ್ಲದ ಕಾರಣ) ವಿಷ್ಣುವಿಗೆ ಆಕಾಶಕಾರಣತ್ವವು ಉಪಪನ್ನವಾಗುವುದಿಲ್ಲ.

''ಆತ್ಮನ ಆಕಾಶಃ ಸಂಭೂತಃ'' (ತೈ. 2-1) ಎಂಬುದಾಗಿ ಶ್ರುತಿ ಇರುವುದರಿಂದ (ಆತ್ಮನಿಂದ ಆಕಾಶದ ಉತ್ಪತ್ತಿಯು ಶ್ರುತವಾಗುತ್ತಿರುವುದರಿಂದ) ಆತ್ಮನಿಗೆ ಆಕಾಶಕಾರಣತ್ವವು ಉಪಪನ್ನವಾಗುತ್ತದೆಯಲ್ಲವೇ? ಎಂದರೆ, ಅದು ತಪ್ಪು. ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಈ ತೈತ್ತಿರೀಯಶ್ರುತಿಯು ಅನುಭೂತಿ-ಯುಕ್ತಿ-ಬಹುವಾಕ್ ವಿರುದ್ಧವಾದ್ದರಿಂದ ಪ್ರಮಾಣವಾಗಿಲ್ಲ.

(ಆಕಾಶಕ್ಕೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಅನುಭವವಿರೋಧ – ಯುಕ್ತಿವಿರೋಧ ಬಹುಶ್ರುತಿವಿರೋಧಗಳು ಬರುತ್ತವೆ. ಹೇಗೆಂದರೆ –

ಆಕಾಶ ಎಂದರೆ ಅವಕಾಶ. ಅವಕಾಶದ ಉತ್ಪತ್ತಿಯು ಅನುಭವಕ್ಕೆ ಅನುಸಾರಿಯಾಗಿಲ್ಲ. ಹೀಗಾಗಿ ಅವಕಾವಕ್ಕೆ (ಆಕಾಶಕ್ಕೆ) ಉತ್ಪತ್ತಿಯನ್ನು ಹೇಳಿದರೆ ಅನುಭವವಿರೋಧ ಬರುತ್ತದೆ. ಮತ್ತು ಅವಕಾಶಕ್ಕೆ ಉತ್ಪತ್ತಿಯನ್ನು ಹೇಳಿದರೆ – ''ವಿಯತ್ ಅನುತ್ಪತ್ತಿಮತ್ ವಿಭುತ್ವಾತ್'' ಇತ್ಯಾದಿ ಯುಕ್ತಿವಿರೋಧವೂ ಬರುತ್ತದೆ. ಹಾಗೂ ಅವಕಾಶಕ್ಕೆ ಅನಾದಿತ್ವವನ್ನು ಹೇಳುವ 'ಅನಾದಿರ್ವಾऽಯಮಾಕಾಶಃ' ಇತ್ಯಾದಿ ಶ್ರುತಿಗಳ ವಿರೋಧವೂ ಬರುತ್ತದೆ. ಈ ರೀತಿಯಾಗಿ ಅನುಭವವಿರೋಧ – ಯುಕ್ತಿವಿರೋಧ – ಶ್ರುತಿವಿರೋಧಗಳು ಬರುವುದರಿಂದ 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯು ಅಪ್ರಮಾಣವಾಗಿದೆ ಎಂದು ಭಾವ.)

'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯು ಅನ್ಯಾರ್ಥಪರವಾಗಿದೆ. ಅಂದರೆ ಆಕಾಶವು ಸಂಭೂತವಾಯಿತು ಎಂದರೆ ಉತ್ಪನ್ನವಾಯಿತು ಎಂದರ್ಥವಲ್ಲ. ಕಿಂತು ಅಭಿವ್ಯಕ್ತವಾಯಿತು ಎಂದು ಅರ್ಥ. ಅವಕಾಶಕ್ಕೆ ಉತ್ಪತ್ತಿಯು ಸಂಭಾವಿತವಾಗದಿದ್ದರೂ ಸಹ ಅಭಿವ್ಯಕ್ತಿಯು ಸಂಭಾವಿತವೇ ಆಗಿದೆ. ಆದ್ದರಿಂದ ಸಂಭೂತಶ್ರುತಿಯು ಅನ್ಯಾರ್ಥಪರವಾದ್ದರಿಂದ ಅಪ್ರಮಾಣವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ಹಾಗೆ ಸಂಭವಶಬ್ದಕ್ಕೆ ಅಭಿವ್ಯಕ್ತಿ ಎಂದು ಅರ್ಥ ಹೇಳುವುದಾದರೆ ''ಆಕಾಶಾತ್ ವಾಯುಃ'' ''ವಾಯೋಃ ಅಗ್ನಿಃ'' ಇತ್ಯಾದಿ ಶ್ರುತಿಗಳಲ್ಲಿ ವಾಯು-ಅಗ್ನ್ಯಾದಿಗಳಿಗೂ ಸಹ

ಉತ್ಪತ್ತಿ ಹೇಳದೇ ಅಭಿವ್ಯಕ್ತಿಯನ್ನೇ ಹೇಳಬೇಕಾದ ಪ್ರಸಂಗ ಬರುತ್ತದೆ. ಸಂಭವಶಬ್ದವು ಎಲ್ಲಿ ಶ್ರುತವಾಗುತ್ತದೆ ಅಲ್ಲಿ ಅದು ಅಮುಖ್ಯ, ಇನ್ನು ಎಲ್ಲಿ ಆಕೃಷ್ಟವಾಗುತ್ತದೆಯೋ ಅಲ್ಲಿ ಮುಖ್ಯ ಎಂದು ಹೇಳಲು ಬರುವುದಿಲ್ಲ.

ಆದ್ದರಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಅಪ್ರಮಾಣವಾದ್ದರಿಂದ, ಶ್ರುತಿಸಮನ್ವಯಮೂಲಕವಾಗಿ ವಿಷ್ಣುವಿಗೆ ಆಕಾಶಕಾರಣತ್ವವನ್ನು ಹೇಳಿದ್ದು ಅಯುಕ್ತವಾಗಿದೆ.

ಈ ರೀತಿಯಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದ-ಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ न वियदश्रुतेः ॐ (२.३.१)

ವಿಯತ್ = ಆಕಾಶವು ನ ಅನುತ್ಪತ್ತಿಮತ್ = ಉತ್ಪತ್ತಿಯುಳ್ಳದ್ದಲ್ಲ (ಅನಾದಿಯಾಗಿದೆ) ಎಂದಲ್ಲ. ಕಿಂತು ಈಶತ್ ಉತ್ಪತ್ತಿಮದೇವ = ಕಿಂತು ಈಶ್ವರನಿಂದ ಉತ್ಪತ್ತಿ ಉಳ್ಳದ್ದೇ ಆಗಿದೆ. ಕುತಃ = ಏಕೆ? ಅಶ್ರುತೇಃ = ಆಕಾಶವು ಅನಾದಿಯಾಗಿದೆ ಎಂಬ ವಿಷಯದಲ್ಲಿ ಯಾವ ಶ್ರುತಿಯೂ ಇಲ್ಲವಾದ್ದರಿಂದ.

### ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । आकाशानुत्पत्तौ श्रुत्यभावादाकाशस्याप्युत्पत्तिमत्त्वेनाकाशकारणत्वे बाधकाभावात् । तथाऽपि जीवकालादिकारणत्वस्यानुक्तत्वेन न विष्णोः सर्वकारणत्व-मित्युक्ते वियत्पदेन जीवकालमहदहङ्कारादेरुपलक्षणत्वेन प्रतिपादितत्वात् । अतः श्रुत्यविरोधेन भगवदितरस्योत्पत्तिसिद्धेर्युक्तः सर्वकारणे परब्रह्मणि श्रुतिसमन्वय इति सिद्धम् ।**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ – ಆಕಾಶವು ಅನಾದಿಯಾಗಿದೆ ಎಂಬ ವಿಷಯದಲ್ಲಿ ಯಾವ ಶ್ರುತಿಯೂ ಪ್ರಮಾಣವಾಗಿ ಇಲ್ಲವಾದ್ದರಿಂದ ಆಕಾಶವು ಅನಾದಿಯಾಗಿದೆ ಎಂದು ಹೇಳಲು ಬರುವುದಿಲ್ಲ. ಕಿಂತು ಆಕಾಶವು ಉತ್ಪತ್ತಿ ಉಳ್ಳದ್ದೇ ಆಗಿದೆ. ಹೀಗಾಗಿ ವಿಷ್ಣುವಿಗೆ ಆಕಾಶಕಾರಣತ್ವವನ್ನು ಹೇಳಿದರೆ ಯಾವ ಬಾಧಕವೂ ಇಲ್ಲ.

ಹೌದು, ಆಕಾಶಕಾರಣತ್ವವನ್ನು ಹೇಳಿದ್ದರಿಂದ ಅದು ಉಪಪನ್ನವಾದರೂ ಸಹ ಜೀವ-ಕಾಲಾದಿಕಾರಣತ್ವವನ್ನು ಹೇಳಿಲ್ಲವಾದ್ದರಿಂದ ವಿಷ್ಣುವಿಗೆ ಸರ್ವಕಾರಣತ್ವವು ಉಪಪನ್ನವಾಗುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ.

ವಿಯತ್ ಪದದಿಂದ ಜೀವ-ಕಾಲ-ಮಹತ್ತತ್ವ-ಅಹಂಕಾರಾದಿಗಳನ್ನೂ ಉಪ-ಲಕ್ಷಣಯಾ ಪ್ರತಿಪಾದನೆ ಮಾಡಿದ್ದರಿಂದ ಜೀವ-ಕಾಲಾದಿಕಾರಣತ್ವವೂ ವಿಷ್ಣುವಿಗೆ ಉಪಪನ್ನವೇ ಆಗಿದೆ. ಆದ್ದರಿಂದ ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ, ಭಗವಂತನಿಂದ ಭಿನ್ನವಾದ ಎಲ್ಲದಕ್ಕೂ ಉತ್ಪತ್ತಿಯು ಸಿದ್ಧವಾಗುವುದರಿಂದ ವಿಷ್ಣುವಿನ ಸರ್ವಕಾರಣತ್ವದ ವಿಷಯದಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 2

**ಆಕ್ಷೇಪ**

**ಸೂ.ರ.:– ननु न वियत आत्मन आकाशः सम्भूत इति श्रुत्योत्पत्तिः साधयितुं शक्या । अनादिर्वेत्यनादित्वाभिधायकश्रुतिविरोधादिति शङ्कां पराकुर्वत्सूत्रमाह–**

**ಅನು.:–** ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂಬ ವಿಷಯದಲ್ಲಿ ನಿಯಮೇನ ಪ್ರಮಾಣವನ್ನು ಹೇಳಬೇಕಾದದ್ದಿಲ್ಲ. ಕಿಂತು ಆಕಾಶಕ್ಕೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದಲೇನೇ ಆಕಾಶಕ್ಕೆ ಉತ್ಪತ್ಯಭಾವವು ಸಿದ್ಧವಾಗುತ್ತದೆ. ಘಟದ ವಿಷಯದಲ್ಲಿ ಪ್ರಮಾಣ ಇಲ್ಲ ಎಂದಾದರೆ ಪುನಃ ಪ್ರಮಾಣಾಪೇಕ್ಷೆ ಉಂಟಾಗುವುದಿಲ್ಲ ಎಂದು ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अस्ति तु ॐ (२.३.२)**

ಅಸ್ತಿ ತು= ಆಕಾಶಕ್ಕೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ "ಆತ್ಮಾನ ಆಕಾಶಃ ಸಂಭೂತಃ" ಎಂಬ ಶ್ರುತಿಪ್ರಮಾಣವು ಇದ್ದೇ ಇದೆ.

**ಸೂ.ರ.:– एवं चाकाश आत्मनः सम्भूत इति श्रुतिसद्भावान्नानया श्रुत्याऽनुत्पत्तिः सिध्यति । अतः श्रुत्यविरोधेन वियदादेरुत्पत्तिसिद्धेर्युक्तः समन्वय इति सिद्धम् ।**

**ಅನು.:–** ಆಕಾಶಕ್ಕೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ "ಆತ್ಮನ ಆಕಾಶಃ ಸಂಭೂತಃ" ಎಂಬ ಶ್ರುತಿಪ್ರಮಾಣವು ಇರುವುದರಿಂದ ಆಕಾಶಕ್ಕೆ ಅನಾದಿತ್ವವು (ಉತ್ಪತ್ತ್ಯಭಾವವು) ಸಿದ್ಧವಾಗುವುದಿಲ್ಲ. ಆದ್ದರಿಂದ ವಿಷ್ಣುವಿನ ಆಕಾಶಕಾರಣತ್ವ ವಿಷಯದಲ್ಲಿ ಶ್ರುತಿವಿರೋಧ ಬಾರದ ಕಾರಣ, ಆಕಾಶಾದಿಗಳಿಗೆ ಉತ್ಪತ್ತಿಯು ಸಿದ್ಧವಾಗುವುದರಿಂದ ಶ್ರುತಿಸಮನ್ವಯ-ಮೂಲಕವಾಗಿ ವಿಷ್ಣುವಿಗೆ ಸರ್ವಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 3

### ಆಕ್ಷೇಪ

**ಸೂ.ರ.:– ननु न वियत उत्पत्त्यभावे प्रमाणं नियमेन वक्तव्यम् । उत्पत्तौ प्रमाणाभावेनैव तत्सिद्धेः । न हि घटे प्रमाणाभावे पुनः प्रमाणापेक्षा स्यादिति प्राप्ते सूत्रमाह ॥**

**ननु न वियत आत्मन आकाशः सम्भूत इति श्रुत्योत्पत्तिः साधयितुं शक्या । अनादिर्वेत्यनादित्वाभिधायकश्रुतिविरोधादिति शङ्कां पराकुर्वत्सूत्रमाह–**

**ಅನು.:–** 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯಿಂದಾಗಿ ಆಕಾಶಕ್ಕೆ ಉತ್ಪತ್ತಿಯನ್ನು ಸಾಧಿಸಲು ಶಕ್ಯವಿಲ್ಲ. ಹಾಗೆ ಹೇಳುವುದಾದರೆ 'ಅನಾದಿರ್ವಾಽಯಮಾಕಾಶಃ' ಎಂಬ ಅನಾದಿತ್ವ ಬೋಧಕವಾದ ಶ್ರುತಿಯ ವಿರೋಧ ಬರಬೇಕಾಗುತ್ತದೆ ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ गौण्यसम्भवात् ॐ (२.३.३)

'ಅನಾದಿರ್ವಾಽಯಮಾಕಾಶಃ' ಎಂಬ ಶ್ರುತಿಯು ಗೌಣೀ = ಅಮುಖ್ಯ ಅನಾದಿತ್ವ-ಪರವಾಗಿದೆ. ಕುತಃ = ಯಾಕೆ? ಅಸಂಭವಾತ್ = ಆ ಶ್ರುತಿಗೆ ಮುಖ್ಯಾರ್ಥತ್ವವನ್ನು ಹೇಳುವುದಾದರೆ ಉತ್ಪತ್ತಿಯನ್ನು ಹೇಳುವ ಬಹುಶ್ರುತಿಗಳು ಅಯುಕ್ತವಾಗಬೇಕಾಗುತ್ತದೆ.

### ಸಮಾಧಾನ

ಸೂ.ರ.:– एवं चानादित्वश्रुतेर्गौणत्वात् । उत्पत्तिश्रुतिबाहुल्या-

**न्यथानुपपत्त्या तस्या गौणत्वसिद्धेः । उत्पत्तिश्रुतेर्मुख्यार्थत्वेन सर्वविषयत्वात् । अनादित्वश्रुत्यनुसारेणोक्तव्यवस्थानङ्गीकारेणाकाशस्य सर्वथाऽनुत्पत्तेरेवाभ्युपगमे तदप्रामाण्यप्रसङ्गात् । बाहुल्यस्य प्राबल्यहेतुतयोत्पत्तिश्रुतेरपि बलवत्त्वेनाप्रामाण्यस्य वक्तुमशक्यतया श्रुतिद्वयप्रामाण्यायोक्तव्यवस्थाया एवाश्रयणीयत्वात् । अतः श्रुत्यविरोधेनाकाशस्योत्पत्तिसिद्धेर्युक्तः समन्वय इति सिद्धम् ॥**

**ಅನು.:–** ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವುದೇ ಉಚಿತ. ಕಾರಣ – ಅನಾದಿತ್ವವನ್ನು ಹೇಳುವ 'ಅನಾದಿರ್ವಾಽಯಮಾಕಾಶಃ' ಎಂಬ ಶ್ರುತಿಯು ಗೌಣವಾಗಿದೆ. (ಅಮುಖ್ಯ ಅನಾದಿತ್ವಪರವಾಗಿದೆ.)

ಅನಾದಿತ್ವ ಶ್ರುತಿಯು ಗೌಣ ಏಕೆ? ಎಂದರೆ, ಉತ್ಪತ್ತಿಯನ್ನು ಹೇಳುವ ಶ್ರುತಿಗಳು ಬಹಳ ಇವೆ. ಈ ಉತ್ಪತ್ತಿಶ್ರುತಿಬಾಹುಲ್ಯವು ಕೂಡಬೇಕಾದರೆ ಅನಾದಿತ್ವಶ್ರುತಿಗೆ ಗೌಣತ್ವವನ್ನು ಹೇಳಬೇಕಾದದ್ದು ಅನಿವಾರ್ಯವಾದದ್ದರಿಂದ, ಉತ್ಪತ್ತಿಶ್ರುತಿಬಾಹುಲ್ಯಾನ್ಯಥಾನುಪಪತ್ತಿಯಿಂದಾಗಿ ಅನಾದಿತ್ವಶ್ರುತಿಗೆ ಗೌಣತ್ವವು ಸಿದ್ಧವಾಗುತ್ತದೆ. ಆದರೆ ಉತ್ಪತ್ತಿಶ್ರುತಿಯು ಮುಖ್ಯಾರ್ಥವಾದ್ದರಿಂದ ಅದು ಗೌಣವಾಗಿಲ್ಲ. (ಸರ್ವವಿಷಯಕವಾಗಿಲ್ಲ.)

ಅನಾದಿರ್ವಾ ಎಂಬ ಅನಾದಿತ್ವಶ್ರುತಿಗೆ ಅನುಸಾರವಾಗಿ ಉಕ್ತವ್ಯವಸ್ಥೆಯನ್ನು ಅಂಗೀಕರಿಸದೇ (ಉತ್ಪತ್ತಿಶ್ರುತಿಯು ಮುಖ್ಯಾರ್ಥ, ಅನಾದಿತ್ವಶ್ರುತಿಯು ಗೌಣ ಎಂದು ಅಂಗೀಕರಿಸುವುದಾದರೆ) ಆಕಾಶಕ್ಕೆ ಸರ್ವಥಾ ಅನುತ್ಪತ್ತಿಯನ್ನೇ ಅಂಗೀಕರಿಸುವುದಾದರೆ, ಉತ್ಪತ್ತಿಯನ್ನು ಹೇಳುವ ಬಹುಶ್ರುತಿಗಳಿಗೆ ಅಪ್ರಾಮಾಣ್ಯ ಬರಬೇಕಾಗುತ್ತದೆ.

ಉತ್ಪತ್ತಿಶ್ರುತಿಗಳಿಗೆ ಅಪ್ರಾಮಾಣ್ಯ ಬರಲಿ ಎಂದರೆ, ಅದು ಸರಿಯಲ್ಲ. ಬಾಹುಲ್ಯ ಎನ್ನುವುದು ಪ್ರಾಬಲ್ಯಕ್ಕೆ ಹೇತುವಾದ್ದರಿಂದ ಪ್ರಕೃತ ಉತ್ಪತ್ತಿಶ್ರುತಿಗಳಿಗೆ ಬಾಹುಲ್ಯ ಇರುವುದರಿಂದ ಪ್ರಾಬಲ್ಯ ಇರುವ ಕಾರಣ ಅಪ್ರಾಮಾಣ್ಯ ಹೇಳಲು ಸಾಧ್ಯವಿಲ್ಲ. ಹೀಗಾಗಿ ಉತ್ಪತ್ತಿಶ್ರುತಿಗಳು ಹಾಗೂ ಅನಾದಿತ್ವಶ್ರುತಿ ಎರಡೂ ಶ್ರುತಿಗಳಿಗೂ ಪ್ರಾಮಾಣ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಹಿಂದೆ ಹೇಳಿದ ವ್ಯವಸ್ಥೆಯೇ ಆಶ್ರಯಣೀಯವಾಗಿದೆ. (ಅನಾದಿತ್ವಶ್ರುತಿಯು ಗೌಣ (ಅಮುಖ್ಯಅನಾದಿತ್ವಪರ) ಮತ್ತು ಉತ್ಪತ್ತಿಶ್ರುತಿಗಳು ಮುಖ್ಯಾರ್ಥ ಎಂಬ ವ್ಯವಸ್ಥೆಯನ್ನು ಆಶ್ರಯಿಸಬೇಕಾಗಿದೆ.)

ಆದ್ದರಿಂದ ಅನಾದಿತ್ವಶ್ರುತಿಯು ಗೌಣವಾದ್ದರಿಂದ, ವಿಷ್ಣುವಿಗೆ ಆಕಾಶಕಾರಣತ್ವವನ್ನು ಹೇಳಿದರೆ ಅನಾದಿತ್ವಶ್ರುತಿಯ ವಿರೋಧ ಬಾರದ ಕಾರಣ, ಆಕಾಶಕ್ಕೆ ಉತ್ಪತ್ತಿಯೇ ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಜಗತ್ಕಾರಣತ್ವ ಮೂಲಕವಾಗಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 4

**ಸೂ.ರ.:– न केवलमुक्तव्यवस्थाऽसम्भवयुक्तिसिद्धा । अपि तु श्रुतिसिद्धा चेत्यर्थप्रतिपादकं सूत्रमुपन्यस्यति ॥**

**ಅನು.:–** ಅನಾದಿತ್ವಶ್ರುತಿಗೆ ಮುಖ್ಯಾರ್ಥತ್ವವನ್ನು ಅಂಗೀಕರಿಸಿದರೆ ಉಕ್ತವ್ಯವಸ್ಥೆ ಅಸಂಭಾವಿತವಾಗುತ್ತದೆ ಎಂಬುದಾಗಿ ಉಕ್ತವ್ಯವಸ್ಥಾ ಅಸಂಭವಯುಕ್ತಿಸಿದ್ಧವಾಗಿದೆ ಆಕಾಶದ ಉತ್ಪತ್ತಿ ಎಂದಷ್ಟೇ ಅಲ್ಲ. ಕಿಂತು ಆಕಾಶದ ಉತ್ಪತ್ತಿಯು ಶ್ರುತಿಸಿದ್ಧವೂ ಆಗಿದೆ ಎಂದು ತಿಳಿಸುವ ಸೂತ್ರವನ್ನು ಹೇಳುತ್ತಾರೆ–

**ॐ शब्दाच्च ॐ (२.३.४)**

ಶಬ್ದಾಚ್ಚ = 'ಅಥ ಹ ವಾವ ನಿತ್ಯಾನಿ' ಎಂಬ ಭಾಲ್ಲವೇಯ ಶ್ರುತಿಬಲದಿಂದಲೂ ಸಹ ಅನಾದಿತ್ವಶ್ರುತಿಯು ಗೌಣಾರ್ಥವಾಗಿದೆ ಎಂದು ಸಿದ್ಧವಾಗಿದೆ.

**ಸೂ.ರ.:– एवं चोक्तव्यवस्थोपपद्यत एव । अथ ह वाव नित्यानीति भाल्लवेयश्रुतेः । एतेनानुभवादिति विरोधस्य परिहृतत्वात् । ततश्च श्रुत्यविरोधेन युक्तो भगवति श्रुतिसमन्वय इति सिद्धम् ॥**

**ಅನು.:–** "ಅಥ ಹ ವಾವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಲ ಇತಿ । ಅಥ ಯಾನ್ಯನಿತ್ಯಾನಿ ಪ್ರಾಣಃ ಶ್ರದ್ಧಾ ಭೂತಾನಿ ಭೌತಿಕಾನೀತಿ । ಯಾನಿ ಹ ವಾ ಉತ್ಪತ್ತಿಮಂತಿ ತಾನ್ಯನಿತ್ಯಾನಿ । ಯಾನಿ ಹ ವಾ ಅನುತ್ಪತ್ತಿಮಂತಿ ತಾನಿ ನಿತ್ಯಾನಿ । ನ ಹ್ಯೇತಾನಿ ಕದಾಚನೋತ್ಪದ್ಯಂತೇ ನ (ವಿ)ಲೀಯಂತೇ ಪುರುಷಃ ಪ್ರಕೃತಿರಾತ್ಮಾ ಕಾಲ ಇತಿ । ಅಥೈತಾನ್ಯುತ್ಪತ್ತಿಮಂತಿ ಚಾನುತ್ಪತ್ತಿಮಂತಿ ಚ ಪ್ರಾಣಃ ಶ್ರದ್ಧಾಽಕಾಶ ಇತಿ ಭಾಗಶೋ ಹ್ಯುತ್ಪದ್ಯಂತೇ"

ಎಂಬುದಾಗಿ ಭಾಲ್ಲವೇಯಶ್ರುತಿಬಲದಿಂದಾಗಿ ಉಕ್ತವ್ಯವಸ್ಥೆಯು ಉಪಪನ್ನವೇ ಆಗುತ್ತದೆ. (ಅನಾದಿತ್ವಶ್ರುತಿಯು ಗೌಣ, ಉತ್ಪತ್ತಿಶ್ರುತಿಯು ಮುಖ್ಯಾರ್ಥ ಎಂಬ ವ್ಯವಸ್ಥೆಯು ಉಪಪನ್ನವೇ ಆಗುತ್ತದೆ.)

ಅವಕಾಶಕ್ಕೆ (ಆಕಾಶಕ್ಕೆ) ಉತ್ಪತ್ತಿಯು ಅನುಭವಸಿದ್ಧವಾಗದ ಕಾರಣ ಆಕಾಶಕ್ಕೆ ಉತ್ಪತ್ತಿ-ಯನ್ನು ಹೇಳುವುದಾದರೆ ಅನುಭವವಿರೋಧ ಬರುತ್ತದೆ ಎಂಬುದಾಗಿ ಹಿಂದೆ ಏನು ವಿರೋಧ ಹೇಳಿದೆಯೋ ಆ ಅನುಭವವಿರೋಧವೂ ಇದರಿಂದ ಪರಿಹಾರವಾಗುತ್ತದೆ. ಅಂದರೆ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಸ್ಪಷ್ಟವಾದ ಶ್ರುತಿ ಇರುವುದರಿಂದಾಗಿ ಆ ಅನುಭವವಿರೋಧವೂ ಪರಿಹೃತವಾದಂತೆಯೇ ಆಗುವುದು.

ಆದ್ದರಿಂದ ವಿಷ್ಣುವಿಗೆ ಆಕಾಶಕಾರಣತ್ವವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಸಮಂಜಸವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 5

## ಆಕ್ಷೇಪ

**ಸೂ.ರ.:– ननु कुतोऽनादित्वश्रुतेर्गौणत्वम् । मुख्यार्थस्य बाधकाभावात् । अन्यथा न जायते न म्रियत इत्यादावपि गौणार्थः स्यात् । तत्र न जायते (भ.गी.२-२०) इत्यनुत्पत्त्यभिधायकशब्दस्य परमात्मनि मुख्यत्वदर्शनेन तदेकार्थानादित्वश्रुतेरपि तथात्त्वौचित्या-दित्याशङ्कां परिहरत्सूत्रमुपन्यस्यति ।**

**ಅನು.:–** 'ಅನಾದಿರ್ವಾಽಯಮಾಕಾಶಃ' ಎಂಬ ಆಕಾಶಕ್ಕೆ ಅನಾದಿತ್ವವನ್ನು ತಿಳಿಸುವ ಶ್ರುತಿಗೆ ಗೌಣತ್ವವನ್ನು ಏಕೆ ಹೇಳಬೇಕು? (ಅಮುಖ್ಯ ಅನಾದಿತ್ವವನ್ನು ಹೇಳುತ್ತದೆ ಎಂದು ಏಕೆ ಹೇಳಬೇಕು) ಮುಖ್ಯಾರ್ಥತ್ವವನ್ನೇ ಹೇಳಿದರೆ (ಮುಖ್ಯವಾಗಿಯೇ ಅನಾದಿತ್ವವನ್ನು ಹೇಳುತ್ತದೆ ಎಂದು ಹೇಳಿದರೆ) ಯಾವ ಬಾಧಕವೂ ಇಲ್ಲವಾದ್ದರಿಂದ ಶ್ರುತಿಗೆ ಮುಖ್ಯಾರ್ಥತ್ವವನ್ನೇ ಹೇಳಬಹುದಾಗಿದೆ.

ಹಾಗೊಂದುವೇಳೆ ಅಮುಖ್ಯಾರ್ಥತ್ವವನ್ನೇ ಹೇಳುವುದಾದರೆ 'ನ ಜಾಯತೇ ಮ್ರಿಯತೇ ವಾ ಕದಾಚಿತ್' ಇತ್ಯಾದಿಶ್ರುತಿಗಳಿಗೂ ಸಹ (ಬ್ರಹ್ಮನಿಗೆ ಅನಾದಿತ್ವವನ್ನು ಹೇಳುವ ಶ್ರುತಿಗಳಿಗೂ ಸಹ) ಗೌಣಾರ್ಥತ್ವವನ್ನೇ (ಅಮುಖ್ಯಾರ್ಥತ್ವವನ್ನೇ) ಹೇಳಿರಿ? ಆದರೆ ಪ್ರಕೃತದಲ್ಲಿ ಪರಮಾತ್ಮನಿಗೆ ಅನುತ್ಪತ್ತಿಯನ್ನು ಹೇಳುವ ನ ಜಾಯತೇ ಎಂಬ ಶಬ್ದಕ್ಕೆ ಪರಮಾತ್ಮನಲ್ಲಿ ಮುಖ್ಯಾರ್ಥತ್ವವನ್ನೇ ಹೇಳುವುದರಿಂದ ತದೇಕಾರ್ಥವಾದ ಆಕಾಶಾನಾದಿತ್ವ ಶ್ರುತಿಗೂ ಸಹ ಆಕಾಶದಲ್ಲಿ ಮುಖ್ಯಾರ್ಥತ್ವವನ್ನು ಹೇಳುವುದೇ ಉಚಿತವಾಗುತ್ತದೆ ಎಂದು ಆಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ स्याच्चैकस्य ब्रह्मशब्दवत् ॐ (२.३.५)

ಬ್ರಹ್ಮಶಬ್ದವತ್ = ಒಂದೇ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯ, ಜೀವನಲ್ಲಿ ಅಮುಖ್ಯ ಹೇಗೆ ಆಗಿದೆಯೋ ಅದರಂತೆ, ಏಕಸ್ಯ (ಚ) ಏವ = ಅನುತ್ಪತ್ತಿಬೋಧಕವಾದ ಒಂದೇ ಶಬ್ದಕ್ಕೆ ವಿಷ್ಣುವಿನಲ್ಲಿ, ಸ್ಯಾತ್ = ಮುಖ್ಯಾರ್ಥತ್ವವು ಉಪಪನ್ನವಾಗುತ್ತದೆ, ಆಕಾಶದಲ್ಲಿ, ಸ್ಯಾತ್ = ಅಮುಖ್ಯಾರ್ಥತ್ವವು ಉಪಪನ್ನವಾಗುತ್ತದೆ.

**ಸೂ.ರ.:– एवं च भवेदन्यत्र मुख्यानुत्पत्तिमच्छन्दस्याकाशे गौणत्वम् । मुख्यार्थस्याकाशे बहुलोत्पत्तिश्रुतिबाधितत्वात् । ब्रह्मणि मुख्यस्यापि ब्रह्मशब्दस्य बाधकवशेन विरिञ्चादिष्वमुख्यत्वदर्शनात् । अतः श्रुत्यविरोधेन युक्तः श्रुतिसमन्वय इति सिद्धम् ॥**

**ಅನು.:–** ಒಂದೇ ಬ್ರಹ್ಮಶಬ್ದಕ್ಕೆ ಪರಮಾತ್ಮನಲ್ಲಿ ಮುಖ್ಯಾರ್ಥತ್ವ ಹಾಗೂ ಬಾಧಕವಶಾತ್ ವಿರಿಂಚಾದಿಗಳಲ್ಲಿ ಅಮುಖ್ಯಾರ್ಥತ್ವ ಕಂಡಿರುವುದರಿಂದ ಅದರಂತೆಯೇ ಒಂದೇ ಅನುತ್ಪತ್ತಿಮಚ್ಛಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯಾರ್ಥತ್ವ ಹಾಗೂ ಬಾಧಕವಶಾತ್ (ಆಕಾಶದಲ್ಲಿ ಮುಖ್ಯವಾಗಿ ಅನುತ್ಪತ್ತಿಯನ್ನು ಹೇಳಿದರೆ ಬಹು ಉತ್ಪತ್ತಿಶ್ರುತಿಬಾಧ ಬರುವುದರಿಂದ) ಆಕಾಶದಲ್ಲಿ ಗೌಣತ್ವವನ್ನು (ಅಮುಖ್ಯಾರ್ಥತ್ವವನ್ನು) ಹೇಳಬಹುದಾಗಿದೆ. ಆದ್ದರಿಂದ ವಿಷ್ಣುವಿಗೆ ಆಕಾಶಕಾರಣತ್ವವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 6

### ಆಕ್ಷೇಪ

**ಸೂ.ರ.:– ननु युक्तं ब्रह्मशब्दस्य परब्रह्मणि मुख्यत्वमन्यत्रामुख्यत्वम् । गुणपूर्णत्वरूपशब्दप्रवृत्तिनिमित्तसत्त्वासत्त्वाख्यकारणसद्भावात् । न च तथाऽनुत्पत्तिमच्छब्दे वक्तुं शक्यम् । तद्वत्प्रकृते प्रवृत्तिनिमित्तपौष्कल्यभावा-भावाख्यकारणानुपलम्भादित्याशङ्कां परहिरत्सूत्रमुपन्यस्याति ॥**

**ಅನು.:–** ಬ್ರಹ್ಮಶಬ್ದದ ದೃಷ್ಟಾಂತ ಕೊಟ್ಟಿದ್ದು ಸರಿಯೇ ಇದೆ. ಅಲ್ಲಿ ಗುಣಪೂರ್ಣತ್ವ-ರೂಪವಾದ ಶಬ್ದಪ್ರವೃತ್ತಿನಿಮಿತ್ತವು ಇರುವುದರಿಂದ ವಿಷ್ಣುವಿನಲ್ಲಿ ಬ್ರಹ್ಮಶಬ್ದಕ್ಕೆ

ಮುಖ್ಯಾರ್ಥತ್ವವು ಕೂಡುತ್ತದೆ. ಮತ್ತು ಅಂತಹ ಗುಣಪೂರ್ಣತ್ವರೂಪವಾದ ಶಬ್ದಪ್ರವೃತ್ತಿ-ನಿಮಿತ್ತವು ಆಕಾಶದಲ್ಲಿ ಇಲ್ಲದ ಕಾರಣ ಆಕಾಶದಲ್ಲಿ ಅಮುಖ್ಯಾರ್ಥತ್ವವು ಕೂಡುತ್ತದೆ ಎಂದು ಹೇಳಲು ಬರುತ್ತದೆ.

ಆದರೆ ಅದರಂತೆಯೇ ಪ್ರಕೃತದಲ್ಲಿ ಅನುತ್ಪತ್ತಿಮಚ್ಛಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯಾರ್ಥತ್ವ ಹಾಗೂ ಆಕಾಶದಲ್ಲಿ ಅಮುಖ್ಯಾರ್ಥತ್ವ ಎಂಬುದಾಗಿ ವ್ಯವಸ್ಥೆ ಮಾಡುವುದಕ್ಕೆ ಪ್ರವೃತ್ತಿನಿಮಿತ್ತ ಭೂತಪೌಷ್ಕಲ್ಯಭಾವ-ಅಭಾವಗಳೆಂಬ ಕಾರಣವು ಯಾವುದೂ ಇಲ್ಲವಾದ್ದರಿಂದ ಬ್ರಹ್ಮಶಬ್ದದಂತೆ ವ್ಯವಸ್ಥೆ ಮಾಡಲು ಇಲ್ಲಿ ಸಾಧ್ಯವಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्रतिज्ञाहानिरव्यतिरेकाच्छब्देभ्यः ॐ (२.३.६)**

ಆಕಾಶಕ್ಕೆ ಮುಖ್ಯಾನುತ್ಪತ್ತಿಯನ್ನು ಹೇಳಿದರೆ ಪ್ರತಿಜ್ಞಾಹಾನಿಃ = ಸ ಇದಂ ಸರ್ವಮಸೃಜತ (ತೈ. 2-6) ಎಂಬುದಾಗಿ ವಿಷ್ಣುವಿಗೆ ಸ್ರಷ್ಟೃತ್ವಪ್ರತಿಜ್ಞಾಹಾನಿಯಾಗಬೇಕಾಗುತ್ತದೆ. ಕುತಃ = ಏಕೆ? ಅವ್ಯತಿರೇಕಾತ್ = ಆಕಾಶವು ಸರ್ವಶಬ್ದಾರ್ಥಗಳಿಂದ ಭಿನ್ನವಾಗಿಲ್ಲವಾದ್ದರಿಂದ (ಸರ್ವಶಬ್ದಾರ್ಥಗಳಲ್ಲಿಯೇ ಅಂತರ್ಗತವಾದ್ದರಿಂದ).

ಕಿಂಚ = ಮತ್ತು, ಯತಃ = ಯಾವ ಕಾರಣ, ಶಬ್ದೇಭ್ಯಃ = ಆತ್ಮಾ ವಾ ಇದಮಗ್ರ ಆಸೀತ್ (ಐ.1-1) ಇತ್ಯಾದಿ ಸ್ಪಷ್ಟ ಶ್ರುತಿಗಳಿಂದಲೂ ಬ್ರಹ್ಮನಿಗೇನೇ ಮುಖ್ಯವಾದ ಅನುತ್ಪತ್ತಿ ಇರುವುದು. ಹೊರತು ಬೇರೆ ಯಾವುದಕ್ಕೂ ಮುಖ್ಯವಾದ ಅನುತ್ಪತ್ತಿ ಇಲ್ಲ ಎಂಬುದಾಗಿ ತಿಳಿದುಬರುತ್ತಿದೆಯೋ, ಅತಃ = ಆ ಕಾರಣ, ಉಕ್ತಂ ಯುಕ್ತಂ = ವಿಷ್ಣುವಿಗೆ ಮುಖ್ಯಾನುತ್ಪತ್ತಿ – ಆಕಾಶಕ್ಕೆ ಅಮುಖ್ಯಾನುತ್ಪತ್ತಿ ಎಂದು ವ್ಯವಸ್ಥೆ ಮಾಡಿದ್ದು ಯುಕ್ತವೇ ಆಗಿದೆ.

**ಸೂ.ರ.:– एवं चाकाशस्यापि ब्रह्मवन्मुख्यनित्यत्वे मुख्यतस्तद्वाच्यनुत्पत्तिमच्छब्दवाच्यत्वाङ्गीकारे इदमसृजतेति प्रतिज्ञाहानिसम्भवात् । न चात्राकाशमसृजतेत्यनुक्तत्वेन प्रतिज्ञाहान्यभावः । सर्वशब्देनैवाकाशस्य ग्रहणात् । सङ्कोचे कारणाभावात् । आत्मा वा इदमेक एवाग्र इति श्रुतेश्च । अतः श्रुत्यविरोधेन युक्तः समन्वय इति सिद्धम् ॥**

**ಅನು.:–** ಆಕಾಶಕ್ಕೂ ಸಹ ಬ್ರಹ್ಮನಂತೆ ಮುಖ್ಯನಿತ್ಯತ್ವವನ್ನು ಹೇಳುವುದಾದರೆ, ಮುಖ್ಯನಿತ್ಯತ್ವವನ್ನು ತಿಳಿಸುವ ಅನುತ್ಪತ್ತಿಮಚ್ಛಬ್ದವಾಚ್ಯತ್ವವನ್ನು ಅಂಗೀಕರಿಸುವುದಾದರೆ "ಸ ಇದಂ ಸರ್ವಮಸೃಜತ" (ತೈ.2-6) ಎಂಬುದಾಗಿ ಬ್ರಹ್ಮನಿಗೆ ಸ್ರಷ್ಟೃತ್ವಪ್ರತಿಜ್ಞೆಯು ಹಾನಿಯಾಗಬೇಕಾಗುತ್ತದೆ.

ಹೌದು, ಇಲ್ಲಿ ಆಕಾಶಂ ಅಸೃಜತ ಎಂಬುದಾಗಿ ಹೇಳಿಲ್ಲವಾದ್ದರಿಂದ ಪ್ರತಿಜ್ಞಾಹಾನಿ ಏನಾಗುವುದಿಲ್ಲವಲ್ಲ? ಎಂದು ಶಂಕಿಸುವುದು ಸರಿಯಲ್ಲ, ಕಾರಣ ಸರ್ವಶಬ್ದಕ್ಕೆ ಸಂಕೋಚ ಮಾಡಲು ಕಾರಣವಿಲ್ಲದ ಕಾರಣ ಇಲ್ಲಿ ಸರ್ವಶಬ್ದದಿಂದಲೇ ಆಕಾಶವನ್ನೂ ಗ್ರಹಣ ಮಾಡಿರುವುದರಿಂದ (ಸರ್ವಸ್ರಷ್ಟೃತ್ವದಲ್ಲಿ ಆಕಾಶಕರ್ತೃತ್ವವೂ ಸೇರಿರುವುದರಿಂದ) ಪ್ರತಿಜ್ಞಾಹಾನಿ ಆಗೇ ಆಗುತ್ತದೆ. ಮತ್ತು ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ಎಂಬುದಾಗಿ ಶ್ರುತಿಯೂ ಇರುವುದರಿಂದ (ಆತ್ಮನಿಗೆ ಮಾತ್ರ ಮುಖ್ಯ ಅನಾದಿತ್ವವು) ಶ್ರುತಿಸಿದ್ಧವೂ ಆಗಿರುವುದರಿಂದ) ಆಕಾಶಕ್ಕೆ ಮುಖ್ಯ ಅನುತ್ಪತ್ತಿಯನ್ನು ಹೇಳಿದರೆ ಪ್ರತಿಜ್ಞಾಹಾನಿಯು ಆಗಿಯೇ ಆಗುತ್ತದೆ.

ಆದ್ದರಿಂದ ಆಕಾಶಕ್ಕೆ ಮುಖ್ಯ ಅನುತ್ಪತ್ತಿಯನ್ನು ಹೇಳಲು ಬಾರದ ಕಾರಣ ವಿಷ್ಣುವಿಗೆ ಸರ್ವಕಾರಣತ್ವವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದಿರುವುದರಿಂದ ವಿಷ್ಣುವಿನಲ್ಲಿ ಮಾಡಿದ ಶ್ರುತಿಸಮನ್ವಯವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 7

**ಸೂ.ರ.:– अनुमानेनापि ब्रह्मण एवानादित्वमन्येषां सादित्व-मनुत्पत्तिश्रुतेर्मुख्यामुख्यत्वसिद्ध्यर्थं साधयत्सूत्रमुपन्यस्यति ॥**

**ಅನು.:–** ಅನುತ್ಪತ್ತಿಶ್ರುತಿಗೆ ಮುಖ್ಯಾಮುಖ್ಯತ್ವಸಿದ್ಧಿಗಾಗಿ "ಬ್ರಹ್ಮನಿಗೆ ಮಾತ್ರ ಅನಾದಿತ್ವ ಇದೆ, ಉಳಿದವರೆಲ್ಲರಿಗೂ ಸಾದಿತ್ವ ಇದೆ" ಎಂಬುದನ್ನು ಅನುಮಾನದಿಂದಲೂ ಸಹ ಸಾಧಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ यावद्विकारं तु विभागो लोकवत् ॐ (२.३.७)**

ಯಾವತ್ ಶಬ್ದವು ಅವಧಾರಣ ಎಂಬ ಅರ್ಥದಲ್ಲಿದೆ. ಯಾವದ್ವಿಕಾರಂ ಎನ್ನುವುದು ಅವ್ಯಯ. ತು ಶಬ್ದವು ಏವಶಬ್ದಾರ್ಥದಲ್ಲಿದೆ. ಹಾಗಾದರೆ –

ಯತಃ = ಯಾವ ಕಾರಣ, ಯಾವದ್ವಿಕಾರಂ = ವಿಕ್ರಿಯಮಾಣವಾದ ವಸ್ತು ಮಾತ್ರವೇ, ವಿಭಾಗಃ = (ವಿಭಾಗಶಬ್ದವಾಚ್ಯ) ಅಲ್ಪಶಕ್ತಿ ಉಳ್ಳದ್ದಾಗಿದೆ, ನ ತು ಅನ್ಯತ್ = ಹೊರತು ವಿಕ್ರಿಯಮಾಣವಾದದ್ದರಿಂದ ಭಿನ್ನವಾದದ್ದು ಅಲ್ಪಶಕ್ತಿ ಉಳ್ಳದ್ದಾಗಿಲ್ಲ, ಬೇಡ ಎಂಬ ನಿಯಮವು ಸಿದ್ಧವಾಗಿರುವುದೋ ಅತಃ = ಆ ಕಾರಣ, ಲೋಕವತ್ = ಲೋಕದಂತೆ ಅಂದರೆ ಘಟಾದಿಗಳಲ್ಲಿ ವಿಭಕ್ತತ್ವನಿಮಿತ್ತಕವಾಗಿ ವಿಕಾರಿತ್ವವು ಲೋಕದಲ್ಲಿ ಹೇಗೆ ಕಂಡಿದೆಯೋ ಅದರಂತೆ ಆಕಾಶಾದಿಗಳಿಗೂ ಸಹ ವಿಭಕ್ತತ್ವನಿಮಿತ್ತಕವಾಗಿ ವಿಕಾರಿತ್ವವು

ಸಿದ್ಧಿಸುತ್ತದೆ. ಆಕಾಶಾದಿಗಳಿಗೆ ವಿಕಾರಿತ್ವ ಸಿದ್ಧವಾಗುವುದರಿಂದ ವಿಕಾರಿತ್ವ ಇರುವುದ-ರಿಂದಲೇ ಸಾದಿತ್ವವೂ ಸಿದ್ಧಿಸುತ್ತದೆ.

**ಸೂ.ರ.:– एवं चाकाश उत्पत्तिमान् अल्पशक्तित्वात् । घटादिवदित्यनुमानाच्चाकाशोत्पत्तिसिद्धेरनादित्वश्रुतेर्गौणत्वात् । ब्रह्मानुत्पत्तिमत् अविभक्तत्वात् व्यतिरेकेण घटवदित्यपि मानसद्भावात् ।**

**ಅನು.:–** 'ಆಕಾಶಃ ಉತ್ಪತ್ತಿಮಾನ್ ಅಲ್ಪಶಕ್ತಿತ್ವಾತ್ ಘಟವತ್ ।' (ಆಕಾಶವು ಉತ್ಪತ್ತಿ ಉಳ್ಳದ್ದಾಗಿದೆ, ಅಲ್ಪಶಕ್ತಿ ಉಳ್ಳದ್ದಾದ್ದರಿಂದ, ಘಟದಂತೆ) ಎಂಬ ಅನುಮಾನದಿಂದಲೂ ಸಹ ಆಕಾಶಕ್ಕೆ ಉತ್ಪತ್ತಿಯು ಸಿದ್ಧವಾಗುವುದರಿಂದ ಅನಾದಿತ್ವವನ್ನು ಹೇಳುವ ಶ್ರುತಿಯು ಗೌಣವೆಂದು ತಿಳಿದುಬರುತ್ತದೆ. ಮತ್ತು 'ಬ್ರಹ್ಮ ಅನುತ್ಪತ್ತಿಮತ್ ಅವಿಭಕ್ತತ್ವಾತ್ ವ್ಯತಿರೇಕೇಣ ಘಟವತ್ ।' (ಬ್ರಹ್ಮನು ಅನುತ್ಪತ್ತಿ ಉಳ್ಳವನಾಗಿದ್ದಾನೆ ಅವಿಭಕ್ತನಾದ್ದರಿಂದ (ಮಹಚ್ಛಕ್ತಿ ಉಳ್ಳವನಾದ್ದರಿಂದ) ವ್ಯತಿರೇಕೇಣ ಘಟದಂತೆ) ಎಂಬ ಅನುಮಾನದಿಂದ ಬ್ರಹ್ಮನಿಗೆ ಅನಾದಿತ್ವವೂ ಸಿದ್ಧವಾಗುತ್ತಿದೆ.

**ಸೂ.ರ.:– न च प्रकृतिपुरुष इति (बृहत्संहिता) वचनस्य नित्यानित्यपुरुष इति प्राचीनश्रुतिविरोधः । तत्र प्रकृत्यादेः स्वरूपस्याभूत्वाभवनरूपोत्पत्त्यभावोक्तेः । अत्र पुनः पराधीनविशेषावाप्तिरूपोत्पत्त्युक्तेर्भिन्नविषयत्वेनाविरोधात् । अतः श्रुत्यविरोधेन भगवदितरस्योत्पत्तिसिद्धेर्युक्तः सर्वकारणे ब्रह्मणि श्रुतिसमन्वय इति सिद्धम् ॥**

**ಅನು.:–** ಪ್ರಕೃತಿಪುರುಷಃ ... ಎಂಬ ಬೃಹತ್ಸಂಹಿತಾವಾಕ್ಯಕ್ಕೆ ನಿತ್ಯಾನಿತ್ಯಪುರುಷಃ ... ಎಂಬ ಹಿಂದಿನ ವಾಕ್ಯದ ವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ.

ಏಕೆಂದರೆ – ಅಲ್ಲಿ ಪ್ರಕೃತಿಪುರುಷಃ ಎಂಬ ವಾಕ್ಯದಲ್ಲಿ ಪ್ರಕೃತ್ಯಾದಿಗಳ ಸ್ವರೂಪಕ್ಕೆ ಅಭೂತ್ವಾಭವನರೂಪವಾದ ಉತ್ಪತ್ತಿ ಇಲ್ಲ ಎಂದು ಹೇಳಲಾಗಿದೆ. ಇಲ್ಲಿ ಮತ್ತೆ ಪರಾಧೀನ-ವಿಶೇಷಾವಾಪ್ತಿರೂಪವಾದ ಉತ್ಪತ್ತಿ ಇದೆ ಎಂದು ಹೇಳುತ್ತಿರುವುದರಿಂದ ಭಿನ್ನವಿಷಯಕ-ವಾದ್ದರಿಂದ ವಿರೋಧ ಬರುವುದೇ ಇಲ್ಲ.

ಆದ್ದರಿಂದ ಆಕಾಶಕ್ಕೆ ಉತ್ಪತ್ತಿ ಹೇಳಿದರೆ ಶ್ರುತಿವಿರೋಧ ಬಾರದ ಕಾರಣ, ಭಗವಂತ-ನಿಂದ ಭಿನ್ನವಾದ ಎಲ್ಲದಕ್ಕೂ ಉತ್ಪತ್ತಿಯು ಸಿದ್ಧಿಸುವುದರಿಂದ ಸರ್ವಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ವಿಯದಧಿಕರಣವು ಮುಗಿಯಿತು.

ಅಧಿಕರಣ – 2

## ಮಾತರಿಶ್ವಾಧಿಕರಣ

### ಸಂಗತಿ

**ಸೂ.ರ.:–** अत्रेश्वरे श्रुतिसमन्वयसिद्धये मुख्यवायोरुत्पत्तिविषयश्रुति-विरोधः परिह्रियते ॥

**ಅನು.:–** ಈಶ್ವರನಿಗೆ ಸರ್ವಕಾರಣತ್ವೇನ ಶ್ರುತಿಸಮನ್ವಯಸಿದ್ಧಿಗಾಗಿ ಮುಖ್ಯವಾಯುವಿನ ಉತ್ಪತ್ತಿವಿಷಯಕವಾದ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಎರಡನೇ ಈ ಮಾತರಿಶ್ವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:–** ननु न विष्णोर्जगत्कारणत्वं युक्तम् । वायुर्वावेति श्रुतेर्वायोरुत्पत्त्यभावेन कारणत्वाभावात् । न चाकाशानुत्पत्तिवदियं श्रुति-र्गौणी । अथ ह नित्याश्चेति श्रुत्याऽऽकाशादीनामनित्यत्वमुक्त्वा वायु-नित्यत्वोक्तेः । अन्यथा विशिष्य नित्यत्वोक्तिरयुक्ता स्यात् । किञ्च यदि वायुरुत्पत्तिमान्स्यात्तदा सर्वापेक्षयाऽतिशयितचेतनत्वं सर्वदेवोपास्यत्वं च न स्यात् । यस्य नादिर्न मध्यमिति श्रुत्याऽनादित्वमुक्त्वोदयनिम्लोचा-भावस्याप्युक्तेः । ततश्च ताभ्यां शून्यस्योत्पत्तिः सम्भावयितुं युक्ता । साधकवतः साध्यदर्शनेनानुत्पत्तिसाधकवतोऽप्युत्पत्तिमत्त्वाङ्गीकारेऽनु-भवव्याकोपः स्यात् । अतो वायोरुत्पत्त्यभावेनोत्पत्तिश्रुतेरप्रामाण्यान्न श्रुतिसमन्वयेन विष्णोर्जगत्कारणत्वं युक्तमिति प्राप्ते सूत्रितम् ॥

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ. ಏಕೆಂದರೆ - ವಾಯುರ್ವಾವ ... ಎಂದು ಶ್ರುತಿ ಇರುವುದರಿಂದ ವಾಯುವಿಗೆ ಉತ್ಪತ್ತಿ ಇಲ್ಲದ ಕಾರಣ ವಿಷ್ಣುವಿಗೆ ವಾಯುಕಾರಣತ್ವವನ್ನು ಹೇಳಲು ಬರುವುದಿಲ್ಲ.

ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವಾಗಿರುವಂತೆ, ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಈ ಶ್ರುತಿಯೂ ಗೌಣವೇ ಆಗಿದೆ ಎಂದರೆ, ಅದು ಸರಿಯಲ್ಲ, ಹಾಗಾಗುವುದಾದರೆ ಆಕಾಶಾದಿಗಳಂತೆ ಮುಖ್ಯವಾಯುವೂ ಉತ್ಪತ್ತಿ-ಅನುತ್ಪತ್ತಿ-ಗಳುಳ್ಳವನಾಗಿದ್ದರೆ (ಅಮುಖ್ಯವಾದ ಉತ್ಪತ್ತಿ-ಮುಖ್ಯವಾದ ಅನುತ್ಪತ್ತಿ ಉಳ್ಳವನಾಗಿದ್ದರೆ) ಪೃಥಿವೀ-ಅಪ್-ತೇಜಸ್ಸು-ಆಕಾಶಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ನಿತ್ಯತ್ವವನ್ನು ಹೇಳಿದ್ದು ಅನುಪಪನ್ನವಾಗಬೇಕಾಗುತ್ತದೆ.

ಮತ್ತು ವಾಯುವು ಒಂದುವೇಳೆ ಉತ್ಪತ್ತಿಯುಳ್ಳವನೇ ಆಗಿದ್ದರೆ ಆಗ ಸರ್ವಾಪೇಕ್ಷಯಾ ಅತಿಶಯಿತಚೇತನತ್ವವು ಹಾಗೂ ಸರ್ವದೇವೋಪಾಸ್ಯತ್ವವು ಕೂಡದೇ ಹೋಗಬೇಕಾಗುತ್ತದೆ. ಮತ್ತು 'ಯಸ್ಯ ನಾದಿರ್ನ ಮಧ್ಯಮ್ ...' ಎಂಬ ಶ್ರುತಿಯಿಂದ ಅನಾದಿತ್ವವನ್ನು ಹೇಳಿ ಉದಯನಿಮ್ಲೋಚಾಭಾವವನ್ನೂ ಸಹ ಹೇಳಿದ್ದಾರೆ. ಆದ್ದರಿಂದ ಇವುಗಳಿಂದ ರಹಿತ-ವಾದದ್ದಕ್ಕೇ ಉತ್ಪತ್ತಿಯು ಸಂಭಾವಿತವಾಗಿದೆ. ಈ ವಿಧವಾದ ಮಾಹಾತ್ಮ್ಯ ಉಳ್ಳ ವಾಯು-ದೇವರಿಗೆ ಉತ್ಪತ್ತಿಯನ್ನು ಅಂಗೀಕರಿಸುವುದಾದರೆ ಅನುಭವವ್ಯಾಕೋಪವೂ ಆಗುತ್ತದೆ.

ಆದ್ದರಿಂದ ವಾಯುದೇವರಿಗೆ ಉತ್ಪತ್ತಿ ಇಲ್ಲವಾದ್ದರಿಂದ, ವಾಯುದೇವರಿಗೆ ಉತ್ಪತ್ತಿ-ಯನ್ನು ಹೇಳುವ ಶ್ರುತಿಯು ಅಪ್ರಮಾಣವಾದ್ದರಿಂದ, ಸರ್ವಕಾರಣತ್ವೇನ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ एतेन मातरिश्वा व्याख्यातः ॐ (२.३.८)**

ಏತೇನ = ಹಿಂದೆ ಹೇಳಿದ ವಿಭಕ್ತತ್ವಾದಿ ಹೇತುವಿನಿಂದ, ಮಾತರಿಶ್ವಾ = ಮುಖ್ಯ-ವಾಯುವು, ವ್ಯಾಖ್ಯಾತಃ = ಉತ್ಪತ್ತಿ ಉಳ್ಳವನಾಗಿ ವ್ಯಾಖ್ಯಾನಿಸಲ್ಪಟ್ಟಿದ್ದಾನೆ.

## ಸಿದ್ಧಾಂತ

**ಸೂ.ರ.:–** एवं च युक्तं विष्णोर्जगत्कारणत्वम् । वायोरुत्पत्तिमत्त्वात् । प्राणाद्वायुरिति (तै.आ.३-१२-६) श्रुतिप्रमाणसद्भावात् । न वाऽनुत्पत्तिश्रुतिविरोधः । तस्याः स्वरूपानुत्पत्तिपरत्वेन गौणत्वात् । न च वायोर्मुख्यानुत्पत्तिमत्त्वाभावे विशिष्य नित्यत्वातिशयचेतनत्वोक्तिविरोधः । स्वरूपातिरिक्तज्ञाननित्यत्वाभिप्रायेणातिशयितत्वाद्युक्ति-

**सम्भवात् । अतः श्रुत्यविरोधेन वायोरुत्पत्तिसिद्धेर्युक्तं जगत्कारणत्व-लक्षणमिति सिद्धम् ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ - ಪ್ರಾಣದ್ವಾಯುಃ (ತೈ.ಆ. 3-12-6) ಎಂಬುದಾಗಿ ಶ್ರುತಿಪ್ರಮಾಣದಂತೆ ವಾಯುವೂ ಉತ್ಪತ್ತಿ ಉಳ್ಳವನಾದ್ದರಿಂದ ವಿಷ್ಣುವಿಗೆ ವಾಯುಕಾರಣತ್ವವು ಉಪಪನ್ನವಾಗುತ್ತದೆ.

ವಾಯುವಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿವಿರೋಧ ಬರುತ್ತದೆಯಲ್ಲವೇ? ಎಂದರೆ, ಶ್ರುತಿವಿರೋಧ ಬರುವುದಿಲ್ಲ. ಅನುತ್ಪತ್ತಿ-ಯನ್ನು ಹೇಳುವ ಶ್ರುತಿಯು ವಾಯುದೇವರಿಗೆ ಸ್ವರೂಪತಃ ಉತ್ಪತ್ತಿ ಇಲ್ಲ ಎಂದು ಹೇಳುತ್ತಿರುವುದರಿಂದ ಗೌಣವಾಗಿದೆ.

ವಾಯುವಿಗೆ ಮುಖ್ಯವಾಗಿ ಅನುತ್ಪತ್ತಿ ಇಲ್ಲ ಎನ್ನುವುದಾದರೆ, ವಿಶೇಷವಾಗಿ ನಿತ್ಯತ್ವವನ್ನು ಹೇಳಿದ್ದು ಮತ್ತು ಅತಿಶಯಿತಚೇತನತ್ವವನ್ನು ಹೇಳಿದ್ದರ ವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ವಾಯುದೇವರ ಸ್ವರೂಪಾತಿರಿಕ್ತವಾದ ಜ್ಞಾನಕ್ಕೆ ನಿತ್ಯತ್ವವನ್ನು ಹೇಳುವ ಅಭಿಪ್ರಾಯದಿಂದ ಅತಿಶಯಿತಚೇತನತ್ವಾದಿಗಳನ್ನು ಹೇಳಿದ್ದು ಕೂಡುತ್ತದೆ.

ಆದ್ದರಿಂದ ವಾಯುದೇವರಿಗೆ ಉತ್ಪತ್ತಿ ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ವಾಯುದೇವರಿಗೂ ಉತ್ಪತ್ತಿಯು ಸಿದ್ಧಿಸುವುದರಿಂದ ವಿಷ್ಣುವಿಗೆ ಸರ್ವಕಾರಣತ್ವೇನ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಮಾತರಿಶ್ವಾಧಿಕರಣವು ಮುಗಿಯಿತು.**

ಅಧಿಕರಣ – 3

# ಅಸಂಭವಾಧಿಕರಣ

## ಸಂಗತಿ

**ಸೂ.ರ.:– अत्र भगवदुत्पत्तिविषयश्रुतिविरोधः परिह्रियते ।**

**ಅನು.:–** ಭಗವಂತನಿಗೆ ಉತ್ಪತ್ತಿ ಇದೆ ಎಂದು ತಿಳಿಸುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಮೂರನೇ ಈ ಅಸಂಭವಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न विष्णोः श्रुतिसमन्वयेन जगत्कारणत्वं युक्तम् । तस्योत्पत्तिमत्त्वेन जगत्कारणत्वायोगात् । न च तत्र प्रमाणाभावः । असतः सदजायतेति (ऋ.१०-७२-२) श्रुतेः । न चानादित्वश्रुति-प्रतिरुद्धत्वेन तयोत्पत्त्यसिद्धिः । ब्रह्मोत्पत्तिमत् उत्पत्तिमदविशिष्टत्वा-दित्युत्तत्ति श्रुतेः सयुक्तिकत्वेन प्रबलत्वात् । असत एव तत्कारणत्वेन कारणाभावेनोत्पत्त्यभावः । अतो ब्रह्मणोप्युत्पत्तिमत्त्वादशेषकारणतया समन्वयोऽयुक्त इति प्राप्ते सूत्रितम् ॥**

**ಅನು.:–** ವಿಷ್ಣುವಿಗೆ ಶ್ರುತಿಸಮನ್ವಯ ಮೂಲಕವಾಗಿ ಜಗತ್ಕಾರಣತ್ವವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ – ಆ ವಿಷ್ಣುವೂ ಉತ್ಪತ್ತಿ ಉಳ್ಳವನಾದ್ದರಿಂದ ಅವನಿಗೆ ಜಗತ್ಕಾರಣತ್ವವು ಕೂಡುವುದಿಲ್ಲ.

ವಿಷ್ಣುವೂ ಉತ್ಪತ್ತಿ ಉಳ್ಳವನಾಗಿದ್ದಾನೆ ಎಂದು ಏಕೆ ಹೇಳುತ್ತೀರಿ? ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಲ್ಲ? ಎಂದರೆ, ಅದು ತಪ್ಪು. 'ಅಸತಃ ಸದಜಾಯತ' (ಋ. 10-72-2) ಎಂಬುದಾಗಿ ಅಸತ್‌ನಿಂದ ಬ್ರಹ್ಮನು ಉತ್ಪನ್ನನಾಗುತ್ತಾನೆ ಎಂಬ ಶ್ರುತಿಯೇ ಪ್ರಮಾಣವಾಗಿ ಇದೆ.

'ಅಸತಃ ಸದಜಾಯತ' ಎಂಬ ಶ್ರುತಿಯು ಬ್ರಹ್ಮನಿಗೆ ಅನಾದಿತ್ವವನ್ನು ಹೇಳುವ ಶ್ರುತಿಗೆ ವಿರುದ್ಧವಾಗುವುದರಿಂದ, ಇಂತಹ ಶ್ರುತಿಯಿಂದ ಬ್ರಹ್ಮನಿಗೆ ಉತ್ಪತ್ತಿಯು ಸಿದ್ಧಿಸುವುದಿಲ್ಲ

ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುವ 'ಅಸತಃ ಸದಜಾಯತ' ಎಂಬ ಶ್ರುತಿಗೆ 'ಬ್ರಹ್ಮ ಉತ್ಪತ್ತಿಮತ್ ಉತ್ಪತ್ತಿಮದವಿಶಿಷ್ಟತ್ವಾತ್' (ಬ್ರಹ್ಮನು ಉತ್ಪತ್ತಿಉಳ್ಳವನಾಗಿದ್ದಾನೆ, ಉತ್ಪತ್ತಿ ಉಳ್ಳವರಿಂದ ಅವಿಶಿಷ್ಟನಾದ್ದರಿಂದ) ಎಂಬ ಯುಕ್ತಿಯ ಸಹಾಯವೂ ಇರುವುದರಿಂದ ಉತ್ಪತ್ತಿಶ್ರುತಿಯು ಪ್ರಬಲವಾಗಿದೆ. ಹೀಗಾಗಿ ಪ್ರಬಲವಾದ ಉತ್ಪತ್ತಿಶ್ರುತಿಗೆ ಅನಾದಿತ್ವಶ್ರುತಿಯ ವಿರೋಧ ಬರುವುದಿಲ್ಲ.

ಹಾಗಾದರೆ ಬ್ರಹ್ಮನಿಗೆ ಯಾವುದು ಕಾರಣವೋ ಅದಕ್ಕೂ ಉತ್ಪತ್ತಿಯನ್ನು ಅಂಗೀಕರಿಸಿರಿ. ಆ ಕಾರಣಕ್ಕೂ ಮತ್ತೊಂದು ಕಾರಣ, ಹೀಗೆ ಅನವಸ್ಥಾ ಬರುವುದಲ್ಲ? ಎಂದರೆ, ಅದು ತಪ್ಪು. ಬ್ರಹ್ಮನಿಗೆ ಕಾರಣವಾದದ್ದು ಅಸತ್ ಆದ್ದರಿಂದ ಆ ಅಸತ್‌ಗೆ ಒಂದು ಕಾರಣವಾದದ್ದು ಯಾವುದೂ ಇಲ್ಲವಾದ್ದರಿಂದ ಅನವಸ್ಥಾ ಬರುವುದಿಲ್ಲ. ಆದ್ದರಿಂದ ಬ್ರಹ್ಮನೂ ಉತ್ಪತ್ತಿ ಉಳ್ಳವನೇ ಆಗಿದ್ದರಿಂದ ಸರ್ವಕಾರಣತ್ವೇನ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿರುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ असम्भवस्तु सतोऽनुपपत्तेः ॐ (२.३.९)**

ಸತಃ = ವಿಷ್ಣುವಿಗೆ, ಅಸಂಭವಃ (ತು) ಏವ = ಉತ್ಪತ್ತ್ಯಭಾವವನ್ನೇ ಹೇಳಬೇಕು, ಹೊರತು, ಅಸತಃ ಸದಜಾಯತ ಎಂಬ ಶ್ರುತಿಯಿಂದ ಅಸತ್‌ನಿಂದ ಉತ್ಪತ್ತಿಯನ್ನು ಹೇಳಬಾರದು, ಕುತಃ = ಏಕೆ?, ಅನುಪಪತ್ತೇಃ = ಅಸತ್‌ನಿಂದ ಸತ್‌ನ ಉತ್ಪತ್ತಿಯು ಅನುಪಪನ್ನವಾದ್ದರಿಂದ. ಆದ್ದರಿಂದ ಅಸತ್‌ನಿಂದ ವಿಷ್ಣುವಿಗೂ ಉತ್ಪತ್ತಿಯು ಕೂಡುವುದಿಲ್ಲ.

## ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । असतः सदुत्पत्तेः क्वाप्यदर्शनेनासतः सकाशादुत्पत्त्यनुपपत्तेः । ब्रह्म वाऽसत् सद्वाव प्राण इति (पैंगि) श्रुतेर्ब्रह्मणः सकाशाद्वयोरुत्पत्तिः श्रुत्यर्थ इति । त्वं देवशक्त्यामिति भागवतवचनात् । न च रामकृष्णादिरूपेण हरेर्जायमानत्वम् । तद्रूपाणां प्रादुर्भावत्वेन जनेरनुपपन्नत्वात् । प्रत्यक्षत्वं हरेरिति वचनात् । अतः श्रुत्यविरोधेन ब्रह्मणोऽनादित्वसिद्धेस्तत्र श्रुतिसमन्वयेन जगत्कारणत्वं युक्तमिति सिद्धम् ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ – ಅಸತ್‌ನಿಂದ ಸತ್‌ನ ಉತ್ಪತ್ತಿಯು ಎಲ್ಲಿಯೂ ಕಂಡಿಲ್ಲವಾದ್ದರಿಂದ, ಪ್ರಕೃತ ಬ್ರಹ್ಮನಿಗೂ ಅಸತ್‌ನಿಂದ ಉತ್ಪತ್ತಿಯು ಉಪಪನ್ನವಾಗುವುದಿಲ್ಲ.

ಹಾಗಾದರೆ ಅಸತಃ ಸದಜಾಯತ ಎಂಬ ಶ್ರುತಿಯು ಅಸತ್‌ನಿಂದ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುತ್ತಿದೆಯಲ್ಲ? ಎಂದರೆ, ಆ ಶ್ರುತಿಗೆ ಹಾಗೆ ಅರ್ಥವೇ ಅಲ್ಲ. ಕಿಂತು – "ಬ್ರಹ್ಮ ವಾ ಅಸತ್ ಸದ್ವಾವ ಪ್ರಾಣಃ" ಎಂಬುದಾಗಿ ಪೈಂಗಿಶ್ರುತಿಯು ಹೇಳುವಂತೆ ಅಸತ್ ಎಂದರೆ ಬ್ರಹ್ಮ, ಸತ್ ಎಂದರೆ ವಾಯು. ಅಸತ್‌ನಿಂದ ಸತ್‌ನ ಉತ್ಪತ್ತಿ ಎಂದರೆ, ಬ್ರಹ್ಮನಿಂದ ವಾಯುವಿನ ಉತ್ಪತ್ತಿಯನ್ನು ಹೇಳುತ್ತಿದೆ ಆ ಶ್ರುತಿ.

**ತ್ವಂ ದೇವ ಶಕ್ತ್ಯಾಂ ಗುಣಕರ್ಮಯೋನೌ ರೇತಸ್ತ್ವಜಾಯಾಂ ಕವಿರಾದಧೇಽಜಃ ।**
**ತತೋ ವಯಂ ಸತ್ಪ್ರಮುಖಾ ಯದರ್ಥೇ ಬಭೂವಿಮಾಽಽತ್ಮನ್ ಕರವಾಮ ಕಿಂ ತೇ ॥**

ಎಂಬ ಭಾಗವತಪ್ರಮಾಣವೂ ಬ್ರಹ್ಮನಿಂದ ವಾಯುವಿನ ಉತ್ಪತ್ತಿಯನ್ನೇ ಹೇಳುತ್ತಿದೆ. ಆದ್ದರಿಂದ ಬ್ರಹ್ಮನಿಂದ ವಾಯುವಿನ ಉತ್ಪತ್ತಿ ಎಂಬ ಅರ್ಥವನ್ನೇ ಶ್ರುತಿಗೆ ಹೇಳಬೇಕು. ಹೊರತು ಬ್ರಹ್ಮನಿಗೆ ಅಸತ್‌ನಿಂದ ಉತ್ಪತ್ತಿಯನ್ನು ಹೇಳಬಾರದು.

ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂದು ಏಕೆ ಹೇಳುತ್ತೀರಿ? ರಾಮ-ಕೃಷ್ಣಾದಿ ರೂಪಗಳಿಂದ ಬ್ರಹ್ಮನು ಹುಟ್ಟುವುದು ಕಂಡಿದೆಯಲ್ಲ? ಎಂದರೆ, ಅದು ಸರಿಯಲ್ಲ. ಅಲ್ಲಿ ರಾಮ-ಕೃಷ್ಣಾದಿ ರೂಪಗಳ ಪ್ರಾದುರ್ಭಾವವೇ ಹೊರತು ಉತ್ಪತ್ತಿ ಅಲ್ಲ.

ಅಜಾಯಮಾನೋ ಬಹುಧಾ ವಿಜಾಯತೇ (ತೈ.ಆ. 3-13) ಎಂಬುದಾಗಿ ಶ್ರುತಿಯು ಹೇಳುವಂತೆ ಹಾಗೂ "ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ ।" ಎಂಬುದಾಗಿ ಪಾದ್ಮವಚನವೂ ತಿಳಿಸುವಂತೆ ಪರಮಾತ್ಮನಿಗೆ ಜನ್ಮ ಇಲ್ಲ. ಅವನ ಜನ್ಮ ಎಂದರೆ ಪ್ರತ್ಯಕ್ಷತ್ವ (ಪ್ರಾದುರ್ಭಾವ) ಮಾತ್ರ. ಆದ್ದರಿಂದ ಬ್ರಹ್ಮನಿಗೆ ಉತ್ಪತ್ತಿಯೇ ಇಲ್ಲವಾದ್ದರಿಂದ 'ಅಸತಃ ಸದಜಾಯತ' ಎಂಬ ಶ್ರುತಿಯು ಬ್ರಹ್ಮನ ಉತ್ಪತ್ತಿವಿಷಯಕ ಎಂದು ಹೇಳಲು ಬರುವುದಿಲ್ಲ.

ಆದ್ದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ ಬ್ರಹ್ಮನಿಗೆ ಅನಾದಿತ್ವವು ಸಿದ್ಧಿಸುವುದರಿಂದ, ಜಗತ್ಕಾರಣತ್ವಮೂಲಕವಾಗಿ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅಸಂಭವಾಧಿಕರಣವು ಮುಗಿಯಿತು.

ಅಧಿಕರಣ – 4

## ತೇಜೋऽಧಿಕರಣ

### ಸಂಗತಿ

**ಸೂ.ರ.:– अत्र तेजोजन्मविषयश्रुतिविरोधः परिह्रियते ।**

**ಅನು.:–** ತೇಜಸ್ಸಿಗೆ ವಾಯುವಿನಿಂದ ಜನ್ಮವನ್ನು ತಿಳಿಸುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ನಾಲ್ಕನೇ ಈ ತೇಜೋऽಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न श्रुतिसमन्वयेन विष्णोरसाधारण्येन जगत्कारणत्वं वाच्यम् । तेजसो वायुजातत्वे श्रुतिसद्भावेन विष्णुवद्वायोरप्यग्निकारणत्वेन विष्णोर्विशेपाभावात् । न च वायुद्वारा परमात्मजातत्वाभिधायकत्वं श्रुतेर्वाच्यम् । ब्रह्म वायुद्वारमन्तरेण तेजः स्रष्टुमीष्टे चेत्तद्वारवैयर्थ्यम् । नो चेत्साम्यं तयोरवर्जनीयम् । अतो न जगत्कारणत्वेन सर्वश्रुतिसमन्वयो युक्त इति प्राप्ते सूत्रितम् ॥**

**ಅನು.:–** ಶ್ರುತಿಸಮನ್ವಯ ಮಾಡುವ ಮೂಲಕ ವಿಷ್ಣುವಿಗೆ ಅಸಾಧಾರಣ್ಯೇನ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಲ್ಲ. ಏಕೆಂದರೆ – ''ವಾಯೋರಗ್ನಿಃ'' ಎಂಬುದಾಗಿ ಅಗ್ನಿಯು ವಾಯುವಿನಿಂದ ಹುಟ್ಟಿದೆ ಎನ್ನುವ ವಿಷಯದಲ್ಲಿ ಶ್ರುತಿಪ್ರಮಾಣ ಇರುವುದರಿಂದ, ವಿಷ್ಣುವಿಗೆ ಕಾರಣತ್ವ ಇರುವಂತೆ ವಾಯುವಿಗೂ ಅಗ್ನಿಕಾರಣತ್ವ ಇರುವುದರಿಂದ ವಿಷ್ಣುವಿಗೆ ವಿಶೇಷಕಾರಣತ್ವ (ಅಸಾಧಾರಣ್ಯೇನ ಕಾರಣತ್ವವು) ಇಲ್ಲ.

''ಈ ವಾಯೋರಗ್ನಿಃ ಎಂಬ ಶ್ರುತಿಯು ವಾಯುದ್ವಾರಾ ವಿಷ್ಣುವಿನಿಂದ ಅಗ್ನಿ ಜಾತವಾಗಿದೆ ಎಂದು ಹೇಳುತ್ತಿದೆ' ಎಂಬುದಾಗಿ ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ಬ್ರಹ್ಮನು ವಾಯುದ್ವಾರ ಇಲ್ಲದೇ ತೇಜಸ್ಸನ್ನು ಸೃಷ್ಟಿ ಮಾಡಲು ಸಮರ್ಥನಾಗಿದ್ದಾನೆಯೋ? ಸಮರ್ಥನಾಗಿಲ್ಲವೋ?

ವಾಯುದ್ವಾರ ಇಲ್ಲದೇ ತೇಜಸ್ಸನ್ನು ಸೃಷ್ಟಿ ಮಾಡಲು ಸಮರ್ಥ ಎಂದರೆ, ಹಾಗಾದರೆ ವಾಯುದ್ವಾರಾ ಎಂಬುದಾಗಿ ಈ ಶ್ರುತಿಗೆ ಅರ್ಥ ಹೇಳುವುದು ವ್ಯರ್ಥವಾಗಬೇಕಾಗುತ್ತದೆ. ಇನ್ನು ವಾಯುದ್ವಾರಾ ಇಲ್ಲದೇ ತೇಜಸ್ಸನ್ನು ಸೃಷ್ಟಿಸಲು ಸಮರ್ಥನಲ್ಲ ಎಂದರೆ ಹಾಗಾದರೆ ಇಬ್ಬರಿಗೂ ಸಾಮ್ಯವು ಅವರ್ಜನೀಯವಾಗುತ್ತದೆ.

ಆದ್ದರಿಂದ ವಿಷ್ಣುವಿನಲ್ಲಿ ಜಗತ್ಕಾರಣತ್ವೇನ ಸರ್ವಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तेजोऽतस्तथा ह्याह ॐ (२.३.१०)**

ತೇಜಃ = ತೇಜಸ್ಸೆಂಬ ಭೂತವು, ಅತಃ (ಬ್ರಹ್ಮಣ ಏವ) = ಬ್ರಹ್ಮನಿಂದಲೇ ಉತ್ಪನ್ನವಾಗುತ್ತದೆ, ನ ವಾಯೋಃ = ಹೊರತು ವಾಯುವಿನಿಂದ ಉತ್ಪನ್ನವಾಗುವುದಿಲ್ಲ ಕುತಃ = ಏಕೆ?, ಹಿ = ಯಾವ ಕಾರಣ, ತತ್ತೇಜಃ (ಛಾಂ. 6-2-3) ಎಂಬ ಶ್ರುತಿಯು, ತಥಾ = ಹಿಂದೆ ಹೇಳಿದ ಪ್ರಕಾರ (ಬ್ರಹ್ಮನಿಂದಲೇ ತೇಜಸ್ಸು ಉತ್ಪನ್ನವಾಯಿತು ಎಂದೇ), ಆಹ = ಹೇಳುತ್ತಿದೆಯೋ ಆ ಕಾರಣ.

## ಸಿದ್ಧಾಂತ

**ಸೂ.ರ.:- एवं च युक्तमेव तत्र सर्वश्रुतिसमन्वयेन जगत्कारणत्वम् । तत्तेजोऽसृजतेति श्रुतेरग्नेर्विष्णुजातत्वात् । न च वायोरग्निरि (तै.२-१) त्यादिश्रुतिविरोधः । तत्र वायुद्वारा तेजसो ब्रह्मजातत्वोक्तेः । न च द्वारवैयर्थ्यान्यथाऽनुपपत्त्योभयोरपि कारणत्वं वाच्यम् । शक्तस्यापि ब्रह्मणः स्वेच्छयैव द्वारमनुसृत्य कारणत्वस्य प्रमाणसिद्धत्वात् । अतः श्रुत्यविरोधेन तेजसो ब्रह्मजातत्वसिद्धेः सर्वश्रुतिसमन्वयेन जगत्कारणत्वं हरेरिति सिद्धम् ॥**

**ಅನು.:-** ಸರ್ವಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಏಕೆಂದರೆ - 'ತತ್ತೇಜೋಽಸೃಜತ' ಎಂಬ ಶ್ರುತಿಯಂತೆ ಅಗ್ನಿಯು ವಿಷ್ಣುವಿನಿಂದ ಉತ್ಪನ್ನವಾಗಿದೆ, ಹೊರತು ವಾಯುವಿನಿಂದ ಉತ್ಪನ್ನವಾಗಿಲ್ಲ.

ಹಾಗಾದರೆ 'ವಾಯೋರಗ್ನಿಃ' ಎಂಬ ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಅಲ್ಲಿ ವಾಯುದ್ವಾರಾ ಬ್ರಹ್ಮನಿಂದಲೇ ಅಗ್ನಿ ಉತ್ಪನ್ನವಾಗಿದೆ ಎಂಬ ತತ್ವವೇ ಪ್ರತಿಪಾದ್ಯವಾಗಿದೆ.

ಹಾಗಾದರೆ ದ್ವಾರವೈಯರ್ಥ್ಯಾನ್ಯಥಾನುಪಪತ್ತಿಯಿಂದ ಬ್ರಹ್ಮ-ವಾಯು ಇಬ್ಬರಿಗೂ ಕಾರಣತ್ವವನ್ನು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. ವಾಯುದ್ವಾರಾ ಇಲ್ಲದೇ (ಸ್ವತಂತ್ರವಾಗಿ) ಅಗ್ನಿಯನ್ನು ಸೃಷ್ಟಿ ಮಾಡಲು ವಿಷ್ಣುವು ಸಮರ್ಥನಾಗಿದ್ದರೂ ಸಹ, ತನ್ನ ಇಚ್ಛೆಯಿಂದಲೇ ದ್ವಾರವನ್ನು ಅನುಸರಿಸಿ ಕಾರಣನಾಗುತ್ತಾನೆ ಎಂಬುವುದು ಪ್ರಮಾಣ-ಸಿದ್ಧವಾಗಿದೆ.

ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ, ತೇಜಸ್ಸಿಗೆ ಬ್ರಹ್ಮಜಾತತ್ವವು ಸಿದ್ಧಿಸುವುದರಿಂದ, ಸರ್ವಶ್ರುತಿಸಮನ್ವಯ ಮೂಲಕ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತೇಜೋऽಧಿಕರಣವು ಮುಗಿಯಿತು.**

*ಅಧಿಕರಣ – 5*

## ಅಬಧಿಕರಣ

### ಸಂಗತಿ

**ಸೂ.ರ.:– अत्राब्जन्मविषयश्रुतिविरोधः परिह्रियते ।**

**ಅನು.:–** ಅಪ್‌ಗೆ ಜನ್ಮವನ್ನು (ಅಗ್ನಿಯಿಂದ ಉತ್ಪತ್ತಿಯನ್ನು) ಹೇಳುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಐದನೇ ಈ ಅಬಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:–** ननु न हरेः श्रुतिसमन्वयेन जगत्कारणत्वं युक्तम् । अपामग्नेराप इति (तै.२-१) श्रुतिबलेन तेजोजातत्वात् । न च

**तदपोऽसृजतेति (छां.६-२-३) श्रुतिविरोधेन प्रतीतार्थे तेजोजातत्वश्रुतेरप्रामाण्यम् । आपस्तेजसो जायन्ते अप्त्वात्स्वेदवदिति युक्तियुक्तत्वेन प्राबल्यात् । तथा च तत्तेज ऐक्षतेति (छां.६-२-३) श्रुतेः । ततश्च न ब्रह्मणः श्रुतिसमन्वयेन जगत्कारणत्वमिति प्राप्ते सूत्रमाह ।**

**ಅನು.:–** ವಿಷ್ಣುವಿಗೆ ಶ್ರುತಿಸಮನ್ವಯ ಮೂಲಕವಾಗಿ ಜಗತ್ಕಾರಣತ್ವವನ್ನು ಹೇಳು-ವುದು ಸರಿಯಲ್ಲ. ಏಕೆಂದರೆ - ಅಗ್ನೇರಾಪಃ (ತೈ. 2-1) ಎಂಬ ಶ್ರುತಿಬಲದಿಂದಾಗಿ ಅಪ್ (ಜಲವು) ತೇಜಸ್ಸಿನಿಂದ ಹುಟ್ಟಿದೆ ಎಂದು ತಿಳಿಯುತ್ತಿದೆ. ಹೀಗಾಗಿ ಅಪ್‌ಕಾರಣತ್ವವು ಅಗ್ನಿಗೆ ಉಪಪನ್ನವಾಗುತ್ತದೆಯೇ ಹೊರತು ವಿಷ್ಣುವಿಗೆ ಉಪಪನ್ನವಾಗುವುದಿಲ್ಲ.

'ತದಪೋಽಸೃಜತ' (ಛಾಂ.6-2-3) ಎಂಬುದಾಗಿ ಶ್ರುತಿಯು ವಿಷ್ಣುವಿಗೆ ಅಪ್-ಕಾರಣತ್ವವನ್ನು ಹೇಳುತ್ತಿರುವುದರಿಂದ ಪ್ರಕೃತ ಅಗ್ನಿಗೆ ಅಪ್‌ಕಾರಣತ್ವವನ್ನು ಹೇಳಿದರೆ ಈ ಶ್ರುತಿಯ ವಿರೋಧ ಬರುವುದರಿಂದ ತೇಜೋಜಾತತ್ವಶ್ರುತಿಗೆ ಪ್ರತೀತಾರ್ಥದಲ್ಲಿ ಅಪ್ರಾಮಾಣ್ಯ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ತೇಜೋಜಾತತ್ವಶ್ರುತಿಗೆ

ಆಪಃ ತೇಜಸೋ ಜಾಯಂತೇ ಅಪ್ತ್ವಾತ್ ಸ್ವೇದವತ್

ಎಂಬುದಾಗಿ ಅಪ್‌ಗೆ ತೇಜಸ್ಸಿನಿಂದ ಉತ್ಪತ್ತಿಯನ್ನು ಹೇಳುವ ಅನುಮಾನದ ಸಹಾಯ (ಬೆಂಬಲ) ಇರುವುದರಿಂದ ತೇಜೋಜಾತತ್ವಶ್ರುತಿಯು ಪ್ರಬಲವಾಗಿದೆ. ಪ್ರಬಲವಾದ ತೇಜೋಜಾತತ್ವಶ್ರುತಿಗೆ 'ತದಪೋಽಸೃಜತ ' ಎಂಬ ಶ್ರುತಿಯ ವಿರೋಧ ಬಾರದ ಕಾರಣ ಅಪ್ರಾಮಾಣ್ಯಪ್ರಸಕ್ತಿ ಇಲ್ಲ.

ಆದ್ದರಿಂದ ಅಗ್ನಿಗೇ ಅಪ್‌ಕಾರಣತ್ವವು ಇರುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ आप: ॐ (२.३.११)

ಈ ಸೂತ್ರದಲ್ಲಿಯೂ ಸಹ ಅತಃ ತಥಾ ಹಿ ಆಹ ಎಂಬ ಪದಗಳು ಅನುವೃತ್ತವಾಗುತ್ತವೆ.

ಆಪಃ = ಅತಃ ವಿಷ್ಣೋರೇವೋತ್ಪತ್ತಿಮತ್ಯಃ ನ ತು ಅನ್ಯತಃ = ಜಲವು ವಿಷ್ಣುವಿನಿಂದಲೇ ಉತ್ಪತ್ತಿ ಉಳ್ಳದ್ದಾಗಿದೆ. ಹೊರತು ಅಗ್ನಿಯಿಂದ ಉತ್ಪತ್ತಿ ಉಳ್ಳದ್ದಲ್ಲ. ಕುತಃ = ಏಕೆ?, ಹಿ = ಯಾವ ಕಾರಣ, ಬ್ರಹ್ಮೈವೇದಮ್ = ಎಂಬ ಶ್ರುತಿಯು, ತಥಾ ಆಹ = ಜಲವು ವಿಷ್ಣುವಿನಿಂದ ಉತ್ಪತ್ತಿ ಉಳ್ಳದ್ದಾಗಿದೆ ಎಂದು ಹೇಳುತ್ತಿದೆಯೋ, ತಸ್ಮಾತ್ = ಆ ಕಾರಣ.

## ಸಿದ್ಧಾಂತ

**ಸೂ.ರ.:–** एवं च युक्तमेव विष्णोर्जगत्काणत्वम् । अग्नेराप इति श्रुतेरपां परमात्मन उत्पत्तावग्निद्वारमित्येवंपरत्वेन ब्रह्मैवेदमग्र इति श्रुतेः । न च श्रुतिद्वयान्यथाऽनुपपत्त्या ब्रह्मतेजसोः साम्येनैव कारणत्वम् । कर्ता सर्वस्य वै विष्णुरिति (भविष्यत्पुराण) वचनविरोधात् । ततश्च श्रुत्यविरोधेनापां ब्रह्मजातत्वसिद्धेर्युक्तं वेदसमन्वयेन जगत्कारणत्वं हरेरिति सिद्धम् ॥

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಹಾಗಾದರೆ ಅಗ್ನಿಗೆ ಅಪ್‌ಕಾರಣತ್ವವನ್ನು ಹೇಳುವ 'ಅಗ್ನೇರಾಪಃ' ಎಂಬ ಶ್ರುತಿವಿರೋಧ ಬರುವುದಿಲ್ಲವೇ? ಎಂದರೆ, ವಿರೋಧ ಬರುವುದಿಲ್ಲ.

'ಬ್ರಹ್ಮೈವೇದಮಗ್ರ ಆಸೀತ್' ಎಂಬ ಶ್ರುತಿಯು ಇರುವುದರಿಂದ 'ಅಗ್ನೇರಾಪಃ' ಎಂಬ ಶ್ರುತಿಯು ಅಗ್ನಿದ್ವಾರಾ ಪರಮಾತ್ಮನಿಂದ ಅಪ್‌ಗೆ ಉತ್ಪತ್ತಿಯನ್ನು ಹೇಳುತ್ತಿದೆ. ಹೀಗಾಗಿ ವಿರೋಧ ಬರುವುದಿಲ್ಲ.

ಶ್ರುತಿದ್ವಯಾನ್ಯಥಾನುಪಪತ್ತಿಯಿಂದಾಗಿ ಬ್ರಹ್ಮ-ತೇಜಸ್ಸು ಎರಡಕ್ಕೂ ಸಮಾನವಾಗಿಯೇ ಕಾರಣತ್ವ ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ. 'ಕರ್ತಾ ಸರ್ವಸ್ಯ ವೈ ವಿಷ್ಣುಃ' ಎಂಬ ಭವಿಷ್ಯತ್ಪುರಾಣವಚನದ ವಿರೋಧ ಬರುತ್ತದೆಯಾದ್ದರಿಂದ ತೇಜಸ್ಸಿಗೆ ಕಾರಣತ್ವವನ್ನು ಹೇಳುವುದು ಸರಿಯಲ್ಲ.

ಆದ್ದರಿಂದ ವಿಷ್ಣುವಿಗೆ ಅಪ್‌ಕಾರಣತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಅಪ್‌ಗೆ ವಿಷ್ಣುಜಾತತ್ವವು ಸಿದ್ಧಿಸುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅಬಧಿಕರಣವು ಮುಗಿಯಿತು.

ಅಧಿಕರಣ – 6

# ಪೃಥಿವ್ಯಧಿಕರಣ

## ಸಂಗತಿ

ಸೂ.ರ.:– अत्रान्यद्वारा जगत्कारणे समन्वयसिद्ध्यर्थमपां ब्रह्मद्वारत्वे श्रुति-विरोधः परिह्रियते ।

ಅನು.:– ಅನ್ಯದ್ವಾರಾ ಜಗತ್ಕಾರಣನಾದ ಬ್ರಹ್ಮನಲ್ಲಿ ಸಮನ್ವಯಸಿದ್ಧಿಗಾಗಿ (ಅಪ್‌ಗೆ ಬ್ರಹ್ಮದ್ವಾರತ್ವವನ್ನು ಹೇಳಿದರೆ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ) ದ್ವಾರವಿಷಯಶ್ರುತಿ-ವಿರೋಧವನ್ನು ಪರಿಹರಿಸುತ್ತಾರೆ ಆರನೇ ಈ ಪೃಥಿವ್ಯಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न विष्णोर्जगत्कारणत्वं युक्तम् । द्वारकारण-विषयश्रुतीनां परस्परविरोधेनाप्रामाण्यात् । तथा हि । ता अन्नमसजन्ते (छां.६-२)त्यन्नसृष्टेरप्सृष्ट्यानन्तर्यमुच्यते । अद्भ्यः पृथिवीति (तै.२-१) पृथिवीसृष्टेरप्सृष्ट्यानन्तर्यम् । विरोधेनोभयासम्भवात् ।

ಅನು.:– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ದ್ವಾರಕಾರಣ ವಿಷಯಶ್ರುತಿಗಳಲ್ಲಿ ಪರಸ್ಪರವಿರೋಧ ಬರುವುದರಿಂದ ಅಪ್ರಾಮಾಣ್ಯ ಉಳ್ಳದ್ದಾಗಿದೆ ದ್ವಾರವಿಷಯಶ್ರುತಿಗಳು. ಅದು ಹೇಗೆಂದರೆ –

'ತಾ ಅನ್ನಮಸೃಜಂತ' (ಛಾಂ. 6-2) ಎಂಬುದಾಗಿ ಅಪ್‌ಸೃಷ್ಟಿಯ ಅನಂತರ ಅನ್ನಸೃಷ್ಟಿಯು ಹೇಳಲ್ಪಡುತ್ತದೆ. ಮತ್ತು 'ಅದ್ಭ್ಯಃ ಪೃಥಿವೀ' (ತೈ. 2-1) ಎಂಬುದಾಗಿ ಅಪ್‌ಸೃಷ್ಟಿಯ ಅನಂತರ ಪೃಥಿವೀಸೃಷ್ಟಿಯು ಹೇಳಲ್ಪಡುತ್ತಿದೆ. ಹೀಗಾಗಿ ಅಪ್‌ನಿಂದ ಅನ್ನ ಹುಟ್ಟಿತು ಎಂದು ಹೇಳಿದರೆ, ಮತ್ತೊಂದೆಡೆ ಅಪ್‌ನಿಂದ ಪೃಥಿವಿಯು ಹುಟ್ಟಿತು ಎಂದು ಹೇಳುತ್ತಿದೆ. ಆದ್ದರಿಂದ ಎರಡು ಶ್ರುತಿಗಳಲ್ಲಿ ಪರಸ್ಪರವಿರೋಧ ಬರುವುದರಿಂದ ಒಂದೇ ಅಪ್‌ನಿಂದ ಅನ್ನಸೃಷ್ಟಿ-ಪೃಥಿವೀಸೃಷ್ಟಿ ಎರಡೂ ಅಸಂಭಾವಿತವೇ ಆಗಿದೆ.

**ಸೂ.ರ.:– न च तत्रान्नशब्देन पृथिव्येव विवक्षिता । अन्नश्रुतेः प्रसिद्धान्नपरत्वे बहुवाक्यानुसारित्वगुणलाभात् । तस्मायत्र क च वर्षतीति प्रसिद्धान्नलिङ्गाच्च ।**

**ಅನು.:–** 'ತಾ ಅನ್ನಮಸೃಜಂತ ' ಎನ್ನುವಲ್ಲಿ ಅನ್ನಶಬ್ದದಿಂದ ಪೃಥಿವಿಯೇ ವಿವಕ್ಷಿತ-ವಾಗಿದೆ. ಹೀಗಾಗಿ ಎರಡೂ ಶ್ರುತಿಗಳಲ್ಲಿ ಅಪ್‌ನಿಂದ ಪೃಥಿವೀಸೃಷ್ಟಿಯೇ ಹೇಳಲ್ಪಡುವಂತೆ ಆಗುವುದರಿಂದ ಶ್ರುತಿಗಳಲ್ಲಿ ಪರಸ್ಪರವಿರೋಧ ಬರುವುದಿಲ್ಲ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಅಲ್ಲಿ ಅನ್ನಪದದಿಂದ ಪೃಥಿವಿಯನ್ನು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ – ಅನ್ನಶಬ್ದಕ್ಕೆ ಪ್ರಸಿದ್ಧಾನ್ನಪರತ್ವವನ್ನು ಹೇಳಿದರೆ ಬಹುವಾಕ್ಯಾನುಸಾರಿತ್ವ ಎಂಬ ಗುಣಲಾಭ ಇದೆ. ಮತ್ತು 'ಯತ್ರ ಕ್ವ ಚ ವರ್ಷತಿ' ಎಂಬುದಾಗಿ ಅಲ್ಲಿ ಪ್ರಸಿದ್ಧಾನ್ನಜ್ಞಾಪಕವಾದ ಲಿಂಗವೂ ಇದೆ. ಆದ್ದರಿಂದ ಅಲ್ಲಿ ಅನ್ನಶಬ್ದಕ್ಕೆ ಪೃಥಿವೀ ಎಂಬ ಅರ್ಥವನ್ನು ವಿವಕ್ಷಿಸುವುದು ಸರಿಯಲ್ಲ.

**ಸೂ.ರ.:– न च पृथिवीपदेनान्नसंग्रहः । अद्भ्य एवान्नसृष्ट्यङ्गी-कारेऽद्भ्यः पृथिवीति श्रुतिविरोधात् ।**

**ಅನು.:–** 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯಲ್ಲಿ ಪೃಥವೀಪದದಿಂದ ಅನ್ನವನ್ನು ಸಂಗ್ರಹಿಸೋಣ. ಹೀಗಾಗಿ ಎರಡೂಕಡೆ ಅಪ್‌ನಿಂದ ಅನ್ನದ ಸೃಷ್ಟಿಯೇ ಹೇಳಿದಂತಾ-ಗುವುದರಿಂದ ಪರಸ್ಪರವಿರೋಧ ಬರುವುದಿಲ್ಲ ಎಂದು ಶಂಕಿಸುವುದೂ ಸರಿಯಲ್ಲ.

ಹಾಗೆ ಅಪ್‌ನಿಂದಲೇ ಅನ್ನಸೃಷ್ಟಿಯನ್ನು ಅಂಗೀಕರಿಸುವುದಾದರೆ "ಅದ್ಭ್ಯಃ ಪೃಥಿವೀ, ಪೃಥಿವ್ಯಾ ಓಷಧಯಃ, ಓಷಧೀಭ್ಯೋಽನ್ನಮ್" ಎಂಬ ಶ್ರುತಿಯ ವಿರೋಧ ಬರಬೇಕಾ-ಗುತ್ತದೆ. ಅಂದರೆ ಈ ಶ್ರುತಿಯಲ್ಲಿ ಅಪ್‌ನಿಂದ ಪೃಥವೀಸೃಷ್ಟಿಯು ಹೇಳಲ್ಪಡುತ್ತಿರು-ವುದರಿಂದ ನೀವು ಅಪ್‌ನಿಂದ ಅನ್ನಸೃಷ್ಟಿಯನ್ನು ಅಂಗೀಕರಿಸುವುದಾದರೆ ಈ ಶ್ರುತಿಯ ವಿರೋಧ ಬರಬೇಕಾಗುತ್ತದೆ ಎಂದು ಭಾವ.

**ಸೂ.ರ.:– नापि पृथिव्यन्नयोरद्भ्यो युगपदुत्पत्तिः । उक्तश्रुति-विरोधात् । न चान्नस्य सृष्टिभेदेनाद्भ्य ओषधीभ्योऽपि जन्म । बहुकल्पना-पातात् । अतः श्रुतिद्वयस्य परस्परविरुद्धत्वेनाप्रामाण्यमेवेति न श्रुति-समन्वयो युक्त इति प्राप्ते सूत्रितम् ॥**

**ಅನು.:**– ಒಂದೇ ಅಪ್‌ನಿಂದ ಪೃಥಿವೀ-ಅನ್ನ ಎರಡೂ ಯುಗಪತ್ ಉತ್ಪನ್ನವಾಗುತ್ತದೆ ಎಂದು ಹೇಳೋಣ ಎಂದರೆ, ಅದೂ ಸರಿಯಲ್ಲ. ಹಿಂದೆ ಹೇಳಿದ ಶ್ರುತಿವಿರೋಧ ಬರುತ್ತದೆ. ಹಿಂದಿನ ಶ್ರುತಿಯಲ್ಲಿ 'ಓಷಧೀಭ್ಯೋಽನ್ನಮ್' ಎಂಬುದಾಗಿ ಓಷಧಿಯಿಂದ ಅನ್ನಸೃಷ್ಟಿಯು ಹೇಳಲ್ಪಡುತ್ತಿರುವುದರಿಂದ ಶ್ರುತಿಯ ವಿರೋಧ ಬರಬೇಕಾಗುತ್ತದೆ.

ಅನ್ನಕ್ಕೆ ಸೃಷ್ಟಿಭೇದೇನ ಅಪ್‌ನಿಂದಲೂ ಸೃಷ್ಟಿ ಹಾಗೂ ಓಷಧಿಗಳಿಂದಲೂ ಸೃಷ್ಟಿ ಎಂಬುದಾಗಿ ಅಂಗೀಕರಿಸಬಹುದಲ್ಲ? ಎಂದರೆ, ಅದು ಸರಿಯಲ್ಲ. ಬಹುಕಲ್ಪನಾ ಮಾಡಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ದ್ವಾರವಿಷಯಶ್ರುತಿಗಳು ಪರಸ್ಪರ ವಿರುದ್ಧವಾದ್ದರಿಂದ ಅಪ್ರಾಮಾಣ್ಯ ಬಂದೇ ಬರುತ್ತದೆಯಾದ್ದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮೂಲಕವಾಗಿ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ पृथिव्यधिकाररूपशब्दान्तरादिभ्यः ॐ (२.३.१२)**

ಪೃಥಿವೀ = ಪೃಥಿವಿಯೇ 'ತಾ ಅನ್ನಮಸೃಜಂತ' ಎಂಬ ಶ್ರುತಿಗತವಾದ ಅನ್ನಶಬ್ದದಿಂದ ವಾಚ್ಯವಾಗಿದೆ. ನ ಪ್ರಸಿದ್ಧಾನ್ನಂ = ಹೊರತು ಪ್ರಸಿದ್ಧಾನ್ನ ಅಲ್ಲ. ಕುತಃ = ಯಾಕೆ?, ಅಧಿಕಾರರೂಪಶಬ್ದಾಂತರಾದಿಭ್ಯಃ = ಅಧಿಕಾರಶಬ್ದಿತ ಭೂತಪ್ರಕರಣವಾದ್ದರಿಂದ, ರೂಪಶಬ್ದದಿಂದ ಹೇಳಲ್ಪಡುವ ಕೃಷ್ಣವರ್ಣವೂ ಶ್ರುತವಾಗುತ್ತಿರುವುದರಿಂದ, ಶಬ್ದಾಂತರ ಅಂದರೆ 'ಪೃಥಿವೀ ವಾಽನ್ನಂ' (ತೈ.3-9) ಎಂಬುದಾಗಿ ವಿಶೇಷಶ್ರುತಿಯು ಇರುವುದರಿಂದಲೂ ಮತ್ತು 'ತಾ ಅನ್ನಮಸೃಜಂತೇತಿ ವಾಕ್ಯಂ, ನ ಅಪ್ರಮಾಣಂ, ಅಪೌರುಷೇಯತ್ವೇನ ನಿರ್ದೋಷತ್ವಾತ್' ಇತ್ಯಾದಿ ಯುಕ್ತಿಯೂ ಇರುವುದರಿಂದ.

## ಸಿದ್ಧಾಂತ

**ಸೂ.ರ.:**– एवं च युक्तमेव विष्णोर्जगत्कारणत्वम् । श्रुत्योरविरोधात् । तथा हि । ता अन्नमित्यत्रान्नशब्देन पृथिवी विवक्षिता । तत्तेजोऽसृजतेति (छां.६-२-३) भूतप्रकरणात् । यद्रोहितमित्यन्नस्य कार्ष्ण्यश्रवणात् । न चैतावल्लक्षणम् । आपश्च पृथिवी चान्नमिति (ऐ.आ.२-३-१) शब्दान्तरे पृथिव्या अन्नशब्दाभिधेयत्वाभिधानात् ।

**ಅನು.:**– ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ ಶ್ರುತಿಗಳಲ್ಲಿ ಪರಸ್ಪರವಿರೋಧ ಬರುವುದಿಲ್ಲ. ಅದು ಹೇಗೆಂದರೆ –

'ತತ್ತೇಜೋಽಸೃಜತ' ಎಂಬುದಾಗಿ ಭೂತಪ್ರಕರಣವಾದ್ದರಿಂದ 'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿರುವ ಅನ್ನಶಬ್ದದಿಂದ ಪೃಥಿವಿಯು ವಿವಕ್ಷಿತವಾಗಿದೆ.

ಮತ್ತು 'ಯದ್ರೋಹಿತಂ' ಎಂಬುದಾಗಿ ಅನ್ನಕ್ಕೆ ಕಾರ್ಷ್ಣ್ಯವರ್ಣವು ಶ್ರುತವಾಗುತ್ತಿರು-ವುದರಿಂದ, ಕಾರ್ಷ್ಣ್ಯವರ್ಣವು ಪೃಥಿವಿಯ ವರ್ಣವಾಗಿದ್ದರಿಂದ ಅನ್ನಶಬ್ದದಿಂದ ಪೃಥಿವಿಯು ವಿವಕ್ಷಿತವಾಗಿದೆ.

ಹಾಗೂ 'ಆಪಶ್ಚ ಪೃಥಿವೀ ಚಾನ್ನಂ' ಎಂಬುದಾಗಿ (ಐ.ಆ. 2-3-1) ಮತ್ತೊಂದು ಶ್ರುತಿಯಲ್ಲಿ ಪೃಥಿವಿಗೆ ಅನ್ನಶಬ್ದವಾಚ್ಯತ್ವವು ಶ್ರುತವಾಗುತ್ತಿರುವುದರಿಂದಲೂ ಅನ್ನಶಬ್ದದಿಂದ ಪೃಥಿವಿಯು ವಿವಕ್ಷಿತವಾಗಿದೆ. ಆದ್ದರಿಂದ ತಾ ಅನ್ನಮಸೃಜಂತ ಎಂಬ ಶ್ರುತಿ ಹಾಗೂ ಅದ್ಭ್ಯಃ ಪೃಥಿವೀ ಎಂಬ ಶ್ರುತಿ ಈ ಶ್ರುತಿಗಳಲ್ಲಿ ಪರಸ್ಪರವಿರೋಧ ಇಲ್ಲ.

**ಸೂ.ರ.:- न च वृष्टिजत्वलिङ्गविरोधः । पार्थिवपदार्थानां वृष्ट्युत्पन्नार्थत्वेनोपपत्तेः । न च श्रुतेरर्थान्तरकल्पनाऽयोगेन श्रुत्योर्विरोधेनाप्रामाण्यम् । वेदो नाप्रमाणम् अप्रामाण्यकारणदोषशून्यत्वात् प्रत्यक्षवदित्युक्तिविरोधात् । ततश्च विरोधाभावेन युक्तः श्रुतिसमन्वय इति सिद्धम् ॥**

**ಅನು.:-** ಪೃಥಿವಿಯೇ ಅನ್ನಶಬ್ದವಾಚ್ಯ ಎನ್ನುವುದಾದರೆ ವೃಷ್ಟಿಜತ್ವಲಿಂಗವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಪಾರ್ಥಿವಪದಾರ್ಥಗಳು ವೃಕ್ಷಜನ್ಯವಾಗಿವೆ ಎಂಬ ಅರ್ಥದಲ್ಲಿಯೂ ಶ್ರುತಿಯನ್ನು ಕೂಡಿಸಬಹುದಾದ್ದರಿಂದ ವೃಷ್ಟಿಜತ್ವಲಿಂಗವಿರೋಧ ಬರುವುದಿಲ್ಲ.

ಶ್ರುತಿಗೆ ಅರ್ಥಾಂತರಕಲ್ಪನಾ ಮಾಡಲು ಬರದಿರುವುದರಿಂದ ಶ್ರುತಿಗಳಲ್ಲಿ ಪರಸ್ಪರವಿರೋಧ ಬರುವ ಕಾರಣ ಅಪ್ರಾಮಾಣ್ಯ ಬರುತ್ತದೆ? ಎಂದು ಶಂಕಿಸುವುದು ಸರಿಯಲ್ಲ.

ವೇದೋ ನ ಅಪ್ರಮಾಣಂ ಅಪ್ರಾಮಾಣ್ಯಕಾರಣದೋಷಶೂನ್ಯತ್ವಾತ್ ಪ್ರತ್ಯಕ್ಷವತ್ ಎಂಬ ಯುಕ್ತಿವಿರೋಧ ಬರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯಶಂಕೆಗೆ ಅವಕಾಶವಿಲ್ಲ. ಆದ್ದರಿಂದ ಶ್ರುತಿಗಳಲ್ಲಿ ಪರಸ್ಪರವಿರೋಧ ಬಾರದ ಕಾರಣ, ಜಗತ್ಕಾರಣತ್ವೇನ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪೃಥಿವ್ಯಧಿಕರಣವು ಮುಗಿಯಿತು.

ಅಧಿಕರಣ - 7

# ತದಭಿಧ್ಯಾನಾಧಿಕರಣ

## ಸಂಗತಿ

**ಸೂ.ರ.:– अत्र ब्रह्मणः प्रकृताधिभूताधिदैवविषयसंहृतिकर्तृत्वे श्रुति-विरोधः परिह्रियते ।**

ಅನು.:– ಬ್ರಹ್ಮನಿಗೆ ಅಧಿಭೂತ-ಅಧಿದೈವವಿಷಯಕ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ವಿಳನೇ ಈ ತದಭಿಧ್ಯಾನಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न विष्णुः सर्वसंहर्ता । अपि तु रुद्र एव । प्राणानां ग्रन्थिरसीति (महाना.१६-२) श्रुतेः । न च विष्णोः सर्व-शब्दवाच्यत्वेन सा श्रुतिर्विष्णुपरा रुद्रपरत्वेऽपि तस्य द्वारकरण-त्वाभिधात्री । लोकविरोधात् । लोके हि पिता न पुत्रमारकः । मारकोऽपि मूढ एव न प्राज्ञः । ततश्च पितुरीश्वरस्य जगन्मारकत्वाङ्गीकारे मौढ्यमवेति न च तद्युक्तमिति लोकविरोधो दुर्वारः ।**

ಅನು.:– ವಿಷ್ಣುವು ಸರ್ವಸಂಹರ್ತಾ ಆಗಲು ಸಾಧ್ಯವಿಲ್ಲ. ಕಿಂತು "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಸ್ತೇನಾನ್ನೇನಾಪ್ಯಾಯಸ್ವ" (ಮಹಾನಾ 16-2) ಎಂಬುದಾಗಿ ಶ್ರುತಿಪ್ರಮಾಣವು ಇರುವುದರಿಂದ ರುದ್ರನೇ ಸರ್ವಸಂಹರ್ತಾ ಆಗಿರುತ್ತಾನೆ.

ವಿಷ್ಣುವು ಸರ್ವಶಬ್ದವಾಚ್ಯನಾದ್ದರಿಂದ ಪ್ರಾಣಾನಾಂ ಗ್ರಂಥಿರಸಿ ಎಂಬ ಶ್ರುತಿಯು ವಿಷ್ಣುಪರವೇ ಆಗಿದೆ ಎಂದಾಗಬಹುದಲ್ಲ? ಅಥವಾ ರುದ್ರಪರ ಎಂದೇ ಆದರೂ ಸಹ ಈ ಶ್ರುತಿಯು ದ್ವಾರಕಾರಣತ್ವವನ್ನು ಹೇಳುತ್ತಿದೆ (ರುದ್ರದೇವರ ಮೂಲಕ ವಿಷ್ಣುವಿಗೇ ಸಂಹಾರಕರ್ತೃತ್ವವನ್ನು ಹೇಳುತ್ತಿದೆ) ಎಂದು ಹೇಳಬಹುದು? ಎಂದು ಶಂಕೆ ಮಾಡುವುದು ಸರಿಯಲ್ಲ. ಕಾರಣ ಹಾಗೆ ಹೇಳಿದರೆ ಲೋಕವಿರೋಧ ಬರಬೇಕಾಗುತ್ತದೆ.

ಯಾಕೆಂದರೆ – ಲೋಕದಲ್ಲಿ ತಂದೆಯಾದವನು ಪುತ್ರನಿಗೆ ಮಾರಕನಾಗಿರುವುದು ಕಂಡಿಲ್ಲ. ಹಾಗೆ ಒಂದುವೇಳೆ ತಂದೆಯೇ ಮಾರಕನಾಗಿರುವುದು ಅಪರೂಪಕ್ಕೆ ಕಂಡು-ಬಂದರೂ ಅಂತಹ ತಂದೆಯು ಮೂಢನೇ ಆಗಿರುತ್ತಾನೆ ಹೊರತು ಪ್ರಾಜ್ಞನಾಗಿರುವುದಿಲ್ಲ. ಆದ್ದರಿಂದ ಪ್ರಕೃತದಲ್ಲಿ ಜಗತ್ತಿಗೆ ತಂದೆಯಾಗಿರುವ ಈಶ್ವರನಿಗೆ ಜಗತ್ತನ್ನು ಕುರಿತು ಮಾರಕತ್ವವನ್ನು ಅಂಗೀಕರಿಸಿದರೆ ಮೌಢ್ಯವನ್ನೇ ಒಪ್ಪಬೇಕಾಗುತ್ತದೆ. ಈಶ್ವರನಿಗಾದರೂ ಮೌಢ್ಯವನ್ನು ಒಪ್ಪಲು ಸಾಧ್ಯವಿಲ್ಲವಾದ್ದರಿಂದ (ಈಶ್ವರನಿಗೆ ಮಾರಕತ್ವವನ್ನು ಹೇಳುವುದಾದರೆ) ಲೋಕವಿರೋಧವು ದುರ್ವಾರವಾಗುತ್ತದೆ. ಆದ್ದರಿಂದ ಜನಕನಾಗಿರುವ ಈಶ್ವರನಿಗೆ ಮಾರಕತ್ವವನ್ನು (ಸಂಹಾರ ಕರ್ತೃತ್ವವನ್ನು) ಅಂಗೀಕರಿಸಲು ಬರುವುದಿಲ್ಲ.

**ಸೂ.ರ.:– न च विष्णोः सर्वसंहर्तृत्वेऽपि यत्प्रयन्तीति श्रुतिरस्तीति वाच्यम् । तस्या बलवदेतच्छ्रुतिविरोधेनाप्रामाण्यात् । अतो न विष्णोः सर्वसंहर्तृत्वमिति प्राप्ते सूत्रमाह ।**

**ಅನು.:–** ವಿಷ್ಣುವು ಸರ್ವಸಂಹರ್ತಾ ಆಗಿದ್ದಾನೆ ಎಂಬ ವಿಷಯದಲ್ಲಿಯೂ 'ಯತ್ಪ್ರಯಂತ್ಯಭಿಸಂವಿಶಂತೀತಿ' ಎಂಬುದಾಗಿ ಶ್ರುತಿಪ್ರಮಾಣವು ಇದೆಯಲ್ಲ? ಎಂದರೆ, ಅದು ಸರಿಯಲ್ಲ. 'ಪ್ರಾಣಾನಾಂ ಗ್ರಂಥಿರಸಿ' ಎಂಬ ಪ್ರಬಲಶ್ರುತಿವಿರೋಧ ಬರುವುದರಿಂದ ಯತ್ಪ್ರಯಂತಿ ಎಂಬ ಶ್ರುತಿಯು ಸರ್ವಸಂಹರ್ತೃತ್ವದ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ.

ಆದ್ದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಉಪಪನ್ನವಾದರೂ ಜಗತ್ಸಂಹರ್ತೃತ್ವವು ಉಪಪನ್ನವಾಗುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ तदभिध्यानादेव तु तल्लिङ्गात्सः ॐ (२.३.१३)**

ತು ಶಬ್ದವು ಅವಧಾರಣಾರ್ಥದಲ್ಲಿ ಇದೆ. ಅಭಿಧ್ಯಾನ ಶಬ್ದದಿಂದ ಇಚ್ಛೆಯು ಪ್ರತಿಪಾದ್ಯವಾಗಿದೆ. ತತ್ ಶಬ್ದದಿಂದ ವಿಷ್ಣುವು ಸ್ವೀಕರಿಸಲ್ಪಡುತ್ತಾನೆ.

ಸಃ (ತು) ಏವ = ವಿಷ್ಣುವೇ ಸಂಹಾರಕರ್ತಾ ಆಗಿದ್ದಾನೆ ಹೊರತು ರುದ್ರ ಅಲ್ಲ. ಕುತಃ = ಏಕೆ? ತದಭಿಧ್ಯಾನಾತ್ = ತಸ್ಯಾಭಿಧ್ಯಾನಾತ್ (ಶ್ವೇ. 1-10) ಎಂಬ ಶ್ರುತ್ಯುಕ್ತವಾದ್ದರಿಂದ, ಆ ವಿಷ್ಣುವಿನ ಅಭಿಧ್ಯಾನ ಎಂಬ ಶಬ್ದಜ್ಞಾಪಿತವಾದ ಸಂಜಿಹೀರ್ಷಾ ವಿಶೇಷಿತವಾದ, ಅನಾದಿಬಂಧಸಂಹಾರೇಚ್ಛಾರೂಪವಾದ ತಲ್ಲಿಂಗಾತ್ ಏವ = ಸಾದಿಜಗತ್ಸಂಹರ್ತೃತ್ವ-ಸಾಧಕವಾದ ಲಿಂಗದಿಂದಲೇ.

## ಸಿದ್ಧಾಂತ

ಸೂ.ರ.:- एवं च युक्तमेव विष्णोः सर्वसंहर्तृत्वम् । तस्याभिध्यानादिति श्रुतौ तद्ध्यानजन्यप्रसादरूपेच्छाधीनत्वस्य बन्धनिवृत्तेरभिधानात् । किञ्चातस्तदिच्छाधीनत्वेन कर्तृत्वमनुमीयते । एवञ्चानादेर्बन्धस्य लयकर्ता सुतरां सादेर्जगतः संहारकर्तेति सिद्ध्यति । य इदं सर्वं विलापयतीति श्रुतेश्च । रुद्रादिसंहारकर्तृत्वाभिधायकश्रुतेर्द्वारकारणत्वाभिधायकत्वेन विरोधाभावात् ।

ಅನು.:- ವಿಷ್ಣುವಿಗೆ ಸರ್ವಸಂಹರ್ತೃತ್ವವನ್ನು ಹೇಳಿದ್ದು ಅತ್ಯಂತ ಯುಕ್ತವೇ ಆಗಿದೆ. ಏಕೆಂದರೆ - "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" (ಶ್ವೇ.ಉ. 1-10) ಎಂಬ ಶ್ರುತಿಯಲ್ಲಿ ವಿಷ್ಣುಧ್ಯಾನಜನ್ಯಪ್ರಸಾದರೂಪ ಇಚ್ಛಾಧೀನವಾಗಿದೆ ಬಂಧನಿವೃತ್ತಿ ಎಂದು ಹೇಳಿದ್ದಾರೆ. ಆದ್ದರಿಂದ ಬಂಧನಿವೃತ್ತಿಯು ವಿಷ್ಣು ಇಚ್ಛಾಧೀನವಾದ್ದರಿಂದ ಬಂಧಲಯಕರ್ತೃತ್ವವನ್ನು ಅನುಮಾನದಿಂದ ತಿಳಿಯಲಾಗುವುದು. ಅಂದಮೇಲೆ ವಿಷ್ಣುವು ಅನಾದಿಯಾದ ಬಂಧದ ಲಯಕರ್ತಾನೇ ಆಗಿದ್ದಾನೆ ಎಂದಮೇಲೆ ಇನ್ನು ಸಾದಿಯಾದ ಜಗತ್ತಿನ ಸಂಹಾರಕರ್ತಾ ಆಗೇ ಆಗುತ್ತಾನೆ ಎಂದು ಏನು ಹೇಳುವುದು?

ಹೀಗಾಗಿ ವಿಷ್ಣುವಿಗೆ ಸಾದಿಜಗತ್ಸಂಹಾರಕರ್ತೃತ್ವವು ಕೈಮುತ್ಯದಿಂದಲೂ ಸಿದ್ಧವಾಗುತ್ತದೆ. ಮತ್ತು "ಯ ಇದಂ ಸರ್ವಂ ವಿಲಾಪಯತಿ" ಎಂಬ ಶ್ರುತಿಪ್ರಮಾಣದಿಂದಲೂ ಸಿದ್ಧವಾಗುತ್ತದೆ.

ವಿಷ್ಣುವಿಗೆ ಸಂಹಾರಕರ್ತೃತ್ವವನ್ನು ಹೇಳುವುದಾದರೆ, ರುದ್ರನಿಗೆ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ ಅದು ಸರಿಯಲ್ಲ. ರುದ್ರನಿಗೆ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿಯು ದ್ವಾರಕಾರಣತ್ವವನ್ನು ಹೇಳುತ್ತಿರುವುದರಿಂದ (ರುದ್ರದ್ವಾರಾ ವಿಷ್ಣುವಿಗೇ ಸಂಹಾರಕಾರಣತ್ವವನ್ನು ಹೇಳುತ್ತಿರುವುದರಿಂದ) ಆ ಶ್ರುತಿಯ ವಿರೋಧವೂ ಬರುವುದಿಲ್ಲ.

ಸೂ.ರ.:- न च पितृत्वादीश्वरस्य विनाशकत्वे मौढ्यप्रसङ्गः । लौकिकपितॄणां ममतायुक्तत्वेन हन्तृत्वायोगेन मौढ्यस्योपाधिकृत्वेनाङ्गीकारात् । ईश्वरस्य तु तदभावेन विना मौढ्यमपि संहर्तृत्वोपपत्तेः । अतः श्रुतिविरोधाभावेन युक्तं सर्वसंहारकर्तृत्वं विष्णोरिति सिद्धम् ॥

**ಅನು.:-** ವಿಷ್ಣುವು ಜಗತ್ತಿಗೆ ಜನಕನಾಗಿರುವುದರಿಂದ ಅವನಿಗೆ ವಿನಾಶಕತ್ವವನ್ನು ಅಂಗೀಕರಿಸಿದರೆ ಮೌಢ್ಯ ಬರಬೇಕಾದ ಪ್ರಸಂಗ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಲೌಕಿಕಪಿತೃಗಳು ಮಮತೆಯಿಂದ ಕೂಡಿರುತ್ತಾರಾದ್ದರಿಂದ ಅಂತಹವರಿಗೆ ಮಾರಕತ್ವವು ಕೂಡುವುದಿಲ್ಲವಾದ್ದರಿಂದ ಹಾಗೊಂದುವೇಳೆ ಮಾರಕತ್ವ ಬಂದದ್ದಾದರೆ ಉಪಾಧಿಕೃತವಾದ ಮೌಢ್ಯವನ್ನು ಅಂಗೀಕರಿಸಬೇಕಾಗುತ್ತದೆ.

ಪ್ರಕೃತದಲ್ಲಿ ಈಶ್ವರನಿಗಾದರೂ ಮಮತೆ ಇಲ್ಲವಾದ್ದರಿಂದ ಮೌಢ್ಯ ಇಲ್ಲದೆಯೇ ಸಂಹರ್ತೃತ್ವವನ್ನು ಅಂಗೀಕರಿಸಬಹುದಾಗಿದೆ.

ಆದ್ದರಿಂದ ಜನಕನಾಗಿರುವ ಈಶ್ವರನಿಗೆ ಸಂಹರ್ತೃತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಬರುವುದಿಲ್ಲವಾದ್ದರಿಂದ ವಿಷ್ಣುವಿಗೆ ಸರ್ವಸಂಹಾರಕರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ತದಭಿಧ್ಯಾನಾಧಿಕರಣವು ಮುಗಿಯಿತು.

*ಅಧಿಕರಣ - 8*

# ವಿಪರ್ಯಯಾಧಿಕರಣ

## ಸಂಗತಿ

**ಸೂ.ರ.:-** अत्राधिभूतादिसंहारक्रमविषयश्रुतिविरोधः परिह्रियते ।

**ಅನು.:-** ಅಧಿಭೂತಾದಿಸಂಹಾರಕ್ರಮವಿಷಯ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಎಂಟನೇ ಈ ವಿಪರ್ಯಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:-** ननु श्रुतिसमन्वयेन न भगवतो व्युत्क्रमेण संहर्तृत्वं युक्तम् । व्युत्क्रमप्रतिपादकश्रुतेरप्रामाण्यात् । तथा हि । अत एव हीदमिति (भाल्लवेय) क्रमाल्लयप्रतिपादकश्रुतेः । सा च प्रत्यक्षानुगुणा । क्रमा-

**द्विलीयत इत्याद्याः श्रुतयोऽस्मिन्नर्थे भवन्ति । ततश्च बलवदेतच्छ्रुतिविरोधेन व्युत्क्रमप्रतिपादकश्रुतेरप्रामाण्यमेवेति समन्वयो न युक्त इति प्राप्ते सूत्रमाह ॥**

**ಅನು.:–** ಶ್ರುತಿಸಮನ್ವಯ ಮೂಲಕವಾಗಿ ಭಗವಂತನಿಗೆ ವ್ಯುತ್ಕ್ರಮೇಣ (ಉತ್ಪತ್ತಿಕ್ರಮಕ್ಕೆ ವಿರುದ್ಧವಾಗಿ) ಸಂಹರ್ತೃತ್ವವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ - ವ್ಯುತ್ಕ್ರಮಪ್ರತಿಪಾದಕವಾದ ಶ್ರುತಿಯು ಅಪ್ರಮಾಣವಾಗಿದೆ. ಅದು ಹೇಗೆಂದರೆ :-

"ಅತ ಏವ ಹೀದಂ ಪರಾತ್ಕ್ರಮಾದುತ್ಪದ್ಯತೇ
ಕ್ರಮಾದ್ವಿಲೀಯತೇ ನಾಸಾವುದೇತಿ ನಾಸ್ತಮೇತಿ"

ಎಂಬುದಾಗಿ ಭಾಲ್ಲವೇಯಶ್ರುತಿಯು ಉತ್ಪತ್ತಿಕ್ರಮಾನುಸಾರವಾಗಿ ಲಯ ಇದೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆ. ಮತ್ತು ಈ ಶ್ರುತಿಯು ಪ್ರತ್ಯಕ್ಷಾನುಗುಣವೂ ಆಗಿದೆ. (ಉತ್ಪತ್ತಿಕ್ರಮಾನುಸಾರವಾಗಿಯೇ ಲಯವನ್ನು ಅಂಗೀಕರಿಸಿದರೆ ಲೋಕಾನುಕೂಲತ್ವಗುಣ ಇರುವುದರಿಂದ ಈ ಕ್ರಮಶ್ರುತಿಯು ಪ್ರಬಲವೂ ಆಗುತ್ತದೆ).

ಹಾಗೂ - "ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ ಕ್ರಮೇಣೈವೋತ್ಪತ್ತಿರ್ಲಯಶ್ಚ.." ಇತ್ಯಾದಿ ಶ್ರುತಿಗಳೂ ಸಹ ಉತ್ಪತ್ತಿಕ್ರಮದಿಂದ ಲಯ ಇದೆ ಎಂಬ ವಿಷಯದಲ್ಲಿಯೇ ಪ್ರಮಾಣವಾಗಿ ಇವೆ.

ಆದ್ದರಿಂದ ಪ್ರಬಲವಾದ "ಅತ ಏವ ಹೀದಂ ..." ಎಂಬ ಶ್ರುತಿಯ ವಿರೋಧ ಬರುವುದರಿಂದ ವ್ಯುತ್ಕ್ರಮಪ್ರತಿಪಾದಕಶ್ರುತಿಗೆ ಅಪ್ರಾಮಾಣ್ಯವೇ ಬರುತ್ತದೆ. ಹೀಗಾಗಿ (ಉತ್ಪತ್ತಿಕ್ರಮದಿಂದಲೇ ಲಯವನ್ನು ಹೇಳಬೇಕಾದ್ದರಿಂದ) ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮೂಲಕವಾಗಿ ವ್ಯುತ್ಕ್ರಮೇಣ ಸಂಹರ್ತೃತ್ವವನ್ನು ಹೇಳುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ विपर्ययेण तु क्रमोऽत उपपद्यते च ॐ (२.३.१४)

ತು ಶಬ್ದವು ಅವಧಾರಣಾರ್ಥಕವಾಗಿದೆ, ಅತಃ = ಎನ್ನುವುದು ಪುನಃ ಆವೃತ್ತವಾಗುತ್ತದೆ ಅತಃ = ಉತ್ಪತ್ತಿಕ್ರಮಕ್ಕಿಂತಲೂ, ವಿಪರ್ಯಯೇಣ = ವಿಪರೀತವಾಗಿ, ಕ್ರಮಃ = ಲಯಕ್ರಮವು ಸಿದ್ಧಾಂತವಾಗಿದೆ, ನ ತು ಉತ್ಪತ್ತಿಕ್ರಮೇಣ = ಹೊರತು ಉತ್ಪತ್ತಿಕ್ರಮಕ್ಕೆ ಅನುಸಾರವಾಗಿ ಲಯಕ್ರಮವು ಸಮಂಜಸವಲ್ಲ, ಕುತಃ = ಯಾಕೆ?, ಅತ ಏವ = ವ್ಯುತ್ಕ್ರಮಾತ್ ಎಂಬುದಾಗಿ ಶ್ರುತಿ ಇರುವುದರಿಂದಲೇ.

ಚ ಕಿಂ ಚ = ಮತ್ತು, ಉಪಪದ್ಯತೇ = ಈ ವ್ಯುತ್ಕ್ರಮದಿಂದ ಲಯಕ್ರಮವು ಉಪಪನ್ನವೂ

ಆಗುತ್ತದೆ, ಕುತಃ = ಯಾಕೆ? ಪೂರ್ವದಲ್ಲಿ ಉತ್ಪನ್ನರಾದವರಿಗೆ ಅನಂತರದಲ್ಲಿ ಉತ್ಪನ್ನರಾದವರಿಗಿಂತಲೂ ಅಧಿಕಸಾಮರ್ಥ್ಯ ಇರುವುದರಿಂದ, ಉತ್ತರಕಾಲದಲ್ಲಿ ಉತ್ಪನ್ನರಾದವರಿಗೆ ಅಧಿಕಕಾಲಾವಸ್ಥಾನವು ಯುಕ್ತವಾದ್ದರಿಂದ.

## ಸಿದ್ಧಾಂತ

**ಸೂ.ರ.:– एवं च व्युत्क्रमेणैव लयो युक्तः । क्रमश्रुतेः सावकाशत्वेनाबाधकत्वात् । अस्ति व्युत्क्रमशब्देऽपि क्रमप्रवेशः । क्रमाल्लयाभिधायकभाल्लवेयश्रुतावेव व्युत्क्रमेण लयाभिधानात् । अनुरूपः क्रम इति (पाद्म.) वचनाच्च । न च लोकविरोधः । पूर्वेषां पूर्वेषां सामर्थ्याधिक्येन लोकविरोधस्यैवानुगुण्यात् । अतः श्रुत्यविरोधेन व्युत्क्रमाल्लयसिद्धेर्युक्तो हरौ श्रुतिसमन्वय इति सिद्धम् ॥**

**ಅನು.:–** ವ್ಯುತ್ಕ್ರಮದಿಂದ ಲಯ (ಉತ್ಪತ್ತಿಕ್ರಮಕ್ಕೆ ವಿಪರೀತವಾಗಿ ಲಯ) ಹೇಳುವುದೇ ಯುಕ್ತವಾಗಿದೆ. ಕಾರಣ – ಉತ್ಪತ್ತಿಕ್ರಮಕ್ಕೆ ಅನುಸಾರವಾಗಿ ಲಯ ಹೇಳುವ ಶ್ರುತಿಯು ಸಾವಕಾಶವಾಗಿದ್ದರಿಂದ ವ್ಯುತ್ಕ್ರಮೇಣ ಲಯಕ್ಕೆ ಅದು ಬಾಧಕವಾಗುವುದಿಲ್ಲ. ವ್ಯುತ್ಕ್ರಮಶಬ್ದದಲ್ಲಿಯೂ ಸಹ ಕ್ರಮಪ್ರವೇಶ ಇದೆ.

ಮತ್ತು ಉತ್ಪತ್ತಿಕ್ರಮಾನುಸಾರ ಲಯ ಹೇಳುವ ಭಾಲ್ಲವೇಯಶ್ರುತಿಯಲ್ಲಿಯೇ ವ್ಯುತ್ಕ್ರಮೇಣ ಲಯವನ್ನು ಹೇಳುತ್ತಿರುವುದರಿಂದ, ಹಾಗೂ

> ಅನುರೂಪಃ ಕ್ರಮಃ ಸೃಷ್ಟೌ ಪ್ರತಿರೂಪೋ ಲಯೇ ಕ್ರಮಃ ।
> ಇತಿ ಕ್ರಮೇಣ ಭಗವಾನ್ ಸೃಷ್ಟಿಸಂಹಾರಕೃದ್ಧರಿಃ ॥

ಎಂಬುದಾಗಿ ಪಾದ್ಮವಚನವೂ ಇರುವುದರಿಂದ ವ್ಯುತ್ಕ್ರಮೇಣ ಲಯ ಹೇಳುವುದೇ ಯುಕ್ತ.

ಉತ್ಪತ್ತಿಕ್ರಮಾನುಸಾರ ಲಯವು ಲೋಕಾನುಗುಣವಾದ್ದರಿಂದ ವ್ಯುತ್ಕ್ರಮೇಣ ಲಯ ಹೇಳಿದರೆ ಲೋಕವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಮೊದಲು ಮೊದಲು ಹುಟ್ಟಿದವರಿಗೆ ಅನಂತರ ಅನಂತರ ಹುಟ್ಟಿದವರಿಗಿಂತಲೂ ಅಧಿಕಸಾಮರ್ಥ್ಯ ಇರುವುದರಿಂದ, ಅನಂತರ ಹುಟ್ಟಿದವರಿಗಿಂತಲೂ ಮೊದಲು ಹುಟ್ಟಿದವರು ಹೆಚ್ಚುಕಾಲ ಜೀವಿಸುವುದು ಯುಕ್ತವಾಗುವುದರಿಂದ ಲೋಕವಿರೋಧ ಬರುವುದಿಲ್ಲ.

ಆದ್ದರಿಂದ ವ್ಯುತ್ಕ್ರಮೇಣ ಲಯ ಹೇಳಿದರೆ ಶ್ರುತಿವಿರೋಧ ಬಾರದ ಕಾರಣ, ವ್ಯುತ್ಕ್ರಮೇಣ ಲಯಕರ್ತೃತ್ವ ಮೂಲಕ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿರುವುದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವಿಪರ್ಯಯಾಧಿಕರಣವು ಮುಗಿಯಿತು.

*ಅಧಿಕರಣ – 9*

## ಅಂತರಾಧಿಕರಣ

### ಸಂಗತಿ

**ಸೂ.ರ.:– अत्र पूर्वोक्तव्युत्क्रमेण लये विज्ञानादौ क्वचिदपवादशङ्का निराक्रियते ।**

**ಅನು.:–** ಹಿಂದೆ ಹೇಳಿದ ವ್ಯುತ್ಕ್ರಮೇಣ ಲಯವಿಚಾರದಲ್ಲಿ ವಿಜ್ಞಾನಾದಿಗಳಲ್ಲಿ ಕೆಲವೆಡೆ ಅಪವಾದಶಂಕೆ ಬಂದರೆ ಅದನ್ನು ನಿರಾಕರಿಸುತ್ತಾರೆ ಒಂಭತ್ತನೇ ಈ ಅಂತರಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न विष्णोर्व्युत्क्रमेण सर्वसंहर्तृत्वं युक्तम् । किंतु विज्ञानमनसी अन्तरा व्युत्क्रमेण लयकर्तृत्वम् । मनसश्च विज्ञानमिति मनस उत्पन्ने विज्ञानतत्त्वे तद्यच्छेद्विज्ञानात्मनीति (कठ.३-१३) मनस्तत्त्वस्य लयश्रवणात् । लोकानुगुणाच्च । लोके क्रमेण व्युत्क्रमेण च लयदर्शनात् । न च सामर्थ्यतारतम्यविरोधः । मनस उत्पत्तिविषय-सामर्थ्याधिक्यविज्ञानस्य तु लयविषये सामर्थ्याधिक्यमित्यङ्गीकारे बाधका-भावात् । अतः सयुक्तिकलिङ्गदर्शनविरुद्धायाः क्रमश्रुतेरप्रामाण्योपपत्तेर्न श्रुतिसमन्वयो युक्त इति प्राप्ते सूत्रमाह ॥**

**ಅನು.:-** ವಿಷ್ಣುವಿಗೆ ವ್ಯುತ್ಕ್ರಮೇಣ ಸರ್ವಸಂಹರ್ತೃತ್ವವನ್ನು ಹೇಳುವುದು ಯುಕ್ತವಲ್ಲ. ಕಿಂತು ವಿಜ್ಞಾನತತ್ತ್ವ-ಮನಸ್ತತ್ತ್ವಗಳನ್ನು ಹೊರತುಪಡಿಸಿ ಉಳಿದ ತತ್ತ್ವಗಳ ವಿಷಯದಲ್ಲಿ ವ್ಯುತ್ಕ್ರಮೇಣ ಲಯಕರ್ತೃತ್ವವನ್ನು ಹೇಳಬೇಕು.

ವಿಜ್ಞಾನತತ್ತ್ವ-ಮನಸ್ತತ್ತ್ವಗಳ ವಿಷಯದಲ್ಲಿ ಏಕೆ ವ್ಯುತ್ಕ್ರಮೇಣ ಲಯವನ್ನು ಹೇಳಲು ಬರುವುದಿಲ್ಲ? ಎಂದರೆ, ಮನಸಶ್ಚ ವಿಜ್ಞಾನಮ್ ಎಂಬುದಾಗಿ ಶ್ರುತಿಯು ತಿಳಿಸುವಂತೆ ಮನಸ್ತತ್ತ್ವದಿಂದ ಉತ್ಪನ್ನವಾಗಿದೆ ವಿಜ್ಞಾನತತ್ತ್ವ. ಅಂತಹ ವಿಜ್ಞಾನತತ್ತ್ವದಲ್ಲಿಯೇ ಮನಸ್ತತ್ತ್ವವು ಲಯ ಹೊಂದುತ್ತದೆ. 'ತದ್ಯಚ್ಛೇದ್ವಿಜ್ಞಾನಾತ್ಮನಿ' (ಕಠ. 3-13) ಎಂಬುದಾಗಿ ಶ್ರುತಿ ಹೇಳುತ್ತಿದೆ. (ಉತ್ಪತ್ತಿಕ್ರಮಾನುಸಾರವಾಗಿ ಲಯವನ್ನು ಹೇಳುತ್ತಿದೆ ಶ್ರುತಿ.)

ಮತ್ತು ಲೋಕದಲ್ಲಿ ಉತ್ಪತ್ತಿಕ್ರಮದಿಂದ ಹಾಗೂ ವ್ಯುತ್ಕ್ರಮದಿಂದ ಎರಡು ರೀತಿ-ಯಿಂದಲೂ ಲಯ ಕಂಡಿರುವುದರಿಂದ, ಉತ್ಪತ್ತಿಕ್ರಮದಿಂದ ಲಯ ಹೇಳುವ ಈ ವಿಚಾರವು ಲೋಕಕ್ಕೆ ಅನುಗುಣವೂ ಆಗಿದೆ.

ಹಾಗಾದರೆ ಸಾಮರ್ಥ್ಯತಾರತಮ್ಯವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ತಪ್ಪು. ಮನಸ್ಸಿಗೆ ಉತ್ಪತ್ತಿವಿಷಯದಲ್ಲಿ ಸಾಮರ್ಥ್ಯಾಧಿಕ್ಯ, ವಿಜ್ಞಾನಕ್ಕೆ ಲಯವಿಷಯದಲ್ಲಿ ಸಾಮರ್ಥ್ಯಾಧಿಕ್ಯ ಎಂದು ಅಂಗೀಕರಿಸಿದರೆ ಯಾವ ಬಾಧಕವೂ ಇರುವುದಿಲ್ಲ.

ಆದ್ದರಿಂದ ಯುಕ್ತಿಸಹಿತ ಲಿಂಗ-ದರ್ಶನವಿರುದ್ಧವಾದ ವ್ಯುತ್ಕ್ರಮಶ್ರುತಿಗೆ ಅಪ್ರಾಮಾಣ್ಯವು ಉಪಪನ್ನವಾಗುವುದರಿಂದ ವಿಷ್ಣುವಿನಲ್ಲಿ ವ್ಯುತ್ಕ್ರಮೇಣ ಲಯಕರ್ತೃತ್ವವನ್ನು ಹೇಳಿ ಶ್ರುತಿಸಮನ್ವಯ ಮಾಡಿದ್ದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡಲು ಸೂತ್ರ ಹೇಳುತ್ತಾರೆ -

**ॐ अन्तरा विज्ञानमनसी क्रमेण तल्लिङ्गादिति चेन्नाविशेषात् ॐ (२.३.१५)**

ವಿಜ್ಞಾನಮನಸೀ ಅಂತರಾ = ವಿಜ್ಞಾನತತ್ತ್ವ-ಮನಸ್ತತ್ತ್ವಗಳನ್ನು ಬಿಟ್ಟು ಅನ್ಯತ್ರ = ಉಳಿದ ತತ್ತ್ವಗಳ ವಿಷಯದಲ್ಲಿ ವ್ಯುತ್ಕ್ರಮೇಣ ಲಯ ಹೇಳಬೇಕು. ಹೊರತು ವಿಜ್ಞಾನತತ್ತ್ವ-ಮನಸ್ತತ್ತ್ವಗಳ ವಿಷಯದಲ್ಲಿಯೂ ವ್ಯುತ್ಕ್ರಮೇಣ ಲಯ ಹೇಳಲು ಬರುವುದಿಲ್ಲ.

ಕುತಃ = ಏಕೆ?, ತಲ್ಲಿಂಗಾತ್ = ಮನಸಶ್ಚ ವಿಜ್ಞಾನಂ ಎನ್ನುವಲ್ಲಿ ವಿಜ್ಞಾನಕ್ಕಿಂತಲೂ ಮೊದಲು ಹುಟ್ಟಿದ ಮನಸ್ತತ್ತ್ವಕ್ಕೆ ಯಚ್ಛೇದ್ವಾಙ್ಮನಸಿ ಎಂಬುದಾಗಿ ಪೂರ್ವದಲ್ಲಿಯೇ ಲಿಯೋಕ್ತಿರೂಪವಾದ ಸಾಧಕಪ್ರಮಾಣ ಕಂಡಿರುವುದರಿಂದ, ಇತಿ ಚೇತ್ = ಎಂಬುದಾಗಿ ಆಕ್ಷೇಪ ಬಂದರೆ, ನ = ಅದು ಸರಿಯಲ್ಲ. ಕುತಃ = ಯಾಕೆ?, ಅವಿಶೇಷಾತ್ = ವಿಜ್ಞಾನತತ್ತ್ವ-

ಮನಸ್ತತ್ವಗಳಿಗೆ ಉತ್ಪತ್ತಿಕ್ರಮಾನುಸಾರವಾಗಿ ಲಯ ಇದೆ ಎಂಬ ವಿಷಯದಲ್ಲಿ ವಿಶೇಷ-ಪ್ರಮಾಣ ಯಾವುದೂ ಇಲ್ಲವಾದ್ದರಿಂದ.

## ಸಿದ್ಧಾಂತ

**ಸೂ.ರ.:- एवं च युक्तमेव विष्णोर्व्युत्क्रमेण सर्वसंहर्तृत्वम् । विज्ञानमनसोरपि बाधकाभावेन व्युत्क्रमेण लयाङ्गीकारात् । सर्वं वैतत्क्रमादुत्पद्यते क्रमाद्विलीयत इति विशेषप्रमाणाभावात् । अतः श्रुत्य-विरोधेन सर्वेषां व्युत्क्रमेण लयसिद्धेः समन्वयो युक्त इति सिद्धम् ॥**

**ಅನು.:-** ವಿಷ್ಣುವಿಗೆ ವ್ಯುತ್ಕ್ರಮೇಣ ಸರ್ವಸಂಹರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ವಿಜ್ಞಾನತತ್ವ-ಮನಸ್ತತ್ವಗಳಿಗೆ ಉತ್ಪತ್ತಿಕ್ರಮಾನುಸಾರ ಲಯ, ಉಳಿದ ವಿಷಯದಲ್ಲಿ ವ್ಯುತ್ಕ್ರಮೇಣ ಲಯ ಎಂಬ ವಿಷಯದಲ್ಲಿ ಯಾವ ವಿಶೇಷಪ್ರಮಾಣ ಇಲ್ಲದ ಕಾರಣ, ವಿಜ್ಞಾನ-ಮನಸ್ತತ್ವಗಳಿಗೂ ವ್ಯುತ್ಕ್ರಮೇಣ ಲಯವನ್ನು ಅಂಗೀಕಾರ ಮಾಡಿದರೆ ಯಾವ ಬಾಧಕ ಇಲ್ಲವಾದ್ದರಿಂದ ಎಲ್ಲ ತತ್ವಗಳಿಗೂ ವ್ಯುತ್ಕ್ರಮೇಣ ಲಯವನ್ನು ಅಂಗೀಕಾರ ಮಾಡುವುದೇ ಯುಕ್ತವಾಗಿದೆ.

ಆದ್ದರಿಂದ ವ್ಯುತ್ಕ್ರಮೇಣ ಲಯವನ್ನು ಹೇಳಿದರೆ ಶ್ರುತಿಯ ವಿರೋಧ ಬಾರದ ಕಾರಣ, ಎಲ್ಲ ತತ್ವಗಳಿಗೂ ವ್ಯುತ್ಕ್ರಮೇಣ ಲಯವು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿ-ಸಮನ್ವಯ ಮಾಡಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 16

## ಆಕ್ಷೇಪ

**ಸೂ.ರ.:- ननु मनसश्च विज्ञानमिति श्रुत्या मनस्तत्त्वाद्विज्ञान-तत्त्वस्योत्पन्नत्वेन मनस्तत्त्वस्य विज्ञानतत्त्वे लयाङ्गीकारे विरोध एवापतित इति प्राप्ते पराकुर्वत्सूत्रमुपन्यस्यति ॥**

**ಅನು.:-** ('ಮನಸಶ್ಚ ವಿಜ್ಞಾನಂ' ಎಂದು ಶ್ರುತಿಯು ಹೇಳುವಂತೆ ಮನಸ್ತತ್ವದಿಂದ ವಿಜ್ಞಾನತತ್ವವು ಉತ್ಪನ್ನವಾದ್ದರಿಂದ ಮನಸ್ತತ್ವಕ್ಕೆ ವಿಜ್ಞಾನತತ್ತ್ವದಲ್ಲಿ ಲಯವನ್ನು ಅಂಗೀಕರಿಸಿ-ದರೆ ವಿರೋಧವೇ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ-)

ಕೆಲವು ತತ್ತ್ವಗಳಿಗೆ ಉತ್ಪತ್ತಿಕ್ರಮಾನುಸಾರ ಲಯ, ಕೆಲವು ತತ್ತ್ವಗಳಿಗೆ ವ್ಯುತ್ಕ್ರಮೇಣ ಲಯ ಎಂಬ ವಿಷಯದಲ್ಲಿ ವಿಶೇಷಪ್ರಮಾಣ ಇದ್ದೇ ಇದೆ. ''ಮನಸಶ್ಚ ವಿಜ್ಞಾನಂ'' ''ಯಚ್ಛೇ-ದ್ವಾಙ್ಮನಸೀ ಪ್ರಾಜ್ಞಃ'' ಎಂಬ ಶ್ರುತಿಯನ್ನು ಹಿಂದೆಯೇ ಹೇಳಿದ್ದೇವೆಯಲ್ಲ? ಅಂದಮೇಲೆ ಅವಿಶೇಷಾತ್ = ವಿಶೇಷಪ್ರಮಾಣಾಭಾವಾತ್ ಎಂದು ಹೇಗೆ ಹೇಳುತ್ತೀರಿ? ಎಂದು ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ चराचरव्यपाश्रयस्तु स्यात्तद्व्यपदेशो भाक्तस्तद्भावभावित्वात् ॐ (२.३.१६)**

ಚರಾಚರವ್ಯಪಾಶ್ರಯಃ = ಚರಾಚರಶಬ್ದಿತ ಇಂದ್ರಿಯ – ತದ್ವೃತ್ತಿಜ್ಞಾನ ವಿಷಯ ಸಾಧಾರಣವಾದ, ತದ್ವ್ಯಪದೇಶಃ ತು = ಮನಸಶ್ಚ ವಿಜ್ಞಾನಂ ಎಂಬ ಶ್ರೌತವ್ಯವಹಾರ-ವಾದರೂ, ಭಾಕ್ತಃ ಸ್ಯಾತ್ = ಏಕದೇಶವಾಗಿದೆ, ಮನಃಶಬ್ದಾರ್ಥ – ವಿಜ್ಞಾನಶಬ್ದಾರ್ಥಗಳ ಏಕದೇಶವಾದ ಇಂದ್ರಿಯ–ವೃತ್ತಿಜ್ಞಾನವಿಷಯಕವೇ ಆಗಿದೆ, ಹೊರತು ತತ್ತ್ವ-ವಿಷಯಕವಾಗಿಲ್ಲ.

ಕಸ್ಮಾತ್ = ಯಾವ ನಿಮಿತ್ತದಿಂದ? ತದ್ಭಾವಭಾವಿತ್ವಾತ್ = ಚರಾಚರಶಬ್ದಿತ ಚೇತನಾಚೇತನ ವಿಷಯದಲ್ಲಿ, ತದ್ಭಾವೇನ = ಮನೋಭಾವದಿಂದ, ಆಲೋಚನದಿಂದ, ಭಾವಿತ್ವಾತ್ = ಹುಟ್ಟುತ್ತಿರುವುದರಿಂದ. ಆದ್ದರಿಂದ ಉಕ್ತಲಿಂಗದರ್ಶನವು ಬಾಧಕವಲ್ಲ.

## ಸಮಾಧಾನ

**ಸೂ.ರ.:– एवं चोक्ताविरोधः । श्रुत्यर्थापरिज्ञानात् । न हि तत्परा श्रुतिर्मनस्तत्त्वाद्विज्ञानतत्त्वस्योत्पत्तिमाचष्टे । किं तर्हि मन इन्द्रियाज्ज्ञानस्योत्पत्तिमाचष्टे । परादव्यक्तमिति (स्कांद.) वचनात् । एवं च श्रुत्यविरोधेन हरौ श्रुतिसमन्वयो युक्त इति सिद्धम् ॥**

**ಅನು.:–** ವ್ಯುತ್ಕ್ರಮೇಣ ಲಯವನ್ನು ಹೇಳಿದರೆ ಶ್ರುತಿವಿರೋಧ ಬರುವುದಿಲ್ಲ. ಏಕೆಂದರೆ ನಿಮಗೆ ಸರಿಯಾದ ಶ್ರುತ್ಯರ್ಥಜ್ಞಾನವೇ ಆಗಿಲ್ಲ. 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಮನಸ್ತತ್ತ್ವದಿಂದ ವಿಜ್ಞಾನತತ್ತ್ವದ ಉತ್ಪತ್ತಿಯನ್ನು ಹೇಳುತ್ತಲೇ ಇಲ್ಲ. ಕಿಂತು ಮನೋರೂಪವಾದ ಇಂದ್ರಿಯದಿಂದ ವೃತ್ತಿಜ್ಞಾನದ ಉತ್ಪತ್ತಿಯನ್ನು ಹೇಳುತ್ತಿದೆ.

ಪರಾದವ್ಯಕ್ತಮುತ್ಪನ್ನಮವ್ಯಕ್ತಾತ್ತು ಮಹಾಂಸ್ತಥಾ ।
ವಿಜ್ಞಾನತತ್ವಂ ಮಹತಸ್ಸಮುತ್ಪನ್ನಂ ಚತುರ್ಮುಖಾತ್ ॥

ವಿಜ್ಞಾನತತ್ವಾತ್ತು ಮನೋ ಮನಸ್ತತ್ವಾಚ್ಚ ಖಾದಿಕಮ್ ।
ಏವಂ ಬಾಹ್ಯಾಪರಾ ಸೃಷ್ಟಿರಂತಸ್ತದ್ವ್ಯಕ್ತ್ಯಪೇಕ್ಷಯಾ ॥

ವಿಪರೀತಕ್ರಮೋ ಜ್ಞೇಯೋ ಯಸ್ಮಾದಂತೇ ಹರೇರ್ದೃಶಿಃ ।

ಎಂಬುದಾಗಿ ಸ್ಕಾಂದವಚನವೂ ಇರುವುದರಿಂದ ತತ್ವದ ವಿಷಯದಲ್ಲಿ ಉತ್ಪತ್ತಿಯನ್ನು ತಿಳಿಯುವಾಗ ವಿಜ್ಞಾನತತ್ವದಿಂದ ಮನಸ್ತತ್ವದ ಉತ್ಪತ್ತಿಯನ್ನು ತಿಳಿಯುವುದು. ಇನ್ನು ಮನಸ್ಸಿನಿಂದ ವಿಜ್ಞಾನದ ಉತ್ಪತ್ತಿಯು ಎಲ್ಲಾದರೂ ಶ್ರುತವಾಗುತ್ತಿದ್ದರೆ, ಅಲ್ಲಿ ಮನೋರೂಪ ಇಂದ್ರಿಯದಿಂದ ವೃತ್ತಿಜ್ಞಾನದ ಉತ್ಪತ್ತಿಯನ್ನು ತಿಳಿಯಬೇಕು. ಆದ್ದರಿಂದ ವ್ಯುತ್ಕ್ರಮೇಣ ಲಯವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ, ವ್ಯುತ್ಕ್ರಮೇಣ (ಲಯಕರ್ತೃತ್ವವನ್ನು) ಸರ್ವಸಂಹರ್ತೃತ್ವವನ್ನು ಹೇಳುವ ಮೂಲಕ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅಂತರಾಧಿಕರಣವು ಮುಗಿಯಿತು.

*ಅಧಿಕರಣ – 10*

## ಆತ್ಮಾಧಿಕರಣ

### ಸಂಗತಿ

**ಸೂ.ರ.:– अत्र परमात्मनि लयविषयश्रुतिविरोधपरिहारः क्रियते ॥**

**ಅನು.:–** ಪರಮಾತ್ಮನ ವಿಷಯದಲ್ಲಿ ಲಯವಿಷಯಕವಾದ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹತ್ತನೇ ಈ ಆತ್ಮಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:**– ननु न विष्णोः श्रुतिसमन्वयो युक्तः । तस्यापि विनाशित्वात् । अन्तस्तमसि निलीन इति श्रुतेः । न च नित्यो नित्यानामिति (कठ.५-१३) श्रुतिविरोधः । ईश्वरो विनाशी चेतनत्वादिति युक्तिसाहित्येन विनाशश्रुतेः प्राबल्यात् । न च स्वातन्त्र्येण हेतुनेश्वरस्यानुत्पत्तेः साधित्वेन विनाशायोगः । स्वतन्त्रस्यापि लीलया विग्रहग्रहणे सत्यवर्जनीयपातोपपत्तेः । यथालीलया कुड्यात्कुड्यमुत्पततः पातः । न ह्युत्पतनं लीलयेति पातोऽपि लीलयाऽपि तु कारणान्तरादवर्जनीयः । अतः सयुक्तिकश्रुतिविरोधेनान्यतरश्रुतेरप्रामाण्यान्नोक्तसमन्वयो युक्त इति प्राप्ते सूत्रं पठति ॥

**ಅನು.:**– ವಿಷ್ಣುವಿನಲ್ಲಿ ಸರ್ವಸಂಹರ್ತೃತ್ವ ಮೂಲಕ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ. ಕಾರಣ –

'ಅಂತಸ್ತಮಸಿ ನಿಲೀನಃ' ಎಂಬುದಾಗಿ ಶ್ರುತಿಯು ಹೇಳುವಂತೆ ಆ ವಿಷ್ಣುವೇ ವಿನಾಶ ಉಳ್ಳವನಾಗಿದ್ದಾನೆ. ಅಂದಮೇಲೆ ವಿನಾಶವುಳ್ಳ ವಿಷ್ಣುವು ಜಗತ್ತಿನ ಲಯಕರ್ತಾ ಆಗಲು ಹೇಗೆ ಸಾಧ್ಯ?

ವಿಷ್ಣುವಿಗೆ ವಿನಾಶವನ್ನು ಅಂಗೀಕರಿಸಿದರೆ 'ನಿತ್ಯೋ ನಿತ್ಯಾನಾಂ' (ಕಠ 5-13) ಎಂಬ ನಿತ್ಯತ್ವಬೋಧಕವಾದ ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. 'ಈಶ್ವರೋ ವಿನಾಶೀ ಚೇತನತ್ವಾತ್' ಎಂಬುದಾಗಿ ವಿನಾಶಸಾಧಕ ಯುಕ್ತಿಸಹಿತವಾದ್ದರಿಂದ ವಿನಾಶಶ್ರುತಿಯು ಪ್ರಬಲವಾಗಿದೆ. ಪ್ರಬಲವಾದ ವಿನಾಶಶ್ರುತಿಗೆ 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯ ವಿರೋಧ ಬರುವುದಿಲ್ಲ.

ಈಶ್ವರನು ಸ್ವತಂತ್ರನಾದ್ದರಿಂದ ಉತ್ಪತ್ತಿ ಸಾಧ್ಯವಿಲ್ಲ (ಈಶ್ವರಃ ಅನುತ್ಪತ್ತಿಮಾನ್ ಸ್ವತಂತ್ರತ್ವಾತ್) ಎಂಬುದಾಗಿ ಸ್ವಾತಂತ್ರ್ಯಹೇತುವಿನಿಂದ ಉತ್ಪತ್ತ್ಯಭಾವವನ್ನು ಸಾಧಿಸಿದ್ದರಿಂದ ಈಶ್ವರನಿಗೆ ವಿನಾಶವು ಕೂಡುವುದಿಲ್ಲ ಎಂದರೆ, ಅದು ಸರಿಯಲ್ಲ. ಈಶ್ವರನು ಸ್ವತಂತ್ರನಾದರೂ ಸಹ ಲೀಲೆಯಿಂದ ವಿಗ್ರಹಗ್ರಹಣ-ಪರಿತ್ಯಾಗವು ಉಪಪನ್ನವಾಗುತ್ತದೆ.

ಅಂದರೆ ಈಶ್ವರನು ಸ್ವತಂತ್ರನಾದರೂ ಸಹ ಲೀಲೆಯಿಂದ ವಿಗ್ರಹಗ್ರಹಣ ಮಾಡಿದಾಗ

ಪಾತವು (ವಿನಾಶವು) ಅವರ್ಜನೀಯವಾಗುತ್ತದೆ. ಯಾವ ರೀತಿಯಾಗಿ ಲೀಲೆಯಿಂದ ಗೋಡೆಯಿಂದ ಗೋಡೆಗೆ ಹಾರುವಾಗ ಪಾತವು ಅವರ್ಜನೀಯವಾಗುವುದೋ ಹಾಗೆ.

ಆದ್ದರಿಂದ ಸಯುಕ್ತಿಕಶ್ರುತಿವಿರೋಧ ಬರುವುದರಿಂದ ಅನ್ಯತರಶ್ರುತಿಅಪ್ರಾಮಾಣ್ಯ ಬರುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ नात्माऽश्रुतेर्नित्यत्वाच्च ताभ्यः ॐ (२.३.१७)**

ಆತ್ಮಾ = ಪರಮಾತ್ಮನು, ನ ವಿಲೀಯತೇ = ವಿನಾಶ ಹೊಂದುವುದಿಲ್ಲ, ಕುತಃ = ಯಾಕೆ ?, ಅಶ್ರುತೇಃ = ಪರಮಾತ್ಮನ ಲಯವು ಎಲ್ಲಿಯೂ ಶ್ರುತವಾಗುತ್ತಿಲ್ಲವಾದ್ದರಿಂದ, ಕಿಂಚ = ಮತ್ತು, ತಾಭ್ಯಃ = ಸ ನಿತ್ಯೋ ನಿರ್ಗುಣಃ ಇತ್ಯಾದಿ ಶ್ರುತಿಗಳಿಂದ, ನಿತ್ಯತ್ವಾಚ್ಚ = ವಿಷ್ಣುವಿಗೆ ನಿತ್ಯತ್ವವು ಶ್ರುತವಾಗುತ್ತಿರುವುದರಿಂದಲೂ ಸಹ, ಪರಮಾತ್ಮನಿಗೆ ನಾಶವಿಲ್ಲ.

## ಸಿದ್ಧಾಂತ

**ಸೂ.ರ.:– एवं च युक्तमेव विष्णोर्जगत्कारणत्वम् । प्रलयस्याप्रामाणिकत्वात् । न चान्तस्तमसि निलीन इति श्रुतिरत्र प्रमाणम् । अन्तस्तमसि निलीन इत्युक्त्वा पुरुषादीनिति वचनेन निलीनशब्दस्यापिहितार्थत्वात् । अन्यथा नित्यो नित्यानामित्यादिबहुश्रुतिविरोधापातात् । अतः श्रुत्यविरोधेन परमात्मलयस्य निरस्तत्वादुक्तसमन्वयो युक्त इति सिद्धम् ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಕಾರಣ - ಪರಮಾತ್ಮನ ಲಯವು (ನಾಶವು) ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲವಾದ್ದರಿಂದ.

ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ? 'ಅಂತಸ್ತಮಸಿ ನಿಲೀನಃ' ಎಂಬ ಶ್ರುತಿಯೇ ಪರಮಾತ್ಮನಿಗೆ ನಾಶ ಇದೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಅಲ್ಲಿ 'ಅಂತಸ್ತಮಸಿ ನಿಲೀನಃ' ಎಂದು ಹೇಳಿ ಪುರುಷಾದೀನ್ ಎಂದು ಹೇಳಿರುವುದರಿಂದ ನಿಲೀನ ಶಬ್ದವು ಅಪಿಹಿತ ಎಂಬ ಅರ್ಥ ಉಳ್ಳದ್ದಾಗಿದೆ ಎಂದು ತಿಳಿಯಬರುತ್ತದೆ.

ಒಂದುವೇಳೆ ನಿಲೀನ ಶಬ್ದಕ್ಕೆ ನಾಶ ಎಂದೇ ಅರ್ಥ ಹೇಳುವುದಾದರೆ 'ನಿತ್ಯೋ ನಿತ್ಯಾನಾಂ' ಮೊದಲಾದ ಪರಮಾತ್ಮನಿಗೆ ನಿತ್ಯತ್ವಬೋಧಕವಾದ ಬಹುಶ್ರುತಿವಿರೋಧ ಬರಬೇಕಾಗುತ್ತದೆ.

ಆದ್ದರಿಂದ ಪರಮಾತ್ಮನಿಗೆ ನಿತ್ಯತ್ವವನ್ನು ಅಂಗೀಕರಿಸಿದರೆ ಯಾವ ವಿರೋಧವೂ ಬಾರದ ಕಾರಣ ಪರಮಾತ್ಮನಿಗೆ ನಾಶವಿಲ್ಲ ಎಂದೇ ಸಿದ್ಧವಾಗುವುದರಿಂದ ಜಗತ್ಕಾರಣತ್ವ ಮೂಲಕವಾಗಿ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಆತ್ಮಾಧಿಕರಣವು ಮುಗಿಯಿತು.**

*ಅಧಿಕರಣ – 11*

## ಜ್ಞಾಧಿಕರಣ

### ಸಂಗತಿ

**ಸೂ.ರ.:– अत्र जीवजन्मविषयश्रुतिविरोधः परिह्रियते ॥**

**ಅನು.:–** ಜೀವರಿಗೆ ಜನ್ಮವನ್ನು ತಿಳಿಸುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹನ್ನೊಂದನೇ ಈ ಜ್ಞಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न भगवतो जगत्कारणत्वं युक्तम् । जीवस्यानुत्पन्नत्वात् । नित्यो नित्यानामिति (कठ.५-१३) श्रुतेः । न चोत्पत्तावपि सर्व एत इति श्रुतिरस्तीति । जीवो नोत्पत्तिमान् अनादित्वात् ईश्वरवदित्यादियुक्तिसहितत्वेनानादित्वश्रुतेः प्राबल्यात् । न च साध्याविशिष्टता हेतोः । अनादिशब्देन तत्सत्ताया अनादिकालीनत्वस्य विवक्षितत्वात् । न च प्रलये जीवादीनां सत्त्वे विवादः । तथा सति**

जीवाभावेन तद्धर्मस्यादृष्टस्याप्यभावापत्त्या कारणाभावेन जगदुत्पत्तिरेव न स्यात् । अथवा कारणशून्यत्वमनादित्वं विवक्षितम् । न च तत्रापि विवादः । कारणानुपलम्भात् । अतो न जगत्कारणत्वं युक्तमिति प्राप्ते सूत्रितम् ॥

**ಅನು.:-** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವಲ್ಲ. ಏಕೆಂದರೆ - ಜಗತ್ತಿನಲ್ಲಿ ಜೀವರೂ ಸೇರಿದ್ದಾರೆ. ಆ ಜೀವರಾದರೂ 'ನಿತ್ಯೋ ನಿತ್ಯಾನಾಂ...' (ಕಠ 5-13) ಎಂಬುದಾಗಿ ಶ್ರುತಿಯು ಹೇಳಿದಂತೆ ನಿತ್ಯರಾಗಿದ್ದಾರೆ. ಅರ್ಥಾತ್ ಜೀವರಿಗೆ ಉತ್ಪತ್ತಿ ಇಲ್ಲ. ಆದ್ದರಿಂದ ಜೀವಕಾರಣತ್ವವು ಹೇಗೆ ಉಪಪನ್ನವಾಗುತ್ತದೆ?

ಜೀವರು ನಿತ್ಯರಾಗಿದ್ದಾರೆ ಎಂಬ ವಿಷಯದಲ್ಲಿ ಹೇಗೆ ಶ್ರುತಿಯು ಇದೆಯೋ ಆದರಂತೆ ಜೀವರಿಗೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿಯೂ ಸಹ "ಸರ್ವ ಏತೇ ಚಿದಾತ್ಮನೋ ವ್ಯುಚ್ಚರಂತಿ" ಎಂಬ ಶ್ರುತಿಯು ಪ್ರಮಾಣವಾಗಿ ಇದೆಯಲ್ಲ? ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ - ಜೀವರಿಗೆ ನಿತ್ಯತ್ವವನ್ನು ಹೇಳುವ ಅನಾದಿತ್ವಶ್ರುತಿಗೆ 'ಜೀವೋ ನ ಉತ್ಪತ್ತಿಮಾನ್ ಅನಾದಿತ್ವಾತ್ ಈಶ್ವರವತ್' (ಜೀವನು ಅನಾದಿಯಾದ್ದರಿಂದ ಉತ್ಪತ್ತಿ ಉಳ್ಳವನಾಗಿಲ್ಲ. ಈಶ್ವರನಂತೆ) ಇತ್ಯಾದಿ ಯುಕ್ತಿಸಹಿತವಾದ್ದರಿಂದ ಪ್ರಾಬಲ್ಯ ಇದೆ. ಪ್ರಬಲವಾದ ಅನಾದಿತ್ವ ಶ್ರುತಿಯು ಉತ್ಪತ್ತಿಶ್ರುತಿಗೆ ಬಾಧಕವಾಗುತ್ತದೆ ಎಂದು ಭಾವ.

'ಜೀವೋ ನ ಉತ್ಪತ್ತಿಮಾನ್' ಎಂಬ ಅನುಮಾನವೇ ಸರಿಯಲ್ಲ. ಏಕೆಂದರೆ - ಇಲ್ಲಿ ಆದಿ ಎಂದರೆ ಉತ್ಪತ್ತಿ, ಅನಾದಿತ್ವ ಎಂದರೆ ಉತ್ಪತ್ತ್ಯಭಾವ, ಹೀಗಾಗಿ ಉತ್ಪತ್ತ್ಯಭಾವವೇ ಸಾಧ್ಯ, ಉತ್ಪತ್ತ್ಯಭಾವವೇ ಹೇತುವಾಗಿರುವುದರಿಂದ ಸಾಧ್ಯಾವಿಶಿಷ್ಟತಾ ಬರುತ್ತದೆ ಎಂದು ಶಂಕೆ ಬಂದರೆ ಅದು ಸರಿಯಲ್ಲ. ಇಲ್ಲಿ ಅನಾದಿತ್ವ ಎಂದರೆ ಉತ್ಪತ್ತ್ಯಭಾವ ಎಂದು ವಿವಕ್ಷಿತವಾಗಿಲ್ಲ. ಕಿಂತು ಜೀವನ ಸತ್ತಾ (ಇರುವಿಕೆ) ಅನಾದಿಕಾಲೀನವಾಗಿದೆ ಎಂದು ವಿವಕ್ಷಿಸಿರುವುದರಿಂದ ಸಾಧ್ಯಾವಿಶಿಷ್ಟತಾದೋಷಕ್ಕೆ ಅವಕಾಶವಿಲ್ಲ.

ಜೀವರ ಸತ್ತಾ ಅನಾದಿಕಾಲೀನವಾಗಿದೆ ಎಂದು ಹೇಗೆ ಹೇಳುತ್ತೀರಿ? ಪ್ರಲಯ-ಕಾಲದಲ್ಲಿಯೂ ಜೀವರು ಇರುತ್ತಾರೆ ಎಂಬ ವಿಷಯದಲ್ಲಿ ವಿವಾದ ಇದೆಯಲ್ಲವೇ? ಎಂದರೆ ಅದು ಸರಿಯಲ್ಲ. ಪ್ರಲಯಕಾಲದಲ್ಲಿ ಜೀವರು ಇರುವುದಿಲ್ಲ ಎನ್ನುವುದಾದರೆ, ಜೀವರ ಧರ್ಮವಾದ ಅದೃಷ್ಟವೂ (ಪುಣ್ಯ-ಪಾಪಾದಿಗಳೂ) ಇರುವುದಿಲ್ಲದಂತಾಗುವುದರಿಂದ ಜಗತ್ತಿನ ಸೃಷ್ಟಿಗೆ ಕಾರಣವೇ ಇಲ್ಲದಂತಾಗಿ ಜಗತ್ತಿನ ಸೃಷ್ಟಿಯೇ ಅನುಪಪನ್ನವಾಗಬೇಕಾದೀತು.

ಅಥವಾ ಅನಾದಿತ್ವ ಎಂದರೆ ಕಾರಣಶೂನ್ಯತ್ವ ಎಂದು ವಿವಕ್ಷಿಸುತ್ತೇವೆ. ಜೀವನಿಗೆ ಕಾರಣ ಇದ್ದಾನೆಯೋ? ಇಲ್ಲವೋ? ಎಂದು ವಿವಾದ ಇದೆಯಲ್ಲವೇ ಎಂದು ಶಂಕಿಸುವುದು ಸರಿಯಲ್ಲ. ಜೀವನಿಗೆ ಯಾವ ಕಾರಣವೂ ಉಪಲಬ್ಧವಾಗುತ್ತಿಲ್ಲ. ಹಾಗಾಗಿ ಅನಾದಿತ್ವ ಎಂದರೆ ಕಾರಣಶೂನ್ಯತ್ವ ಎಂದು ವಿವಕ್ಷಿಸುವುದರಿಂದ ಸಾಧ್ಯಾವಶಿಷ್ಟತಾಕ್ಕೆ ಅವಕಾಶವಿಲ್ಲ. ಇಂತಹ ನಿರ್ದುಷ್ಟಯುಕ್ತಿಯಿಂದ ಸಹಿತವಾದ ಅನಾದಿತ್ವಶ್ರುತಿಯು ಪ್ರಬಲವಾಗಿರು-ವುದರಿಂದ ಜೀವನು ಅನಾದಿಯೇ ಆಗಿದ್ದಾನೆ. ಆದ್ದರಿಂದ ಜೀವಕಾರಣತ್ವವು ಕೂಡದ ಕಾರಣ ವಿಷ್ಣುವಿಗೆ ಜಗತ್ಕಾರಣತ್ವ ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ ज्ञोऽत एव ॐ (२.३.१८)

(ಜಾನಾತೀತಿ ಜ್ಞಃ ಎಂದರೆ ಜೀವ. ಅತ ಏವ ಎನ್ನುವುದನ್ನು ಆವೃತ್ತಿ ಮಾಡಿಕೊಳ್ಳ-ಬೇಕು.) ಜ್ಞಃ ಅಪಿ = ಜೀವನೂ ಸಹ, ಅತ ಏವ = ವಿಷ್ಣುವಿನಿಂದಲೇ, ಉತ್ಪದ್ಯತೇ = ಹುಟ್ಟುತ್ತಾನೆ, ಕುತಃ = ಯಾಕೆ?, ಅತ ಏವ = ಅವಿನಷ್ಟಾ ಏವೋತ್ಪದ್ಯಂತೇ (ಕಾಷಾಯಣ) ಎಂಬುದಾಗಿ ಶ್ರುತಿಯು ಇರುವುದರಿಂದ.

### ಸಿದ್ಧಾಂತ

**ಸೂ.ರ.:– एवं च युक्त एव समन्वयः । अनादिनित्यानामेव जीवानां ते वा एत इति श्रुत्योत्पत्तिविधानात् । न च कारणाभावः । परमेश्वरस्यैव कारणत्वात् । अतः श्रुत्यविरोधेन जीवस्य ब्रह्मजातत्वसिद्धेर्युक्तस्तत्र समन्वय इति सिद्धम् ॥**

**ಅನು.:–** ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ. ಜೀವರು ಅನಾದಿನಿತ್ಯರಾಗಿದ್ದಾರಾದ್ದರಿಂದ ಜೀವಕಾರಣತ್ವವು ಹೇಗೆ ಉಪಪನ್ನವಾಗುತ್ತದೆ? ಎಂದರೆ, ಅದು ಸರಿಯಲ್ಲ. ಜೀವರು ಅನಾದಿನಿತ್ಯರಾದರೂ ಸಹ "ತೇ ವಾ ಏತೇ ಚಿದಾತ್ಮಾನೋऽವಿನಷ್ಟಾಃ ಪರಂಜ್ಯೋತಿರ್ನಿವಿಶಂತ್ಯವಿನಷ್ಟಾ ಏವೋತ್ಪದ್ಯಂತೇ ನ ವಿನಶ್ಯಂತಿ ಕದಾಚನ" ಎಂಬುದಾಗಿ ಕಾಷಾಯಣಶ್ರುತಿಯು ಜೀವರಿಗೆ ಉತ್ಪತ್ತಿಯನ್ನು ಹೇಳುತ್ತಿರುವುದರಿಂದ (ಜೀವರಿಗೆ ವಿಷ್ಣುವಿನಿಂದ ಉತ್ಪತ್ತಿಯನ್ನು ಹೇಳುತ್ತಿರುವುದರಿಂದ) ವಿಷ್ಣುವಿಗೆ ಜೀವಕಾರಣತ್ವವು ಉಪಪನ್ನವೇ ಆಗುತ್ತದೆ. ಹಾಗಾದರೆ ಜೀವರಿಗೆ ಕಾರಣ ಯಾರು? ಎಂದರೆ, ಪರಮಾತ್ಮನೇ ಕಾರಣನಾಗುತ್ತಾನೆ. ಆದ್ದರಿಂದ ಜೀವನಿಗೆ ಉತ್ಪತ್ತಿಯನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ, ಜೀವನಿಗೆ ವಿಷ್ಣುವಿನಿಂದ ಉತ್ಪತ್ತಿಯು

ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಜಗತ್ಕಾರಣತ್ವ ಹೇಳಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 19

## ಆಕ್ಷೇಪ

**ಸೂ.ರ.:– नन्वनादिनित्यस्य जीवस्योत्पत्तिः श्रुताऽपि तस्योत्पत्त्यङ्गीकारे वन्ध्यात्वमभ्युपगम्य मातृत्ववचनवत् नित्यत्वमभ्युपगम्य पुनरुत्पत्तिवचनस्य व्याहतत्वादित्याशङ्कां पराकुर्वत्सूत्रमुपन्यस्यति ॥**

**ಅನು.:–** ಅನಾದಿನಿತ್ಯನಾದ ಜೀವನಿಗೆ ಉತ್ಪತ್ತಿಯು ಶ್ರುತವಾಗುತ್ತಿದ್ದರೂ ಸಹ ಉತ್ಪತ್ತಿಯನ್ನು ಅಂಗೀಕರಿಸುವುದಾದರೆ, ವಂಧ್ಯಾತ್ವವನ್ನು ಅಂಗೀಕರಿಸಿ ಮಾತೃತ್ವವನ್ನು ಹೇಳಿದರೆ ವ್ಯಾಹತಿ ಹೇಗೆ ಬರುವುದೋ ಅದರಂತೆ ನಿತ್ಯತ್ವವನ್ನು ಅಂಗೀಕರಿಸಿ ಮತ್ತೆ ಉತ್ಪತ್ತಿಯನ್ನು ಹೇಳಿದರೆ ವ್ಯಾಹತಿ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ युक्तेश्च ॐ (२.३.१९)

ಯುಕ್ತೇಶ್ಚ = ಜೀವನು ಅನಾದಿನಿತ್ಯನಾದರೂ ಸಹ ಈಶಾಧೀನದೇಹವತ್ತ್ವರೂಪವಾದ ಉತ್ಪತ್ತಿಯು ಯುಕ್ತವೂ ಆದ್ದರಿಂದಲೂ, ಜೀವನು ಉತ್ಪತ್ತಿ ಉಳ್ಳವನೇ ಆಗಿದ್ದಾನೆ.

**ಸೂ.ರ.:– एवं च नित्यस्यापि जीवस्योपाध्युत्पत्त्यपेक्षयोत्पत्त्युपपत्तेः । तथाऽपि स्वरूपलाभरूपोत्पत्तेरलाभेऽपि पराधीनविशेषावाप्तिरूपोत्पत्तेरेव विवक्षितत्वेन तदभावस्येष्टत्वात् । अतः श्रुत्यविरोधेन जीवस्य ब्रह्मजातत्वसिद्धेर्युक्तस्तत्र समन्वय इति सिद्धम् ॥**

**ಅನು.:–** ಜೀವನು ಅನಾದಿನಿತ್ಯನಾದರೂ ಸಹ ಉಪಾಧಿ ಉತ್ಪತ್ತಿ ಅಪೇಕ್ಷೆಯಿಂದ ಉತ್ಪತ್ತಿಯು ಉಪಪನ್ನವಾಗುತ್ತದೆ. ಅಂದರೆ - ಸ್ವರೂಪಲಾಭರೂಪವಾದ ಉತ್ಪತ್ತಿಯು ಉಪಪನ್ನವಾಗದ ಕಾರಣ ಅನಾದಿನಿತ್ಯ ಎಂದಾದರೂ, ಪರಾಧೀನವಿಶೇಷಾವಾಪ್ತಿ ರೂಪವಾದ ಉತ್ಪತ್ತಿಯು ವಿವಕ್ಷಿತವಾದ್ದರಿಂದ ಅಂತಹ ಉತ್ಪತ್ತಿಯು ಉಪಪನ್ನವಾಗುವುದರಿಂದ ವ್ಯಾಹತಿ ಬರುವುದಿಲ್ಲ.

ಆದ್ದರಿಂದ ಜೀವನಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಶ್ರುತಿವಿರೋಧ ಬಾರದ ಕಾರಣ ಪರಮಾತ್ಮನಿಗೆ ಜೀವಕಾರಣತ್ವವು ಉಪಪನ್ನವಾಗುವುದರಿಂದ (ಪರಮಾತ್ಮನಿಂದ ಜೀವನ ಉತ್ಪತ್ತಿಯು ಸಿದ್ಧವಾಗುವುದರಿಂದ) ಜಗತ್ಕಾರಣತ್ವವನ್ನು ಹೇಳಿ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಜ್ಞಾಧಿಕರಣವು ಮುಗಿಯಿತು.

*ಅಧಿಕರಣ – 12*

# ಉತ್ಕ್ರಾಂತ್ಯಧಿಕರಣ

## ಸಂಗತಿ

**ಸೂ.ರ.:– अत्र जीवधर्मे परिमाणेऽणुत्वश्रुतिवरोधः परिह्रियते ॥**

**ಅನು.:–** ಜೀವನ ಧರ್ಮವಾದ ಪರಿಮಾಣದ ವಿಷಯದಲ್ಲಿ ಅಣುತ್ವಪ್ರತಿಪಾದಕ-ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹನ್ನೆರಡನೇ ಈ ಉತ್ಕ್ರಾಂತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न जीवोऽणुः । व्याप्ता ह्यात्मान इति (काषायण.) श्रुति-विरुद्धत्वात् । न चाणुत्वेऽपि (गौपवन.) श्रुतिरस्तीति वाच्यम् । व्याप्तिश्रुतेः सयुक्तिकत्वेन प्रावल्यात् । तद्बाधितैतच्छ्रुतेः प्रामाण्यायोगात् । आत्मा नाणुः सर्वदेहावच्छेदेन स्पर्शादिग्राहित्वात् । नाप्यणुत्वे युगपत्सर्वेन्द्रियैर्ज्ञानं भवति । न चात्मा देहपरिमाणः । मध्यमपरिमितत्वेना-नित्यत्वप्रसङ्गात् । अतः परिशेषादात्मनो व्यापकत्वमेव स्वीकार्यम् । तथा प्रयोगोऽपि । सर्वमिदं मूर्त्तमात्मना सृष्टं मूर्त्तत्वान्मच्छरीरवदिति । ततश्चाणुत्वश्रुतेरप्रामाण्येन श्रुतिमात्रस्य प्रामाण्यनैयत्याभावान्न श्रुतिसमन्वयो युक्त इति प्राप्ते सूत्रमाह ॥**

ಅನು.:– ಜೀವನು ಅಣುವಾಗಲು ಸಾಧ್ಯವಿಲ್ಲ. ಏಕೆಂದರೆ – ''ವ್ಯಾಪ್ತಾ ಹ್ಯಾತ್ಮಾನ-ಶ್ಚೇತನಾ ನಿರ್ಗುಣಾಶ್ಚ ಸರ್ವಾತ್ಮಾನಃ ಸರ್ವರೂಪಾ ಅನಂತಾಃ'' ಎಂಬುದಾಗಿ ಕಾಷಾಯಣ ಶ್ರುತಿಯಲ್ಲಿ ಜೀವನಿಗೆ ವ್ಯಾಪ್ತತ್ವವನ್ನು ಹೇಳಿದ್ದರಿಂದ, ಪ್ರಕೃತ ಅಣು ಎಂದು ಹೇಳಿದರೆ ಶ್ರುತಿಯ ವಿರೋಧ ಬರಬೇಕಾಗುತ್ತದೆ. ಆದ್ದರಿಂದ ಜೀವ ಅಣು ಎನ್ನಲು ಬರುವುದಿಲ್ಲ.

ಜೀವನು ಅಣುವಾಗಿದ್ದಾನೆ ಎಂಬ ವಿಷಯದಲ್ಲಿಯೂ ಸಹ ''ಅಣುರ್ಹ್ಯೇಷ ಆತ್ಮಾ ಯಂ ವಾ ಏತೇ ಸಿನೀತಃ । ಪುಣ್ಯಂ ಪಾಪಂ ಚ' ಎಂಬುದಾಗಿ ಗೌಪವನ (ಗೌತಮ.ಪಾ.) ಶ್ರುತಿಯು ಇದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಜೀವನು ವ್ಯಾಪ್ತನಾಗಿದ್ದಾನೆ ಎಂದು ತಿಳಿಸುವ ವ್ಯಾಪ್ತಿಶ್ರುತಿಗೆ ಯುಕ್ತಿಯ ಸಹಾಯವೂ ಇರುವುದರಿಂದ ಪ್ರಬಲವಾಗಿದೆ ವ್ಯಾಪ್ತಿಶ್ರುತಿ. ಆತ್ಮನು ಅಣುವಾಗಿದ್ದರೆ ಎಲ್ಲ ಇಂದ್ರಿಯಗಳಿಂದಲೂ ಏಕಕಾಲಕ್ಕೆ ಜ್ಞಾನವಾಗಲು ಸಾಧ್ಯವಿಲ್ಲ. ಪ್ರಕೃತ ದೇಹದೆಲ್ಲೆಡೆ ಸ್ಪರ್ಶಾದಿಗಳನ್ನು ಗ್ರಹಿಸುವುದರಿಂದ (ಎಲ್ಲ ಇಂದ್ರಿಯ-ಗಳಿಂದಲೂ ಏಕಕಾಲಕ್ಕೆ ಜ್ಞಾನವಾಗುವುದರಿಂದ) ಆತ್ಮನು ಅಣುವಾಗಿರಲು ಸಾಧ್ಯವಿಲ್ಲ.

ಆತ್ಮಾ ನ ಅಣುಃ ಸರ್ವದೇಹಾವಚ್ಛೇದೇನ ಸ್ಪರ್ಶಾದಿಗ್ರಾಹಿತ್ವಾತ್ । (ಆತ್ಮನು ಅಣುವಾಗಲು ಸಾಧ್ಯವಿಲ್ಲ. ದೇಹದೆಲ್ಲೆಡೆ ಸ್ಪರ್ಶಾದಿಗಳನ್ನು ಗ್ರಹಿಸುವುದರಿಂದ) ಎಂಬ ಜೀವನಿಗೆ ವ್ಯಾಪ್ತತ್ವಸಾಧಕ ಯುಕ್ತಿಯ ಸಹಾಯವೂ ಇರುವುದರಿಂದ ವ್ಯಾಪ್ತಿಶ್ರುತಿಯು ಪ್ರಬಲವಾಗಿದೆ. ಅಂತಹ ಪ್ರಬಲವಾದ ವ್ಯಾಪ್ತಿಶ್ರುತಿಯಿಂದ ಬಾಧಿತವಾಗುವುದರಿಂದ ಅಣುತ್ವಶ್ರುತಿಯು ಪ್ರಮಾಣವಾಗಲಾರದು.

ಆತ್ಮನು ಅಣುವಾಗದೇ ಇದ್ದರೂ ದೇಹಪರಿಮಾಣನಾಗಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಆತ್ಮನು ದೇಹಪರಿಮಾಣನಾಗುವುದಾದರೆ ಮಧ್ಯಮಪರಿಮಾಣಉಳ್ಳ ವಸ್ತುವಿಗೆ ಅನಿತ್ಯತ್ವವು ಕಡ್ಡಾಯವಾದ್ದರಿಂದ ಆತ್ಮನಿಗೆ ಅನಿತ್ಯತ್ವ ಬರಬೇಕಾಗುತ್ತದೆ. ಆದ್ದರಿಂದ ಪರಿಶೇಷತಃ ಆತ್ಮನಿಗೆ ವ್ಯಾಪಕತ್ವವೇ ಸ್ವೀಕಾರ್ಯವಾಗಿದೆ. ಹಾಗಾದರೆ –

**ಸರ್ವಮಿದಂ ಮೂರ್ತಂ, ಆತ್ಮನಾ ಸ್ಪೃಷ್ಟಂ, ಮೂರ್ತತ್ವಾತ್, ಮಚ್ಛರೀರವತ್ ।**

ಆದ್ದರಿಂದ ಪ್ರಬಲವಾದ ವ್ಯಾಪ್ತಿಶ್ರುತಿಯ ವಿರೋಧ ಬರುವುದರಿಂದ ಅಣುತ್ವ-ಶ್ರುತಿಯು ಅಪ್ರಮಾಣವಾದ್ದರಿಂದ, ಸಕಲಶ್ರುತಿಗಳಿಗೂ ಪ್ರಾಮಾಣ್ಯವು ನಿಯತವಾಗ-ದಿರುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ उत्क्रान्तिगत्यागतीनां ॐ (२.३.२०)

ಉತ್ಕ್ರಾಂತಿಗತ್ಯಾಗತೀನಾಂ = ಸೋऽಸ್ಮಾತ್ ಇತ್ಯಾದಿಶ್ರುತ್ಯುಕ್ತವಾದ ದೇಹೋತ್ಕ್ರಮಣ - ಲೋಕಾಂತರ ಗಮನ - ಏತಲ್ಲೋಕಾಗಮನ ರೂಪವಾದ ಹೇತುಗಳಿಂದಾಗಿ, ಜೀವನು ಅಣುವೇ ಆಗಿದ್ದಾನೆ, ಹೊರತು ವಿಭು (ವ್ಯಾಪ್ತನು) ಆಗಿಲ್ಲ

### ಸಿದ್ಧಾಂತ

**ಸೂ.ರ.:– एवं च जीवोऽणुरेव न व्याप्तः । उत्क्रान्तिगत्यागतिमत्त्वात् । पतत्रिशरीरवदिति । अत्र महत्परिमाणातिरिक्तपरिमाणस्यैव विवक्षितत्वेन दृष्टान्तस्य साध्यविकलत्वाभावात् । सोऽस्माच्छरीरादिति (पौष्यायण.) श्रुतिवलेन विभुत्वबाधकानामणुत्वसाधकानां हेतूनां सिद्धत्वात् । न च मध्यमपरिमाणत्वेनान्यथासिद्धिः । तस्यानित्यत्वप्रसङ्गेन निराकृतत्वात् । अतः श्रुत्यविरोधेन जीवाणुत्वे सिद्धे युक्तः श्रुतिसमन्वय इति सिद्धम् ॥**

**ಅನು.:–** ಜೀವಃ, ಅಣುರೇವ ನ ವ್ಯಾಪ್ತಃ, ಉತ್ಕ್ರಾಂತಿಗತ್ಯಾಗತಿಮತ್ತ್ವಾತ್, ಪತತ್ರಿಶರೀರವತ್ । (ಜೀವನು, ಅಣುವೇ ಆಗಿದ್ದಾನೆ ಹೊರತು ವ್ಯಾಪ್ತನಲ್ಲ ಉತ್ಕ್ರಾಂತಿ–ಗತಿ–ಆಗತಿ ಉಳ್ಳವನಾದ್ದರಿಂದ, ಪತತ್ರಿಶರೀರದಂತೆ. (ಪತತ್ರಿಯ) ಹಕ್ಕಿಯ ಶರೀರವು ಉತ್ಕ್ರಾಂತಿ–ಗತಿ–ಆಗತಿ ಉಳ್ಳದ್ದಾದ್ದರಿಂದ ಹೇಗೆ ವ್ಯಾಪ್ತವಾಗಿಲ್ಲವೋ ಅದರಂತೆ ಜೀವನೂ ಉತ್ಕ್ರಾಂತಿ ಗತಿ ಆಗತಿ ಉಳ್ಳವನಾದ್ದರಿಂದ ವ್ಯಾಪ್ತನಾಗಿಲ್ಲ ಎಂದು ಭಾವ.)

ದೃಷ್ಟಾಂತವಾದ ಪತತ್ರಿಶರೀರವು (ಪಕ್ಷಿಯ ಶರೀರವು) ಅಣುವಾಗಿಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ ಇಲ್ಲಿ ಅಣುಶಬ್ದದಿಂದ ಮಧ್ಯಮಪರಿಮಾಣಾತಿರಿಕ್ತಪರಿಮಾಣವನ್ನೇ ವಿವಕ್ಷಿಸಿದ್ದರಿಂದ ಸಾಧ್ಯವೈಕಲ್ಯ ಬರುವುದಿಲ್ಲ

ಜೀವನಿಗೆ ಉತ್ಕ್ರಾಂತಿ–ಗತಿ–ಆಗತಿಗಳು ಇವೆ ಎಂದು ಹೇಗೆ ಹೇಳುತ್ತೀರಿ? ಯಾವ ಪ್ರಮಾಣದಿಂದಲೂ ಅವು ಸಿದ್ಧವಾಗದ ಕಾರಣ ಅಸಿದ್ಧಿ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ

''ಸೋऽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತ್ಯಮುಷ್ಮಾದಿಮಂ ಲೋಕಮಾಗಚ್ಛತಿ ಸ ಗರ್ಭೀಭವತಿ ಸ ಪ್ರಸೂಯತೇ ಸ ಕರ್ಮ ಕುರುತೇ''

ಎಂಬುದಾಗಿ ಪೌಷ್ಯಾಯಣಶ್ರುತಿಯಲ್ಲಿ ಜೀವನಿಗೆ ಉತ್ಕ್ರಾಂತಿ-ಗತಿ-ಆಗತಿಗಳು ಶ್ರುತವಾಗುತ್ತಿರುವುದರಿಂದ ಅಸಿದ್ಧಿಗೆ ಅವಕಾಶವಿಲ್ಲ.

ಜೀವನಿಗೆ ಮಧ್ಯಮಪರಿಮಾಣವನ್ನೂ ಅಂಗೀಕರಿಸಬಹುದಾದ್ದರಿಂದ ಅನ್ಯಥಾಸಿದ್ಧಿ ಬರುತ್ತದೆ ಎಂದು ಶಂಕಿಸಲು ಬರುವುದಿಲ್ಲ. ಹಾಗೆ ಒಂದುವೇಳೆ ಮಧ್ಯಮಪರಿಮಾಣವನ್ನು ಅಂಗೀಕರಿಸಿದರೆ ಅನಿತ್ಯತ್ವಪ್ರಸಕ್ತಿ ಬರುವುದರಿಂದ ಮಧ್ಯಮಪರಿಮಾಣವು ಅಂಗೀಕಾರಾರ್ಹವಲ್ಲ.

ಆದ್ದರಿಂದ ಜೀವನಿಗೆ ಅಣುತ್ವವನ್ನು ಅಂಗೀಕರಿಸಿದರೆ ಶ್ರುತಿಯ ವಿರೋಧ ಬಾರದ ಕಾರಣ (ಜೀವನಿಗೆ ಅಣುತ್ವವು ಸಿದ್ಧವಾಗುವ ಕಾರಣ) ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 21

## ಆಕ್ಷೇಪ

**ಸೂ.ರ.:– ननु न जीवस्योत्क्रान्त्यादिकं परमेश्वरेणेति युज्यते । किंतु तस्य स्वयमेव सम्भवति । न च सोऽस्माच्छरीरादिति (पौष्यायण.) श्रुतौ जीवस्योत्क्रान्त्याद्येव श्रूयते न त्वन्याधीनतायाः विधिर्निषेधो वाऽतो न तया दृढनिर्णयः इति वाच्यम् । एकः प्रसूयत इति स्मृत्या जीवस्य स्वातन्त्र्येणोत्पत्तिविनाशयोरुक्तत्वेन तदनुसारेण श्रुतेरपि जीवस्योत्क्रान्त्यादेः पराधीनतानिषेधार्थपरत्वात् इति प्राप्ते पराकुर्वत्सूत्रं पठति ॥**

ಅನು.:– ಜೀವನಿಗೆ ಉತ್ಕ್ರಾಂತ್ಯಾದಿಗಳು ಇವೆ ಎಂದಾದರೂ ಅವು ಸ್ವತಂತ್ರವಾಗಿ ಇವೆಯೋ? ಅಥವಾ ಈಶ್ವರಾಧೀನವಾಗಿ ಇವೆಯೋ? ಎಂಬ ಜಿಜ್ಞಾಸೆ ಬಂದಾಗ, ಜೀವನಿಗೆ ಉತ್ಕ್ರಾಂತ್ಯಾದಿಗಳು ಸ್ವತಂತ್ರವಾಗಿಯೇ ಇವೆ ಹೊರತು ಈಶ್ವರಾಧೀನವಾಗಿ ಅಲ್ಲ ಎಂದು ಆಕ್ಷೇಪ.

ಹೌದು "ಸೋಽಸ್ಮಾಚ್ಛರೀರಾದುತ್ಕ್ರಮ್ಯ ..." ಎಂಬ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಾಂತ್ಯಾದಿಗಳು ಶ್ರುತವಾಗುತ್ತಿವೆಯೇ ಹೊರತು ಅಲ್ಲಿ ಅನ್ಯಾಧೀನತ್ವವಿಧಿಯಾಗಲೀ ನಿಷೇಧವಾಗಲೀ ಶ್ರುತವಾಗುತ್ತಿಲ್ಲ. ಹಾಗಾಗಿ ಈ ಶ್ರುತಿಯಿಂದಾಗಿ ಸ್ವತಂತ್ರವಾಗಿ ಉತ್ಕ್ರಾಂತ್ಯಾದಿಗಳು ಇವೆ ಎಂದು ನಿರ್ಧಾರವಾಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ.

**ಏಕಃ ಪ್ರಸೂಯತೇ ಜಂತುರೇಕ ಏವ ಪ್ರಮೀಯತೇ ।**
**ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಮ್ ॥ .**

ಎಂಬ ಸ್ಮೃತಿಯಲ್ಲಿ ಜೀವನಿಗೆ ಸ್ವಾತಂತ್ರ್ಯೇಣ ಉತ್ಪತ್ತಿ-ವಿನಾಶಗಳನ್ನು ಹೇಳಿದ್ದರಿಂದ ಅದಕ್ಕೆ ಅನುಸಾರವಾಗಿ ಸೋಽಸ್ಮಾತ್ ಎಂಬ ಶ್ರುತಿಯೂ ಸಹ ಸ್ವಾತಂತ್ರ್ಯೇಣ ಉತ್ಕ್ರಾಂತ್ಯಾದಿಪರವಾಗಿದೆ ಎಂದೇ ಹೇಳಬೇಕು. ಆದ್ದರಿಂದ ಜೀವನಿಗೆ ಸ್ವಾತಂತ್ರ್ಯೇಣ ಉತ್ಕ್ರಾಂತ್ಯಾದಿಗಳಿವೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ स्वात्मना चोत्तरयोः ॐ (२.३.२१)

ಜೀವಃ = ಜೀವನು, ಸ್ವಾತ್ಮನಾ (ಚ) ಏವ = ಸ್ವತಂತ್ರನಾದ ಪರಮಾತ್ಮನಿಂದಲೇ, ಅವನ ಪ್ರೇರಣೆಯಿಂದಲೇ, ಉತ್ಕ್ರಾಂತ್ಯಾದಿಮಾನ್ = ಉತ್ಕ್ರಾಂತ್ಯಾದಿಗಳುಳ್ಳವನಾಗಿದ್ದಾನೆ, ಹೊರತು ಸ್ವತಂತ್ರವಾಗಿ ಉತ್ಕ್ರಾಂತ್ಯಾದಿಗಳುಳ್ಳವನಾಗಿಲ್ಲ.

ಕುತಃ = ಏಕೆ?, ಉತ್ತರಯೋಃ = "ಸ ಏತೇನೈವ ಸ್ವಾತ್ಮನಾ" "ಏಷ ಹ್ಯೇನಂ ಜೀವಂ" ಎಂಬ ಮುಂದಿನ ಎರಡು ವಾಕ್ಯಗಳ ಬಲದಿಂದಾಗಿ.

### ಸಮಾಧಾನ

**ಸೂ.ರ.:- एवं च स्वात्मशब्दवाच्येन परमात्मनाऽनुगृहीतजीवस्य मातृदेहस्थगर्भप्रवेशस्य तत्प्रेरणयैव जनेर्मोक्षार्थं चोर्ध्वगमनस्य चोक्तत्वात् । स एतेनैवेति श्रुतेः । स्वात्मशब्दस्य भगवति विद्वद्रूढेर्दर्शितत्वात् । निर्दिष्टस्मृतेस्तु प्रसवादिदुःखानुभवे परमात्मदत्तस्वातन्त्र्यप्रतिपादकत्वेनाविरोधात् । अत उत्तरवाक्यबलाज्जीवस्योत्क्रान्त्यादयः परमात्मनैवेति सिद्धम् ॥**

**ಅನು.:-** "ಸ ಏತೇನೈವ ಸ್ವಾತ್ಮನಾ ಪರೇಣೇಮಂ ಗರ್ಭಮನುಪ್ರವಿಶತಿ ಪರೇಣ ಜಾಯತೇ ಪರೇಣ ಕರ್ಮ ಕುರುತೇ ಪರೇಣ ನೀಯತೇ ಪರೇಣೋನೀಯತೇ। ತಂ ವಾ ಏತಮಭಿವದಂತಿ ಸ್ವಾತ್ಮಾ"

· "ಏಷ ಹ್ಯಾನಂದಮಾದತ್ತೇ ಏಷ ಹ್ಯೇನಂ ಜೀವಮಭಿಜೀವತ್ಯೇಷ ಗಮಯತ್ಯೇಷ ಆಗಮಯತಿ"

ಎಂಬುದಾಗಿ ಪೌಷ್ಯಾಯಣಶ್ರುತಿ ಇರುವುದರಿಂದ ಸ್ವಾತ್ಮಶಬ್ದವಾಚ್ಯನಾದ ಪರಮಾತ್ಮ-ನಿಂದ ಅನುಗೃಹೀತನಾದ ಜೀವನಿಗೆ ಮಾತೃದೇಹಸ್ಥಗರ್ಭಪ್ರವೇಶವನ್ನು, ಆ ಪರಮಾತ್ಮನ ಪ್ರೇರಣೆಯಿಂದಲೇ ಉತ್ಪತ್ತಿ-ಮೋಕ್ಷಗಳನ್ನು ಹೇಳಿದ್ದರಿಂದ ಜೀವನಿಗೆ ಈಶ್ವರಾಧೀನ-ವಾಗಿಯೇ ಉತ್ಕ್ರಾಂತ್ಯಾದಿಗಳನ್ನು ಹೇಳಬೇಕು.

ಶ್ರುತಿಯಲ್ಲಿ ಸ್ವಾತ್ಮನಾ ಎಂದಷ್ಟೇ ಇದೆ. ಹೊರತು ಪರಮಾತ್ಮನಾ ಎಂದು ಇಲ್ಲವಲ್ಲ? ಎಂದರೆ, ಸ್ವಾತ್ಮಶಬ್ದಕ್ಕೆ ಭಗವಂತನಲ್ಲಿ ವಿದ್ವದ್ರೂಢಿಯನ್ನು ತೋರಿಸಿದ್ದರಿಂದ ಸ್ವಾತ್ಮಶಬ್ದದಿಂದ ಪರಮಾತ್ಮನೇ ಗೃಹೀತನಾಗಿದ್ದಾನೆ.

ಹಾಗಾದರೆ ಏಕಃ ಪ್ರಸೂಯತೇ ಜಂತುಃ ಎಂಬುದಾಗಿ ಸ್ಮೃತಿಯು ಸ್ವಾತಂತ್ರ್ಯೇಣ ಉತ್ಕ್ರಾಂತ್ಯಾದಿಗಳನ್ನು ಹೇಳುತ್ತಿದೆಯಲ್ಲ? ಎಂದರೆ, ಅದು ತಪ್ಪು. ನಿರ್ದಿಷ್ಟವಾದ ಈ ಸ್ಮೃತಿಯು ಪ್ರಸವ ಮೊದಲಾದ ದುಃಖಾನುಭವವಿಷಯದಲ್ಲಿ ಪರಮಾತ್ಮನಿಂದ ಕೊಡಲ್ಪಟ್ಟ ಸ್ವಾತಂತ್ರ್ಯವನ್ನು ಮಾತ್ರ ಪ್ರತಿಪಾದಿಸುತ್ತಿರುವುದರಿಂದ ನಿರ್ದಿಷ್ಟಸ್ಮೃತಿಯ ವಿರೋಧ ಬರುವುದಿಲ್ಲ.

ಆದ್ದರಿಂದ ಪೂರ್ವೋಕ್ತವಾದ ಎರಡು ಶ್ರುತಿಗಳ ಬಲದಿಂದ ಜೀವನಿಗೆ ಉತ್ಕ್ರಾಂತ್ಯಾದಿಗಳು ಈಶ್ವರಾಧೀನವಾಗಿಯೇ ಇವೆ ಎಂದು ಸಿದ್ಧವಾಗುತ್ತದೆ.

ಸೂತ್ರ - 22

**ಆಕ್ಷೇಪ**

**ಸೂ.ರ.:- नन्वथाऽपि न जीवोऽणुः । व्याप्ता ह्यात्मानश्चेतना निर्गुणाश्चेति (काषायण.) व्याप्तिश्रुतिविरोधेनाणुत्वायोगात् । बहुवचन-श्रवणाद्व्याप्तिश्रुतेः परमात्मनि निरवकाशात् । उत्क्रान्त्यादिकस्य तु मनोगतत्वेन जीवात्मन्युपचरितत्वादिति प्राप्ते पराकुर्वत्सूत्रमुपन्यस्यति ॥**

**ಅನು.:-** ಆದರೂ ಸಹ ಜೀವನು ಅಣುವಾಗಲು ಸಾಧ್ಯವಿಲ್ಲ. ಏಕೆಂದರೆ, ಒಂದುವೇಳೆ ಜೀವನಿಗೆ ಅಣುತ್ವವನ್ನು ಅಂಗೀಕರಿಸಿದರೆ ''ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ'' (ಕಾಷಾಯಣಶ್ರುತಿ) ಎಂಬುದಾಗಿ ಜೀವರಿಗೆ ವ್ಯಾಪ್ತತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವುದರಿಂದ ಜೀವರಿಗೆ ಅಣುತ್ವವು ಉಪಪನ್ನವಾಗುವುದಿಲ್ಲ.

ಈ ವ್ಯಾಪ್ತಿಶ್ರುತಿಯು ಪರಮಾತ್ಮನಿಗೆ ವ್ಯಾಪ್ತತ್ವವನ್ನು ಹೇಳುತ್ತಿದೆ ಎಂದು ಶಂಕಿಸುವುದು ಸರಿಯಲ್ಲ. ವ್ಯಾಪ್ತಾಃ ಆತ್ಮಾನಃ ಚೇತನಾಃ ಎಂಬುದಾಗಿ ಶ್ರುತಿಯಲ್ಲಿ ಬಹುವಚನ

ಇರುವುದರಿಂದ (ಪರಮಾತ್ಮನು ಒಬ್ಬನೇ ಆಗಿರುವುದರಿಂದ) ಪರಮಾತ್ಮನಿಗೆ ವ್ಯಾಪ್ತತ್ವವನ್ನು ಹೇಳಲು ಸಾಧ್ಯವಿಲ್ಲ.

ಹಾಗಾದರೆ, ಜೀವರು ವ್ಯಾಪ್ತರಾಗುವುದಾದರೆ ಉತ್ಕ್ರಾಂತ್ಯಾದಿಗಳು ಹೇಗೆ ಕೂಡುತ್ತವೆ? ಎಂದು ಶಂಕೆ ಬಂದರೆ, ಆ ಉತ್ಕ್ರಾಂತ್ಯಾದಿಗಳು ಮನೋಗತವಾದ ಧರ್ಮಗಳಾದ್ದರಿಂದ ಜೀವಾತ್ಮನಲ್ಲಿ ಅವು ಉಪಚರಿತವಾಗಿವೆ. ಆದ್ದರಿಂದ ಜೀವರು ವ್ಯಾಪ್ತರೇ ಆಗಿದ್ದಾರೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ नाणुरतच्छ्रुतेरिति चेन्नेतराधिकारात् ॐ (२.३.२२)**

ಜೀವಃ = ಜೀವನು, ನ ಅಣುಃ = ಅಣುವಾಗಿಲ್ಲ, ಕುತಃ = ಏಕೆ?, ಅತಚ್ಛ್ರುತೇಃ = ವ್ಯಾಪ್ತಾ ಹ್ಯಾತ್ಮಾನಃ ಎಂಬುದಾಗಿ ಅಣುತ್ವವಿರುದ್ಧವಾದ ವ್ಯಾಪ್ತತ್ವಶ್ರುತಿಯು ಶ್ರುತ-ವಾಗುತ್ತಿರುವುದರಿಂದ, ಇತಿ ಚೇತ್ = ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ, ಕುತಃ = ಏಕೆ?, ಇತರಾಧಿಕಾರಾತ್ = ಅದು ಪರಮಾತ್ಮಪ್ರಕರಣವಾದ್ದರಿಂದ.

ತಥಾ ಚ ವ್ಯಾಪ್ತತ್ವಶ್ರುತಿಯು ಪರಮಾತ್ಮವಿಷಯಕವಾದ್ದರಿಂದ ಜೀವರ ಅಣುತ್ವಕ್ಕೆ ಬಾಧಕವಾಗುವುದಿಲ್ಲ.

### ಸಮಾಧಾನ

**ಸೂ.ರ.:–** **एवं च स आत्मेदं सृजति स द्विधेदमित्यादिना प्रकृतस्य परमात्मन एवात्राभिधानात् । न चास्य वाक्यस्य विष्णुपरत्वे बहुवचन-विरोधः । स आत्मा स आत्मानः स ईश इत्यादिना बहुवचनान्तपद-वाच्यत्वेन तस्यैव प्रकृतत्वात् । निर्गुणा इति बन्धराहित्योक्तेश्च । ततश्चैतच्छ्रुतिबाधेनोत्क्रान्त्यादीनामौपचारिकत्वकल्पनायोगात् । अतः श्रुत्यविरोधेन जीवाणुत्वसिद्धेर्युक्तः समन्वय इति सिद्धम् ॥**

**ಅನು.:–** "ಸ ಆತ್ಮೇದಂ ಸೃಜತಿ ಸ ದ್ವಿಧೇದಂ" ಇತ್ಯಾದಿಯಾಗಿ ಪ್ರಕೃತನಾದ ಪರಮಾತ್ಮನನ್ನೇ ವ್ಯಾಪ್ತಾಃ ಹ್ಯಾತ್ಮಾನಃ ಎಂಬ ಶ್ರುತಿಯಲ್ಲಿ ಪ್ರತಿಪಾದಿಸುತ್ತಿರುವುದರಿಂದ ಈ ಪ್ರಕರಣವು ವಿಷ್ಣುಪ್ರಕರಣವೆಂದು ತಿಳಿಯುತ್ತದೆ. ವಿಷ್ಣುಪ್ರಕರಣವಾದ್ದರಿಂದ ಇಲ್ಲಿ ಪರಮಾತ್ಮನಿಗೆ ವ್ಯಾಪ್ತತ್ವವನ್ನು ಹೇಳಲಾಗುತ್ತಿದೆಯೇ ಹೊರತು ಜೀವನಿಗೆ ವ್ಯಾಪ್ತತ್ವವನ್ನು

ಹೇಳುತ್ತಿಲ್ಲ. ಹಾಗಾಗಿ ಈ ಶ್ರುತಿಯು ಜೀವವ್ಯಾಪ್ತತ್ವದ ವಿಷಯದಲ್ಲಿ ಪ್ರಮಾಣ-ವಾಗುವುದಿಲ್ಲ.

ವ್ಯಾಪ್ತಾ ಹ್ಯಾತ್ಮಾನಃ ಎಂಬ ಈ ವಾಕ್ಯವು ಪರಮಾತ್ಮಪರ ಎನ್ನುವುದಾದರೆ ಬಹುವಚನವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ.

''ಸ ಆತ್ಮಾ ಸ ಆತ್ಮಾನಃ ಸ ಈಶಃ'' ಇತ್ಯಾದಿಯಾಗಿ ಬಹುವಚನಾಂತಪದವಾಚ್ಯನಾಗಿ ಪ್ರಕೃತನಾದ ಪರಮಾತ್ಮನೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ. ಮತ್ತು 'ನಿರ್ಗುಣಾಃ' ಎಂಬುದಾಗಿ ಬಂಧರಾಹಿತ್ಯವನ್ನು ಹೇಳಿದ್ದರಿಂದಲೂ ಸಹ ಇಲ್ಲಿ ಪರಮಾತ್ಮನೇ ಪ್ರತಿಪಾದ್ಯ ಎಂದು ತಿಳಿಯುತ್ತದೆ. ಹಾಗಾಗಿ ಇದು ಪರಮಾತ್ಮಪ್ರಕರಣವಾದ್ದರಿಂದ ಈ ಶ್ರುತಿಯು ಪರಮಾತ್ಮನಿಗೆ ವ್ಯಾಪ್ತತ್ವವನ್ನು ಹೇಳುತ್ತಿದೆಯೇ ಹೊರತು ಜೀವನಿಗೆ ವ್ಯಾಪ್ತತ್ವವನ್ನು ಹೇಳುತ್ತಿಲ್ಲ.

ಇಂತಹ ಶ್ರುತಿಯಿಂದ ಬಾಧ ಬರುವುದರಿಂದ ಉತ್ಕ್ರಾಂತ್ಯಾದಿಗಳಿಗೆ ಔಪಚಾರಿಕತ್ವ-ಕಲ್ಪನಾ ಕೂಡುವುದಿಲ್ಲ. ಆದ್ದರಿಂದ ಜೀವನಿಗೆ ಅಣುತ್ವವನ್ನು ಅಂಗೀಕರಿಸಿದರೆ ಶ್ರುತಿಯ ವಿರೋಧ ಬಾರದ ಕಾರಣ ಜೀವನಿಗೆ ಅಣುತ್ವವು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 23

**ಆಕ್ಷೇಪ**

**ಸೂ.ರ.:– ननु यदुक्तं व्याप्तिश्रुतिरीश्वरविषया तत्प्रकरणादिति । तन्न । श्रुत्यपेक्षया प्रकरणस्य दुर्बलत्वात् । तन्मात्रेण बहुवचनश्रुतेरीश्वर-विषयत्वेन सङ्कोचरूपबाधायोगादित्याशङ्कामपाकुर्वत्सूत्रमुपन्यस्यति ॥**

**ಅನು.:–** ಅದು ಈಶ್ವರಪ್ರಕರಣವಾದ್ದರಿಂದ ವ್ಯಾಪ್ತಿಶ್ರುತಿಯು ಈಶ್ವರವಿಷಯಕ-ವಾಗಿದೆ. ಹೊರತು ಜೀವವಿಷಯಕವಲ್ಲ ಎಂಬುದಾಗಿ ಹಿಂದೆ ಹೇಳಿದ್ದು ಸರಿಯಲ್ಲ. ಏಕೆಂದರೆ- ಶ್ರುತಿಗಿಂತಲೂ ಪ್ರಕರಣವು ದುರ್ಬಲವಾಗಿದೆ. ಹೀಗಾಗಿ ಕೇವಲ ಪ್ರಕರಣ-ಮಾತ್ರದಿಂದ ಬಹುವಚನಶ್ರುತಿಗೆ ಈಶ್ವರವಿಷಯಕತ್ವವನ್ನು ಹೇಳಿ ಸಂಕೋಚರೂಪವಾದ ಬಾಧ ಹೇಳಲು ಬರುವುದಿಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ स्वशब्दोन्मानाभ्यां च ॐ (२.३.२३)**

(ಚ ಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿದೆ.) ಕೇವಲ ಪ್ರಕರಣಬಲದಿಂದಾಗಿ ವ್ಯಾಪ್ತಿಶ್ರುತಿಯು ವಿಷ್ಣುವಿಷಯ ಎಂದು ಹೇಳುವುದಿಲ್ಲ. ಕಿಂತು ಸ್ವಶಬ್ದೋನ್ಮಾನಾಭ್ಯಾಂ ಚ = 'ಏಷೋ ಹ್ಯಾತ್ಮಾऽಧ್ಯುದ್ಗತೋ ಮಾನಶಕ್ತೇಃ' ಎಂಬ (ಕಾಷಾಯಣ ಶ್ರುತಿಯಲ್ಲಿ) ಶ್ರುತಿಯಲ್ಲಿ ಸ್ವಶಬ್ದದಿಂದ ಗೃಹೀತವಾದ ಬ್ರಹ್ಮವಾಚಕ ಆತ್ಮಶಬ್ದದಿಂದ ಹಾಗೂ ಉನ್ಮಾನ-ಶಬ್ದಿತವಾದ ಅಪರಿಮಿತತ್ವಲಿಂಗದಿಂದಲೂ ಸಹ ವ್ಯಾಪ್ತಿಶ್ರುತಿಯು ವಿಷ್ಣುವಿಷಯಕವೇ ಹೊರತು ಜೀವವಿಷಯಕವಲ್ಲ ಎಂದು ಸಿದ್ಧವಾಗುತ್ತದೆ.

## ಸಮಾಧಾನ

**ಸೂ.ರ.:– एवं चोक्तदोषो भवेत् । यदि प्रकरणमात्रेण व्याप्ति-श्रुतेस्तद्विषयत्वमुच्येत । न चैवम् । किं नामैषो ह्यात्माऽध्युद्गत इति वाक्यशेषे श्रुतात्मशव्दापरिमितत्वलिङ्गाभ्याम् । तथा च श्रुतिलिङ्गसहित-प्रकरणेन केवलाया वहुवचनश्रुतेर्बाधस्य युक्तत्वात् । अतः श्रुत्यविरोधेन जीवाणुत्वसिद्धेर्युक्तः समन्वय इति सिद्धम् ॥**

**ಅನು.:–** ಒಂದುವೇಳೆ ಕೇವಲ ಪ್ರಕರಣಬಲದಿಂದಾಗಿ ವ್ಯಾಪ್ತಿಶ್ರುತಿಗೆ ವಿಷ್ಣು-ವಿಷಯಕತ್ವವನ್ನು ಹೇಳುತ್ತಿದ್ದರೆ ಆಗ ಈ ರೀತಿ ಶಂಕೆಗೆ ಅವಕಾಶವಿರುತ್ತಿತ್ತು. ಆದರೆ ಪ್ರಕೃತ ಕೇವಲ ಪ್ರಕರಣಬಲದಿಂದಾಗಿ ವಿಷ್ಣುವಿಷಯಕತ್ವವನ್ನು ಹೇಳುತ್ತಿಲ್ಲ. ಕಿಂತು –

'ಏಷೋ ಹ್ಯಾತ್ಮಾऽಧ್ಯುದ್ಗತೋ ಮಾನಶಕ್ತೇಃ' (ಕಾಷಾಯಣಶ್ರುತಿ) ಎಂಬ (ಶ್ರುತಿಯಲ್ಲಿ) ವಾಕ್ಯಶೇಷದಲ್ಲಿ ಶ್ರುತವಾಗುತ್ತಿರುವ ಆತ್ಮಶಬ್ದ ಹಾಗೂ ಅಪರಿಮಿತತ್ವ ಲಿಂಗಗಳಿಂದಾಗಿ ವ್ಯಾಪ್ತಿಶ್ರುತಿಗೆ ವಿಷ್ಣುವಿಷಯಕತ್ವವನ್ನು ಹೇಳುತ್ತಿದ್ದೇವೆ.

ಕೇವಲ ಪ್ರಕರಣದಿಂದ ಶ್ರುತಿಗೆ ಬಾಧ (ಸಂಕೋಚ) ಹೇಳಲು ಬರದಿದ್ದರೂ ಸಹ ಶ್ರುತಿ-ಲಿಂಗಗಳಿಂದ ಸಹಿತವಾದ ಪ್ರಕರಣದಿಂದ ಕೇವಲ ಬಹುವಚನಶ್ರುತಿಗೆ ಬಾಧ ಹೇಳುವುದು ಯುಕ್ತವಾಗುತ್ತದೆ.

ಆದ್ದರಿಂದ ಜೀವನಿಗೆ ಅಣುತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಜೀವನಿಗೆ ಅಣುತ್ವವು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 24

## ಆಕ್ಷೇಪ

**ಸೂ.ರ.:- नन्वथाऽपि न जीवस्याणुत्वं युक्तम् । अणोस्तस्य शरीरैकदेशस्थत्वेन तदन्यत्राभावेन कस्याप्यप्राप्तकरणेन क्रियानिवर्तकत्वा-भावेन सर्वशरीरगतस्पर्शज्ञानायोगस्तत्र तत्र चक्षुरादिषु तैस्तैर्युगपद्रूपादि-परिज्ञानायोगादिति प्राप्ते सूत्रमुपन्यस्यति ॥**

**ಅನು.:-** ಆದರೂ ಸಹ ಜೀವನಿಗೆ ಅಣುತ್ವವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ- ಅಣುವಾದ ಜೀವನು ಶರೀರದ ಏಕದೇಶದಲ್ಲಿ ಇರುವುದರಿಂದ, ಬೇರೆಡೆ ಇರುವುದಿಲ್ಲವಾದ್ದರಿಂದ ಸರ್ವಶರೀರಗತಸ್ಪರ್ಶಜ್ಞಾನವು ಉಪಪನ್ನವಾಗುವುದಿಲ್ಲ, ಅಲ್ಲಲ್ಲಿ ಚಕ್ಷುರಾದಿಗಳಲ್ಲಿ ಅವುಗಳಿಂದ ಒಮ್ಮೆಲೇ ರೂಪಾದಿಪರಿಜ್ಞಾನವು ಉಪಪನ್ನವಾಗುವು-ದಿಲ್ಲವಲ್ಲ? ಎಂದು ಆಕ್ಷೇಪ ಬಂದರೆ, ಅದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ अविरोधश्चन्दनवत् ॐ (२.३.२४)

ಚಂದನವತ್ = ಚಂದನರಸದಂತೆ, ಹೇಗೆ ಚಂದನಬಿಂದುವು ಏಕದೇಶಸ್ಥಳದಲ್ಲಿ ಪತಿತವಾದರೂ ತನ್ನ ಅಂಶಗಳಿಂದ ಶರೀರದಲ್ಲಿ ವ್ಯಾಪ್ತವಾಗುವುದೋ ಅದರಂತೆ, ಅವಿರೋಧಃ = ಜೀವನು ಅಣುವಾದರೂ ಸಹ ತನ್ನ ಅಂಶಗಳಿಂದ ಅವನಿಗೆ ದೇಹದಲ್ಲಿ ವ್ಯಾಪ್ತಿಯನ್ನು ಅಂಗೀಕರಿಸಿದರೆ ಯಾವ ವಿರೋಧವೂ ಇಲ್ಲ.

**ಸೂ.ರ.:- एवं चाणोरपि जीवस्याणुत्वव्याप्त्यविरोधेनाणुत्वेऽप्यंशैः सर्वशरीरव्याप्तिर्युज्यते । अतस्तत्र तत्र परिज्ञानायोगाख्यविरोधाभावात् । शरीरैकदेशनिपतितगन्धसाराख्यमलयगिरितरुकाष्ठकृतद्रव्यबिन्दोरिव जीवस्यांशैः सर्वशरीरव्याप्त्यङ्गीकारात् । अणुमात्रोऽप्ययं जीव इति (ब्रह्माण्डपुराणे.) स्मृतेः । ततश्च श्रुत्यविरोधेन युक्तः श्रुतिसमन्वय इति सिद्धम् ॥**

ಅನು.:- ಅಣುಮಾತ್ರೋಽಪ್ಯಯಂ ಜೀವಃ ಸ್ವದೇಹಂ ವ್ಯಾಪ್ಯ ತಿಷ್ಠತಿ ।
ಯಥಾ ವ್ಯಾಪ್ಯ ಶರೀರಾಣಿ ಹರಿಚಂದನವಿಪ್ರುಷಃ ॥

ಎಂಬುದಾಗಿ ಸ್ಮೃತಿ (ಬ್ರಹ್ಮಾಂಡಪುರಾಣವಚನ) ಇರುವುದರಿಂದ, ಶರೀರದ ಏಕದೇಶದಲ್ಲಿ ನಿಪತಿತವಾದ, ಗಂಧಸಾರ ಎಂಬ ಮಲಯಗಿರಿಯ ತರುವಿನ ಕಾಷ್ಠದಿಂದ ಮಾಡಿದ ದ್ರವ್ಯಬಿಂದುವಿನಂತೆ, ಜೀವನು ಅಣುವಾದರೂ ಸಹ ತನ್ನ ಅಂಶಗಳಿಂದ ಶರೀರದೆಲ್ಲೆಡೆ ವ್ಯಾಪ್ತಿಯು ಉಪಪನ್ನವಾಗುತ್ತದೆ. ಹೀಗಾಗಿ ತತ್ರ ತತ್ರ ಪರಿಜ್ಞಾನಾಯೋಗ ಎಂಬ ವಿರೋಧ ಬರುವುದಿಲ್ಲ. ಅಂದಮೇಲೆ ಜೀವನು ಅಣುವಾದರೂ ವ್ಯಾಪ್ತನೂ ಆಗಬಹುದಾಗಿದೆ. ಆದರಿಂದಾಗಿ ಸರ್ವಶರೀರಗಳ ಸ್ಪರ್ಶಜ್ಞಾನವು ಆಗಬಹುದಾಗಿದೆ.

ಆದ್ದರಿಂದ ಜೀವನಿಗೆ ಅಣುತ್ವವನ್ನು ಅಂಗೀಕರಿಸಿದರೆ ಶ್ರುತಿವಿರೋಧ ಬಾರದ ಕಾರಣ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ – 25

## ಆಕ್ಷೇಪ

**ಸೂ.ರ.:– ननु भवतां चन्दनबिन्दोर्व्याप्त्यव्याप्ती । तस्य सांशत्वेन शरीरैकदेशे सम्यगवस्थानस्यान्यत्रासम्यगवस्थानस्य च विशेषस्यानुभवसिद्धत्वात् । जीवस्य तु सांशत्वाभावेन तद्विशेषाभावात् । अन्यथाऽनित्यत्वप्रसङ्गादिति प्राप्ते सूत्रमुपन्यस्यति ॥**

**ಅನು.:–** ಚಂದನಬಿಂದುವಿಗೆ ವ್ಯಾಪ್ತಿ ಹಾಗೂ ಅವ್ಯಾಪ್ತಿ ಎರಡೂ ಉಪಪನ್ನವಾಗುತ್ತವೆ. ಏಕೆಂದರೆ – ಚಂದನಬಿಂದುವು ಸಾಂಶವಾದ್ದರಿಂದ ಶರೀರದ ಏಕದೇಶದಲ್ಲಿ ಸಮ್ಯಕ್ ಅವಸ್ಥಾನ, ಬೇರೆಡೆ ಅಸಮ್ಯಕ್ ಅವಸ್ಥಾನ ಎಂಬ ವಿಶೇಷವು ಅನುಭವಸಿದ್ಧವಾದ್ದರಿಂದ ಚಂದನಬಿಂದುವಿಗೆ ವ್ಯಾಪ್ತಿ–ಅವ್ಯಾಪ್ತಿಗಳು ಉಪಪನ್ನವಾಗುತ್ತವೆ.

ಆದರೆ ಜೀವನು ಸಾಂಶನಾಗಿಲ್ಲವಾದ್ದರಿಂದ ಏಕದೇಶದಲ್ಲಿ ಸಮ್ಯಕ್ ಅವಸ್ಥಾನ, ಮತ್ತೊಂದೆಡೆ ಅಸಮ್ಯಗ್ ಅವಸ್ಥಾನ ಎಂಬ ವಿಶೇಷವು ಜೀವನಿಗೆ ಉಪಪನ್ನವಾಗುವುದಿಲ್ಲ. ಹಾಗೆ ಒಂದುವೇಳೆ ಜೀವನಿಗೂ ಸಾಂಶತ್ವವನ್ನೇ ಅಂಗೀಕರಿಸುವುದಾದರೆ ಅನಿತ್ಯತ್ವ ಬರಬೇಕಾದ ಅತಿಪ್ರಸಂಗ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ–

**ॐ अवस्थितिवैशेष्यादिति चेन्नाभ्युपगमाद्धृदि हि ॐ (२.३.२५)**

ಚಂದನಬಿಂದುವು ಅಣುವಾದರೂ ಅದಕ್ಕೆ ಶರೀರದಲ್ಲಿ ವ್ಯಾಪ್ತಿಯು ಯುಕ್ತವಾಗಿದೆ.

ಕುತಃ = ಏಕೆ?, ಅವಸ್ಥಿತಿವೈಶೇಷ್ಯಾತ್ = ದೇಹದಲ್ಲಿ ಕ್ವಚಿತ್ ಪ್ರದೇಶದಲ್ಲಿ (ಒಂದು ಸ್ಥಳದಲ್ಲಿ) ಸಮ್ಯಗ್ ಅವಸ್ಥಾನವು ಅದಕ್ಕೆ ಸಂಭಾವಿತವಾದ್ದರಿಂದ.

ಆದರೆ ಜೀವನಿಗೆ ಹಾಗಲ್ಲ, ಜೀವನಿಗೆ ದೇಹದಲ್ಲಿ ಒಂದು ಸ್ಥಳದಲ್ಲಿ ಸಮ್ಯಕ್ ಅವಸ್ಥಾನವು ಇಲ್ಲ, ಇತಿ ಚೇತ್ = ಎಂದು ಆಕ್ಷೇಪ ಬಂದರೆ, ನ = ಅದು ಸರಿಯಲ್ಲ, ಕುತಃ = ಏಕೆ?, ಹೃದಿ ಹಿ = ಹೃದಿ ಹ್ಯೇಷ ಆತ್ಮಾ (ಪ್ರ. 3-6) ಎಂಬುದಾಗಿ ಶ್ರುತಿಯು ಜೀವನಿಗೂ ಹೃದಯದಲ್ಲಿ ಸಮ್ಯಕ್ ಅವಸ್ಥಾನವನ್ನು, ಇತರ ಅವಯವಗಳಲ್ಲಿ ಅಸಮ್ಯಕ್ ಅವಸ್ಥಾನ-ವನ್ನು ಅಭ್ಯುಪಗಮಾತ್ = ಅಂಗೀಕರಿಸಿದ್ದರಿಂದ.

**ಸೂ.ರ.:– एवं च जीवस्यापि चन्दनबिन्दुवत्सांशत्वाङ्गीकारेण चन्दनबिन्दुवद्देहे हृदयतदितरस्थानयोः सम्यगसम्यगवस्थानाभ्युपगमात् । न चानित्यत्वप्रसङ्गः । सांशत्वमात्रस्यानित्यत्वे प्रयोजकत्वाभावेन किंत्वारम्भकांशवत्त्वस्य प्रयोजकत्वसम्भवेन तस्य च जीवेऽभावात् । अन्यथा प्रकृत्यादेरपि दशदिक्सम्बन्धेन सांशत्वादनित्यत्वप्रसङ्गात् । हृदि ह्येष आत्मेति श्रुतेः । अतः श्रुत्यविरोधेन युक्तः श्रुतिसमन्वय इति सिद्धम् ॥**

**ಅನು.:–** ಚಂದನಬಿಂದುವು ಸಾಂಶವಾಗಿರುವಂತೆ ಜೀವನಿಗೂ ಸಾಂಶತ್ವವನ್ನು ಅಂಗೀಕರಿಸಿದ್ದರಿಂದ ಚಂದನಬಿಂದುವಿನಂತೆ ದೇಹದಲ್ಲಿ ಹೃದಯ-ಇತರಸ್ಥಾನಗಳಲ್ಲಿ ಸಮ್ಯಕ್-ಅಸಮ್ಯಕ್ ಅವಸ್ಥಾನಗಳನ್ನು ಜೀವನಿಗೆ ಅಂಗೀಕರಿಸಿದ್ದರಿಂದ ಜೀವನಿಗೆ ಅಣುತ್ವವು ಉಪಪನ್ನವಾಗುತ್ತದೆ.

ಜೀವನಿಗೆ ಸಾಂಶತ್ವವನ್ನು ಅಂಗೀಕರಿಸಿದರೆ ಅನಿತ್ಯತ್ವಪ್ರಸಂಗ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಅನಿತ್ಯತ್ವವನ್ನು ಕುರಿತು ಕೇವಲ ಸಾಂಶತ್ವವು ಪ್ರಯೋಜಕವಾಗಿಲ್ಲ. ಕಿಂತು ಆರಂಭಕ ಅಂಶವತ್ವವು ಪ್ರಯೋಜಕವಾಗಿದೆ. ಹಾಗೆ ಒಂದುವೇಳೆ ಕೇವಲ ಸಾಂಶತ್ವವೇ ಪ್ರಯೋಜಕ ಎನ್ನುವುದಾದರೆ, ಪ್ರಕೃತ್ಯಾದಿಗಳಿಗೂ ಸಹ ಹತ್ತುದಿಕ್ಕುಗಳ ಸಂಬಂಧ-ವಾಗುವುದರಿಂದ ಸಾಂಶತ್ವ ಇರುವ ಕಾರಣ ಪ್ರಕೃತ್ಯಾದಿಗಳಿಗೂ ಅನಿತ್ಯತ್ವ ಒಪ್ಪಬೇಕಾದ ಪ್ರಸಂಗ ಬರಬೇಕಾಗುತ್ತದೆ. ಆದ್ದರಿಂದ ಅನಿತ್ಯತ್ವವನ್ನು ಕುರಿತು ಕೇವಲ ಸಾಂಶತ್ವವು ಪ್ರಯೋಜಕವಲ್ಲ. ಕಿಂತು ಆರಂಭಕ ಅಂಶವತ್ವವೇ ಪ್ರಯೋಜಕವಾಗಿದೆ. ಪ್ರಕೃತದಲ್ಲಿ

ಅಂತಹ ಆರಂಭಿಕ ಅಂಶವತ್ವ ಎಂಬ ಪ್ರಯೋಜಕವು ಜೀವನಲ್ಲಿ ಇಲ್ಲವಾದ್ದರಿಂದ ಜೀವನಿಗೆ ಅನಿತ್ಯತ್ವಪ್ರಸಕ್ತಿ ಇಲ್ಲ.

ಆದ್ದರಿಂದ ಜೀವನಿಗೆ ಸಾಂಶತ್ವವನ್ನು ಅಂಗೀಕರಿಸಿದರೆ ಯಾವ ಬಾಧಕ ಇಲ್ಲವಾದ್ದ-ರಿಂದ, ಚಂದನಬಿಂದುವಿನಂತೆ ದೇಹದಲ್ಲಿ ವ್ಯಾಪ್ತಿಯು ಸಂಭಾವಿತವಾಗಿದೆ. ಹೀಗಾಗಿ ಜೀವನಿಗೆ ಅಣುತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 26

**ಸೂ.ರ.:– एवं स्वरूपतदंशाभ्यामात्मनः शरीरव्याप्त्यव्याप्ती सदृष्टान्तमुक्त्वा प्रकारान्तरेणापि तदुपपादकसूत्रमुपन्यस्यति ॥**

**ಅನು.:–** ಈ ರೀತಿಯಾಗಿ ಸ್ವರೂಪ-ತದಂಶಗಳಿಂದ ಜೀವನಿಗೆ ಶರೀರದಲ್ಲಿ ವ್ಯಾಪ್ತಿ-ವ್ಯಾಪ್ತ್ಯಭಾವಗಳನ್ನು ದೃಷ್ಟಾಂತಸಹಿತವಾಗಿ ಹೇಳಿ, ಪ್ರಕೃತ ಮತ್ತೊಂದು ಪ್ರಕಾರದಿಂದಲೂ ಅದನ್ನು ಉಪಪಾದಿಸುತ್ತಾರೆ–

**ॐ गुणाद्वाऽलोकवत् ॐ (२.३.२६)**

(ವಾಶಬ್ದವು ಪ್ರಕಾರಾಂತರ ಅರ್ಥದಲ್ಲಿ ಇದೆ.) ಆಲೋಕವತ್ = ದೀಪದಂತೆ, ಯಾವ ರೀತಿಯಾಗಿ ದೀಪಕ್ಕೆ ಪ್ರಕಾಶದಿಂದ ವ್ಯಾಪ್ತಿ ಇದೆಯೋ ಅದರಂತೆ, ಅಣೋರಪಿ ಜೀವಸ್ಯ = ಜೀವನು ಅಣುವಾಗಿದ್ದರೂ ಸಹ, ಗುಣಾತ್ = ಪ್ರಕಾಶರೂಪವಾದ ಗುಣದಿಂದ ವ್ಯಾಪ್ತಿಯು ಉಪಪನ್ನವಾಗುತ್ತದೆ,

ಅವಿರೋಧ ... ಎಂಬ ಸೂತ್ರೋಕ್ತವಾದ ಅಂಶತಃ ವ್ಯಾಪ್ತಿಯು ದೇವತೆಗಳಿಗೆ, ಮತ್ತು ಗುಣಾದ್ವಾ ... ಎಂಬ ಸೂತ್ರೋಕ್ತವಾದ ಪ್ರಕಾಶತಃ ವ್ಯಾಪ್ತಿಯು ಮನುಷ್ಯರಿಗೆ ಎಂಬುದಾಗಿ ವಿವೇಕವನ್ನು (ವ್ಯತ್ಯಾಸವನ್ನು) ತಿಳಿದುಕೊಳ್ಳಬೇಕು.

**ಸೂ.ರ.:– एवं च केषाञ्चिद्गुणेन केषाञ्चिदंशैर्व्याप्त्यङ्गीकारात् । असम्यक्सम्यगिति चेति (स्कान्द) स्मृतेः । यथाऽऽलोकस्य प्रकाशाख्य-गुणेन व्याप्तिः प्रदीपरूपेणाव्याप्तिरेवं ज्ञानाख्यागुणेन व्याप्तिर्जीवरूपेणा-व्याप्तिरिति सम्भवेन परिज्ञानायोगाख्यविरोधाभावात् । अतः श्रुत्यविरोधेन जीवाणुत्व सिद्धेर्युक्तो हरौ श्रुतिसमन्वय इति सिद्धम् ॥**

ಅನು.:- ಅಸಮ್ಯಕ್ಸಮ್ಯಗಿತಿ ಚ ವ್ಯವಸ್ಥಾಭೇದತಃ ಸುರಾಃ ।
ವ್ಯಾಪ್ಯವ್ಯಾಪ್ತಿಯುತಾಸ್ತ್ವನ್ಯೇ ಚಿದ್ಗುಣೇನೈವ ನಾನ್ಯಥಾ ॥
ಚಿದ್ಗುಣಸ್ಯ ಸ್ವರೂಪತ್ವಾತ್ತದ್ವ್ಯಾಪ್ತಿಶ್ಚೇತಿ ಯುಜ್ಯತೇ ।
ಶಕ್ತಿಯೋಗಾತ್ಸುರಾಣಾಂ ತು ವಿವಿಧಾ ಚ ವ್ಯವಸ್ಥಿತಿಃ ॥

ಎಂಬುದಾಗಿ ಸ್ಕಾಂದಪುರಾಣವು ಹೇಳಿದಂತೆ ಕೆಲವರಿಗೆ (ಮನುಷ್ಯರಿಗೆ) ಪ್ರಕಾಶ-ರೂಪವಾದ ಗುಣದಿಂದ ವ್ಯಾಪ್ತಿ, ಮತ್ತೆ ಕೆಲವರಿಗೆ ಅಂಶತಃ ವ್ಯಾಪ್ತಿಯನ್ನು ಅಂಗೀಕರಿಸ-ಲಾಗಿದೆ. ಯಾವ ರೀತಿಯಾಗಿ ದೀಪಕ್ಕೆ ಪ್ರಕಾಶರೂಪಗುಣದಿಂದ ವ್ಯಾಪ್ತಿ, ಪ್ರದೀಪ-ರೂಪದಿಂದ ವ್ಯಾಪ್ಯಭಾವ ಉಂಟೋ ಅದೇ ರೀತಿಯಾಗಿ ಜೀವನಿಗೆ ಜ್ಞಾನರೂಪವಾದ ಗುಣದಿಂದ ವ್ಯಾಪ್ತಿ, ಜೀವರೂಪದಿಂದ ವ್ಯಾಪ್ಯಭಾವವು ಉಪಪನ್ನವಾಗುವುದರಿಂದ ಪರಿಜ್ಞಾನಾಯೋಗರೂಪವಿರೋಧ ಬರುವುದಿಲ್ಲ. ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜೀವನಿಗೆ ಅಣುತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಉತ್ಕ್ರಾಂತ್ಯಧಿಕರಣವು ಮುಗಿಯಿತು.**

*ಅಧಿಕರಣ – 13*

## ವ್ಯತಿರೇಕಾಧಿಕರಣ

### ಸಂಗತಿ

**ಸೂ.ರ.:- अत्र जीवस्यैकरूपत्वानेकरूपत्वविषयश्रुतिविरोधः परिह्रियते ॥**

**ಅನು.:-** ಜೀವನಿಗೆ ಏಕರೂಪತ್ವ-ಅನೇಕರೂಪತ್ವ ವಿಷಯಕಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಹದಿಮೂರನೇ ಈ ವ್ಯತಿರೇಕಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** ननु जीवो नैकदाऽनेकशरीरावच्छिन्नः किन्त्वेकेनैव । स एकधेति (गौपवन.) श्रुतेः । न चान्यत्रापि स पञ्चधेति (पाराशर्यायण) श्रुतिरस्तीति वाच्यम् । तस्या युक्तिविरुद्धत्वेनाप्रामाण्यात् । अनेकशरीरावच्छिन्नत्वं हि विभुत्वेन वा सांशत्वेन वा भवेत् । न चोभयोः सम्भवः । अणुत्वे निरवयवत्वे च श्रुतिसद्भावात् । न चोभयाभावेऽपि योगिनामघटितघटकसामर्थ्योपेतत्वनोपपन्नमनकेशरीरत्वम् । समुद्रपानादिकं च तेषां दृष्टचरमिति वाच्यम् । तथात्वे जीवस्येश्वरगुणसाम्यप्रसङ्गात् । अतः सयुक्तिकैतच्छ्रुतिविरोधेन वहुरूपश्रुतेरप्रामाण्यान्न श्रुतिसमन्वयो युक्त इति प्राप्ते सूत्रितम् ॥

**ಅನು.:–** "ಸ ನಿತ್ಯೋ ನಿರವಯವಃ ... ಸ ಏಕಧಾ ನ ಸಪ್ತಧಾ ನ ದಶಧಾ ನ ಶತಧಾ" –ಎಂಬುದಾಗಿ ಗೌಪವನ ಶ್ರುತಿ ಇರುವುದರಿಂದ ಜೀವನು ಒಮ್ಮೆಲೇ ಅನೇಕ ಶರೀರಾವಚ್ಛಿನ್ನನಾಗುವುದಿಲ್ಲ. ಕಿಂತು ಒಂದು ಶರೀರದಿಂದ ಮಾತ್ರ ಅವಚ್ಛಿನ್ನನಾಗುತ್ತಾನೆ.

ಹೌದು, ಜೀವನು ಅನೇಕಶರೀರಾವಚ್ಛಿನ್ನನಾಗಿದ್ದಾನೆ ಎಂಬ ವಿಷಯದಲ್ಲಿಯೂ "ಸ ಪಂಚಧಾ ಸ ಸಪ್ತಧಾ ಸ ದಶಧಾ ಭವತಿ ..." (ಪಾರಾಶರ್ಯಾಯಣಶ್ರುತಿ) ಎಂಬುದಾಗಿ ಶ್ರುತಿಪ್ರಮಾಣವು ಇದೆಯಲ್ಲ? ಎಂದರೆ, ಅದು ಸರಿಯಲ್ಲ. ಈ ಶ್ರುತಿಯು ಯುಕ್ತಿವಿರುದ್ಧವಾಗಿರುವುದರಿಂದ ಅಪ್ರಮಾಣವಾಗಿದೆ.

ಮತ್ತು ಜೀವನು ವಿಭು ಆಗಿದ್ದಾನೆ ಎಂಬ ಕಾರಣಕ್ಕಾಗಿಯಾಗಲೀ ಅಥವಾ ಸಾಂಶನಾಗಿದ್ದಾನೆ ಎನ್ನುವುದಕ್ಕಾಗಿಯಾಗಲೀ ಜೀವನಿಗೆ ಅನೇಕಶರೀರಾವಚ್ಛಿನ್ನತ್ವವನ್ನು ಹೇಳಬೇಕು. ಆದರೆ ಜೀವನು ಅಣುವಾಗಿದ್ದಾನೆ ಎಂಬ ವಿಷಯದಲ್ಲಿ ಹಾಗೂ ನಿರವಯವನಾಗಿದ್ದಾನೆ ಎಂಬ ವಿಷಯದಲ್ಲಿ ಶ್ರುತಿಪ್ರಮಾಣ ಇರುವುದರಿಂದ ಜೀವನಿಗೆ ವಿಭುತ್ವ–ಸಾಂಶತ್ವ ಎರಡೂ ಉಪಪನ್ನವಾಗುವುದಿಲ್ಲ.

ಜೀವನಿಗೆ ವಿಭುತ್ವ–ನಿರವಯವತ್ವಗಳು ಇಲ್ಲದಿದ್ದರೂ ಸಹ ಯೋಗಿಗಳು ಅಘಟಿತಘಟಕಸಾಮರ್ಥ್ಯದಿಂದ ಕೂಡಿದವರಾದ್ದರಿಂದ ಅವರಿಗೆ ಅನೇಕಶರೀರತ್ವವು ಉಪಪನ್ನ-

ವಾಗುತ್ತದೆ. ಅವರಿಗೆ ಅಘಟಿತಘಟಕಸಾಮರ್ಥ್ಯ ಇದೆ ಎಂದು ಹೇಗೆ ಹೇಳುತ್ತೀರಿ? ಎಂದರೆ ಸಮುದ್ರಪಾನಾದಿಗಳನ್ನು ಮಾಡಿದ್ದು ಯೋಗಿಗಳ ಚರಿತ್ರೆಯಲ್ಲಿ ಕಾಣುತ್ತೇವೆ. ಹೀಗಾಗಿ ಯೋಗಿಗಳು ಅಘಟಿತಘಟಕಶಕ್ತಿ ಉಳ್ಳವರಾದ್ದರಿಂದ ಅನೇಕಶರೀರತ್ವವು ಅವರಿಗೆ ಉಪಪನ್ನವಾಗಬಹುದಲ್ಲ? ಎಂದರೆ, ಅದು ಸರಿಯಲ್ಲ. ಹಾಗೆ ಹೇಳುವುದಾದರೆ ಜೀವನಿಗೆ ಈಶ್ವರಗುಣಸಾಮ್ಯ ಬರಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಯುಕ್ತಿಸಹಿತವಾದ ಈ ಶ್ರುತಿವಿರೋಧ ಬರುವುದರಿಂದ ಬಹುರೂಪ-ಶ್ರುತಿಯು ಅಪ್ರಮಾಣವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ व्यतिरेको गन्धवत्तथा च दर्शयति ॐ (२.३.२७)**

(ಚ ಶಬ್ದವು ಅಂತ್ಯಯಾ ಎಂಬ ಸ್ಮೃತಿ (ಪಾದ್ಮವಚನ) ಸಮುಚ್ಚಯ ಮಾಡುತ್ತದೆ.) ಗಂಧವತ್ = ಗಂಧದಂತೆ, ಯಾವ ರೀತಿಯಾಗಿ ಪುಷ್ಪಗಂಧಕ್ಕೆ ತನ್ನ ಅಂಶಗಳಿಂದ, ವ್ಯತಿರೇಕಃ = ವಿಭಾಗ ಉಂಟೋ ಅದರಂತೆ, ಅಣೋರಪಿ ಜೀವಸ್ಯ = ಅಣುವಾಗಿದ್ದರೂ ಸಹ ಜೀವನಿಗೆ ತನ್ನ ಅಂಶಗಳಿಂದ ಈಶ್ವರನ ಅಚಿಂತ್ಯಶಕ್ತಿಯಿಂದಾಗಿ ವ್ಯತಿರೇಕವು ವಿಭಾಗವು ಉಪಪನ್ನವಾಗುತ್ತದೆ.

ಯಾವ ಪ್ರಮಾಣದ ಬಲದಿಂದ ಹೇಗೆ ಹೇಳುತ್ತಿದ್ದೀರಿ? ಎಂದರೆ, ಯತಃ = ಯಾವ ಕಾರಣ "ಅಥೈಕ ಏವ..." ಎಂಬ ಶ್ರುತಿಯು, ತಥಾ ದರ್ಶಯತಿ ಚ = ಜೀವನು ಅಣು-ವಾಗಿದ್ದರೂ ತನ್ನ ಅಂಶಗಳಿಂದ ವಿಭಾಗವನ್ನು ಹೇಳುತ್ತದೆಯೋ, ಅಚಿಂತ್ಯಯೇ- ಶಕ್ತ್ಯೈವ ... ಎಂಬುದಾಗಿ ಪಾದ್ಮಸ್ಮೃತಿಯೂ ಪ್ರಮಾಣವಾಗಿ ಇದೆಯೋ ಅತ ಏವ = ಆ ಕಾರಣ.

## ಸಿದ್ಧಾಂತ

**ಸೂ.ರ.:– एवं च न जीवस्यैकरूपत्वमिति नियमः । अपि तु योगाद्यापादितेश्वरानुग्रहेण केषाचिद्युगपदेकरूपत्वमपि । न चांशिनं विहायांशस्य गमनानुपपत्तिः । दृश्यते खलु गुणस्यापि गन्धस्य धर्मिणं विहायान्यत्र गतिः । सति चैवं काऽनुपपत्तिः । द्रव्यस्यांशस्यांशिनं विहायान्यत्र गमने चैकधेति श्रुत्यविरोधः । तस्याः स्वरूपैक्यविषयत्वात् ।**

अथैक एव सन्निति श्रुतेः । अतः श्रुत्यविरोधेन जीवस्य बहुरूपत्वो-पपत्तेर्युक्तः समन्वय इति सिद्धम् ॥

**ಅನು.:**– ಜೀವನಿಗೆ ಏಕರೂಪತ್ವವೇ ಇದೆ ಎಂಬ ನಿಯಮ ಇಲ್ಲ. ಕಿಂತು ಯೋಗಾ-ದ್ಯಾಪಾದಿತ ಈಶ್ವರಾನುಗ್ರಹದಿಂದ ಕೆಲವು ಜೀವರಿಗೆ ಯುಗಪತ್ ಏಕರೂಪತ್ವವೂ ಉಂಟು.

ಅಂಶಿಯಾದ ಜೀವನನ್ನು ಬಿಟ್ಟು ಅಂಶಕ್ಕೆ ಗಮನವು ಹೇಗೆ ಉಪಪನ್ನವಾಗುತ್ತದೆ? ಎಂದರೆ, ಗಂಧವು ಗುಣವಾದರೂ ಧರ್ಮಿಯನ್ನು ಬಿಟ್ಟು ಅನ್ಯತ್ರ ಗತಿಯು ಅದಕ್ಕೆ ಕಂಡಿದೆ. ಆದರಂತೆ ಜೀವನಿಗೂ ಅನ್ಯತ್ರ ಗಮನವು ಉಪಪನ್ನವಾಗುತ್ತದೆ.

ದ್ರವ್ಯವಾದ ಅಂಶಕ್ಕೆ ಅಂಶಿಯನ್ನು ಬಿಟ್ಟು ಅನ್ಯತ್ರ ಗತಿಯನ್ನು ಹೇಳುವುದಾದರೆ ಸ ಏಕಧಾ ಎಂಬ ಶ್ರುತಿಯ ವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. "ಅಥೈಕ ಏವ ಸನ್ ಗಂಧವದ್ವ್ಯತಿರಿಚ್ಯತೇ ..." ಎಂಬುದಾಗಿ ಶಾಂಡಿಲ್ಯಶ್ರುತಿಯು ಹೇಳುವಂತೆ ಸ ಏಕಧಾ ಎಂಬ ಶ್ರುತಿಯು ಸ್ವರೂಪೈಕ್ಯವಿಷಯಕವಾದ್ದರಿಂದ ಅದರ ವಿರೋಧ ಬರುವುದಿಲ್ಲ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜೀವನಿಗೆ ಬಹುರೂಪತ್ವವು ಉಪಪನ್ನವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವ್ಯತಿರೇಕಾಧಿಕರಣವು ಮುಗಿಯಿತು.

# ಪೃಥಗಧಿಕರಣ

## ಸಂಗತಿ

**ಸೂ.ರ.:–** अत्र जीवस्य परमात्माभिन्नत्वादिविषयश्रुतिविरोधः परिह्रियते ।

**ಅನು.:–** ಜೀವನಿಗೆ ಪರಮಾತ್ಮನಿಂದ ಅಭೇದಾದಿವಿಷಯಕವಾದ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹದಿನಾಲ್ಕನೇ ಈ ಪೃಥಗಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:–** नन्वभिन्न एव जीवः परमात्मना । तत्त्वमसि (छां. ६-८-७) इत्यादिश्रुतेः । यद्यपि श्रुतिरियं श्वेतकेतोरेव साक्षादैक्यं बोधयति । तथाऽपि सर्वजीवाभेदे तात्पर्यवत्त्वेन भवत्येव सर्वजीवाभेदे प्रमाणम् । स तु तावज्जीवो न रामादिवद्भगवदंशः । नैव सोम्येति पूर्ववाक्य-पर्यालोचनया तथाऽवगमात् । न च जीवत्वाविशेषे कस्यचिद्ब्रह्माभेदः कस्यचिन्नेति सम्भवति । ततश्च सर्वजीवानां ब्रह्माभेदं विवक्षित्वैव सा तस्य ब्रह्माभेदं वक्ति । न च विपर्ययेऽपि द्वा सुपर्णे(श्वे.४-६)त्यादिश्रुतिरस्ति । अद्वैतश्रुतेः सोपपत्तिषड्विधतात्पर्यलिङ्गयुक्तत्वेन बलवत्त्वात् । अतोऽद्वैतश्रुतेरद्वैत एव तात्पर्येण तद्विरुद्धभेदश्रुतेरतत्त्वा-वेदकत्वमेवेति न भगवतः श्रुतिसमन्वय इति प्राप्ते सूत्रितम् ॥

**ಅನು.:–** ತತ್ತ್ವಮಸಿ ಮೊದಲಾದ ಶ್ರುತಿಗಳು ಹೇಳುವಂತೆ ಜೀವನು ಪರಮಾತ್ಮನಿಂದ ಅಭಿನ್ನನೇ ಆಗಿದ್ದಾನೆ. (ಜೀವ-ಬ್ರಹ್ಮರ ಅಭೇದವಿಷಯದಲ್ಲಿ ತತ್ತ್ವಮಸಿ ಮೊದಲಾದ ಶ್ರುತಿಯೇ ಪ್ರಮಾಣವಾಗಿದೆ.)

ಯದ್ಯಪಿ ''ಸ ಆತ್ಮಾ ತತ್ವಮಸಿ ಶ್ವೇತಕೇತೋ'' ಎಂಬುದಾಗಿ ಸಂಬೋಧನ ಮಾಡಿದಂತೆ ಈ ಶ್ರುತಿಯು ಶ್ವೇತಕೇತುವಿಗೆ ಮಾತ್ರ ಸಾಕ್ಷಾತ್ ಐಕ್ಯವನ್ನು ತಿಳಿಸುತ್ತಿದೆ. ತಥಾಪಿ ಎಲ್ಲ ಜೀವರಲ್ಲಿಯೂ ಅಭೇದ ಹೇಳುವುದರಲ್ಲಿ ತಾತ್ಪರ್ಯ ಉಳ್ಳದ್ದಾದ್ದರಿಂದ ಸರ್ವಜೀವರ ಅಭೇದವಿಷಯದಲ್ಲಿ ಈ ಶ್ರುತಿಯು ಪ್ರಮಾಣವಾಗುತ್ತದೆ.

ಶ್ರುತಿಯು ಜೀವರಿಗೆ ಐಕ್ಯವನ್ನು ಹೇಳಿದರೂ ಸಹ ಆ ಜೀವರು ರಾಮ-ಕೃಷ್ಣಾದಿಗಳಂತೆ ಭಗವಂತನ ಅಂಶರೇ ಆಗಿದ್ದಾರೆ ಎಂದು ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ, ಕಾರಣ - 'ನೈವ ಸೌಮ್ಯ' ಎಂಬುದಾಗಿ ಪೂರ್ವವಾಕ್ಯಗಳನ್ನು ಪರ್ಯಾಲೋಚನೆ ಮಾಡಿದರೆ ಜೀವರು ರಾಮಕೃಷ್ಣಾದಿಗಳಂತೆ ಭಗವಂತನ ಅಂಶರಲ್ಲ ಎಂದು ತಿಳಿದುಬರುತ್ತದೆ.

ಶ್ರುತಿಯು ಜೀವರಿಗೆ ಐಕ್ಯವನ್ನು ಹೇಳುತ್ತಿದೆ ಎಂದಾದರೂ ಸಹ ಕೆಲವು ಜೀವರಿಗೆ ಮಾತ್ರ ಐಕ್ಯವನ್ನು ಹೇಳುತ್ತಿದೆ ಎಂದಾಗಬಹುದಲ್ಲ? ಎಂದರೆ, ಅದೂ ಸರಿಯಲ್ಲ, ಎಲ್ಲ ಜೀವರಲ್ಲಿಯೂ ಜೀವತ್ವವು ಸಾಧಾರಣವಾದಾಗ ಕೆಲವರಿಗೆ ಅಭೇದ ಹೇಳುತ್ತದೆ, ಕೆಲವರಿಗೆ ಅಭೇದ ಹೇಳುವುದಿಲ್ಲ ಎಂಬ ಶಂಕೆಯು ಸರಿಯಲ್ಲ, ಹಾಗಾಗಿ ಎಲ್ಲ ಜೀವರಲ್ಲಿ ಅಭೇದವನ್ನು ವಿವಕ್ಷಿಸಿಕೊಂಡೇ ಶ್ರುತಿಯು ಶ್ವೇತಕೇತುವಿಗೆ ಬ್ರಹ್ಮಾಭೇದವನ್ನು ಹೇಳುತ್ತಿದೆ.

ಜೀವ-ಬ್ರಹ್ಮರ ಅಭೇದವಿಷಯದಲ್ಲಿ ಶ್ರುತಿಯು ಇರುವಂತೆ, ಭೇದದ ವಿಷಯ-ದಲ್ಲಿಯೂ ''ದ್ವಾ ಸುಪರ್ಣಾ ಸಯುಜಾ ಸಖಾಯೌ'' ಇತ್ಯಾದಿ ಶ್ರುತಿಯು ಪ್ರಮಾಣವಾಗಿ ಇದೆಯಲ್ಲ? ಎಂದರೆ, ಅದೂ ಸರಿಯಲ್ಲ, ಅದ್ವೈತಶ್ರುತಿಯು ಉಪಪತ್ತಿಸಹಿತವಾದ ಷಡ್ವಿಧತಾತ್ಪರ್ಯಲಿಂಗಗಳಿಂದ ಸಹಿತವಾದ್ದರಿಂದ ಪ್ರಬಲವಾಗಿದೆ.

ಆದ್ದರಿಂದ ಅದ್ವೈತಶ್ರುತಿಗೆ ಅದ್ವೈತದಲ್ಲಿಯೇ ತಾತ್ಪರ್ಯ ಇರುವುದರಿಂದ ಅದಕ್ಕೆ ವಿರುದ್ಧವಾದ ಭೇದಶ್ರುತಿಯು ಅತತ್ತ್ವಾವೇದಕವೇ ಆಗಿದೆ. ಹೀಗಾಗಿ ಭಗವಂತನಲ್ಲಿ ಶ್ರುತಿಸಮನ್ವಯ ಮಾಡಿದ್ದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ पृथगुपदेशात् ॐ (२.३.२८)

ಜೀವಃ = ಜೀವನು, ಪರಮಾತ್ಮನಾ = ಪರಮಾತ್ಮನಿಂದ, ಪೃಥಕ್ = ಭಿನ್ನನೇ ಆಗಿದ್ದಾನೆ, ಕುತಃ = ಏಕೆ?, ಉಪದೇಶಾತ್ = ''ಭಿನ್ನೋಽಚಿಂತ್ಯಃ'' (ಕೌಶಿಕಶ್ರುತಿ) ಎಂಬುದಾಗಿ ಶ್ರುತಿ ಇರುವುದರಿಂದ.

## ಸಿದ್ಧಾಂತ

ಸೂ.ರ.:- एवं च भिन्न एव जीवो भगवता । भिन्नोऽचिन्त्य इति श्रुतेः । न चाभेदेऽपि श्रुतिरस्तीति वाच्यम् । विरुद्धधर्माधिकरणस्य-युक्तियुक्तत्वेन भेदश्रुतेः प्राबल्यात् । अतः श्रुत्यविरोधेन जीवेशयोर्भेद-सिद्धेर्ब्रह्मणि श्रुतिसमन्वयो युक्त इति सिद्धम् ॥

ಅನು.:- ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್ಪೂರ್ಣಃ
ಪರೋ ಜೀವಸಂಘೋ ಹ್ಯಪೂರ್ಣಃ।
ಯತಸ್ತ್ವಸೌ ನಿತ್ಯಮುಕ್ತೋ ಹ್ಯಯಂ ಚ
ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ್ ॥

ಎಂಬುದಾಗಿ ಕೌಶಿಕಶ್ರುತಿಯು ಇರುವುದರಿಂದ ಜೀವನು ಭಗವಂತನಿಂದ ಭಿನ್ನನೇ ಆಗಿದ್ದಾನೆ.

ಭೇದವಿಷಯದಲ್ಲಿ ಶ್ರುತಿಯು ಇರುವಂತೆ ಅಭೇದವಿಷಯದಲ್ಲಿಯೂ ಸಹ ತತ್ವಮಸಿ ಮೊದಲಾದ ಶ್ರುತಿಯು ಪ್ರಮಾಣವಾಗಿ ಇದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಭೇದಶ್ರುತಿಯು ವಿರುದ್ಧಧರ್ಮಾಧಿಕರಣತ್ವ ಎಂಬ ಯುಕ್ತಿಯಿಂದ ಸಹಿತವಾದ್ದರಿಂದ ಪ್ರಬಲವಾಗಿದೆ.

ಆದ್ದರಿಂದ ಜೀವ-ಬ್ರಹ್ಮರಲ್ಲಿ ಭೇದ ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಭೇದವೇ ಸಿದ್ಧವಾಗುವುದರಿಂದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 29

ಸೂ.ರ.:- नन्वेवं तर्हि तत्त्वमसीत्याद्यद्वैतश्रुतेर्निर्विषयत्वेनाप्रामाण्यं प्राप्तमित्याशङ्कां परिहरत्सूत्रमुपन्यस्यति ॥

ಅನು.:- ಹಾಗಾದರೆ ತತ್ವಮಸಿ ಮೊದಲಾದ ಅದ್ವೈತಶ್ರುತಿಯು ನಿರ್ವಿಷಯ-ವಾಗುವುದರಿಂದ ಅಪ್ರಾಮಾಣ್ಯವೇ ಪ್ರಾಪ್ತವಾಗುವುದಲ್ಲ? ಎಂದು ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ तद्गुणसारत्वात्तु तद्व्यपदेशः प्राज्ञवत् ॐ (२.३.२९)

ಪ್ರಾಜ್ಞವತ್ = ಬ್ರಹ್ಮನಲ್ಲಿ ಹೇಗೋ ಹಾಗೆ (ಪ್ರಾಜ್ಞನಾದ ಬ್ರಹ್ಮನ ವಿಷಯದಲ್ಲಿ ಹೇಗೆ "ಸರ್ವಂ ಖಲ್ವಿದಂ ಬ್ರಹ್ಮ" (ಛಾಂ.3-14-1) ಎಂಬುದಾಗಿ ಜಗತ್ತಿನಿಂದ ಅಭೇದೋಕ್ತಿಯು ಇರುವುದೋ ಅದರಂತೆ, ಜೀವೇ = ಜೀವನ ವಿಷಯದಲ್ಲಿಯೂ ಸಹ, ತದ್ವ್ಯಪದೇಶಃ = ತತ್ತ್ವಮಸಿ ಎಂಬುದಾಗಿ ಬ್ರಹ್ಮನಿಂದ ಐಕ್ಯೋಕ್ತಿಯೂ ಉಪಪನ್ನವಾಗುತ್ತದೆ, ಕುತಃ = ಏಕೆ?, ತದ್ಗುಣಸಾರತ್ವಾತ್ = ಜೀವನು ಬ್ರಹ್ಮನ ಗುಣಗಳಿಗೆ ಸದೃಶವಾದ ಚಿದಾನಂದಾದಿ ಗುಣಸ್ವರೂಪನಾಗಿರುವ ನಿಮಿತ್ತದಿಂದ.

ಸೂ.ರ.:– एवं चाभेदश्रुतेरपि प्रामाण्यम् । तथाऽपि जीवस्य परमात्मगुणसदृशानन्दादिगुणवत्त्वात् । अहं ब्रह्मास्मी(बृ.३-४-१०)त्यादिश्रुतिगतानां ब्रह्मादिशब्दानां गौण्या वृत्त्या जीवे प्रवृत्तत्वेन सादृश्याभेदस्य श्रुत्यर्थत्वात् । तत्त्वमसीत्यादिब्रह्मवाचकशब्दस्य जीवे गौणवृत्त्यङ्गीकार इवासिपदस्य जीवार्थे लक्षणाङ्गीकारेऽपि सादृश्याभेद-प्रतीतेश्च । अभेदाभावेऽप्यभेदव्यपदेशस्य तद्गुणसारत्वेन सर्वं खल्वित्यादौ दर्शनात् । तत्त्वम्पदबोध्ययोर्विशिष्टयोरैक्यस्य बाधितत्वात् । निर्विशेषयो-र्विशेषणविशेष्यभावायोगेनाभेदबोधनायोगात् । अभेदस्य नीलमुत्पलमित्या-दाविव तद्भावमुखेनैव बोधनीयत्वात् । यथा गङ्गायां घोष इत्यादि-लौकिकवाक्यस्य गङ्गादिपदामुख्यार्थद्वारक एव वाक्यार्थो न तु मुख्यार्थद्वारकः । नैवं वेदे । वेदो हि स्वपदानां महायोगादिवृत्त्याऽर्थं प्रतिपाद्यैव गौण्यादिवृत्त्याऽर्थान्तरं प्रतिपादयतीत्याह । पररीत्या प्राप्तिसद्भावेनाप्राप्तिनिषेधायोगाभावात् । अतः श्रुत्यविरोधेन जीवब्रह्मणोर्भेदसिद्धेर्युक्तः समन्वय इति सिद्धम् ॥

ಅನು.:– ತತ್ತ್ವಮಸಿ ಮೊದಲಾದ ಅದ್ವೈತಶ್ರುತಿಗೆ ಅಪ್ರಾಮಾಣ್ಯಪ್ರಸಕ್ತಿ ಇಲ್ಲ. ಕಿಂತು ಪ್ರಮಾಣ್ಯವೇ ಆಗಿದೆ. ಕಾರಣ –

★ ಜೀವನು ಪರಮಾತ್ಮನ ಗುಣಗಳಿಗೆ ಸದೃಶವಾದ ಆನಂದಾದಿಗುಣ-ಉಳ್ಳವನಾಗಿದ್ದಾನೆ.

★ ಅಹಂ ಬ್ರಹ್ಮಾಸ್ಮಿ ಇತ್ಯಾದಿಶ್ರುತಿಗತವಾದ ಬ್ರಹ್ಮಾದಿಶಬ್ದಗಳು ಗೌಣೀವೃತ್ತಿಯಿಂದ ಜೀವನಲ್ಲಿ ಪ್ರವೃತ್ತವಾದ್ದರಿಂದ ಸಾದೃಶ್ಯಾಭೇದವು ಶ್ರುತ್ಯರ್ಥವಾಗಿದೆ.

★ ಇನ್ನು ತತ್ವಮಸಿ ಇತ್ಯಾದಿ ಬ್ರಹ್ಮವಾಚಕಶಬ್ದಗಳಿಗೆ ಜೀವನಲ್ಲಿ ಗೌಣೀವೃತ್ತಿಯನ್ನು ಅಂಗೀಕರಿಸಿದರೆ ಸಾದೃಶ್ಯಾಭೇದವು ಪ್ರತೀತವಾಗುವಂತೆ ಅಸಿ ಎಂಬ ಪದಕ್ಕೆ ಜೀವ ಎಂಬ ಅರ್ಥದಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸಿದರೂ ಸಹ ಸಾದೃಶ್ಯಾಭೇದವು ಪ್ರತೀತ-ವಾಗುತ್ತದೆ.

ವಾಸ್ತವಿಕವಾಗಿ ಅಭೇದ ಇಲ್ಲದಿದ್ದರೂ ಸಹ ಸದ್ಗುಣಸಾರತ್ವ ನಿಮಿತ್ತದಿಂದ ಅಭೇದ ವ್ಯಪದೇಶವು 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿಗಳಲ್ಲಿ ಕಂಡಿದೆ.

ಇನ್ನು ಐಕ್ಯವನ್ನು ಹೇಳುವುದಾದರೂ ಸಹ ಹೇಗೆ ಹೇಳುತ್ತೀರಿ? ತತ್ ತ್ವಂ ಪದಗಳಿಂದ ಬೋಧ್ಯರಾದ ಸರ್ವಜ್ಞತ್ವವಿಶಿಷ್ಟ-ಅಲ್ಪ ಜ್ಞತ್ವವಿಶಿಷ್ಟ ಚಿತ್‌ಗಳಲ್ಲಿ ಐಕ್ಯವನ್ನು ಹೇಳುವುದಾದರೆ, ಐಕ್ಯವು ವಿರುದ್ಧಧರ್ಮಾಧಿಕರಣತ್ವ ಯುಕ್ತಿಯಿಂದ ಬಾಧಿತವಾಗುತ್ತದೆ.

ಅಥವಾ ವಿರುದ್ಧಭಾಗಗಳನ್ನು ಪರಿತ್ಯಾಗ ಮಾಡಿ ನಿರ್ವಿಶೇಷರಾದ ಚಿತ್‌ಗಳಲ್ಲಿ ಐಕ್ಯವನ್ನು ಹೇಳುವುದಾದರೆ, ನೀಲಂ ಉತ್ಪಲಂ ಇತ್ಯಾದಿಗಳಲ್ಲಿ ಕಂಡಂತೆ ವಿಶೇಷಣ-ವಿಶೇಷ್ಯಭಾವ ಮುಖದಿಂದಲೇ ಐಕ್ಯವನ್ನು ಹೇಳಬೇಕು. ಆದರೆ ಪ್ರಕೃತ ನಿರ್ವಿಶೇಷರಾದ ಚಿತ್‌ಗಳಲ್ಲಿ ಅಂತಹ ವಿಶೇಷಣವಿಶೇಷ್ಯಭಾವವು ಕೂಡದ ಕಾರಣ ಆ ಮೂಲಕ ಐಕ್ಯವನ್ನು ಹೇಳಲು ಬರುವುದಿಲ್ಲ.

ಗಂಗಾಯಾಂ ಘೋಷಃ ಇತ್ಯಾದಿ ಲೌಕಿಕವಾಕ್ಯಗಳಿಗೆ ಗಂಗಾದಿಪದ ಅಮುಖ್ಯಾರ್ಥ-ದ್ವಾರಕವಾಗಿಯೇ ವಾಕ್ಯಾರ್ಥ ಹೇಗೋ ಅದರಂತೆ ವೇದದಲ್ಲಿ ಅಲ್ಲ. ವೇದವು ತನ್ನ ಪದಗಳಿಗೆ ಮಹಾಯೋಗಾದಿ ವೃತ್ತಿಗಳಿಂದ ಅರ್ಥವನ್ನು ಪ್ರತಿಪಾದಿಸಿಯೇ ನಂತರ ಗೌಣ್ಯಾದಿ ವೃತ್ತಿಯಿಂದ ಅರ್ಥಾಂತರವನ್ನು ಪ್ರತಿಪಾದಿಸುತ್ತದೆ ಎಂದು ಹೇಳಲಾಗಿದೆ.

ಹೀಗೆ ಅಭೇದ ಹೇಳುವುದಾದರೆ ಪ್ರಾಪ್ತಿ ಹೇಗೆ? ಎಂದರೆ, ಪರರೀತ್ಯಾ ಪ್ರಾಪ್ತಿ ಇರುವುದರಿಂದ ಅಪ್ರಾಪ್ತನಿಷೇಧ ಬರುವುದಿಲ್ಲ.

ಆದ್ದರಿಂದ ಜೀವ-ಬ್ರಹ್ಮರಲ್ಲಿ ಭೇದವೇ ಸಿದ್ಧಿಸುವುದರಿಂದ, ಭೇದ ಹೇಳಿದರೆ ಯಾವ ಶ್ರುತಿವಿರೋಧವೂ ಬಾರದ ಕಾರಣ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಪೃಥಗಧಿಕರಣವು ಮುಗಿಯಿತು.**

*ಅಧಿಕರಣ – 15*

# ಯಾವದಧಿಕರಣ

## ಸಂಗತಿ

**ಸೂ.ರ.:– अत्र जीवनित्यत्वविषयश्रुतिविरोधः परिहियते ।**

**ಅನು.:–** ಜೀವನಿತ್ಯತ್ವವಿಷಯಕವಾದ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹದಿನೈದನೇ ಈ ಯಾವದಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्वनित्यि एव जीवः । ब्रह्मन् लयमभ्युपैतीत्यनित्यत्वश्रुतेः । न च सोऽनादिनेति श्रुतिस्तस्य नित्यत्वेऽस्तीति वाच्यम् । अनित्यत्वश्रुतेः सयुक्तिकत्वेन प्रावल्यात् । उक्ता खलु जीवस्योत्पत्तिर्ज्ञोऽत एवेति । ततश्च जीवो विनाशी भावत्वे सत्युत्पत्तिमत्त्वादिति मानसद्भावात् । न च तत्रोपाधेरेवोत्पत्तिरुक्ता न तु जीवस्येति । उपाधेरुत्पत्तिमत्त्वाद्विनाशे प्रतिविम्वविनाशस्यावर्जनीयत्वात् । अतः सयुक्तिकश्रुतिविरोधात्तस्यानादि-कर्मसम्वन्धाद्युक्तेस्तदभिधायकश्रुतेरप्रामाण्यादयुक्तः श्रुतिसमन्वय इति प्राप्ते सूत्रितम् ॥**

**ಅನು.:–** ಜೀವನು ಅನಿತ್ಯನೇ ಆಗಿದ್ದಾನೆ. ಕಾರಣ "ಬ್ರಹ್ಮನ್ ಲಯಮಭ್ಯುಪೈತಿ" ಎಂಬುದಾಗಿ ಅನಿತ್ಯತ್ವಬೋಧಕವಾದ ಶ್ರುತಿ ಇರುವುದರಿಂದ ಜೀವನು ಅನಿತ್ಯನೇ ಆಗಿದ್ದಾನೆ.

ಜೀವನ ಅನಿತ್ಯತ್ವವಿಷಯದಲ್ಲಿ ಶ್ರುತಿ ಇರುವಂತೆ ಜೀವನ ನಿತ್ಯತ್ವದ ವಿಷಯದಲ್ಲಿಯೂ ಸಹ "ಸೋಽನಾದಿನಾ ಪುಣ್ಯೇನ ಪಾಪೇನ ಚಾನುಬದ್ಧಃ" ಎಂಬ ಶ್ರುತಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ. ಅನಿತ್ಯತ್ವ ಶ್ರುತಿಯು ಯುಕ್ತಿಸಹಿತವಾದ್ದರಿಂದ ಪ್ರಬಲವಾಗಿದೆ. ಅದೇನು ಯುಕ್ತಿ? ಎಂದರೆ, ಹಿಂದೆ "ಜ್ಞೋಽತ ಏವ" ಎಂಬ ಸೂತ್ರದಲ್ಲಿ ಜೀವನಿಗೆ ಉತ್ಪತ್ತಿಯನ್ನು ಹೇಳಲಾಗಿದೆ. ಹಾಗಾಗಿ "ಜೀವೋ, ವಿನಾಶೀ, ಭಾವತ್ವೇ ಸತಿ ಉತ್ಪತ್ತಿ-

ಮತ್ವಾತ್'' (ಜೀವನು, ವಿನಾಶ ಉಳ್ಳವನಾಗಿದ್ದಾನೆ, ಭಾವವಸ್ತುವಾಗಿದ್ದು ಉತ್ಪತ್ತಿ ಉಳ್ಳವನಾದ್ದರಿಂದ) ಎಂಬ ಯುಕ್ತಿಯು ಜೀವನ ಅನಿತ್ಯತ್ವವಿಷಯದಲ್ಲಿ ಇದೆ.

ಜ್ಞೋಽತ ಏವ ಎಂಬ ಸೂತ್ರದಲ್ಲಿ ಉಪಾಧಿಗೆ ಉತ್ಪತ್ತಿಯನ್ನು ಹೇಳಿದ್ದಾರೆಯೇ ಹೊರತು ಜೀವನಿಗೆ ಉತ್ಪತ್ತಿ ಹೇಳಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಉಪಾಧಿಗೆ ಉತ್ಪತ್ತಿವಿನಾಶಗಳು ಇರುವುದರಿಂದ ಪ್ರತಿಬಿಂಬನಾದ ಜೀವನಿಗೆ ವಿನಾಶವು ಅವರ್ಜನೀಯವಾಗಿದೆ. ಹೀಗಾಗಿ ಜೀವನಿಗೆ ಅನಿತ್ಯತ್ವ ಒಪ್ಪಲೇಬೇಕು.

ಆದ್ದರಿಂದ ಸಯುಕ್ತಿಕಶ್ರುತಿವಿರೋಧ ಬರುವುದರಿಂದ, ಜೀವನಿಗೆ ಅನಾದಿ-ಕರ್ಮಸಂಬಂಧಾದಿಗಳನ್ನು ಹೇಳಿದ್ದರಿಂದ, ಜೀವನಿಗೆ ನಿತ್ಯತ್ವವನ್ನು ಬೋಧಿಸುವ ಶ್ರುತಿಗೆ ಅಪ್ರಾಮಾಣ್ಯ ಬರುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ यावदात्मभावित्वाच्च न दोषस्तद्दर्शनात् ॐ (२.३.३०)**

ಯಾವದಾತ್ಮಭಾವಿತ್ವಾಚ್ಚ= (ಪರಮಾತ್ಮನು ಇರುವವರೆಗೆ ಜೀವನು ಇರುವುದರಿಂದ) ಜೀವನು ನಿತ್ಯನಾದ್ದರಿಂದ, ನ ದೋಷಃ=''ಸೋಽನಾದಿನಾ'' ಎಂಬ ಅನಾದಿಪುಣ್ಯ-ಪಾಪಸಂಬಂಧ ಬೋಧಕವಾದ ಶ್ರುತಿಗೆ ಅಪ್ರಾಮಾಣ್ಯರೂಪ ದೋಷವು ಬರುವುದಿಲ್ಲ. ಕುತಃ ಏತತ್ = ಜೀವನಿಗೆ ನಿತ್ಯತ್ವವೇ ಏಕೆ? ಎಂದರೆ, ತದ್ದರ್ಶನಾತ್ = ಜೀವನ ನಿತ್ಯತ್ವವು ''ನಿತ್ಯೋ ಜೀವಃ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟದ್ದರಿಂದ, ಮತ್ತು ''ಆತ್ಮಾ ನಿತ್ಯಃ'' ಎಂಬುದಾಗಿ ಭಾರತರೂಪವಾದ ಸ್ಮೃತಿಯಲ್ಲಿಯೂ ಹೇಳಲ್ಪಟ್ಟದ್ದರಿಂದ.

## ಸಿದ್ಧಾಂತ

**ಸೂ.ರ.:– एवं च जीवो नित्य एव । नित्यः पर इति श्रुतावात्मवज्जीवस्यापि नित्यत्वाभिधानात् । तथाऽऽत्मा नित्य इति स्मृतौ जीवस्य नित्यत्वमुक्त्वा तच्छरीरादेरनित्यत्वाभिधानात् ।**

न चोपाधिनाशे प्रतिबिम्बस्य जीवस्यापि नाशो दुष्परिहारः । तस्याप्रतिबिम्बत्वात् । न च रूपं रूपमिति (बृ.४-५-१९) श्रुतिर्जीवस्य प्रतिबिम्बत्वमापादयतीति वाच्यम् । तस्यास्तदधीनत्वे सति तत्सदृशत्वरूपगौणप्रतिबिम्बत्वपरत्वेन मुख्यप्रतिबिम्बत्वा-

नावेदकत्वात् । न चैकस्मिन्नुपाधावेकस्यैव प्रतिबिम्बो नान्यस्येति सम्भवति । दर्पणादावपि तथा प्रसङ्गात् । अपि च प्रतिबिम्बस्योपाध्येकदेशवृत्तित्वनियमेन जीवस्य चिच्छरीरकैदेशवृत्तित्वं प्राप्नोति । किं च बाह्यशरीरे प्रतिबिम्बभावे तद्बाह्यशरीरनाशे जीवनाशो दुष्परिहारः । तदभावे तु जीवोपाधिर्द्विधा प्रोक्ता इत्यादौ तस्योपाधित्ववचनमयुक्तमेवापतति । अथ तस्योपाधित्ववचनं गौणं तर्हि चिच्छरीरस्यापि तद्वचनं गौणमस्तु । अर्धजरतीयानुपपत्तेः ।

**ಸೂ.ರ.:– अस्तु वा जीवस्य प्रतिबिम्बत्वम् । तथाऽपि बिम्बोपाधितत्सन्निधीनां नित्यत्वेन न जीवस्य नाशो भवति । कारणाभावात् । उपाध्यनित्यतावचनानि बाह्योपाधिविषयाणि । अतः श्रुत्यविरोधेन जीवस्य नित्यत्वसिद्धेर्युक्तः समन्वय इति सिद्धम् ॥**

**ಅನು.:–** ಜೀವನು ನಿತ್ಯನೇ ಆಗಿದ್ದಾನೆ. ಕಾರಣ –

> "ನಿತ್ಯಃ ಪರೋ ನಿತ್ಯೋ ಜೀವೋऽನಿತ್ಯಾಸ್ತಸ್ಯ ಧಾತವಃ ।
> ಅತ ಉತ್ಪದ್ಯತೇ ಚ ಮ್ರಿಯತೇ ಚ ವಿಮುಚ್ಯತೇ ಚ ॥"

ಎಂಬ ಆಗ್ನಿವೇಶ್ಯಶ್ರುತಿಯಲ್ಲಿ ಪರಮಾತ್ಮನು ನಿತ್ಯನಾಗಿರುವಂತೆ ಜೀವನೂ ನಿತ್ಯನಾಗಿದ್ದಾನೆ ಎಂದು ಹೇಳಿದ್ದರಿಂದ. ಮತ್ತು "ಆತ್ಮಾ ನಿತ್ಯಃ ಸುಖದುಃಖೇ ತ್ವನಿತ್ಯೇ, ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ" ಎಂಬುದಾಗಿ ಭಾರತದಲ್ಲಿಯೂ (ಸ್ಮೃತಿಯಲ್ಲಿಯೂ) ಸಹ ಜೀವನಿಗೆ ನಿತ್ಯತ್ವವನ್ನು ಹೇಳಿ ಅವನ ಶರೀರಾದಿಗಳಿಗೆ ಅನಿತ್ಯತ್ವವನ್ನು ಹೇಳಿದ್ದರಿಂದ.

ಜೀವನು ಪ್ರತಿಬಿಂಬನಾಗಿದ್ದಾನೆ. ಉಪಾಧಿಯು ಅನಿತ್ಯವಾದ್ದರಿಂದ ಉಪಾಧಿನಾಶಪ್ರಯುಕ್ತವಾಗಿ ಜೀವನಿಗೂ ನಾಶಪ್ರಸಕ್ತಿ ಬರುವುದಲ್ಲ? ಎಂದರೆ, ಈ ರೀತಿ ಶಂಕಿಸುವುದು ಸರಿಯಲ್ಲ.

ಏಕೆಂದರೆ – ಪ್ರತಿಬಿಂಬನಾದ ಜೀವನಿಗೆ ನಾಶವಾಗಬೇಕಾದರೆ ಬಿಂಬನಾಶ – ಉಪಾಧಿಸನ್ನಿಧಿನಾಶ – ಬಿಂಬಸನ್ನಿಧಿನಾಶ ನಿಮಿತ್ತವಾಗಿ ನಾಶವಾಗಬೇಕು.

ಆದರೆ ಬಿಂಬನಾದ ಪರಮಾತ್ಮನು ಅನಾದ್ಯನಂತನಾದ್ದರಿಂದ (ನಿತ್ಯನಾದ್ದರಿಂದ) ಬಿಂಬನಾಶನಿಮಿತ್ತ ಪ್ರತಿಬಿಂಬನಾಶವಾಗಬೇಕಾದ ಪ್ರಸಕ್ತಿ ಇಲ್ಲ.

ಇನ್ನು ಉಪಾಧಿಯೂ ಸಹ ಯಾವತ್ಸ್ವರಮಾತ್ಮಭಾವಿಯಾದ್ದರಿಂದ (ಚಿತ್ಸ್ವರೂಪ-

ರೂಪವಾದ ಉಪಾಧಿಯು ನಿತ್ಯವಾದ್ದರಿಂದ) ಉಪಾಧಿನಾಶನಿಮಿತ್ತ ಪ್ರತಿಬಿಂಬನಾಶದ ಪ್ರಸಕ್ತಿಯೂ ಇಲ್ಲ.

ಕೊನೆಯದಾಗಿ ಸರ್ವಗತನಾದ ಬಿಂಬ ಹಾಗೂ ಉಪಾಧಿಸನ್ನಿಧಾನ ಎರಡೂ ನಿತ್ಯವಾದ್ದರಿಂದ ಬಿಂಬ-ಉಪಾಧಿ ಸನ್ನಿಧಾನನಾಶನಿಮಿತ್ತ ಪ್ರತಿಬಿಂಬನಾಶಪ್ರಸಕ್ತಿಯೂ ಇಲ್ಲ.

ಹಾಗಾದರೆ ಉಪಾಧಿಯು ಅನಿತ್ಯವಾಗಿದೆ ಎಂದು ಹೇಳುವ ವಚನ ಇದೆಯಲ್ಲ? ಎಂದರೆ ಅಂತಹ ವಚನವು ಬಾಹ್ಯೋಪಾಧಿಗೆ ಅನಿತ್ಯತ್ವವನ್ನು ಹೇಳುತ್ತಿದೆಯೇ ಹೊರತು ಚಿತ್ಸ್ವರೂಪರೂಪ ಉಪಾಧಿಗೆ ಅನಿತ್ಯತ್ವವನ್ನು ಹೇಳುತ್ತಿಲ್ಲ.

ಆದ್ದರಿಂದ ಜೀವನಿಗೆ ನಿತ್ಯತ್ವವನ್ನು ಹೇಳಿದರೆ ಯಾವ ಶ್ರುತಿವಿರೋಧವೂ ಬಾರದ ಕಾರಣ, ಜೀವನಿಗೆ ನಿತ್ಯತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ವಿಶೇಷ ವಿಚಾರ

ಇಲ್ಲಿ - ನ ಚೋಪಾಧಿನಾಶೇ ಪ್ರತಿಬಿಂಬಸ್ಯ ಜೀವಸ್ಯಾಪಿ ನಾಶೋ ದುಷ್ಪರಿಹರಃ। ತಸ್ಯಾಪ್ರತಿಬಿಂಬತ್ವಾತ್ ಎಂಬ ವಾಕ್ಯದಿಂದ ಆರಂಭಿಸಿ ಅರ್ಧಜರತೀಯಾನುಪಪತ್ತೇಃ ಎಂಬ ವಾಕ್ಯದವರೆಗೆ ಬರೆದಿರುವ ವಿಷಯಗಳು ತತ್ವಪ್ರಕಾಶಿಕಾದಲ್ಲಿ ಇರುವುದಿಲ್ಲ. ವೈಯಕ್ತಿಕ ವಿಚಾರಗಳಾಗಿವೆ. ಮತ್ತು ಆ ವಿಚಾರಗಳು ಸಿದ್ಧಾಂತಕ್ಕೆ ವಿರುದ್ಧವಾಗಿವೆ ಅನಿಸುತ್ತದೆ. ಆ ಕಾರಣ ಅವುಗಳ ಅನುವಾದ ಮಾಡಲಾಗಿಲ್ಲ.

ಮತ್ತೊಮ್ಮೆ ಚರ್ಚಿಸಿ ನಿರ್ಣಯಿಸಬೇಕು.

**ಯಾವದಧಿಕರಣವು ಮುಗಿಯಿತು.**

ಅಧಿಕರಣ – 16

# ಪುಂಸ್ತ್ವಾಧಿಕರಣ

## ಸಂಗತಿ

ಸೂ.ರ.:– अत्र जीवस्यानन्दादिरूपत्वतदभावश्रुत्योर्विरोधः परिह्रियते ॥

ಅನು.:– ಜೀವನಿಗೆ ಆನಂದಾದಿರೂಪತ್ವ-ತದಭಾವಪ್ರತಿಪಾದಕವಾದ ಶ್ರುತಿಗಳಲ್ಲಿ ವಿರೋಧವನ್ನು ಪರಿಹರಿಸುತ್ತಾರೆ ಹದಿನಾರನೇ ಈ ಪುಂಸ್ತ್ವಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न जीवो ज्ञानानन्दादिरूपः । सुखदुःखाद्विमुक्त इति (पैङ्गि.) श्रुतेः । न चानन्दादिरूपत्वेऽपि स बलमानन्द (गौपवन.) इति श्रुतिरस्तीति नानन्दादिरूपात्वाभावनिर्णयः सम्भवतीति वाच्यम् । जीवो नानन्दादिरूपः तथोपलब्धियोग्यत्वे सति तथाऽनुपलभ्यमानत्वादिति मानसद्भावेनानानन्दश्रुतेः सयुक्तिकत्वात् । न च प्रतिबन्धकवशेनानुपलब्धिस्तन्निवृत्त्यर्थं प्रयत्नसम्भवः । जीवस्याहमिति नित्याभिव्यक्तत्वेन तत्स्वरूपभूतानां व्यवधानस्यैवानुपपत्तेः । किंचावरणं नामाज्ञानम् । तस्य वशादननुभव इति चेत् । जीवस्यानन्दादिरूपत्वे आनन्दाद्यज्ञानमनुपपन्नमिति चोदितेऽज्ञानवशादज्ञानमुपपन्नमिति परिहारायोगात् । आवरणं शरीरादिति चेत् । वैपरीत्यमपि वक्तुं शक्यत्वात् । तदेवं सयुक्तिकश्रुतिविरोधादप्रमाणमेवान्या श्रुतिरतो नेश्वरे श्रुतिसमन्वयो युक्त इति प्राप्ते सूत्रमाह ॥

ಅನು.:– "ಸ ದುಃಖಾದ್ವಿಮುಕ್ತ ಆನಂದೀ ಭವತಿ। ಸೋಽಜ್ಞಾನಾದ್ವಿಮುಕ್ತೋ ಜ್ಞಾನೀ

ಭವತಿ ।'' ಎಂಬುದಾಗಿ ಪೈಂಗಿಶ್ರುತಿ ಇರುವುದರಿಂದಾಗಿ ಜೀವನು ಜ್ಞಾನಾನಂದಾದಿ-ರೂಪನಲ್ಲ.

ಜೀವನು ಆನಂದಾದಿರೂಪನಾಗಿದ್ದಾನೆ ಎಂಬ ವಿಷಯದಲ್ಲಿಯೂ ಸಹ ''ಬಲಮಾನಂದ ಓಜಶ್ಚ'' (ಗೌಪವನಶ್ರುತಿ) ಎಂಬುದಾಗಿ ಶ್ರುತಿಪ್ರಮಾಣ ಇರುವುದರಿಂದ ಜೀವನು ಆನಂದಾದಿರೂಪನಲ್ಲ ಎಂದು ನಿರ್ಣಯಿಸಲು ಬರುವುದಿಲ್ಲವಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ – ಜೀವನು ಆನಂದಾದಿರೂಪನಲ್ಲ (ಎನ್ನುವುದಕ್ಕೆ) ಎಂದು ಹೇಳುವ ಶ್ರುತಿಗೆ

ಜೀವೋ, ನ ಆನಂದಾದಿರೂಪಃ, ತಥೋಪಲಬ್ಧಿಯೋಗ್ಯತ್ವೇ ಸತಿ ತಥಾಽನುಪ-ಲಭ್ಯಮಾನತ್ವಾತ್ (ಜೀವನು ಆನಂದಾದಿರೂಪನಲ್ಲ, ಆನಂದಾದಿರೂಪನಾಗಿ ಉಪಲಬ್ಧಿಯೋಗ್ಯನಾಗಿದ್ದು ಹಾಗೆ ಉಪಲಬ್ಧನಾಗುತ್ತಿಲ್ಲವಾದ್ದರಿಂದ)

ಎಂಬ ಯುಕ್ತಿಯ ಸಹಾಯವೂ ಇರುವುದರಿಂದ ಆನಂದಾದಿರೂಪತ್ವಾ-ಭಾವಶ್ರುತಿಯು ಪ್ರಬಲವಾಗಿದೆ.

ಜೀವನು ಆನಂದಾದಿರೂಪನಾದರೂ ಸಹ ಪ್ರತಿಬಂಧಕವಶದಿಂದಾಗಿ ಆನಂದಾದಿ-ಗಳು ಉಪಲಬ್ಧವಾಗುವುದಿಲ್ಲ. ಅಂತಹ ಪ್ರತಿಬಂಧಕದ ನಿವೃತ್ತಿಗಾಗಿ ಪ್ರಯತ್ನವು ಉಪಪನ್ನ-ವಾಗುವುದಲ್ಲ? ಎಂದರೆ, ಅದೂ ಸರಿಯಿಲ್ಲ. ಜೀವನು ಅಹಂ ಅಹಂ ಎಂಬುದಾಗಿ ನಿತ್ಯದಲ್ಲಿಯೂ ಅಭಿವ್ಯಕ್ತನಾಗುವುದರಿಂದ, ಅಂತಹ ನಿತ್ಯಸಿದ್ಧನಾದ ಜೀವನ ಸ್ವರೂಪ-ಭೂತವಾದ ಆನಂದಾದಿಗಳಿಗೆ ವ್ಯವಧಾನವೇ ಉಪಪನ್ನವಾಗುವುದಿಲ್ಲ.

ಮತ್ತು ಆವರಣ ಎಂದರೆ ಅಜ್ಞಾನ. ಆ ಅಜ್ಞಾನವಶದಿಂದಾಗಿ ಆನಂದಾದಿಗಳ ಅನುಭವ ಆಗುವುದಿಲ್ಲ ಎಂದರೆ, ಅದೂ ಸರಿಯಲ್ಲ. ಕಾರಣ – ಜೀವನು ಆನಂದಾದಿ-ರೂಪನಾಗುವುದಾದರೆ ಆನಂದಾದಿಗಳ ಅಜ್ಞಾನವು ಅನುಪಪನ್ನ ಎಂದು ಪ್ರಶ್ನೆ ಬಂದಾಗ, ಅಜ್ಞಾನವಶದಿಂದಾಗಿ ಅಜ್ಞಾನ ಉಪಪನ್ನ ಎಂಬ (ಉತ್ತರ) ಪರಿಹಾರವು ಅಯುಕ್ತ-ವಾಗುತ್ತದೆ.

ಆದ್ದರಿಂದ ಯುಕ್ತಿಸಹಿತವಾದ ಶ್ರುತಿವಿರೋಧ ಬರುವುದರಿಂದ ಆನಂದಾದಿ-ರೂಪತ್ವಬೋಧಕ ಶ್ರುತಿಯು ಅಪ್ರಮಾಣವೇ ಆಗಿದೆ. ಹೀಗಾಗಿ ಈಶ್ವರನಲ್ಲಿ ಶ್ರುತಿ-ಸಮನ್ವಯ ಮಾಡುವುದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ पुंस्त्वादिवत्वस्य सतोऽभिव्यक्तियोगात् ॐ (२.३.३१)

ಪುಂಸ್ತ್ವಾದಿವತ್=ಪುಂಸ್ತ್ವಾದಿಗಳಂತೆ (ಅಂದರೆ ಪುರುಷ-ಸ್ತ್ರೀಯರು ಅಪತ್ಯೋತ್ಪತ್ತಿ ಶಕ್ತಿಸ್ವರೂಪರಾಗಿದ್ದರೂ ಸಹ ಕಾಲವಿಶೇಷದಲ್ಲಿ ಆ ಅಪತ್ಯೋತ್ಪತ್ತಿಶಕ್ತಿಯ ಅಭಿವ್ಯಕ್ತಿ-ಯಾಗುವುದು ಹೇಗೋ ಅದರಂತೆ), ಸತಃ (ತು) ಏವ = ಜೀವಸ್ವರೂಪ- ವಾದ್ದರಿಂದ ಮುಕ್ತಿಗಿಂತಲೂ ಪೂರ್ವದಲ್ಲಿಯೂ ಇರುವಂತಹ, ಅಸ್ಯ = ಈ ಜ್ಞಾನಾ- ನಂದಾದಿಗಳ, ಅಭಿವ್ಯಕ್ತಿಯೋಗಾತ್ = ಅಭಿವ್ಯಕ್ತಿ ಆಗುವ ನಿಮಿತ್ತದಿಂದ "ಆನಂದೀ ಭವತಿ" ಎಂಬ ಪೈಂಗಿಶ್ರುತಿಯು ಉಪಪನ್ನವಾಗುತ್ತದೆ.

ಹಾಗಾಗಿ ಜೀವನು ಆನಂದಾದಿರೂಪನಾಗಿದ್ದಾನೆ ಎನ್ನುವ ಪಕ್ಷದಲ್ಲಿ ಶ್ರುತಿಯ ವಿರೋಧ ಬರುವುದಿಲ್ಲವಾದ್ದರಿಂದ ಜೀವನು ಆನಂದಾದಿರೂಪನೇ ಆಗಿದ್ದಾನೆ.

### ಸಿದ್ಧಾಂತ

**ಸೂ.ರ.:– एवं च भवत्येव जीव आनन्दादिरूपः । तथा श्रुतेः । न चानन्दी भवतीति श्रुतिविरोधः । यथा पुरुषयोषिदादीनामपत्योत्पत्ति-शक्तिस्वरूपत्वेऽपि कालतस्तदभिव्यक्तेर्नायं पूर्वं पुमानिदानीं पुमानित्यादि युज्यते । एवं जीवस्वरूपत्वेन मुक्तेः पूर्वमपि सतो ज्ञानानन्दादेरीश्वर-प्रसादेनाभिव्यक्तिनिमित्तेनानन्दी भवतीत्यादिव्यपदेशोपपत्तेः । नापि प्रयत्नानुपपत्तिः । तदभिव्यक्त्यर्थमेव मुमुक्षूणां तदुपपत्तेः । न चावरणानु-पपत्तिः । ज्ञानाभावातिरिक्ताविद्याया एवावरणत्वाभ्युपगमात् । तदेवं श्रुत्यविरोधेन जीवस्यानन्दादिरूपत्वसिद्धेर्युक्तः समन्वय इति सिद्धम् ॥**

**ಅನು.:–** ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ ।
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥

ಎಂಬುದಾಗಿ ಗೌಪವನಶ್ರುತಿ ಇರುವುದರಿಂದ ಜೀವನು ಆನಂದಾದಿರೂಪನೇ ಆಗಿದ್ದಾನೆ.

ಹಾಗಾದರೆ ಆನಂದೀ ಭವತಿ ಎಂಬ ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಶ್ರುತಿವಿರೋಧ ಬರುವುದಿಲ್ಲ. ಕಾರಣ – ಹೇಗೆ ಪುರುಷ-ಸ್ತ್ರೀಯರು ಅಪತ್ಯೋತ್ಪತ್ತಿಶಕ್ತಿ-

ಸ್ವರೂಪರಾಗಿದ್ದರೂ ಸಹ ಕಾಲವಿಶೇಷದಲ್ಲಿ ಅದು ಅಭಿವ್ಯಕ್ತಿಯಾಗುವುದರಿಂದ "ತತ್ಪೂರ್ವದಲ್ಲಿ ಇವನು ಪುರುಷನಲ್ಲ, ಅನಂತರ ಇವನು ಪುರುಷ' ಇತ್ಯಾದಿ ವ್ಯವಹಾರವು ಉಪಪನ್ನವಾಗುವುದೋ ಅದರಂತೆ ಆನಂದಾದಿಗಳು ಜೀವನ ಸ್ವರೂಪವಾದ್ದರಿಂದ ಮುಕ್ತಿಗಿಂತಲೂ ಪೂರ್ವದಲ್ಲಿ ಅದು ಇದ್ದರೂ ಸಹ, ಮೋಕ್ಷವಾದಾಗ ಈಶ್ವರಪ್ರಸಾದದಿಂದ ಅಭಿವ್ಯಕ್ತಿಯಾಗುವುದರಿಂದ ಆನಂದೀ ಭವತಿ ಇತ್ಯಾದಿ ವ್ಯಪದೇಶವು ಉಪಪನ್ನವಾಗುತ್ತವೆ.

ಹಾಗಾದರೆ ಪ್ರಯತ್ನವು ಅನುಪಪನ್ನವಾಗುವುದಲ್ಲ? ಎಂದರೆ, ಅದೂ ಸರಿಯಲ್ಲ, ಮೊದಲಿನಿಂದಲೂ ಇದ್ದ ಆನಂದಾದಿಗಳ ಅಭಿವ್ಯಕ್ತಿಗಾಗಿಯೇ ಮುಮುಕ್ಷುಗಳಿಗೆ ಪ್ರಯತ್ನವು ಉಪಪನ್ನವಾಗುತ್ತದೆ.

ಆವರಣವು ಅನುಪಪನ್ನವಾಗುವುದಲ್ಲ? ಎಂದರೆ, ಅದೂ ಸರಿಯಲ್ಲ, ಜ್ಞಾನಾ-ಭಾವಾತಿರಿಕ್ತವಾದ ಅವಿದ್ಯೆಗೇನೇ ಆವರಣತ್ವವನ್ನು ಅಂಗೀಕರಿಸಿದ್ದರಿಂದ ಆವರಣವೂ ಉಪಪನ್ನವಾಗುತ್ತದೆ.

ಆದ್ದರಿಂದ ಜೀವನಿಗೆ ಆನಂದಾದಿರೂಪತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಜೀವನು ಆನಂದಾದಿರೂಪನಾಗಿದ್ದಾನೆ ಎಂದೇ ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 32

**ಆಕ್ಷೇಪ**

**ಸೂ.ರ.:– ननु जीवस्वरूपभूतानामानन्दादीनां प्रागनभिव्यक्तानां मोक्षेऽभिव्यक्तिरित्ययुक्तम् । जीवस्वरूपस्य नित्याभिव्यक्तत्वादिति प्राप्ते सूत्रमाह ॥**

**ಅನು.:–** ಜೀವಸ್ವರೂಪಭೂತವಾದ ಆನಂದಾದಿಗಳು ಮೋಕ್ಷಕ್ಕಿಂತಲೂ ಪೂರ್ವದಲ್ಲಿ ಅಭಿವ್ಯಕ್ತವಾಗಿರುವುದಿಲ್ಲ, ಮೋಕ್ಷದಲ್ಲಿ ಅಭಿವ್ಯಕ್ತವಾಗುತ್ತವೆ ಎಂಬುದಾಗಿ ಹೇಳುವುದು ಸರಿಯಾಗುವುದಿಲ್ಲ. ಜೀವಸ್ವರೂಪಭೂತವಾಗಿವೆ ಎಂದಮೇಲೆ ಅವು ನಿತ್ಯದಲ್ಲಿಯೂ ಅಭಿವ್ಯಕ್ತವಾಗಲೇಬೇಕು ಎಂದು ಆಕ್ಷೇಪ ಬಂದರೆ, ಅದನ್ನು ಪರಿಹರಿಸಿ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ नित्योपलब्ध्यनुपलब्धिप्रसङ्गोऽन्यतरनियमो वाऽन्यथा ॐ (२.३.३२)**

(ವಾಶಬ್ದವು ವ್ಯವಸ್ಥಿತವಿಕಲ್ಪಾರ್ಥದಲ್ಲಿದೆ.) ಹಾಗಾದರೆ - ಅನ್ಯಥಾ = ಜೀವನಿಗೆ ಆನಂದಾದಿಸ್ವರೂಪತ್ವವನ್ನು ಅಂಗೀಕರಿಸಿ ಆವರಣವನ್ನು ಅಂಗೀಕರಿಸದೇ ಹೋದರೆ, ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗಃ = (ಯಥಾಯೋಗ್ಯಮನ್ವಯಃ) ಮುಕ್ತಿಯೋಗ್ಯ-ರಾದವರಿಗೆ ನಿತ್ಯದಲ್ಲಿಯೂ ಆನಂದಾದಿಗಳ ಅನುಭವ ಆಗಬೇಕಾಗುತ್ತದೆ. ಮತ್ತು ತಮೋಯೋಗ್ಯರಿಗೆ ಆನಂದಾನುಭವವು ಎಂದಿಗೂ ಆಗದೇ ಇರಬೇಕಾಗುತ್ತದೆ. ಕಿಂತು ಸ್ವರೂಪಭೂತವಾದ ದುಃಖಾನುಭವವೇ ನಿತ್ಯದಲ್ಲಿಯೂ ಆಗಬೇಕಾಗುತ್ತದೆ. ಅದೇ ರೀತಿಯಾಗಿ ಮಧ್ಯಮ ಮನುಷ್ಯರಿಗೆ, ಅನ್ಯತರ ನಿಯಮಃ = ಸುಖಾನುಭವ - ದುಃಖಾನುಭವಗಳಲ್ಲಿ ನಿಯಮವು (ಸಾಮ್ಯವೇ) ಬರಬೇಕಾಗುತ್ತದೆ. ಆದ್ದರಿಂದ ಜೀವರಿಗೆ ಆವರಣವನ್ನು ಅಂಗೀಕರಿಸಲೇಬೇಕು ಎಂದು ಭಾವ.

## ಸಮಾಧಾನ

**ಸೂ.ರ.:– एवं च जीवस्वरूपस्यानन्दादिरूपत्वमङ्गीकृत्यावरण-निवृत्त्यनङ्गीकारे आवरणाभावो मूलमिति चेत् । देवदानवमानवानां नित्यं स्वस्वरूपोपलब्धिप्रसङ्गात् । आवरणाभावेऽनुभवाभावायोगात् । आवरणनिवृत्त्यनङ्गीकारे तु देवदानवमानवानां कदाऽपि स्वस्वरूपा-नुपलब्धिप्रसङ्गात् । प्रतिबन्धकस्य तदातनत्वात् । नित्यानन्द इति श्रुति-विरुद्धत्वात् । अतः श्रुत्यविरोधेन जीवस्यानन्दादिरूपत्वसिद्धेर्युक्तः समन्वय इति सिद्धम् ॥**

**ಅನು.:–** ಜೀವರಿಗೆ ಆನಂದಾದಿರೂಪತ್ವವನ್ನೇ ಅಂಗೀಕರಿಸದಿದ್ದರೆ, ಜೀವರಿಗೆ ಆನಂದಾದಿರೂಪತ್ವವನ್ನು ತಿಳಿಸುವ - "ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ ನೈವಮಸುರಾ ಏವಮಾನೇವಂ ಚ ಮನುಷ್ಯಾಃ" ಎಂಬ ಆಗ್ನಿವೇಶ್ಯಶ್ರುತಿಯ ವಿರೋಧ, ಹಾಗೂ

ನಿತ್ಯಾನಂದಜ್ಞಾನಬಲಾ ದೇವಾ ನೈವಂ ತು ದಾನವಾಃ ।
ದುಃಖೋಪಲಬ್ಧಿಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾಃ ॥

ತೇಷಾಂ ಯದನ್ಯಥಾ ದೃಶ್ಯಂ ತದುಪಾಧಿಕೃತಂ ಮತಮ್ ।
ವಿಜ್ಞಾನೇನಾತ್ಮಯೋಗೇನ ನಿಜರೂಪೇ ವ್ಯವಸ್ಥಿತಿಃ ॥

ಸಮ್ಯಕ್‌ಜ್ಞಾನಂ ತು ದೇವಾನಾಂ ಮನುಷ್ಯಾಣಾಂ ವಿಮಿಶ್ರಿತಮ್ ।
ವಿಪರೀತಂ ಚ ದೈತ್ಯಾನಾಂ ಜ್ಞಾನಸ್ಯೈವಂ ವ್ಯವಸ್ಥಿತಿಃ ॥

ಎಂಬ ಭವಿಷ್ಯತ್ಪುರಾಣವಚನದ ವಿರೋಧವೂ ಬರಬೇಕಾಗುತ್ತದೆ. ಆದ್ದರಿಂದ ಜೀವರು ಆನಂದಾದಿರೂಪವೇ ಆಗಿದ್ದಾರೆ ಎಂದು ಅಂಗೀಕರಿಸಬೇಕು. ಆನಂದಾದಿರೂಪರು ಎಂದಾದಮೇಲೆ, ಈಗ ಆವರಣವನ್ನು ಅಂಗೀಕರಿಸದೇ ಹೋದರೆ ಮತ್ತು ಮೋಕ್ಷದಲ್ಲಿ ಆನಂದನಿವೃತ್ತಿಯನ್ನು ಅಂಗೀಕರಿಸದೇ ಹೋದರೆ ದೇವ-ದಾನವ-ಮನುಷ್ಯರಿಗೆ ನಿತ್ಯದಲ್ಲಿಯೂ ಸ್ವರೂಪೋಪಲಬ್ಧಿ(ಮುಕ್ತಿಯೋಗ್ಯರಿಗೆ ಸುಖಾನುಭವ, ತಮೋಯೋಗ್ಯರಿಗೆ ದುಃಖಾನುಭವ, ಮಧ್ಯಮರಿಗೆ ಸುಖ-ದುಃಖಾನುಭವ) ಆಗಬೇಕಾಗುತ್ತದೆ. ಆದ್ದರಿಂದ ಆವರಣವನ್ನು ಒಪ್ಪಲೇಬೇಕು. ಆವರಣವು ಇರುವುದರಿಂದ ಜೀವರಿಗೆ ಆನಂದಾದಿ-ರೂಪತ್ವವನ್ನು ಅಂಗೀಕರಿಸಿದರೂ ಯಾವ ಬಾಧಕ ಇಲ್ಲವಾದ್ದರಿಂದ, ಶ್ರುತಿವಿರೋಧ ಬಾರದ ಕಾರಣ ಜೀವರಿಗೆ ಆನಂದಾದಿರೂಪತ್ವ ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಪುಂಸ್ತ್ವಾಧಿಕರಣವು ಮುಗಿಯಿತು.

ಅಧಿಕರಣ – 17.

## ಕರ್ತೃತ್ವಾಧಿಕರಣ

### ಸಂಗತಿ

**ಸೂ.ರ.:– अत्र जीवकर्तृत्वविषयश्रुतिविरोधः परिह्रियते ।**

**ಅನು.:–** ಜೀವನಿಗೆ ಕರ್ತೃತ್ವವನ್ನು ತಿಳಿಸುವ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹದಿನೇಳನೇ ಈ ಕರ್ತೃತ್ವಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु जीवो न कर्ता । नान्यः कर्तेति श्रुतेः । न च यत्कर्म कुरुत इति (बृ.६-४-५) श्रुतिर्जीवकर्तृत्वे प्रमाणम् । अकर्तृकत्वश्रुतेः सयुक्तिकत्वेन प्रावल्यात् । समर्थितं खल्वीश्वरस्यैवानन्ययोगेन कर्तृत्वमितरव्यपदेशादित्यादौ । ततश्च जीवस्य कर्तृत्वमेव नास्तीत्येष उ एव साधुकर्म कारयतीत्यादिसमन्वयो न युक्त इति प्राप्ते सूत्रं पठति ॥**

**ಅನು.:–** ಜೀವನು ಕರ್ತಾ ಆಗಲು ಸಾಧ್ಯವಿಲ್ಲ. "ನಾನ್ಯಃ ಕರ್ತಾ" ಎಂಬುದಾಗಿ ಶ್ರುತಿಯು ಜೀವನಿಗೆ ಕರ್ತೃತ್ವವನ್ನು ನಿಷೇಧಿಸುತ್ತಿರುವುದರಿಂದ ಜೀವನಿಗೆ ಕರ್ತೃತ್ವ ಇಲ್ಲ.

ಹೌದು, "ಯತ್ಕರ್ಮ ಕುರುತೇ" (ಬೃ.6-4-5) ಎಂಬ ಶ್ರುತಿಯು ಜೀವನಿಗೆ ಕರ್ತೃತ್ವ ಇದೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆಯಲ್ಲವೇ? ಎಂದು ಶಂಕೆ ಬಂದರೆ ಅದು ಸರಿಯಲ್ಲ. 'ನಾನ್ಯಃ ಕರ್ತಾ' ಎಂಬ ಅಕರ್ತೃಕತ್ವಶ್ರುತಿಯು ಯುಕ್ತಿಸಹಿತವಾಗಿರುವುದರಿಂದ ಪ್ರಬಲವಾಗಿದೆ. ಈಶ್ವರನಿಗೇನೇ ಅನನ್ಯಯೋಗದಿಂದ ಕರ್ತೃತ್ವ ಇರುವುದು, ಉಳಿದವರಿಗೆ ಇಲ್ಲ ಎಂಬುದಾಗಿ ಇತರವ್ಯಪದೇಶಾಧಿಕರಣದಲ್ಲಿ ಸಮರ್ಥಿಸಲಾಗಿದೆಯಷ್ಟೇ?

ಆದ್ದರಿಂದ ಜೀವನಿಗೆ ಕರ್ತೃತ್ವವೇ ಇಲ್ಲವಾದ್ದರಿಂದ "ಏಷ ಉ ಏವ ಸಾಧುಕರ್ಮ ಕಾರಯತಿ" ಇತ್ಯಾದಿಯಾಗಿ ವಿಷ್ಣುವಿನಲ್ಲಿ ಕಾರಯಿತೃತ್ವಾದಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ कर्ता शास्त्रार्थवत्वात् ॐ (२.३.३३)

ಜೀವೋऽಪಿ ಕರ್ತಾ = ಜೀವನೂ ಕರ್ತೃವೇ ಆಗಿದ್ದಾನೆ, ಕುತಃ = ಏಕೆ?, ತಥಾ ಸತ್ಯೇವ = ಹಾಗೆ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಮಾತ್ರ, ಶಾಸ್ತ್ರಾರ್ಥವತ್ವಾತ್ = ವಿಧಿ-ನಿಷೇಧರೂಪವಾದ ಶಾಸ್ತ್ರಕ್ಕೆ ಪ್ರಯೋಜನ ಇರುವುದರಿಂದ ಶಾಸ್ತ್ರವು ಸಾರ್ಥಕವಾಗುತ್ತದೆ, ಅನ್ಯಥಾ ವೈಯರ್ಥ್ಯಪ್ರಸಂಗಾತ್ = ಒಂದುವೇಳೆ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸ-ದಿದ್ದರೆ ಶಾಸ್ತ್ರಕ್ಕೆ ವೈಯರ್ಥ್ಯ ಬರಬೇಕಾದ ಅತಿಪ್ರಸಂಗ ಬರುತ್ತದೆ.

### ಸಿದ್ಧಾಂತ

**ಸೂ.ರ.:– एवं चोक्तश्रुतिसमन्वयो युक्त एव । जीवस्यापि कर्तृत्वेन तत्प्रेरकत्वसम्भवात् । अन्यथा विधिनिषेधशास्त्रवैयर्थ्यं स्यात् । न हि कर्तारमन्तरेणारण्यरोदनाय मानशास्त्रस्य सार्थक्यं भवेत् । अतः श्रुत्य-विरोधेन जीवस्य कर्तृत्वसिद्धेर्युक्तः श्रुतिसमन्वय इति सिद्धम् ॥**

**ಅನು.:–** ವಿಷ್ಣುವಿನಲ್ಲಿ ಕಾರಯಿತೃತ್ವ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ. ಕಾರಣ - ಜೀವನಿಗೂ ಕರ್ತೃತ್ವ ಇರುವುದರಿಂದ ವಿಷ್ಣುವಿನಲ್ಲಿ ಜೀವಪ್ರೇರಕತ್ವವು ಸಂಭಾವಿತವಾಗಿದೆಯಾದ್ದರಿಂದ.

ಹಾಗೆ ಒಂದುವೇಳೆ ಜೀವನಿಗೆ ಕರ್ತೃತ್ವವನ್ನೇ ಅಂಗೀಕರಿಸದೇ ಹೋದರೆ, ಕರ್ತೃತ್ವವೇ ಇಲ್ಲದೇ ಕೇವಲ ಅರಣ್ಯರೋದನಕ್ಕಾಗಿ ಮಾನಶಾಸ್ತ್ರವು ಸಾರ್ಥಕವಾಗುವುದಿಲ್ಲವಾದ್ದರಿಂದ ವಿಧಿ-ನಿಷೇಧರೂಪವಾದ ಶಾಸ್ತ್ರಕ್ಕೆ ವೈಯರ್ಥ್ಯ ಬರಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಶ್ರುತಿಯ ವಿರೋಧ ಬರುವುದಿಲ್ಲವಾದ್ದರಿಂದ ಜೀವನಿಗೆ ಕರ್ತೃತ್ವವು ಸಿದ್ಧಿಸುತ್ತದೆ. ಜೀವನಿಗೆ ಕರ್ತೃತ್ವವು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 34

### ಆಕ್ಷೇಪ

ಸೂ.ರ.:– नन्वथाऽपि जीवस्य न वास्तवं कर्तृत्वमभ्युपेयम् । जीवस्य

**स्वतः कर्तृत्वाभावेऽपि परगतकर्तृत्वे स्वीयत्वाग्रहोऽस्त्येव । अतः काल्पनिककर्तृत्ववन्तं जीवं प्रति विधिनिषेधशास्त्रप्रवृत्तिर्भवेदित्या-शङ्कामपाकुर्वत्सूत्रमुपन्यस्यति ॥**

**ಅನು.:–** ಆದರೂ ಸಹ ಜೀವನಿಗೆ ವಾಸ್ತವ ಕರ್ತೃತ್ವವನ್ನು ಅಂಗೀಕರಿಸಲು ಬರುವು-ದಿಲ್ಲ, ಹಾಗೆ ಜೀವನಿಗೆ ವಾಸ್ತವಿಕ ಕರ್ತೃತ್ವವು ಇಲ್ಲದೇ ಹೋದರೂ ಸಹ ಪರಗತಕರ್ತೃತ್ವದಲ್ಲಿ ಸ್ವೀಯತ್ವಾಗ್ರಹವು ಇದ್ದೇ ಇದೆ. ಆದ್ದರಿಂದ ಕಾಲ್ಪನಿಕಕರ್ತೃತ್ವ ಉಳ್ಳ ಜೀವನನ್ನು ಕುರಿತು ವಿಧಿನಿಷೇಧರೂಪವಾದ ಶಾಸ್ತ್ರದ ಪ್ರವೃತ್ತಿಯು ಉಪಪನ್ನವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ विहारोपदेशात् ॐ (२.३.३४)

ವಿಹಾರೋಪದೇಶಾತ್ = ಮೋಕ್ಷದಲ್ಲಿಯೂ ಸಹ ಜಕ್ಷನ್ ಕ್ರೀಡನ್ ಎಂಬುದಾಗಿ ವಿಹಾರಕರ್ತೃತ್ವವನ್ನು ಹೇಳುತ್ತಿರುವುದರಿಂದ ಜೀವನು ಪಾರಮಾರ್ಥಿಕವಾಗಿಯೇ ಕರ್ತೃವಾಗಿದ್ದಾನೆ. ಹೊರತು ಕಾಲ್ಪನಿಕ ಕರ್ತಾ ಅಲ್ಲ.

### ಸಮಾಧಾನ

**ಸೂ.ರ.:– एवं च मोक्षेऽपि स्त्रीभिर्वा यानैर्वे(छां.८-१२-३)त्यादिना विहारकर्तृत्वोपदेशात् । न च मोक्षे सतो व्यावहारिकत्वसम्भवः । अतः श्रुत्यविरोधेन जीवकर्तृत्वसिद्धेर्युक्तः समन्वय इति सिद्धम् ॥**

**ಅನು.:–** 'ಸ್ತ್ರೀಭಿರ್ವಾ ಯಾನೈರ್ವಾ' (ಛಾಂ. 8–12–3) ಇತ್ಯಾದಿಯಾಗಿ ಮೋಕ್ಷ-ದಲ್ಲಿಯೂ ಸಹ ಜೀವನಿಗೆ ವಿಹಾರಕರ್ತೃತ್ವವನ್ನು ಹೇಳುತ್ತಿರುವುದರಿಂದ ಜೀವನಿಗೆ ವಾಸ್ತವ-ಕರ್ತೃತ್ವವೇ ಇದೆ.

ಮೋಕ್ಷದಲ್ಲಿಯೂ ಇರುವ ಕರ್ತೃತ್ವವು ವ್ಯಾವಹಾರಿಕವಾಗಲು ಸಾಧ್ಯವಿಲ್ಲ. ಹಾಗಾಗಿ ಜೀವನ ಕರ್ತೃತ್ವವು ವಾಸ್ತವವೇ ಆಗಿದೆ.

ಆದ್ದರಿಂದ ಜೀವನಿಗೆ ವಾಸ್ತವಿಕಕರ್ತೃತ್ವವನ್ನು ಅಂಗೀಕರಿಸಿದರೆ ಶ್ರುತಿವಿರೋಧ ಬಾರದ ಕಾರಣ, ಜೀವನಿಗೆ ಕರ್ತೃತ್ವವೇ ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವಶ್ರುತಿ-ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 35

## ಆಕ್ಷೇಪ

**ಸೂ.ರ.:– नन्वस्तु तर्हि जीवस्य मोक्षे कर्तृत्वं पारमार्थिकम् । प्रामाणिकत्वात् । संसारे तु व्यावहारिकमेव । तावता शास्त्रसार्थक्यं भवेदित्याशङ्कां परिहरत्सूत्रमुपन्यस्यति ॥**

**ಅನು.:–** ಹಾಗಾದರೆ ಜೀವನಿಗೆ ಮೋಕ್ಷದಲ್ಲಿ ಪಾರಮಾರ್ಥಿಕ ಕರ್ತೃತ್ವ ಇರಲಿ. ಸಂಸಾರದಲ್ಲಿಯಾದರೂ ವ್ಯಾವಹಾರಿಕ ಕರ್ತೃತ್ವವೇ ಇರಲಿ. ಸಂಸಾರದಲ್ಲಿ ವ್ಯಾವಹಾರಿಕ-ಕರ್ತೃತ್ವ ಇರುವುದರಿಂದಲೇ ವಿಧಿ-ನಿಷೇಧರೂಪವಾದ ಶಾಸ್ತ್ರವು ಸಾರ್ಥಕವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ उपादानात् ॐ (२.३.३५)**

ಉಪಾದಾನಾತ್ = ಜೀವನಿಗೆ ಮೋಕ್ಷರೂಪ ಪ್ರಯೋಜನಕ್ಕಾಗಿ ಸಾಧನಾದ್ಯನುಷ್ಠಾನ ಕಂಡಿದ್ದರಿಂದ, ಅದರಿಂದ ಫಲವೂ ಕಂಡಿದ್ದರಿಂದ, ಜೀವನು ಸಂಸಾರದಲ್ಲಿಯೂ ಕಾಲ್ಪನಿಕಕರ್ತಾ ಅಲ್ಲ

## ಸಮಾಧಾನ

**ಸೂ.ರ.:– एवं च मोक्षार्थं साधनाद्युपादानदर्शनात् । न च तदपि परगतमेव जीव आरोप्यमिति वाच्यम् । फलाभावप्रसङ्गात् । अतः श्रुत्यविरोधेन जीवकर्तृत्वसिद्धेर्युक्तः समन्वय इति सिद्धम् ॥**

**ಅನು.:–** ಮೋಕ್ಷರೂಪ ಪ್ರಯೋಜನಕ್ಕಾಗಿ ಜೀವನಿಗೆ ಸಾಧನಾದಿ ಉಪಾದಾನ ಕಂಡಿದ್ದರಿಂದ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಲೇಬೇಕು.

ಅಲ್ಲಿಯೂ ಪರಗತವಾದ ಕರ್ತೃತ್ವವೇ ಜೀವನಲ್ಲಿ ಆರೋಪಿತವಾಗಿದೆ ಎಂದು ಶಂಕಿಸುವುದು ಸರಿಯಲ್ಲ. ಕರ್ತೃತ್ವವು ಆರೋಪಿತವಾದರೆ ಫಲ ಇಲ್ಲದೇ ಹೋಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಶ್ರುತಿವಿರೋಧ ಬಾರದ ಕಾರಣ ಜೀವನಿಗೆ ಕರ್ತೃತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವ-ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 36.

**ಸೂ.ರ.:– एवं संसारे शास्त्रार्थवत्त्वरूपयुक्त्या साधनाद्युपादान-प्रत्यक्षेण च साधितं जीवकर्तृत्वं श्रुत्याऽपि समर्थयत्सूत्रमाह ॥**

**ಅನು.:–** ಈ ರೀತಿಯಾಗಿ ಶಾಸ್ತ್ರಾರ್ಥವತ್ತ್ವ (ಶಾಸ್ತ್ರಕ್ಕೆ ಸಾರ್ಥಕ್ಯ) ರೂಪವಾದ ಯುಕ್ತಿಯಿಂದ, ಹಾಗೂ ಸಾಧನಾದ್ಯುಪಾದಾನಪ್ರತ್ಯಕ್ಷದಿಂದ ಸಾಧಿತವಾದ ಜೀವ-ಕರ್ತೃತ್ವವನ್ನು ಶ್ರುತಿಯಿಂದಲೂ ಸಹ ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ व्यपदेशाच्च क्रियायां न चेन्निर्देशविपर्ययः ॐ (२.३.३६)**

ಕ್ರಿಯಾಯಾಂ = "ಆತ್ಮಾನಮೇವ ಲೋಕಮುಪಾಸೀತ" (ಬೃ. 3-4-15) ಎಂದು ಹೇಳಿದ ಉಪಾಸನಕ್ರಿಯೆಯಲ್ಲಿ, ವ್ಯಪದೇಶಾಚ್ಚ = ಜೀವನಿಗೆ ಕರ್ತೃತ್ವವನ್ನು ಹೇಳಿದ್ದ-ರಿಂದಲೂ ಸಹ, ಜೀವಃ ಕರ್ತಾ = ಜೀವನು ಕರ್ತಾ ಆಗಿದ್ದಾನೆ, ನ ಚೇತ್ = ಜೀವನಿಗೆ ಕರ್ತೃತ್ವ ಇಲ್ಲವಾದರೆ, ನಿರ್ದೇಶವಿಪರ್ಯಯಃ = ಜೀವನಿಗೆ ಕರ್ತೃತ್ವ ಹೇಳುವ, ಈಶ್ವರನಿಗೆ ಕರ್ಮತ್ವ ಹೇಳುವ ವಚನವು, "ಆತ್ಮೈವ ಉಪಾಸೀತ" ಎಂಬುದಾಗಿ ವಿಪರೀತವಾಗ-ಬೇಕಾಗುತ್ತದೆ.

**ಸೂ.ರ.:– एवं चात्मानमेव लोकमुपासीतेति श्रुतौ जीवस्य कर्तृत्व-व्यपदेशात् । जीवस्योपासनाक्रियायां कर्तृत्वेन श्रुत्यनभिमतत्वे क्रियाया अकर्तृकत्वजडकर्तृत्वयोरसम्भवाच्छ्रुतिवैयर्थ्यापत्त्या तत्परिहाराय परमात्मन एव क्रियाकर्तृत्वेन तदभिमतत्वे आत्मैव लोकमिति निर्देशः स्यात् । तथा चास्य कर्तृत्वान्नास्ति चासौ विपरीतनिर्देशस्तस्मान्न जीवोऽकर्ता किन्तु कर्तैवेति विपर्ययपर्यवसाने जीवस्यापि कर्तृतासिद्धेः । अतः श्रुत्य-विरोधेन समन्वयो युक्त इति सिद्धम् ॥**

**ಅನು.:–** 'ಆತ್ಮಾನಮೇವ ಲೋಕಮುಪಾಸೀತ' (ಜೀವರು ಈಶ್ವರನನ್ನು ಉಪಾಸಿಸ-ಬೇಕು) ಎಂಬುದಾಗಿ ಶ್ರುತಿಯಲ್ಲಿ ಉಪಾಸನಾರೂಪಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವೇನ ವ್ಯಪದೇಶ ಇರುವುದರಿಂದ, ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಲೇಬೇಕು.

ಆ ಉಪಾಸನಾಕ್ರಿಯೆಯಲ್ಲಿ ಜೀವನು ಕರ್ತೃತ್ವೇನ ಅಭಿಮತನಾಗಿಲ್ಲ ಎಂದರೆ, ಕ್ರಿಯೆಯಂತೂ ಅಕರ್ತೃಕವಾಗಲು ಸಾಧ್ಯವಿಲ್ಲವಾದ್ದರಿಂದ ಒಬ್ಬ ಕರ್ತಾ ಬೇಕೇಬೇಕು.

ಜಡವು ಕರ್ತೃವಾಗಲು ಸಾಧ್ಯವಿಲ್ಲವಾದ್ದರಿಂದ ಉಪಾಸನಾವಿಧಾಯಕಶ್ರುತಿಯೇ ವ್ಯರ್ಥವಾಗಬೇಕಾದೀತು. ಆ ವೈಯರ್ಥ್ಯ ಪರಿಹಾರಕ್ಕಾಗಿ ಪರಮಾತ್ಮನಿಗೇ ಕರ್ತೃತ್ವವು ಶ್ರುತಿಸಮ್ಮತವಾಗುವುದಾದರೆ "ಆತ್ಮೈವ ಲೋಕಮುಪಾಸೀತ" (ಪರಮಾತ್ಮನು ತನ್ನನ್ನೇ ತಾನು ಉಪಾಸನೆ ಮಾಡಬೇಕು) ಎಂಬುದಾಗಿ ವಿಪರ್ಯಯವಾಗಬೇಕಾದ ಅತಿಪ್ರಸಂಗ ಬರುತ್ತದೆ.

ಈಗಲಾದರೋ ಹಾಗೆ ವಿಪರೀತಕ್ರಮವು ಇಲ್ಲವಾದ್ದರಿಂದ ಜೀವನು ಕರ್ತಾ ಅಲ್ಲ ಎಂದಲ್ಲ. ಕಿಂತು ಕರ್ತೃವೇ ಆಗಿದ್ದಾನೆ ಎಂಬುದಾಗಿ ವಿಪರ್ಯಯಪರ್ಯವಸಾನ ಮಾಡಿದಾಗ ಜೀವನಿಗೆ ಕರ್ತೃತ್ವವು ಸಿದ್ಧಿಸುತ್ತದೆ.

ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಹೇಳಿದರೆ ಶ್ರುತಿವಿರೋಧ ಬರುವುದಿಲ್ಲ-ವಾದ್ದರಿಂದ ಜೀವನಿಗೆ ಕರ್ತೃತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವಶ್ರುತಿ-ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 37

## ಆಕ್ಷೇಪ

**ಸೂ.ರ.:– नन्वेवं जीवस्यापि कर्तृत्वे कथमितरव्यपदेशादित्यादावीश्वर एव कर्तेति समर्थितम् । कथं च नान्यः कर्तेति श्रुतिरुपपद्यते । अतस्तद्विरोधोऽस्त्येवेत्याशङ्कां परिहरत्सूत्रं पठति ॥**

**ಅನು.:–** ಈ ರೀತಿಯಾಗಿ ಜೀವನಿಗೂ ಕರ್ತೃತ್ವ ಇದೆ ಎಂದು ಹೇಳುವುದಾದರೆ "ಇತರ- ವ್ಯಪದೇಶಾತ್" ಇತ್ಯಾದಿಗಳಲ್ಲಿ "ಈಶ್ವರ ಒಬ್ಬನೇ ಕರ್ತಾ" ಎಂಬುದಾಗಿ ಹೇಗೆ ಸಮರ್ಥಿಸಲಾಗಿದೆ? ಮತ್ತು ನಾನ್ಯಃ ಕರ್ತಾ ಎಂಬ ಶ್ರುತಿಯೂ ಸಹ ಹೇಗೆ ಉಪಪನ್ನವಾಗುತ್ತದೆ ? ಅರ್ಥಾತ್ ಜೀವನಿಗೆ ಕರ್ತೃತ್ವವನ್ನು ಹೇಳಿದರೆ ಆ ಇತರವ್ಯಪದೇಶಾಧಿಕರಣದ ವಿರೋಧ ಹಾಗೂ ಶ್ರುತಿಯ ವಿರೋಧ ಬರಬೇಕಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ उपलब्धिवदनियमः ॐ (२.३.३७)**

ಉಪಲಬ್ಧಿವತ್ = ಉಪಲಬ್ಧಿಯಲ್ಲಿ(ಜ್ಞಾನದಲ್ಲಿ) ಹೇಗೋ ಹಾಗೆ, ಜೀವನಿಗೆ ಯಾವ ರೀತಿಯಾಗಿ ಜ್ಞಾನದ ವಿಷಯದಲ್ಲಿ, ಅನಿಯಮಃ = ಸ್ವೇಚ್ಛಾನುಸಾರವಾಗಿ ಜ್ಞಾನಲಾಭವು

ಇಲ್ಲವೋ ಅದೇ ಪ್ರಕಾರ, ಕ್ರಿಯಾಯಾಂ ಅಪಿ = ಕ್ರಿಯಾವಿಷಯದಲ್ಲಿಯೂ ಸಹ, ಅನಿಯಮಃ = ಸ್ವೇಚ್ಛಾನುಸಾರವಾಗಿ ಕಾರ್ಯಸಿದ್ಧಿಯು ಇಲ್ಲ.

## ಸಮಾಧಾನ

**ಸೂ.ರ.:– एवं च यथेदमहं ज्ञास्यामीतीच्छायामपि न स्वेच्छानुसारेण ज्ञानलाभो जीवस्य । एवमिदं करिष्यामीति सङ्कल्पेऽपि न स्वेच्छानुसारेण कार्यसिद्धिः । ईश्वरस्य तु स्वेच्छानुसारेण कार्यसिद्धिर्भवतीति स्वातन्त्र्याभिप्रायेणेश्वर एव कर्ता न जीवः कर्तेत्युच्यत इत्यभिप्रायकत्वात् । ततश्च जीवस्य कर्मणि नियमाभावेनेश्वरस्य तु तद्भावसिद्धेः । अनन्याधीनकर्तृत्वविवक्षयेश्वरस्यैव कर्तृत्वं न जीवस्येति प्रागुक्तत्वात् । न तु सर्वथा कर्तृत्वाभावाभिप्रायेणेति न पूर्वोक्तविरोधः । अतः श्रुत्यविरोधेन जीवकर्तृत्वसिद्धेः समन्वयो युक्त इति सिद्धम् ॥**

**ಅನು.:–** ಯಾವ ರೀತಿಯಾಗಿ ''ಇದಮಹಂ ಜ್ಞಾಸ್ಯಾಮಿ'' (ಇದನ್ನು ನಾನು ತಿಳಿಯಲು ಇಚ್ಛಿಸುತ್ತೇನೆ) ಎಂಬುದಾಗಿ ಇಚ್ಛಾ ಮಾಡಿದರೂ ಸಹ ಜ್ಞಾನದ ವಿಷಯದಲ್ಲಿ ಸ್ವೇಚ್ಛಾನುಸಾರೇಣ ಜ್ಞಾನಲಾಭವು ಜೀವನಿಗೆ ಆಗುವುದಿಲ್ಲವೋ ಅದೇ ರೀತಿಯಾಗಿ ''ಇದಂ ಕಾರಯಿಷ್ಯಾಮಿ'' (ಈ ಕಾರ್ಯವನ್ನು ಮಾಡಿ ಮುಗಿಸುತ್ತೇನೆ) ಎಂಬುದಾಗಿ ಇಚ್ಛಾ ಮಾಡಿದರೂ ಸಹ ಕ್ರಿಯೆಯ ವಿಷಯದಲ್ಲಿಯೂ ಜೀವನಿಗೆ ಸ್ವೇಚ್ಛಾನುಸಾರೇಣ ಕಾರ್ಯಸಿದ್ಧಿಯು ಆಗುವುದಿಲ್ಲ.

ಆದರೆ ಈಶ್ವರನಿಗೆ ಮಾತ್ರ ಸ್ವೇಚ್ಛಾನುಸಾರೇಣ ಕಾರ್ಯಸಿದ್ಧಿಯು ಆಗುತ್ತದೆ.

ಈ ರೀತಿಯಾಗಿ ಸ್ವಾತಂತ್ರ್ಯವಿವಕ್ಷೆಯಿಂದಲೇ (ಅನನ್ಯಾಧೀನ ಕರ್ತೃತ್ವವಿವಕ್ಷೆಯಿಂದಲೇ) ಈಶ್ವರ ಒಬ್ಬನೇ ಕರ್ತಾ, ಜೀವನು ಕರ್ತಾ ಅಲ್ಲ ಎಂಬುದಾಗಿ ಈಶ್ವರನಿಗೆ ಕರ್ತೃತ್ವವನ್ನು ಹೇಳಿದ್ದು, ಜೀವನಿಗೆ ಕರ್ತೃತ್ವವನ್ನು ನಿಷೇಧಿಸಿದ್ದು, ಹೊರತು ಜೀವನಿಗೆ ಕರ್ತೃತ್ವವೇ ಇಲ್ಲ ಎಂಬುದಾಗಿ ಸರ್ವಥಾ ಕರ್ತೃತ್ವವನ್ನು ನಿಷೇಧಿಸುವ ಅಭಿಪ್ರಾಯದಿಂದ ಹಿಂದೆ ಹೇಳಿದ್ದಲ್ಲ. ಹಾಗಾಗಿ ಪೂರ್ವೋಕ್ತವಿರೋಧ ಬರುವುದಿಲ್ಲ.

ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಹೇಳಿದರೆ ಶ್ರುತಿವಿರೋಧ ಬರುವುದಿಲ್ಲ-

ವಾದ್ದರಿಂದ, ಜೀವನಿಗೆ ಕರ್ತೃತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವ- ಶ್ರುತಿ-ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 38

**ಸೂ.ರ.:– नन्वीश्वरस्य जीववत्साधनसापेक्षकर्तृत्वेनाविशेषात् । ईश्वर-स्यैव स्वातन्त्र्यं न जीवस्येत्येतत्कुत इत्याकाङ्क्षायां परिहरत्सूत्रमुपन्यस्यति ॥**

**ಅನು.:–** ಈಶ್ವರನಿಗೆ ಜೀವನಂತೆ ಸಾಧನಸಾಪೇಕ್ಷಕರ್ತೃತ್ವ ಇರುವುದರಿಂದ ಜೀವ-ಈಶ್ವರರಲ್ಲಿ ಯಾವ ವಿಶೇಷವೂ ಇಲ್ಲದ ಕಾರಣ ''ಈಶ್ವರನಿಗೆ ಮಾತ್ರ ಸ್ವಾತಂತ್ರ್ಯ ಇದೆ. ಜೀವನಿಗೆ ಸ್ವಾತಂತ್ರ್ಯ ಇಲ್ಲ'' ಎಂದು ವ್ಯತ್ಯಾಸ ಏಕೆ? ಎಂದು ಶಂಕೆ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ शक्तिविपर्ययात् ॐ (२.३.३८)**

ಈಶ್ವರ-ಜೀವರಲ್ಲಿ ಶಕ್ತಿವಿಪರ್ಯಯಾತ್ = ಪೂರ್ಣಶಕ್ತಿ-ಅಪೂರ್ಣಶಕ್ತಿ ರೂಪವಾದ ಭೇದವನ್ನು ಅಪೇಕ್ಷಿಸಿ ಕರ್ತೃತ್ವವೂ ಸಹ ಸ್ವತಂತ್ರ-ಅಸ್ವತಂತ್ರ ಭೇದಭಿನ್ನವಾಗಿದೆ.

ಅಥವಾ ಈಶ್ವರನಂತೆ ಜೀವನಲ್ಲಿ ಪೂರ್ಣಶಕ್ತಿ ಇಲ್ಲವಾದ್ದರಿಂದ ಜೀವನಿಗೆ ಸ್ವತಂತ್ರ-ಕರ್ತೃತ್ವ ಇಲ್ಲ.

ಸಮಾಧಾನ

**ಸೂ.ರ.:– एवं चेश्वरस्य सकलसाधननियामकत्वेन साधन-स्वातन्त्र्यसद्भावात् । कार्यसिद्धेश्च स्वातन्त्र्यसापेक्षत्वात् । जीवस्य तु साधनस्वातन्त्र्याभावेन फलस्वातन्त्र्याभावात् । ततश्च जीवस्याल्पशक्तित्वेन स्वातन्त्र्याभावाद्युक्तः समन्वय इति सिद्धम् ॥**

**ಅನು.:–** ಈಶ್ವರನು ಸಕಲಸಾಧನನಿಯಾಮಕನಾದ್ದರಿಂದ ಅವನಿಗೆ ಸಾಧನಸ್ವಾತಂತ್ರ್ಯ ಇರುವುದರಿಂದ, ಕಾರ್ಯಸಿದ್ಧಿಯು ಸ್ವಾತಂತ್ರ್ಯಸಾಪೇಕ್ಷವಾದ್ದರಿಂದ, ಈಶ್ವರನಿಗೆ ಸ್ವಾತಂತ್ರ್ಯ ಇದೆ. ಜೀವನಿಗಾದರೂ ಸಾಧನಸ್ವಾತಂತ್ರ್ಯ ಇಲ್ಲವಾದ್ದರಿಂದ ಫಲದಲ್ಲಿಯೂ ಸ್ವಾತಂತ್ರ್ಯ ಇಲ್ಲ.

ಆದ್ದರಿಂದ ಜೀವನು ಅಲ್ಪಶಕ್ತಿ ಉಳ್ಳವನಾದ್ದರಿಂದ ಸ್ವಾತಂತ್ರ್ಯ ಇಲ್ಲದ ಕಾರಣ ವಿಷ್ಣುವಿನಲ್ಲಿ ಕಾರಯಿತೃತ್ವಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ – 39

**ಸೂ.ರ.:– युक्त्यन्तरेणेशजीवयोः स्वातन्त्र्यपारतन्त्र्ये समर्थयत्सूत्र-मुपन्यस्यति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಈಶ-ಜೀವರಿಗೆ ಸ್ವಾತಂತ್ರ್ಯ-ಪಾರತಂತ್ರ್ಯಗಳನ್ನು ಸಮರ್ಥಿಸುವ ಸೂತ್ರವನ್ನು ಹೇಳುತ್ತಾರೆ –

**ॐ समाध्यभावाच्च ॐ (२.३.३९)**

(ಸಮಾಧಿ ಎಂದರೆ ಅಲಂಬುದ್ಧಿ) ಸಮಾಧ್ಯಭಾವಾತ್ = ಅಲಂಬುದ್ಧಿ ಇಲ್ಲವಾದ್ದ-ರಿಂದ ಜೀವನಿಗೆ ಸ್ವತಂತ್ರಕರ್ತೃತ್ವ ಇಲ್ಲ, ಕಿಂತು ಪರತಂತ್ರಕರ್ತೃತ್ವವೇ ಇದೆ.

**ಸೂ.ರ.:– एवं चेश्वरस्य पूर्णकामत्वात्फलस्वातन्त्र्यं जीवस्य तदभावात्फलस्वातन्त्र्याभावः । ततश्च जीवेशयोः स्वातन्त्र्यास्वातन्त्र्ययोः प्रतीयमानत्वेन ताभ्यां निमित्ताभ्यां कर्मणि नियमानियमयोः प्रतिपत्त-व्यत्वात् । अतः श्रुत्यविरोधेन समन्वयो युक्त इति सिद्धम् ॥**

**ಅನು.:–** ಈಶ್ವರನು ಪೂರ್ಣಕಾಮನಾದ್ದರಿಂದ ಫಲಸ್ವಾತಂತ್ರ್ಯ ಇದೆ. ಜೀವನಿಗೆ ಪೂರ್ಣಕಾಮತ್ವ ಇಲ್ಲವಾದ್ದರಿಂದ ಫಲಸ್ವಾತಂತ್ರ್ಯ ಇಲ್ಲ. ಆದ್ದರಿಂದ ಜೀವ-ಈಶ್ವರರಲ್ಲಿ ಸ್ವಾತಂತ್ರ್ಯ-ಪಾರತಂತ್ರ್ಯಗಳು ತೋರುವುದರಿಂದ ಆ ಸ್ವಾತಂತ್ರ್ಯ-ಅಸ್ವಾತಂತ್ರ್ಯಗಳ ನಿಮಿತ್ತದಿಂದಾಗಿ ಕರ್ಮದಲ್ಲಿ ನಿಯಮ-ಅನಿಯಮಗಳನ್ನು ತಿಳಿಯಬೇಕಾಗಿದೆ.

ಆದ್ದರಿಂದ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವ ಇಲ್ಲವಾದರೂ ಅಸ್ವತಂತ್ರಕರ್ತೃತ್ವವು ಇರುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 40

**ಆಕ್ಷೇಪ**

**ಸೂ.ರ.:– ननु जीवस्य न स्वातन्त्र्येण कर्तृत्वं चेत्तर्हि श्रुतिस्मृत्यादौ**

कथं कर्तेत्युच्यते । अस्वतन्त्रकर्तरि कर्तृशब्दप्रयोगाभावेन तस्य स्वतन्त्र-कर्तृमात्रप्रत्यायकत्वादिति प्राप्ते पराकुर्वत्सूत्रमाह ॥

**ಅನು.:–** ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವ ಇಲ್ಲ ಎನ್ನುವುದಾದರೆ, ಹಾಗಾದರೆ ಶ್ರುತಿ-ಸ್ಮೃತ್ಯಾದಿಗಳಲ್ಲಿ ಕರ್ತಾ ಎಂಬುದಾಗಿ ಹೇಗೆ ಕರೆಸಿಕೊಳ್ಳಲ್ಪಟ್ಟಿದ್ದಾನೆ? ಅಸ್ವತಂತ್ರಕರ್ತೃವಾದ ವ್ಯಕ್ತಿಯಲ್ಲಿ ಕರ್ತೃಶಬ್ದಪ್ರಯೋಗವು ಇಲ್ಲ. ಕರ್ತೃಶಬ್ದವು ಸ್ವತಂತ್ರಕರ್ತೃತ್ವವನ್ನು ಮಾತ್ರವೇ ಬೋಧಿಸುತ್ತದೆ. ಪ್ರತ್ಯಾಯಕವಾಗಿದೆ. ಹೀಗಾಗಿ ಅಸ್ವತಂತ್ರಕರ್ತೃವಾದ ಜೀವನ ವಿಷಯದಲ್ಲಿ ಹೇಗೆ ತಾನೆ ಶ್ರುತಿಸ್ಮೃತ್ಯಾದಿಗಳಲ್ಲಿ ಕರ್ತೃಶಬ್ದಪ್ರಯೋಗ ಉಪಪನ್ನವಾಗುವುದು? ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ यथा च तक्षोभयथा ॐ (२.३.४०)**

(ದ್ರಾಷ್ಟಾಂತಿಕಸಮುಚ್ಚಯಕ್ಕಾಗಿ ಚಶಬ್ದವಿದೆ.) ಹಾಗಾದರೆ – ಯಥಾ ತಕ್ಷಾ = ಯಾವ ರೀತಿಯಾಗಿ ತಕ್ಷನು (ವರ್ಧಕಿಯು), ಉಭಯಥಾ = ಪ್ರಾಸಾದಾದಿ ಕಾರಯಿತೃಪ್ರೇರಿತತ್ವೇನ ಹಾಗೂ ಪ್ರಾಸಾದಾದಿಕರ್ತೃತ್ವೇನ ವ್ಯಪದಿಶ್ಯತೇ = ವ್ಯವಹರಿಸಲ್ಪಡುವನೋ, ತಥಾ = ಅದೇ ರೀತಿಯಾಗಿ, ಈಶ್ವರನಿಯತೋಽಪಿ ಜೀವಃ ಕರ್ತೇತಿ ವಕ್ತುಂ ಶಕ್ಯತೇ = ಜೀವನು ಈಶ್ವರನಿಯತನಾದರೂ ಸಹ "ಕರ್ತಾ" ಎಂಬುದಾಗಿ ವ್ಯವಹರಿಸಲ್ಪಡಲೂ ಶಕ್ಯವಿದೆ.

## ಸಮಾಧಾನ

**ಸೂ.ರ.:–** एवं चास्वतन्त्रेऽपि कर्तरि प्रासादकर्ताऽयं तक्षेति प्रयोगदर्शनेन कर्तृशब्दस्य स्वतन्त्रकर्तृमात्रप्रत्यायकत्वनियमाभावात् । जीवस्यापीश्वरनियतत्वस्य घटादिकर्तृत्वस्य च सद्भावात् । अतो जीवकर्तृत्वसिद्धेः समन्वयो युक्त इति सिद्धम् ॥

**ಅನು.:–** ತಕ್ಷನು (ವರ್ಧಕಿಯು) ಅಸ್ವತಂತ್ರಕರ್ತೃವಾದರೂ ಅವನ ವಿಷಯದಲ್ಲಿ ಪ್ರಾಸಾದಕರ್ತಾ ಅಯಂ ತಕ್ಷಾ ಎಂಬುದಾಗಿ ಪ್ರಯೋಗಿಸುವುದು ಕಂಡಿದ್ದರಿಂದ "ಕರ್ತೃಶಬ್ದವು ಸ್ವತಂತ್ರಕರ್ತೃ ಮಾತ್ರಪ್ರತ್ಯಾಯಕವಾಗಿದೆ ಎಂಬ ನಿಯಮವಿಲ್ಲ" ಎಂದು ತಿಳಿಯುತ್ತದೆ.

ಆದ್ದರಿಂದ ಜೀವನು ಅಸ್ವತಂತ್ರಕರ್ತೃವಾದರೂ ಈಶ್ವರನಿಯತತ್ವ ಹಾಗೂ

ಘಟಾದಿಕರ್ತೃತ್ವ ಎರಡೂ ಜೀವನಲ್ಲಿ ಉಪಪನ್ನವಾಗುತ್ತದೆ. ಹೀಗಾಗಿ ಜೀವನಿಗೆ ಕರ್ತೃತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಯಿತು.

ಸೂತ್ರ - 41

## ಆಕ್ಷೇಪ

**ಸೂ.ರ.:– ननु किं तक्षण इव जीवस्य कर्तृत्वशक्तिर्जीवाधीनैव । ईश्वराधीनत्वं तु वचनवेतनदानादिवदुत कर्तृत्वशक्तिरपीश्वराधीना । आद्य ईश्वरस्यैव कर्तृत्वमिति गतः पक्षः । द्वितीये न जीवस्य कर्तृत्वशक्तिरिति प्राप्ते समादधत्सूत्रमाह ॥**

**ಅನು.:–** ತಕ್ಷನಂತೆ ಜೀವನ ಕರ್ತೃತ್ವಶಕ್ತಿಯು ಜೀವಾಧೀನವೇ ಆಗಿದೆ. ಈಶ್ವರಾಧೀನತ್ವವಾದರೂ ವಚನ-ವೇತನ-ದಾನಾದಿಗಳಂತೆ ಎಂದು ಹೇಳುತ್ತೀರೋ ? ಅಥವಾ ಜೀವನ ಕರ್ತೃತ್ವಶಕ್ತಿಯೂ ಸಹ ಈಶ್ವರಾಧೀನವೇ ಆಗಿದೆ ಎಂದು ಹೇಳುತ್ತೀರೋ?

ಮೊದಲನೇ ಪಕ್ಷದಲ್ಲಿ (ಕರ್ತೃತ್ವಶಕ್ತಿಯು ಜೀವಾಧೀನವಾಗಿದೆ ಎನ್ನುವುದಾದರೆ) ಈಶ್ವರನಿಗೇನೇ ಕರ್ತೃತ್ವವಿದೆ ಎಂಬ ಪಕ್ಷವು ಹೋಗುತ್ತದೆ. ಇನ್ನು ಎರಡನೇ ಪಕ್ಷದಲ್ಲಿ ಜೀವನಿಗೆ ಕರ್ತೃತ್ವಶಕ್ತಿಯೇ ಇಲ್ಲ ಎಂದಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ परात्तु तच्छ्रुतेः ॐ (२.३.४१)**

ಜೀವಸ್ಯ ಕರ್ತೃತ್ವಶಕ್ತಿಃ = ಜೀವನ ಕರ್ತೃತ್ವಶಕ್ತಿಯು, ಪರಾತ್ತು = ಪರಮಾತ್ಮನನ್ನು ಅನುಸರಿಸಿಯೇ (ಪರಮಾತ್ಮನ ಅಧೀನವಾಗಿಯೇ) ಇದೆ, ಕುತಃ = ಯಾಕೆ?, ತಚ್ಛ್ರುತೇಃ = 'ಕರ್ತೃತ್ವಂ ಕರಣತ್ವಂ ಚ' (ಪೈಂಗಿಶ್ರುತಿ) ಎಂಬುದಾಗಿ ಜೀವಕರ್ತೃತ್ವವು ಈಶ್ವರಾಧೀನವಾಗಿದೆ ಎಂದು ಶ್ರುತವಾಗುತ್ತಿರುವುದರಿಂದ.

## ಸಮಾಧಾನ

**ಸೂ.ರ.:– एवं च कर्तृत्वं करणत्वं चेति श्रुतिवलेन जीवस्य कर्तृत्वशक्तेरीश्वराधीनत्वाङ्गीकारात् । ईश्वरस्य कर्तुमकर्तुमन्यथाकर्तुमिति सामर्थ्य-**

सद्भावेन तदिच्छयैव जीवादीनां कर्तृत्वादिसम्पत्तिदर्शनात् । अतः श्रुत्य-विरोधेन समन्वयो युक्त इति सिद्धम् ॥

ಅನು.:- ಕರ್ತೃತ್ವಂ ಕರಣತ್ವಂ ಚ ಸ್ವಭಾವಶ್ಚೇತನಾ ಧೃತಿಃ ।
ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ॥

ಎಂಬುದಾಗಿ ಪೈಂಗಿಶ್ರುತಿಬಲದಿಂದಾಗಿ ಜೀವನ ಕರ್ತೃತ್ವಶಕ್ತಿಯೂ ಈಶ್ವರಾಧೀನ-ವಾಗಿದೆ ಎಂದು ಅಂಗೀಕರಿಸಿದ್ದರಿಂದ, ಈಶ್ವರನಿಗೆ ಮಾಡಲು-ಮಾಡದಿರಲು-ಅನ್ಯಥಾ ಮಾಡಲು ಸಾಮರ್ಥ್ಯ ಇರುವುದರಿಂದ ಆ ಈಶ್ವರನ ಇಚ್ಛೆಯಿಂದಲೇ ಜೀವರಿಗೆ ಕರ್ತೃತ್ವಾದಿ ಸಂಪತ್ತಿ ಕೂಡುತ್ತದೆ. ಆದ್ದರಿಂದ ಜೀವನಿಗೆ ಕರ್ತೃತ್ವ ಹೇಳಿದರೆ ಶ್ರುತಿವಿರೋಧ ಬರುವುದಿಲ್ಲವಾದ್ದರಿಂದ ವಿಷ್ಣುವಿನಲ್ಲಿ ಕಾರಯಿತೃತ್ವಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 42

**ಆಕ್ಷೇಪ**

ಸೂ.ರ.:- नन्वस्मिन्पक्षेऽपि दोष उक्तः । यदि कर्तृत्वशक्ति-रीश्वराधीना तर्हि तस्यैव कर्तृत्वं न जीवस्य दारुप्रतिमावदन्याधीनस्येति पुनः शास्त्रवैयर्थ्यापात इति प्राप्ते पराकुर्वत्सूत्रमाह ॥

ಅನು.:- ಈ ಎರಡನೇ ಪಕ್ಷದಲ್ಲಿಯೂ ಸಹ ದೋಷವನ್ನು ಹೇಳಿಯಾಗಿದೆ. ಜೀವನ ಕರ್ತೃತ್ವಶಕ್ತಿಯು ಒಂದುವೇಳೆ ಈಶ್ವರಾಧೀನವಾಗುವುದಾದರೆ ಹಾಗಾದರೆ ಈಶ್ವರನಿಗೇನೇ ಕರ್ತೃತ್ವ ಇರುವುದು, ಜೀವನಿಗೆ ಕರ್ತೃತ್ವ ಇಲ್ಲ ಎಂದಾಗಬೇಕಾದ ಅತಿಪ್ರಸಂಗ ಬರುತ್ತದೆ-ಯಲ್ಲವೇ? ಹಾಗಾಗಿ ಪುನಃ ಶಾಸ್ತ್ರವೈಯರ್ಥ್ಯ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ कृतप्रयत्नापेक्षस्तु विहितप्रतिषेधावैयर्थ्यादिभ्यः ॐ**

**(२.३.४२)**

ಅನು.:- ಯತಃ=ಯಾವ ಕಾರಣ, ಪರಮಾತ್ಮಾ = ಪರಮಾತ್ಮನು, ವಿಹಿತ- ಪ್ರತಿಷೇಧಾ ವೈಯರ್ಥ್ಯಾದಿಭ್ಯಃ = ವಿಧಿನಿಷೇಧರೂಪಶಾಸ್ತ್ರಕ್ಕೆ ವೈಯರ್ಥ್ಯಪರಿಹಾರಕ್ಕಾಗಿ ಮತ್ತು ತನಗೆ ವೈಷಮ್ಯನೈರ್ಘೃಣ್ಯ ಪರಿಹಾರಕ್ಕಾಗಿಯೂ, ಕೃತಪ್ರಯತ್ನಾಪೇಕ್ಷಃ = ಜೀವನ ಕರ್ಮ-ಪ್ರಯತ್ನ-

ಯೋಗ್ಯತೆಗಳನ್ನು ಅಪೇಕ್ಷಿಸುವವನಾಗಿಯೇ ಜೀವಂ ಪ್ರೇರಯತಿ = ಜೀವನನ್ನು ಪ್ರೇರಿಸು-ತ್ತಾನೆ. ಹೊರತು ಯಾವುದನ್ನೂ ಅಪೇಕ್ಷಿಸದೇ ಪ್ರೇರಿಸುವುದಿಲ್ಲ.

ಆದ್ದರಿಂದ ಜೀವನ ಕರ್ತೃತ್ವಶಕ್ತಿಯು ಈಶ್ವರಾಧೀನವಾಗಿದ್ದರೂ ಸಹ ಈಶ್ವರನಿಗೆ ಅಪೇಕ್ಷಿತಕೃತಿಮತ್ತ್ವವು ಇದ್ದೇ ಇದೆ.

**ಸೂ.ರ.:– एवं च विधिनिषेधशास्त्रवैयर्थ्यपरिहाराय स्वस्य वैषम्य-नैर्घृण्यपरिहाराय च जीवकर्मप्रयत्नयोग्यतापेक्ष्य एवेश्वरः जीवं प्रेरयतीत्यङ्गीकारात् । पूर्वकर्म प्रयत्नं चेति (भविष्यत्पर्वणि) वचनात् ।**

जीवस्य विधिवाक्यतदर्थज्ञाने तज्जन्यसाधनफलेच्छयोः साधनविषयककृतौ च भगवत्प्रेर्यत्वेऽपि न विधिविषयत्वकर्मफलभाक्त्वयोरनुपपत्तिरिति न शास्त्रप्रवृत्तिवैयर्थ्यम् । राजभटाद्युत्पादितेच्छादिमतोऽपि त्रिवर्णादिर्विष्टिगृहीतस्य च सन्ध्योपासनादौ भार-वहनादौ च विध्यादिदर्शनेन तद्वदेवास्वतन्त्रकर्तृतामात्रेण तयोरुपपत्तेः ।

**ಸೂ.ರ.:– अतः श्रुत्यविरोधेन जीवकर्तृत्वसिद्धेर्युक्तः श्रुतिसमन्वय इति सिद्धम् ॥**

**ಅನು.:–"ಪೂರ್ವಕರ್ಮ ಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯ ತು ।**
**ಈಶ್ವರಃ ಕಾರಯೇತ್ಸರ್ವಂ ತಚ್ಚೇಶ್ವರಕೃತಂ ಸ್ವಯಮ್ ॥**
**ಅನಾದಿತ್ವಾದದೋಷಶ್ಚ ಪೂರ್ಣಶಕ್ತಿತ್ವತೋ ಹರೇಃ" ॥ ಇತಿ ಭವಿಷ್ಯತ್ಪರ್ವಣಿ**

ಎಂಬುದಾಗಿ ಪುರಾಣವಚನ ಇರುವುದರಿಂದ ವಿಧಿನಿಷೇಧರೂಪಶಾಸ್ತ್ರಕ್ಕೆ ವೈಯರ್ಥ್ಯ ಪರಿಹಾರಕ್ಕಾಗಿ ಮತ್ತು ತನಗೆ ವೈಷಮ್ಯ-ನೈರ್ಘೃಣ್ಯ ಪರಿಹಾರಕ್ಕಾಗಿಯೂ ಜೀವರ ಕರ್ಮ-ಪ್ರಯತ್ನ-ಯೋಗ್ಯತೆಗಳನ್ನು ಅಪೇಕ್ಷಿಸಿಯೇ ಭಗವಂತನು ಜೀವನನ್ನು ಪ್ರೇರಿಸುತ್ತಾನೆ. ಹೊರತು ಯಾವುದನ್ನೂ ಅಪೇಕ್ಷಿಸದೇ ಪ್ರೇರಿಸುವುದಿಲ್ಲ.

ಆದ್ದರಿಂದ ಜೀವನ ಕರ್ತೃತ್ವಶಕ್ತಿಯು ಈಶ್ವರಾಧೀನವಾದರೂ ಶಾಸ್ತ್ರವೈಯರ್ಥ್ಯಪ್ರಸಕ್ತಿ ಇಲ್ಲ. ಹಾಗಾಗಿ ಜೀವನಿಗೆ ಕರ್ತೃತ್ವ ಹೇಳಿದರೆ ಶ್ರುತಿವಿರೋಧ ಬಾರದಕಾರಣ ವಿಷ್ಣುವಿನಲ್ಲಿ ಕಾರಯಿತೃತ್ವಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಕರ್ತೃತ್ವಾಧಿಕರಣವು ಮುಗಿಯಿತು.

ಅಧಿಕರಣ – 18

## ಅಂಶಾಧಿಕರಣ

### ಸಂಗತಿ

**ಸೂ.ರ.:– अत्र जीवविषये श्रुतिविरोधः परिह्रियते ।**

**ಅನು.:–** ಜೀವನ ವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಹದಿನೆಂಟನೇ ಈ ಅಂಶಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु न जीवः परमेश्वरांशः । तत्र प्रमाणाभावात् । न चांशा एव हीमे जीवा इति (गौपवन.) श्रुतेः प्रामाण्यम् । नैवांश इति (भाल्लवेय.) श्रुतिबाधितत्वेन स्वार्थनिश्चायकत्वाभावेन तच्छुतेर-प्रामाण्यात् । जीवेशयोर्भेदस्य साधितत्वेन भिन्नस्य चांशत्वायोगात् । असम्भवदर्थायाः प्राचीनश्रुतेः सम्भवदर्थाया नैवांश इति श्रुतेः प्रबलत्वेन बाधकत्वात् । एवं चांशत्वश्रुतेरप्रामाण्यान्न तत्समन्वयो युक्त इति ॥**

**ಅನು.:–** ಜೀವನು ಪರಮೇಶ್ವರನ ಅಂಶನಾಗಲು ಸಾಧ್ಯವಿಲ್ಲ. ಏಕೆಂದರೆ – ಜೀವನು ಪರಮೇಶ್ವರನ ಅಂಶನಾಗಿದ್ದಾನೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ-ವಾದ್ದರಿಂದ.

ಪ್ರಮಾಣವಿಲ್ಲ ಎಂದು ಏಕೆ ಹೇಳುತ್ತೀರಿ?

**ಅಂಶಾ ಏವ ಹೀಮೇ ಜೀವಾ ಅಂಶೀ ಹಿ ಪರಮೇಶ್ವರಃ ।**
**ಸ್ವಯಮಂಶೈರಿದಂ ಸರ್ವಂ ಕಾರಯತ್ಯಚಲೋ ಹರಿಃ ॥**

ಎಂಬ ಗೌಪವನಶ್ರುತಿಯೇ ಪ್ರಮಾಣವಾಗಿ ಇದೆಯಲ್ಲ? ಎಂದರೆ, ಅದು ಸರಿಯಲ್ಲ. ಈ ಗೌಪವನಶ್ರುತಿಯು

**ನೈವಾಂಶೋ ನ ಸಂಬಂಧೋ ನಾಪೇಕ್ಷ್ಯೋ ಜೀವಃ ಪರಸ್ಯ ।**
**ತಥಾಪಿ ತು ಯಥಾಯೋಗಂ ಫಲದಃ ಪ್ರಭುರೇಕರಾಟ್ ॥**
**ನ ನಿಯಮ್ಯಃ ಸ ಕಸ್ಯಾಪಿ ಸ ಸರ್ವಸ್ಯ ನಿಯಾಮಕಃ ॥**

ಎಂಬ ಭಾಲ್ಲವೇಯಶ್ರುತಿಯಿಂದ ಬಾಧಿತವಾಗುವುದರಿಂದ ಸ್ವಾರ್ಥನಿಶ್ಚಾಯಕ-ವಾಗದ ಕಾರಣ ಗೌಪವನಶ್ರುತಿಗೆ ಪ್ರಾಮಾಣ್ಯವು ಉಪಪನ್ನವಾಗುವುದಿಲ್ಲ.

ಜೀವ-ಬ್ರಹ್ಮರಲ್ಲಿ ಭೇದವನ್ನು ಸಾಧಿಸಿದ್ದರಿಂದ ಭಿನ್ನನಾದ ಜೀವನಿಗೆ ಅಂಶತ್ವವು ಉಪಪನ್ನವಾಗುವುದಿಲ್ಲ. ಅಸಂಭಾವಿತವಾದ ಅರ್ಥವನ್ನು ಹೇಳುವ ಗೌಪವನಶ್ರುತಿಗಿಂತಲೂ ಸಂಭಾವಿತಾರ್ಥಪ್ರತಿಪಾದಕವಾದ ಭಾಲ್ಲವೇಯಶ್ರುತಿಯು ಪ್ರಬಲವಾಗಿರುವ ಕಾರಣ ಬಾಧಕವಾಗುತ್ತದೆ. ಹೀಗಾಗಿ ಭಾಲ್ಲವೇಯಶ್ರುತಿಯಿಂದ ಬಾಧಿತವಾಗುವ ಕಾರಣ ಗೌಪವನಶ್ರುತಿಯು ಪ್ರಮಾಣವಾಗುವುದಿಲ್ಲವಾದ್ದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ.

**ಸೂ.ರ.:– यद्वा । टीकोक्तरीत्या अनिर्णायकमेव श्रुतिद्वयम् । परस्परप्रतिबन्धात् । न च व्रीहियवश्रुत्योरिव विकल्पो युक्तः । वस्तुविकल्पायोगात् । न च देशकालभेदेन व्यवस्थितविकल्पो युक्तः । विशेषप्रमाणाभावात् । अतः श्रुतिद्वयस्याप्रामाण्यमेवेति नोक्तयुक्तयो युक्ता इति प्राप्ते सूत्रमाह ॥**

**ಅನು.:–** ಅಥವಾ ಟೀಕೆಯಲ್ಲಿ ಹೇಳಿದ ಪ್ರಕಾರ ಎರಡೂ ಶ್ರುತಿಗಳಲ್ಲಿ ಪರಸ್ಪರ ಪ್ರತಿಬಂಧ ಇರುವುದರಿಂದ ಎರಡೂ ಶ್ರುತಿಗಳು ಅನಿರ್ಣಾಯಕವೇ ಆಗುತ್ತವೆ. ವ್ರೀಹಿ-ಯವ ಶ್ರುತಿಗಳಂತೆ ವಿಕಲ್ಪವನ್ನು ಹೇಳಲೂ ಬರುವುದಿಲ್ಲ. ಹಾಗೆ ವಿಕಲ್ಪ ಹೇಳಿದರೆ ವಸ್ತುವಿಕಲ್ಪ ಹೇಳಿದಂತಾಗುವುದರಿಂದ ವಸ್ತುವಿಕಲ್ಪವು ಕೂಡುವುದಿಲ್ಲ. ದೇಶ-ಕಾಲಭೇದದಿಂದ ವ್ಯವಸ್ಥಿತವಿಕಲ್ಪವು ಹೇಳಬಹುದಲ್ಲ? ಎಂದರೆ ಅದೂ ಸರಿಯಲ್ಲ. ಆ ವಿಷಯದಲ್ಲಿ ವಿಶೇಷ-ಪ್ರಮಾಣ ಇಲ್ಲವಾದ್ದರಿಂದ. ಆದ್ದರಿಂದ ಎರಡೂ ಶ್ರುತಿಗಳು ಅಪ್ರಮಾಣವೇ ಆದ್ದರಿಂದ ಯುಕ್ತಿಗಳು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अंशो नानाव्यपदेशादन्यथा चापि दाशकितवादित्वमधीयत एके ॐ (२.३.४३)**

ಜೀವಃ = ಜೀವನು, ಪರಮಾತ್ಮನಃ ಅಂಶಃ ಏವ = ಪರಮಾತ್ಮನ ಅಂಶನೇ ಆಗಿದ್ದಾನೆ. ಪಿತಾ-ಪುತ್ರತ್ವಾದಿ ಸಂಬಂಧದಿಂದ, ಕೇವಲ ತದುಪಜೀವಕತ್ವರೂಪ ಅಂಶತ್ವೇನ ಅಂಶನೇ ಆಗಿದ್ದಾನೆ ಹೊರತು ಎಂದಿಗೂ ಈಶ್ವರನಂತೆ ಉಪಜೀವ್ಯನಲ್ಲ.

ಕುತಃ = ಯಾಕೆ?, ನಾನಾವ್ಯಪದೇಶಾತ್ = ಮಾಂ ರಕ್ಷತು ಇತ್ಯಾದಿಗಳಲ್ಲಿ ಪಿತೃತ್ವ-ಭ್ರಾತೃತ್ವಾದಿ ನಾನಾಪ್ರಕಾರದಿಂದ ಜೀವನಿಗೆ ಈಶಸಂಬಂಧಿತ್ವವನ್ನು ಹೇಳಿದ್ದರಿಂದ, ಕಿಂಚ = ಮತ್ತು, ಯತಃ = ಯಾವ ಕಾರಣ, ಏಕೇ = ಕೆಲವು ಶಾಖಿಗಳು, "ಅನ್ಯಃ ಪರೋಽನ್ಯೋ ಜೀವಃ" (ಕಾಷಾಯಣಶ್ರುತಿ) ಇತ್ಯಾದಿಪ್ರಮಾಣಗಳಿಂದ, ಏನಂ = ಈ ಜೀವನನ್ನು, ಪರಾತ್, ಅನ್ಯಥಾ = ಈಶ್ವರನಿಂದ ಭಿನ್ನನಾಗಿ, ಅಧೀಯತೇ = ಹೇಳುತ್ತಾರೆಯೋ,

ಯತಃ = ಯಾವ ಕಾರಣ, ಅನ್ಯೇ ಚ ಶಾಖಿನಃ = ಮತ್ತೆ ಕೆಲವು ಶಾಖಿಗಳು, "ಬ್ರಹ್ಮ ದಾಶಾ" ಇತ್ಯಾದಿ ಪ್ರಮಾಣಗಳಿಂದ, ಬ್ರಹ್ಮಣಃ = ಪರಮಾತ್ಮನಿಗೆ, ದಾಶಕಿತವಾದಿತ್ವಂ = ದಾಶಕಿತ ಶಬ್ದವಾಚ್ಯವಾದ ಜಾತಿವಿಶೇಷದಿಂದ ಯುಕ್ತರಾದ ಜೀವಭಾವವನ್ನು (ಜೀವರಿಂದ ಅಭೇದವನ್ನು), ಅಧೀಯತೇ = ಹೇಳುತ್ತಾರೆಯೋ, ಆ ಕಾರಣದಿಂದಲೂ ಜೀವನು ಪರಮಾತ್ಮನ ಅಂಶನೇ ಆಗಿದ್ದಾನೆ. (ಭಿನ್ನನೆಂದು ಹೇಳಿದ್ದರಿಂದ ಭೇದವನ್ನು ಒಪ್ಪಿ ಸರ್ವಥಾ ಅಭೇದವು ಬಾಧಿತವಾಗುವುದರಿಂದ ಬ್ರಹ್ಮನ ಅಲ್ಪಸಾದೃಶ್ಯ ಪ್ರಯುಕ್ತವಾಗಿಯೇ ಅಭೇದೋಕ್ತಿ ಎಂದು ಸ್ವೀಕರಿಸಬೇಕಾಗುತ್ತದೆ.)

## ಸಿದ್ಧಾಂತ

**ಸೂ.ರ.:– एवं चांश एव जीवो भगवतः । मां रक्षत्वित्यादि नानाप्रकारेण जीवस्येशसम्बन्धित्वव्यपदेशात् । तत्सम्वन्धित्वस्यैव तदंशरूपत्वात् । अतः श्रुत्यविरोधेन जीवस्येश्वरांशत्वोपपत्तेर्युक्तः समन्वय इति सिद्धम् ॥**

**ಅನು.:–** ಜೀವನು ಭಗವಂತನ ಅಂಶನೇ ಆಗಿದ್ದಾನೆ. 'ಮಾಂ ರಕ್ಷತು' ಇತ್ಯಾದಿಗಳಲ್ಲಿ ಪಿತೃತ್ವ-ಪುತ್ರತ್ವಾದಿ ನಾನಾಪ್ರಕಾರದಿಂದ ಜೀವನಿಗೆ ಈಶಸಂಬಂಧಿತ್ವವನ್ನು ಹೇಳಿದ್ದರಿಂದ.

ಈಶಸಂಬಂಧಿತ್ವವನ್ನು ಹೇಳಿದ್ದಾರೆ, ಅಂಶತ್ವವನ್ನು ಹೇಳಿಲ್ಲವಲ್ಲ? ಎನ್ನುವಂತಿಲ್ಲ. ಈಶಸಂಬಂಧಿತ್ವವೇ ಅಂಶತ್ವರೂಪವಾಗಿದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜೀವನಿಗೆ ಈಶ್ವರಾಂಶತ್ವವು ಉಪಪನ್ನ-

ವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 44

**ಸೂ.ರ.:– एवमुपपत्त्या जीवस्येश्वरांशत्वमुपपाद्य श्रुत्याऽपि तत्साधयत्सूत्रमाचरति ॥**

**ಅನು.:–** ಈ ರೀತಿಯಾಗಿ ಉಪಪತ್ತಿಯಿಂದ ಜೀವನಿಗೆ ಈಶ್ವರಾಂಶತ್ವವನ್ನು ಉಪಪಾದನೆ ಮಾಡಿ, ಪ್ರಕೃತ ಶ್ರುತಿಯಿಂದಲೂ ಸಹ ಜೀವನಿಗೆ ಈಶ್ವರಾಂಶತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ मन्त्रवर्णात् ॐ (२.३.४४)**

ಮಂತ್ರವರ್ಣಾತ್ = ಪಾದೋಽಸ್ಯ ಎಂಬ ಶ್ರುತಿ ಇರುವುದರಿಂದಲೂ ಸಹ ಜೀವನು ಪರಮಾತ್ಮನ ಅಂಶನಾಗಿದ್ದಾನೆ.

**ಸೂ.ರ.:– एवं च पादोऽस्य विश्वा भूतानीति (ऋ.१०-९०-३) मन्त्रवर्णात्सर्वे जीवा अस्य परमात्मनोंऽशा इत्युक्तत्वात् । ततश्च जीवस्येश्वरांशत्वोपपत्तेर्युक्तो हरौ श्रुतिसमन्वय इति सिद्धम् ॥**

**ಅನು.:–** 'ಪಾದೋಽಸ್ಯ ವಿಶ್ವಾ ಭೂತಾನಿ' (ಋ. 10–90–3) ಎಂಬುದಾಗಿ ಶ್ರುತಿಯಲ್ಲಿ ಎಲ್ಲ ಜೀವರೂ ಪರಮಾತ್ಮನ ಅಂಶರು ಎಂದು ಹೇಳಿದ್ದರಿಂದ, ಜೀವರಿಗೆ ಈಶ್ವರಾಂಶತ್ವವು ಉಪಪನ್ನವಾಗುವ ಕಾರಣ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 45

**ಸೂ.ರ.:– स्मृत्याऽपि जीवस्य परमात्मांशत्वं साधयत्सूत्रमुपन्यस्यति ॥**

ಜೀವನಿಗೆ ಪರಮಾತ್ಮಾಂಶತ್ವವನ್ನು ಸ್ಮೃತಿಯಿಂದಲೂ ಸಾಧಿಸುವ ಸೂತ್ರವನ್ನು ಹೇಳುತ್ತಾರೆ –

## ॐ अपि स्मर्यते ॐ (२.३.४५)

ಸ್ಮರ್ಯತೇ ಅಪಿ = ಜೀವನಿಗೆ ಅಂಶತ್ವವು ಕೃಷ್ಣಾದಿಗಳಿಂದ ಮಮೈವಾಂಶಃ (ಭ.ಗೀ. 15-7) ಎಂಬ ಸ್ಮೃತಿಯಿಂದಲೂ ಹೇಳಲ್ಪಟ್ಟಿದೆ ಕೂಡ.

**ಸೂ.ರ.:- एवं च ममैवांश इति स्मृतावीश्वरो जीवस्य शरीरावाप्तौ मूलकारणादिन्द्रियाणि कर्षति, तदुत्क्रमणे तु शरीरात् कर्षति स्थितौ तु गोलकादिभ्य कर्षति इति जीवस्य परमात्मांशत्वेनोक्तत्वात् । अतो जीवस्येश्वरांशत्वसिद्धेर्युक्तः समन्वय इति सिद्धम् ॥**

**ಅನು.:-** 'ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ।' (ಭ.ಗೀ. 15-7) ಎಂಬುದಾಗಿ ಶ್ರೀಕೃಷ್ಣನೇ ಗೀತೆಯಲ್ಲಿ ಜೀವನಿಗೆ ಅಂಶತ್ವವನ್ನು ಹೇಳಿದ್ದಾನೆ. ಈ ಜೀವಚ್ಛರೀರದಲ್ಲಿ ಜೀವ ಎಂಬ ನನ್ನ ಅಂಶವು ಇದೆ ಎಂಬುದಾಗಿ ಜೀವನಿಗೆ ಸ್ವಾಂಶತ್ವವನ್ನು ಹೇಳಿದ್ದಾನೆ ಕೃಷ್ಣ

ಹೀಗೆ ಸ್ಮೃತಿಯಿಂದಲೂ ಜೀವನಿಗೆ ಈಶ್ವರಾಂಶತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 46

### ಆಕ್ಷೇಪ

**ಸೂ.ರ.:- ननु न युक्तं जीवस्येशांशत्वम् । तथा सत्यंशत्वा-विशेषाज्जीवानां मस्त्यादिसाम्यापातात् । अनंशत्वश्रुतिविरोधाच्चेत्याशंकां पराकुर्वत्सूत्रमुपन्यस्यति ॥**

**ಅನು.:-** ಜೀವನಿಗೆ ಈಶ್ವರಾಂಶತ್ವವನ್ನು ಹೇಳುವುದು ಯುಕ್ತವಲ್ಲ. ಹಾಗೆ ಒಂದುವೇಳೆ ಜೀವನು ಈಶ್ವರಾಂಶನು ಎಂದಾದರೆ, ಅಂಶತ್ವ ಅವಿಶೇಷಾತ್ (ಅಂಶತ್ವವು ಸಮಾನ-ವಾದ್ದರಿಂದ) ಜೀವರಿಗೆ ಮತ್ಸ್ಯಾದಿಸಾಮ್ಯ ಬರಬೇಕಾದ ಅತಿಪ್ರಸಂಗ ಬರುತ್ತದೆ. ಮತ್ತು ಜೀವನಿಗೆ ಅನಂಶತ್ವವನ್ನು (ಅಂಶತ್ವಾಭಾವವನ್ನು) ಹೇಳುವ ಶ್ರುತಿಯ ವಿರೋಧವೂ ಬರಬೇಕಾಗುತ್ತದೆ. ಆದ್ದರಿಂದ ಜೀವನು ಈಶ್ವರಾಂಶ ಎಂದು ಹೇಳುವುದು ಸರಿಯಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ प्रकाशादिवन्नैवं परः ॐ (२.३.४६)

ಜೀವಃ=ಜೀವನು, ಪ್ರಕಾಶಾದಿವತ್=ಖದ್ಯೋತಾದ್ಯಭಿಮಾನಿತೇಜೋಂಶದಂತೆ, ಪರಮಾತ್ಮನೋ ಭಿನ್ನಾಂಶಃ=ಪರಮಾತ್ಮನ ಭಿನ್ನಾಂಶನಾಗಿದ್ದಾನೆ, ಪರಃ=ಮತ್ಸ್ಯಾದಿ-ರೂಪಿಯಾದ ವಿಷ್ಣುವಾದರೂ ಸಹ, ನೈವಂ=ಜೀವನಂತೆ ಭಿನ್ನಾಂಶನಲ್ಲ ಕಿಂತು ಪ್ರಕಾಶಾದಿ-ವತ್=ಕಾಲಾಗ್ನ್ಯಾದ್ಯಭಿಮಾನಿ ತೇಜೋಂಶದಂತೆ ಪರಮಾತ್ಮನ ಅಭಿನ್ನಾಂಶನೇ ಆಗಿದ್ದಾನೆ.

### ಸಮಾಧಾನ

**ಸೂ.ರ.:– एवं चानंशत्वश्रुतेर्मत्स्यादिवत्स्वरूपांशत्वाभावपरत्वात् । अत एव न मत्स्यादिभिः सुखादिसाम्यम् । न चांशत्वोक्तिसाम्येन जीवानां भिन्नांशत्वं मत्स्यादीनां स्वरूपांशत्वमिति वैषम्यमित्ययुक्तं स्यात् । कालाग्निखद्योतादेस्तेजोंशत्वोक्तिसाम्येऽपि स्वरूपांशत्वभिन्नांशत्वरूप-वैषम्यदर्शनात् । अतो जीवस्येशांशत्वसिद्धेर्युक्तो हरौ श्रुतिसमन्वय इति सिद्धम् ॥**

**ಅನು.:–** ಜೀವರಿಗೆ ಅನಂಶತ್ವವನ್ನು ಹೇಳುವ ಶ್ರುತಿಯು ಮತ್ಸ್ಯಾದಿಗಳಂತೆ ಸ್ವರೂಪಾಂಶರಲ್ಲ ಎಂದು ಪ್ರತಿಪಾದಿಸುತ್ತಿದೆ. ಆದ್ದರಿಂದಲೇ ಜೀವರಿಗೆ ಮತ್ಸ್ಯಾದಿಗಳಿಂದ ಸುಖಾದಿಸಾಮ್ಯ ಇಲ್ಲ.

ಅಂಶತ್ವೋಕ್ತಿಸಾಮ್ಯದಿಂದಾಗಿ ಜೀವರಿಗೆ ಭಿನ್ನಾಂಶತ್ವ, ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವ ಎಂಬ ವೈಷಮ್ಯ ಸರಿಯಲ್ಲ ಎಂದು ಹೇಳುವುದು ಸರಿಯಲ್ಲ. ಕಾಲಾಗ್ನಿ-ಖದ್ಯೋತಾದಿಗಳಿಗೆ ತೇಜೋಂಶತ್ವೋಕ್ತಿಸಾಮ್ಯ ಇದ್ದರೂ ಸಹ ಸ್ವರೂಪಾಂಶತ್ವ-ಭಿನ್ನಾಂಶತ್ವ ರೂಪ ವೈಷಮ್ಯ ಕಂಡಿದೆ. ಅದರಂತೆಯೇ ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವ, ಜೀವರಿಗೆ ಭಿನ್ನಾಂಶತ್ವಗಳು ಉಪಪನ್ನವಾಗುತ್ತವೆ.

ಆದ್ದರಿಂದ ಜೀವರಿಗೆ ಈಶ್ವರಾಂಶತ್ವವು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 47

## ಆಕ್ಷೇಪ

ಸೂ.ರ.:– ननु दृष्टान्तमात्रस्यानिर्णायकत्वेन तत्र कालाग्निखद्योतादीनामेकप्रकारांशत्वाभावेऽपि मत्स्यादीनां जीवानां च स्वरूपांशत्वमभेदश्च किं न स्यादित्याशङ्कां पराकुर्वत्सूत्रमुपन्यस्यति ॥

ಅನು.:– ಕೇವಲ ದೃಷ್ಟಾಂತವು ನಿರ್ಣಾಯಕವಲ್ಲದ ಕಾರಣ ಅಲ್ಲಿ ಕಾಲಾಗ್ನಿ-ಖದ್ಯೋತಾದಿಗಳಿಗೆ ಏಕಪ್ರಕಾರಾಂಶತ್ವ ಇಲ್ಲದೇ ಹೋದರೂ ಸಹ ಮತ್ಸ್ಯಾದಿಗಳಿಗೆ ಮತ್ತು ಜೀವರಿಗೆ ಸ್ವರೂಪಾಂಶತ್ವವು ಹಾಗೂ ಅಭೇದವು ಯಾಕೆ ಆಗಬಾರದು? (ಬರಬಾರದು?) ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ स्मरन्ति च ॐ (२.३.४७)**

ಸ್ಮರಂತಿ ಚ = ಸ್ಮೃತಿಕಾರರು ಜೀವ-ಈಶ್ವರರಿಗೆ, ಏತೇ ಸ್ವಾಂಶಕಲಾಃ (ಭಾಗ 1-3-28) ಇತ್ಯಾದಿಸ್ಮೃತಿಯಿಂದ ಭಿನ್ನಾಂಶತ್ವ-ಅಭಿನ್ನಾಂಶತ್ವಗಳನ್ನು ಹೇಳುತ್ತಾರೆ ಕೂಡ.

## ಸಮಾಧಾನ

ಸೂ.ರ.:– एवं च भागवत एते स्वांशकलाः पुंस इत्यादिना वाराहादीनामभिन्नांशत्वेनोक्तत्वात् । अतः परं यदव्यक्तमिति (भागवते. १-३-३२) जीवानां भिन्नांशत्वाभिधानाच्च । अपि च स्वांशश्चाथो विभिन्नांश इति वचनेन केवलमसंसारित्वसंसारित्वाभ्यां रक्षत्वारक्षत्वाभ्यां मत्स्यादीनां जीवानां चांशिनोऽभेदभेदावसाम्यं च किंतु मत्स्यादीनां स्वरूपांशलक्षणयुक्तत्वाज्जीवानां तु भिन्नांशलक्षणयोगित्वादंशिना भेदाभेदावसाम्यं चेति स्वरूपास्वरूपांशविभागपूर्वकं तयोर्लक्षणस्योक्तत्वात् । अतो जीवस्येशांशत्वसिद्धेर्युक्तः समन्वय इति सिद्धम् ॥

ಅನು.:– ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ಸ್ವಯಮ್ । (ಭಾಗ 1-3-28)

ಎಂಬುದಾಗಿ ಭಾಗವತದಲ್ಲಿ ವಾರಾಹಾದಿಗಳಿಗೆ ಅಭಿನ್ನಾಂಶತ್ವವನ್ನು ಹೇಳಲಾಗಿದೆ. ಮತ್ತು

**ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।**
**ಅದೃಷ್ಟಾಶ್ರುತವಸ್ತುತ್ವಾತ್ಸ ಜೀವೋ ಯಃ ಪುನರ್ಭವಃ ॥** (ಭಾಗ 1-3-32)

ಎಂಬುದಾಗಿ ಅಲ್ಲಿಯೇ ಮುಂದೆ ಜೀವರಿಗೆ ಭಿನ್ನಾಂಶತ್ವವನ್ನು ಹೇಳಲಾಗಿದೆ. ಆದ್ದರಿಂದ ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವ, ಜೀವರಿಗೆ ಭಿನ್ನಾಂಶತ್ವವು ಉಪಪನ್ನವಾಗಿದೆ. ಮತ್ತು

**ಸ್ವಾಂಶಶ್ಚಾಥೋ ವಿಭಿನ್ನಾಂಶ ಇತಿ ದ್ವೇಧಾಽಂಶ ಇಷ್ಯತೇ ।**
**ಅಂಶಿನೋ ಯತ್ತು ಸಾಮರ್ಥ್ಯಂ ಯತ್ಸ್ವರೂಪಂ ಯಥಾಸ್ಥಿತಿಃ ॥**

**ತದೇವ ನಾಣುಮಾತ್ರೋಽಪಿ ಭೇದಃ ಸ್ವಾಂಶಾಂಶಿನೋಃ ಕ್ವಚಿತ್ ।**
**ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್ಕಿಂಚಿತ್ಸಾದೃಶ್ಯಮಾತ್ರಯುಕ್ ॥**

ಎಂಬುದಾಗಿ ವರಾಹಪುರಾಣದಲ್ಲಿ ಹೇಳಿದಂತೆ ಕೇವಲ ಅಸಂಸಾರಿತ್ವ- ಸಂಸಾರಿತ್ವ-ಗಳಿಂದ ರಕ್ಷತ್ವ-ಅರಕ್ಷತ್ವಗಳಿಂದ ಮತ್ಸ್ಯಾದಿಗಳಿಗೆ ಮತ್ತು ಜೀವರಿಗೆ ಅಂಶಿಯಿಂದ ಅಭೇದ-ಭೇದಗಳು ಹಾಗೂ ಸಾಮ್ಯಾಭಾವ ಇದೆ ಎಂದಲ್ಲ. ಕಿಂತು ಮತ್ಸ್ಯಾದಿಗಳು ಸ್ವರೂಪಾಂಶಕ್ಕೆ ಹೇಳಿದ ಲಕ್ಷಣದಿಂದ (ಅಂಶಿಗೆ ಇರುವ ಸಾಮರ್ಥ್ಯವು ಸ್ವರೂಪಾಂಶದಲ್ಲಿ ಅಣುಮಾತ್ರವೂ ವ್ಯತ್ಯಾಸವಾಗುವುದಿಲ್ಲ ಎಂಬ ಲಕ್ಷಣದಿಂದ) ವಿಶಿಷ್ಟವಾದ್ದರಿಂದ ಮತ್ತು ಜೀವರು ಆ ಸ್ವರೂಪಾಂಶಲಕ್ಷಣದಿಂದ ಯುಕ್ತರಾಗದೇ ಭಿನ್ನಾಂಶಕ್ಕೆ ಹೇಳಿದ ಲಕ್ಷಣದಿಂದ (ವಿಭಿನ್ನಾಂಶವು ಅಲ್ಪಶಕ್ತಿಯುಳ್ಳದ್ದಾಗಿರುತ್ತದೆ ಎಂದು ಹೇಳಿದ ಲಕ್ಷಣದಿಂದ) ವಿಶಿಷ್ಟರಾದ್ದರಿಂದ ಅಭೇದ-ಭೇದಗಳು, ಸಾಮ್ಯಾಭಾವವು ಉಪಪನ್ನವಾಗುತ್ತವೆ. ಹೀಗೆ ಸ್ವರೂಪಾಂಶ-ಭಿನ್ನಾಂಶ ವಿಭಾಗಪೂರ್ವಕವಾಗಿ ಅವುಗಳ ಲಕ್ಷಣಗಳನ್ನು ಹೇಳಿದ್ದರಿಂದ ಮತ್ಸ್ಯಾದಿಗಳಿಗೆ ಅಭೇದ, ಜೀವರಿಗೆ ಭೇದವು ಉಪಪನ್ನ.

ಆದ್ದರಿಂದ ಜೀವರಿಗೆ ಈಶ್ವರಾಂಶತ್ವವು ಉಪಪನ್ನವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 48

**ಸೂ.ರ.:- एवं जीवानां मत्स्यादीनां चांशिना क्रमेण भेदाभेद-सद्भावान्नैकविधतेत्युक्तम् । युक्त्यन्तरेण चैकविधतां पराकुर्वत्सूत्र-मुपन्यस्यति ॥**

**ಅನು.:–** ಜೀವರಿಗೆ ಹಾಗೂ ಮತ್ಸ್ಯಾದಿಗಳಿಗೆ ಅಂಶಿಯಿಂದ ಕ್ರಮವಾಗಿ ಭೇದ-ಅಭೇದಗಳು ಇರುವುದರಿಂದ ಇಬ್ಬರಲ್ಲಿಯೂ ಏಕವಿಧತ್ವ ಇಲ್ಲ ಎಂದು ಹೇಳಿಯಾಯಿತು. ಪ್ರಕೃತ ಮತ್ತೊಂದು ಯುಕ್ತಿಯಿಂದಲೂ ಸಹ ಏಕವಿಧತ್ವವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अनुज्ञापरिहारौ देहसम्बन्धाज्ज्योतिरादिवत् ॐ (२.३.४८)**

ಯತ್ = ಯಾವ ಕಾರಣ, ಜ್ಯೋತಿರಾದಿವತ್ = ಚಕ್ಷುರ್ಗೋಲಕಾದಿಸ್ಥಿತ ಅಪಭ್ರಷ್ಟ-ದೇವತೆಗೆ ತತ್ತದ್ದೇಹಸಂಬಂಧದಿಂದಾಗಿ ಸೂರ್ಯ–ವರುಣಾದ್ಯನುಜ್ಞೆಯಿಂದ ಪ್ರವೃತ್ತ್ಯಾದಿ-ಗಳು ಕೂಡುವಂತೆ, ಜೀವಸ್ಯಾಪಿ = ಜೀವನಿಗೂ ಸಹ, ದೇಹಸಂಬಂಧಾತ್ ಹೇತೋಃ = ತತ್ತದ್ದೇಹಸಂಬಂಧ ಕಾರಣದಿಂದ, ಅನುಜ್ಞಾಪರಿಹಾರೌ = ಪರಮಾತ್ಮನ ಅನುಜ್ಞಾಧೀನ-ವಾದ ಪ್ರವೃತ್ತಿ – ಬಂಧನಿವೃತ್ತಿಗಳು ಆಗುತ್ತವೆ.

ಅದರಂತೆ ಮತ್ಸ್ಯಾದಿಗಳಿಗೆ ಹಾಗಿಲ್ಲ, ಕಿಂತು ಜ್ಯೋತಿರಾದಿವತ್ = ಸೂರ್ಯಪ್ರಭಾ-ದ್ಯಭಿಮಾನಿಯಾದವನಿಗೆ ಹೇಗೆ ತದನಧೀನಪ್ರವೃತ್ತ್ಯಾದಿಮತ್ತ್ವವು ಉಂಟೋ, ಅದೇ ರೀತಿಯಾಗಿ ಮತ್ಸ್ಯಾದಿಗಳಿಗೆ ಈಶ ಅನಧೀನಪ್ರವೃತ್ತ್ಯಾದಿಗಳೇ ಇವೆ.

ಈ ಕಾರಣಕ್ಕಾಗಿಯೂ ಸಹ ಜೀವನು ಪರಮಾತ್ಮನ ಭಿನ್ನಾಂಶನಾಗಿದ್ದಾನೆ. ಮತ್ಸ್ಯಾದಿಗಳು ಅಭಿನ್ನಾಂಶವಾಗಿವೆ ಎಂಬ ವ್ಯವಸ್ಥೆಯು ಸಿದ್ಧವಾಗುತ್ತದೆ.

**ಸೂ.ರ.:– एवं च परमात्माधीनप्रवृत्तिमोक्षाभ्यां जीवस्य भिन्नांशत्वावगतेः । य आत्मानमन्तर इति (माध्यन्दिनायन.) श्रुतेः । वासुदेवः सङ्कर्षण इति (चतुर्वेदशिखायां.) स्मृतेश्च । मत्स्यादिः स्वांश्यधीनप्रवृत्तिर्न भवति । स्वांशिकर्मानिर्मितदेहसम्बन्धात् । वियद्गतप्रकाशाद्यभिमानिवदिति प्रयोगसम्भवात् । जीवानां देहसम्बन्धान्मत्स्यादिवच्छक्त्यभाव ईश्वरानुग्राह्यत्वं तत एव बन्धनिवृत्तिश्च भवेत् । शुक्लं कृष्णमिति (ऐ.आ.२-१-५) श्रुतेः । अतः श्रुत्यविरोधेन जीवस्येशांशत्वोपपत्तेर्युक्तो हरौ श्रुतिसमन्वय इति सिद्धम् ॥**

ಅನು.:– "ಯ ಆತ್ಮಾನಮಂತರೋ ಯಮಯತಿ" ಎಂಬುದಾಗಿ ಮಾಧ್ಯಂದಿನಶ್ರುತಿ ಇರುವುದರಿಂದ, ಮತ್ತು –

"ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋಽನಿರುದ್ಧೋಽಹಂ ಮತ್ಸ್ಯಃ ಕೂರ್ಮೋ ವರಾಹೋ ನಾರಸಿಂಹೋ ವಾಮನೋ ರಾಮೋ ರಾಮಃ ಕೃಷ್ಣೋ ಬುದ್ಧಃ ಕಲ್ಕಿರಹಂ ಶತಧಾಽಹಂ ಸಹಸ್ರಧಾಽಹಮಮಿತೋಽಹಮನಂತೋಽಹಂ ನೈವೇತೇ ಜಾಯಂತೇ ನ ಮ್ರಿಯಂತೇ ನೈಷಾಮನುಜ್ಞಾ ನ ಬಂಧೋ ನ ಮುಕ್ತಿಃ ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾಃ"

ಎಂಬುದಾಗಿ ಚತುರ್ವೇದಶಿಖಾ ಸ್ಮೃತಿಯಲ್ಲಿ ಹೇಳಿದಂತೆ ಜೀವನಿಗೆ ಪರಮಾತ್ಮನ ಅಧೀನವಾದ ಪ್ರವೃತ್ತಿ-ಮೋಕ್ಷಗಳು ಆಗುವುದರಿಂದ ಜೀವನಿಗೆ ಭಿನ್ನಾಂಶತ್ವವು ಉಪಪನ್ನವಾಗುತ್ತದೆ.

ಆದರೆ ಮತ್ಸ್ಯಾದಿಗಳು ಸ್ವಾಂಶ್ಯಧೀನಪ್ರವೃತ್ತಿ ಉಳ್ಳವುಗಳಾಗಿಲ್ಲ.

ಮತ್ಸ್ಯಾದಿಃ, ಸ್ವಾಂಶ್ಯಧೀನಪ್ರವೃತ್ತಿಃ ನ ಭವತಿ, ಸ್ವಾಂಶಿಕರ್ಮಾನಿರ್ಮಿತದೇಹ-ಸಂಬಂಧಾತ್ ।

ಎಂಬುದಾಗಿ ಪ್ರಯೋಗ ಮಾಡಲು ಬರುತ್ತದೆ.

ಇನ್ನು ಜೀವರಿಗೆ ಮಾತ್ರ "ಶುಕ್ಲಂ ಕೃಷ್ಣಂ ಕನೀನಿಕೇ" (ಐ.ಆ. 2-1-5) ಎಂದು ಶ್ರುತಿಯು ಹೇಳುವಂತೆ ಅಂತಹ ದೇಹಸಂಬಂಧ ಇರುವುದರಿಂದ ಮತ್ಸ್ಯಾದಿಗಳಂತೆ ಶಕ್ತಿ ಇಲ್ಲ, ಈಶ್ವರಾನುಗ್ರಾಹ್ಯತ್ವ ಇದೆ, ಈಶ್ವರನಿಂದಲೇ ಜೀವನಿಗೆ ಬಂಧನಿವೃತ್ತಿಯೂ ಆಗುವುದು. ಹೀಗೆ ಈಶ್ವರಾಧೀನವಾದ ಪ್ರವೃತ್ತಿ-ಮೋಕ್ಷಗಳು ಜೀವನಿಗೆ ಇರುವುದರಿಂದ ಜೀವನಿಗೆ ಈಶ್ವರನ ಭಿನ್ನಾಂಶತ್ವವು ಯುಕ್ತವಾಗುತ್ತದೆ.

ಆದ್ದರಿಂದ ಜೀವನಿಗೆ ಈಶ್ವರಾಂಶತ್ವವು ಸಿದ್ಧಿಸುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

## ಸೂತ್ರ - 49

**ಸೂ.ರ.:– युक्त्यन्तरेण मत्स्यादीनां जीवानां चैकविध्यं पराकुर्वत्सूत्र-मुपन्यसति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಸಹ ಮತ್ಸ್ಯಾದಿಗಳಿಗೆ ಜೀವರಿಗೆ ಐಕವಿಧ್ಯವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ असन्ततेश्चाव्यतिकरः ॐ (२.३.४९)**

ಅಸಂತತೇಃ ಚ = ಜೀವರಿಗೆ ಸಮ್ಯಕ್ ಶಕ್ತ್ಯಭಾವ ಇರುವುದರಿಂದ, ಮತ್ಸ್ಯಾದಿಗಳಿಗೆ ಆದರೂ ಅಂತಹ ಸಮ್ಯಕ್‌ಶಕ್ತಿ ಇರುವುದರಿಂದಲೂ ಸಹ, ಅವ್ಯತಿಕರಃ = ಜೀವನು ಭಿನ್ನಾಂಶ, ಈಶ್ವರನು ಅಭಿನ್ನಾಂಶ ಎಂದು ಹೇಳಿದ ಅರ್ಥದಲ್ಲಿ ವ್ಯತ್ಯಾಸ ಇಲ್ಲ.

**ಸೂ.ರ.:– एवं चांशत्वेन श्रुत्युक्तत्वेऽपि मत्स्यादीनां पूर्णशक्तित्वाज्जीवानां तदभावाच्च नोक्तव्यतिकरः । तस्य ह वा एतस्येति (चतुर्वेदशिखायां.) श्रुतौ परावरभेदेन चेतनानां द्वैविध्यमुक्त्वा तत्र नारायणस्य सकलरूपाणां पूर्णत्वादिगुणानभिधाय तदितरेषां जीवानामपूर्णत्वबद्धत्वानित्यमुक्तत्वादीनामुक्तत्वात् । अतः श्रुत्यविरोधेन जीवस्येश्वरांशत्वोपपत्तेर्युक्तः समन्वय इति सिद्धम् ॥**

**ಅನು.:–** ಅಂಶತ್ವೇನ ಶ್ರುತ್ಯುಕ್ತರಾಗಿದ್ದರೂ ಸಹ ಮತ್ಸ್ಯಾದಿಗಳು ಪೂರ್ಣಶಕ್ತಿಯುಳ್ಳವುಗಳಾಗಿವೆ, ಜೀವರು ಅಂತಹ ಪೂರ್ಣಶಕ್ತಿ ಉಳ್ಳವರಾಗಿಲ್ಲ. ಆದ್ದರಿಂದಲೂ ಹಿಂದಿನ ಅರ್ಥಕ್ಕೆ ವ್ಯತ್ಯಾಸ ಇಲ್ಲ.

''ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲ ಇತಿ। ತಸ್ಯ ಹ ವಾ ಏತಸ್ಯ ಪರಮಸ್ಯ ಪಂಚರೂಪಾಣಿ ದಶರೂಪಾಣಿ ಶತರೂಪಾಣಿ ಸಹಸ್ರರೂಪಾಣ್ಯಮಿತರೂಪಾಣಿ । ತಾನಿ ಹ ವಾ ಏತಾನಿ ಸರ್ವಾಣಿ ಪೂರ್ಣಾನಿ ಸರ್ವಾಣ್ಯನಂತಾನಿ ಸರ್ವಾಣ್ಯಸಮ್ಮಿತಾನಿ। ಅಥಾವರಾಃ ಸರ್ವ ಏವಾಪೂರ್ಣಾಃ ಸರ್ವ ಏವ ಬಧ್ಯಂತೇಽಥ ಮುಚ್ಯಂತೇ ಚ ಕೇಚನ'

ಎಂಬುದಾಗಿ ಚತುರ್ವೇದಶಿಖಾ ಶ್ರುತಿಯಲ್ಲಿ ಪರ–ಅವರ ಎಂಬುದಾಗಿ ಚೇತನರಲ್ಲಿ ದ್ವೈವಿಧ್ಯವನ್ನು ಹೇಳಿ, ಅವುಗಳಲ್ಲಿ ನಾರಾಯಣನ ಎಲ್ಲ ರೂಪಗಳಿಗೆ ಪೂರ್ಣತ್ವಾದಿ ಗುಣಗಳನ್ನು ಹೇಳಿ, ಇತರ ಜೀವರಿಗೆ ಅಪೂರ್ಣತ್ವ-ಬದ್ಧತ್ವ-ಅನಿತ್ಯಮುಕ್ತತ್ವ ಮೊದಲಾದವುಗಳನ್ನು ಹೇಳಲಾಗಿದೆ. ಹೀಗಾಗಿ ಈಶ್ವರನು ಸ್ವರೂಪಾಂಶ, ಜೀವರು–ಭಿನ್ನಾಂಶರು ಎಂಬ ವ್ಯವಸ್ಥೆ ಹಾಗೆಯೇ ಉಪಪನ್ನವಾಗುತ್ತದೆ.

ಆದ್ದರಿಂದ ಜೀವರಿಗೆ ಈಶ್ವರಾಂಶತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಜೀವನು ಈಶ್ವರನ ಭಿನ್ನಾಂಶನೆಂದು ಸಿದ್ಧವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ- 50

**ಸೂ.ರ.:– युक्त्यन्तरेणोक्तमर्थं साधयत्सूत्रमुपन्यस्यति ॥**

**ಅನು.:–** ಮತ್ತೊಂದು ಯುಕ್ತಿಯಿಂದಲೂ ಹಿಂದಿನ ತತ್ವವನ್ನು (ಮತ್ಸ್ಯಾದಿಗಳು ಸ್ವರೂಪಾಂಶವೇ, ಜೀವನು ಭಿನ್ನಾಂಶನೇ ಎನ್ನುವುದರಲ್ಲಿ ಯಾವ ವ್ಯತ್ಯಾಸವಿಲ್ಲ ಎನ್ನುವುದನ್ನು) ಸಾಧಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ आभास एव च ॐ (२.३.५०)**

ಯತಃ = ಯಾವ ಕಾರಣ, ಜೀವಃ = ಜೀವನು, ಪರಸ್ಯ = ಪರಮಾತ್ಮನ, ಆಭಾಸ ಏವ = ಪ್ರತಿಬಿಂಬನೇ ಆಗಿದ್ದಾನೆ, ಮತ್ಸ್ಯಾದಿಸ್ತು ನ ತಥಾ = ಮತ್ಸ್ಯಾದಿಗಳಾದರೂ ಹಾಗೆ ಪ್ರತಿಬಿಂಬ ಅಲ್ಲ, ಚ ಅತೋಽಪಿ = ಆ ಕಾರಣದಿಂದಲೂ ಸಹ, ಉಕ್ತಸ್ಯ ನ ವ್ಯತ್ಯಾಸಃ = ಹಿಂದೆ ಹೇಳಿದ ತತ್ವದಲ್ಲಿ ವ್ಯತ್ಯಾಸವಿಲ್ಲ.

**ಸೂ.ರ.:– एवं च रूपं रूपं प्रतिरूपो बभूवेति (ऋ. ६-४७-१८) जीवानां प्रतिविम्बत्वाभिधानात् । मत्स्यादीनां च स्वरूपांशत्वेनोक्तत्वात् । जीवस्य मत्स्यादिवत्स्वरूपांशत्वाभावेनानंशत्वश्रुतेः स्वरूपांशत्वाभाव-विषयत्वात् । पुरुषस्य देहस्य छायावज्जीवजातस्य परमात्मप्रतिबिम्बत्वेन तदधीनप्रवृत्तित्वात् । अतः श्रुत्यविरोधेन युक्तः समन्वय इति सिद्धम् ॥**

**ಅನು.:–** 'ರೂಪಂ ರೂಪಂ ಪ್ರತಿರೂಪೋ ಬಭೂವ' (ಋ 6-47-18) ಎಂಬ ಶ್ರುತಿಯಲ್ಲಿ ಜೀವರು ಪರಮಾತ್ಮನ ಪ್ರತಿಬಿಂಬರಾಗಿದ್ದಾರೆ ಎಂದು ಹೇಳಲಾಗಿದೆ. ಆದರೆ ಮತ್ಸ್ಯಾದಿಗಳು ಹಾಗೆ ಪ್ರತಿಬಿಂಬತ್ವೇನ ಉಕ್ತವಾಗಿಲ್ಲ. ಕಿಂತು ಪರಮಾತ್ಮನ ಸ್ವರೂಪಾಂಶತ್ವೇನ ಪ್ರತಿಪಾದ್ಯವಾಗಿವೆ.

ಜೀವರು ಮತ್ಸ್ಯಾದಿಗಳಂತೆ ಸ್ವರೂಪಾಂಶರಲ್ಲದ ಕಾರಣ ಅನಂಶತ್ವಶ್ರುತಿಯು ಸ್ವರೂಪಾಂಶತ್ವಾಭಾವವಿಷಯಕವಾಗಿದೆ.

ಪ್ರತಿಬಿಂಬವಾದ ಛಾಯೆಯು ಪುರುಷನ ದೇಹದ ಅಧೀನವಾಗಿರುವಂತೆ ಎಲ್ಲ ಜೀವರೂ ಪರಮಾತ್ಮನ ಪ್ರತಿಬಿಂಬರಾದ್ದರಿಂದ ಪರಮಾತ್ಮಾಧೀನಪ್ರವೃತ್ತಿ ಉಳ್ಳವರಾಗಿದ್ದಾರೆ.

ಹೀಗೆ ಜೀವರು ಪರಮಾತ್ಮನ ಪ್ರತಿಬಿಂಬರಾಗಿ ತದಧೀನಪ್ರವೃತ್ತಿ ಉಳ್ಳವರಾದ್ದರಿಂದ

ಭಿನ್ನಾಂಶರಾಗಿದ್ದಾರೆ. ಮತ್ಸ್ಯಾದಿಗಳು ಪರಮಾತ್ಮನ ಪ್ರತಿಬಿಂಬವಾಗದೇ ಇರುವ ಕಾರಣ ತರಧೀನಪ್ರವೃತ್ತಿ ಉಳ್ಳವುಗಳಾಗಿಲ್ಲವಾದ್ದರಿಂದ ಸ್ವರೂಪಾಂಶವಾಗಿವೆ.

ಆದ್ದರಿಂದ ಜೀವರಿಗೆ ಈಶ್ವರನ ಭಿನ್ನಾಂಶತ್ವವನ್ನು ಹೇಳಿದರೆ ಶ್ರುತಿವಿರೋಧ ಬಾರದ ಕಾರಣ ಜೀವರಿಗೆ ಈಶ್ವರಾಂಶತ್ವವು ಉಪಪನ್ನವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅಂಶಾಧಿಕರಣವು ಮುಗಿಯಿತು.

*ಅಧಿಕರಣ – 19*

# ಅದೃಷ್ಟಾಧಿಕರಣ

## ಸಂಗತಿ

**ಸೂ.ರ.:– अत्र जीवस्येश्वरप्रतिबिम्बत्वविषयश्रुतिविरोधः परिह्रियते ।**

ಅನು.:– ಜೀವನಿಗೆ ಈಶ್ವರಪ್ರತಿಬಿಂಬತ್ವವಿಷಯಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಹತ್ತೊಂಭತ್ತನೇ ಈ ಅದೃಷ್ಟಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु न जीवा भगवत्प्रतिबिम्बाः । नैवांशो न सम्बन्ध इति (भाल्लवेय.) श्रुतेः । न च प्रतिबिम्बत्वेऽपि रूपं रूपमिति श्रुतिरस्तीति वाच्यम् । न सम्बन्ध इति श्रुतेः सयुक्तिकत्वात् । जीवास्तावत्सुरनरतिर्यगादिभेदेन विचित्राः । न च तदेकप्रतिबिम्बत्वे सम्भवतीत्यप्रतिबिम्बत्वमेव जीवानाम् । ततश्च सयुक्तिकाप्रतिबिम्बत्वश्रुतिविरोधेन प्रतिबिम्बत्वश्रुतेरप्रामाण्यमेवेति नोक्तसमन्वयसिद्धिरिति प्राप्ते सूत्रमाह ॥**

ಅನು.:– ಜೀವರು ಭಗವಂತನ ಪ್ರತಿಬಿಂಬರಾಗಲು ಸಾಧ್ಯವಿಲ್ಲ.

**ನೈವಾಂಶೋ ನ ಸಂಬಂಧೋ ನಾಪೇಕ್ಷ್ಯೋ ಜೀವಃ ಪರಸ್ಯ ।**
**ತಥಾಪಿ ತು ಯಥಾಯೋಗಂ ಫಲದಃ ಪ್ರಭುರೇಕರಾಟ್ ॥**
**ನ ನಿಯಮ್ಯಃ ಸ ಕಸ್ಯಾಪಿ ಸ ಸರ್ವಸ್ಯ ನಿಯಾಮಕಃ ॥**

ಎಂಬುದಾಗಿ ಭಾಲ್ಲವೇಯಶ್ರುತಿ ಇರುವುದರಿಂದ ಜೀವರು ಭಗವಂತನ ಪ್ರತಿಬಿಂಬರಲ್ಲ.

ಹೌದು, ಜೀವರು ಭಗವಂತನ ಪ್ರತಿಬಿಂಬರಾಗಿದ್ದಾರೆ ಎಂಬ ವಿಷಯದಲ್ಲಿಯೂ ಸಹ "ರೂಪಂ ರೂಪಂ ಪ್ರತಿರೂಪೋ ಬಭೂವ" ಎಂಬ ಶ್ರುತಿ ಪ್ರಮಾಣವಾಗಿ ಇದೆಯಲ್ಲವೇ? ಎಂದರೆ, ಅದು ಸರಿಯಲ್ಲ. 'ನೈವಾಂಶೋ ನ ಸಂಬಂಧಃ' ಎಂಬ ಪ್ರತಿಬಿಂಬತ್ವನಿಷೇಧಕ-ಶ್ರುತಿಯು ಸಯುಕ್ತಿಕವಾಗಿದೆ. ಏನು ಯುಕ್ತಿ? ಎಂದರೆ – ಜೀವರು ಸುರ-ನರ-ತಿರ್ಯಕ್ ಆದಿಭೇದೇನ ವಿಚಿತ್ರರಾಗಿದ್ದಾರೆ. ಈ ವೈಚಿತ್ರ್ಯವು ಏಕಪ್ರತಿಬಿಂಬತ್ವಪಕ್ಷದಲ್ಲಿ ಉಪಪನ್ನ-ವಾಗುವುದಿಲ್ಲ. (ವಿಚಿತ್ರರಾದ ಜೀವರು ಒಬ್ಬನೇ ಭಗವಂತನಿಗೆ ಪ್ರತಿಬಿಂಬರು ಆಗಲಾರರು.) ಆದ್ದರಿಂದ ಜೀವರು ಭಗವಂತನ ಪ್ರತಿಬಿಂಬರಲ್ಲ.

ಆದ್ದರಿಂದ ಸಯುಕ್ತಿಕ ಅಪ್ರತಿಬಿಂಬತ್ವ ಶ್ರುತಿವಿರೋಧ ಬರುವುದರಿಂದ ಪ್ರತಿಬಿಂಬತ್ವ-ಶ್ರುತಿಯು ಅಪ್ರಮಾಣವೇ ಆಗುತ್ತದೆ. ಹೀಗಾಗಿ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ अदृष्टानियमात् ॐ (२.३.५१)

ಅದೃಷ್ಟಾನಿಯಮಾತ್ = ಅದೃಷ್ಟ ಹಾಗೂ ಅದೃಷ್ಟಪದದಿಂದ ಉಪಲಕ್ಷಿತವಾದ ವಿದ್ಯಾ-ಕರ್ಮ-ಸಂಸ್ಕಾರಗಳ, ಅನಿಯಮಾತ್ = (ನಿಯಮ ಎಂದರೆ ಏಕಪ್ರಕಾರತಾ. ಅನಿಯಮ ಎಂದರೆ ಅನೇಕಪ್ರಕಾರತಾ, ವೈಚಿತ್ರ್ಯ ಎಂದು ಅರ್ಥ) ವೈಚಿತ್ರ್ಯ ಇರುವುದ-ರಿಂದ, ಪ್ರತಿಬಿಂಬಭೂತರಾದ ಜೀವರಿಗೂ ಸಹ ದೇವ-ದಾನವ-ಮಾನವಾದಿ ವೈಚಿತ್ರ್ಯವು ಉಪಪನ್ನವಾಗುತ್ತದೆ ಎಂದರ್ಥ.

### ಸಿದ್ಧಾಂತ

एवं चोक्तदोषो भवेद्यदि जीवस्य प्रतिमुखवत्प्रतिबिम्बत्वं स्यात् । न चैवम् । किं नाम पारिभाषिकं तदधीनत्वे सति तत्सदृशत्वरूपम् । न चास्मिन्पक्षे वैचित्र्याभावः । पित्रधीनत्वे सति पितृसदृशानां पुत्राणां मिथो वैचित्र्यदर्शनात् ।

ಸೂ.ರ.:– अस्तु वा प्रतिमुखवदेव प्रतिबिम्बत्वम् । तथाऽपि न वैचित्र्यानुपपत्तिः । अदृष्टादिवैचित्र्यरूपकारणसद्भावात् । अदृष्टादि-वैचित्र्यमेव कथमिति चेत् । तस्यापि पूर्वकर्मवैचित्र्याधीनत्वात् । कर्मभेदपरम्परायाश्चानादित्वात् । अतो नारायणे श्रुतिसमन्वयो युक्त इति सिद्धम् ॥

**ಅನು.**:– ಜೀವರು ಭಗವಂತನ ಪ್ರತಿಬಿಂಬರೇ ಆಗಿದ್ದಾರೆ. ಆದರೂ ಸಹ ವೈಚಿತ್ರ್ಯಾನು-ಪಪತ್ತಿ ಇಲ್ಲ. ಏಕೆಂದರೆ - ವೈಚಿತ್ರ್ಯಕ್ಕೆ ಕಾರಣವಾದ ಅದೃಷ್ಟಾದಿಗಳು ಇರುವುದರಿಂದ (ಅದೃಷ್ಟ-ವಿದ್ಯಾ-ಕರ್ಮಸಂಸ್ಕಾರಗಳ ವೈಚಿತ್ರ್ಯ ಇರುವುದರಿಂದ) ಪ್ರತಿಬಿಂಬದಲ್ಲಿ ವೈಚಿತ್ರ್ಯವು ಉಪಪನ್ನವಾಗುತ್ತದೆ.

ಅದೃಷ್ಟಾದಿವೈಚಿತ್ರ್ಯವೇ ಏಕೆ? ಎಂದರೆ, ಆ ವೈಚಿತ್ರ್ಯವೂ ಪೂರ್ವಕರ್ಮ-ವೈಚಿತ್ರ್ಯಾಧೀನವಾಗಿದೆ. ಕರ್ಮಭೇದಪರಂಪರೆಯು ಅನಾದಿಯಾಗಿದೆ. ಆದ್ದರಿಂದ ನಾರಾಯಣನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ – 52

### ಆಕ್ಷೇಪ

ಸೂ.ರ.:– ननु किमदृष्टकल्पनया । रागद्वेषमोहादिदोषवैचित्र्येणैव वैचित्र्यसम्भवादित्याशङ्कां परिहरत्सूत्रमुपन्यस्यति ॥

**ಅನು.**:– ಅದೃಷ್ಟಕಲ್ಪನೆ ಏಕೆ ಮಾಡಬೇಕು? ರಾಗ-ದ್ವೇಷ-ಮೋಹಾದಿ ದೋಷ ವೈಚಿತ್ರ್ಯದಿಂದಲೇ ವೈಚಿತ್ರ್ಯ ಹೇಳಲು ಸಂಭವಿಸುತ್ತದೆಯಲ್ಲ? ಎಂದು ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ अभिसन्ध्यादिष्वपि चैवम् ॐ (२.३.५२)**

ಯತಃ = ಯಾವ ಕಾರಣ, ಅಭಿಸಂಧ್ಯಾದಿಷ್ವಪಿ = ಕಾಮಕ್ರೋಧಾದಿ ದೋಷ-ಗಳಲ್ಲಿಯೂ ಸಹ, ಏವಂ = ಅದೃಷ್ಟಾದಿವೈಚಿತ್ರ್ಯದಿಂದಲೇ ವೈಚಿತ್ರ್ಯವನ್ನು ಹೇಳ-ಬೇಕಾಗಿದೆಯೋ, ಅತಃ = ಆ ಕಾರಣ ಆವಶ್ಯಕವಾದ್ದರಿಂದ ಅದೃಷ್ಟವೈಚಿತ್ರ್ಯವೇ ಜೀವವೈಚಿತ್ರ್ಯಕ್ಕೆ ಕಾರಣ, ಹೊರತು ದೋಷಾದಿವೈಚಿತ್ರ್ಯ ಅಲ್ಲ.

### ಸಮಾಧಾನ

**ಸೂ.ರ.:– एवं च दोषवैचित्र्यार्थमप्यन्ततोऽदृष्टस्य कल्पनीयत्वा-द्दोषवैचित्र्याभावेऽपि प्रतिक्षणवैचित्र्यदर्शनाच्च । न केवलमभिसन्धि-पदोक्तरागादिषु वैचित्र्यमदृष्टानियमात्किन्त्वेकपुन्निष्ठप्रतिक्षण-वैचित्र्यस्यादृष्टनियमादेव सम्भवेन न कारणान्तरादतः श्रुतिसमन्वयो युक्त इति सिद्धम् ॥**

**ಅನು.:–** ದೋಷವೈಚಿತ್ರ್ಯಕ್ಕಾಗಿಯಾದರೂ ಅಂತತಃ ಅದೃಷ್ಟವು ಕಲ್ಪನೀಯವಾದ್ದರಿಂದ ದೋಷವೈಚಿತ್ರ್ಯ ಇಲ್ಲದೇ ಹೋದರೂ ಪ್ರತಿಕ್ಷಣವೈಚಿತ್ರ್ಯ ಕಂಡಿದ್ದರಿಂದ, ಜೀವವೈಚಿತ್ರ್ಯಕ್ಕೆ ಅದೃಷ್ಟವೈಚಿತ್ರ್ಯವೇ ಕಾರಣ ಎನ್ನಬೇಕೇ ಹೊರತು ದೋಷವೈಚಿತ್ರ್ಯ ಅಲ್ಲ. ಕೇವಲ ರಾಗಾದಿ-ದೋಷಗಳಲ್ಲಿ ವೈಚಿತ್ರ್ಯವು ಅದೃಷ್ಟವೈಚಿತ್ರ್ಯದಿಂದ ಎಂದಲ್ಲ. ಕಿಂತು ಏಕಪುನ್ನಿಷ್ಠ ಪ್ರತಿಕ್ಷಣ-ವೈಚಿತ್ರ್ಯವು ಅದೃಷ್ಟವೈಚಿತ್ರ್ಯದಿಂದಲೇ ಸಂಭಾವಿತವಾದ್ದರಿಂದ. ಹೊರತು ಬೇರೆ ಕಾರಣದಿಂದ ಅಲ್ಲ.

ಆದ್ದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 53

### ಆಕ್ಷೇಪ

**ಸೂ.ರ.:– ननु स्वर्गस्थाः सुरा भूमिस्था नरा इत्यादिरूपेण स्थान-वैचित्र्यादेव सुरानरादिवैचित्र्योपपत्तेः किमदृष्टवैचित्र्येणेत्याशङ्कां पराकुर्वत्सूत्रमुपन्यस्यति ॥**

**ಅನು.:–** ದೇವತೆಗಳು ಸ್ವರ್ಗಸ್ಥರು (ಸ್ವರ್ಗದಲ್ಲಿ ವಾಸ ಮಾಡುವವರು), ಮನುಷ್ಯರು ಭೂಮಿಸ್ಥರು (ಭೂಮಿಯಲ್ಲಿ ವಾಸ ಮಾಡುವವರು). ಈ ರೀತಿಯಾಗಿ ಸ್ವರ್ಗ-ಭೂಮಿ ರೂಪಸ್ಥಾನವೈಚಿತ್ರ್ಯದಿಂದಲೇ ಸುರನರಾದಿವೈಚಿತ್ರ್ಯವು ಉಪಪನ್ನವಾಗುವಾಗ ಅದೃಷ್ಟ-ವೈಚಿತ್ರ್ಯವನ್ನು ಏಕೆ ಕಲ್ಪಿಸಬೇಕು? ಎಂದು ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ प्रदेशादिति चेन्नान्तर्भावात् ॐ (२.३.५३)

ಪ್ರದೇಶಾತ್ = ಸ್ವರ್ಗ ಭೂಮ್ಯಾದಿ ಸ್ಥಾನವೈಚಿತ್ರ್ಯದಿಂದಲೇ ಸುರನರಾದಿ ಜನವೈಚಿತ್ರ್ಯ ಇರಲಿ, ಹೊರತು ಅದೃಷ್ಟವೈಚಿತ್ರ್ಯದಿಂದ ಅಲ್ಲ ಇತಿ ಚೇತ್ = ಎಂಬುದಾಗಿ ಆಕ್ಷೇಪ ಬಂದರೆ, ನ = ಅದು ಸರಿಯಲ್ಲ ಕುತಃ = ಏಕೆ?, ಅಂತರ್ಭಾವಾತ್ = ಸ್ಥಾನವೈಚಿತ್ರ್ಯವನ್ನು ಕುರಿತು ಏನು ಕಾರಣ? ಎಂಬುದಾಗಿ ಕಾರಣದ ಅನ್ವೇಷಣೆ ಮಾಡಿದಾಗ, ಅದರ ಕಾರಣವು ಅದೃಷ್ಟವೈಚಿತ್ರ್ಯದಲ್ಲಿಯೇ ಅಂತರ್ಭಾವ ಆಗುವುದರಿಂದ, ಅದರ ಕಾರಣವು ಅದೃಷ್ಟವೈಚಿತ್ರ್ಯರೂಪವೇ ಆಗುವುದರಿಂದ.

ಆದ್ದರಿಂದ ಆವಶ್ಯಕವಾದ್ದರಿಂದ ಅದೃಷ್ಟವೈಚಿತ್ರ್ಯವೇ ಸುರನರಾದಿ ವೈಚಿತ್ರ್ಯ-ನಿಯಾಮಕವಾಗಿದೆ.

**ಸೂ.ರ.:– एवं च स्वर्गादिप्राप्तेरप्यदृष्टसाध्यत्वात् । एकप्रदेशस्थितानां वैचित्र्यदर्शनाच्च । तदेवं पारिभाषिकप्रतिबिम्बत्वस्य युक्तिविरोध-प्रसक्त्यभावात् । नैवांशो न सम्बन्ध इति (भाल्लवेय.) श्रुतेश्च प्रतिमुखत्वरूपप्रतिबिम्बत्वाभावविषयत्वेन तद्विरोधस्याप्यभावेन रूपं रूपमिति (ऋ.६-४७-१८) श्रुत्या पारिभाषिकप्रतिबिम्बत्वसिद्धेर्युक्तो नारायणे श्रुतिसमन्वय इति सिद्धम् ॥**

ಅನು.:– ಸ್ವರ್ಗಾದಿಪ್ರಾಪ್ತಿಯೂ ಅದೃಷ್ಟಸಾಧ್ಯವೇ ಆದ್ದರಿಂದ ಅದೃಷ್ಟವೈಚಿತ್ರ್ಯವೇ ಪ್ರಯೋಜಕ ಎನ್ನಬೇಕು. ಮತ್ತು ಏಕಪ್ರದೇಶಸ್ಥಿತವಾದದ್ದರಲ್ಲಿಯೂ ವೈಚಿತ್ರ್ಯ ಕಂಡಿದ್ದರಿಂದ ಸ್ಥಾನವೈಚಿತ್ರ್ಯವು ಅಪ್ರಯೋಜಕ. ಹಾಗಾಗಿ ತದಧೀನತ್ವೇ ಸತಿ ತತ್ಸದೃಶತ್ವ ರೂಪವಾದ ಪಾರಿಭಾಷಿಕಪ್ರತಿಬಿಂಬತ್ವಕ್ಕೆ ಯುಕ್ತಿವಿರೋಧ ಬರುವ ಪ್ರಸಕ್ತಿಯೇ ಇಲ್ಲವಾದ್ದರಿಂದ, ಇನ್ನು 'ನೈವಾಂಶೋ ನ ಸಂಬಂಧಃ ...' ಎಂಬ ಭಾಲ್ಲವೇಯಶ್ರುತಿಯೂ ಸಹ ಪ್ರತಿಮುಖತ್ವ-ರೂಪಪ್ರತಿಬಿಂಬತ್ವಾಭಾವಪರವಾಗಿದ್ದರಿಂದ ಆ ಭಾಲ್ಲವೇಯಶ್ರುತಿಯ ವಿರೋಧವೂ ಬರುವುದಿಲ್ಲವಾದ್ದರಿಂದ, 'ರೂಪಂ ರೂಪಂ ಪ್ರತಿರೂಪೋ ಬಭೂವ' (ಋ. 6-47-18) ಎಂಬ ಶ್ರುತಿಯಿಂದ ಜೀವರಿಗೆ ಪಾರಿಭಾಷಿಕಪ್ರತಿಬಿಂಬತ್ವವೇ ಸಿದ್ಧಿಸುವುದರಿಂದ ನಾರಾಯಣನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಅದೃಷ್ಟಾಧಿಕರಣವು ಮುಗಿಯಿತು.

ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ ಎರಡನೇ ಅಧ್ಯಾಯದ ಮೂರನೇ ಪಾದವು ಮುಗಿಯಿತು.

# द्वितीयाऽध्यायः

## चतुर्थः पादः

ಅಧಿಕರಣ – 1

## ಪ್ರಾಣೋತ್ಪತ್ತ್ಯಧಿಕರಣ

### ಪಾದಸಂಗತಿ

ಸೂ.ರ.:– युक्तिसहितश्रुतिविरोधः श्रुतीनामपाक्रियतेऽस्मिन्पादे ॥

ಅನು.:– ಶ್ರುತಿಗಳಿಗೆ ಯುಕ್ತಿಸಹಿತಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಈ ನಾಲ್ಕನೇ ಪಾದದಲ್ಲಿ.

### ಅಧಿಕರಣಸಂಗತಿ

ಸೂ.ರ.:– अत्र इन्द्रियोत्पत्तिविषयश्रुतिविरोधः परिह्रियते ।

ಅನು.:– ಇಂದ್ರಿಯಗಳ ಉತ್ಪತ್ತಿವಿಷಯಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಮೊದಲನೇ ಈ ಪ್ರಾಣೋತ್ಪತ್ತ್ಯಧಿಕರಣದಲ್ಲಿ.

### ಪೂರ್ವಪಕ್ಷ

ಸೂ.ರ.:– ननु न प्राणा उत्पत्तिमन्तः । प्राणा एवेति (काषायण.) श्रुतेः । न चोत्पत्तावपि एतस्मादिति (मुं.२-१-३) श्रुतिरस्तीति वाच्यम् । अनुत्पत्तिश्रुतेः स्पष्टार्थतया निरवकाशत्वेन प्राबल्यात् । एतस्माज्जायत इति श्रुतेः प्रादुर्भावपरतयाऽपि योजयितुं शक्यत्वादविस्पष्टार्थत्वेन दौर्बल्यात् । प्राणा नोत्पत्तिमन्तः निरुपादानत्वादिति युक्तियुक्तत्वात् । न चासिद्धिः । नोपादानमिति (भविष्यत्पर्वणि) स्मृतिसिद्धत्वात् । अतः प्रबलश्रुतिविरोधादुत्पत्तिश्रुतिरप्रमाणमेवेति नेश्वरस्य श्रुतिसमन्वयेन जगत्कारणत्वसिद्धिरिति प्राप्ते सूत्रितम् ॥

**ಅನು.:-** ''ಪ್ರಾಣಾ ಏವೇದಮಗ್ರ ಆಸುಸ್ತೇಭ್ಯೋ ಭೂತಾನಿ ಜಜ್ಞಿರೇ। ಭೂತೇಭ್ಯೋಽಂಡಮಂಡಸ್ಯಾಂತಸ್ತ್ವಿಮೇ ಲೋಕಾಃ। ಅಥ ಪ್ರಾಣಾ ಏವಾನಾದಯಃ ಪ್ರಾಣಾ ನಿತ್ಯಾಃ'' (ಕಾಷಾಯಣಶ್ರುತಿ)

ಎಂಬುದಾಗಿ ಶ್ರುತಿ ಇರುವುದರಿಂದ ಪ್ರಾಣಗಳು (ಇಂದ್ರಿಯಗಳು) ಉತ್ಪತ್ತಿ ಉಳ್ಳದ್ದಲ್ಲ.

ಹೌದು, ಪ್ರಾಣಗಳಿಗೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿಯೂ ಸಹ ''ಏತಸ್ಮಾ-ಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ'' (ಮುಂ.ಉ. 2-1-3) ಎಂಬುದಾಗಿ ಶ್ರುತಿ ಪ್ರಮಾಣ ಇದೆಯಲ್ಲ? ಎಂದರೆ, ಅದು ಸರಿಯಲ್ಲ. 'ಪ್ರಾಣಾ ಏವೇದಮಗ್ರ' ಎಂಬ ಅನುತ್ಪತ್ತಿಶ್ರುತಿಯು ಸ್ಪಷ್ಟಾರ್ಥ ಉಳ್ಳದ್ದಾದ್ದರಿಂದ ನಿರವಕಾಶವಾಗಿದೆ. ನಿರವಕಾಶವಾದ್ದರಿಂದ ಪ್ರಬಲವಾಗಿದೆ. 'ಏತಸ್ಮಾಜ್ಜಾಯತೇ' ಎಂಬ ಉತ್ಪತ್ತಿಶ್ರುತಿಯು ಪ್ರಾದುರ್ಭಾವ-ಪರವಾಗಿಯೂ ಯೋಜಿಸಲು ಬರುವುದರಿಂದ, ಅಸ್ಪಷ್ಟಾರ್ಥ ಉಳ್ಳದ್ದಾದ್ದರಿಂದ ದುರ್ಬಲವಾಗಿದೆ.

ಮತ್ತು ಅನುತ್ಪತ್ತಿಶ್ರುತಿಯು ''ಪ್ರಾಣಾಃ ನೋತ್ಪತ್ತಿಮಂತಃ ನಿರುಪಾದಾನತ್ವಾತ್'' ಎಂಬ ಯುಕ್ತಿಯಿಂದಲೂ ಸಹಿತವಾದ್ದರಿಂದ ಹೆಚ್ಚು ಪ್ರಬಲವಾಗಿದೆ. ಈ ಅನುಮಾನದಲ್ಲಿ ಪಕ್ಷವಾದ ಪ್ರಾಣಗಳಲ್ಲಿ ನಿರುಪಾದಾನತ್ವರೂಪಹೇತುವು ಇಲ್ಲವಾದ್ದರಿಂದ ಅಸಿದ್ಧಿದೋಷ ಬರುತ್ತದೆ-ಯಲ್ಲ? ಎಂದು ಶಂಕಿಸುವುದು ಸರಿಯಲ್ಲ. ಪಕ್ಷವಾದ ಪ್ರಾಣಗಳಲ್ಲಿ ನಿರುಪಾದಾನತ್ವ ಇದೆ ಎನ್ನುವುದು

**ನೋಪಾದಾನಂ ಹೀಂದ್ರಿಯಾಣಾಮತೋಽನುತ್ಪತ್ತಿರಿಷ್ಯತೇ।**
**ಉಪಾದಾನಕೃತಾ ಸೃಷ್ಟಿಃ ಸರ್ವಲೋಕೇಷು ದೃಶ್ಯತೇ॥**

ಎಂಬುದಾಗಿ ಭವಿಷ್ಯತ್ಪರ್ವವಚನರೂಪ ಸ್ಮೃತಿಸಿದ್ಧವಾಗಿದೆ. ಹಾಗಾಗಿ ಅಸಿದ್ಧಿಶಂಕೆಗೆ ಅವಕಾಶವಿಲ್ಲ.

ಆದ್ದರಿಂದ ಪ್ರಬಲಶ್ರುತಿವಿರೋಧ ಬರುವುದರಿಂದ ಉತ್ಪತ್ತಿಶ್ರುತಿಯು ಅಪ್ರಮಾಣವೇ ಆಗುತ್ತದೆ. ಹಾಗಾಗಿ ಈಶ್ವರನಲ್ಲಿ ಶ್ರುತಿಸಮನ್ವಯ ಮೂಲಕವಾಗಿ ಜಗತ್ಕಾರಣತ್ವ ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ तथा प्राणाः ॐ (२.४.१)**

ಯಥಾ ಆಕಾಶಾದಯಃ ವಿಷ್ಣೋರುತ್ಪದ್ಯಂತೇ = ಯಾವ ರೀತಿಯಾಗಿ ಆಕಾಶಾದಿಗಳು ವಿಷ್ಣುವಿನಿಂದ ಉತ್ಪನ್ನವಾಗುತ್ತವೆಯೋ, ತಥಾ = ಅದೇ ರೀತಿಯಾಗಿ, ಪ್ರಾಣಾಃ = ಇಂದ್ರಿಯಗಳೂ ಸಹ ವಿಷ್ಣುವಿನಿಂದ ಉತ್ಪನ್ನವಾಗುತ್ತವೆ ಹೊರತು ಅನುತ್ಪತ್ತಿ ಉಳ್ಳವುಗಳಲ್ಲ.

## ಸಿದ್ಧಾಂತ

**ಸೂ.ರ.:- एवं चोत्पत्तिमन्त एव प्राणाः । आकाशस्योत्पत्ति-साधकानां हेतूनामिहापि सद्भावात् । ततश्च पराधीनविशेषावाप्तिमन्त एवेति परमात्मन उत्पन्नत्वसिद्धेर्युक्तं श्रुतिसमन्वयेन ब्रह्मणो जगत्कारणत्वमिति सिद्धम् ॥**

**ಅನು.:-** ಪ್ರಾಣಗಳು (ಇಂದ್ರಿಯಗಳು) ಉತ್ಪತ್ತಿ ಉಳ್ಳವುಗಳೇ ಆಗಿವೆ. ಆಕಾಶದ ಉತ್ಪತ್ತಿಸಾಧಕವಾದ ಹೇತುಗಳು ಪ್ರಾಣಗಳ ವಿಷಯದಲ್ಲಿಯೂ ಇವೆಯಾದ್ದರಿಂದ.

ಹಾಗಾಗಿ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿ ಉಳ್ಳವುಗಳೇ ಆಗಿವೆ ಪ್ರಾಣಗಳು. ಆದ್ದರಿಂದ ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪನ್ನತ್ವವು ಸಿದ್ಧಿಸುವುದರಿಂದ, ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

### ಸೂತ್ರ - 2

## ಆಕ್ಷೇಪ

**ಸೂ.ರ.:- नन्वाकाशोत्पत्तिसिद्ध्यर्थं अनुत्पत्तौ श्रुत्यभावो हेतुरुक्तः। न चासाविह सम्भवति । प्राणा एवे (काषायण.) त्यनुत्पत्तिश्रुतेर्विद्य-मानात्वादिति प्राप्ते पराकुर्वत्सूत्रमुपन्यस्यति ॥**

**ಅನು.:-** ಆಕಾಶದ ಉತ್ಪತ್ತಿಸಿದ್ಧಿಗಾಗಿ "ಆಕಾಶಕ್ಕೆ ಉತ್ಪತ್ತಿ ಇಲ್ಲ" ಎಂಬ ವಿಷಯದಲ್ಲಿ (ಶ್ರುತ್ಯಭಾವವನ್ನು ಹೇಳಲಾಯಿತು) ಯಾವ ಶ್ರುತಿಯೂ ಇಲ್ಲ ಎಂದು ಹೇಳಲಾಯಿತು. ಆದರೆ ಆಕಾಶದ ಅನುತ್ಪತ್ತಿವಿಷಯದಲ್ಲಿ ಶ್ರುತ್ಯಭಾವ ಹೇಳಿದಂತೆ ಪ್ರಕೃತ ಪ್ರಾಣಗಳ ಅನುತ್ಪತ್ತಿವಿಷಯದಲ್ಲಿ ಶ್ರುತ್ಯಭಾವವನ್ನು ಹೇಳಲು ಬರುವುದಿಲ್ಲ. ಏಕೆಂದರೆ - ಪ್ರಾಣಗಳ ಅನುತ್ಪತ್ತಿ ವಿಷಯದಲ್ಲಿ "ಪ್ರಾಣಾ ಏವಾನಾದಯಃ ಪ್ರಾಣಾಃ ನಿತ್ಯಾಃ" ಎಂಬ ಕಾಷಾಯಣ-

ಶ್ರುತಿಯು ಇರುವುದರಿಂದ ಎಂಬುದಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ गौण्यसम्भवात् ॐ (२.४.२)

'ಪ್ರಾಣಾ ಏವಾನಾದಯಃ' ಎಂಬ ಅನಾದಿತ್ವಶ್ರುತಿಯು, ಗೌಣೀ = ಅಮುಖ್ಯ-ವಾಗಿದೆ. ಸೂಕ್ಷ್ಮರೂಪೇಣ ಅನುತ್ಪತ್ತಿವಿಷಯವಾಗಿದೆ. ಕುತಃ = ಯಾಕೆ? ಅಸಂಭವಾತ್ = ಇಂದ್ರಿಯಗಳಿಗೆ ಮುಖ್ಯ ಅನಾದಿತ್ವವು ಕೂಡದ ಕಾರಣ, ಮತ್ತು ಏತಸ್ಮಾತ್ (ಮುಂ. 2-1-3) ಎಂಬ ಶ್ರುತಿಯು ಅಯುಕ್ತವಾದ್ದರಿಂದ.

### ಸಮಾಧಾನ

**ಸೂ.ರ.:– एवं च श्रुतिसद्भावेऽपि तस्या मुख्यार्थत्वाभावेन गौण्यर्थत्वात् । परमात्मना साम्यप्रसङ्गेन मुख्यार्थत्वासम्भवात् । प्राणा उत्पत्तिमन्तः अल्पशक्तित्वादिति युक्तिविरुद्धत्वाच्च । अतः प्राणानां परमात्मन उत्पन्नत्वं सिद्धम् ॥**

**ಅನು.:–** ಪ್ರಾಣಗಳ ಅನುತ್ಪತ್ತಿವಿಷಯದಲ್ಲಿ 'ಪ್ರಾಣಾ ಏವಾನಾದಯಃ' ಎಂಬ (ಕಾಷಾಯಣ) ಶ್ರುತಿಯು ಇದ್ದರೂ ಸಹ ಆ ಶ್ರುತಿಯು ಮುಖ್ಯಾರ್ಥವಾಗಲು ಸಾಧ್ಯವಿಲ್ಲ. ಶ್ರುತಿಗೆ ಮುಖ್ಯಾರ್ಥತ್ವವನ್ನು ಹೇಳಿದರೆ ಪರಮಾತ್ಮನಂತೆ ಪ್ರಾಣಗಳಿಗೂ ಮುಖ್ಯ ಅನುತ್ಪತ್ತಿ ಬಂದು ಪರಮಾತ್ಮನಿಂದ ಸಾಮ್ಯ ಬರಬೇಕಾಗುತ್ತದೆ. ಆದ್ದರಿಂದ ಶ್ರುತಿಯು ಮುಖ್ಯಾರ್ಥ-ವಲ್ಲ. ಮತ್ತು – ''ಪ್ರಾಣಾಃ ಉತ್ಪತ್ತಿಮಂತಃ ಅಲ್ಪಶಕ್ತಿತ್ವಾತ್'' ಎಂಬ ಯುಕ್ತಿಯಿಂದಲೂ ವಿರುದ್ಧವಾಗುತ್ತದೆ. ಹಾಗಾಗಿಯೂ ಶ್ರುತಿಯು ಮುಖ್ಯಾರ್ಥವಲ್ಲ. ಆದ್ದರಿಂದ ಅನುತ್ಪತ್ತಿಶ್ರುತಿಯು ಮುಖ್ಯಾರ್ಥವಲ್ಲವಾದ್ದರಿಂದ ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪನ್ನತ್ವವು (ಉತ್ಪತ್ತಿಯು) ಸಿದ್ಧವಾಗುತ್ತದೆ.

### ಸೂತ್ರ – 3

**ಸೂ.ರ.:– वियदधिकरणोक्तप्रतिज्ञाहानिरित्युक्तयुक्त्येन्द्रियाणामुत्पत्तिं समर्थयत्सूत्रमुपन्यस्यति ॥**

**ಅನು.:–** ವಿಯದಧಿಕರಣೋಕ್ತವಾದ (ಪ್ರತಿಜ್ಞಾಹಾನಿಃ ಎನ್ನುವಲ್ಲಿ ಹೇಳಿದ) ಯುಕ್ತಿ-ಯಿಂದಲೂ ಸಹ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ प्रतिज्ञानुपरोधाच्च ॐ (२.४.३)

ಪ್ರತಿಜ್ಞಾನುಪರೋಧಾಚ್ಚ = ಸ ಇದಂ ಸರ್ವಮಸೃಜತ (ತೈ. 2-6) ಎಂಬುದಾಗಿ ಪ್ರತಿಜ್ಞಾನುಸಾರವಾದ್ದರಿಂದಲೂ, ಪ್ರಾಣಾ ಉತ್ಪದ್ಯಂತೇ = ಇಂದ್ರಿಯಗಳು ಉತ್ಪನ್ನವಾಗುತ್ತವೆ ಎಂದು ಅಂಗೀಕರಿಸಬೇಕಿದೆ.

**ಸೂ.ರ.:– एवं च प्राणानामुत्पत्यङ्गीकारे स इदमिति श्रुतेरनुसाराद-विरोधः । अतः श्रुत्यविरोधेन प्राणानां परमात्मन उत्पन्नत्वं सिद्धम् ॥**

**ಅನು.:–** ಪ್ರಾಣಗಳಿಗೆ (ಇಂದ್ರಿಯಗಳಿಗೆ) ಉತ್ಪತ್ತಿಯನ್ನು ಅಂಗೀಕರಿಸಿದರೆ 'ಸ ಇದಂ ಸರ್ವಮಸೃಜತ' (ತೈ.2-6) ಎಂಬ ಶ್ರುತಿಗೆ ಅನುಸಾರವಾಗುವುದರಿಂದ ವಿರೋಧ ಬರುವುದಿಲ್ಲ.

ಆದ್ದರಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಶ್ರುತಿವಿರೋಧ ಬಾರದ ಕಾರಣ ಇಂದ್ರಿಯಗಳಿಗೆ ಪರಮಾತ್ಮನಿಂದ ಉತ್ಪನ್ನತ್ವವು (ಉತ್ಪತ್ತಿಯು) ಸಿದ್ಧವಾಗುತ್ತದೆ.

**ಪ್ರಾಣೋತ್ಪತ್ತ್ಯಧಿಕರಣವು ಮುಗಿಯಿತು.**

*ಅಧಿಕರಣ – 2*

## ತತ್ಪ್ರಾಗಧಿಕರಣ

### ಸಂಗತಿ

**ಸೂ.ರ.:– अत्र मनोजन्मविषयश्रुतिविरोधः परिह्रियते ।**

**ಅನು.:–** ಮನೋಜನ್ಮವಿಷಯಕವಾದ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಎರಡನೇ ಈ ತತ್ಪ್ರಾಗಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नोत्पत्तिर्मनसः । नित्यं मनोऽनादित्वादिति**

**(गौपवन.) श्रुतेः । न चोत्पत्तिश्रुत्यनुसारेणेन्द्रियोत्पत्तिश्रुतिवदनादित्वश्रुते-र्गौणार्थत्ववर्णनं युक्तम् । इन्द्रियाणामनित्यत्वमुक्त्वा विशिष्य मनसो नित्यत्वाभिधानात् । किं च मनसः सादित्वे तद्विना कदाचिदनादिना पुरुषेणावस्थातव्यम् । न च तत्सम्भवति । तथा सति तदा संसाराभाव-प्रसङ्गात् । मनसः संसारकारणत्वात् । मन एव मनुष्याणामिति स्मरणात् । अतो नित्यमेव मनः । एवं च युक्तियुक्तविशेषश्रुतेः प्राबल्यात्त-द्विरोधेनोत्पत्तिश्रुतेरप्रामाण्यान्न श्रुतिसमन्वयेनेश्वरस्य जगत्कारणत्व-सिद्धिरिति प्राप्ते सूत्रितम् ॥**

**ಅನು.:–** ಮನಸ್ಸಿಗೆ ಉತ್ಪತ್ತಿ ಇಲ್ಲ. "ದ್ವಿಧಾ ಹ್ಯೇವೇಂದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ ಚ । ತತ್ರ ನಿತ್ಯಂ ಮನೋಽನಾದಿತ್ವಾನ್ನ ಹ್ಯಮನಾಃ ಪುಮಾಂಸ್ತಿಷ್ಠತ್ಯನಿತ್ಯಾನ್ಯನ್ಯಾನಿ" ಎಂಬುದಾಗಿ ಗೌಪವನಶ್ರುತಿ ಇರುವುದರಿಂದ ಮನಸ್ಸು ಅನಾದಿಯಾಗಿದೆ.

ಹಿಂದೆ ಉತ್ಪತ್ತಿಶ್ರುತಿಗೆ ಅನುಸಾರವಾಗಿ ಇಂದ್ರಿಯಗಳಿಗೆ ಅನುತ್ಪತ್ತಿಯನ್ನು (ಅನಾದಿತ್ವ-ವನ್ನು) ಹೇಳುವ ಶ್ರುತಿಯನ್ನು ಗೌಣಾರ್ಥ ಎಂದು ಮಾಡಿದಂತೆ, ಪ್ರಕೃತದಲ್ಲಿಯೂ ಮನಸ್ಸಿಗೆ ಅನುತ್ಪತ್ತಿಯನ್ನು (ಅನಾದಿತ್ವವನ್ನು) ಹೇಳುವ ಶ್ರುತಿಯನ್ನು ಗೌಣಾರ್ಥ ಎಂದು ಹೇಳಲು ಬರುವುದಿಲ್ಲ. ಕಾರಣ – ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ವಿಶೇಷವಾಗಿ (ಪ್ರತ್ಯೇಕವಾಗಿ) ಮನಸ್ಸಿಗೆ ನಿತ್ಯತ್ವವನ್ನು ಹೇಳಿದ್ದರಿಂದ.

ಮತ್ತು ಮನಸ್ಸು ಸಾದಿಯಾದದ್ದಾದರೆ, ಜೀವನು ಅನಾದಿಯಾದ್ದರಿಂದ ಕೆಲವೊಮ್ಮೆ (ಮನಸ್ಸು ಹುಟ್ಟುವುದಕ್ಕಿಂತ ಪೂರ್ವದಲ್ಲಿ) ಜೀವನು ಮನಸ್ಸಿನಿಂದ ರಹಿತನಾಗಿ ಇರಬೇಕಾದ ಅತಿಪ್ರಸಂಗ ಬರುತ್ತದೆ. ಆದರೆ ಮನಸ್ಸಿನಿಂದ ರಹಿತನಾಗಿ ಜೀವನು ಇರಲು ಸಾಧ್ಯವಿಲ್ಲ. ಹಾಗೊಂದುವೇಳೆ ಮನಸ್ಸಿನಿಂದ ರಹಿತನಾಗಿ ಇರುವುದಾದರೆ, "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।" ಎಂದು ಸ್ಮೃತಿ ಹೇಳಿದಂತೆ ಮನಸ್ಸೇ ಸಂಸಾರಕಾರಣ-ವಾದ್ದರಿಂದ ಆಗ ಅವನಿಗೆ ಸಂಸಾರ ಇಲ್ಲದೇ ಹೋಗಬೇಕಾಗುತ್ತದೆ.

ಆದ್ದರಿಂದ ಮನಸ್ಸು ನಿತ್ಯವೇ ಆಗಿದೆ. ಹೀಗಾಗಿ ಯುಕ್ತಿಸಹಿತವಾದ ಶ್ರುತಿಗೆ ಪ್ರಾಬಲ್ಯ ಇರುವುದರಿಂದ, ಅಂತಹ ಪ್ರಬಲವಾದ ಶ್ರುತಿಯ ವಿರೋಧ ಬರುವುದರಿಂದ ಮನಸ್ಸಿಗೆ ಉತ್ಪತ್ತಿ ಹೇಳುವ ಶ್ರುತಿಯು ಅಪ್ರಮಾಣವಾಗುವುದರಿಂದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮೂಲಕವಾಗಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ तत्प्राक् श्रुतेश्च ॐ (२.४.४)

ಚಶಬ್ದವು ಮನಸ್ಸಿನ ಅನುತ್ಪತ್ತಿಗೆ ಸಮುಚ್ಚಾಯಕವಾಗಿದೆ. ತತ್ (ತಸ್ಯ) = ಆ ಮನಸ್ಸು ಪ್ರಾಕ್ = ಆ ಇಂದ್ರಿಯಗಳಿಗಿಂತಲೂ ಮೊದಲು, ಶ್ರುತೇಃ = ಮನಃ ಸರ್ವೇಂದ್ರಿಯಾಣಿ ಚ ಎಂಬುದಾಗಿ ಉತ್ಪನ್ನತ್ವೇನ ಶ್ರುತವಾಗುತ್ತಿರುವುದರಿಂದ, ಮನಃ ಉತ್ಪತ್ತಿಮದೇವ = ಮನಸ್ಸು ಉತ್ಪತ್ತಿ ಉಳ್ಳದ್ದೇ ಆಗಿದೆ ಹೊರತು ಅನಾದಿಯಲ್ಲ.

### ಸಿದ್ಧಾಂತ

**ಸೂ.ರ.:– एवं च नानुत्पत्तिर्मनसो युज्यते । उत्पन्नत्वे श्रुतिसद्भावात् । न चास्या गत्यन्तरम् । पृथङ्मनसो जन्माभिधायकत्वेन विशेषश्रुतित्वात् । न चान्येन्द्रियवन्मनसोऽप्युत्पत्तिमत्वे तस्येन्द्रियार्थस्य पृथगभिधानं व्यर्थम् । अन्येन्द्रियेभ्योऽपि प्रागुक्तोत्पन्नत्वाभिप्रायेण तदुपपत्तेः । न चानुत्पत्तिश्रुतिविरोधः । तस्याः सूक्ष्मरूपमनोविषयत्त्वात् । न च विशिप्य नित्यत्वोक्तिविरोधः । अन्येन्द्रियेभ्योऽल्पोपचयाभिप्रायकत्वात्तस्याः । अतः श्रुत्यविरोधेन मनसो भगवदुत्पन्नत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥**

**ಅನು.:–** ಮನಸ್ಸು ಉತ್ಪನ್ನವಾಗುತ್ತದೆ (ಉತ್ಪತ್ತಿ ಉಳ್ಳದ್ದಾಗಿದೆ) ಎಂಬ ವಿಷಯದಲ್ಲಿ ''ಮನಃ ಸರ್ವೇಂದ್ರಿಯಾಣಿ ಚ'' (ಮುಂ.ಉ. 2-1-3) ಎಂಬುದಾಗಿ ಶ್ರುತಿ ಇರುವುದರಿಂದ ಮನಸ್ಸಿಗೆ ಉತ್ಪತ್ತಿಯನ್ನು ಅಂಗೀಕರಿಸಬೇಕು ಹೊರತು ಅನುತ್ಪತ್ತಿಯು (ಅನಾದಿತ್ವವು) ಯುಕ್ತವಲ್ಲ.

ಮನಸ್ಸಿಗೆ ಉತ್ಪತ್ತಿ ಹೇಳುವ ಈ ಶ್ರುತಿಗೆ ಗತ್ಯಂತರಕಲ್ಪನಾ ಮಾಡಬಹುದಲ್ಲ? ಎಂದರೆ ಅದು ಸರಿಯಲ್ಲ. ಈ ಶ್ರುತಿಯು ಪ್ರತ್ಯೇಕವಾಗಿ ಮನಸ್ಸಿಗೆ ಜನ್ಮವನ್ನು ಹೇಳುತ್ತಿರುವುದರಿಂದ ವಿಶೇಷಶ್ರುತಿಯಾಗಿದೆ. ಇತರ ಇಂದ್ರಿಯಗಳಂತೆ ಮನಸ್ಸೂ ಉತ್ಪತ್ತಿ ಉಳ್ಳದ್ದಾಗಿದೆ ಎನ್ನುವುದಾದರೆ ಅದಕ್ಕೆ ಇಂದ್ರಿಯಾರ್ಥವನ್ನು ಪ್ರತ್ಯೇಕವಾಗಿ ಹೇಳಿದ್ದು ವ್ಯರ್ಥವಾಗುತ್ತದೆಯಲ್ಲವೇ? ಎಂದರೆ ಅದು ಸರಿಯಲ್ಲ. ಉಳಿದ ಎಲ್ಲ ಇಂದ್ರಿಯಗಳಿಗಿಂತಲೂ ಮೊದಲು ಉತ್ಪನ್ನವಾಗಿದೆ ಎಂಬ ಅಭಿಪ್ರಾಯದಿಂದ ಅದು ಉಪಪನ್ನವಾಗುತ್ತದೆ.

ಹಾಗಾದರೆ ಮನಸ್ಸು ಉತ್ಪತ್ತಿ ಉಳ್ಳದ್ದು ಎಂದು ಹೇಳುವುದಾದರೆ, ಮನಸ್ಸಿಗೆ ಅನುತ್ಪತ್ತಿ-ಯನ್ನು (ಅನಾದಿತ್ವವನ್ನು) ಹೇಳುವ ಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ, ಅದು ಸರಿಯಲ್ಲ. ಮನಸ್ಸಿಗೆ ಅನುತ್ಪತ್ತಿಯನ್ನು ಹೇಳುವ 'ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯು ಸೂಕ್ಷ್ಮರೂಪಮನೋವಿಷಯಕವಾಗಿದೆ. ಹಾಗಾಗಿ ಶ್ರುತಿವಿರೋಧ ಬರುವುದಿಲ್ಲ.

ಹಾಗಾದರೆ ಇತರ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ವಿಶೇಷವಾಗಿ ಮನಸ್ಸಿಗೆ ನಿತ್ಯತ್ವವನ್ನು ಹೇಳಿದ್ದರ ವಿರೋಧ ಬರುತ್ತದೆಯಲ್ಲವೇ? ಎಂದರೆ, ಅದೂ ಸರಿಯಲ್ಲ. ಇತರ ಇಂದ್ರಿಯಗಳಿಗಿಂತಲೂ ಮನಸ್ಸಿಗೆ ಅಲ್ಪ ಉಪಚಯ ಇದೆ ಎಂದು ಆ ನಿತ್ಯತ್ವೋಕ್ತಿಯ ಅಭಿಪ್ರಾಯವಾದ್ದರಿಂದ ಅದರ ವಿರೋಧ ಇಲ್ಲ. ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮನಸ್ಸು ಭಗವಂತನಿಂದ ಉತ್ಪನ್ನವಾಗಿದೆ ಎಂದು ಸಿದ್ಧಿಸುವುದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತತ್ಪ್ರಾಗಧಿಕರಣವು ಮುಗಿಯಿತು.**

*ಅಧಿಕರಣ – 3*

# ತತ್ಪೂರ್ವಕತ್ವಾಧಿಕರಣ

## ಸಂಗತಿ

**ಸೂ.ರ.:– अत्र वागुत्पत्तिश्रुतेरनुत्पत्तिश्रुत्या विरोधः परिह्रियते ।**

ಅನು.:– ವಾಕ್‌ಗೆ (ವಾಗಿಂದ್ರಿಯಕ್ಕೆ) ಉತ್ಪತ್ತಿ ಹೇಳುವ ಶ್ರುತಿಗೆ ಅನುತ್ಪತ್ತಿಶ್ರುತಿಯಿಂದ ವಿರೋಧವನ್ನು ಪರಿಹರಿಸುತ್ತಾರೆ ಮೂರನೇ ಈ ತತ್ಪೂರ್ವಕತ್ವಾಧಿಕರಣದಲ್ಲಿ.

## ಪೂರ್ವಪಕ್ಷ

ಸೂ.ರ.:– ननु न वागुत्पत्तिमती । वाग्वावेति (पौष्यायण.) श्रुतेः । न चेयं श्रुतिर्वेदविषयेति वाच्यम् । अस्यां हि श्रुतिरवतिष्ठत इति श्रुत-

**श्रुत्याश्रयत्वायोगात् । किं च वागनुत्पत्तिमती नित्यश्रुत्याश्रयत्वा-दित्यनुमानविरोधो वाचः सादित्वे दुष्परिहरः । सादेर्नित्याश्रयत्वादर्शनात् । न चानादित्वश्रुतिः सूक्ष्मरूपविषया । नित्यश्रुतश्रुत्युच्चारणसामर्थ्यरूप-श्रुत्याश्रयत्वायोगादिति प्राप्ते सूत्रितम् ॥**

**ಅನು.:–** ವಾಗ್ವಾ ... ಎಂಬುದಾಗಿ ಪೌಷ್ಯಾಯಣಶ್ರುತಿ ಇರುವುದರಿಂದ ವಾಕ್ ಉತ್ಪತ್ತಿ ಉಳ್ಳದ್ದಲ್ಲ. (ಅನಾದಿಯಾಗಿದೆ.)

ಈ ಶ್ರುತಿಯು ವೇದವಿಷಯಕವಾಗಿದೆ (ವೇದಕ್ಕೆ ನಿತ್ಯತ್ವವನ್ನು ಹೇಳುತ್ತಿದೆ) ಹೊರತು ವಾಕ್‌ಗೆ ನಿತ್ಯತ್ವವನ್ನು ಹೇಳುತ್ತಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. 'ಅಸ್ಯಾಂ ಹಿ ಶ್ರುತಿರವತಿಷ್ಠತೆ' ಎಂಬುದಾಗಿ ಇಲ್ಲಿ ಶ್ರುತವಾಗುತ್ತಿರುವ ಶ್ರುತ್ಯಾಶ್ರಯತ್ವವು ವೇದಕ್ಕೆ ಕೂಡುವುದಿಲ್ಲವಾದ್ದರಿಂದ ಈ ಶ್ರುತಿಯು ವೇದವಿಷಯಕವಾಗಲು ಸಾಧ್ಯವಿಲ್ಲ.

ಮತ್ತು ವಾಕ್‌ಗೆ ಸಾದಿತ್ವವನ್ನು ಅಂಗೀಕರಿಸುವುದಾದರೆ ಸಾದಿಯಾದದ್ದು ನಿತ್ಯವಾದ ಶ್ರುತಿಗೆ ಆಶ್ರಯವಾಗಲು ಸಾಧ್ಯವಿಲ್ಲವಾದ್ದರಿಂದ "ವಾಕ್ ಅನುತ್ಪತ್ತಿಮತೀ ನಿತ್ಯಶ್ರುತ್ಯಾಶ್ರಯ-ತ್ವಾತ್" ಎಂಬ ಅನುಮಾನದ ವಿರೋಧ ದುಷ್ಪರಿಹರವಾಗುತ್ತದೆ. (ಬಂದೇ ಬರುತ್ತದೆ.)

ವಾಕ್‌ಗೆ ನಿತ್ಯತ್ವವನ್ನು ಹೇಳುವ 'ವಾಗ್ವಾವ ...' ಎಂಬ ಶ್ರುತಿಯು ಸೂಕ್ಷ್ಮರೂಪವಾದ ವಾಕ್‌ಗೆ ನಿತ್ಯತ್ವವನ್ನು ಹೇಳುತ್ತಿರುವುದರಿಂದ ಶ್ರುತಿವಿರೋಧ ಬರುವುದಿಲ್ಲ ಎಂದರೆ, ಅದು ಸರಿಯಲ್ಲ. ಹಾಗಾದಲ್ಲಿ ನಿತ್ಯಶ್ರುತಶ್ರುತ್ಯುಚ್ಚಾರಣಸಾಮರ್ಥ್ಯರೂಪ ಶ್ರುತ್ಯಾಶ್ರಯತ್ವವು ಉಪಪನ್ನವಾಗುವುದಿಲ್ಲ.

ಆದ್ದರಿಂದ ವಾಕ್ ಉತ್ಪತ್ತಿ ಉಳ್ಳದ್ದಲ್ಲ (ಅನಾದಿಯಾಗಿದೆ) ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ तत्पूर्वकत्वाद्वाचः ॐ (२.४.५)

ವಾಚಃ = ವಾಗಿಂದ್ರಿಯಕ್ಕೆ, ತತ್ಪೂರ್ವಕತ್ವಾತ್ = ಮನಃ ಪೂರ್ವರೂಪಂ (ಐ.ಆ. 3-1-1) ಎಂಬುದಾಗಿ ಮನಃಕಾರಣಕತ್ವವು ಶ್ರುತವಾಗುತ್ತಿರುವುದರಿಂದ, ವಾಗಿಂದ್ರಿಯವು ಉತ್ಪತ್ತಿ ಉಳ್ಳದ್ದೇ ಆಗಿದೆ. ಹೊರತು ಅನುತ್ಪತ್ತಿ ಉಳ್ಳದ್ದಲ್ಲ. (ಅನಾದಿಯಲ್ಲ)

## ಸಿದ್ಧಾಂತ

**ಸೂ.ರ.:-** एवं च वागुत्पत्तिमती । वागुत्तररूपमिति कार्यत्व-श्रवणात् । न च कारणाभावात्कार्यत्वमनुपपन्नम् । मनः पूर्वरूपमिति शाखान्तरश्रुत्याऽर्थान्मनःकारणकत्वस्य सिद्ध्या कार्यत्वोपपत्तेः । न च श्रुतिविरोधः । श्रुतेरुपचारेण नित्यत्वाभिधानात् । न च नित्याश्रयत्व-युक्त्या नित्यत्वम् । वाचो नित्यश्रुतिसंनिधियोग्यताया एवाङ्गीकृतत्वेन नित्यफलोपहितश्रुत्याश्रयत्वानङ्गीकारात् । श्रुत्यर्थपर्यालोचनयौपचारिक-नित्यत्वस्यैव लाभात् । एवं सत्येव हि वेदाश्रयत्वेन नित्यया पुराणाश्रय-त्वेनानित्यया स्तौमीति वाक्यार्थो घटते नान्यथा । अतः श्रुत्यविरोधे-नोत्पत्तिसिद्धेर्वाचो युक्तः श्रुतिसमन्वयो जगत्कारणे हराविति सिद्धम् ॥

**ಅನು.:-** 'ವಾಗುತ್ತರರೂಪಮ್ ...' ಎಂಬುದಾಗಿ ವಾಕ್‌ಗೆ ಕಾರ್ಯತ್ವವು ಶ್ರುತವಾಗುತ್ತಿರುವುದರಿಂದ ವಾಕ್ ಉತ್ಪತ್ತಿ ಉಳ್ಳದ್ದಾಗಿದೆ.

ವಾಕ್‌ಗೆ ಕಾರಣವಾದದ್ದು ಯಾವುದೂ ಇಲ್ಲವಾದ್ದರಿಂದ ಕಾರ್ಯತ್ವವು ಅನುಪಪನ್ನ ಎಂದು ಶಂಕಿಸುವುದು ಸರಿಯಲ್ಲ. 'ಮನಃ ಪೂರ್ವರೂಪಂ ...' (ಐ.ಆ. 3-1-1) ಎಂಬ ಶಾಖಾಂತರಶ್ರುತಿಯಿಂದ ವಾಕ್‌ಗೆ ಮನಃಕಾರಣಕತ್ವವು ಸಿದ್ಧಿಸುವುದರಿಂದ ಕಾರ್ಯತ್ವವು ಉಪಪನ್ನವಾಗುತ್ತದೆ.

ವಾಕ್‌ಗೆ ಉತ್ಪತ್ತಿಯನ್ನು ಅಂಗೀಕರಿಸುವುದಾದರೆ 'ವಾಗ್ವಾವ ...' ಎಂಬ ಅನಾದಿತ್ವ-ಶ್ರುತಿವಿರೋಧ ಬರುವುದಲ್ಲ? ಎಂದರೆ, ಶ್ರುತಿವಿರೋಧ ಬರುವುದಿಲ್ಲ. ಶ್ರುತಿಯು ಉಪಚಾರದಿಂದ (ಔಪಚಾರಿಕವಾಗಿ) ವಾಕ್‌ಗೆ ನಿತ್ಯತ್ವವನ್ನು ಹೇಳುತ್ತಿದೆಯಾದ್ದರಿಂದ ಶ್ರುತಿವಿರೋಧ ಬರುವುದಿಲ್ಲ.

ವಾಕ್‌ಗೆ ಅನಿತ್ಯತ್ವವನ್ನು ಹೇಗೆ ಹೇಳಲು ಬರುತ್ತದೆ? 'ವಾಕ್ ಅನುತ್ಪತ್ತಿಮತೀ ನಿತ್ಯಶ್ರುತ್ಯಾಶ್ರಯತ್ವಾತ್' ಎಂಬುದಾಗಿ ನಿತ್ಯಶ್ರುತ್ಯಾಶ್ರಯತ್ವ ಯುಕ್ತಿಯಿಂದಾಗಿ ನಿತ್ಯತ್ವವೇ ಸಿದ್ಧಿಸುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ವಾಕ್‌ಗೆ ನಿತ್ಯಶ್ರುತಿಸನ್ನಿಧಿಯೋಗ್ಯತೆಯನ್ನೇ ಅಂಗೀಕರಿಸಿದ್ದರಿಂದ, ನಿತ್ಯಫಲೋಪಹಿತಶ್ರುತ್ಯಾಶ್ರಯತ್ವವನ್ನು ಅಂಗೀಕರಿಸಿಲ್ಲ.

ಶ್ರುತ್ಯರ್ಥವನ್ನು ಪರ್ಯಾಲೋಚನೆ ಮಾಡಿದರೆ ಔಪಚಾರಿಕನಿತ್ಯತ್ವವೇ ಲಭಿಸುತ್ತದೆ. ಈ ರೀತಿ ಅಂಗೀಕರಿಸಿದರೆ ಮಾತ್ರ ವೇದಾಶ್ರಯತ್ವೇನ ನಿತ್ಯವಾದ, ಪುರಾಣಾಶ್ರಯತ್ವೇನ ಅನಿತ್ಯವಾದದ್ದರಿಂದ ಸ್ತೌಮಿ ಎಂಬ ವಾಕ್ಯಾರ್ಥ ಘಟಿಸುತ್ತದೆ. ಹೊರತು ಅನ್ಯಥಾ ಅಲ್ಲ. ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ವಾಕ್‌ಗೆ ಉತ್ಪತ್ತಿಯು ಸಿದ್ಧಿಸುವುದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ತತ್ಪೂರ್ವಕತ್ವಾಧಿಕರಣವು ಮುಗಿಯಿತು.**

*ಅಧಿಕರಣ – 4*

# ಸಪ್ತಗತ್ಯಧಿಕರಣ

## ಸಂಗತಿ

**ಸೂ.ರ.:– अत्र प्राणसङ्ख्याविषयश्रुतिविरोधः परिह्रियते ।**

**ಅನು.:–** ಪ್ರಾಣಸಂಖ್ಯಾವಿಷಯಶ್ರುತಿವಿರೋಧವನ್ನು ಪರಿಹರಿಸುತ್ತಾರೆ ನಾಲ್ಕನೇ ಈ ಸಪ್ತಗತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु 'सप्त प्राणाः प्रभवन्ति' इति (मुं. २-१-८) 'द्वादश वा' इति (कौंडिण्य.) च श्रुत्योः परस्परविरुद्धत्वादनिर्णायकत्वम् । न चान्यतरश्रुत्याऽन्तरबाधो युक्तः । समबलत्वात् ।**

**ಅನು.:–** "ಸಪ್ತ ಪ್ರಾಣಾಃ ಪ್ರಭವಂತಿ" (ಮುಂ. 2-1-8) ಎಂಬ ಶ್ರುತಿ ಹಾಗೂ 'ದ್ವಾದಶ ವಾ" (ಕೌಂಡಿನ್ಯ) ಶ್ರುತಿ ಎರಡೂ ಪರಸ್ಪರ ವಿರುದ್ಧವಾದ್ದರಿಂದ ಅನಿರ್ಣಾಯಕ-ವಾಗಿವೆ. (ನಿರ್ಣಾಯಕವಾಗಿಲ್ಲ)

ಎರಡು ಶ್ರುತಿಗಳಲ್ಲಿ ಒಂದು ಶ್ರುತಿಯಿಂದ ಒಂದು ಶ್ರುತಿಗೆ ಬಾಧ ಹೇಳಬಹುದಲ್ಲ? ಎಂದರೆ, ಅದು ಸರಿಯಲ್ಲ, ಕಾರಣ ಎರಡೂ ಶ್ರುತಿಗಳು ಸಮಬಲವಾದ್ದರಿಂದ ಪ್ರಬಲವೇ ಆಗಿವೆ. ಹೀಗಾಗಿ ಅನ್ಯತರಶ್ರುತಿಯಿಂದ ಅನ್ಯತರಶ್ರುತಿಗೆ ಬಾಧ ಹೇಳಲು ಬರುವುದಿಲ್ಲ.

**ಸೂ.ರ.:–** **न चाभिमानिनां सप्तत्वात्प्राणानामपि सप्तत्वमेव । अभिमान्यभिमन्यमानयोः समसंख्यात्वनियमात् । न च सप्तत्वश्रुतिः सयुक्तिकत्वेन प्रबला । द्वादश वेति श्रुतौ प्राणमासादीनामेक-दैवत्याभिप्रायेण द्वादश मासा इत्यभिहितत्वेन प्राणाभिमानिनां द्वादशत्वेन प्राणानामपि द्वादशत्वं वाच्यम् । उक्तयुक्तेरत्रापि साम्यात् ।**

**ಅನು.:–** ಅಭಿಮಾನಿ-ಅಭಿಮನ್ಯವಾದವುಗಳಲ್ಲಿ ಸಮಸಂಖ್ಯಾಕತ್ವ ನಿಯಮ ಇರುವುದರಿಂದ ಪ್ರಕೃತ ಅಭಿಮಾನಿಗಳು ಸಪ್ತಸಂಖ್ಯೆಯಲ್ಲಿ ಇರುವ ಕಾರಣ ಪ್ರಾಣಗಳಿಗೂ ಸಪ್ತತ್ವವನ್ನು ಹೇಳಬೇಕು. ಹೀಗೆ ಸಪ್ತತ್ವಶ್ರುತಿಯು ಸಯುಕ್ತಿಕವಾದ್ದರಿಂದ ಪ್ರಬಲವಾಗಿದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ದ್ವಾದಶ ವಾ ಎಂಬ ಶ್ರುತಿಯಲ್ಲಿ ಪ್ರಾಣಾದಿಗಳನ್ನು ಏಕದೈವತ್ಯಾಭಿಪ್ರಾಯದಿಂದ ದ್ವಾದಶ ಮಾಸಾಃ ಎಂದು ಹೇಳಿದ್ದರಿಂದ, ಪ್ರಾಣಾಭಿಮಾನಿಗಳು ದ್ವಾದಶಸಂಖ್ಯೆಯಲ್ಲಿ ಇರುವುದರಿಂದ ಪ್ರಾಣಾದಿಗಳಿಗೂ ದ್ವಾದಶತ್ವವನ್ನು ಹೇಳಬೇಕಾಗುತ್ತದೆ. ಅಭಿಮಾನಿ-ಅಭಿಮನ್ಯವಾದವುಗಳಲ್ಲಿ ಸಮಸಂಖ್ಯಾಕತ್ವನಿಯಮವು ಇಲ್ಲಿಯೂ ಸಮಾನವಾಗುತ್ತದೆ.

**ಸೂ.ರ.:–** **न च द्वादशप्राणेषु सप्तप्राणा अपि सम्भवन्तीति श्रुत्योर-विरोधः । द्वादशत्वे कारणविशेषाभावेन सप्तत्वोक्तेरयोगात् । ततश्च श्रुत्योरप्रामाण्येन न श्रुतिसमन्वयेनेश्वरस्य जगत्कारणत्वं युक्तमिति प्राप्ते सूत्रितम् ॥**

**ಅನು.:–** ದ್ವಾದಶಪ್ರಾಣಗಳಲ್ಲಿ ಸಪ್ತಪ್ರಾಣಗಳೂ ಸೇರುವುದರಿಂದ (ಸಂಭವಿಸು-ವುದರಿಂದ) ಸಪ್ತತ್ವಶ್ರುತಿದ್ವಾದಶತ್ವಶ್ರುತಿಗಳಲ್ಲಿ ವಿರೋಧ ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ. ಪ್ರಾಣಗಳು ದ್ವಾದಶ ಇವೆ ಎಂದಾದರೆ ಕಾರಣವಿಶೇಷ ಇಲ್ಲವಾದ್ದರಿಂದ ಸಪ್ತತ್ವೋಕ್ತಿಯು ಯುಕ್ತವಾಗುವುದಿಲ್ಲ. ಆದ್ದರಿಂದ ಎರಡೂ ಶ್ರುತಿಗಳಲ್ಲಿ ಪರಸ್ಪರವಿರೋಧ-ನಿಮಿತ್ತವಾಗಿ ಅಪ್ರಾಮಾಣ್ಯ ಬರುವುದರಿಂದ, ಶ್ರುತಿಸಮನ್ವಯ ಮೂಲಕವಾಗಿ ಈಶ್ವರನಿಗೆ

ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ सप्त गतेर्विशेषितत्वाच्च ॐ (२.४.६)**

ಗತೇಃ = ಜ್ಞಾನಸ್ಯ ಜನಕಾನಿ ಇಂದ್ರಿಯಾಣಿ = ಜ್ಞಾನಜನಕವಾದ ಇಂದ್ರಿಯಗಳು, ಸಪ್ತ = ಸಪ್ತಸಂಖ್ಯಾಕವಾಗಿವೆ ಎಂದು ನಿರ್ಣಯವೇ, ನ ತು ಅನಿರ್ಣಯಃ = ಹೊರತು ಅನಿರ್ಣಯವಲ್ಲ, ಕುತಃ = ಏಕೆ?, ವಿಶೇಷಿತತ್ವಾತ್ = ಸಪ್ತ ಪ್ರಾಣಾಃ ಎಂಬ ಶ್ರುತಿಯಲ್ಲಿ ಗುಹಾಶಯಾಂ ಬುದ್ಧ್ಯರ್ಥಂ ನಿಹಿತಾಃ ಎಂಬುದಾಗಿ ಜ್ಞಾನಾರ್ಥತ್ವೇನ ವಿಶೇಷಿತವಾದ್ದ-ರಿಂದ, ಚ=ಸಪ್ತಪ್ರಾಣಾಸ್ತ್ವವಗತೇಃ ಎಂಬುದಾಗಿ ಪ್ರಮಾಣವೂ ಇರುವುದರಿಂದ.

## ಸಿದ್ಧಾಂತ

**ಸೂ.ರ.:– एवं च द्वादशैव प्राणाः । द्वादश वेति श्रुतेः । न च सप्तत्वश्रुतिविरोधः । द्वादशप्राणेषु सप्तत्वस्यापि भावात् । न च प्राणानां द्वादशत्वे कारणाभावेन सप्तत्वोक्तेरयोगः । श्रोत्रचक्षुःस्पर्शनरसनघ्राण-मनोबुद्धीनां ज्ञानसाधनेन्द्रियत्वेन तद्विवक्षया सप्तत्वोक्तिसम्भवात् । न च तेषां ज्ञानार्थत्वमप्रसिद्धम् । गुहाशयां निहिता इति (मुं.२-१-८) वाक्यशेषसिद्धत्वात् । ततश्च श्रुत्योरविरोधेन प्रामाण्याच्छ्रुतिसमन्वयेन विष्णोर्जगत्कारणत्वं युक्तमिति सिद्धम् ॥**

ಅನು.:– ಇಂದ್ರಿಯಗಳು ದ್ವಾದಶಸಂಖ್ಯಾಕವೇ ಆಗಿವೆ. "ದ್ವಾದಶ ವಾ ಏತೇ ಪ್ರಾಣಾ ದ್ವಾದಶ ಮಾಸಾಃ" (ಕೌಂಡಿನ್ಯಶ್ರುತಿ) ಎಂಬುದಾಗಿ ಶ್ರುತಿ ಇರುವುದರಿಂದ.

ಹಾಗಾದರೆ – "ಸಪ್ತ ಪ್ರಾಣಾಃ ಪ್ರಭವಂತಿ" ಎಂಬ ಸಪ್ತತ್ವಶ್ರುತಿಯು ಇಂದ್ರಿಯಗಳಿಗೆ ಸಪ್ತತ್ವವನ್ನು ಹೇಳುತ್ತಿರುವುದರಿಂದ ಆ ಸಪ್ತತ್ವಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ಇಂದ್ರಿಯಗಳು ದ್ವಾದಶ ಎಂದು ಅಂಗೀಕರಿಸಿದರೆ ದ್ವಾದಶದಲ್ಲಿ ಸಪ್ತವೂ ಬರುವುದರಿಂದ ಸಪ್ತತ್ವಶ್ರುತಿವಿರೋಧ ಬರುವುದಿಲ್ಲ.

ಇಂದ್ರಿಯಗಳು ದ್ವಾದಶ ಎಂದಾದರೆ, ಸಪ್ತ ಎಂದು ಹೇಳಲು ಯಾವ ವಿವಕ್ಷಾ-ವಿಶೇಷವೂ ಇಲ್ಲವಾದ್ದರಿಂದ ಸಪ್ತತ್ವೋಕ್ತಿಯು ವ್ಯರ್ಥವಾಗುತ್ತದೆಯಲ್ಲವೇ? ಎಂದರೆ, ಅದು

ಸರಿಯಲ್ಲ, ಶ್ರೋತ್ರ-ಚಕ್ಷು-ಸ್ಪರ್ಶನ-ರಸನ-ಘ್ರಾಣ- ಮನಸ್ಸು-ಬುದ್ಧಿಗಳು ಜ್ಞಾನಸಾಧನ ಇಂದ್ರಿಯವಾದ್ದರಿಂದ, ಅವುಗಳು ಏಳು ಇರುವುದರಿಂದ, ಅವುಗಳ ವಿವಕ್ಷೆಯಿಂದ ಸಪ್ತತ್ವೋಕ್ತಿಯು ಉಪಪನ್ನವಾಗುತ್ತದೆ.

ಶ್ರೋತ್ರಾದಿಗಳು ಜ್ಞಾನಸಾಧನ ಇಂದ್ರಿಯಗಳಾಗಿವೆ ಎನ್ನುವುದೇ ಅಪ್ರಸಿದ್ಧ? (ಅವುಗಳಿಗೆ ಜ್ಞಾನಾರ್ಥತ್ವವೇ ಅಪ್ರಸಿದ್ಧ?) ಎಂದರೆ, ಅದೂ ಸರಿಯಲ್ಲ

ಗುಹಾಶಯಾಂ ನಿಹಿತಾಃ ಸಪ್ತ ಸಪ್ತ (ಮುಂ.ಉ. 2-1-8) ಎಂಬ ವಾಕ್ಯಶೇಷದಲ್ಲಿ ಶ್ರೋತ್ರಾದಿಗಳಿಗೆ ಜ್ಞಾನಾರ್ಥತ್ವವು ಪ್ರತಿಪಾದಿತವಾಗಿದೆ. (ಗುಹಾ ಹೃದಯಂ ಆಶಯಃ ಸ್ಥಾನಂ ಯಸ್ಯಾ ಬುದ್ಧೇಸ್ತದರ್ಥಂ ಯೇ ಪ್ರತಿಶರೀರಂ ಸಪ್ತ ಸಪ್ತ ಪ್ರಾಣಾ ನಿಹಿತಾಃ ತೇ ಯತ್ರ ಚರಂತಿ ಎಂದು ಶ್ರುತಿಯ ಅರ್ಥ.)

ಆದ್ದರಿಂದ ದ್ವಾದಶತ್ವಶ್ರುತಿ-ಸಪ್ತತ್ವಶ್ರುತಿಗಳಲ್ಲಿ ವಿರೋಧ ಬಾರದ ಕಾರಣ ಎರಡು ಶ್ರುತಿಗಳಿಗೂ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 7

## ಆಕ್ಷೇಪ

**ಸೂ.ರ.:– ननु सप्तभ्योऽन्येषां प्राणानां सद्भावेऽत्राथर्वणश्रुतौ तेषां परमात्मजन्यत्वेनोच्यमानैः सप्तभिः 'सह सप्त पञ्च प्राणाः' इति पाठः स्यात् । अत्र सहपाठाभावो द्वेधा भवेत् । अनादित्वेन वा परमात्मनस्तदकारणत्वेन वेति । तदुभयमपि 'तथा प्राणाः' इत्युक्त(सू.२-४-१)विरुद्धम् । न च सहपाठे वा परमात्मनस्तदकारणत्वे वा कारणान्तरमस्ति । अकारणकार्योत्पत्तिश्चायुक्ता । ततश्च सहपाठाभावान्न सप्तभ्योऽन्ये प्राणाः सन्तीति प्राप्ते परिहरत्सूत्रं पठति ।**

**ಅನು.:–** ಏಳು ಇಂದ್ರಿಯಗಳಿಂದ ಭಿನ್ನವಾದ ಇಂದ್ರಿಯಗಳು ಇರುವುದಾದರೆ ಇಲ್ಲಿ 'ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್' ಎಂಬ ಶ್ರುತಿಯಲ್ಲಿ ಅವುಗಳಿಗೆ ಪರಮಾತ್ಮಜನ್ಯತ್ವೇನ ಉಚ್ಯಮಾನವಾದ ಏಳರಿಂದ "ಸಹ ಸಪ್ತ ಪಂಚ ಪ್ರಾಣಾಃ" ಎಂದು ಸಹಪಾಠ ಇರಬೇಕಿತ್ತು.

ಈಗ ಸಹಪಾಠ ಇಲ್ಲ, ಸಹಪಾಠಾಭಾವವು ಎರಡು ರೀತಿಯಾಗಿ ಉಪಪನ್ನ. ಒಂದು

ಅನಾದಿತ್ವೇನ, ಇನ್ನೊಂದು ಪರಮಾತ್ಮನು ಅದಕ್ಕೆ ಕಾರಣವಾಗಿಲ್ಲವಾದ್ದರಿಂದ. ಎರಡೂ ಸಹ 'ತಥಾ ಪ್ರಾಣಾಃ' (2-4-1) ಎಂಬುದಕ್ಕೆ ವಿರುದ್ಧವಾಗುತ್ತದೆ. ಅನಾದಿತ್ವವಿಷಯದಲ್ಲಿ-ಯಾಗಲೀ, ಪರಮಾತ್ಮನು ಕಾರಣನಲ್ಲ ಎಂಬ ವಿಷಯದಲ್ಲಿಯಾಗಲೀ ಬೇರೆ ಕಾರಣ ಯಾವುದೂ ಇಲ್ಲ. ಕಾರಣ ಇಲ್ಲದೇ ಕಾರ್ಯ ಹುಟ್ಟುವುದು ಇನ್ನೂ ಅಯುಕ್ತ. ಆದ್ದರಿಂದ ಸಹಪಾಠ ಇಲ್ಲವಾದ್ದರಿಂದ ಏಳರಿಂದ ಭಿನ್ನವಾದ ಇಂದ್ರಿಯಗಳು ಇಲ್ಲ ಎಂದು ಆಕ್ಷೇಪ ಬಂದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ಓಂ हस्तादयस्तु स्थितेऽतो नैवम् ಓಂ (२.४.७)

ಯತಃ = ಯಾವ ಕಾರಣ, ಹಸ್ತಾದಯಸ್ತು = ಹಸ್ತಾದಿ ಇಂದ್ರಿಯಗಳಾದರೂ, ಸ್ಥಿತೇ = (ಸ್ಥಿತಂ ಕರ್ಮ ತಾದರ್ಥ್ಯೇ ಸಪ್ತಮೀ ಕರ್ಮಾರ್ಥಾನಿ) ಕರ್ಮಗಳಿಗಾಗಿ ಇವೆಯೋ, ಅತಃ = ಅವುಗಳಿಂದ ವೈಲಕ್ಷಣ್ಯ ಇರುವುದರಿಂದ, ಏವಂ = ಜ್ಞಾನೇಂದ್ರಿಯ ಸಹಭಾವದಿಂದ, ನ ಪಠಿತಾನಿ = ಪಠಿತವಾಗಿಲ್ಲವೋ, ಅತಃ ತೇಷಾಂ ಸಪ್ತತಾ ಸಿದ್ಧೈವ = ಆದ್ದರಿಂದ ಅವುಗಳಿಗೆ (ಇಂದ್ರಿಯಗಳಿಗೆ) ಸಪ್ತತ್ವವು ಸಿದ್ಧವೇ.

### ಸಮಾಧಾನ

**ಸೂ.ರ.:- एवं च हस्तादीनां पञ्चानां स्थितिहेतुत्वलक्षणवैलक्षण्यमाश्रित्य सहपाठोपपत्तेः । अतः श्रुत्योरविरोधेन प्रामाण्याच्छ्रुतिसमन्वयेन विष्णोर्जगत्कारणत्वनिश्चयो युक्त इति सिद्धम् ॥**

**ಅನು.:-** ಹಸ್ತಾದಿ ಐದು ಇಂದ್ರಿಯಗಳ ಸ್ಥಿತಿಹೇತುತ್ವಲಕ್ಷಣವೈಲಕ್ಷಣ್ಯವನ್ನು ಆಶ್ರಯಿಸಿ ಸಹಪಾಠವು ಉಪಪನ್ನವಾಗುತ್ತದೆ.

ಆದ್ದರಿಂದ ಎರಡೂ ಶ್ರುತಿಗಳಲ್ಲಿ ವಿರೋಧ ಬಾರದ ಕಾರಣ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವನಿಶ್ಚಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸಪ್ತಗತ್ಯಧಿಕರಣವು ಮುಗಿಯಿತು.

ಅಧಿಕರಣ – 5

# ಅಣ್ವಧಿಕರಣ

## ಸಂಗತಿ

**ಸೂ.ರ.:– अत्र प्राणपरिमाणविषयश्रुतिविरोधः परिह्रियते ।**

**ಅನು.:–** ಇಂದ್ರಿಯಗಳ ಪರಿಮಾಣವಿಷಯಕಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಐದನೇ ಈ ಅಣ್ವಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु व्याप्ताः प्राणाः । दिवीव चक्षुरिति (ऋ.१-२२-२०) व्याप्तिश्रुतेः । दूरस्थवस्तुदर्शनश्रवणानुसन्धानादियुक्तेश्च । न चाणुत्व(कौण्डिण्य.)श्रुतिविरोधः । विष्णोर्व्याप्तत्वे दृष्टान्तत्वेन चक्षुर्व्याप्तेरुक्तत्वेनैतच्छ्रुतेः प्राबल्यात् । अतः प्रबलव्याप्तिश्रुतिविरोधादणुत्वश्रुतिरप्रमाणमेवेति प्राप्ते सूत्रमाह ॥**

**ಅನು.:–** "ದಿವೀವ ಚಕ್ಷುರಾತತಮ್" (ಋ.ಸಂ. 1-22-20) ಎಂಬುದಾಗಿ ಇಂದ್ರಿಯಗಳಿಗೆ ವ್ಯಾಪ್ತಿಯನ್ನು ತಿಳಿಸುವ ಶ್ರುತಿ ಇರುವುದರಿಂದ ಇಂದ್ರಿಯಗಳು ವ್ಯಾಪ್ತವೇ ಆಗಿವೆ. ಮತ್ತು ಇಂದ್ರಿಯಗಳು ವ್ಯಾಪ್ತವಾಗಿವೆ ಎಂದಾದರೇನೇ ದೂರಸ್ಥವಸ್ತು-ದರ್ಶನ-ಶ್ರವಣ-ಅನುಸಂಧಾನಾದಿಗಳು ಉಪಪನ್ನವಾಗುವುದರಿಂದ, ದೂರಸ್ಥವಸ್ತು-ದರ್ಶನ-ಶ್ರವಣ-ಅನುಸಂಧಾನಾದಿಯುಕ್ತಿಗಳಿಂದಲೂ ಸಹ ಇಂದ್ರಿಯಗಳಿಗೆ ವ್ಯಾಪ್ತತ್ವವು ಸಿದ್ಧಿಸುತ್ತದೆ.

ಇಂದ್ರಿಯಗಳು ವ್ಯಾಪ್ತ ಎನ್ನುವುದಾದರೆ, "ಅಣುಭಿಃ ಪಶ್ಯತಿ, ಅಣುಭಿಃ ಶೃಣೋತಿ" (ಕೌಂಡಿನ್ಯಶ್ರುತಿ) ಎಂಬ ಅಣುತ್ವ ಪ್ರತಿಪಾದಕ ಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಅದು ಸರಿಯಲ್ಲ. ವಿಷ್ಣು ವ್ಯಾಪ್ತನಾಗಿದ್ದಾನೆ ಎಂಬ ವಿಷಯದಲ್ಲಿ ದೃಷ್ಟಾಂತವಾಗಿ ಚಕ್ಷುರ್ವ್ಯಾಪ್ತಿಯನ್ನು ಹೇಳುತ್ತಿರುವುದರಿಂದ ಈ ವ್ಯಾಪ್ತಿಶ್ರುತಿಯು ಪ್ರಬಲವಾಗಿದೆ. ಹಾಗಾಗಿ ಪ್ರಬಲವಾದ ವ್ಯಾಪ್ತಿಶ್ರುತಿಯ ವಿರೋಧ ಬರುತ್ತಿರುವುದರಿಂದ ಅಣುತ್ವಪ್ರತಿಪಾದಕವಾದ

ಶ್ರುತಿಯು ಅಪ್ರಮಾಣವೇ ಆಗುತ್ತದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ अणवश्च ॐ (२.४.८)**

ಪ್ರಾಣಾಃ = ಇಂದ್ರಿಯಗಳು, ಅಣವಃ = ಸ್ವತಃ ಅಣುವಾಗಿವೆ, ನ ಕೇವಲಂ ಅಣೂನಿ =ಕೇವಲ ಅಣುವಷ್ಟೇ ಅಲ್ಲ ಕಿಂತು ಚ ತೇಜಸಾ ವ್ಯಾಪ್ತಾನಿ ಚ = ತೇಜಸ್ಸಿನಿಂದ ವ್ಯಾಪ್ತವೂ ಆಗಿವೆ.

## ಸಿದ್ಧಾಂತ

**ಸೂ.ರ.:– एवं चाणव एव हि प्राणाः । तथा श्रुतेः । न च दिवीव चक्षुरिति प्रबलश्रुतिविरोधेनाणुत्वाभावः । अणुत्वस्यापि तद्यथा ह्यणुन इति (शाण्डिल्य.) प्रबलश्रुतिसिद्धत्वात् । न चैवं सत्यनिर्णयः । तद्यथा ह्यणुन इति श्रुतेर्विस्पष्टवादित्वेन व्याप्तिश्रुतितोऽपि बलवत्वात् । न च तदप्रमाणम् । तद्यथा ह्यणुन इति श्रुत्यनुसारेण व्याप्तिश्रुतेस्तेजसां व्याप्त्यर्थकत्वनिर्णयेन युक्तिविरोधस्य पराकृतत्वात् । अतः श्रुत्यविरोधेन प्राणानामणुत्वमिति सिद्धम् ॥**

**ಅನು.:–** ಇಂದ್ರಿಯಗಳು ಅಣುವಾಗಿವೆ ಎಂದು ತಿಳಿಸುವ ಶ್ರುತಿ ಇರುವುದರಿಂದ, ಇಂದ್ರಿಯಗಳು ಅಣುಗಳೇ ಆಗಿವೆ.

ಹೌದು, "ದಿವೀವ ಚಕ್ಷುರಾತತಮ್" (ಋ.ಸಂ. 1-22-20) ಎಂಬ ಪ್ರಬಲ-ಶ್ರುತಿಯ ವಿರೋಧ ಬರುವುದರಿಂದ ಇಂದ್ರಿಯಗಳಿಗೆ ಅಣುತ್ವವನ್ನು ಹೇಳಲು ಬರುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ, ಕಾರಣ –

"ತದ್ಯಥಾ ಹ್ಯಣುನಶ್ಚಕ್ಷುಸಃ ಪ್ರಕಾಶೋ ವ್ಯಾತತ ಏವಮೇವಾಸ್ಯ ಪುರುಷಸ್ಯ ಪ್ರಕಾಶೋ ವ್ಯಾತತೋಽಣುರ್ಹ್ಯೇಷ ಪುರುಷೋ ಭವತಿ" (ಶಾಂಡಿಲ್ಯಶ್ರುತಿ) ಎಂಬುದಾಗಿ ಪ್ರಬಲವಾದ ಶ್ರುತಿಯಿಂದ ಇಂದ್ರಿಯಗಳಿಗೆ ಅಣುತ್ವವೂ ಸಿದ್ಧವಾಗಿದೆ.

ಹಾಗಾದರೆ ವ್ಯಾಪ್ತಿವಿಷಯದಲ್ಲಿಯೂ ಪ್ರಬಲಶ್ರುತಿ ಇದೆ, ಅಣುತ್ವವಿಷಯದಲ್ಲಿಯೂ ಪ್ರಬಲಶ್ರುತಿ ಇದೆ ಎಂದಾದರೆ ಇಂದ್ರಿಯಗಳು ವ್ಯಾಪ್ತವಾಗಿವೆ ಅಥವಾ ಅಣುವಾಗಿವೆ ಎಂದು ನಿರ್ಣಯವೇ ಆಗುವುದಿಲ್ಲವಲ್ಲ? ಎಂದರೆ, ಅದು ಸರಿಯಲ್ಲ.

'ತದ್ಯಥಾ ಹ್ಯಣುನಶ್ಚಕ್ಷುಃ' ಎಂಬ ಶ್ರುತಿಯು ವಿಸ್ಪಷ್ಟವಾದಿಯಾದ್ದರಿಂದ ವ್ಯಾಪ್ತಿಶ್ರುತಿಗಿಂತಲೂ ಪ್ರಬಲವಾಗಿದೆ. ಹಾಗಾಗಿ ಪ್ರಬಲವಾದ ಅಣುತ್ವಶ್ರುತಿಗೆ ಅನುಸಾರವಾಗಿ ಇಂದ್ರಿಯಗಳು ಅಣುವೇ ಆಗಿವೆ ಎಂದು ನಿರ್ಣಯವಾಗುತ್ತದೆ.

ಹಾಗಾದರೆ ವಿಸ್ಪಷ್ಟವಾದ ಅಂತೆಯೇ ಪ್ರಬಲವಾದ ಶ್ರುತಿಗೆ ವಿರುದ್ಧವಾದ್ದರಿಂದ ಅಣುತ್ವಶ್ರುತಿಯು ಅಪ್ರಮಾಣವೇ? ಎಂದರೆ, ಹಾಗಲ್ಲ. ತದ್ಯಥಾ ಹ್ಯಣುನಃ ಎಂಬ ಶ್ರುತಿಗೆ ಅನುಸಾರವಾಗಿ ವ್ಯಾಪ್ತಿಶ್ರುತಿಯು ಇಂದ್ರಿಯಗಳ ತೇಜಸ್ಸಿಗೆ ವ್ಯಾಪ್ತಿಯನ್ನು ಹೇಳುತ್ತಿದೆ ಎಂದು ನಿರ್ಣಯವಾಗುವುದರಿಂದ ಯುಕ್ತಿವಿರೋಧ ಬರುವುದಿಲ್ಲ.

ಆದ್ದರಿಂದ ಶ್ರುತಿಗಳಲ್ಲಿ ವಿರೋಧ ಬರುವುದಿಲ್ಲವಾದ್ದರಿಂದ ಪ್ರಬಲವಾದ ಅಣುತ್ವಶ್ರುತಿಗೆ ಅನುಸಾರವಾಗಿ ಇಂದ್ರಿಯಗಳು ಅಣುವೇ ಆಗಿವೆ ಎಂದು ಸಿದ್ಧವಾಗುತ್ತದೆ.

ಅಣ್ವಧಿಕರಣವು ಮುಗಿಯಿತು.

*ಅಧಿಕರಣ – 6*

## ಶ್ರೈಷ್ಠ್ಯಾಧಿಕರಣ

### ಸಂಗತಿ

**ಸೂ.ರ.:– अत्र मुख्यप्राणजन्मविषयश्रुतिविरोधः परिह्रियते ।**

ಅನು.:– ಮುಖ್ಯಪ್ರಾಣಜನ್ಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಆರನೇ ಈ ಶ್ರೈಷ್ಠ್ಯಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु नोत्पत्तिमान्मुख्यप्राणः । नैष प्राण इति श्रुतेः । न च मुख्यवाय्वनुत्पत्तिश्रुतिवदियमपि श्रुतिरन्यथा योजनीया । तस्याखिलोत्पत्तिमरणकारणत्वेनोत्पत्त्याद्ययोग इति युक्तियुक्तानादित्वश्रुतेः**

**प्राबल्यात् । अतः प्रबलानादित्वश्रुतिविरोधादुत्पत्तिश्रुतेरप्रामाण्यान्न जगत्कारणे परमेश्वरे श्रुतिसमन्वयोपपत्तिरिति प्राप्ते सूत्रमाह ॥**

**ಅನು.:–** ಮುಖ್ಯಪ್ರಾಣನು ಉತ್ಪತ್ತಿ ಉಳ್ಳವನಲ್ಲ. ''ನೈಷ ಪ್ರಾಣ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ । ಅಥೈನಮಾಹುರ್ಮಧ್ಯಮಃ'' ಎಂಬುದಾಗಿ ಮುಖ್ಯಪ್ರಾಣನಿಗೆ ಅನುತ್ಪತ್ತಿಯು ಶ್ರುತವಾಗುತ್ತಿದೆ. ಹಾಗಾಗಿ ಉತ್ಪತ್ತಿ ಉಳ್ಳವನಲ್ಲ.

ಮುಖ್ಯವಾಯುವಿಗೆ ಅನುತ್ಪತ್ತಿ ಹೇಳುವ ಶ್ರುತಿಯಂತೆ ಮುಖ್ಯವಾಯುವಿಗೆ ಉತ್ಪತ್ತಿ ಹೇಳುವ 'ಆತ್ಮತ ಏಷ ಪ್ರಾಣೋ ಜಾಯತೇ' ಎಂಬ (ಪ್ರ.ಉ.3.3) ಶ್ರುತಿಗೂ ಅನ್ಯಥಾ ಯೋಜನೆ ಮಾಡಲು ಬರುವುದಿಲ್ಲ. ಮುಖ್ಯಪ್ರಾಣನು ಎಲ್ಲ ಜಗತ್ತಿನ ಉತ್ಪತ್ತಿ-ಮರಣಗಳಿಗೆ ಕಾರಣನಾದ್ದರಿಂದ ಅಂತಹ ಮುಖ್ಯಪ್ರಾಣನಿಗೆ ಉತ್ಪತ್ತ್ಯಾದಿಗಳು ಯುಕ್ತವಲ್ಲ. ಈ ವಿಧವಾದ ಯುಕ್ತಿಯಿಂದ ಯುಕ್ತವಾದ್ದರಿಂದ ಅನಾದಿತ್ವಶ್ರುತಿಯು ಪ್ರಬಲವಾಗಿದೆ. ಅಂತಹ ಪ್ರಬಲ ಅನಾದಿತ್ವಶ್ರುತಿಯ ವಿರೋಧ ಬರುವುದರಿಂದ ಉತ್ಪತ್ತಿಶ್ರುತಿಯು ಅಪ್ರಮಾಣವಾಗುವ ಕಾರಣ ಜಗತ್ಕಾರಣನಾದ ಪರಮೇಶ್ವರನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ श्रेष्ठश्च ॐ (२.४.९)

ಯಥಾ ಇತರೇ ಪ್ರಾಣಾಃ ಉತ್ಪದ್ಯಂತೇ ಏವಂ = ಯಾವ ರೀತಿಯಾಗಿ ಇತರ ಪ್ರಾಣಗಳು ಹುಟ್ಟುತ್ತವೆಯೋ ಅದರಂತೆ, ಶ್ರೇಷ್ಠಃ ಮುಖ್ಯಪ್ರಾಣಃ ಚ = ಮುಖ್ಯಪ್ರಾಣನೂ ಸಹ, ವಿಷ್ಣೋಃ ಉತ್ಪದ್ಯತೇ = ವಿಷ್ಣುವಿನಿಂದ ಹುಟ್ಟುತ್ತಾನೆ, ನ ತ್ವನುತ್ಪತ್ತಿಮಾನ್ = ಹೊರತು ಅನುತ್ಪತ್ತಿ ಉಳ್ಳವನಲ್ಲ, ಅನಾದಿಯಲ್ಲ.

### ಸಿದ್ಧಾಂತ

**ಸೂ.ರ.:–** **एवं च यथेतरे प्राणा उत्पद्यन्ते तथा श्रेष्ठोऽपि मुख्यप्राण उत्पत्तिमानेव सौक्ष्म्येण ह वेति (गौपवन.) श्रुतेः । न चानादित्वश्रुति-विरोधः । तस्य सूक्ष्मरूपेण सदा स्थितेः स्थूलरूपेण कदाचिदुदितत्वस्य चोक्तत्वात् । स्थूलादिभावस्य स्वरूपत्वाभावान्न । यद्यप्यस्येतरजीव-साधारणत्वात् विशेषः । तथाऽपि शरीरादिष्वेवायं स्थूलो न त्वितरजीवा-**

नामिव चैतन्ये । तदभिमानिकृतविक्रियाविशेषवानिति विशेषसद्भावात् । अतः श्रुत्यविरोधेन मुख्यवायोर्जननसिद्धेर्युक्तं जगत्कारणत्वं श्रुतिसमन्वयेन वासुदेवस्येति सिद्धम् ॥

ಅನು.:- ''ಸೌಕ್ಷ್ಮ್ಯೇಣ ಹ ವಾ ಏಷೋಽವತಿಷ್ಠತೇ ಸ್ಥೂಲತ್ವೇನೋದೇತಿ ಸೂಕ್ಷ್ಮಶ್ಚಾಥೋ ಸ್ಥೂಲಶ್ಚ ಪ್ರಕೃತಿತಃ ಸೂಕ್ಷ್ಮೋಽನ್ಯತಃ ಸ್ಥೂಲೋಽಥೈನಮಾಹುಃ ಸಾದಿರನಾದಿರಿತಿ'' (ಗೌಪವನಶ್ರುತಿ)

ಎಂಬುದಾಗಿ ಶ್ರುತಿ ಇರುವುದರಿಂದ, ಹೇಗೆ ಇತರ ಪ್ರಾಣಗಳು ಉತ್ಪತ್ತಿ ಉಳ್ಳದ್ದೋ ಹಾಗೆ ಮುಖ್ಯಪ್ರಾಣನೂ ಸಹ ಉತ್ಪತ್ತಿ ಉಳ್ಳವನೇ ಆಗಿದ್ದಾನೆ.

ಹಾಗಾದರೆ ನೈಷ ಪ್ರಾಣಃ ಎಂಬ ಅನಾದಿತ್ವಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ಮುಖ್ಯಪ್ರಾಣನು ಸೂಕ್ಷ್ಮರೂಪದಿಂದ ಸದಾ ಇರುವುದರಿಂದ, ಸ್ಥೂಲರೂಪದಿಂದ ಕದಾಚಿತ್ ಉದಿತನಾಗುತ್ತಾನೆ ಎಂದು ಹೇಳಿದ್ದರಿಂದ ವಿರೋಧ ಬರುವುದಿಲ್ಲ.

ಯದ್ಯಪಿ ಮುಖ್ಯಪ್ರಾಣನು ಇತರ ಜೀವಸಾಧಾರಣನಾದ್ದರಿಂದ ಯಾವ ವಿಶೇಷವೂ ಇಲ್ಲ. ತಥಾಪಿ ಶರೀರಾದಿಗಳಲ್ಲಿಯೇ ಇವನು ಸ್ಥೂಲನಾಗಿದ್ದಾನೆ. ಹೊರತು ಇತರ ಜೀವರಂತೆ ಚೈತನ್ಯದಲ್ಲಿ ಸ್ಥೂಲನಾಗಿಲ್ಲ. ತದಭಿಮಾನಿಕೃತವಿಕ್ರಿಯಾವಿಶೇಷ ಉಳ್ಳವನು ಎಂಬ ವಿಶೇಷ ಇದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಜನನವು ಸಿದ್ಧವಾಗು-ವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಾಸುದೇವನಿಗೆ ಹೇಳಿದ ಜಗತ್ಕಾರಣತ್ವವು ಯುಕ್ತವೆಂದು ಸಿದ್ಧವಾಗುತ್ತದೆ.

### ಸೂತ್ರ - 10

### ಆಕ್ಷೇಪ

ಸೂ.ರ.:- नन्वनादित्वश्रुतेः सयुक्तिकत्वेन प्रबलत्वात्तदनु-सारेणोत्पत्तिश्रुतिरेव चेष्टाबाह्यवायुविषयतया व्याख्यातव्या । तयोरपि चेष्टायामिति वाक्ये प्राणशब्दवाच्यत्वोक्तेरेतयोरनुत्पत्तिवचनाभावे-नोत्पत्त्यङ्गीकारे विरोधाभावादिति प्राप्ते सूत्रमुपन्यस्यति ॥

**ಅನು.:–** ಅನಾದಿತ್ವಶ್ರುತಿಯು ಯುಕ್ತಿಸಹಿತವಾದ್ದರಿಂದ ಪ್ರಬಲವಾಗಿದೆ. ಹಾಗಾಗಿ ಅದಕ್ಕೆ ಅನುಸಾರವಾಗಿ ಉತ್ಪತ್ತಿಶ್ರುತಿಯನ್ನೇ ಚೇಷ್ಟಾ-ಬಾಹ್ಯವಾಯುವಿಷಯವಾಗಿ ಅನ್ಯಥಾ ವ್ಯಾಖ್ಯಾನಿಸಿಕೊಳ್ಳಬೇಕಿದೆ. ಚೇಷ್ಟಾ-ಬಾಹ್ಯವಾಯುಗಳೆರಡಕ್ಕೂ

**ಚೇಷ್ಟಾಯಾಂ ಬಾಹ್ಯವಾಯೌ ಚ ಮುಖ್ಯಪ್ರಾಣೇ ಚ ಗೀಯತೇ ।**
**ಪ್ರಾಣಶಬ್ದಸ್ತ್ರಿಷು ಹ್ಯೇಷು ಮುಖ್ಯೇ ಮುಖ್ಯಃ ಪ್ರಕೀರ್ತಿತಃ ॥**

ಎಂಬ ವಾಕ್ಯದಲ್ಲಿ ಪ್ರಾಣಶಬ್ದವಾಚ್ಯತ್ವವನ್ನು ಹೇಳಿದ್ದರಿಂದ ಉತ್ಪತ್ತಿಶ್ರುತಿಯು ಚೇಷ್ಟಾ-ಬಾಹ್ಯವಾಯುವಿಷಯಕವೆಂದು ಹೇಳಬೇಕು. ಈ ಚೇಷ್ಟಾ-ಬಾಹ್ಯವಾಯುಗಳಿಗೆ ಅನಾದಿತ್ವವಚನವಿಲ್ಲದ ಕಾರಣ ಉತ್ಪತ್ತಿಯನ್ನು ಅಂಗೀಕರಿಸಿದರೆ ವಿರೋಧ ಬರುವುದಿಲ್ಲ.

ಆದ್ದರಿಂದ ಮುಖ್ಯಪ್ರಾಣನಿಗೆ ಅನಾದಿತ್ವವನ್ನು ಹೇಳಿ, ಚೇಷ್ಟಾ-ಬಾಹ್ಯವಾಯುಗಳಿಗೆ ಉತ್ಪತ್ತಿಯನ್ನು ಹೇಳಬೇಕು ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

## ॐ न वायुक्रिये पृथगुपदेशात् ॐ (२.४.१०)

ವಾಯುಕ್ರಿಯೇ = ಬಾಹ್ಯವಾಯು-ಚೇಷ್ಟಾರೂಪಕರ್ಮ ಎರಡೂ, ನ = "ಏತಸ್ಮಾತ್..." (ಮುಂ. 2-1-3) ಎಂಬ ಪ್ರಾಣೋತ್ಪತ್ತಿ ಶ್ರುತಿಪ್ರತಿಪಾದ್ಯಗಳು ಆಗಲಾರವು. ಕಿಂತು ಮುಖ್ಯವಾಯುರೇವ = ಕಿಂತು ಮುಖ್ಯವಾಯುವೇ ಪ್ರಾಣೋತ್ಪತ್ತಿ ಶ್ರುತಿಪ್ರತಿಪಾದ್ಯನಾಗುತ್ತಾನೆ, ಕುತಃ = ಯಾಕೆ?, ಪೃಥಗುಪದೇಶಾತ್ = ಸ ಪ್ರಾಣಮಸೃಜತ (ಪ್ರ.6-4) ಇತ್ಯಾದಿಗಳಲ್ಲಿ ವಾಯುಕ್ರಿಯಾ-ಉತ್ಪತ್ತಿಗಳಿಂದ ಮುಖ್ಯವಾಯುವಿನ ಉತ್ಪತ್ತಿಯು ಶ್ರುತವಾಗುತ್ತಿರುವುದರಿಂದ.

### ಸಮಾಧಾನ

**ಸೂ.ರ.:–** एवं च स प्राणमसृजतेति श्रुतौ प्राणस्योत्पत्तिमत्त्वमभिधाय प्राणाच्च चेष्टावाय्वोः पृथगुत्पत्त्यभिधानात् । तथैव भूतानि चेष्टा मन्त्राश्चेति (वायुप्रोक्ते.) स्मृतावप्यभिधानात् । न च सर्वभूतोत्पत्तिकारणत्वेनोत्तमत्वेन तस्योत्पत्त्यभावः । महतोऽपि तस्य ततोऽप्यतिमहता विष्णुना जन्मसम्भवात् । अतः श्रुत्यविरोधेन मुख्यप्राणस्योत्पत्तिरिति सिद्धम् ॥

**ಅನು.**:– ಸ ಪ್ರಾಣಮಸೃಜತ ಎಂಬ ಶ್ರುತಿಯಲ್ಲಿ ಪ್ರಾಣನಿಗೆ ಉತ್ಪತ್ತಿಯನ್ನು ಹೇಳಿ, ಪ್ರಾಣನಿಂದ ಚೇಷ್ಟಾ-ವಾಯುಗಳಿಗೆ ಪ್ರತ್ಯೇಕವಾಗಿ ಉತ್ಪತ್ತಿಯನ್ನು ಹೇಳಿದ್ದರಿಂದ ಮುಖ್ಯಪ್ರಾಣನು ಉತ್ಪತ್ತಿ ಉಳ್ಳವನೇ ಆಗಿದ್ದಾನೆ.

**ಭೂತಾನಿ ಚೇಷ್ಟಾ ಮಂತ್ರಾಶ್ಚ ಮುಖ್ಯಪ್ರಾಣಾದಿದಂ ಜಗತ್ ।**
**ಮುಖ್ಯಪ್ರಾಣಃ ಪರಸ್ಮಾಚ್ಚ ನ ಪರಃ ಕಾರಣಾನ್ವಿತಃ ॥**

ಎಂಬುದಾಗಿ ವಾಯುಪ್ರೋಕ್ತದಲ್ಲಿ ಅದೇ ರೀತಿಯಾಗಿ ಹೇಳಿದ್ದಾರೆ ಕೂಡ.

ಹೌದು, ಸರ್ವಭೂತಗಳ ಉತ್ಪತ್ತಿಗೆ ಕಾರಣನಾದ್ದರಿಂದ ಉತ್ತಮನಾಗಿರುವ ಮುಖ್ಯ-ಪ್ರಾಣನಿಗೆ ಉತ್ಪತ್ತಿಯು ಕೂಡುವುದಿಲ್ಲವಲ್ಲ ? ಎಂದರೆ, ಅದು ಸರಿಯಲ್ಲ, ಮುಖ್ಯಪ್ರಾಣನು ಮಹಾನ್ ಆಗಿದ್ದರೂ ಅವನಿಗಿಂತಲೂ ಮಹಾನ್ ಆದ ವಿಷ್ಣುವಿನಿಂದ ಜನ್ಮವು ಸಂಭಾವಿತ-ವಾಗಿದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೂ ಉತ್ಪತ್ತಿಯು ಸಿದ್ಧ-ವಾಗುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಶ್ರೇಷ್ಠಾಧಿಕರಣವು ಮುಗಿಯಿತು.**

*ಅಧಿಕರಣ – 7*

# ಚಕ್ಷುರಾದ್ಯಾಧಿಕರಣ

## ಸಂಗತಿ

**ಸೂ.ರ.**:– **अत्र मुख्यप्राणस्वातन्त्र्यास्वातन्त्र्यश्रुतिविरोधः परिह्रियते ।**

**ಅನು.**:– ಮುಖ್ಯಪ್ರಾಣನಿಗೆ ಸ್ವಾತಂತ್ರ್ಯ-ಅಸ್ವಾತಂತ್ರ್ಯ ಬೋಧಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಏಳನೇ ಈ ಚಕ್ಷುರಾದ್ಯಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– नन्‌ स्वतन्त्र एव मुख्यप्राणः । किञ्चिदाश्रित इति (अग्निवेश्य.) श्रुतेः । न च प्राणस्येति (पैङ्गि.) पारतन्त्र्यश्रुतिविरोधः । स्वातन्त्र्यसाधकाखिलजगच्चेष्टकत्वयुक्तियुक्तत्वेन स्वातन्त्र्यश्रुतेर्बलवत्त्वात्‌ । न चोत्पत्तिमत्वयुक्तियुक्तत्वेन पारतन्त्र्यश्रुतिरपि बलवती । स्वातन्त्र्यवादिनो जन्मासम्प्रतिपत्तेः । जन्मश्रुतीनामप्येतच्छ्रुतिविरोधेनाप्रामाण्यात्‌ । प्रामाण्येऽपि लीलया विग्रहग्रहणसम्भवेन तस्य पारतन्त्र्यसाधकत्वाभावे पारतन्त्र्यश्रुतेः सयुक्तिकत्वाभावः । अतः प्रबलश्रुतिविरोधापरिहाराद्प्रमाणं पारतन्त्र्यश्रुतिः । अतो नारायणस्य श्रुतिसमन्वयेन जगत्कारणत्वा-सिद्धिरिति प्राप्ते सूत्रितम्‌ ॥**

**ಅನು.:–** ''ಪ್ರಾಣಾದಿದಮಾವಿರಾಸೀತ್ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯುಪೈತಿ ನ ಪ್ರಾಣಃ ಕಿಂಚಿದಾಶ್ರಿತಃ'' (ಅಗ್ನಿವೇಶ್ಯಶ್ರುತಿ)

ಎಂಬುದಾಗಿ ಶ್ರುತಿ ಇರುವುದರಿಂದ ಮುಖ್ಯಪ್ರಾಣನು ಸ್ವತಂತ್ರನೇ ಆಗಿದ್ದಾನೆ.

ಹೌದು ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಅಂಗೀಕರಿಸಿದರೆ,

**ಪ್ರಾಣಸ್ಯೈತದ್ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ ।**
**ನ ಪರಃ ಕಿಂಚಿದಾಶ್ರಿತ್ಯ ವರ್ತತೇ ಪರಮೋ ಯತಃ ॥**

ಎಂಬುದಾಗಿ ಪ್ರಾಣನಿಗೆ ಪಾರತಂತ್ರ್ಯವನ್ನು ತಿಳಿಸುವ ಪೈಂಗಿಶ್ರುತಿಯ ವಿರೋಧ ಬರುವುದಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಸ್ವಾತಂತ್ರ್ಯಸಾಧಕವಾದ ಅಖಿಲ-ಜಗಚ್ಚೇಷ್ಟಕತ್ವ ಎಂಬ ಯುಕ್ತಿಯಿಂದ ಯುಕ್ತವಾದ್ದರಿಂದ ಸ್ವಾತಂತ್ರ್ಯಶ್ರುತಿಯು ಪ್ರಬಲವಾಗಿದೆ.

ಉತ್ಪತ್ತಿಮತ್ವಯುಕ್ತಿಯಿಂದ ಯುಕ್ತವಾದ್ದರಿಂದ ಪಾರತಂತ್ರ್ಯಶ್ರುತಿಯೂ ಪ್ರಬಲ-ವಾಗಿದೆಯಲ್ಲ? ಎಂದರೆ, ಅದು ಸರಿಯಲ್ಲ. ಸ್ವಾತಂತ್ರ್ಯವಾದಿಯಾದವನಿಗೆ ಜನ್ಮವು ಸಂಪ್ರತಿಪನ್ನವಾಗಿಲ್ಲ. ಜನ್ಮಶ್ರುತಿಗಳಿಗೂ ಸಹ ಈ ಶ್ರುತಿಯ ವಿರೋಧ ಬರುವುದರಿಂದ ಅಪ್ರಾಮಾಣ್ಯ ಉಂಟು. ಅಥವಾ ಜನ್ಮಶ್ರುತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸಿದರೂ ಸಹ

ಲೀಲೆಯಿಂದ ದೇಹವನ್ನು ಗ್ರಹಣ ಮಾಡುವ ಸಂಭವ ಇರುವುದರಿಂದ ಉತ್ಪತ್ತಿಮತ್ತ್ವ-ಯುಕ್ತಿಯು ಪಾರತಂತ್ರ್ಯಸಾಧಕವಾಗುವುದಿಲ್ಲ. ಯಾವಾಗ ಯುಕ್ತಿಯು ಸಾಧಕ-ವಾಗುವುದಿಲ್ಲವೋ ಆಗ ಪಾರತಂತ್ರ್ಯಶ್ರುತಿಯು ಸಯುಕ್ತಿಕವಾಗುವುದಿಲ್ಲ. ಹೀಗಾಗಿ ಸಯುಕ್ತಿಕವಾಗದ ಕಾರಣ ಪ್ರಬಲವಾಗುವುದಿಲ್ಲ.

ಆದ್ದರಿಂದ ಪಾರತಂತ್ರ್ಯಶ್ರುತಿಗೆ ಪ್ರಬಲವಾದ ಸ್ವಾತಂತ್ರ್ಯಶ್ರುತಿಯ ವಿರೋಧವು ಅಪರಿಹಾರ್ಯವಾದ್ದರಿಂದ ಪಾರತಂತ್ರ್ಯಶ್ರುತಿಯು ಅಪ್ರಮಾಣವಾಗುತ್ತದೆ. ಹಾಗಾಗಿ ಶ್ರುತಿಸಮನ್ವಯ ಮೂಲಕವಾಗಿ ನಾರಾಯಣನಲ್ಲಿ ಜಗತ್ಕಾರಣತ್ವವನ್ನು ಹೇಳಿದ್ದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ चक्षुरादिवत्तु तत्सहशिष्टयादिभ्यः ॐ

(ತುಶಬ್ದವು ಏವ ಎಂಬ ಅರ್ಥದಲ್ಲಿದೆ.) ಮುಖ್ಯಪ್ರಾಣೋऽಪಿ = ಮುಖ್ಯಪ್ರಾಣನೂ ಸಹ, ಚಕ್ಷುರಾದಿವತ್ = ಚಕ್ಷುರಾದಿಗಳಂತೆ, ತು = ಪರಮಾತ್ಮಾಧೀನ ಏವ = ಪರಮಾತ್ಮನ ಅಧೀನನೇ ಆಗಿದ್ದಾನೆ, ನ ತು ಸ್ವತಂತ್ರಃ = ಹೊರತು ಸ್ವತಂತ್ರನಲ್ಲ, ಕುತಃ = ಯಾಕೆ?, ತತ್ಸಹಶಿಷ್ಟ್ಯಾದಿಭ್ಯಃ = ಆ ಚಕ್ಷುರಾದಿಗಳ ಜೊತೆಗೆ ಮುಖ್ಯಪ್ರಾಣನಿಗೂ ಸಹ ಸರ್ವಂ ಹ್ಯೇವೈತತ್ ಎಂಬ ಗೌಪವನಶ್ರುತಿಯಲ್ಲಿ ಪರಾಧೀನತ್ವವನ್ನು ಹೇಳಿದ್ದರಿಂದ ಮತ್ತು ಸರ್ವಕರ್ತಾ ಇತ್ಯಾದಿ ವಚನಗಳಲ್ಲಿ ಹೇಳಿದ ಯುಕ್ತಿಗಳಿಂದಲೂ ಸಹ.

## ಸಿದ್ಧಾಂತ

ಸೂ.ರ.:– एवं च मुख्यप्राणश्चक्षुरादिवत्परमात्माधीन एव । सर्वं ह्येवैतदिति चक्षुरादिभिः सहैव तद्वशत्वाभिधानात् । मुख्यवायुर्न स्वतन्त्रः भगवत्प्रेरणामन्तरेण दर्शनादिशक्तिविधुरत्वादिति युक्तेः । न चासिद्धिः । नान्योऽतोऽस्तीति (बृ.५-७-२३) श्रुतिसिद्धत्वात् । यद्यपि प्राणः सर्वकर्ता तथाऽपि स ईश्वराधीनोऽभ्युपगन्तव्यः । अन्यथा प्राण एव न स्यात् । परमात्मनः स्वातन्त्र्यस्यापलापे जगदुदयाद्यभावेन स्वातन्त्र्य-वस्तुद्वयासम्भवेन च श्रुत्यविरोधेन प्राणस्येशवशत्वसिद्धेरुक्तं युक्तमिति सिद्धम् ॥

**ಅನು.:–** "ಸರ್ವಂ ಹ್ಯೇವೈತತ್ಪರಮೋಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ ಸ ಹ್ಯೇಕ ಏವೈತಾನ್ನಿಯುತ್ಯುನ್ನಯತಿ ವಶೀಕರೋತಿ"

ಎಂಬ ಶ್ರುತಿಯಲ್ಲಿ(ಗೌಪವನಶ್ರುತಿಯಲ್ಲಿ) ಚಕ್ಷುರಾದಿಗಳ ಜೊತೆಗೇ ಮುಖ್ಯಪ್ರಾಣನಿಗೆ ಪರಮಾತ್ಮಾಧೀನತ್ವವನ್ನು ಹೇಳಿದ್ದರಿಂದ, ಮುಖ್ಯಪ್ರಾಣನೂ ಸಹ ಚಕ್ಷುರಾದಿಗಳಂತೆ ಪರಮಾತ್ಮಾಧೀನನೇ ಆಗಿದ್ದಾನೆ.

ಮತ್ತು – ಮುಖ್ಯವಾಯುಃ ನ ಸ್ವತಂತ್ರಃ, ಭಗವತ್ಪ್ರೇರಣಾಮಂತರೇಣ ದರ್ಶನಾದಿಶಕ್ತಿವಿಧುರತ್ವಾತ್

(ಮುಖ್ಯಪ್ರಾಣನು ಸ್ವತಂತ್ರನಲ್ಲ, ಭಗವಂತನ ಪ್ರೇರಣೆ ಇಲ್ಲದೇ ದರ್ಶನಾದಿಶಕ್ತಿರಹಿತನಾದ್ದರಿಂದ) ಎಂಬುದಾಗಿ ಯುಕ್ತಿಯೂ ಇರುವುದರಿಂದ.

ಮುಖ್ಯಪ್ರಾಣನು ಭಗವಂತನ ಪ್ರೇರಣೆ ಇಲ್ಲದೇ ದರ್ಶನಾದಿಶಕ್ತಿರಹಿತನಾಗಿದ್ದಾನೆ ಎಂದೇ ಏಕೆ ಹೇಳುತ್ತೀರಿ? ಭಗವಂತನ ಪ್ರೇರಣೆ ಇಲ್ಲದೆಯೂ ದರ್ಶನಾದಿಶಕ್ತಿಸಹಿತನಾಗಬಹುದು. ಅರ್ಥಾತ್ ನಿಮ್ಮ ಅನುಮಾನಕ್ಕೆ ಅಸಿದ್ಧಿ ದೋಷ ಬರುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ "ನಾನ್ಯೋಽತೋಽಸ್ತಿ ದ್ರಷ್ಟಾ" "ನಾನ್ಯದತೋಽಸ್ತಿ ದ್ರಷ್ಟೃ" (ಬೃ.ಉ.5-7-23) ಎಂಬುದಾಗಿ ಶ್ರುತಿಯಲ್ಲಿ ಭಗವತ್ಪ್ರೇರಣಾಮಂತರೇಣ ದರ್ಶನಾದಿಶಕ್ತಿರಹಿತತ್ವವು ಸಿದ್ಧವಾಗಿದೆಯಾದ್ದರಿಂದ ಅಸಿದ್ಧಿಗೆ ಅವಕಾಶವಿಲ್ಲ.

ಯದ್ಯಪಿ ಪ್ರಾಣನು ಸರ್ವಕರ್ತಾ ಆಗಿದ್ದಾನೆ. ತಥಾಪಿ ಈಶ್ವರಾಧೀನನಾಗಿ ಸರ್ವಕರ್ತಾ ಆಗಿದ್ದಾನೆ ಎಂದೇ ಒಪ್ಪಬೇಕು. ಪರಮಾತ್ಮನಿಗೆ ಸ್ವಾತಂತ್ರ್ಯವನ್ನು ಅಪಲಾಪ ಮಾಡಿದರೆ, ಜಗದುದಯಾದಿಗಳು ಇಲ್ಲದೇ ಹೋಗಬೇಕಾದ ಪ್ರಸಂಗ ಬರುವುದರಿಂದ, ಇನ್ನು ಪರಮಾತ್ಮನಿಗೂ ಸ್ವಾತಂತ್ರ್ಯ ಹಾಗೂ ಮುಖ್ಯಪ್ರಾಣನಿಗೂ ಸ್ವಾತಂತ್ರ್ಯ ಅಸಂಭಾವಿತವಾದ್ದರಿಂದ ಮುಖ್ಯಪ್ರಾಣನಿಗೆ ಅಸ್ವಾತಂತ್ರ್ಯವನ್ನು ಹೇಳಬೇಕು.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಈಶ್ವರಾಧೀನತ್ವವು ಸಿದ್ಧಿಸುವುದರಿಂದ ಶ್ರುತಿಸಮನ್ವಯ ಮೂಲಕವಾಗಿ ನಾರಾಯಣನಲ್ಲಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 12

**ಸೂ.ರ.:– ननु यदि चक्षुरादिवदेवेश्वराधीनत्वं मुख्यप्राणस्य तर्हि तस्या-वान्तरेश्वरत्वाद्यसम्भवेन न प्राणः किञ्चिदिति (अग्निवेश्य.) स्वातन्त्र्यश्रुतेर्वैयर्थ्यं स्यादित्याशङ्कां पराकुर्वत्सूत्रमाह ॥**

**ಅನು.:–** ಒಂದುವೇಳೆ ಮುಖ್ಯಪ್ರಾಣನಿಗೆ ಚಕ್ಷುರಾದಿಗಳಂತೆ ಈಶ್ವರಾಧೀನತ್ವ ಇರುವುದಾದರೆ ಆಗ ಮುಖ್ಯಪ್ರಾಣನಿಗೆ ಅವಾಂತರೇಶ್ವರತ್ವಾದಿಗಳು ಸಂಭವಿಸದ ಕಾರಣ "ನ ಪ್ರಾಣಃ ಕಿಂಚಿದಾಶ್ರಿತಃ" ಎಂಬ ಸ್ವಾತಂತ್ರ್ಯಶ್ರುತಿಗೆ (ಮುಖ್ಯಪ್ರಾಣನಿಗೆ ಸ್ವಾತಂತ್ರ್ಯ ತಿಳಿಸುವ ಶ್ರುತಿಗೆ) ವೈಯರ್ಥ್ಯ ಬರಬೇಕಾಗುತ್ತದೆ ಎಂದು ಆಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರ ಹೇಳುತ್ತಾರೆ –

## ॐ अकरणत्वाच्च न दोषस्तथा हि दर्शयति ॐ (२.४.१२)

ಪ್ರಾಣಸ್ಯ ಚಕ್ಷುರಾದೀನಾಂ ಚ ಈಶ್ವರವಶತ್ವಸಾಮ್ಯೇಽಪಿ = ಮುಖ್ಯಪ್ರಾಣ ಹಾಗೂ ಚಕ್ಷುರಾದಿಗಳು ಎರಡರಲ್ಲೂ ಈಶ್ವರವಶತ್ವವು ಸಮಾನವಾಗಿ ಇದ್ದರೂ ಸಹ, ಅಕರಣತ್ವಾಚ್ಚ = ಕರ್ತೃಪ್ರಯೋಜ್ಯತ್ವಾಪ್ರಯೋಜ್ಯತ್ವ ರೂಪ ವೈಲಕ್ಷಣ್ಯ ಇರುವುದರಿಂದ, ಮುಖ್ಯಪ್ರಾಣನಿಗೆ ಇತರರಕ್ಕಿಂತಲೂ ಉತ್ತಮತ್ವವು ಸಿದ್ಧಿಸುವುದರಿಂದ, ನ ದೋಷಃ = ಮುಖ್ಯಪ್ರಾಣನಿಗೆ ಸ್ವಾತಂತ್ರ್ಯಬೋಧಕವಾದ ಶ್ರುತಿಗೆ ಅವಾಂತರ ಈಶ್ವರಪರತ್ವಾಭಾವ ಎಂಬ ದೋಷವು ಇಲ್ಲ.

ಕಸ್ಮಾದೇವಂ ಕಲ್ಪ್ಯತೇ ಇತಿ ಚೇತ್ = ಯಾಕೆ ಈ ರೀತಿ ಕಲ್ಪಿಸುವುದು? ಎಂದರೆ, ಹಿ = ಯಾವ ಕಾರಣ, "ತಾನಿ ಹ ವಾ ಏತಾನಿ ಸರ್ವಾಣಿ ..." ಎಂಬ ಮಾಂಡವ್ಯಶ್ರುತಿಯು, ತಥಾ ದರ್ಶಯತಿ = ಆ ರೀತಿ ತಿಳಿಸುತ್ತದೆಯೋ, ತಸ್ಮಾತ್ = ಆ ಕಾರಣ.

**ಸೂ.ರ.:– एवं च सर्वेषामीश्वराधीनत्वसाम्येऽपीतरेषां कर्तृप्रयोज्यत्वान्मुख्यप्राणस्य तदभावेन विशेषात् । सुप्त्यादौ व्यापारभावाभावरूपयुक्त्या तानि ह वेति श्रुत्या च विशेषसिद्धेश्चोपपन्नं तस्यावान्तरेश्वरत्वम् । अतः श्रुत्यविरोधेन प्राणस्येशवशत्वं सिद्धम् ॥**

**ಅನು.:–** ಎಲ್ಲರಿಗೂ (ಚಕ್ಷುರಾದಿಗಳಿಗೆ ಹಾಗೂ ಮುಖ್ಯಪ್ರಾಣನಿಗೆ) ಈಶ್ವರಾಧೀನತ್ವ ಸಾಮ್ಯ ಇದ್ದರೂ ಸಹ ಇತರ ಚಕ್ಷುರಾದಿಗಳು ಕರ್ತೃಪ್ರಯೋಜ್ಯವಾದ್ದರಿಂದ, ಮುಖ್ಯಪ್ರಾಣನಿಗೆ ಕರ್ತೃಪ್ರಯೋಜ್ಯತ್ವವು ಇಲ್ಲವಾದ್ದರಿಂದ ವೈಲಕ್ಷಣ್ಯ ಇದೆ. ಸುಪ್ತ್ಯಾದಿಗಳಲ್ಲಿ ವ್ಯಾಪಾರ ಭಾವ-ಅಭಾವ ರೂಪಯುಕ್ತಿಯಿಂದ, ಹಾಗೂ ತಾನಿ ಹ ವಾ ಎಂಬ ಶ್ರುತಿಯಿಂದಲೂ ಸಹ ಈ ವಿಶೇಷವು ಸಿದ್ಧವಾಗುವುದರಿಂದ, ಮುಖ್ಯಪ್ರಾಣನಿಗೆ ಅವಾಂತರ ಈಶ್ವರತ್ವವು ಉಪಪನ್ನವಾಗುತ್ತದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಈಶವಶತ್ವವು (ಪಾರತಂತ್ರ್ಯವು) ಸಿದ್ಧವಾಗುತ್ತದೆ.

ಚಕ್ಷುರಾದ್ಯಧಿಕರಣವು ಮುಗಿಯಿತು.

ಅಧಿಕರಣ – 8

# ಪಂಚವೃತ್ತ್ಯಧಿಕರಣ

## ಸಂಗತಿ

**ಸೂ.ರ.:– अत्र प्राणापानादेर्मुख्यप्राणस्वरूपत्वतद्दासत्वविषये श्रुतिविरोधः परिहियते ।**

**ಅನು.:–** ಪ್ರಾಣ-ಅಪಾನಾದಿಗಳಿಗೆ ಮುಖ್ಯಪ್ರಾಣಸ್ವರೂಪತ್ವ-ತದ್ದಾಸತ್ವ-ವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಎಂಟನೇ ಈ ಪಂಚವೃತ್ತ್ಯಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु सर्वे वा एते मुख्यदासा इति (कौण्डिन्य.) मुख्यस्यैव स्वरूपाणीति (गौपवन.) श्रुतिद्वयमप्रमाणम् । अर्थानिर्णायकत्वात् । यद्येको मुख्यस्यैव स्वरूपाणीति श्रुतिं व्यक्तसद्गुणत्वयुक्तिं चावलम्ब्य प्राणादयो मुख्यप्राणास्वरूपाण्येवेति ब्रूयात्तर्ह्यपरोऽपि सर्वे वा एत इति तदाज्ञया कर्मकारित्वयुक्तिं चावलम्ब्य प्राणादयो दासा एवेति ब्रूयात् । अत एतद्युक्तिश्रुत्यवष्टम्भेनाद्यो दासा एवेति ब्रूयात्तर्हि परोऽपि प्राचीनश्रुतियुक्त्यवष्टम्भेन स्वरूपाण्येवेति ब्रूयात् । समबलत्वेनान्यतरश्रुतिबाधायोगात् । एवं चार्थानिर्णयेन श्रुतिद्वयाप्रामाण्यान्न श्रुतिबलेन विष्णोर्जगत्कारणत्वसिद्धिरिति प्राप्ते सूत्रितम् ॥**

**ಅನು.:–** ''ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನ ಇತಿ। ಅಥ ಪ್ರಾಣೋ ವಾವ ಸಮ್ರಾಡಿತಿ'' ಎಂಬ ಕೌಂಡಿನ್ಯಶ್ರುತಿಯು ಹಾಗೂ ''ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ ಪಂಚಾವಯವಃ।'' ಎಂಬ ಗೌಪವನಶ್ರುತಿಯು ಎರಡೂ ಪರಸ್ಪರ ವಿರುದ್ಧವಾದ್ದರಿಂದ ಅರ್ಥನಿರ್ಣಾಯಕವಾಗದ ಕಾರಣ ಅಪ್ರಮಾಣವೇ ಆಗಿವೆ.

ಇದರಲ್ಲಿ ಯಾರಾದರೂ ಒಬ್ಬರು "ಮುಖ್ಯಸ್ಯೈವ ಸ್ವರೂಪಾಣಿ" ಎಂಬ ಗೌಪವನ-ಶ್ರುತಿಯನ್ನು ಹಾಗೂ "ಪ್ರಾಣಾದಯೋ ಮುಖ್ಯಪ್ರಾಣಸ್ವರೂಪಾಣ್ಯೇವ ವ್ಯಕ್ತಸದ್ಗುಣ-ತ್ವಾತ್" ಎಂಬ ವ್ಯಕ್ತಸದ್ಗುಣತ್ವಯುಕ್ತಿಯನ್ನು ಅವಲಂಬಿಸಿ ಪ್ರಾಣಾದಿಗಳು ಮುಖ್ಯಪ್ರಾಣ-ಸ್ವರೂಪವೇ ಆಗಿವೆ ಎಂದು ಹೇಳುವುದಾದರೆ, ಆಗ ಮತ್ತೊಬ್ಬರೂ ಸಹ "ಸರ್ವೇ ವಾ ಏತೇ ಮುಖ್ಯದಾಸಾಃ" ಎಂಬ ಕೌಂಡಿನ್ಯಶ್ರುತಿಯನ್ನು ಹಾಗೂ "ಪ್ರಾಣಾದಯೋ ಮುಖ್ಯಪ್ರಾಣ-ದಾಸಾಃ ತದಾಜ್ಞಯಾ ಕರ್ಮಕಾರಿತ್ವಾತ್" ಎಂಬ ಯುಕ್ತಿಯನ್ನು ಅವಲಂಬಿಸಿ ಪ್ರಾಣಾದಿ-ಗಳು ಮುಖ್ಯಪ್ರಾಣನ ದಾಸರೇ ಆಗಿದ್ದಾರೆ ಎಂದು ಹೇಳುತ್ತಾರೆ.

ಎರಡೂ ಶ್ರುತಿಗಳೂ ಸಮಬಲವಾಗಿದ್ದರಿಂದ (ಯುಕ್ತಿಯುಕ್ತವಾದ್ದರಿಂದ) ಒಂದು ಶ್ರುತಿಗೆ ಮತ್ತೊಂದು ಶ್ರುತಿಯಿಂದ ಬಾಧ ಹೇಳಲು ಬರುವುದಿಲ್ಲ. ಹೀಗಾಗಿ ಅರ್ಥ-ನಿರ್ಣಾಯಕವಾಗದ ಕಾರಣ ಎರಡು ಶ್ರುತಿಗಳೂ ಅಪ್ರಮಾಣವಾದ್ದರಿಂದ ಶ್ರುತಿಬಲದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ पञ्चवृत्तिर्मनोवद्व्यपदिश्यते ॐ (२.४.१३)

ಮನೋವತ್ = ಮನಸ್ಸಿನಂತೆ, ಯಾವ ರೀತಿಯಾಗಿ ಮನಸ್ಸು ಮನೋಬುದ್ಧಿ ಅಹಂಕಾರ ಚಿತ್ತ ಚೇತನ ಎಂಬ ಪಂಚಪ್ರಕಾರೋಪೇತವಾಗಿದೆಯೋ ಅದೇ ರೀತಿಯಾಗಿ ಮುಖ್ಯಪ್ರಾಣೋಽಪಿ = ಮುಖ್ಯಪ್ರಾಣನೂ ಸಹ, ಪಂಚವೃತ್ತಿಃ = ಪ್ರಾಣಾಪಾನಾದಿ ಪಂಚರೂಪ ಉಳ್ಳವನಾಗಿದ್ದಾನೆ, ಕುತಃ = ಯಾಕೆ?, ಯಸ್ಮಾತ್ = ಯಾವ ಕಾರಣ, ಅಥ ಪಂಚವೃತ್ಯಾ ಎಂಬ ಕೌಂಡಿನ್ಯಶ್ರುತಿಯಲ್ಲಿ, ತಥಾ ವ್ಯಪದಿಶ್ಯತೇ = ಆ ರೀತಿಯಾಗಿ ಪ್ರತಿಪಾದಿತನಾಗಿದ್ದಾನೆಯೋ, ತಸ್ಮಾತ್ = ಆ ಕಾರಣ.

## ಸಿದ್ಧಾಂತ

ಸೂ.ರ.:– एवं च प्राणादयो दासा एव स्वरूपाण्येवेति न ब्रूमः । येन परस्परविरोधेनानिर्णयः । किं नामाथ पञ्चवृत्त्यैतदिति श्रुत्यवष्टम्भेन मनोवत् । प्राणादयः स्वरूपाणि दासाश्चेति द्विविधाः । ततश्च श्रुत्यो-र्भिन्नविषयत्वेनाबाधः । न च प्राणानां दासत्वे व्यक्तसद्गुणत्वविरोधः । दासानामपि तदङ्गीकारात् । न च स्वामिभृत्यभावानुपपत्तिः । स्वामिनां ततोऽपि व्यक्तसद्गुणत्वेन तद्भावोपपत्तेः । अतः श्रुत्यविरोधेन प्राणादि-स्वरूपसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥

ಅನು.:- ಪ್ರಾಣಾದಿಗಳು ದಾಸಗಳೇ ಆಗಿವೆ, ಸ್ವರೂಪಗಳೇ ಆಗಿವೆ ಎಂದು ಹೇಳುವುದಿಲ್ಲ. ಒಂದುವೇಳೆ ಹಾಗೆ ಹೇಳುತ್ತಿದ್ದರೆ ಶ್ರುತಿಗಳಲ್ಲಿ ಪರಸ್ಪರವಿರೋಧ ಬರುವುದರಿಂದ ಅನಿರ್ಣಯ ಪ್ರಸಂಗ ಇರುತ್ತಿತ್ತು. ಕಿಂತು "ಅಥ ಪಂಚವೃತ್ತ್ಯೈತತ್ ಎಂಬ ಶ್ರುತ್ಯವಷ್ಟಂಭದಿಂದ ಮನಸ್ಸಿನಂತೆ ಪ್ರಾಣಾದಿಗಳು ಸ್ವರೂಪಗಳು ದಾಸಗಳು ಎಂದು ಎರಡುವಿಧವಾಗಿವೆ. ಹಾಗಾಗಿ ಶ್ರುತಿಗಳು ಭಿನ್ನವಿಷಯಕವಾದ್ದರಿಂದ ಬಾಧವು ಪ್ರಸಕ್ತಿ ಇಲ್ಲ.

ಪ್ರಾಣಗಳು ದಾಸ ಎನ್ನುವುದಾದರೆ ವ್ಯಕ್ತಸದ್ಗುಣತ್ವಯುಕ್ತಿಯ ವಿರೋಧ ಬರುವುದಲ್ಲವೇ? ಎಂದರೆ, ವ್ಯಕ್ತಸದ್ಗುಣತ್ವವನ್ನು ದಾಸರಿಗೂ ಅಂಗೀಕರಿಸಿದ್ದರಿಂದ ಯುಕ್ತಿವಿರೋಧ ಬರುವುದಿಲ್ಲ. ಹಾಗಾದರೆ ಸ್ವಾಮಿಭೃತ್ಯಭಾವವು ಅನುಪಪನ್ನವಾಗುವುದಲ್ಲವೇ? ಎಂದರೆ, ಅದೂ ಸರಿಯಲ್ಲ. ಭೃತ್ಯರಿಗಿಂತಲೂ ಹೆಚ್ಚಿನ ವ್ಯಕ್ತಸದ್ಗುಣತ್ವವು ಸ್ವಾಮಿಗಳಿಗೆ ಇರುವುದರಿಂದ ಸ್ವಾಮಿಭೃತ್ಯಭಾವವೂ ಉಪಪನ್ನವಾಗುತ್ತದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಪ್ರಾಣಾದಿಸ್ವರೂಪತ್ವವು ಸಿದ್ಧಿಸುವುದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಪಂಚವೃತ್ಯಧಿಕರಣವು ಮುಗಿಯಿತು.**

*ಅಧಿಕರಣ – 9*

## ಅಣ್ವಧಿಕರಣ

### ಸಂಗತಿ

**ಸೂ.ರ.:- अत्र मुख्यप्राणपरिमाणविषयश्रुतिविरोधः परिह्रियते ।**

ಅನು.:- ಮುಖ್ಯಪ್ರಾಣನ ಪರಿಮಾಣವಿಷಯಕ ಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಒಂಭತ್ತನೇ ಈ ಅಣ್ವಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु व्याप्त एवायं प्राणः । प्राण एवाधस्तादिति व्याप्ति- श्रुतेः । न च 'अणुना' (सौत्रायण.) इत्यणुत्वश्रुतिविरोधः । सकल- जगद्धारकत्वयुक्तियुक्तत्वेन व्याप्तिश्रुतेः प्राबल्यात् । अतः प्रबलश्रुति- विरोधादप्रमाणमणुत्वश्रुतिरिति प्राप्ते सूत्रमाह ॥**

**ಅನು.:–** "ಪ್ರಾಣ ಏವಾಧಸ್ತಾತ್ ಪ್ರಾಣ ಉಪರಿಷ್ಟಾತ್ ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಂ" ಎಂಬುದಾಗಿ ವ್ಯಾಪ್ತಿಶ್ರುತಿ ಇರುವುದರಿಂದ ಪ್ರಾಣನು ವ್ಯಾಪ್ತನೇ ಆಗಿದ್ದಾನೆ.

ಹೌದು, ಪ್ರಾಣನಿಗೆ ವ್ಯಾಪ್ತತ್ವವನ್ನು ಹೇಳುವುದಾದರೆ – "ಅಣುನ್ಯೈತತ್ಸೃಜ್ಯತೇಽಣು- ನ್ಯೈತದ್ಧಾರ್ಯತೇ ಅಣೌ ಲಯಮಭ್ಯುಪೈತಿ ಪ್ರಾಣೋ ವಾ ಅಣುಃ ಪ್ರಾಣೋ ಹ್ಯೇತದ್ಧ್ರುವತಿ" ಎಂಬ ಅಣುತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವುದಲ್ಲ? ಬಂದರೆ, ವಿರೋಧ ಬರುವುದಿಲ್ಲ. ವ್ಯಾಪ್ತಿಶ್ರುತಿಯು ಸಕಲಜಗದ್ಧಾರಕತ್ವ ಯುಕ್ತಿ ಯುಕ್ತವಾದ್ದರಿಂದ ಪ್ರಬಲವಾಗಿದೆ. ಆದ್ದರಿಂದ ಪ್ರಬಲಶ್ರುತಿವಿರೋಧ ಬರುವುದರಿಂದ ಅಣುತ್ವಶ್ರುತಿಯು ಅಪ್ರಮಾಣವಾಗಿದೆ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ अणुश्च ॐ (२.४.१४)

ಅಣುಶ್ಚ = ಮುಖ್ಯಪ್ರಾಣನು ಪ್ರಾಣರೂಪದಿಂದ ಅಣುವಾಗಿದ್ದಾನೆ. ವಾಯುರೂಪ- ದಿಂದ ವ್ಯಾಪ್ತನೂ ಆಗಿದ್ದಾನೆ.

## ಸಿದ್ಧಾಂತ

**ಸೂ.ರ.:– एवं चाणुरेव मुख्यप्राणः । स वा एष प्राण इति (कौण्डिन्य.) श्रुतेः । न च व्याप्तिश्रुतिविरोधः । तस्या बहिर्देहाद्वर्तमान- वायुरूपविषयत्वात् । अन्तर्वाऽणुर्बहिर्महानिति विशेषश्रुतेः । नाडी- सञ्चारित्वयुक्तेश्च । अतः श्रुत्यविरोधेन मुख्यप्राणस्याणुत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥**

**ಅನು.:–** "ಸ ವಾ ಏಷ ಪ್ರಾಣೋಽಣುರ್ಮಹಾನ್ನಾಮಾಽಂತರ್ವಾಽಣುರ್ಬಹಿರ್ಮಹಾನ್ ಪ್ರಾಣೋ ವಾ ಈಶಿತವ್ಯೇಶ ಈಶೋ ಹ್ಯಸೌ ಸರ್ವಸ್ಯೇಶಿತವ್ಯಶ್ಚ ಪರಸ್ಯ" ಎಂಬುದಾಗಿ ಕೌಂಡಿನ್ಯಶ್ರುತಿ ಇರುವುದರಿಂದ ಮುಖ್ಯಪ್ರಾಣನು ಅಣುವೇ ಆಗಿದ್ದಾನೆ.

ಹಾಗಾದರೆ ವ್ಯಾಪ್ತಿಶ್ರುತಿಯ ವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ, ವ್ಯಾಪ್ತಿಶ್ರುತಿಯು ದೇಹದ ಹೊರಗೆ ಇರುವ ವಾಯುರೂಪವಿಷಯಕವಾಗಿದ್ದರಿಂದ ವಿರೋಧಪ್ರಸಕ್ತಿ ಇಲ್ಲ.

ಅಂತರ್ವಾಽಣುಃ ಬಹಿರ್ಮಹಾನ್ (ದೇಹದ ಒಳಗೆ ಅಣುವಾಗಿದ್ದಾನೆ. ಹೊರಗೆ ಮಹಾನ್ ಆಗಿದ್ದಾನೆ.) ಎಂದು ಹೇಳುವ ವಿಶೇಷಶ್ರುತಿ ಇರುವುದರಿಂದ ಮತ್ತು ನಾಡೀಸಂಚಾರಿತ್ವಯುಕ್ತಿಯೂ ಇರುವುದರಿಂದ ವ್ಯಾಪ್ತಿಶ್ರುತಿಯ ವಿರೋಧ ಬರುವುದಿಲ್ಲ

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಅಣುತ್ವವು ಸಿದ್ಧಿಸುವುದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಅಣ್ವಧಿಕರಣವು ಮುಗಿಯಿತು.**

ಅಧಿಕರಣ – 10

# ಜ್ಯೋತಿರಧಿಕರಣ

## ಸಂಗತಿ

**ಸೂ.ರ.:– अत्रेन्द्रियविषयश्रुतिविरोध परिह्रियते ।**

**ಅನು.:–** ಇಂದ್ರಿಯವಿಷಯಕಶ್ರುತಿಯ ವಿರೋಧವನ್ನು ಪರಿಹರಿಸುತ್ತಾರೆ ಹತ್ತನೇ ಈ ಜ್ಯೋತಿರಧಿಕರಣದಲ್ಲಿ

## ಪೂರ್ವಪಕ್ಷ

**ಸೂ.ರ.:– नन्विन्द्रियाणि जीवकरणानि । जीवस्य करणान्याहुरिति (सौत्रायण.) जीवसम्बन्धित्वश्रुतेः । न च ब्रह्मणो वेति (काषायण.) श्रुत्यन्तरविरोधः । जीववशत्वेन प्राणानां दृश्यमानत्वयुक्तियुक्तत्वेन जीवकरणत्वश्रुतेः प्राबल्यात् । ततश्चैतच्छ्रुतिविरोधेन ब्रह्मकरणत्वश्रुतेर-प्रामाण्यात् न श्रुतिसमन्वयेन विष्णोर्जगत्कारणत्वसिद्धिरिति प्राप्ते सूत्रं पठति ॥**

**ಅನು.:–** ಇಂದ್ರಿಯಗಳು ಜೀವಕರಣಗಳೇ ಆಗಿವೆ. ಯಾಕೆ?

**ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ ।**
**ಯಸ್ಮಾತ್ತದ್ವಶಗಾ ಏತೇ ದೃಶ್ಯಂತೇ ಸರ್ವದೇಹಿಷು ॥**

ಎಂಬುದಾಗಿ ಜೀವಸಂಬಂಧಿತ್ವವನ್ನು ಹೇಳುವ ಶ್ರುತಿ ಇರುವುದರಿಂದ.

ಹಾಗಾದರೆ – "ಬ್ರಹ್ಮಣೋ ವಾ ಏತಾನಿ ಕರಣಾನಿ" ಎಂಬ ಬ್ರಹ್ಮಸಂಬಂಧಿತ್ವ-ಬೋಧಕವಾದ ಶ್ರುತ್ಯಂತರದ ವಿರೋಧ ಬರುತ್ತದೆಯಲ್ಲ? ಎಂದರೆ, ಅದು ಸರಿಯಲ್ಲ. ಜೀವವಶತ್ವೇನ ಪ್ರಾಣಗಳಿಗೆ ದೃಶ್ಯಮಾನತ್ವಯುಕ್ತಿಯಿಂದ ಯುಕ್ತವಾದ್ದರಿಂದ ಜೀವಕರಣತ್ವಶ್ರುತಿಯು ಪ್ರಬಲವಾಗಿದೆ. ಹಾಗಾಗಿ ಇಂತಹ ಪ್ರಬಲವಾದ ಶ್ರುತಿಯ ವಿರೋಧ ಬರುವುದರಿಂದ ಬ್ರಹ್ಮಕರಣತ್ವಶ್ರುತಿಯು ಅಪ್ರಮಾಣವಾಗಿದೆ.

ಆದ್ದರಿಂದ ಶ್ರುತಿಸಮನ್ವಯಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ ज्योतिराद्यधिष्ठानं तु तदामननात् ॐ (२.४.१५)**

ಜ್ಯೋತಿರಾದ್ಯಧಿಷ್ಠಾನಂ ಎನ್ನುವುದು ಆವೃತ್ತವಾಗುತ್ತದೆ. ತತ್ ತು ಎಂದು ಅನ್ವಯ. ಜ್ಯೋತಿರಾದ್ಯಧಿಷ್ಠಾನಂ = ಅಗ್ನ್ಯಾದಿಭೂತಪ್ರೇರಕನಾದ, ತತ್ ತು (ಬ್ರಹ್ಮೈವ) = ಬ್ರಹ್ಮನೇ, ಜ್ಯೋತಿರಾದ್ಯಧಿಷ್ಠಾನಂ = ಚಕ್ಷುರಾದಿಪ್ರೇರಕನಾಗಿದ್ದಾನೆ, ಹೊರತು ಜೀವನು ಅಲ್ಲ, ಕುತಃ = ಯಾಕೆ?, ತದಾಮನನಾತ್ = ''ಯಶ್ಚಕ್ಷುಷಿ ತಿಷ್ಠನ್'' (ಬೃ. 5-7-16) ಇತ್ಯಾದಿಯಾಗಿ ಹಾಗೆ ಪ್ರತಿಪಾದಿಸಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं च ब्रह्मसम्बन्धीन्येव करणानि जीवस्य ज्ञानादिसाधनानि । न पुनर्जीवकरणानि । जीवापेक्षया तेषामुत्तमत्वेन जीवप्रयोज्यत्वासम्भवात् । तदेव हि स्वं नाम भवति यद्यथेष्टविनियोगार्हम् । न च तत एव न ब्रह्मसम्बन्धीन्यपीति वाच्यम् । एतन्मूलतेजःप्रभृतिभूतस्यैव ब्रह्मनियम्यत्वेन सुतरामेषां तन्नियम्यत्वात् । यश्चक्षुषि तिष्ठन्नित्यादिश्रुतेश्च । अतः श्रुत्यविरोधेन प्राणानां ब्रह्मकारणत्वसिद्धेर्युक्तो जगत्कारणे हरौ श्रुतिसमन्वय इति सिद्धम् ॥**

ಅನು.:– ಜೀವನ ಜ್ಞಾನಾದಿಸಾಧನವಾದ ಕರಣಗಳು ಬ್ರಹ್ಮಸಂಬಂಧಿಯಾದ ಕರಣಗಳೇ ಆಗಿವೆ. ಹೊರತು ಜೀವಕರಣಗಳಾಗಿಲ್ಲ. (ಬ್ರಹ್ಮನೇ ಚಕ್ಷುರಾದಿಕರಣಗಳಿಂದ ದರ್ಶನಾದಿಗಳನ್ನು ಮಾಡಿಸುತ್ತಾನೆ. ಹೊರತು ಜೀವಕರಣಗಳಾಗಿಲ್ಲ)

ಯಥೇಷ್ಟ ವಿನಿಯೋಗಾರ್ಹವಾದದ್ದು ಸ್ವಾಧೀನವಾಗಲು ಸಾಧ್ಯವಾಗುತ್ತದೆ. ''ಯಶ್ಚಕ್ಷುಷಿ ತಿಷ್ಠನ್'' ಇತ್ಯಾದಿ ಶ್ರುತಿ ಇರುವುದರಿಂದ ಬ್ರಹ್ಮನು ಮಾತ್ರ ತೇಜಃಪ್ರಭೃತಿ-ಭೂತಪ್ರೇರಕನಾದ್ದರಿಂದ ಆ ತೇಜಃಪ್ರಭೃತಿ ಅಂಶಭೂತಗಳಾದ ಚಕ್ಷುರಾದಿಗಳಿಗೆ ಬ್ರಹ್ಮ-ಪ್ರಯೋಜ್ಯತ್ವವು ಉಪಪನ್ನವಾಗುತ್ತದೆಯೇ ಹೊರತು ಜೀವಪ್ರಯೋಜ್ಯತ್ವವು ಉಪಪನ್ನ-ವಾಗುವುದಿಲ್ಲ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಪ್ರಾಣಗಳಿಗೆ ಬ್ರಹ್ಮಕಾರಣತ್ವವು ಸಿದ್ಧಿಸು-ವುದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ – 16

## ಆಕ್ಷೇಪ

**ಸೂ.ರ.:– ननु न करणानि जीवसम्वन्धीनि चेत्तर्हि तत्करणत्वाभिधायकश्रुतेरप्रामाण्यप्रसङ्ग इत्याशङ्कामपाकुर्वत्सूत्रमुपन्यस्यति ॥**

**ಅನು.:–** ಕರಣಗಳು ಜೀವಸಂಬಂಧಿಗಳಲ್ಲ ಎಂದರೆ ಅಂತಹ ಜೀವಕರಣತ್ವವನ್ನು ತಿಳಿಸುವ ಶ್ರುತಿಗೆ ಅಪ್ರಾಮಾಣ್ಯಪ್ರಸಂಗ ಬರುವುದಲ್ಲ? ಎಂದು ಶಂಕೆ ಬಂದರೆ, ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ प्राणवता शब्दात् ॐ (२.४.१६)**

ಪರಮಾತ್ಮಾ = ಪರಮಾತ್ಮನು, ಸ್ವಪ್ರಯೋಜ್ಯೈರೇವ ಚಕ್ಷುರಾದಿಭಿಃ = ತನ್ನಿಂದಲೇ ಪ್ರಯೋಜ್ಯವಾದ ಚಕ್ಷುರಾದಿಕರಣಗಳಿಂದ, ಪ್ರಾಣವತಾ = ಕರ್ತೃವಾದ ಜೀವನಿಂದ, ದರ್ಶನಾದಿ ಕಾರಯತಿ = ದರ್ಶನಾದಿಗಳನ್ನು ಮಾಡಿಸುತ್ತಾನೆ ಹೊರತು, ನ ಜೀವ-ಪ್ರಯೋಜ್ಯೈಃ = ಜೀವಪ್ರಯೋಜ್ಯವಾದ ಚಕ್ಷುರಾದಿ ಕರಣಗಳಿಂದ ಮಾಡಿಸುವುದಿಲ್ಲ, ಕುತಃ = ಯಾಕೆ?, ಶಬ್ದಾತ್ = ಏಷ ಹ್ಯನೇನ (ಭಾಲ್ಲವೇಯಶ್ರುತಿ) ಎಂದು ಶ್ರುತಿ ಇರುವುದರಿಂದ.

## ಸಮಾಧಾನ

**ಸೂ.ರ.:– एवं च करणत्वाभिधायकश्रुतेर्ब्रह्म स्वकरणैरेव दर्शनादि कारयतीति याचितकुठारवदीषत्सम्बन्धित्वमस्तीति तत्परत्वेन प्रामाण्योपपत्तेः । जीवकरणसम्बन्धस्यानादिनित्यत्वेन तदभिप्रायेणापि प्रवृत्तायास्तस्याः प्रामाण्योपपत्तेः । दृश्यते खलु लोके परकीये वहुकालसम्बन्धिनि तदीयत्वोपचारः । न च यदीन्द्रियाणि ब्रह्मकरणानि तर्हि मुख्यप्राणस्यापि तत्समानमेवेति प्रागुक्तम् । तस्मात्प्राण एवाकरण इति मुख्यप्राण-**

**करणत्वमयुक्तमिति चेन्न । ईश्वरश्चक्षुरादीन् किञ्चिज्जीवेच्छया प्रेरयति । मुख्यप्राणस्तु स्वेच्छयैवेति विशेषसद्भावेन तदुपपत्तेः । 'करणैः कारणं' (वाराहे.) 'न जीवापेक्षया' (वाराहे.) इत्यादिवचनसद्भावात् । अतः श्रुत्यविरोधेन ब्रह्मणि जगत्कारणे श्रुतिसमन्वयो युक्त इति सिद्धम् ॥**

**ಅನು.:–** ಬ್ರಹ್ಮನು ತನ್ನ ಕರಣಗಳಿಂದಲೇ ದರ್ಶನಾದಿಗಳನ್ನು ಮಾಡಿಸುತ್ತಾನೆ ಎಂಬು-ದಾಗಿ ಕರಣತ್ವಾಭಿಧಾಯಕಶ್ರುತಿಗೆ ಯಾಚಿತಕುಠಾರದಂತೆ ಈಶತ್ಸಂಬಂಧಿತ್ವವು ಇದೆ, ಹಾಗಾಗಿ ತತ್ಪರತಯಾ ಪ್ರಾಮಾಣ್ಯವು ಉಪಪನ್ನವಾಗುತ್ತದೆ. ಜೀವಕರಣಸಂಬಂಧವೂ ಅನಾದಿನಿತ್ಯವಾದ್ದರಿಂದ ಆ ಅಭಿಪ್ರಾಯದಿಂದಲೂ ಪ್ರವೃತ್ತವಾದ ಅದಕ್ಕೆ ಪ್ರಾಮಾಣ್ಯವು ಉಪಪನ್ನವಾಗುತ್ತದೆ. ಪರಕೀಯವಾದ ವಸ್ತು ಬಹುಕಾಲಸಂಬಂಧಿಯಾಗಿದ್ದರೆ ಅದರಲ್ಲಿ ತದೀಯತ್ವವ್ಯವಹಾರವು ಉಪಚಾರತಃ ಮಾಡುವುದು ಕಂಡಿದೆ.

ಒಂದುವೇಳೆ ಕರಣಗಳು ಬ್ರಹ್ಮಕರಣಗಳು ಎಂದಾಗಿದ್ದರೆ ಅದು ಮುಖ್ಯಪ್ರಾಣನಿಗೂ ಸಂಭಾವಿತವಾದ್ದರಿಂದ ಅಕರಣತ್ವಹೇತುವಿನಿಂದ 'ಪ್ರಾಣ ಏವಾಕರಣಃ ತಸ್ಮಾನ್ಮುಖ್ಯಃ' ಎಂಬುದಾಗಿ ಹೇಳಿದ ಮುಖ್ಯತ್ವವು ವಿರುದ್ಧವಾಗಬೇಕಾಗುತ್ತದೆ. ಇಂದ್ರಿಯಗಳು ಜೀವ-ಕರಣವಾದ ಪಕ್ಷದಲ್ಲಿ ಅದು ಉಪಪನ್ನವಾಗುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ.

**ಕರಣೈಃ ಕಾರಣಂ ಬ್ರಹ್ಮ ಪುರುಷಾಪೇಕ್ಷಯಾಽಖಿಲಮ್ ।**
**ಶ್ರೋತ್ರಾದಿಭಿಃ ಕಾರಯತಿ ಕರಣಾನೀತ್ಯತೋ ವಿದುಃ ॥**

**ನ ಜೀವಾಪೇಕ್ಷಯಾ ನಿತ್ಯಂ ಕಾರಯೇತ್ಪರಮೇಶ್ವರಃ ।**
**ಕೇವಲಾತ್ಮೇಚ್ಛಯಾ ತಸ್ಮಾನ್ಮುಖ್ಯತ್ವಂ ತಸ್ಯ ನಿಶ್ಚಿತಮ್ ॥**

ಇತ್ಯಾದಿ ವಚನಗಳು ಇರುವುದರಿಂದ, ಈಶ್ವರನು ಚಕ್ಷುರಾದಿಗಳನ್ನು ಕಿಂಚಿತ ಜೀವೇಚ್ಛೆಯಂತೆ ಪ್ರೇರಿಸುತ್ತಾನೆ, ಮುಖ್ಯಪ್ರಾಣನಾದರೂ ಸ್ವೇಚ್ಛೆಯಿಂದಲೇ ಪ್ರೇರಿಸುತ್ತಾನೆ ಎಂಬುದಾಗಿ ವಿಶೇಷ ಇರುವುದರಿಂದ ಅದು ಉಪಪನ್ನವಾಗುತ್ತದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿ-ಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 17

**ಸೂ.ರ.:– एवं भगवदधीनान्यपीन्द्रियाण्यस्वतन्त्रजीवकर्तृके कर्मणि साधनत्वात्तत्करणानीत्युच्यन्ते । यथा परकीयकुठारेणापि वृश्चतोऽसौ तत्करणमुच्यत इत्येकं मुख्यमर्थं जीवकरणत्वश्रुतेरुक्त्वाऽधुना मुख्यार्थान्तर प्रतिपादकं सूत्रमवतारयति ॥**

**ಅನು.:–** ಮತ್ತೊಬ್ಬರ ಕುಠಾರದಿಂದ ಕಡಿಯುವವನಾದರೂ ಅದು ಅವನ ಕುಠಾರ ಎಂದು ವ್ಯವಹರಿಸುವಂತೆ, ಕರಣಗಳು ಭಗವದಧೀನವಾದರೂ ಸಹ ಅಸ್ವತಂತ್ರಜೀವ-ಕರ್ತೃಕವಾದ ಕರ್ಮದಲ್ಲಿ ಸಾಧನವಾದ್ದರಿಂದ ಜೀವಕರಣಗಳು ಎಂದು ಕರೆಸಿಕೊಳ್ಳುತ್ತವೆ ಎಂಬುದಾಗಿ ಜೀವಕರಣತ್ವಶ್ರುತಿಗೆ ಒಂದು ಅರ್ಥವನ್ನು ಹೇಳಿ, ಮತ್ತೊಂದು ಅರ್ಥವನ್ನು ಪ್ರತಿಪಾದಿಸುವ ಸೂತ್ರವನ್ನು ಹೇಳುತ್ತಾರೆ -

**ॐ तस्य च नित्यत्वात् ॐ (२.४.१७)**

ಚಕ್ಷುರಾದಿಗಳು ಬ್ರಹ್ಮಕರಣವಾಗಿದ್ದರೂ ಸಹ, ತಸ್ಯ ಚ = ಜೀವ-ಕರಣ ಅವುಗಳ ಸಂಬಂಧ ಎಲ್ಲವೂ, ನಿತ್ಯತ್ವಾತ್ = ನಿತ್ಯವಾದ್ದರಿಂದ, ತದ್ವಿವಕ್ಷಯಾ = ಆ ವಿವಕ್ಷೆಯಿಂದ, ಜೀವಕರಣತ್ವಶ್ರುತಿರಪಿ ಉಪಪದ್ಯತೇ = ಜೀವಕರಣತ್ವಶ್ರುತಿಯೂ ಉಪಪನ್ನವಾಗುತ್ತದೆ.

**ಸೂ.ರ.:– एवं च परकीयेऽपि बहुकालसम्बन्धिनि वस्तुन्युपचारत-स्तदीयत्वव्यवहारदर्शनादत्रापि भगवदीयेष्वपीन्द्रियेषु बहुकालीनजीव-सम्बन्धितायाः सद्भावेन तत्करणत्वश्रुतिः प्रवृत्तेति श्रुतेरुपचरितार्थत्वात् । अथावियोगीनीति (गौपवन.) श्रुतेः । अतः श्रुत्यविरोधेन परे ब्रह्मणि जगत्कारणे श्रुतिसमन्वयो युक्त इति सिद्धम् ॥**

**ಅನು.:–** "ಅಥಾವಿಯೋಗೀನಿ । ಕರಣೈರ್ವಾವ ನ ವಿಯುಜ್ಯತೇ ದೇಹೇನೈವ ವಿಯುಜ್ಯತೇ ಇತ್ಯೇತದ್ವಾವ ಕರಣಾನಾಂ ಕರಣತ್ವಂ ಯದ್ವಾವ ನ ವಿಯುಜ್ಯತೇ"

ಎಂಬುದಾಗಿ ಗೌಪವನಶ್ರುತಿ ಇರುವುದರಿಂದ, ಯಾವ ರೀತಿಯಾಗಿ ವಸ್ತುವು ಪರಕೀಯವಾಗಿದ್ದರೂ ಬಹುಕಾಲಸಂಬಂಧಿಯಾಗಿದ್ದರೆ ಅದರಲ್ಲಿ ಔಪಚಾರಿಕವಾಗಿ ತದೀಯತ್ವವ್ಯವಹಾರ ಮಾಡುವರೋ ಅದರಂತೆಯೇ ಇಂದ್ರಿಯಗಳು ಭಗವದಧೀನ-

ವಾಗಿದ್ದರೂ ಸಹ ಬಹುಕಾಲೀನ ಜೀವಸಂಬಂಧಿತ್ವ ಇರುವುದರಿಂದ ಜೀವಕರಣತ್ವ-ಶ್ರುತಿಯು ಪ್ರವೃತ್ತವಾಗಿದೆ. ಹೀಗೆ ಶ್ರುತಿಯು ಉಪಚರಿತಾರ್ಥಕವಾಗಿದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜಗತ್ಕಾರಣನಾದ ಪರಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಜ್ಯೋತಿರಧಿಕರಣವು ಮುಗಿಯಿತು**

*ಅಧಿಕರಣ – 11*

# ತ ಇಂದ್ರಿಯಾಧಿಕರಣ

### ಸಂಗತಿ

**ಸೂ.ರ.:– अत्र मुख्यप्राणस्येन्द्रियत्वानिन्द्रियत्वश्रुतिविरोधः परिह्रियते ।**

**ಅನು.:–** ಮುಖ್ಯಪ್ರಾಣನ ಇಂದ್ರಿಯತ್ವ-ಅನಿಂದ್ರಿಯತ್ವ ವಿಷಯಕ ಶ್ರುತಿ-ವಿರೋಧವನ್ನು ಪರಿಹರಿಸುತ್ತಾರೆ ಹನ್ನೊಂದನೇ ಈ ತ ಇಂದ್ರಿಯಾಧಿಕರಣದಲ್ಲಿ.

### ಪೂರ್ವಪಕ್ಷ

**ಸೂ.ರ.:– ननु सर्वेऽपि प्राणा इन्द्रियाणि । प्राणा वा इन्द्रियाणीति (पौत्रायण) श्रुतेः । सामान्यश्रुतेः सर्वगामित्वात् । न च द्वादशैवेन्द्रिया-णीति (काषायण) विशेषश्रुत्या वाधः । इदं द्रवणयुक्तियुक्तत्वेन सामान्यश्रुतेर्वलवत्त्वात् । दुष्करं च द्वादशानामेवेन्द्रियत्वग्रहणम् । अन्यतमनिवेशनस्याशक्यत्वात् । नियामकं विना कस्यचित्परित्यागेऽ-परस्यापि तत्स्यादिति द्वादशत्वहानिः । अतो युक्तियुक्ताद्यश्रुतिविरोधेन द्वितीयाया अप्रामाण्येन न ब्रह्मणि श्रुतिसमन्वयो युक्त इति प्राप्ते सूत्रितम् ।।**

**ಅನು.:–** ''ಅಥೇಂದ್ರಿಯಾಣಿ ಪ್ರಾಣಾ ವಾ ಇಂದ್ರಿಯಾಣಿ ಪ್ರಾಣಾ ಹೀದಂ ದ್ರವಂತಿ'' ಎಂಬುದಾಗಿ ಪೌತ್ರಾಯಣಶ್ರುತಿ ಇರುವುದರಿಂದ ಎಲ್ಲ (ಹದಿಮೂರು) ಪ್ರಾಣಗಳೂ ಇಂದ್ರಿಯಗಳೇ ಆಗಿವೆ. ಈ ಶ್ರುತಿಯು ಸಾಮಾನ್ಯಶ್ರುತಿಯಾಗಿದ್ದರಿಂದ ಸರ್ವಗಾಮಿಯಾಗಿದೆ.

ಹಾಗಾದರೆ – ''ದ್ವಾದಶೈವೇಂದ್ರಿಯಾಣ್ಯಾಹುಃ ಮನೋಬುದ್ಧೀ ತು ದ್ವಾದಶ'' ಎಂಬ ದ್ವಾದಶ ಇಂದ್ರಿಯಬೋಧಕವಾದ ವಿಶೇಷಶ್ರುತಿಯಿಂದ (ಕಾಷಾಯಣ-ಶ್ರುತಿಯಿಂದ) ಬಾಧ ಬರುತ್ತದೆಯಲ್ಲವೇ? ಎಂದರೆ, ಬರುವುದಿಲ್ಲ. ಈ ಸಾಮಾನ್ಯ-ಶ್ರುತಿಯು ದ್ರವಣಯುಕ್ತಿಯುಕ್ತವಾದ್ದರಿಂದ ಪ್ರಬಲವಾಗಿದೆ.

ಮತ್ತು ದ್ವಾದಶಪ್ರಾಣಗಳಿಗೇನೇ ಇಂದ್ರಿಯತ್ವಗ್ರಹಣವು ದುಷ್ಕರವೂ ಆಗಿದೆ. ಹದಿಮೂರರಲ್ಲಿ ಒಂದರ ನಿವಾರಣೆಯು ಅಶಕ್ಯವಾಗಿದೆ. ನಿಯಾಮಕವಿಲ್ಲದೇ ಒಂದನ್ನು ಪರಿತ್ಯಾಗ ಮಾಡುವುದಾದರೆ ಮತ್ತೊಂದನ್ನೂ ಪರಿತ್ಯಾಗ ಮಾಡಬೇಕಾದ ಪ್ರಸಂಗ ಬರುತ್ತದೆ. ಹಾಗಾಗಿ ದ್ವಾದಶತ್ವಕ್ಕೆ ಹಾನಿಯಾಗುತ್ತದೆ.

ಆದ್ದರಿಂದ ದ್ರವಣಯುಕ್ತಿಯುಕ್ತವಾದ ಸಾಮಾನ್ಯಶ್ರುತಿಯಿಂದ (ಪ್ರಬಲಶ್ರುತಿ-ಯಿಂದ) ವಿರೋಧ ಬರುವ ಕಾರಣ ಎರಡನೇ ಶ್ರುತಿಯು (ಕಾಷಾಯಣಶ್ರುತಿಯು) ಅಪ್ರಮಾಣವಾಗುವುದರಿಂದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಲು ಬರುವುದಿಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

**ॐ त इन्द्रियाणि तद्व्यपदेशादन्यत्र श्रेष्ठात् ॐ (२.४.१८)**

ಶ್ರೇಷ್ಠಾತ್ ಅನ್ಯತ್ರ = ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಯಾವ ಪ್ರಾಣಗಳಿವೆಯೋ, ತೇ ಏವ ಇಂದ್ರಿಯಾಣಿ = ಅವುಗಳು ಮಾತ್ರ ಇಂದ್ರಿಯಗಳಾಗಿವೆ. ಹೊರತು ಮುಖ್ಯ-ಪ್ರಾಣನೂ ಇಂದ್ರಿಯನಾಗಿಲ್ಲ. ಕುತಃ = ಯಾಕೆ?, ತದ್ವ್ಯಪದೇಶಾತ್ = ''ದ್ವಾದಶೈವೇಂದ್ರಿ-ಯಾಣಿ'' ಎಂಬ ಪೌತ್ರಾಯಣಶ್ರುತಿಯಲ್ಲಿ ಹಾಗೆಯೇ ಹೇಳಿದ್ದರಿಂದ.

## ಸಿದ್ಧಾಂತ

**ಸೂ.ರ.:– एवं च न सर्वे प्राणा इन्द्रियाणि किन्तु मुख्यप्राणमृते द्वादशैव । द्वादशैवेन्द्रियाणीति विशेषश्रुतेः । न चेदन्द्रवणवतः कथम-निन्द्रियत्वमिति वाच्यम् । तस्य द्रवतां स्वामित्वेन इदं द्रवणाभावात् ।**

विषयद्रवणात्तेषामिति (बृहत्संहितायां.) वचनसद्भावात् । अतः श्रुत्य-विरोधेन मुख्यप्राणस्यानिन्द्रियत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥

**ಅನು.:**– ಎಲ್ಲ ಹದಿಮೂರೂ ಪ್ರಾಣಗಳು ಇಂದ್ರಿಯಗಳಲ್ಲ, ಕಿಂತು ಮುಖ್ಯಪ್ರಾಣ-ನನ್ನು ಬಿಟ್ಟು ದ್ವಾದಶ ಪ್ರಾಣಗಳು ಮಾತ್ರ ಇಂದ್ರಿಯಗಳಾಗಿವೆ. ಯಾಕೆ?

**ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಮ್ ।**
**ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥**

ಎಂಬುದಾಗಿ ದ್ವಾದಶ ಇಂದ್ರಿಯಬೋಧಕವಾದ ವಿಶೇಷಶ್ರುತಿ ಇರುವುದರಿಂದ.

ಇದಂದ್ರವಣ ಉಳ್ಳ ಮುಖ್ಯಪ್ರಾಣನಿಗೆ ಇಂದ್ರಿಯತ್ವ ಇಲ್ಲ (ಅನಿಂದ್ರಿಯತ್ವ ಇದೆ) ಎಂದು ಹೇಗೆ ಹೇಳುತ್ತೀರಿ? ಎಂದು ಶಂಕಿಸುವುದು ಸರಿಯಲ್ಲ, ಮುಖ್ಯಪ್ರಾಣನು ದ್ರವಣ ಉಳ್ಳವುಗಳಿಗೆ ಸ್ವಾಮಿಯಾಗಿದ್ದರಿಂದ ಮುಖ್ಯಪ್ರಾಣನಿಗೆ ಇದಂ ದ್ರವರಣ ಇಲ್ಲ, ಯಾಕೆ?

**ವಿಷಯದ್ರವಣಾತ್ತೇಷಾಮಿಂದ್ರಿಯತ್ವಮುದಾಹೃತಮ್ ।**
**ತೇಷಾಂ ನಿಯಾಮಕಃ ಪ್ರಾಣಃ ಸ್ಥಿತ ಏವಾಖಿಲಪ್ರಭುಃ ॥**

ಎಂಬುದಾಗಿ ಬೃಹತ್ಸಂಹಿತಾವಚನ ಇರುವುದರಿಂದ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಅನಿಂದ್ರಿಯತ್ವವು (ಇಂದ್ರಿಯತ್ವಾಭಾವವು) ಸಿದ್ಧಿಸುವುದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 19

**ಸೂ.ರ.:**– ननु यदि मुख्यप्राणो नेन्द्रियं तर्हि चक्षुरपि न स्यात् । चक्षुर्मुख्यप्राणयोः सर्वथा विशेषाभावात् । इदं द्रवणभावाभावरूपस्य स्थितत्वेन स्थितत्वरूपस्य सूत्रकृताऽनुक्तत्वादप्रयोजकत्वाच्चेति प्राप्ते सूत्रमाह ॥

**ಅನು.:**– ಒಂದುವೇಳೆ ಮುಖ್ಯಪ್ರಾಣನು ಇಂದ್ರಿಯ ಅಲ್ಲ ಎಂದಾದರೆ, ಚಕ್ಷು-ರಿಂದ್ರಿಯವೂ ಸಹ ಇಂದ್ರಿಯ ಆಗದೇ ಹೋಗಬೇಕಾಗುತ್ತದೆ. ಎರಡರಲ್ಲಿ ಯಾವ

ವಿಶೇಷವಿಲ್ಲವಾದ್ದರಿಂದ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದ-
ಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ भेदश्रुतेः ॐ (२.४.१९)**

ಭೇದಶ್ರುತೇಃ = ಮುಖ್ಯಪ್ರಾಣನಿಗೆ ಸರ್ವಕರ್ತೃತ್ವ-ಕಾರಯಿತೃತ್ವರೂಪ ಭೇದಕ-
ಧರ್ಮವು, ಇತರರಿಗೆ ಅಂತಹ ಭೇದಕಧರ್ಮಾಭಾವವು "ಸ್ಥಿತ ಏವ ಹೀದಂ" ಎಂಬ
ಪೌತ್ರಾಯಣಶ್ರುತಿಯಲ್ಲಿ ಶ್ರುತವಾಗುತ್ತಿರುವುದರಿಂದ, ಮುಖ್ಯಪ್ರಾಣನಿಗೆ ಚಕ್ಷುರಾದಿ-
ಗಳಿಂದ ವಿಶೇಷ ಇಲ್ಲ ಎಂದಲ್ಲ (ವಿಶೇಷ ಇದ್ದೇ ಇದೆ).

**ಸೂ.ರ.:- एवं च स्थित एव हीदमिति श्रुतौ मुख्यप्राणस्य सर्वकर्तृत्वकारयितृत्वबलत्वबलयितृत्वधतृत्वधारयितृत्वादिविशेषोक्त्येश्वर-साम्याभिधानेन तस्य कर्तृप्रयोज्यत्वाभावात् । ततश्च श्रुत्यविरोधेन मुख्यप्राणस्यानिन्द्रियत्वं सिद्धम् ॥**

ಅನು.:- "ಸ್ಥಿತ ಏವ ಹೀದಂ ಮುಖ್ಯಪ್ರಾಣಃ ಕರೋತಿ ಕಾರಯತಿ ಬಲತಿ ಬಾಲಯತಿ
ಧತ್ತೇ ಧಾರಯತಿ ... ತಸ್ಮಾದಾಹುರಿಂದ್ರಿಯಾಣಿ ಕರಣಾನಿ" ಎಂಬುದಾಗಿ ಪೌತ್ರಾಯಣ-
ಶ್ರುತಿಯಲ್ಲಿ ಮುಖ್ಯಪ್ರಾಣನಿಗೆ ಸರ್ವಕರ್ತೃತ್ವ-ಕಾರಯಿತೃತ್ವ-ಬಲತ್ವ ಬಲಯಿತೃತ್ವ-
ಧತೃತ್ವ-ಧಾರಯಿತೃತ್ವಾದಿ ವಿಶೇಷಧರ್ಮಗಳನ್ನು ಹೇಳಿದ್ದರಿಂದ ಈಶ್ವರಸಾಮ್ಯವನ್ನು
ಹೇಳಿದ್ದರಿಂದ, ಇತರರಿಗೆ ತದಭಾವವನ್ನು ಹೇಳಿದ್ದರಿಂದ ಮುಖ್ಯಪ್ರಾಣನಿಗೆ ಚಕ್ಷುರಾದಿ-
ಗಳಿಂದ ವಿಶೇಷ ಇದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಮುಖ್ಯಪ್ರಾಣನಿಗೆ ಅನಿಂದ್ರಿಯತ್ವವು
(ಇಂದ್ರಿಯತ್ವಾಭಾವವು) ಸಿದ್ಧವಾಗುತ್ತದೆ.

ಸೂತ್ರ - 20

**ಆಕ್ಷೇಪ**

**ಸೂ.ರ.:- नन्वयं मुख्यप्राणो भगवद्वशो न वा । आद्ये तस्या-निन्द्रियत्वासिद्धिः । ईशवशत्वसाम्यात् । इदं द्रवणाभावस्थितत्वा-द्यवान्तरवैलक्षण्यस्य चेन्द्रियेष्वपि सम्भवात् । द्वितीये चक्षुरादीत्युक्तविरोध इति प्राप्ते समादधत्सूत्रमाह ॥**

**ಅನು.:-** ಈ ಮುಖ್ಯಪ್ರಾಣನು ಭಗವಂತನ ವಶನೋ? ಅಲ್ಲವೋ? ಭಗವಂತನ ವಶನು ಎಂದಾದರೆ ಅನಿಂದ್ರಿಯತ್ವವು ಸಿದ್ಧವಾಗುವುದಿಲ್ಲ (ಇಂದ್ರಿಯತ್ವಾಭಾವವು ಸಿದ್ಧವಾಗುವುದಿಲ್ಲ) ಅರ್ಥಾತ್ ಚಕ್ಷುರಾದಿ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಈಶವಶತ್ವಸಾಮ್ಯ ಇರುವುದರಿಂದ, ಇದಂದ್ರವಣಾಭಾವ ಸ್ಥಿತತ್ವ ಮೊದಲಾದ ಅವಾಂತರವೈಲಕ್ಷಣ್ಯವು ಇಂದ್ರಿಯಗಳಲ್ಲಿಯೂ ಸಂಭಾವಿತವಾದ್ದರಿಂದ ಚಕ್ಷುರಾದಿಗಳಂತೆ ಮುಖ್ಯಪ್ರಾಣನಿಗೂ ಇಂದ್ರಿಯತ್ವವೇ ಸಿದ್ಧಿಸುತ್ತದೆ.

ಇನ್ನು ಭಗವಂತನ ವಶನಲ್ಲ ಎನ್ನುವುದಾದರೆ ಚಕ್ಷುರಾದಿವತ್ ಎನ್ನುವಲ್ಲಿ ಹಿಂದೆ ಹೇಳಿದ ಪರಾಧೀನತ್ವದ ವಿರೋಧ ಬರಬೇಕಾಗುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

### ॐ वैलक्षण्याच्च ॐ

ವೈಲಕ್ಷಣ್ಯಾಚ್ಚ = ಮುಖ್ಯಪ್ರಾಣನಿಗೆ ಹಾಗೂ ಇತರ ಪ್ರಾಣಗಳಿಗೆ ಕೇವಲೇಶ್ವರಾಧೀನತ್ವ ಈಶ್ವರಜೀವೋಭಯಾಧೀನತ್ವರೂಪ ವೈಲಕ್ಷಣ್ಯ ಇರುವುದರಿಂದಲೂ ಸಹ, ಮುಖ್ಯಪ್ರಾಣನಿಗೆ ಇಂದ್ರಿಯತ್ವವು ಸಿದ್ಧಿಸುವುದಿಲ್ಲ. ಕಿಂತು ಚಕ್ಷುರಾದಿಗಳಿಗೆ ಮಾತ್ರ ಇಂದ್ರಿಯತ್ವವು ಸಿದ್ಧಿಸುತ್ತದೆ.

**ಸೂ.ರ.:- एवं च मुख्यप्राणस्येश्वराधीनत्वेऽपीन्द्रियाणामीश्वरजीवोभयवशप्रवृत्तिकत्वान्मुख्यस्य च केवलेश्वराधीनप्रवृत्तिरूपवैलक्षण्यात् । इन्द्रियेपूक्तवैलक्षण्यस्य प्रत्यक्षसिद्धत्वात् । मुख्ये च प्राणाग्नय इति (प्र.४-३) श्रुतिसिद्धत्वात् । अतः श्रुत्यविरोधेन युक्तो जगत्कारणे हरौ श्रुतिसमन्वय इति सिद्धम् ॥**

**ಅನು.:-** ಇತರ ಇಂದ್ರಿಯಗಳಿಗೆ ಹಾಗೂ ಮುಖ್ಯಪ್ರಾಣನಿಗೆ ಈಶ್ವರಾಧೀನತ್ವಸಾಮ್ಯ ಇದ್ದರೂ ಸಹ ಇಂದ್ರಿಯಗಳಿಗೆ ಈಶ್ವರ-ಜೀವ ಉಭಯವಶಪ್ರವೃತ್ತಿಕತ್ವ ಇರುವುದರಿಂದ, ಇನ್ನು ಮುಖ್ಯಪ್ರಾಣನಿಗೆ ಕೇವಲ ಈಶ್ವರಾಧೀನಪ್ರವೃತ್ತಿಕತ್ವ ಇರುವುದರಿಂದ ಹೀಗೆ ಎರಡರಲ್ಲೂ ವೈಲಕ್ಷಣ್ಯ ಇರುವುದರಿಂದ ಮುಖ್ಯಪ್ರಾಣನಿಗೆ ಇಂದ್ರಿಯತ್ವವು ಸಿದ್ಧಿಸುವುದಿಲ್ಲ.

ಇಂದ್ರಿಯಗಳಲ್ಲಿ ಪೂರ್ವೋಕ್ತ ವೈಲಕ್ಷಣ್ಯವು ಪ್ರತ್ಯಕ್ಷಸಿದ್ಧವೂ ಆಗಿದೆ, ಮತ್ತು ''ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ'' (ಪ್ರ.ಉ. 4-3) ಎಂಬ ಶ್ರುತಿಯಿಂದಲೂ ಸಿದ್ಧವಾಗಿದೆ. ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ತ ಇಂದ್ರಿಯಾಧಿಕರಣವು ಮುಗಿಯಿತು.

ಅಧಿಕರಣ – 12

# ಸಂಜ್ಞಾಧಿಕರಣ

## ಸಂಗತಿ

**ಸೂ.ರ.:– अत्र नामरूपविषये श्रुतिविरोधः परिह्रियते ।**

**ಅನು.:–** ನಾಮರೂಪವಿಷಯದಲ್ಲಿ (ದೇಹಾದಿಸೃಷ್ಟಿವಿಷಯದಲ್ಲಿ) ಶ್ರುತಿವಿರೋಧ-ವನ್ನು ಪರಿಹರಿಸುತ್ತಾರೆ ಹನ್ನೆರಡನೇ ಈ ಸಂಜ್ಞಾಧಿಕರಣದಲ್ಲಿ.

## ಪೂರ್ವಪಕ್ಷ

**ಸೂ.ರ.:– ननु विरिञ्च एव नामरूपकर्ता । विरिञ्चो वेति (गौपवन.) तथा श्रुतेः । न चाथ कस्मादितीतर (आग्निवेश्य.) श्रुति-विरोधः । विरिञ्चत्वयुक्तियुक्तत्वेनास्याः श्रुतेः प्राबल्यात् । न चेयं श्रुतिर्द्वारकरणत्वपरा । मुख्यार्थस्य असम्भवे एव अमुख्यार्थस्य कल्प्यत्वात् । अतः सयुक्तिकैतच्छ्रुतिविरोधेनेतरा श्रुतिरप्रमाणमिति प्राप्ते सूत्रं पठति ॥**

**ಅನು.:–** ವಿರಿಂಚನೇ (ಚತುರ್ಮುಖಬ್ರಹ್ಮನೇ) ನಾಮರೂಪಕರ್ತಾ (ದೇಹಾದಿಕರ್ತಾ) ಆಗಿದ್ದಾನೆ. ಯಾಕೆ? ''ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ ವಿದಧಾತಿ ಬ್ರಹ್ಮಾ ವಾವ ವಿರಿಂಚ ಏತಸ್ಮಾದ್ಧೀಮೇ ರೂಪನಾಮನೀ'' ಎಂಬುದಾಗಿ ಗೌಪವನಶ್ರುತಿಯು ವಿರಿಂಚನಿಗೆ ದೇಹಾದಿಕರ್ತೃತ್ವವನ್ನು ಪ್ರತಿಪಾದಿಸುತ್ತಿರುವುದರಿಂದ.

ಹಾಗಾದರೆ – ''ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ಧೀತೇ ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನಮಾಹುಃ ಪರಮ ಇತಿ। ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹತ್ವಾತ್ ಬೃಂಹಣಾಚ್ಚ'' ಎಂಬುದಾಗಿ ಆಗ್ನಿವೇಶ್ಯಶ್ರುತಿಯು ವಿಷ್ಣುವಿಗೆ ದೇಹಾದಿಕರ್ತೃತ್ವವನ್ನು ಹೇಳುತ್ತಿರುವುದರಿಂದ ಈ ಶ್ರುತಿಯ ವಿರೋಧ ಬರುತ್ತದೆಯಲ್ಲವೇ? ಎಂದರೆ, ಶ್ರುತಿವಿರೋಧ ಬರುವುದಿಲ್ಲ. ಏಕೆಂದರೆ ''ವಿರಿಂಚೋ ವಾ ಇದಂ ಸರ್ವಂ'' ಎಂಬ ಗೌಪವನಶ್ರುತಿಯು

**ಯಸ್ಮಾದ್ವಿವೇಚಯೇತ್ಸರ್ವಂ ವಿರಿಂಚಸ್ತೇನ ಭಣ್ಯತೇ ।**
**ಏಕೋ ಹಿ ಕರ್ತಾ ಜಗತೋ ಬ್ರಹ್ಮೈವ ಚ ಚತುರ್ಮುಖಃ ॥**

ಎಂಬುದಾಗಿ ಬ್ರಾಹ್ಮಪುರಾಣದಲ್ಲಿ ಹೇಳಿದ ಯುಕ್ತಿಯಿಂದ ಯುಕ್ತವಾಗಿದ್ದರಿಂದ ಪ್ರಬಲವಾಗಿದೆ. ಅಂತಹ ಪ್ರಬಲವಾದ ಗೌಪವನಶ್ರುತಿಗೆ ಆಗ್ನಿವೇಶ್ಯಶ್ರುತಿಯ ವಿರೋಧ ಬರುವುದಿಲ್ಲ.

'ವಿರಿಂಚೋ ವಾ ಇದಂ ಸರ್ವಂ' ಎಂಬ ಈ ಶ್ರುತಿಯು ದ್ವಾರಕಾರಣತ್ವಪರವಾಗಿದೆ (ವಿರಿಂಚದ್ವಾರಾ ವಿಷ್ಣುವಿಗೆ ಕಾರಣತ್ವವನ್ನು ಹೇಳುತ್ತಿದೆ) ಎಂದು ಹೇಳಬಹುದಲ್ಲವೇ? ಎಂದು ಶಂಕಿಸುವುದು ಸರಿಯಲ್ಲ. ಮುಖ್ಯಾರ್ಥವನ್ನು ಸ್ವೀಕರಿಸಲು ಅಸಂಭವ ಇದ್ದಾಗ ಮಾತ್ರ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಪ್ರಕೃತದಲ್ಲಿ ವಿರಿಂಚನಿಗೆ ದೇಹಾದಿಕರ್ತೃತ್ವ-ರೂಪವಾದ ಮುಖ್ಯಾರ್ಥವು ಅಸಂಭಾವಿತವೇನಲ್ಲ, ಸಂಭಾವಿತವೇ ಆಗಿದೆ. ಹಾಗಾಗಿ ಮುಖ್ಯಾರ್ಥಸಂಭವ ಇರುವಾಗ ಅಮುಖ್ಯಾರ್ಥಸ್ವೀಕಾರವು ಸರಿಯಲ್ಲ.

ಆದ್ದರಿಂದ ಯುಕ್ತಿಸಹಿತವಾದ ಗೌಪವನಶ್ರುತಿಯ ವಿರೋಧ ಬರುತ್ತಿರುವುದರಿಂದ ಆಗ್ನಿವೇಶ್ಯಶ್ರುತಿಯು ಅಪ್ರಮಾಣವಾಗಿದೆ. ಹಾಗಾಗಿ ವಿಷ್ಣುವಿನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

## ॐ संज्ञामूर्तिक्लृप्तिस्तु त्रिवृत्कुर्वत उपदेशात् ॐ (२.४.२१)

(ತುಶಬ್ದವು ಅವಧಾರಣಾರ್ಥಕವಾಗಿದೆ.) ಸಂಜ್ಞಾಮೂರ್ತಿಕ್ಲೃಪ್ತಿಃ=ನಾಮ-ರೂಪಾತ್ಮಕ ದೇಹೇಂದ್ರಿಯಪ್ರಪಂಚದ ಉತ್ಪತ್ತಿಯು, ತ್ರಿವೃತ್ಕುರ್ವತಃ ತು (ಏವ)=ಪೃಥಿವೀ-ಅಪ್-ತೇಜಸ್ಸುಗಳ ಮಿಶ್ರೀಭಾವವನ್ನು ಮಾಡುವ ಪರಮಾತ್ಮನಿಂದಲೇ ಆಗುತ್ತದೆ, ನ ವಿರಿಂಚಾತ್ = ಹೊರತು ವಿರಿಂಚನಿಂದ ಆಗುವುದಿಲ್ಲ ಕುತಃ = ಯಾಕೆ?, ಉಪದೇಶಾತ್ ="ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ" (ತೈ.ಆ. 3-12) ಎಂಬುದಾಗಿ ಶ್ರುತಿ ಇರುವುದರಿಂದ.

### ಸಿದ್ಧಾಂತ

**ಸೂ.ರ.:- एवं च परमात्मैव नामरूपकर्ता । सर्वाणि रूपाणीति श्रुतेः । न च विरिञ्चस्यापि कर्तृत्वे श्रुतिरस्ति । नामरूपकरणस्य**

**त्रिवृत्करणसापेक्षत्वेन तत्कर्तुरेव मुख्यतो नामरूपकर्तृत्वस्य वक्तव्यत्वे विरिञ्चश्रुतेर्द्वारकारणमात्रार्थत्वात् । अत एव विरिञ्चत्वयुक्तिविरोधोऽपि परास्तः । अतः श्रुत्यविरोधेन शरीरस्य हरिकर्तृत्वसिद्धेर्युक्तस्तस्य श्रुतिसमन्वयेन जगत्कारणत्वमिति सिद्धम् ॥**

**ಅನು.:–** "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ಯ ಆಸ್ತೇ" (ತೈ.ಆ.3-12) ಎಂಬುದಾಗಿ ಶ್ರುತಿ ಇರುವುದರಿಂದ ಪರಮಾತ್ಮನೇ ನಾಮರೂಪಾತ್ಮಕ ದೇಹಾದಿಕರ್ತಾ ಆಗಿದ್ದಾನೆ.

ಹಾಗಾದರೆ ವಿರಿಂಚನು ದೇಹಾದಿಕರ್ತಾ ಆಗಿದ್ದಾನೆ ಎಂಬ ವಿಷಯದಲ್ಲಿಯೂ ಸಹ "ವಿರಿಂಚೋ ವಾ ಇದಂ ಸರ್ವಂ" ಎಂಬುದಾಗಿ ಶ್ರುತಿ ಇದೆಯಲ್ಲವೇ? ಎಂದರೆ, ಅದು ಸರಿಯಲ್ಲ. ನಾಮರೂಪಕರಣವು (ದೇಹಾದಿಸೃಷ್ಟಿಯು) ತ್ರಿವೃತ್‌ಕರಣಸಾಪೇಕ್ಷವಾದ್ದರಿಂದ ಅಂತಹ ತ್ರಿವೃತ್‌ಕರಣಕರ್ತೃವಾದ ಪರಮಾತ್ಮನಿಗೇ ಮುಖ್ಯವಾಗಿ ನಾಮರೂಪಕರ್ತೃತ್ವವನ್ನು ಹೇಳಬೇಕಾಗಿದೆ. ಹಾಗಾಗಿ "ವಿರಿಂಚೋ ವಾ ಇದಂ ಸರ್ವಂ" ಎಂಬ ವಿರಿಂಚಶ್ರುತಿಯು ದ್ವಾರಕಾರಣಮಾತ್ರಾರ್ಥಕವಾಗಿದೆ. (ವಿರಿಂಚದ್ವಾರಾ ವಿಷ್ಣುವಿಗೆ ಕಾರಣತ್ವವನ್ನು ಹೇಳುತ್ತಿದೆ.)

ಅಂತೆಯೇ –

**ಯಸ್ಮಾದ್ವಿರೇಚಯೇತ್ ಸರ್ವಂ ವಿರಿಂಚಸ್ತೇನ ಭಣ್ಯತೇ ।**
**ಏಕೋ ಹಿ ಕರ್ತಾ ಜಗತೋ ಬ್ರಹ್ಮೈವ ಚ ಚತುರ್ಮುಖಃ ॥**

ಎಂಬ ಯುಕ್ತಿಯೂ ನಿರಾಕೃತವಾಗುತ್ತದೆ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ದೇಹಾದಿಗಳಿಗೆ ಹರಿಕರ್ತೃತ್ವವು ಸಿದ್ಧವಾಗುವುದರಿಂದ, (ವಿಷ್ಣುವೇ ದೇಹಾದಿಕರ್ತೃವಾಗಿದ್ದಾನೆ ಎಂದು ಸಿದ್ಧವಾಗುವುದ-ರಿಂದ) ವಿಷ್ಣುವಿಗೆ ಶ್ರುತಿಸಮನ್ವಯಮೂಲಕವಾಗಿ ಜಗತ್ಕಾರಣತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಸಂಜ್ಞಾಧಿಕರಣವು ಮುಗಿಯಿತು.**

ಅಧಿಕರಣ – 13

## ಮಾಂಸಾಧಿಕರಣ

### ಸಂಗತಿ

**ಸೂ.ರ.:– अत्र शरीरकारणश्रुतिविरोधः परिह्रियते ।**

ಅನು.:– ಶರೀರಕಾರಣವಿಷಯಕಶ್ರುತಿವಿರೋಧವನ್ನು ಪರಿಹರಿಸುತ್ತಾರೆ ಹದಿಮೂರನೇ ಈ ಮಾಂಸಾಧಿಕರಣದಲ್ಲಿ.

### ಪೂರ್ವಪಕ್ಷ-1

**ಸೂ.ರ.:– नन्वाप्यमेव शरीरम् । अद्भ्यो हीदमिति (कौडिन्य.) श्रुतेः । शरीरावयवेषु मांसादिष्वप्धर्मतर्पकत्वदर्शनात् । न तु भूत-त्रयात्मकम् । तथात्वे आपः शरीरमिति हिरण्यगर्भशरीर इति च विशेषोक्त्ययोगप्रसङ्गात् ।**

ಅನು.:– ''ಅದ್ಭ್ಯೋ ಹೀದಮುತ್ಪದ್ಯತೇ ಆಪೋ ವಾವ ಮಾಂಸಮಸ್ಥಿ ಚ ಭವತ್ಯಾಪಃ ಶರೀರಮಾಪ ಏವೇದಂ ಸರ್ವಂ'' ಎಂಬುದಾಗಿ ಕೌಂಡಿನ್ಯಶ್ರುತಿ ಇರುವುದರಿಂದ ಶರೀರವು ಆಪ್ಯವೇ ಆಗಿದೆ.

ಹಾಗಾದರೆ ಶ್ರುತ್ಯಂತರವಿರೋಧ ಬರುವುದಲ್ಲ? ಎಂದರೆ, ಬರುವುದಿಲ್ಲ. ತೃಪ್ತಿಜನಕತ್ವ ಎನ್ನುವುದು ಅಪ್‌ನ ಧರ್ಮವಾಗಿದೆ. ಅಂತಹ ತೃಪ್ತಿಜನಕತ್ವ ಎನ್ನುವುದು ಮಾಂಸಾದಿಗಳಲ್ಲಿ ಕಂಡಿದೆ. ಹೀಗಾಗಿ ಆಪ್ಯತ್ವಶ್ರುತಿಯು ಪ್ರಬಲವಾಗಿರುವುದರಿಂದ ಶ್ರುತ್ಯಂತರವಿರೋಧ ಬರುವುದಿಲ್ಲ. ಆದ್ದರಿಂದ ಶರೀರವು ಆಪ್ಯವೇ ಹೊರತು ಭೂತತ್ರಯಾತ್ಮಕ ಅಲ್ಲ. ಶರೀರವು ಒಂದುವೇಳೆ ಭೂತತ್ರಯಾತ್ಮಕವಾಗಿದ್ದಾದರೆ ''ಆಪಃ ಶರೀರಮ್'' ಎಂದು ''ಹಿರಣ್ಯಗರ್ಭಶರೀರಃ'' ಎಂದು ವಿಶೇಷೋಕ್ತಿಯು ಅಯುಕ್ತವಾಗಬೇಕಾಗುತ್ತದೆ. ಆದ್ದರಿಂದ ಶರೀರವು ಆಪ್ಯವೇ.

### ಪೂರ್ವಪಕ್ಷ-2

**ಸೂ.ರ.:– अथवा । पार्थिवम् । पृथिवी शरीरमप्येतीति (बृ. ५-**

२-१३) पृथिव्यां लयाभिधानात् । काठिण्यादि (गर्भोपनिषत् ३.) युक्तेश्च ।

**ಅನು.:–** ಅಥವಾ "ಪೃಥಿವೀ ಶರೀರಮಪ್ಯೇತಿ" (ಬೃ.5-2-13) ಎಂಬುದಾಗಿ ಪೃಥಿವಿಯಲ್ಲಿ ಲಯವನ್ನು ಹೇಳಿದ್ದರಿಂದ ಮತ್ತು ಕಾಠಿಣ್ಯಗಂಧವತ್ತ್ವಾದಿ ಯುಕ್ತಿ ಇರುವುದರಿಂದಲೂ ಸಹ ಶರೀರವು ಪಾರ್ಥಿವವಾಗಿದೆ.

## ಪೂರ್ವಪಕ್ಷ-3

**ಸೂ.ರ.:–** अथवा । तैजसम् । सोऽग्नेर्देवेति (ऐ.ब्रा.७-३) श्रुतेः । औष्ण्यदर्शनाच्च । अतो विरोधेनेमास्तिस्रो देवता इति (छां.६-४-७) श्रुतेरप्रामाण्यान्न श्रुतिसमन्वयेन विष्णौ जगत्कारणत्वमिति प्राप्ते सूत्रमाह ॥

**ಅನು.:–** ಅಥವಾ "ಸೋऽಗ್ನೇರ್ದೇವ ಯೋನ್ಯಾ ಆಹತಿಭ್ಯಃ ಸಂಭೂಯ ಹಿರಣ್ಯ-ಶರೀರ ಊರ್ಧ್ವಂ ಸ್ವರ್ಗಲೋಕಮೇತಿ" (ಐ.ಬ್ರಾ. 7-3) ಎಂಬುದಾಗಿ ಶ್ರುತಿ ಇರುವುದ-ರಿಂದ ಹಾಗೂ ಔಷ್ಣ್ಯವು ಕಂಡಿದ್ದರಿಂದಲೂ ಸಹ ಶರೀರವು ತೈಜಸವಾಗಿದೆ.

ಆದ್ದರಿಂದ ಶ್ರುತಿಗಳಲ್ಲಿ ಪರಸ್ಪರ ವಿರೋಧ ಬರುವುದರಿಂದ "ಇಮಾಸ್ತಿಸ್ರೋ ದೇವತಾಃ" (ಛಾಂ. 6-4-7) ಎಂಬ ಶ್ರುತಿಗೆ ಅಪ್ರಾಮಾಣ್ಯ ಬರುವುದರಿಂದ, ಶ್ರುತಿಸಮನ್ವಯ ಮೂಲಕವಾಗಿ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದಾಗಿ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಸಿದ್ಧಾಂತ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ –

### ॐ मांसादि भौमं यथाशब्दमितरयोश्च ॐ (२.४.२२)

ಯಚ್ಛರೀರೇ ಕಠಿಣಂ ಮಾಂಸಾದಿ = ಶರೀರದಲ್ಲಿ ಕಠಿಣಭಾಗವಾದ ಮಾಂಸಾದಿ-ಗಳೇನಿವೆಯೋ, ತದೇವ ಭೌಮಂ = ಅದೇ ಪಾರ್ಥಿವವಾಗಿದೆ, ನ ಸರ್ವಶರೀರಂ = ಹೊರತು ಸರ್ವಶರೀರವೂ ಪಾರ್ಥಿವ (ಮಾತ್ರ) ಅಲ್ಲ, ಕಿಂ ನಾಮ = ಕಿಂತು, ಯಥಾಶಬ್ದಂ = "ಯತ್ಕಠಿನಂ ಸಾ ಪೃಥಿವೀ" (ಗರ್ಭೋಪನಿಷತ್ 3) ಎಂಬ ಶ್ರುತಿಗೆ ಅನುಸಾರವಾಗಿ, ಇತರಯೋಃ = ಶರೀರದಿಂದ ಭಿನ್ನವಾದ ಅಪ್-ತೇಜಸ್ಸುಗಳ ಕಾರ್ಯವಾದ ಶೋಣಿತಮಜ್ಜಾದಿ ರೂಪವೂ ಆಗಿವೆ ಎಂದು ಅಂಗೀಕರಿಸಬೇಕಿದೆ,

ಯಥಾ ಮಾಂಸಾದಿ ಭೌಮಂ = ಹೇಗೆ ಮಾಂಸಾದಿಗಳು ಪೃಥಿವೀಕಾರ್ಯ-ವಾಗಿವೆಯೋ, ನ ಕೇವಲಂ ಪೃಥಿವೀಕಾರ್ಯಂ = ಕೇವಲ ಪೃಥಿವೀಕಾರ್ಯ ಎಂದಷ್ಟೇ ಅಲ್ಲ ಕಿಂ ನಾಮ = ಕಿಂತು, ಇತರಯೋಃ = ಅಪ್-ತೇಜಸ್ಸುಗಳ ಕಾರ್ಯವೂ ಆಗಿದೆ ಎಂದು ಶ್ರುತಿಗನುಸಾರವಾಗಿ ಅಂಗೀಕರಿಸಬೇಕಿದೆ.

## ಸಿದ್ಧಾಂತ

**ಸೂ.ರ.:– एवं च यच्छरीरे कठिनं मांसादि तदेव पार्थिवम् । यच्छोणितादि तदेवाप्यम् । यच्च मज्जादि तदेव तैजसं शरीरं तु त्र्यात्मकम् । यत्कठिनं सा पृथिवीति श्रुतेः । न चापो वाव मांसमिति (कौण्डिन्य.) श्रुतिविरोधः । मांसस्यापि केवलपार्थिवत्वानङ्गीकारेण श्रुत्यनुसारेणाबादिकार्यत्वस्याप्यभिमतत्वात् । अतः श्रुत्यविरोधेन शरीरस्य पाञ्चभौतिकत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥**

**ಅನು.:–** "ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜಃ" (ಗರ್ಭೋಪನಿಷತ್ - 3) ಎಂಬುದಾಗಿ ಶ್ರುತಿ ಇರುವುದರಿಂದ ಶರೀರದಲ್ಲಿ ಕಠಿಣವಾದ ಮಾಂಸಾದಿಗಳೇನುಂಟೋ ಅದೇ ಪಾರ್ಥಿವ. ಯಾವುದು ಶೋಣಿತಾದಿಗಳುಂಟೋ ಅದೇ ಆಪ್ಯ. ಯಾವುದು ಮಜ್ಜಾದಿಗಳುಂಟೋ ಅದೇ ತೈಜಸ. ಇನ್ನು ಪೂರ್ಣ ಶರೀರವಾದರೂ ಪೃಥಿವೀ-ಅಪ್-ತೇಜಸ್ಸು ತ್ರ್ಯಾತ್ಮಕವಾಗಿದೆ.

ಹಾಗಾದರೆ (ಮಾಂಸಾದಿಗಳು ಪಾರ್ಥಿವ ಎನ್ನುವುದಾದರೆ) "ಆಪೋ ವಾವ ಮಾಂಸಮ್" ಎಂಬ ಮಾಂಸಕ್ಕೆ ಆಪ್ಯತ್ವವನ್ನು ಹೇಳುವ ಕೌಂಡಿನ್ಯಶ್ರುತಿವಿರೋಧ ಬರುತ್ತದೆ-ಯಲ್ಲ? ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಈ ಹಿಂದೆ ಹೇಳಿದ ಪ್ರಕಾರ ಮಾಂಸಕ್ಕೂ ಕೇವಲ ಪಾರ್ಥಿವತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಶ್ರುತ್ಯಂತರಾನುಸಾರವಾಗಿ ಅಬಾದಿ ಕಾರ್ಯತ್ವವನ್ನು ಅಂಗೀಕರಿಸಲಾಗಿದೆ. ಹಾಗಾಗಿ ಮಾಂಸಕ್ಕೆ ಆಪ್ಯತ್ವವೂ ಇರುವುದರಿಂದ ಆಪ್ಯತ್ವಪ್ರತಿಪಾದಕವಾದ ಶ್ರುತಿಯ ವಿರೋಧ ಬರುವುದಿಲ್ಲ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಶರೀರಕ್ಕೆ ಪಾಂಚಭೌತಿಕತ್ವವು ಸಿದ್ಧಿಸು-ವುದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಸೂತ್ರ - 23

**ಸೂ.ರ.:- ननु शरीरस्य नैकभूतप्रकृतिकत्वे विशेषोक्तेरयोगात् । शरीरे मांसादिषु वा भूतानां विशेषसंयोगे सर्वशरीरेषु सर्वभूतानां विशेष-संयोगभावे च पुनरेकैकभूतप्राचुर्यविवक्षया पार्थिवादिविशेषोक्त्ययोगात् ।**

**ಅನು.:-** ನನು ಕಿಮರ್ಥೋ$\acute{}$ಯಂ ಸೂತ್ರಪದೇ ದ್ವಿರುಕ್ತಿಃ? ಅಧ್ಯಾಯಸಮಾಪ್ತಿ ಜ್ಞಾಪನಾರ್ಥಂ ಇತಿ ಚೇತ್, ತಸ್ಯಾಃ ಅರ್ಥಭೇದೇನ ಜ್ಞಾತುಂ ಶಕ್ಯತ್ವಾತ್ । ಅನ್ಯಥಾ

**ಸೂ.ರ.:-** अध्यायसमाप्तिज्ञापनार्थमर्थभेदेन ज्ञातुं शक्यत्वेन सूत्रपदे द्विरुक्तेरयोगात् । अन्यथा **पादान्तेऽपि तत्प्रसङ्गादिति प्राप्ते सूत्रमाह ॥**

**ಅನು.:-** ಒಂದೇವೇಳೆ ಶರೀರವು ಅನೇಕಭೂತಪ್ರಕೃತಿಕವಾಗಿದೆ ಎಂದಾದರೆ ಹಾಗಾದರೆ ''ಇದು ಪಾರ್ಥಿವ'' ''ಇದು ಆಪ್ಯ'' ''ಇದು ತೈಜಸ'' ಎಂಬುದಾಗಿ ವಿಶೇಷೋಕ್ತಿಯು ಹೇಗೆ ಉಪಪನ್ನವಾಗುತ್ತದೆ? ಮತ್ತು ಸೂತ್ರದಲ್ಲಿ 'ತದ್ವಾದಃ' 'ತದ್ವಾದಃ' ಎಂಬುದಾಗಿ ದ್ವಿರುಕ್ತಿ ಹೇಳಿದ್ದು ನಿಷ್ಪ್ರಯೋಜನವಲ್ಲವೇ? ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಸೂತ್ರವನ್ನು ಹೇಳುತ್ತಾರೆ -

**ॐ वैशेष्यात्तु तद्वादस्तद्वादः ॐ (२.४.२३)**

ತದ್ವಾದಃ ತದ್ವಾದಃ ತು = ಪಾರ್ಥಿವಂ ಆಪ್ಯಂ ತೈಜಸಂ ಎಂಬುದಾಗಿ ವಿಶೇಷೋಕ್ತಿ-ಯಾದರೂ, ವೈಶೇಷ್ಯಾತ್ = ಪೃಥಿವ್ಯಾದಿ ಭೂತಗಳಿಗೆ ತತ್ತಚ್ಛರೀರವಿಶೇಷಸಂಯೋಗವನ್ನು ಅಪೇಕ್ಷಿಸಿ ಉಪಪನ್ನವಾಗುತ್ತದೆ, ಅತಃ ನ ತದ್ವಿರೋಧಃ = ಆದ್ದರಿಂದ ವಿಶೇಷೋಕ್ತಿಯ ವಿರೋಧ ಬರುವುದಿಲ್ಲ

ಏತದಧ್ಯಾಯೋಕ್ತಸರ್ವಸ್ಯ ಅರ್ಥಸ್ಯ ಅವಧಾರಣಾರ್ಥಂ ಅಧ್ಯಾಯಾಂತೇ ದ್ವಿರುಕ್ತಿಃ = ಈ ಅಧ್ಯಾಯದಲ್ಲಿ ಹೇಳಿದ ಎಲ್ಲ ಅರ್ಥಗಳ ನಿರ್ಧಾರಕ್ಕಾಗಿ ಅಧ್ಯಾಯದ ಕೊನೆಯಲ್ಲಿ ದ್ವಿರುಕ್ತಿ ಹೇಳಿದ್ದಾರೆ ಸೂತ್ರಕಾರರು.

**ಸೂ.ರ.:- एवं च भूतकार्यशरीराणां तद्भूतसंयोगविशेषसद्भावेन वैशेष्यात्तत्त्व्यपदेशोपपत्तेः । न चोक्तविशेषसंयोगाभावविरोधः । पार्थिवानां शरीराणामिति (बृहत्संहितायां) वचनात् । नापि द्विरुक्ति-**

**विरोधः । अध्यायार्थनिश्चयरूपप्रयोजनसद्भावेन सर्वाध्यायान्तिमसूत्रे पदस्य द्विरुक्तेः क्रियमाणत्वात् । अतः श्रुत्यविरोधेन शरीरस्य पाञ्चभौतिकत्व-सिद्धेर्जगत्कर्तरि विष्णौ श्रुतिसमन्वयो युक्त इति सिद्धम् ॥**

**ಅನು.:–** ಭೂತಕಾರ್ಯವಾದ ಶರೀರಗಳಿಗೆ ಆ ಭೂತಸಂಯೋಗವಿಶೇಷ ಇರುವುದರಿಂದ, ವೈಶೇಷ್ಯ ಇರುವುದರಿಂದ, ಪಾರ್ಥಿವ ಆಪ್ಯ ತೈಜಸ ಎಂಬ ವ್ಯಪದೇಶವು ಉಪಪನ್ನವಾಗುತ್ತದೆ.

ಉಕ್ತವಿಶೇಷಸಂಯೋಗವೇ ಹೇಗೆ ಸಿದ್ಧವಾಗುತ್ತದೆ? ಎನ್ನಬೇಡಿ.

**ಪಾರ್ಥಿವಾನಾಂ ಶರೀರಾಣಾಂ ಅರ್ಧೇನ ಪೃಥಿವೀ ಸ್ಮೃತಾ ।**
**ಇತರೇಽರ್ಧೇ ತ್ರಿಭಾಗಿನ್ಯ ಆಪಸ್ತೇಜಸ್ತು ಭಾಗತಃ ॥**

**ಇತಿ ಸಾಮಾನ್ಯತೋ ಜ್ಞೇಯಂ ಭೇದಶ್ಚ ಪ್ರತಿಪೂರುಷಮ್ ।**
**ಸ್ವರ್ಗಸ್ಥಾನಾಂ ಶರೀರಾಣಾಂ ಅರ್ಧಂ ತೇಜ ಉದಾಹೃತಮ್ ॥**

ಎಂಬ ಬೃಹತ್ಸಂಹಿತಾವಚನದಿಂದಾಗಿ ಉಕ್ತವಿಶೇಷಸಂಯೋಗವು ಸಿದ್ಧವಾಗುತ್ತದೆ.

ಹಾಗಾದರೆ ಅಧ್ಯಾಯಾಂತದಲ್ಲಿ ದ್ವಿರುಕ್ತಿ ಏಕೆ? ಎಂದರೆ, ಆ ದ್ವಿರುಕ್ತಿಗೆ ಅಧ್ಯಾಯಾರ್ಥನಿಶ್ಚಯರೂಪ ಪ್ರಯೋಜನ ಇರುವುದರಿಂದ, ಎಲ್ಲ ಅಧ್ಯಾಯಗಳ ಅಂತಿಮಸೂತ್ರದಲ್ಲಿ ಪದದ ದ್ವಿರುಕ್ತಿಯನ್ನು ಮಾಡಲಾಗುತ್ತಿದೆ. ಆದ್ದರಿಂದ ಅದು ವ್ಯರ್ಥ ಅಲ್ಲ.

ಆದ್ದರಿಂದ ಶ್ರುತಿವಿರೋಧ ಬಾರದ ಕಾರಣ ಶರೀರಕ್ಕೆ ಪಾಂಚಭೌತಿಕತ್ವವು ಸಿದ್ಧಿಸುವುದರಿಂದ ಜಗತ್ಕಾರಣನಾದ ಪರಮಾತ್ಮನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

ಮಾಂಸಾಧಿಕರಣವು ಮುಗಿಯಿತು.
ಇಲ್ಲಿಗೆ ಸೂತ್ರಾರ್ಥರತ್ನಾವಲೀ ವ್ಯಾಖ್ಯಾನಸಹಿತವಾದ ಬ್ರಹ್ಮಸೂತ್ರಗಳಲ್ಲಿ
ಎರಡನೇ ಅಧ್ಯಾಯದ ನಾಲ್ಕನೇ ಪಾದವು ಮುಗಿಯಿತು.

ಇಲ್ಲಿಗೆ ಎರಡನೇ ಅಧ್ಯಾಯವು ಮುಗಿಯಿತು.

# ಅಕಾರಾದಿಕ್ರಮೇಣ ಬ್ರಹ್ಮಸೂತ್ರಾಣಿ

ಬ್ರಹ್ಮಸೂತ್ರಗಳ ಅಧ್ಯಯನದ ಸೌಕರ್ಯಕ್ಕಾಗಿ ಭಾಷ್ಯ-ಟೀಕಾ-ಟಿಪ್ಪಣೀಗ್ರಂಥಗಳಲ್ಲದೇ ಸೂತ್ರಗಳನ್ನೇ ವಿವರಿಸುವ ಕೆಲವು ಸ್ವತಂತ್ರ ಗ್ರಂಥಗಳೂ ಇವೆ.

ಅಂತಹ ಸ್ವತಂತ್ರಗ್ರಂಥಗಳಲ್ಲಿ ಸೂತ್ರಾರ್ಥರತ್ನಾವಲೀ ಎನ್ನುವುದು ಬಹಳ ಉಪಯುಕ್ತವಾದ ಗ್ರಂಥವಾಗಿದೆ. ಇದರಲ್ಲಿ ಪ್ರತಿಯೊಂದು ಸೂತ್ರಕ್ಕೂ ಪೀಠಿಕಾರೂಪದಲ್ಲಿ ಸಂಗತಿ-ಪೂರ್ವಪಕ್ಷಗಳನ್ನು ಹೇಳಿ, ನಂತರ ಸೂತ್ರಾರ್ಥವನ್ನು ತಿಳಿಸಿ, ಕೊನೆಗೆ ಸಿದ್ಧಾಂತವನ್ನು ನಿರೂಪಿಸುತ್ತಾರೆ. ಇದರಿಂದ ಪ್ರತಿಯೊಂದು ಸೂತ್ರದ ಮತ್ತು ಅಧಿಕರಣದ ಅಭಿಪ್ರಾಯವನ್ನು ತಿಳಿದುಕೊಳ್ಳಲು ತುಂಬ ಸಹಾಯವಾಗುತ್ತದೆ.

ಈ ಗ್ರಂಥವು ತತ್ತ್ವಪ್ರಕಾಶಿಕೆಯ ಸಂಗ್ರಹರೂಪವಾಗಿದ್ದು, ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ತತ್ತ್ವಗಳನ್ನು ತಿಳಿದುಕೊಳ್ಳಲು ತುಂಬ ಸಹಾಯಕವಾಗಿದೆ.

ವಿದ್ವಾನ್ ಕಾಂತೇಶಾಚಾರ್ಯ ಕದರಮಂಡಲಗಿ ಇವರು ಈ ಗ್ರಂಥದ ಕನ್ನಡ ಅನುವಾದವನ್ನು ಮಾಡಿದ್ದಾರೆ. ಇವರು ಈ ಮೊದಲೇ ಖಂಡನತ್ರಯಗಳು, ವಾದಾವಲೀ ಮೊದಲಾದ ಗ್ರಂಥಗಳ ಕನ್ನಡ ಅನುವಾದವನ್ನು ಸುಂದರವಾಗಿ ಮಾಡಿದ್ದಾರೆ.

ಸಂಸ್ಕೃತ ಗ್ರಂಥಗಳನ್ನು ಮೂಲದಿಂದಲೇ ತಿಳಿದುಕೊಳ್ಳಲು ಶ್ರಮವಾಗುತ್ತಿರುವ ಈ ಕಾಲದಲ್ಲಿ ಅವುಗಳ ಕನ್ನಡ ಅನುವಾದವನ್ನು ಮಾಡಿ ಸಜ್ಜನರಿಗೆ ತಿಳಿಸಿಕೊಡುವ ಕಾರ್ಯವು ಬಹಳ ಉಪಯುಕ್ತವಾದ ಕಾರ್ಯವಾಗಿದೆ.

ಕಾಂತೇಶಾಚಾರ್ಯರು ಈ ಕನ್ನಡ ಅನುವಾದ ಕಾರ್ಯವನ್ನು ಮುಂದುವರೆಸಲಿ ಎಂದು ಹಾರೈಸುವೆವು.

ಪ್ರೊ. ಕೆ.ಟಿ. ಪಾಂಡುರಂಗೀ

ಅಧ್ಯಕ್ಷರು

ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರ